ಗೆಳೆಯರ ಗುಂಪಿನ

ಓಂನಲ್

# ಸ್ವಧರ್ಮ

॥ ತನ್ನ ತಾನರಿವಡೆ ತನ್ನರಿವೇ ಗುರು ॥


ಸಂಪುಟ ೩ ಅಕ್ಷಯ ಸಂ. ವೈಶಾಖ ಸಂಚಿಕೆ ೨

೧೮೪೮



ಸಂಪಾದಕ :

ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಬೀ. ಎ.

ಧಾರವಾಡ





ವಾರ್ಷಿಕ ಚಂದಾ ರೂ. ೩ ಬಿಡಿ ಸಂಚಿಕೆ ಆಣೆ ೪

ಅಂಚೇ ವೆಚ್ಚ ಬೇರೆ

# ವಿಷಯ ಪರಿಚಯ

೧. ಪ್ರುತಾ ಪ್ರುತ ವೀಣಾರವ:—(ಕವಿತೆ) ಮೇಲಿಂದ ಮೇಲೆ ಆದರೆ ಕ್ಷಣ ಮಾತ್ರ ಪರಾವಾಣಿಯ ಅನುಭವದಿಂದ ವೈಖರಿಯಲ್ಲಿ ಮೂಡಿದ ಒಂದು ಆನಂದೋರ್ಮಿ.

೨. ಸವಿ:— ಮೇಲಿನ ಭಾವಗೀತೆಯ ಸವಿಯು.

೩. ಸುಧಾರಣೆಯು:—ಅಂತರಂಗದ ಉನ್ನತಿಗೆ ಬಹಿರಂಗವನ್ನು ಅನುಕೂಲಿಸಿಕೊಳ್ಳುವದೇ ಸುಧಾರಣೆಯ ಲಕ್ಷ್ಯವೆಂದು ಪ್ರತಿಪಾದಿಸುವ ಲೇಖನ.

೪. ಭಾಗವತ ಧರ್ಮ:— ಭಾಗವತ ಧರ್ಮದ ತಿರುಳನ್ನು ಶ್ರೀಮದ್ಭಾಗವತ ಶ್ಲೋಕಗಳಿಂದ ಅನುವಾದಿಸಿದ ಪ್ರವಚನ.

೫. ಬಾಲಪಾಠಗಳು:— ಹಿರಿಯರು ತಮ್ಮ ಚಿಕ್ಕ ಮಕ್ಕಳಿಗೆ ಈ ಪಾಠಗಳನ್ನು ತಾವು ಓದಿ ತೋರಿಸಿ, ಅವರಿಂದ ಓದಿಸಿಕೊಂಡರೆ ಚಿಕ್ಕ ವಯಸ್ಸಿನಲ್ಲಿಯೇ ಅವರ ಮನಸ್ಸಿನಮೇಲೆ ಒಳ್ಳೇ ವಿದ್ಯಾ ಸಂಸ್ಕಾರ ವಾದೀತೆಂದು ನಮ್ಮ ನಂಬಿಗೆ.

೧ನೇ. ಎಲ್ಲಿ—ದೇವನಿಂದ ಜೀವನವರೆಗೆ ಜಗತ್ತೆಲ್ಲ ಒಂದರೊಳಗೊಂದು ಹೇಗಿದೆ ಎಂಬುದನ್ನು ಬಿಂಬಿಸುವದು ಇದರ ಲಕ್ಷ್ಯ.

೨ನೇ. ಪಾಪಾ— ಕೌಟುಂಬಿಕ ವಾತ್ಸಲ್ಯ ವರ್ಣನ.

೬. ಸ್ವತಂತ್ರ ವಿಚಾರ:— ಸ್ವತಂತ್ರ ವಿಚಾರದ ದಿಗ್ದರ್ಶನವನ್ನು ಮಾಡುವ ಚಿಕ್ಕ ನಿಬಂಧ

೭. ಪ್ರಜ್ಞೆಯೂ ಪ್ರಾರಬ್ಧವು:— ಪ್ರಜ್ಞೆಯ ಬಲದಿಂದ ಪ್ರಾರಬ್ಧವನ್ನು ಮಿಕ್ಕಿ ಆನಂದದಲ್ಲಿ ನೆಲೆಯಾಗಿ ನಿಲ್ಲಬಹುದು ಎಂದು ಮನವೊಲಿಸಲು ಹವಣಿಸುವ ವಿಚಾರ ಮಾಲೆ.

೮. ಮಹಾತ್ಮರ ಬಗ್ಗೆ ಗೆಳೆಯರ ವಿಚಾರಗಳು:— ಮ. ಗಾಂಧಿಯವರ ಬಗ್ಗೆ

೯. ಅಕ್ಕಸಾಲಿಗ:— (ಭಾವ ಕಥೆ) ಶ್ರೀ ಲಕ್ಷ್ಮಿಯ ಶಕ್ತಿಗಳು ಎರಡು. ಒಂದು ಧನ, ಇನ್ನೊಂದು ಸೌಂದರ್ಯ. ಸೌಂದರ್ಯವು ಧನಕ್ಕೆ ಒಳಗಾದರೆ, ಅದರ ದೈವಿಕ ಕಾರ್ಯವು ಅಸ್ತವಾಗುವದು.

೧೦. ಧರ್ಮ:—"ಹೊಂದು ಗೂಡಿರುವದೊಂದು ಧರ್ಮ" ಎಂದು ಪ್ರತಿಪಾದಿಸಿದ್ದು.

೧೧. ಬರೀ ನಗಚಾಟಿಕೆ:— ಮತ್ತೊಂದಿಲ್ಲ ಮಗದೊಂದಿಲ್ಲ.

೧೨. ನನ್ನ ಹುಚ್ಚು:— ನೆನಪಿನ ಪಟದಮೇಲೆ ಮೂಡಿದ ಚಿಕ್ಕತನದ ಹುಚ್ಚು ತಿಳುವಳಿಕೆಯ ಚಿತ್ರ. ಪತಿಪ್ರೇಮ, ಪುತ್ರಪ್ರೇಮದ ಮಾದರಿಯು.

[illegible] ತನವನ್ನು ಹೇಳಿದ ಒಂದು ಕವಿತೆ.

(ಆವರಣ ಪತ್ರದ ೩ನೇ ಪುಟದಲ್ಲಿ ಮುಂದೆ)

ಟೀಪು:—೧. ಟಿಳಕ ಸ್ಮಾರಕ ನಿಧಿಯ ೫೦೦ ರೂಪಾಯಿಗಳು ಬ್ಯಾಂಕಿನಲ್ಲಿ ಸ್ಥಿರನಿಧಿಯಾಗಿ ಇಡಲ್ಪಟ್ಟದ್ದು ಸದರೀ ಹಣದ ಬಡ್ಡಿಯನ್ನು ಮಾತ್ರ ರಾಷ್ಟ್ರೀಯ ಶಾಲೆಗೆ ಉಪಯೋಗ ಮಾಡಬೇಕು; ಶಾಲೆಯು ಬಂದಾದಲ್ಲಿ ಸದರಿಯ ಹಣವನ್ನು ಸ್ಮಾರಕನಿಧಿಯ ಕಮೀಟಿಯವರಿಗೆ ಹಿಂದಿರುಗಿ ಒಪ್ಪಿಸತಕ್ಕದ್ದು ಎಂಬ ಅಡಕು ಇತ್ತು. ಅದರಂತೆ ಆ ನಿಧಿಯನ್ನು ಶ್ರೀ. ವಿನಾಯಕರಾಯರು ಜೋಶಿಯವರಿಗೆ ಒಪ್ಪಿಸಿದೆ; ಈಗೆರಡು ವರ್ಷದ ಬಡ್ಡಿಯ ಹಣವನ್ನು ಶಾಲೆಗೆ ಈ ಸಾರೆ ಉಪಯೋಗಿಸಿಲ್ಲ.

೨. ಶಿಲ ರೂ. ೧ ಆ. ೧೦ ಪೈ ರೋಖ ಶಿಲ್ಕು ಶ್ರೀ ಬಿಂದಾಚಾರ್ಯ ಬುರ್ಲಿಯವರಿಗೆ ಕೊಟ್ಟದ್ದು, ಅವರಲ್ಲಿ ಈ ವರ್ಷದ ಲೆಕ್ಕಪತ್ರಗಳನ್ನು ಮುದ್ರಿಸತಕ್ಕದ್ದಾಗಿ ಆ ಹಣವನ್ನು ಬಳಿಸಲು ಅವರಿಗೆ ಅಧಿಕಾರ ಕೊಟ್ಟದೆ.

ಲೆಕ್ಕವನ್ನು ನೋಡಿದೆನು. ಸರಿಯಾಗಿದೆ.

ಶ್ರೀ. ಮಧ್ವರಾವ, ಕಬ್ಬೂರ.
ಎಮ್. ಎ. ಎಲ್‌ಎಲ್. ಬಿ. ವಕೀಲ. ಧಾರವಾಡ

---

## ಪುಸ್ತಕ ಪರಿಚಯ

(೩೮ನೇ ಪುಟದಿಂದ ಮುಂದೆ ಸಾಗಿದ್ದು.)

ರಂಗಭೂಮಿ: —(೨ನೇ ವರ್ಷದ ೪ನೇ ಸಂಚಿಕೆ) ಭಾರದ್ವಾಜರೀಗ ಮುಖ್ಯ ಸಂಪಾದಕರು. ಬೆಂಗಳೂರಿನ ಅಮೆಚ್ಯೂರ ನಾಟಕಮಂಡಲಿಯವರು ಪ್ರಕಾಶಕರೆಂಬದು ಹೊಸ ಮಾತು. ಎಂದಮೇಲೆ ಇನ್ನುಮುಂದೆ ರಂಗಭೂಮಿಯು ಆರ್ಥಿಕ ರೀತಿಯಿಂದ ಅಷ್ಟೊಂದು ಚಿಂತೆಯಿಲ್ಲದೆ ಸಾಗಿ ಅಭ್ಯುದಯ ಹೊಂದುವದೆಂದು ಆಶೆ. ಸರ್ವವಿಧವಾದ ಕಲೆ, ಸಾಹಿತ್ಯ ಮತ್ತು ವಿದ್ಯೆಗಳ ವಿಷಯಗಳೂ ಇನ್ನು ಮುಂದೆ ಬರುವವು. 'ಉಷೆ' 'ನೆನಪು' ಎಂಬ ಚಿತ್ರಗಳು ಚಿತ್ತಾಕರ್ಷಕವಾಗಿವೆ.

Yekantin (ಏಕಾಂತಿನ್) :—[ by Yekanta Pada Vaishnava, Ranebennur, ] ಶ್ರೀಮದಾಚಾರ್ಯರ ಭಾಷ್ಯವನ್ನು ಇಂಗ್ಲೀಷಿನಲ್ಲಿ ಭಾಷಾಂತರಿಸಿದ್ದಾರೆ. ಸರ್ವರೂ ಓದಬೇಕೆಂದು ಆಂಗ್ಲಭಾಷೆಯಲ್ಲಿ ಬರೆದದ್ದೇನೋ ಯೋಗ್ಯವಾಯಿತು. ಈ ಪುಸ್ತಕದ ಭಾಷಾಗತಿಯು ಬಹಳೇ ಶೃಂಖಲಾಬದ್ಧವಾಗಿಬಿಟ್ಟಿದೆ. ಇಂಥ ವಿಷಯವನ್ನು ಯೋಚಿಸುವ ಕಾಲಕ್ಕೆ ರೀತಿಯು ತಿಳಿತಿಳಿಯಾಗಿರಬೇಕು. ಈ ಬಗ್ಗೆ ನಾವು ನಿರಾಶೆಪಡಬೇಕಾಯಿತು. ಇರಲಿ ಇಂಥ ಪುಸ್ತಕವು ಬೇಕಾಗಿತ್ತು.

ಇಂಗ್ಲಿಷ ಗೀತಗಳು: —(ಶ್ರೀಯವರಿಂದ ವಿರಚಿತರಾಗಿ ಪ್ರಬುದ್ಧ ಕರ್ನಾಟಕದ ಸಂಘದಿಂದ ಪ್ರಕಟವಾಗಿರುವದು. ಬೆಲೆ ) ಅತ್ಯಾನಂದದಿಂದ ಸ್ವೀಕರಿಸಿರುವೆವು. ಬಂದು ಬಹಳ ದಿನವಾಗಿವೆ ನಿಜ. ಈ ಸಲವೂ ಸ್ಥಳಸಂಕೋಚದಿಂದ ವಿಸ್ತಾರವಾಗಿ ಮಾಡಬೇಕಾದ ವಿಮರ್ಶೆಯನ್ನು ಮುಂದೆ ಹಾಕಬೇಕಾಗಿದೆಯೆಂದು ತಿಳಿಸಲು ವಿಷಾದವೆನಿಸುತ್ತದೆ. ಗ್ರಂಥಕರ್ತರು ಕ್ಷಮಿಸುವರೆಂದು ನಂಬಿದ್ದೇವೆ.

---

# ಬರಹಗಳ ಪರಿವಿಡಿಯು

( ಅಕ್ಷಯದ ಅಕ್ಷಯತೃತೀಯೆಯಿಂದ ಪ್ರಭವದ ಅಕ್ಷಯ ತೃತೀಯೆಯ ತನಕ )

( ಬರಹದ ಅಂಕಿ ; ಬರಹದ ಹೆಸರು ; ಬರಹದ ಸಂಚಿಕೆ; ಸಂಚಿಕೆಯ ಪುಟ )

॥ ಓಂ ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ॥

ಓಂ ನಲ್

# ಸ್ವಧರ್ಮ

॥ ಜಯಂ ಭದ್ರಂ ಶುಭಂ ಮಂಗಲಮ್ ॥

ವರ್ಷ ೩ | ಶಕೆ ೧೮೮೪ ಅಕ್ಷಯ ಸಂ॥ – ವೈಶಾಖ | ಸಂ. ೨

## ಶ್ರುತಾಶ್ರುತ-ವೀಣಾರವ

ಮಿಂಚಿನಂದದಿ ಹೊಳೆದು ಹರಿಯುವವಳಾರೇ ?
ಚಂಚಲೆಯೆ, ಚಲಮಲನೆ ಚರಿಸುವವಳಾರೇ ?

ಮೆಯ್ಯಿಲ್ಲದವಳೆ, ನೀ ಮೈದೋರಿದಂದು
ಮೆಯ್ಮರೆಯಿತೀ ಜಗವು ನಿನ್ನಲ್ಲಿ ಸಂದು

ನಿಂತಲ್ಲಿ ನಿಲ್ಲುವುದ ನೀನರಿಯದವಳು
ನಿಂತಲ್ಲಿಯೇ ನೆಲವ ನಿಲಿಸಬಲ್ಲವಳು

ಸಪ್ತ ಭಂಗಿಗಳಿಂದ ಸುಳಿದಾಡುವವಳು
ಸುಪ್ತಿಯಲಿ ಸರ್ವವನು ಸೆರೆಹಿಡಿಯುವವಳು

ಮೂಗೆಯೆಂಬೆನೆ ಮೆಚ್ಚು ಮಾತಾಡುವವಳು
ಮೂಗುವಡಿಸುವಿ ನುಡಿಯ ನೀನದೆಂಥವಳು ?

ಯಾವ ದೇಶದ ಹೆಣ್ಣೆ ? ಯಾವ ಭಾಷೆಯಿದು ?
ಅಕ್ಷರಕ್ಕಿದು ತಾನೆ ಸಾಕ್ಷಿಯಾಗಿಹುದು.

× × ×

ನಿನ್ನನೆಲ್ಲಿಯೊ. ಎಂದೊ ನೋಡಿದಂತಿಹುದು
ನಿನ್ನ ನುಡಿಯುಲ್ಲೊಮ್ಮೆ ಆಡಿದಂತಿಹುದು

ಕೇಳುತಿರುವಂತೆಯೇ ತಿಳಿಯುವಂತಿಹುದು
ಹೇಳಬೇಕೆನುತಲೇ ತಿಳಿಯದಂತಹುದು

ಯಾವ ದೇಶದ ಹೆಣೆ ? ಯಾವ ಭಾಷೆಯಿದು ?
ಅಕ್ಷರಕ್ಕಿದು ತಾನೆ ಸಾಕ್ಷಿಯಾಗಿಹುದು !!!

× × ×

ಅಪ್ಸರಳಂದದಿ ನಿನ್ನ ಮನೆಗಿರುವಳಾರು ?
ಗುಪ್ತಗಾಮಿನಿಯಾಗಿ ಗಮಿಸುವವಳಾರು ?
ನಿನ್ನ ಮೋರೆಯ ಮೇಲೆ ಅವಳ ಕುರುಪಿಹುದು
ನಿನ್ನ ನೋಡಿದ ಮನಕೆ ಅವಳ ನೆನಪಹುದು
ಅವಳ ಬಣ್ಣಿಸಬಲ್ಲ ಬಾಯಿ ನನಗಿಲ್ಲ !!
ಅವಳ ಬಿಟ್ಟಿರಬಲ್ಲ ಶಕ್ತಿ ನಿನಗಿಲ್ಲ !!!
ಮಿಂಚಿನಂದದಿ ಹೊಳೆದು ಹರಿಯುವವಳಾರೇ ?
ಚಂಚಲೆಯೆ ! ಚಮಕಿಸುತ ಚಲಿಸುವವಳಾರೇ ?

— ಚೆನ್ನ

---

**ಸವಿ:**— ಇದೊಂದು ವೃತ್ತಿತನ್ಮಯತೆಯು ಕವಿತೆಯು. ಸಾಮಾನ್ಯವಾಗಿ ನಮ್ಮ ಮನಸ್ಸು ಅತ್ತಿತ್ತ ತಿರುಗುತ್ತಿರುವದು. ಅಂದರೆ ಬಹಿರ್ಮುಖವಾಗಿರುವದು. ಅದು ಬೇಕು ಇದು ಬೇಕು ಎಂದು ಕಂಡು ಕಂಡುದನೆಲ್ಲವನ್ನೂ ಬೇಡುವದು. ಊರೂರು ತಿರುಗುವ ಪರದೇಶಿಯೊಬ್ಬಾತ ಎಂದೋ ಒಮ್ಮೆ ತನ್ನ ಮನೆಮಾರನ್ನು ಅಕಸ್ಮಾತ್ತಾಗಿ ಅರ್ಧಮರ್ಧ ಗುರುತಿಸುವಂತೆ, ಸಾವಿರಕಡೆಗೆ ಸುತ್ತಿಸುತ್ತಿ ಬಳಲಿದ ಚಿತ್ತವು ತನ್ನದೆಂಬುದೇನನ್ನೋ ಒಮ್ಮೊಮ್ಮೆ ಕಾಣುವದು.

ಆಟಗುಳಿಯಾದ ಜೀವವು ಈ ವರೆಗೂ ಅಗೋಚರವಾದ ಒಂದು ದಿವ್ಯರೂಪು 'ಮಿಂಚಿನಂದದಿ ಹೊಳೆದು ಹರಿಯು'ವದನ್ನು ಕಂಡು, ಬೆಜಾ ಸೆಬಟ್ಟು ಮುತ್ತೂ ಅದರ ನೆಲೆಯನ್ನು ತಿಳಿದುಕೊಳ್ಳಲು ಹವಣಿಸುವದು.

ಈ ಗುರುತು ಪ್ರತಿಯೊಂದು ಹೃದಯಕ್ಕೂ ಇದ್ದೇ ಇರುವದು. ಇಷ್ಟೇ—ಕತ್ತಲಲ್ಲಿ ಮುಗ್ಗರಿಸಿ ಬೀಳುತ್ತಿರುವಾಗ ಕೈನೀಡಿ ಎತ್ತುವ ಕೈಯಾರದೆಂದು ಕೇಳುವ ಕುತೂಹಲವು ಮಾತ್ರ ಎಲ್ಲರಲ್ಲಿರುವದಿಲ್ಲ; ಗುರುತು ಗೆಳೆತನವಾಗಬೇಕೆಂಬ ಬಲವಾದ ಬಯಕೆಯು ಎಲ್ಲರಲ್ಲಿರುವದಿಲ್ಲ.

ಈ ಬಯಕೆಯಿಂದಲೇ ಕವಿ ಅನ್ನುವನು— 'ಮಿಂಚಿ ಮರೆಯಾಗುವ ನಿನ್ನ ಸ್ಫುರದ್ರೂಪವನ್ನು ಕಂಡು ನನ್ನ ಕಣ್ಣು ಎವೆಯಿಕ್ಕುವದನ್ನೇ ಮರೆತುಬಿಟ್ಟದೆ. ನಿನ್ನ ಬಣ್ಣಿಸ

ಬೇಕೆಂದರೆ– ನಿಶ್ಶಬ್ದಂ ಬ್ರಹ್ಮ ಉಚ್ಯತೇ॥ ನೀನು ಮಾತಿನ ಮೇರೆಯನ್ನು ಮೀರಿರುವೆ! ( ೧ ರಿಂದ ೬ )

ಈ ಭಾವವೇ ಕೀಟ್ಸ ಕವಿಯ 'Heard melodies are sweet; but those unheard are sweeter' ಎಂಬ ಸಾಲಿನಲ್ಲಿ ಧ್ವನಿತವಾಗಿದೆ.

ನಮ್ಮ ಅಳವನ್ನು ಮೀರಿದರೇನು? ಅಪೌರುಷೇಯವಾದರೇನು! ಅತೀತವಾದರೇನು! ನಾವು ಕಾಣುವ ಕಾಣ್ಕೆಯು ನಮ್ಮದೆಂಬುದು ಅನುಭವವೇದ್ಯವಾಗಿರುವದರಿಂದ, ಈ ಪರಿಚಯವೇನೂ ಹೊಸದಲ್ಲ. ಮರೆತು ಹೋದುದನ್ನೇ ಮರಳಿ ಗುರುತಿಸಿದುದಾಯಿತು. All Knowledge is only a recollection (Plato) ( ೭ ರಿಂದ ೯ )

ಕುರುಹನ್ನು ಕುರಿತೊಡನೆ ಗುರಿಯು ಗುರುತಾಗುವದು. ಸಂಜ್ಞೆಯನ್ನು ಧ್ಯಾನಿಸಿದಂತೆ ಜ್ಞಾನವು ಅಂಕುರಿಸುವದು. ಸಂಜ್ಞಾ ಜ್ಞಾನಗಳು, ಕುರುಹು – ಗುರಿಗಳು ವಾಗರ್ಥಗಳಂತೆ ಸಂಪೃಕ್ತವಾಗಿವೆ. ಗೊತ್ತಿನ ಆಚೆಗಿದ್ದ ವಸ್ತುವು ಗೊತ್ತಿದ್ದ ಕೆಲ ರೂಪಗಳನ್ನೇ ಧರಿಸುವದು. ಈ ರೂಪಗಳನ್ನು ಕುರಿಯುವಾಗ ಆ ವಸ್ತುವಿನ ಅರಿವಾಗುವದು. ಚರಸೌಂದರ್ಯದ ಹಿಂದೆ ಸ್ಥಿರತತ್ತ್ವವೇನೋ ಇದೆಯೆಂದು ಹೊಳೆಯುವದು. ಕವಿ ಈ ಸ್ಥಿತಿಯನ್ನನು ಲಕ್ಷಿಸಿಯೇ ಬರೆದಿರುವನು. ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಎಂಬೀ ನಾಲ್ಕು ವಾಣಿಗಳಲ್ಲಿ ಪರೆಯಸ್ಥಾನವನ್ನು ಲಕ್ಷ್ಯದಲ್ಲಿಟ್ಟು ಓದುಗರು ಇದನ್ನೋದಬೇಕು. ( ೯ ರಿಂದ ೧೩ )

---

# ಸುಧಾರಣೆಯು.

(೧) ಮನುಷ್ಯನ ಚಾರಿತ್ರ್ಯಕ್ಕೆ ಅವನ ಸುತ್ತುಮುತ್ತಲಿನ ಪರಿಸ್ಥಿತಿಯೇ ಕಾರಣವೆಂದು ಭೌತಿಕವಾದಿಗಳ ವಾದ. ಆದರೆ ಮಾನವಜಾತಿಯ ಆಯುಷ್ಯಕ್ರಮಣವನ್ನು ಸೂಕ್ಷ್ಮ ರೀತಿಯಿಂದ ನಿರೀಕ್ಷಿಸಹತ್ತಿದರೆ ಸುತ್ತುಮುತ್ತಲಿನ ಪರಿಸ್ಥಿತಿಯು ಎಷ್ಟೇ ಪರಿಣಾಮಗಳನ್ನುಂಟು ಮಾಡಿದರೂ, ಅವುಗಳನ್ನು ಮೆಟ್ಟಿ ತನ್ನ ಪ್ರಭಾವವನ್ನು ಕೆಡವುವಂಥ ಅದ್ಭುತ ಶಕ್ತಿಯೊಂದು ಮಾನವನಲ್ಲಿ ಉಂಟೆಂದು ಒಡೆದು ಕಾಣುವದು. ಆ ಶಕ್ತಿಯು ತನ್ನ ತೇಜಸ್ಸಿನಿಂದ ಪ್ರಕೃತಿಯನ್ನೇ ಸ್ವಾಧೀನಪಡಿಸಿಕೊಂಡು ತನಗೆಬೇಕಾದಂತೆ ಪರಿಸ್ಥಿತಿಯನ್ನುಂಟುಮಾಡಿಕೊಳ್ಳುವದು. ತನ್ನ ಮೇಲಿದ್ದ ಪರಿಸ್ಥಿತಿಯ ಒಡೆತನವನ್ನು ತಳ್ಳಿ ಆದರ ಮೇಲೆಯೇ ತನ್ನ ಒಡೆತನವನ್ನು ನಡಿಸಬಲ್ಲದು. ಹೀಗೆ ಪರಿಸ್ಥಿತಿಯು ಮಾನವನ ದಿವ್ಯಚಾರಿತ್ರ್ಯಕ್ಕೆ ಸಹಾಯಕವೇ ಹೊರತು ಮುಖ್ಯವಾದದ್ದಲ್ಲ. ಈ

ಅಂತಃಶಕ್ತಿಯ ವಿಕಾಸವನ್ನು ಸರ್ವಾಂಗಸುಂದರವಾಗಿ ಮಾಡುವದೇ ಮಾನವ ಜಾತಿಯ ಸುಧಾರಣೆಯು.

(೨) ಈ ಶಕ್ತಿಯನ್ನರಿಯದೆಯೇ; ಪರಿಸ್ಥಿತಿಯೆ ಸಕಲಸೌಖ್ಯದ ಬೀಡೆಂಬ ಭೌತಿಕ ವಾದಿಗಳ ಸೆಳವಿಗೆಬಿದ್ದು ಪರಿಸ್ಥಿತಿಯಲ್ಲಿಯೇ (ಕೇವಲ ಬಹಿರಂಗದಲ್ಲಿ) ಬದಲು ಮಾಡಲು ಬಯಸುತ್ತೇವೆ. ಅದು ನಮ್ಮ ಜೀವನಕ್ಕೆ ಯೋಗ್ಯವಿರಲಿ ಇಲ್ಲದಿರಲಿ ಅದ ರಂತೆ ಕುಣಿಯಲು ಪ್ರಾರಂಭಿಸುತ್ತೇವೆ. ಕುಣಿ ಕುಣಿದು ದಣಿದು ನಿರಾಶರಾಗಿ ಅದನ್ನು ಬಿಟ್ಟು ಮತ್ತೊಂದರ ಬೆನ್ನುಹತ್ತುತ್ತೇವೆ. ಹೀಗೆಯೇ ನಮ್ಮಜೀವಿತವು ಹಾಳಾಗ ತೊಡಗಿದೆ. ಭಾರತೀಯರ ಶಕ್ತಿಯು ಸೂರೆಯಾಗತೊಡಗಿದೆ. ಒಮ್ಮೊಮ್ಮೆ ಕೇವಲ ಐಹಿಕ ಸುಖದ ಸಾಧನಗಳಾದವಸ್ತುಗಳು ಸಹಜವಾಗಿಯೂ ವಿಪುಲವಾಗಿಯೂ ದೊರೆಯಹತ್ತಲು, ಸುಧಾರಣೆಯು ಭರದಿಂದಸಾಗಹತ್ತಿರುವದೆಂದು ತಿಳಿಯುತ್ತೇವೆ. ಈ ವೇಳೆಯಲ್ಲಿ ನಾವು ಅಂತಃಶಕ್ತಿಗಳ ವಿಕಾಸಕ್ಕೆ ಎಳ್ಳಷ್ಟೂ ಲಕ್ಷಗೊಡುವದಿಲ್ಲ. ಇಷ್ಟೇ ಅಲ್ಲ; ಅದರ ಬೆಳವಣಿಗೆಯನ್ನು ಕುಗ್ಗಿಸುವಂಥ ಎಷ್ಟೋ ಕಾರ್ಯಗಳು ನಮ್ಮಿಂದ ನಡೆದು ಹೋಗುತ್ತವೆ. ಇದರಿಂದ ತಾತ್ವಿಕ ಜೀವನವು ನಷ್ಟವಾಗಿ ಅವನ ಮನಸ್ಸು ಬುದ್ಧಿ, ಮೊದಲಾದ ಅಂತಃಶಕ್ತಿಗಳು ಬತ್ತಿಹೋಗುತ್ತವೆ. ಕಾಲಾಂತರದಿಂದ ಅವನಿಗೆ ನ್ಯಾಯ ಅನ್ಯಾಯ, ಸತ್ಯ ಅಸತ್ಯ, ಹಿತಾಹಿತಗಳು ಯಾವವು ಎಂಬುದೇ ತಿಳಿಯದಾ ಗುತ್ತದೆ. ಉದಾಹರಣೆಗಾಗಿ ಈಗ ಕೋರ್ಟನಲ್ಲಿ ಸುಳ್ಳುಸಾಕ್ಷಿಗಳನ್ನು ಹೇಳು ವದೂ, ವಕೀಲರು ಸುಳ್ಳು ಮಾತಾಡುವದೂ, ಲಂಚವನ್ನು ತಿನ್ನುವದೂ, ಎರಡನೇಯ ವರ ಗಂಟನ್ನು ಯಾರೂ ಕೇಳದಿದ್ದರೆ ಎತ್ತಿಹಾಕುವದೂ, ಅನ್ಯಾಯುವಲ್ಲೆಂದು ಸಮಾ ಜವು ತಿಳಿಯ ತೊಡಗಿದೆ. ಹೀಗೆ ಮಾನವನು ಅಥವಾ ಸಮಾಜವು ತಾತ್ವಿಕ ಜೀವನ ದಿಂದ ಒಮ್ಮೆ ಪತಿತವಾಯಿತೆಂದರೆ ಅದು ಪಾತಾಳಕ್ಕೆ ಇಳಿಯಿತೆಂದೇ ತಿಳಿಯಬೇಕು. ಆಗ ಐಹಿಕ ಸುಖಗಳೆಲ್ಲವೂ ಮಣ್ಣುಗೂಡುವವು. ವಿಜಯ ನಗರದ ಅರಸರು ಎಲ್ಲಿಯ ವರೆಗೆ ತಾತ್ವಿಕ ಜೀವಿಗಳಾಗಿದ್ದರೋ ಅಲ್ಲಿಯವರೆಗೆ ಸುಖಜೀವಿಗಳಾಗಿದ್ದರು. ಐಹಿಕ ಸುಖ ಸಂಪತ್ತುಗಳು ವಿಪುಲವಾಗಿ ವಿಲಾಸಸಾಧನಗಳುಹೆಚ್ಚಿ ತಾತ್ವಿಕ ಜೀವನದಿಂದ ಎಂದು ಪತಿತರಾದರೋ ಅಂದೇ ಅವರೂ ಅವರ ರಾಜ್ಯವೂ ಮಣ್ಣುಗೂಡಿದವು. ಆದ್ದ ರಿಂದ ಕೇವಲ ಐಹಿಕ ಸುಖಸಾಧನಗಳ ಬೆಳವಣಿಗೆಯೇ ಸುಧಾರಣೆಯೆಂಬ ಭೌತಿಕ ವಾದಿಗಳ ಮಾತು ಸರಿಯಾಗಲಾರದು. ಇದರಿಂದ ಭೌತಿಕ ಸಾಧನಗಳನ್ನು ನಾವು ನಿರಾಕರಿಸುತ್ತೇವೆಂದು ಮಾತ್ರ ತಿಳಿಯಬಾರದು. ಐಹಿಕ ಸುಖಸಾಧನಗಳ ಬೆಳವಣಿ ಗೆಯೂ ಅಂತಃಶಕ್ತಿಗಳ ವಿಕಾಸವೂ ಯಾವುದರಿಂದ ಉಂಟಾಗುವದೋ ಅದೇ ನಿಜ ವಾದ ಸುಧಾರಣೆಯು. ಇಂದು ನಮಗೆ ಬೇಕಾದದ್ದು ಇದೇ. ಇವುಗಳು ಒಂದಕ್ಕೊಂದು ವಿರೋಧಿಗಳಾಗದೆ ಸಹಾಯಕಗಳೂ ಪೂರಕಗಳೂ ಆಗಬೇಕು. ಮಾನವನು ಹೊಸ ಹೊಸ ಪರಿಸ್ಥಿತಿಗಳುಂಟಾದಂತೆ ತನ್ನ ಅಂತಃಶಕ್ತಿಗಳಿಗೆ ಯೋಗ್ಯವಾದವುಗಳನ್ನು ಗ್ರಹಿ

ಸಬೇಕು. ಹೊಸದೆಲ್ಲವೂ ಹುಸಿಯೆಂದು ಬೆದರುವ ಕಾರಣವಿಲ್ಲ. ಹಳೆಯದೆಲ್ಲವೂ ಹಳಸಿರುವದೆಂದು ಹಳಿಯುವ ಕಾರಣವಿಲ್ಲ. ನಮ್ಮ ಮನಸ್ಸು ಬುದ್ಧಿ, ಆತ್ಮವೊದಲಾದ ಅಂತಃಶಕ್ತಿಗಳು ವಿಕಾಸಹೊಂದಿ, ತೇಜಸ್ವಿಗಳೂ, ಕಾರ್ಯದಕ್ಷರೂ, ಪರಾಕ್ರಮಿಗಳೂ ಆಗುವಂತೆ, ಪೌರ್ವಾತ್ಯ ಪಾಶ್ಚಿಮಾತ್ಯ ಸಂಸ್ಕೃತಿಗಳ ಸಮ್ಮೇಳನದಿಂದುಂಟಾದ ಹೊಸ ಬೋನವನ್ನು ಸವಿದು ದೇವತ್ವವನ್ನು ಪಡೆಯುವದೇ ಸುಧಾರಣೆಯು. ಇದೇ ನಮ್ಮ ಗುರಿಯು ; ಇದೇ ಪರಮಾತ್ಮನು ಕೊಟ್ಟ ಸಂಪತ್ತು ; ಬುದ್ಧಿಮನಸ್ಸುಗಳ ಯೋಗ್ಯ ಉಪಯೋಗವು.

(೩) ಮೇಲಿನ ಮಾತುಗಳೇ ಸಮಾಜ ಪುರುಷನಿಗೆ ಹತ್ತುತ್ತವೆ. ವ್ಯಕ್ತಿಗಳ ಸಮಷ್ಟಿರೂಪವೇ ಸಮಾಜವು. ವ್ಯಕ್ತಿಯಲ್ಲಿ ವ್ಯಕ್ತಿತ್ವವಿದ್ದಂತೆ; ಸಮಾಜ ಪುರುಷನ ಲ್ಲಿಯೂ ಒಂದು ವಿಶೇಷ ಜೀವನವುಂಟು. ಆ ಜೀವನದ ಉನ್ನತಿಯೇ ಸಮಾಜದ ಉನ್ನತಿಯು, ಸಮಾಜವು ಬಲಿಷ್ಠವೂ ತೇಜಃಪುಂಜವೂ, ಸುಖಶಾಂತಿಗಳ ತವರು ಮನೆಯೂ ಆಗುವಂತೆ ಮಾಡುವದೇ ಅದರಉನ್ನತಿಯು. ಸಮಾಜದಲ್ಲಿಯ ತಾತ್ವಿಕ ಜೀವನದಮೇಲೆಯೇ ಅದರ ಜೆಲೆಯು ಕಟ್ಟಲ್ಪಡುತ್ತದೆ. ಮತ್ತು ಅದರ ಮೇಲೆಯೇ ಅದರ ಉನ್ನತಿಯೂ ಅವಲಂಬಿಸಿರುತ್ತದೆ. ಯಾವ ಸಮಾಜದ ತಾತ್ವಿಕ ಜೀವನವು ಹಾಳಾಗಿದೆಯೋ ಆ ಸಮಾಜವೂ ಹಾಳಾಗಿದೆ. ಇದಕ್ಕೆ ಬ್ರಾಹ್ಮಣ ಸಮಾಜವು ಒಳ್ಳೇ ಉದಾಹರಣೆಯಾಗಿದೆ. ಇಡೀ ಹಿಂದೀ ಸಮಾಜವೆಂದರೂ ಸಲ್ಲು ವದು. ಆದ್ದರಿಂದಲೇ ಮಹಾತ್ಮರು ಮೊದಲು ತಾತ್ವಿಕ ಜೀವನದ ಪಾಠವನ್ನು ಕಲಿ ಸಲು ಪ್ರಾರಂಭಿಸಿರುವರು.

(೪) ಹಾಳಾದ ಸಮಾಜದ ಸುಧಾರಣೆಯು ಅಥವಾ ಉನ್ನತಿಯು ಇಂದು ಆ ಸಮಾಜಕ್ಕೆ ಕೊಡುವ ಶಿಕ್ಷಣದ ಮೇಲೆಯೇ ಅವಲಂಬಿಸಿದೆ. ದೇಶದ ಮುಂದಾಳು ಗಳು ತಮ್ಮ ಸಮಾಜ ಪುರುಷನ ಜೀವನವನ್ನರಿತು ಅವನ ಬೆಳವಣಿಗೆಗೆ ಯೋಗ್ಯವಾದ ಸಾಧನಗಳನ್ನು ಒದಗಿಸಿಕೊಡಬೇಕು. ಇಲ್ಲದಿದ್ದರೆ ಎಲ್ಲವೂ ಹೊಳೆಯಲ್ಲಿ ಹುಣಿಸೆ ಹಣ್ಣು ತೊಳೆದಂತಾಗುವದು. ಸದ್ಯದಲ್ಲಿ ನಡೆಯುವ ಪ್ರಯತ್ನಗಳೆಲ್ಲವೂ ಇದೇ ಫಲ ವನ್ನು ಹೊಂದುತ್ತಲಿವೆ. ಬಸವ, ರಾಮದಾಸ, ವಿದ್ಯಾರಣ್ಯ ಮೊದಲಾದ ಮುಂದಾಳು ಗಳು ಸಮಾಜ ಪುರುಷನ ಜೀವಾಳವನ್ನು ಕಂಡುಹಿಡಿದು ತಕ್ಕ ಪ್ರಯತ್ನಗಳನ್ನು ಮಾ ಡಿದ್ದರಿಂದ ಸಮಾಜದಲ್ಲಿ ನವಚೈತನ್ಯವುಂಟಾಗಿ ದೇಶದ ಪ್ರಗತಿಗೆ ಅನುಕೂಲವಾಯಿತು. ಆದ್ದರಿಂದಲೇ ರಾಷ್ಟ್ರದ ಉತ್ಕ್ರಾಂತಿಯು ಅಥವಾ ಅಪಕ್ರಾಂತಿಯು ಮುಂದಾಳುಗಳ ಮುಂಥೋರಣವನ್ನೇ ಅವಲಂಬಿಸಿದೆ. ಅದರಲ್ಲಿ ನಮ್ಮ ಪರಿಸ್ಥಿತಿಯಂತೂ ಬಹಳ ಕೀಳಾ ಗಿದೆ. ನಮ್ಮ ಸಮಾಜಗಳ ಮೇಲೆ ಅನ್ಯಸಂಸ್ಕೃತಿಗಳ ದುಷ್ಪರಿಣಾಮಗಳು ಎಡೆ ಬಿಡದೆ ನಡೆದಿರುತ್ತವೆ. 'ನಮ್ಮ ಮೇಲೆ ಧಾಳಿಯನ್ನು ನಡಿಸಿರುವ ಈ ಅನ್ಯ ಸಂಸ್ಕೃತಿ

ಗಳನ್ನು ಹೇಗೆ ವಶಮಾಡಿಕೊಳ್ಳಬೇಕು ! ನಮ್ಮ ಹಿತಕ್ಕೆ ಅವುಗಳನ್ನು ಹೇಗೆ ಸಾಧನ ಗಳಾಗಿ ಉಪಯೋಗಿಸಿಕೊಳ್ಳಬೇಕು ?' ಎಂಬುದನ್ನು ಮುಂದಾಳುಗಳು ಪೂರ್ಣವಾಗಿ ವಿಚಾರಿಸಿ ಜಗತ್ತಿನಲ್ಲಿ ಮುಂದುವರಿದ ರಾಷ್ಟ್ರಗಳಿಗೆ ಇರುವ ಯೋಗ್ಯತೆಯನ್ನೂ ಕೀರ್ತಿ ಯನ್ನೂ ಬಲಿಷ್ಠತನವನ್ನೂ ಸಂಪಾದಿಸುವದಲ್ಲದೆ ನಮ್ಮ ರಾಷ್ಟ್ರವು ಇಡೀ ಮಾನವ ಜಾತಿಗೇ ಆದರ್ಶಪ್ರಾಯವಾಗುವಂತೆಯೂ, ಗುರುತ್ವವನ್ನು ಪಡೆಯುವಂತೆಯೂ ಮಾ ಡುವದೇ ಮುಂದಾಳುಗಳ ಕರ್ತವ್ಯವು. ಇದೇ ನಮ್ಮ ಸಮಾಜದ ಸುಧಾರಣೆಯು—

(೫) ಈ ಪ್ರಕಾರ ರಾಷ್ಟ್ರವು ಆದರ್ಶಪ್ರಾಯವಾಗಬೇಕಾದರೆ ನಾವು ಅದರಲ್ಲಿ ಈಗ ಬಿತ್ತುವ ಬೀಜಗಳನ್ನೇ ಅವಲಂಬಿಸಿದೆ. ಇಂದಿನ ತರುಣರೇ ಮುಂದಿನ ಮುಂದಾ ಳುಗಳು. ಆದ್ದರಿಂದ ಅವರಿಗೆ ಕೊಡುವ ಶಿಕ್ಷಣವು ರಾಷ್ಟ್ರಪೋಷಕವೂ ಬಲವರ್ಧ ಕವೂ ಇರುವವೋ ಇಲ್ಲವೋ ಎಂಬುದನ್ನು ವಿಚಾರಿಸಬೇಕು. ನಮ್ಮ ತರುಣರಲ್ಲಿ ರಾಷ್ಟ್ರಾಭಿಮಾನ, ಸ್ವಧರ್ಮಾಭಿಮಾನ, ಸ್ವಾತಂತ್ರ್ಯಾಭಿಮಾನಗಳು ಎಂಥ ಶಿಕ್ಷಣದಿಂದ ಉದಯಹೊಂದಬಹುದು? ಎಂಥ ಶಿಕ್ಷಣದಿಂದ ವೀರರೂ ತತ್ತ್ವನಿಷ್ಠರೂ ಕರ್ತವ್ಯನಿ ಷ್ಠರೂ ಆಗಬಹುದು? ಎಂಥ ಶಿಕ್ಷಣವನ್ನು ಕೊಟ್ಟರೆ ನಮ್ಮ ತರುಣರು ಮಿಕ್ಕ ರಾಷ್ಟ್ರದ ತರುಣರಿಗಿಂತ ಮಿಗಿಲಾಗುವರು? ಬಹಳ ಮಾತಿನಿಂದೇನು ? ನಮ್ಮ ತರುಣರು ಇಡೀ ಮಾನವಜಾತಿಗೇ ಆದರ್ಶಪ್ರಾಯರಾಗುವಂತೆ ಮಾಡಲು ಬೇಕಾದ ಶಿಕ್ಷಣವನ್ನು ಒದ ಗಿಸಿಕೊಡುವದೇ ಇಂದಿನ ನಮ್ಮ ಕೆಲಸವು. ಈ ಕಾರ್ಯದಲ್ಲಿ ಇಂದು ನಾವು ಎಷ್ಟು ಶಕ್ತಿಸಾಹಸಗಳನ್ನು ಸೂರೆಮಾಡುವೆವು ? ಯಾರು ಭಾರತೀಯ ತರುಣರ ಉದ್ಧಾರ ಕ್ಕಾಗಿ ಟೊಂಕಕಟ್ಟಿ ನಿಂತಿರುವರು ? ಎಂಬುದನ್ನು ವಾಚಕರೇ ವಿಚಾರಿಸಬೇಕು. ಇಂದಿನ ನಮ್ಮ ಪ್ರಯತ್ನಗಳೇ ಭವಿಷ್ಯತ್ಕಾಲದ ಒರೆಗಲ್ಲು. ಎಂಬುದನ್ನು ನಾವು ನೆನಪಿ ನಲ್ಲಿಡಬೇಕು.

(೬) ನಮ್ಮ ಸಮಾಜವು ಸರ್ವಾಂಗಸುಂದರವಾಗುವಂತೆ ನಾವು ಯಾವಾಗಲೂ ಯತ್ನಿಸಬೇಕು. ನಮ್ಮ ಮುಂದಾಳುಗಳಲ್ಲಿ ಏಕದೇಶೀಯತ್ವವು ಬಹಳ. ಇದರಿಂದ ಸಮಾಜವು ಉತ್ಕ್ರಾಂತಿಯನ್ನೈದಲಾರದು, ಶರೀರದ ಬೆಳವಣಿಗೆಗೆ ಎಲ್ಲ ಅವಯವ ಗಳ ಬೆಳವಣಿಗೆಯು ಹೇಗೆ ಅವಶ್ಯಕವೋ ಹಾಗೆಯೇ ಸಮಾಜಕ್ಕೆ ಧರ್ಮ, ರಾಜಕಾ ರಣ, ಸಾಹಿತ್ಯ, ಲಲಿತಕಲೆ ಮೊದಲಾದ ಸಮಾಜದ ಪ್ರತಿಯೊಂದು ಅಂಗವೂ ಪೂರ್ಣ ವಾಗುವಂತೆ ಯತ್ನಿಸಬೇಕು. ಇವುಗಳು ಒಂದಕ್ಕೊಂದು ವಿರೋಧಿಗಳಾಗದೇ ರಾಷ್ಟ್ರದ ಪ್ರಗತಿಗೆ ಪೂರಕಗಳಾಗುವಂತೆ ಮುಂದಾಳುಗಳು ಎಚ್ಚರ ತೆಗೆದುಕೊಳ್ಳಬೇಕು. ಹೀಗೆ ಸಮಾಜದ ಎಲ್ಲ ಅವಯವಗಳಲ್ಲಿ ಚೆನ್ನಾಗಿ ರಕ್ತವಾಡ ತೊಡಗಿದರೆ ಅದರಲ್ಲಿ ಒಂದು ತರದ ನವಚೈತನ್ಯವುಂಟಾಗುತ್ತದೆ. ಇದರಿಂದ ರಾಷ್ಟ್ರ ಪೋಷಕವಾದ ಕಾರ್ಯಗಳು ಹಾ ಹಾ ಅನ್ನುವದರಲ್ಲಿ ಕೈಗೂಡುತ್ತವೆ.

ಸಾರಾಂಶವೇನಂದರೆ, ಸಮಾಜದ ಅಥವಾ ರಾಷ್ಟ್ರದ ಜೀವನದ ವೈಶಿಷ್ಟ್ಯವನ್ನ ರಿತು ಅದರ ಸುತ್ತುಮುತ್ತಲಿನ ಪರಿಸ್ಥಿತಿಯನ್ನು ಆ ಜೀವನಕ್ಕೆ ಸಾಧನಮಾಡಿಕೊಟ್ಟು ಆ ಜೀವನವನ್ನು ಸರ್ವಾಂಗಸುಂದರವಾಗಿ ಬೆಳಿಸುವದೇ ಸುಧಾರಣೆಯು.

—ಬಿಂದು ಮಾಧವ.

---

# ಭಾಗವತ ಧರ್ಮ

( ಶ್ರೀಮದ್ಭಾಗವತದ ಏಕಾದಶ ಸ್ಕಂದದ ದ್ವಿತೀಯ ಅಧ್ಯಾಯವು. )

ಶ್ರೀ ವಸುದೇವನು ಮೋಕ್ಷಮಾರ್ಗವನ್ನು ಉಪದೇಶಿಸಬೇಕೆಂದು ನಾರದರಿಗೆ ಬೇಡಿಕೊಳ್ಳಲು, ಅವರು ನಿಮಿರಾಜನ ಸತ್ರದಲ್ಲಿ ಸಂಭವಿಸಿದ ನಿಯಮ ಮತ್ತು ಋಷಭ ದೇವನ ಪುತ್ರರಾದ ನವಯೋಗೀಶ್ವರರ ಸಂವಾದವನ್ನು ನಿರೂಪಿಸಿದರು.

ರಾಜನು— ಸಾಧುಗಳು ದೀನವತ್ಸಲರು. ‘ ಸುಖಾಯೈವ ಹಿ ’ ಸಾಧುಗಳ ಸಮಾಗಮವು. ಭೋ! ವಿಶ್ವತೋಮೃತ್ಯುಭಯಭೀತನಾದ ಸರ್ವತಸ್ತ್ರಾಪತ್ರಸ್ತನಾದ ನನಗೆ ಆತ್ಯಂತಿಕಕ್ಷೇಮಸಾಧನವನ್ನು ವಿವರಿಸಿರಿ. ಉದ್ಧರಿಸಿರಿ. ಶರಣು. ಶರಣು.

ಮೊದಲಿಗನಾದ ಕವಿಯು ಇಂತೆಂದನು— ಜೋಲಿ ಹಿಡಿಯದ ನರನ ಸುತ್ತುಮುತ್ತಲು ಕುತ್ತಿನ ಕೊಳ್ಳವು. ಮಾಯಾದ ಬೆದರುಗಳ ಬೆದರಿಕೆಯಂತೂ ಹೆಜ್ಜೆ ಹೆಜ್ಜೆಗೆ. ಅಚ್ಯುತನ ಊಳಿಗದವನಾದವನೇ ಕುತ್ತುಗಳನ್ನು ಕತ್ತರಿಸುವನು. ಅವನು ಮಾತ್ರ ನಿತ್ಯ ನಿರ್ಭಯನು.

ಜೀವದೇವರ ಆತ್ಮೀಯತೆಯನ್ನೇ ಭಗವಂತನು ಹೇಳಿದನು. ಅದೇ ಭಾಗವತ ಧರ್ಮದ ಮರ್ಮವು. ಆ ಧರ್ಮವನ್ನು ಧರಿಸಿದ ಮೇಲೆ ಕಣ್ಣು ಕಟ್ಟಿಕೊಂಡು ನಡೆಯಲಿ- ಯಾಕೆ-ಭರ್ರನೆ ಓಡಲಿ, ತಗ್ಗುವದಿಲ್ಲ ಮುಗ್ಗುವದಿಲ್ಲ. ಆ ಕವಚದ ಕಟ್ಟು ಇಷ್ಟೇ. ಮೈಯಿಂದ ಮಾಡಲಿ—ಮಾತಿನಿಂದ ಮಾಡಲಿ—ಮನದಿಂದ ಮಾಡಲಿ—ಇಂದ್ರಿಯ ಬುದ್ಧಿಗಳಿಂದ ಮಾಡಲಿ— ಸ್ವಭಾವಕ್ಕನುಗುಣವಾಗಿ ಮಾಡಲಿ—ಏನೇ ಮಾಡಲಿ ಎಲ್ಲವನ್ನು ‘ನಾರಾಯಣನ ಮುಡುಪೆಂ’ದು ಮುಟ್ಟಿಸಬೇಕು, ಅರ್ಪಿಸಬೇಕು.

“ ಎರಡುಂಟು ” ಎಂದು ಬಗೆದರೇ ಭೀತಿಯು. ಸಮ್ಮುಖನಾದವನಿಗೆ ಈಶನು ವಿಮುಖನಾಗುವನು. ಆ ಮೇಲೆ ಅರುವು ಹಾರಿಯಡಗುವದು. ಅರುವುಗೇಡಿಯಾಗಲಾಗಿ ಮಾನವನು ಮರವಿನ ಬೆನ್ನುಬೀಳುವನು। ಮರುವಿನ ಇರವು ತಿರುಗಿ ಮುರುಗಿ ಸುತ್ತುವ ಗಾಣದೆತ್ತಿನಂತೆ. ಇದನ್ನರಿಯಬೇಕು. ಅರಿತವನು ಬಲ್ಲಿದನು.

ಅವನು ಗುರುದೇವತಾತ್ಮನಾಗಿ ನಿಷ್ಠೆಯಿಂದ ನಾರಾಯಣನನ್ನು ನೆನೆಯುವನು, ಆದ್ದ ರಿಂದ "ಎರಡುಂಟು" ಮಾಡಿ ಎಡರಿಗೆ ಎರವು ಮಾಡುವ ಮರವಿನ ಮನವನ್ನು ನಿಗ್ರ ಹಿಸಿ ಅದರ ದುರಾಗ್ರಹವನ್ನು ಕುಗ್ಗಿಸಬೇಕು. ಆ ಮೇಲೆ ಬೆದರು ಚದರುವದು.

ಆತ್ಮಾರಾಮನ ಭದ್ರವಾದ ಶುಭವಾದ ಮಂಗಲವಾದ ಜನ್ಮಕರ್ಮಗಳ ಕೀರ್ತನ ವನ್ನು ಆಲಿಸಬೇಕು; ಸ್ವಸ್ತಿಪ್ರದನಾಮಸಂಕೀರ್ತನವನ್ನು ಮಾಡಬೇಕು. ಗುಣಸ್ತುತಿ ಗೀತಗಳನ್ನು ಹಾಡಿ ಕೊಂಡಾಡಬೇಕು.

ಈ ರೀತಿಯಾಗಿ ಆತ್ಮವಲ್ಲಭನ ಹ್ಲಾದಜನಕನಾಮೋಚ್ಚರಣದಿಂದ ಅನುರಾ ಗವು ಜನಿಸುವದು; ಚಿತ್ತವು ದ್ರವಿಸುವದು; ಆ ಮೇಲೆ ನಗುತ್ತ ಕೆಲೆಯುತ್ತ ನಲ್ಲನ ಜಯನಾದ ಮಾಡುವನು. ಉನ್ಮತ್ತನಂತೆ ಖೇದಿಸುವನು, ಮೋದಿಸುವನು.

ನೆಲ ನೀರು ಬೆಂಕಿ ಗಾಳಿ ಮುಗಿಲು ಚಿಕ್ಕಿ ದಿಕ್ಕು ಗಿಡ ಹೊಳೆ ಕಡಲುಗಳೂ ಜೀವಿ ಗಳೂ ಹರಿಯ ರೂಪವೆಂದರಿತು ಆತ್ಮೀಯಭಾವನೆಯಿಂದ ನಮಿಸಬೇಕು.

ಇಂತು ಉಣ್ಣುವವಗೆ ತುತ್ತು ತುತ್ತಿಗುಂಟೆ ಹಸಿವು ಹಿಂಗುವದು. ಮೈಯು ಕೊಬ್ಬುವದು. ಮನವು ಹಿಗ್ಗುವದು. ಹಾಗೆಯೇ ಹರಿಯ ಚರಣಗಳಿಗೆ ಶರಣೆಂದು ಮೊರೆಹೊಕ್ಕವನಿಗೆ ಒಮ್ಮೆಲೆ ಭಕ್ತಿ–ವಿರಕ್ತಿ–ಅಪರೋಕ್ಷಾನುಭೂತಿ– ಈ ತ್ರಿರಸದ ಪರಮ ಪಾಕವು ಲಭಿಸುವದು. ಇಂತಪ್ಪ ಭಾಗವತನು ಶಾಂತಿಯನ್ನೂ ಸ್ವಸ್ತಿಯನೂ ಹೊಂದುವನು.

ಮತ್ತೆ ರಾಜನು ಭಗವತ್ಪ್ರಿಯ ಭಾಗವತನ ಇರುವು ನುಡಿ–ನಡೆಗಳನ್ನು ಕೇಳಲು ಹರಿಯು ಹೀಗೆ ನುಡಿದನು–

ಸರ್ವಭೂತಗಳಲ್ಲಿ ತನ್ನನ್ನು, ತನ್ನಲ್ಲಿ ದೇವನನ್ನು ಕಂಡವನು–ತನ್ನಲ್ಲಿ, ತನ್ನಿನ್ನಿ ಸಿಕೊಂಡ ಅವನಲ್ಲಿ ಭೂತಗ್ರಾಮವನ್ನು ಕಂಡವನು ಉತ್ತಮ ಭಾಗವತನು.

ಈಶನನ್ನು ಒಲ್ಮೆ ನಲ್ಮೆಯಿಂದ ಒಲಿಸುವವನು, ಭಕ್ತ ಬಂಧುಗಳ ಕೂಡ ಮೈತ್ರಿ ಭಾವದಿಂದಿರುವವನು, ಕಿರಿಯರ ಮೇಲೆ ಕರುಣೆ ತೋರುವವನು, ಅರಿಗಳ ಕೂಡ ವೈರ ಭಾವದಿಂದ ಇರದೆ ಉಪೇಕ್ಷಾವೃತ್ತಿಯಿಂದಿರುವವನು ಮಧ್ಯಮ ಭಾಗವತನು.

ಹರಿಪ್ರತಿಮೆಯನ್ನಷ್ಟು ಶ್ರದ್ಧೆಯಿಂದ ಭಜಿಸುವವನು, ಮಿಕ್ಕವರನ್ನು ಲೆಕ್ಕಿಸ ದವನು ಪ್ರಾಕೃತ ಭಕ್ತನು.

ವೈಷ್ಣವೀಮಾಯೆಯ ಗುಟ್ಟುಮಟ್ಟನ್ನು ಕಂಡವನು ವಿಷಯುಗಳನ್ನುಂಡು ಹಿಗ್ಗ ದವ ಕುಗ್ಗದವನು ಉತ್ತಮನು.

ಮೈಯ ಬಾಳುಹಾಳುಗಳಿಗೆ– ಇಂದ್ರಿಯಗಳ ದುಡಿತದಣುವ್ರಗಳಿಗೆ ಮನದ ಅಳಕುಅಂಜಿಕೆಗಳಿಗೆ ಬುದ್ಧಿಯ ಗುದ್ದಾಡಕ್ಕೆ ಹೆದರಿ ಚಲಿಸದೆ ಹರಿಯ ನೆನಪಿನಿಂದ ನಲಿದಾಡುವವನೇ ಭಾಗವತಪ್ರಧಾನನು.

ಮನೋಭೂಮಿಯಲ್ಲಿಯ ಕಾಮಕರ್ಮ ಬೀಜಗಳನ್ನು ಹುರುಪಳಿಸಿ ಒಡಲ ಗುಡಿಯಲ್ಲಿ ವಾಸುದೇವನ ಪ್ರಾತಿಷ್ಠಾಪನೆ ಮಾಡಿದವನೇ ಉತ್ತಮಭಾಗವತನು. ಸ್ವಾರಾಜ್ಯ ಸಾಮ್ರಾಜ್ಯ ವೈರಾಜ್ಯ ಲಕ್ಷ್ಮಿಯು ವರಿಸಬಂದರೂ ' ಲವನಿಮಿಷಾರ್ಧ ಮಪಿ' ಭಗವಂತನ ಅಡಿಬಿಡನು- ಚಲಿಸನು. ಅಕುಂತಸ್ಮೃತಿಯಾದ ವೈಷ್ಣವಾಗ್ರಣಿಯೇ ನೀನೇ ಧನ್ಯ! ನೀನೇ ಮಾನ್ಯ!

ಇಂತು ಎಲ್ಲವನ್ನು ಮುಡುಪುಮಾಡಿದ ಭಕ್ತನನ್ನುಹರಿಯು ಬಿಟ್ಟಗಲನು. ಭಕ್ತನ ನಲ್ಮೆಯಿಂದ ಅವನ ಒಡಲೆಡೆಯಲ್ಲಿಯೇ ನಲಿಯುವನು. ಒಂದರಕ್ಷಣ ಕೂಡ ಬಿಟ್ಟಗಲನು.

ॐ ಶಾನ್ತಿಃ ! ಶಾನ್ತಿಃ !! ಶಾನ್ತಿ : !!!

—ಚಿದಂಬರ

---

# ಚಿಕ್ಕ ಮಕ್ಕಳಿಗಾಗಿ

## ಬಾಲಪಾಠಗಳು.

——(೦)——

### ೧ನೇ ಪಾಠ

### ಎಲ್ಲಿ.

ಒಬ್ಬ:— ಈಗ ನೀನು ಎಲ್ಲಿ ಇದ್ದೀ?

ಇನ್ನೊಬ್ಬ:— ಎರಡನೇ ಇಯತ್ತೆಯಲ್ಲಿ?

ಒ:— ಎರಡನೇ ಇಯತ್ತೆ ಎಲ್ಲಿದೆ?

ಇ:— ರಾಷ್ಟ್ರೀಯಸಾಲೆಯಲ್ಲಿ?

ಒ:— ರಾಷ್ಟ್ರೀಯಸಾಲೆಯೆಲ್ಲಿದೆ?

ಇ:— ಮಂಗಳವಾರಪೇಟೆಯಲ್ಲಿ?

ಒ:— ಅದು ಎಲ್ಲಿದೆ?

ಇ:— ಧಾರವಾಡದಲ್ಲಿ?

ಒ:— ಅದು ಎಲ್ಲಿದೆ?

ಇ:— ಕರ್ನಾಟಕದಲ್ಲಿ?

ಒ:— ಅದು ಎಲ್ಲಿದೆ?

ಇ:— ಹಿಂದುಸ್ಥಾನದಲ್ಲಿ.

ಒ:— ಅದು ಎಲ್ಲಿದೆ?

ಇ:— ಏಸಿಯಾ ಖಂಡದಲ್ಲಿ.

ಒ:— ಅದು ಎಲ್ಲಿದೆ?

ಇ:— ಪೃಥ್ವಿಯಲ್ಲಿ.

ಒ:— ಅದು ಎಲ್ಲಿದೆ?

ಇ:— ಬಯಲಿನಲ್ಲಿ.

ಒ:— ಅದು ಎಲ್ಲಿದೆ?

ಇ:— ಬ್ರಹ್ಮಾಂಡದಲ್ಲಿ.

ಒ:— ಅದು ಎಲ್ಲಿದೆ?

ಇ:— ದೇವರಲ್ಲಿ?

ಒ:— ದೇವರೆಲ್ಲಿದ್ದಾನೆ?

ಗುರು:— ನನ್ನಲ್ಲಿ, ನಿನ್ನಲ್ಲಿ, ಎಲ್ಲರಎದೆಯಲ್ಲಿ, ಎಲ್ಲಿ ನೋಡಿದಲ್ಲಿ.

ದ್ವಿಪದಿ

ಇಬ್ಬರೂ:— ನನ್ನಲ್ಲಿ ನಿನ್ನಲ್ಲಿ ದೇವ ನಡಗಿರುವಾ
ಬಿನ್ನಯಿಸಿ ಕರೆದೊಡನೆ ಹೊರಗೆ ಬರುವಾ ॥ ೧ ॥
ಎಲ್ಲೆಲ್ಲಿ ನೋಡಿದರು ದೇವರಿಹನಲ್ಲಾ
ಬಲ್ಲವನೆ ಅವನನ್ನು ತಾನೋಡಬಲ್ಲಾ ॥ ೨ ॥
ಬಿನ್ನಯಿಸಿ ಕರೆಯೋಣ ಬಲ್ಲವರು ಆಗಿ
ಬಿನ್ನನೇಕಾಣುವನು ದೇವ ತಾನಾಗಿ ॥ ೩ ॥

---

## ೨ನೇ ಪಾಠ

## ಪಾಪಾ

ಎಂಥ ಚಂದಪಾಪಾ ಇದು! ಇದರಕಣ್ಣು ಲುಕುಲುಕು ಹೊಳೆಯುತ್ತವೆ. ಮುಖ ಕುಲುಕುಲು ನಗುತ್ತದೆ. ಇದರ ಈಟಈಟನ್ನ ಕೈಕಾಲುಗಳು ಎಷ್ಟು ಸೂಟಮೂಟಾ ಗಿವೆ! ಇದರ ಮೈ ಹೊಳಪು ಇದರ ಮೈನುಣುಪು ನೋಡಿ ನೋಡಿ ಮತ್ತೆ ಮತ್ತೆ ಇದನ್ನು ಮುಟ್ಟಬೇಕನಿಸುತ್ತದೆ; ಮತ್ತೆ ಮತ್ತೆ ಮುದ್ದಿಡಬೇಕೆನಿಸುತ್ತದೆ; ಮತ್ತೆ ಮತ್ತೆ ಎತ್ತಿಕೊಳ್ಳಬೇಕೆನಿಸುತ್ತದೆ.

ಈ ಪಾಪಾ ಬಹಳೇ ಸುಂದರವಾಗಿದೆ! ಇದರಂಥ ಕೂಸು ಇಡೀ ಊರೊಳಗಿಲ್ಲ ಇಡೀ ಜಗದೊಳಿಲ್ಲ. ಇದರ ಬೆಲ್ಲವಂತೂ ಸಕ್ಕರೆಗಿಂತ ಸಿಹಿ. ಇದರ ಕೂಡ ಎಷ್ಟು

ಹೊತ್ತು ಆಡಿದರೂ ದಣಿವೇ ಅನಿಸುವದಿಲ್ಲ. ಇದನ್ನು ಎಷ್ಟು ಸಲನೋಡಿದರೂ ಕಣ್ಣೇ ತಣಿಯುವದಿಲ್ಲ. ಏನು ಕೊಟ್ಟರೆ ಇಂಥ ಪಾಪಾ ಸಿಕ್ಕೀತು ? ಏನು ಕೊಟ್ಟರೂ ಸಿಗಲಿಕ್ಕಿಲ್ಲ !

ದೇವರೇ ಇದನ್ನು ಇಲ್ಲಿ ಕಳುಹಿಸಿರುವನು. ಎಲ್ಲರ ಗುರುತು ಇರುವಂತೆ ಹೇಗೆ ಮಿಕಿಮಿಕಿ ನೋಡುವದು ! ಎಲ್ಲ ಮಾತು ತಿಳಿಯುವಂತೆ ಹೇಗೆ ಕುಸು ಕುಸು ನಗುವದು ! ಯಾರು ಕರೆದರೂ ಅವರ ಕಡೆಗೆ ಹೋಗುವದು. ಏನು ಕೊಟ್ಟರೂ ಅದರ ಕೂಡ ಆಡುವದು. ನಾವು ಹಾಡಿದರೆ ಹಾಡುವದು. ನಾವು ಮಾಡಿದಂತೆ ಮಾಡುವದು.

ಎಲ್ಲರ ಮನೆಯಲ್ಲಿಯೂ ಇಂಥ ಒಂದೊಂದು ಪಾಪಾ ಇದ್ದರೆ ಎಲ್ಲರೂ ಕುಣಿದಾಡಬಹುದು, ಎಲ್ಲರೂ ಜಿಗಿದಾಡಬಹುದು, ಎಲ್ಲರೂ ಹಿರಿಹಿರಿ ಹಿಗ್ಗಬಹುದು. ಎಲ್ಲ ಕೆಲಸಗಳನ್ನು ಮರೆತು ಎಲ್ಲರು ಇವುಗಳ ಕೂಡ ಆಡುತ್ತ ಕೂಡಬಹುದು. ಇವುಗಳ ಕಡೆಗೆ ನೋಡುತ್ತ ಕೂಡಬಹುದು.

ದೇವರೇ ! ಯಾರಾರು ಬೇಡುವರೋ ಅವರವರಿಗೆ ಇಂಥ ಒಂದೊಂದು ಕೂಸನ್ನು ದಯಪಾಲಿಸು.

# ಸ್ವತಂತ್ರವಿಚಾರ.

—[೦]—

ಸ್ವತಂತ್ರವಿಚಾರ ಮಾಡುವದು ಸುಲಭವಲ್ಲ. ಯಾಕಂದರೆ ಸಾಮಾನ್ಯವಾಗಿ ನಮ್ಮ ಬುದ್ಧಿಯು ಅತಂತ್ರವಾಗಿಯೂ ಪರತಂತ್ರವಾಗಿಯೂ ಇರುವದು. ಬುದ್ಧಿಯು ಅತಂತ್ರವಿದ್ದಾಗ ಸುಸೂತ್ರವಾದ ವಿಚಾರವೇ ಶಕ್ಯವಿಲ್ಲ. ಸೂತ್ರವು ಹರಿದು ಹತ್ತು ದಿಕ್ಕಿಗೆ ಹರವಿಬಿದ್ದ ಮಣಿಗಣದಂತೆ, ಅಹುದೋ ಅಲ್ಲವೋ ಎಂಬ ಅರೆಮರೆಮರೆವಿನಲ್ಲಿ ನೆನೆಪಾದ ಕೆಲವು ಮಾತುಗಳು ಮನದ ಪಾಟಿಯ ಮೇಲೆ ಮಸಕು ಮಸಕಾಗಿ ಮೂಡುವವು. ನಮ್ಮ ಒಳಗಣ್ಣು ಅಷ್ಟು ಹರತವಿದ್ದರೆ ಮುಗಿಲಿನಲ್ಲಿ ತೋರುವ ಮೂವತ್ತು ಮೂರು ಕೋಟಿ ಚಿಕ್ಕೆಗಳು ಮನೆ ಮುರಕ ಒಕ್ಕಲಿಗನು ತೂರಿದ ಬೀಜಗಳಂತೆ ತೋರುವ ಹಾಗೆ ಅಂಥ ಕಾಲಕ್ಕೇ ಅನೇಕ ವಿಚಾರಗಳು ತಲೆದೋರಿದರೂ ನಮ್ಮ ತಲೆಯಲ್ಲಿ ಅವುಗಳನ್ನು ಪೋಣಿಸಲು ಎಳೆಯೇ ಸಿಗುವದಿಲ್ಲ. ನಾವು ಮೂಢರಂತೆ ಅಥವಾ ಮುಗ್ಧರಂತೆ ಅಥವಾ ಮೂರ್ಖರಂತೆ ಆ ಮಿಟಿಮಿಟಿ ಸ್ವರ್ಗದ ಕಡೆಗೆ ಮಿಕಿ ಮಿಕಿ ನೋಡುತ್ತ ಕುಳಿತುಬಿಡುತ್ತೇವೆ.

ಇನ್ನು ಬುದ್ಧಿಯು ಪರತಂತ್ರವಿದ್ದಕಾಲಕ್ಕಂತೂ ಆ ಸ್ಥಿತಿಯು ಅದಕ್ಕೂ ವಿಚಿತ್ರವು. ಮುಕ್ತದ್ವಾರವಿದ್ದ ಪ್ರಸ್ಥದೂಟಕ್ಕೆ ಬರುವ ಅತಿಥಿಅಭ್ಯಾಗತರ ತಂಡದಂತೆ ವಿಚಾರಗಳು ಜಂಗುಳಿಯಾಗಿ ಬಂದರೂ ನಮ್ಮವೆಂದು ಅಂತಃಕರಣದಿಂದ ಅನ್ನಲು ಬರುವ

ವಿಚಾರಗಳು ಆ ಕಾಲಕ್ಕೆ ಬರುವದಪರೂಪ. ಬುದ್ಧಿಯು ಸಂಶಯದ ಬಲೆಯಲ್ಲಿ ಬಿದ್ದು ಒದ್ದಾಡುವದು ಅಥವಾ ನೆನೆಪಿನ ಅಡವಿಯಲ್ಲಿ ಹೊಕ್ಕು ಅಲೆದಾಡುವದು. ಡಂಗುರದಂತೆ ಸಾರಿ ಸಾರಿ ಹೇಳಲು ಯೋಗ್ಯವಾದ ವಿಚಾರಗಳು ಆ ಕಾಲಕ್ಕೆ ಹೊಳೆಯುವದಿಲ್ಲ. ನಮ್ಮ ವಿಚಾರ ಪ್ರಾಂತವು ವಸ್ತು ಸಂಗ್ರಹಾಲಯದಂತೆ ಅಗಲವಾಗುವದೇ ಹೊರ್ತು ಪ್ರಾಣಿಯಂತೆ ಬೆಳೆಯುವದಿಲ್ಲ. ಅಂಥ ಕಾಲಕ್ಕೆ ಬರೆದ ಲೇಖನವು ಅಥವಾ ಆಡಿದ ಮಾತು ರತ್ನನಿಧಿಯಾಧ ರತ್ನಾಕರನಂತಿರದೆ ಚಿನಿವಾರನ ಬೊಕ್ಕಸದಂತಿರುವದು.

ಅತಂತ್ರತೆಯು ಅಂಧಂತಮನಸ್ಸಿನಿಂದ ತುಂಬಿದ ಅಸೂರ್ಯಲೋಕ; ಪರತಂತ್ರತೆಯು ದುಃಖಮಯವಾದ ಯಮರಾಜ್ಯ. ಸ್ವಾಭಾವಿಕವಾದ ಸ್ಥಿತಿಯು ಹೀಗಿರುವಾಗ ಸ್ವತಂತ್ರತೆಯ ಸ್ವರ್ಗದಲ್ಲಿ ವಿಹರಿಸುವದು ಸಸಾರವಿಲ್ಲ. ಬಹುತರವಾಗಿ ನಮ್ಮ ಮನಸ್ಸು ನೀರಿನಂತಿದ್ದು ಕಂಡ ವಸ್ತುಗಳು ಅಡಗಿದ ಕೂಡಲೇ ತನ್ನಲ್ಲಿ ಮೂಡಿದ್ದ ಅದರ ನೆರಳನ್ನೂ ಮುಳುಗಿಸುವದು. ಮೂಡಿದ ಮುಳುಗಿದ ಗುರುತು ಅದರ ಮೇಲೆ ಉಳಿಯುವದಿಲ್ಲ. ಹೆಚ್ಚಾದರೆ ನಮ್ಮ ಮನಸ್ಸು ಛಾಯಾ ಯಂತ್ರದಂತಿದ್ದು ಕಂಡ ವಸ್ತುಗಳು ಕಾಣದಾದ ಮೇಲೂ ಒಮ್ಮೆ ಕಂಡ ಬಹಿರಂಗಾಕಾರವನ್ನು ನಾವು ಕಾಣಬೇಕೆಂದಾಗ ತೋರಿಸುವದು. ಇದೇ ಅತಂತ್ರತೆ ಪರತಂತ್ರತೆ. ನಮ್ಮ ಸ್ವತಂತ್ರಬುದ್ಧಿಯು ಒಬ್ಬ ಶಿಲ್ಪಿಗನಂತಿದೆ. ನಮ್ಮ ಭಾವದಂತೆ ಜಗತ್ತಿನಲ್ಲಿ ಜೀವ ತುಂಬಿಸುವದೊಂದು ಕಾರ್ಯ; ಜಗತ್ತಿನಲ್ಲಿ ಜಂಗಮನಂತಿದ್ದ ಜೀವವನ್ನು ನಮ್ಮ ಭಾವದ ನಿಟ್ಟದುರಿನಲ್ಲಿ ಬೊಂಬೆ ಮಾಡಿ ನಿಲ್ಲಿಸುವದೊಂದು ಕಾರ್ಯ; ಈ ಜೀವಭಾವದ ದಾಂಪತ್ಯದ ಅಪತ್ಯಗಳೇ ಈ ವಿಶ್ವ ರೂಪಗಳೆಂದು ತೋರಿಸುವದೊಂದು ಕಾರ್ಯ. ಈ ಕಾರ್ಯತ್ರಯದಲ್ಲಿ ಲೀಲೆ ಗೈಯ್ಯುತ್ತಿರುವ ಬುದ್ಧಿಯು ಆನಂದಮಯ ಪ್ರಭುವಿನ ನಾಭಿ ಕಮಲದಲ್ಲಿಯ ಸರಸ್ವತೀ ಸಮೇತವಾದ ಬ್ರಹ್ಮ ಶಕ್ತಿಯಹುದು. ಸ್ವ–ತಂತ್ರದಲ್ಲಿದ್ದ ಬುದ್ಧಿಯೇ ಸ್ವತಂತ್ರ ಬುದ್ಧಿಯು. ಇದನ್ನುಳಿದು ಬೇರೆ ಸ್ವತಂತ್ರತೆಯಿಲ್ಲ.

ಪರೋಪಜೀವನವೇ ಜೀವನಕ್ಕೆ ಮುಳುವು. ಭುವನವನ್ನೇ ತುತ್ತುತುತ್ತಾಗಿ ಉಂಡು ಮುತ್ತುಮುತ್ತಾಗಿ ಉಗುಳಿದ ವ್ಯಾಸ ವಾಲ್ಮೀಕಿಗಳು ಸ್ವತಂತ್ರಬುದ್ಧಿಯ ಅವತಾರಗಳು. ಆದರೆ ಭುವನವು ತಾಯಿಯ ಮೊಲೆಯಂತಿದೆ. ಅದನ್ನು ಉಚ್ಛಿಷ್ಟವಾಗಿ ಮಾಡುವ ಕೂಸು ಇನ್ನೂ ಹುಟ್ಟಿಲ್ಲ ಮುಂದೂ ಹುಟ್ಟಲಾರದು. "ವ್ಯಾಸೋಚ್ಛಿಷ್ಟಂ ಜಗತ್ಸರ್ವಂ" ಎಂಬದು ಅತ್ಯಾದರದಿಂದಾಡಿದ ಮಾತು. ಹೋಮರ, ಡಾಂಟೇ, ಶೆಕ್ಸಪಿಯರ ಮೊದಲಾದ ಭುವನೋಪ ಜೀವಿಗಳು ಈಶಾವಾಸ್ಯವಾದ ಜಗತಿಯ ಅಮೃತ ಕುಂಭವನ್ನು ಕುಡಿದೇ ಅಮೃತ ಪುತ್ರರಾದರು ; ಅಮೃತ ಪುತ್ರರಿದ್ದದರಿಂದೆ ಅಮೃತ ಕುಂಬವನ್ನು ಕುಡಿದರು. ನಮ್ಮ ವಚನಕಾರರೂ, ನಮ್ಮ ದಾಸವರ್ಯರೂ, ನಮ್ಮ ನಮ. ಮಹಾಕವಿಗಳೂ, ಅಮೃತಾಶನರಾಗ ಹವಣಿಸಿದ ದೇವತಾಂಶರೇ.

ಸ್ವತಂತ್ರ ವಿಚಾರದ ನೆಲಗಟ್ಟೆಂದರೆ ಸನಾತನಧರ್ಮದಲ್ಲಿ ವಿಶ್ವಾಸ. "ವಿಶ್ವಂ ಧರ್ಮೆ ಪ್ರತಿಷ್ಠಿತಂ" ಎಂಬುದೇ ಅದರ ಬಿರುದು. ಸ್ವತಂತ್ರತೆಯು ಧರ್ಮದ ಪರ್ಯಾಯ ನಾಮವು. ಪರಧರ್ಮವೆಂದರೇ ಭಯಾವಹವಾದ ಪರತಂತ್ರತೆ; ಅಧರ್ಮವೆಂದರೇ ಕಲಿಕಾಲವಾದ ಅತಂತ್ರತೆ. ಸ್ವತಂತ್ರತೆಯೇ ಧಾರಣಾಶಕ್ತಿಯು. ಏಕದೇಶದಲ್ಲಿ ಚಿತ್ತವನ್ನು ನಿಲ್ಲಿಸುವದೇ ಧಾರಣೆಯು. ಧಾರಣೆಯಿಲ್ಲದೆ ಯಾವ ವ್ಯಾಪಾರವೂ ನಡೆಯುವದಿಲ್ಲೆಂಬದು ನಮ್ಮ ವ್ಯವಹಾರದ ಅನುಭವವಿದೆ. ಈ ಧಾರಣೆಯ ವಿಚಾರ ಸಾಮ್ರಾಜ್ಯದಲ್ಲಿ ನೆಲೆಗೊಳ್ಳುವದೇ ಸಮಾಧಿಯು-ಸಮವಾದ ಬುದ್ಧಿಯು-ಯೋಗವು. ಈ ಏಕಾಗ್ರತೆಯು ದುರ್ಲಭವಾಗುವದರಿಂದಲೇ ಸ್ವತಂತ್ರ ವಿಚಾರದ ಬರವೂ ಅರಬೂ ಬೀಳುವದು. ಒಂದರಂತೆ ಒಂದಿಲ್ಲವಲ್ಲ ಎಂಬ ಒಂದೇ ಮಾತೇ ಮತ್ತೆಮತ್ತೆ ಕಂಡು ಮುಂದುಗಾಣದಾದ ಮಂದಮತಿಗೆ ಸ್ವತಂತ್ರ ವಿಚಾರವೆಂಬದು ಭ್ರಾಂತಿಯೆಂದನಿಸುವದು ಸಹಜವಾಗಿದೆ. ಆದರೆ ಈ ಬುದ್ಧಿಯೋಗವು ಈ ಸಮಾಧಿಯು ಈ ಏಕಾಗ್ರತೆಯು ವಸ್ತುಜಾತಗಳ ಅನೇಕತೆಗೆ ವಿರೋಧಿಯಿಲ್ಲ; ಇಷ್ಟೇ ಅಲ್ಲ—ಈ ಏಕಾಗ್ರತೆಯು ಧರ್ಮದ ಅನುರೋಧದಿಂದಲೇ ಅನೇಕವು ಲೀಲೆಗೈಯುತ್ತಿದೆ. ವರ್ತುಲದ ಕೇಂದ್ರದಲ್ಲಿ ಸೂಕ್ಷ್ಮಾಗ್ರದ ಸೂಜಿಯನ್ನಿಟ್ಟು ಇಡೀ ವರ್ತುಲವನ್ನೇ ನಾವು ತೂಗಿಹಿಡಿಯಬಹುದಷ್ಟೆ ! ಅಂಥ ಆ ಕೇಂದ್ರವೇ ಸ್ವತಂತ್ರ ವಿಚಾರಸಾಮ್ರಾಜ್ಯದಸಿಂಹಾಸನ; ಧರ್ಮದ ಗುರುಪೀಠ. ಅಲ್ಲಿ ವಿರಾಜಿಸುವ ಬುದ್ಧಿಗೇ ಸ್ವತಂತ್ರ ವಿಚಾರದ ಸಾಮ್ರಾಟನೆನ್ನಬಹುದು; ಜಗದ್ಗುರುವೆನ್ನಬಹುದು. ಆ ಧರ್ಮಸಾಮ್ರಾಜ್ಯದಲ್ಲಿಯೇ ಸಿದ್ಧಾಂತಗಳ ನೆಲೆವೀಡು; ಈ ಜಗತ್ತೆಲ್ಲ ದೃಷ್ಟಾಂತಗಳನಾಡು. ಕಣ್ಣುಮುಚ್ಚಿ ಸಿದ್ಧಾಂತಗಳನ್ನು ಮಾಡಬೇಕು; ಕಣ್ಣುತೆರೆದು ದೃಷ್ಟಾಂತಗಳನ್ನು ನೋಡಬೇಕು. ಸಿದ್ಧಾಂತಗಳ ಅರಸನೇ ದೃಷ್ಟಾಂತಗಳನ್ನಾಳುವನು.

ಸ್ವತಂತ್ರವಿಚಾರದ ಇನ್ನೊಂದು ಶ್ರದ್ಧೆಯೆಂದರೆ:—ತಾನು ಕೇಳಿದ ಪ್ರಶ್ನೆಗಳಿಗೆಲ್ಲ ಸಮಾಧಾನಕರವಾದ ಉತ್ತರವನ್ನು ಕೊಡಬಲ್ಲಶಕ್ತಿಯು. ಅಂತರ್ಯಾಮದಲ್ಲಿರುವದೆಂಬುದು ಮತ್ತು ತಾನು ಹೇಳಿದ ಮಾತನ್ನು ತಿಳಿದುಕೊಳ್ಳಬಲ್ಲಶಕ್ತಿಯು ಬಹಿರಂಗದಲ್ಲಿಯೂ ಇರುವದೆಂಬುದು ತನ್ನ ಬುದ್ಧಿಯು ಮತ್ತು ಅಂತರಂಗ ಬಹಿರಂಗಶಕ್ತಿಗಳು ಇವು ಮೂರು ಸಹೋದರಗಳಾಗಿವೆ ಎಂಬದೇ ಆ ಶ್ರದ್ಧೆ. ಆದಕಾರಣವೇ ಸ್ವತಂತ್ರ ವಿಚಾರಗಳು ಕಿವಿಮಾತುಗಳಂತೆ ಮೊದಲು ಕೆಲವರಿಗೇ ತಿಳಿದು ಬರಬರುತ್ತ ಜಯಭೇರಿಯಂತೆ ದಿಙ್ಮಂಡಲವನ್ನೂ ವ್ಯಾಪಿಸುವವು.

ನಿಃಸಂಶಯವೃತ್ತಿಯು ಸ್ವತಂತ್ರವಿಚಾರದ ಕುರುಹಾಗಿದೆ. ಸಂಶಯವೃತ್ತಿಯೇ ಧರ್ಮಗ್ಲಾನಿಯ ಕಾರಣವಾಗಿದೆ. ಕಾಲಕಾಲಕ್ಕುಂಟಾಗುವ ಧರ್ಮಗ್ಲಾನಿಯನ್ನು ಹೋಗಲಾಡಿಸಿ ಧರ್ಮದ ನಿಶ್ಚಲಸ್ವರೂಪವನ್ನು ಜಗತ್ತಿಗೆ ತೋರಿಸುವದು ಸ್ವತಂತ್ರ

ವಿಚಾರಗಳ ಕಾರ್ಯವಾಗಿದೆ. ಎದೆಯಮೇಲೆ ಕೈಯಿಟ್ಟು ಹಾರದ ಹೃದಯದಿಂದ, "ಇದು ಸತ್ಯ"ವೆಂದು ಸಾರಿಹೇಳುವ ವೀರವಿಚಾರವಂತರು ಕರ್ನಾಟಕಕ್ಕೆ ಬೇಕಾಗಿರುವರು. ಅದೇಕೆ ಅವರು ಬೇಕಾಗದ ದೇಶವೇ ಇಲ್ಲ; ಅವರು ಬೇಡಾಗುವಕಾಲವೇ ಇಲ್ಲ.

ಸ್ವತಂತ್ರ ವಿಚಾರದ ಇನ್ನೊಂದು ಲಕ್ಷಣವೇನೆಂದರೆ:— ಸ್ಪರ್ಶಮಾತ್ರದಿಂದ ಅಷ್ಟೇ ತೇಜವನ್ನು ಕೊಡುವ ತೇಜಸ್ವಿದೀವಿಗೆಯಂತೆ ತನ್ಮಯನಾದ ಶ್ರೋತೃವಿನಲ್ಲಿ ಸ್ವತಂತ್ರವಿಚಾರವಂತನು ತನ್ನಂಥ ಜ್ಯೋತಿಯನ್ನೇ ಪ್ರಕಟಿಸುವನು. ರಾಮಪಾದಗಳ ಶಕ್ತಿಯು ಸ್ವತಂತ್ರ ವಿಚಾರಗಳ ಮೀಸಲ ಸೊತ್ತಾಗಿದೆ. ಸಾವಿರಾರು ವಿದ್ಯುದ್ದೀಪಗಳನ್ನು ಒಮ್ಮಿಗಿಲೆ ಹೊತ್ತಿಸುವ ಕೀಲವಂತೆ ಸ್ವತಂತ್ರ ವಿಚಾರವಂತನು ಬುದ್ಧಿಗೆ ಮುಸುಕಿದ ಅಮಾಸಿಯನ್ನು ತನ್ನ ಬುದ್ಧಿಮಂತ್ರದಿಂದ ಹುಣ್ಣಿವೆಯಾಗಿ ಮಾಡುವನು. ಇಂಥ ವಿಚಾರವಂತರಾಗುವದೇ ಗೆಳೆಯರ ಗುಂಪಿನದೊಂದು ಧ್ಯೇಯ. ಈ ಕ್ರಾಂತಿಯೇ ದಿವ್ಯಸಂಕ್ರಾಂತಿ.

—ದತ್ತಾತ್ರೇಯ.

---

# ಪ್ರಜ್ಞೆಯೂ, ಪ್ರಾರಬ್ಧವೂ.

( ಜ್ಞಾನಯೋಗಿಗಳಾದ ಮೋರಿಸ್ ಮೇಟರಲಿಂಕರ ವಿಚಾರದನುವಾದ )

೧. ಜಗತ್ತಿನಲ್ಲಿ ವೈಷಮ್ಯವೂ, ನೈರ್ಘೃಣ್ಯವೂ ತುಂಬ ತುಂಬಿರಲಾಗಿ, ಸಮತೆಯನ್ನೂ, ಘೃಣತೆಯನ್ನೂ ಹುಡುಕುವವನು ಹುಚ್ಚನಾಗಿ ತೋರಬಹುದು. ಈ ಆಕಾಶ ಕುಸುಮವನ್ನು ಆಯ್ದು ತರುವ ವಿಫಲ ಪ್ರಯತ್ನದಲ್ಲಿ ತಲೆ ಕೆಡಿಸಿಕೊಳ್ಳದೇ, ಜನರ ವಿವಿಧ ವ್ಯಾಧಿಗಳನ್ನೂ, ದಾರಿದ್ರ್ಯವನ್ನೂ ಕಳೆಯಲು—ಕಡಿಮೆ ಮಾಡಲು ದಣಿಯೆ ದುಡಿಯುವವನು ಭೂತದಯೆಯ ವಿಭೂತಿಯಾಗಿ ತೋರದಿರನು. ಆದಾಗ್ಯೂ ವ್ಯಾಧಿಗಳಿಗಿಂತ ಬಲವತ್ತರವಾದ ಆಧಿಗಳನ್ನೂ, ದಾರಿದ್ರ್ಯಕ್ಕಿಂತಲೂ ಬಲವತ್ತರವಾದ ಕಾರ್ಪಣ್ಯವನ್ನೂ ಕಳೆಯಲು—ಕಡಿಮೆ ಮಾಡಲು ಮನನ ನಿದಿಧ್ಯಾಸದಿಂದ ಉಪಾಯಗಳನ್ನು ಹುಡುಕಲು ಹವಣಿಸುವ ಧ್ಯಾನಯೋಗಿಗಳೂ, ಜ್ಞಾನಯೋಗಿಗಳೂ, ತಾತ್ಕಾಲಿಕವಾದ ಸಾಮಾಜಿಕ, ರಾಷ್ಟ್ರೀಯ, ಕೌಟುಂಬಿಕ, ಕರ್ತವ್ಯಗಳನ್ನು ಕಡೆಗಣ್ಣಿನಿಂದ ನೋಡಿದರೂ—ಹಾಗೆ ಕಂಡರೂ—ಅವರು ತ್ರಿವಿಧ ತಾಪಗಳ ಮೌಲಿಕ ದೋಷವನ್ನು ನಿರ್ಮೂಲ ಮಾಡಲು ಮೂಲಿಕೆಯನ್ನು ತರುವ ಧನ್ವಂತರಿಗಳಾಗಿದ್ದಾರೆ. ಅವರ ಸೇವಾವಿಧಿಯು ಭಿನ್ನ, ಇಷ್ಟೇ !

೨. "Between sorrow and joy the difference is but as between gladsome enlightened acceptance of life and hostile gloomy submission."

ತ್ರಿದೋಷದ ಕೀರ್ತನ ಮಾಡುವ ವೈದ್ಯರು, ಆರೋಗ್ಯದ ಅಮೃತದ ಕಲಶದ ಕೀರ್ತಿಯನ್ನೂ ಹೇಳುವರು; ತ್ರಿಗುಣದ ಕೀರ್ತನ ಮಾಡುವ ಶೀಲವಂತರು ನಿಸ್ತ್ರಿಗುಣ ಭಕ್ತಿಯ ಕೀರ್ತಿಯನ್ನೂ ಹೇಳುವರು; ತ್ರಿತಾಪದ ಕೀರ್ತನ ಮಾಡುವ ಆತ್ಮವಾದಿಗಳು ಸಚ್ಚಿದಾನಂದ ಮುಕ್ತಿಯ ಕೀರ್ತನವನ್ನು ಮಾಡುವರು. ಸರ್ವ ದರ್ಶನಕಾರರೂ, ವೈಷಮ್ಯ ನೈರ್ಘೃಣ್ಯಗಳ ಬೆಲೆಕಟ್ಟಿ ನಿತ್ಯ ಸತ್ಯ ಧರ್ಮದ ನೆಲೆ ಗೊತ್ತು ಪಡಿಸಲು ಹವಣಿಸಿರುವರು. ವ್ಯಾಧಿಯಂಥ ದುಃಖವಿಲ್ಲವೆಂದು ಕೆಲವರಿಗನಿಸಿದರೂ, ದುಃಖದಂಥ ವ್ಯಾಧಿಯಿಲ್ಲೆಂಬದು ತೀರ ನಿಜ. ಈ ದುಃಖದ ಕೆಚ್ಚಲದೊಳಗಿಂದ ಹಿಗ್ಗಿನ ಹಾಲು ಹಿಂಡಿಕೊಳ್ಳುವ ಹದವನ್ನು ಹೇಳುವ ಹಾಲಯ್ಯನು ಯಾವ ಕಾಲಕ್ಕೂ ಬೇಕು. ಪಾಲಿಗೆ ಬಂದದ್ದೇ ಭಾಗ್ಯದ ಹಾಲೆಂದು ಕುಡಿದು ತೇಗುವ ಅನಿರ್ವೇದ ಯೋಗಿಗಳು ಸುಖಿಗಳಾಗಬಲ್ಲರು; ದೈವದ ಕೂಡ ಜಾತಿ ವೈರಿಗಳಾಗಿ ಸೋತು ಸೆರೆಯಾಳಾಗುವವರು ದುಃಖಭಾಗಿಗಳು. ಸರ್ವರಿಗೂ ಸದೈವ ಸುಖದಲ್ಲಿಡುವ ಸತ್ಯ ಯುಗವು ಬರದಿದ್ದರೂ ಬರಲಿಕ್ಕಿಲ್ಲ ಆದರೂ ಆ ಶ್ರದ್ಧೆಯಿಂದಿರುವ ನಿತ್ಯ ತೃಪ್ತರು ಆ ಯುಗದ ಹಾದಿಯಾಗಿದ್ದಾರೆ. ಸತ್ಯ ಜೀವನವು ಕಲಿಯುಗದ ಕೆಚ್ಚಿನಲ್ಲಿಯೂ ಸಾಗಬಹುದೆಂದು ಶರಣರು–ದಾಸರು ತೋರಿಸಿರುವರು. ಆ ಪ್ರಮಾಣ ಸಾಕು.

೩. We should live as though we were always on the eve of the great revelation; and we should be ready with welcome with warmest and keenest and fullest, most heartfeit and intimate welcome."

ಎಷ್ಟೋ ದುಃಖವಾದಿಗಳು, ಕಲಿಯುಗದ ಪ್ರಳಯವಾದ ಮೇಲೆ ಸುಖದ ಮಾತನ್ನೆತ್ತಬೇಕೆಂದು ನರಳಿ ನಿಟ್ಟುಸುರಿಟ್ಟು ಹೇಳುವರು. ಅದೇಕೆ ? ಇಂದಿನಿಂದಿದ್ದರೆ ತಪ್ಪೇನು ? ಇದು ಪಾಪದ ತವರು ಮನೆಯಂತೆ; ಇಂಥವರಿಗೆ ಕಲದೆರಿಕೆಯಾದದ್ದೇ ಒಂದು ಸಮಾಧಾನ. ವ್ಯವಹಾರದಲ್ಲಾಗುವ ಸದ್ಗುಣಿಗಳ ಪರಾಜಯವನ್ನು ಕಂಡು, ಇವರಿಗದೊಂದು ಹಿಗ್ಗು. ಕುಟಿಲ ನೀತಿಯಲ್ಲಿ ಕುಶಲವಾದಂತೆ ತೃಪ್ತಿ. ಛಿ ! "ಗೃಹೀತ ಇವ ಕೇಶೇಷು ಮೃತ್ಯುನಾಧರ್ಮಮಾಚರೇತ್" ಎಂಬವನ ವಿಚಾರದ ತಿರುಳು ತಿಳಿಯಾಗಿದ್ದರೂ ಭಾವೋದ್ರೇಕವು ತುಸು ಕಲಕಾಗಿದೆ. ಅದಕ್ಕಿಂತ ನಾವು ಹೀಗನ್ನಬೇಕು:— "ಮುಂದಿನ ಗಳಿಗೆಗೇ ಸತ್ಯ ಯುಗವು ಬಂದೀತೆಂಬ ರಸೋದ್ರೇಕದಿಂದ, ಹರ್ಷ ನಿರ್ಭರತೆಯಿಂದ, ಧಾಳಾಧೂಳಿಯಿಂದ ಈಗಿನ ಗಳಿಗೆಯಿಂದಲೇ, ಸಂಕಟದ ಕೂಟದಲ್ಲಿ ಸುಖಸಾಗರದ ಶಾಯಿಗಳಾಗಿರಬೇಕು". ನಾವು ಬಯಸಿದಂತೆ ಆ ದಿನವು ಬರದಿದ್ದರೂ

ನಾವು ಬೇಡಿದ ರೂಪದಲ್ಲಿ ಬರದಿದ್ದರೂ—ಅದು ಬಂದ ಮೇಲೆ ನಾವು ಬಯಸಿದ್ದೂ ಅದೇ ಎಂದು ಎಲ್ಲರೂ ಒಪ್ಪಿಕೊಳ್ಳಬಹುದು.

೪. "In what comes to pass will be happiness."

"ಆಗುವದೆಲ್ಲ ನಮ್ಮ ಒಳಿತಿಗಾಗಿ" ಎಂದು ನನ್ನ ಶ್ರದ್ಧೆ; ಅವಿರತವಾಗಿ ಕೂಗುತ್ತಿದೆ. ಹೇಗೆ ಎಂಬದು ನನಗೆ ಹೇಳಲಿಕ್ಕೆ ಬರಲಿಕ್ಕಿಲ್ಲ. ಜಗತ್ತಿನಲ್ಲಿ ಈಗ ನಡೆದಿರುವ ಅನ್ಯಾಯದ ಕೃತ್ಯಗಳಿಂದ ನಮ್ಮ ಒಳಿತೇನಾದೀತೆಂಬದು ನಾನು ತಿಳಿಯಾಗಿ ತಿಳಿಸಿ ಹೇಳಲಾರೆ. ಆದರೂ 'ಆಗುವದೆಲ್ಲ ನಮ್ಮ ಒಳಿತಿಗಾಗಿ' ಎಂಬ ನನ್ನ ಶ್ರದ್ಧೆಯು ಅಚ್ಯುತವಾಗಿ ಅಚಲವಾಗಿದೆ. ನಾನು ನ್ಯಾಯಾನ್ಯಾಯದಲ್ಲಿ ತಾರತಮ್ಯವನ್ನು ಮಾಡುವದಿಲ್ಲವೆಂತಲ್ಲ; ನಾನು ಅನ್ಯಾಯಕ್ಕೇ ಅನ್ಯಾಯವೆನ್ನುವದಿಲ್ಲ. ಆದರೆ ಅದು ನಮ್ಮ ಒಳಿತಿಗಾಗಿ ಅವಶ್ಯವಾಗಿರಲಿಕ್ಕೆ ಬೇಕು. ಎಂದು ನಾನು ಅನ್ನುತ್ತೇನೆ. ಯಾಕಂದರೆ ದೇವರ ಸೃಷ್ಟಿಯಲ್ಲಿ ಅನವಶ್ಯಕವಿದ್ದದ್ದು ಎಂದೂ ಸಂಭವಿಸದು. ಆದಕಾರಣ ನಮ್ಮ ಸುತ್ತು ಮುಕುರುವಂಥ ಸಂಪತ್ತಿವಿಪತ್ತಿಗಳಲ್ಲಿ ವಿಶ್ವದ ಒಳಿತಿನ ಬೀಜವನ್ನೇ ಹುಡುಕುತ್ತಿರಬೇಕು. ಅದು ಅಲ್ಲಿ ಇರಲಿಕ್ಕೇಬೇಕು. ಇಂದು ಕಾಣಲಿಕ್ಕಿಲ್ಲ; ಮುಂದೆ ಕಂಡೀತು. ದುಃಖದ ತೊಟ್ಟಿಲದಲ್ಲಿ ಕುಳಿತು ನಾವು— "ಸರ್ವೇಸಂತು ಸುಖಿನಃ ಸರ್ವೇಸಂತು ನಿರಾಮಯಾಃ" ಎಂದು ತೊದಲಾಡಬೇಕು. ದ್ವೇಷಾಸೂಯಗಳ ಮಧ್ಯದಲ್ಲಿ ನಿಂತು "ಸಹನಾವವತು" ಎಂಬ ಶಾಂತಿಪಾಠವನ್ನೇ ಹಾಡಬೇಕು. "ಇಂದಿದ್ದದ್ದೇ ಆನಂದ ಶಿಖರವಲ್ಲ". ಆದರೆ, ಬಂದ—ಬರುವ—ಆಪತ್ತಿಗಳೆಲ್ಲ ಅಪರಿಹಾರ್ಯವಾಗಿ ಮೆಟ್ಟಬೇಕಾದ ಮೆಟ್ಟಲುಗಳು. ಎಂಬುದೇ ನನ್ನ ಅನ್ನೋಣ.

---

# ಮಹಾತ್ಮರ ಬಗ್ಗೆ ಗೆಳೆಯರ ವಿಚಾರಗಳು

## ಮಹಾತ್ಮನಾದದ್ದು ಹೇಗೆ?

ಬೀಜವಿರದೆ ಬೆಳೆಬರಲಾರದೆಂಬದನ್ನು ಎಲ್ಲರೂ ಬಲ್ಲರು. ಬೀಜವಿದ್ದರೂ, ಬೆಳೆಯದ ಭೂಮಿಯಲ್ಲಿ ಬಿದ್ದರೆ ಬೆಳೆಬರಲಾರದು. ಬೆಳೆಯುವ ಭೂಮಿಯಲ್ಲಿ ಬಿದ್ದರೂ ಬೀಜಕ್ಕೆ ಬಲಗೊಡುವ ಗೊಬ್ಬರವು ಬೇಕು. ಆ ಗೊಬ್ಬರವೇ ಇವನ ಕಾರ್ಯ; ಒಳಗಿನದೊಂದು ಬೆಳಕೇ ಬೀಜ.

ಚಕಮುಕಿಯಲ್ಲಿ ಬೆಳಕಿರುವದೆಂದು ಎಲ್ಲರೂ ಬಲ್ಲರು. ಇದ್ದ ಬೆಳಕು, ಚಕಮುಕಿಯನ್ನು ಕುಕ್ಕದ ಹೊರತು, ಹೊರಬೀಳದು, ಬೆಳಕಿನಿಂದ ಬೆಳಗಬೇಕಾದರೆ, ಚಕಮು

ಕಿಯು, ತನ್ನ ದೇಹವನ್ನು ಸವಿಸಿಕೊಳ್ಳಬೇಕು. ಈ ತಿಕ್ಕಾಟವೇ ಇವನು ಪಟ್ಟ ಶ್ರಮ; ಚಕಮುಕಿಯೇ ಇವನೊಳಗೆ ಬಚ್ಚಿಟ್ಟ ಬೆಳಕು.

ಇವನು, ಮಹಾತ್ಮನಿರುವನೇ ಹೊರ್ತು, ಮಹಾತ್ಮನಾಗಿರುವದಿಲ್ಲ. ಮಹಾತ್ಮತೆಯು, ಪಡೆಯತಕ್ಕದ್ದೊಂದು ಗಳಿಸಲು ಬಾರದು. ಹಿಂದಿನ ಹುಟ್ಟಿನಲ್ಲಿಯ ಸೈಪೇ ಮುಂದಿನ ಹುಟ್ಟಿನಲ್ಲಿ ರೂಪುಗೊಳ್ಳುವದು. ಹೋದ ಹುಟ್ಟಿನಲ್ಲಿ ಧ್ಯಾನಿಸಿದ ನಿಜವನ್ನು ನಡೆವಳಿಕೆಯಲ್ಲಿ ತಂದುತೋರಿಸಲು, ಹುಟ್ಟಿದ ಒಬ್ಬ ಸಿದ್ಧನೆಂದೇ ನನ್ನ ಭಾವನೆ.

ಮೋಹನನು ಮಹಾತ್ಮನಾಗಿರದೆ ಪರೋಪಕಾರಿಯೆಂದು ನಾನುತಿಳಿಯುವೆನು. ಜಗದಲ್ಲಿ ತನಗಾಗಿ ಕಂಡುಕೊಳ್ಳುವದೇನೂ ಮೋಹನನಿಗಿಲ್ಲ. ತನಗೆ ತಿಳಿದದ್ದನ್ನು ತಿಳಿಸಿ ಹೇಳಿ. ತನ್ನೊಡನೆ ಜಗವನ್ನೆತ್ತಲು ಹವಣಿಸುವ ಸಾಹಸಿಯು. ತನ್ನತನವನ್ನು ತೊರೆದು, ಪರರಿಗಾಗಿ ಪ್ರಯತ್ನಪಡುವ ಪರೋಪಕಾರಿತ್ವವೇ ಇವನಲ್ಲಿ, ನನಗೆ ಕಂಡು ಬಂದಿರುವದು.

ನಾನು ಹತ್ತದೆ ನನ್ನನ್ನಿವನು, ಎತ್ತನೆಂದು ನನಗನಿಸುತ್ತದೆ. ಅದಕ್ಕಾಗಿ ನನ್ನ ಆಚರಣೆಗೆ ಆದರ್ಶಕನೆಂದೂ, ಆದೇಶಕನೆಂದೂ, ನಾನು ತಿಳಿದಿರುವೆನು.

—'ಶೇಷ'.

## ಮಹಾತ್ಮರ ಅಡಿಯಲ್ಲಿ

(೧) ನಾನು ಮಹಾತ್ಮರ ವಿಷಯವಾದ ನನ್ನ ವಿಚಾರಗಳನ್ನು, ವೈಯಕ್ತಿಕ ದೃಷ್ಟಿ ಕೋನದಿಂದಲ್ಲದೆ, ಒಂದು ಬಗೆಯ ವಿಶಾಲದೃಷ್ಟಿಕೋನದಿಂದಲೂ ಹೇಳಲಿಚ್ಛಿಸುವೆನು. ಆದರೆ ಅವೆರಡೂ ಕೋನಗಳು ಪರಸ್ಪರ ಪೂರಕಗಳೇ ಆಗಿರುವವು ಎಂದರೆ ನನ್ನ ಭಾವಲೋಕದ ಮೇಲಿರುವ ಅವರ ಸಾರ್ವಭೌಮ ಪ್ರಭುತ್ವವನ್ನು, ಬುದ್ಧಿಯ ಕಣ್ಣಿಂದಲೂ ತಿಳಿಯಾಗಿ ಕಾಣಬೇಕೆಂದೂ, ಕಾಣಿಸಬೇಕೆಂದೂ, ನನ್ನ ಕಾಂಕ್ಷೆ. ಇದು ನನ್ನೆದೆಯ ಕನ್ನಡಿಯಲ್ಲಿ ಮೂಡಿದ ಮಹಾತ್ಮರ ಪವಿತ್ರ ಚಾರಿತ್ರ್ಯದ ಪ್ರತಿಬಿಂಬದ ಒಂದೇ ಅಂಶದ ಅಸ್ಪಷ್ಟ-ಚಿತ್ರವೆಂಬುದು ಸ್ಪಷ್ಟವೇ.

(೨) ಇದೊಂದು ನನ್ನ ಚಿಕ್ಕಂದಿನ ನೆನಪು. ನಾನು ಕನ್ನಡ ನಾಲ್ಕನೆಯ ತರಗತಿಯಲ್ಲಿದ್ದಾಗ, ನನ್ನ ತಂದೆಯವರು ನನಗೆ (ಮರಾಠಿ ಭಾಷೆಯೊಳಗಿನ) ಮಹಾಭಾರತದ ಪುಸ್ತಕಗಳನ್ನು ಓದಲಿಕ್ಕೆ ಕೊಡುತ್ತಿದ್ದರು. ಆಗ ಅವುಗಳಲ್ಲಿ ಅತಿರಥಿಮಹಾರಥಿಗಳ ಉದ್ದಂಡ ಪರಾಕ್ರಮದ ಕಥೆಗಳನ್ನು ಓದುತ್ತಿರುವಾಗ, ನನ್ನ ತಲೆಯಲ್ಲೊಂದು ಕೂಟ ಪ್ರಶ್ನವು ಏಳುತ್ತಿತ್ತು. "ತಾತ್ಯಾ, ಇವರು ಮಾಡುವ ಇಷ್ಟು ಪ್ರಚಂಡವಾದ ಹಿಂಸೆಯು ಧರ್ಮವಿಹಿತವೇ?" ಎಂದಾಗಿನ ನನ್ನ ಪೃಚ್ಛೆ.

(೩) ಚಿಕ್ಕಂದಿನಿಂದಲೂ ನಾನು ದಯಾದುರ್ಬಲನು. ಕಿರುಕುಳವಾದ ಕ್ರಿಮಿ-

ಕೀಟಕಗಳನ್ನು ಕೊಲ್ಲುವದೂ, ನನ್ನಿಂದಾಗುತ್ತಿದ್ದಿಲ್ಲ. ಎಂದಾದರೂ ಕೊಂದರೂ, ಬುದ್ಧಿಯ ನಿರಂಕುಶ ಪ್ರಭುತ್ವಕ್ಕೆ ಹೃದಯವು ಒಳಗಾಗುತ್ತಿತ್ತು.

(೪) ನನಗೆ ಅಹಿಂಸೆಯೊಂದು ದೌರ್ಬಲ್ಯವಾಗಿದೆ. ಅದು ಒಮ್ಮೆಯಾದರೂ ನನ್ನ ಸಬಲತೆಯ ಆವಿರ್ಭಾವವಾದೀತೆಂದು ನನ್ನ ನೆಚ್ಚು. ಎಂದರೆ, ಭೀಷ್ಮ–ದ್ರೋಣಾದಿ ಗುರುಹಿರಿಯರನ್ನು ಕಂಡೊಡನೆ ದೌರ್ಬಲ್ಯದ ಆವೇಗವು ಪಾರ್ಥನ ಹೃದಯವನ್ನು ಮುಸುಕಿದಂತೆ, ಆಗಿದೆ ನನ್ನಗತಿ.

(೫) ಅಹಿಂಸಾಪರಮೋ ಧರ್ಮಃ ॥ ಎಂಬ ಮಹಾತ್ಮರ ಜೀವನ ಸೂತ್ರವು. ಉಳಿದ ಸೂತ್ರಗಳಂತೆಯೇ ಸಾಂವತ್ಸಾಗಿಯೂ, ವಿಶ್ವತೋಮುಖವಾಗಿಯೂ ಇದೆ. ಪಾಂಡಿತ್ಯದ ಪಂಜರದಲ್ಲಿ ಪಂಡಿತವಕ್ಕಿಗಳು ಪಠಿಸುವ ನೀತಿವಾಕ್ಯಗಳಲ್ಲೊಂದು ಅದಲ್ಲ. ಅಥವಾ, ದಾರಿಕಾಣದೆ ತತ್ತರಿಸುವ ಕುರುಡರಿಗೊಂದು ಕೈಗೋಲೂ ಅದಲ್ಲ.

(೬) ಸಜೀವ, ವೀರ, ವಿಭೂತಿಮತ್ತಾದ ವಿಚಾರಗಳು ಧನುರ್ಧರರ ಬತ್ತಳಿಕೆಯೊಳಗಿನ ಉಜ್ಜ್ವಲ ಬಾಣಗಳಂತೆ ವೀರವಿಚಾರನಂತರ ಆಚಾರ ಪೂರ್ವಕವಾದ ಉಚ್ಚಾರಗಳಿಂದಲೇ ತೇಜೋವಿಶಿಷ್ಟವಾಗುಳಿಯುವವು. ಅವೇ ಆಚಾರಶೂನ್ಯ ಆಚಾರ ಲಂಪಟರಾದ ನಿರ್ಜೀವ ದುರ್ಬಲರ ಕೈಯಲ್ಲಿ ಸಿಕ್ಕು, ಅವರಿಗೇ ಮುಳುವಾಗುವವು; ಇಲ್ಲವೆ, ಜನರ ಜಂಗುಳಿಯ ಸೊತ್ತಾಗಿ ಸಾಮಾನ್ಯತೆಯ ಸಂತೆಯಲ್ಲಿ ಮಾರಲಿಟ್ಟ ಒಡವೆಗಳಾಗುವವು. ಸಜೀವ ವಿಚಾರಗಳೆಂದರೆ ಪಿತ್ರಾರ್ಜಿತ ಸ್ವಾಸ್ಥ್ಯವಲ್ಲ; ಅದೊಂದು ಗಳಿಸಿದ ಬದುಕು. ಸಜೀವ ವಿಚಾರಗಳೆಂದರೆ ವಿಜಯಲಕ್ಷ್ಮಿ; ವಿಜಯಿಗಳನ್ನೇ ಅವಳು ವರಿಸುವಳು. ಸಜೀವ ವಿಚಾರಗಳು ಅಮೋಘ ಅಸ್ತ್ರಗಳಂತೆ; ಶಿವನ ವೀರ್ಯದಂತೆ. ಅಂಥ ವಿಚಾರವಂತರ ಆಚಾರಗಳೆಂದರೆ ಅವರು ಹೊಯ್ದು ತಮ್ಮ ಜೀವದ ಎರಕ.

(೭) ಅಹಿಂಸಾಪರಮೋಧರ್ಮಃ ॥ ಎಂಬುದಾದರೂ ಅಂಥ ಸಜೀವ ಮಂತ್ರಗಳಲ್ಲೊಂದು. ಅದುಹೇಗೆ? ಅಹಿಂಸೆಯು ಅಂಥದೊಂದು ಧಾರಣಸಕ್ತಿಯ ಆಧಾರವು ಅಹುದೋ, ಅಲ್ಲವೋ?

(೮) ಅಹಿಂಸೆಯೆಂದರೆ ಜೀವದಯಾಪ್ರೇರಿತವಾದ ಕರ್ಮವಲ್ಲ. ಜೀವಗಳಲ್ಲಿ ದಯೆಯನ್ನು ತೋರಿಸುವವರು ನಾವಾರು? ಕಾರುಣ್ಯವು ಜೀವದ ಧರ್ಮವು. ಕಾರುಣ್ಯವೆಂದರೆ ಕನಿಕರವಲ್ಲ. ವಜ್ರಕ್ಕಿಂತಲೂ ಕಠೋರರೂ, ಕುಸುಮದಕಿಂತಲೂ ಕೋಮಲರೂ ಆದ ವೀರರ ಜೀವಗಳ ಸ್ವಭಾವವದು. " It blesseth him that gives and him that takes " ಎಂಬ ಶೇಕ್ಸಪೀಯರನ ನುಡಿಯಂತೆ ಅದು ನೀಡುವವನನ್ನೂ, ಬೇಡುವವನನ್ನೂ ಕೂಡಿಯೇ, ಹರಸುವದು; ಏಕೆಂದರೆ ಕಾರುಣ್ಯವೊಂದು ದೇವಭಾವವು; ನಿರ್ಘೃಣತೆಯು ಅಸುರೀಸಂಪತ್ತಿಯು.

(೯) " Ahimsa is a superhuman possibility " ಎಂದು ಪಾಲರಿಶಾರ ಮಹಾನುಭಾವರು ಹೇಳಿದಂತೆ ನೆನಪಿದೆ. ಅಹಿಂಸೆಯು ದೇವ

ಜಾತಿಯ ಜೀವಗಳ ಸಾಧ್ಯಗಳಲ್ಲೊಂದು. ಮಾನವನ ಮನೋಮಯ ಕೋಶದೊಳಗಣ ಜೀವನಕ್ಕೆ ಅದು ಸಾಧ್ಯವಲ್ಲ; ಅದೊಂದು ಲಕ್ಷ್ಯವು; ಧ್ಯೇಯವು. ಮಾನವನು ದೇವನಾದಂದು ಅಹಿಂಸಾವ್ರತದ ಸಿದ್ಧಿಯು ಆಹುದು. ನಮ್ಮ ಆತ್ಮವು ಎಷ್ಟೋಮಟ್ಟಿಗೆ ಅನ್ನಗತವಿದೆ; ಬಹಳ ಮಟ್ಟಿಗೆ ಪ್ರಾಣಗತವಿದೆ; ಕೆಲಮಟ್ಟಿಗೆ ಮನೋಗತವಿದೆ. ಅದು ಪುಟ್ಟಪೂರಾ ಸ್ವ–ಸ್ವರೂಪವನ್ನು ಗುರುತಿಸಿದ ಮೇಲೆ, ಮನೋಜೀವನವನ್ನು ಮೀರಿದ ಮೇಲೆ, ಅಹಿಂಸೆಯು ಅಸಾಧ್ಯವಾದುದೇ ?

(೧೮) ವ್ರತಗಳೆಂದರೆ, 'ಶ್ರದ್ಧಾಮಯ ಪುರುಷರ, ಸ್ವದೈವದಲ್ಲಿ ನೆಚ್ಚನ್ನಿಟ್ಟ ಜೀವಗಳ, ಈಶ್ವರೀ ಆದೇಶವಲ್ಲಿ ಅಚಲನಿಷ್ಠೆಯುಳ್ಳ ವೀರಭಕ್ತರ ವೀರಶ್ರದ್ಧೆಯ ಉಜ್ಜ್ವಲ ಕರ್ಮಗಳು; ವ್ರತಗಳು 'ಊರ್ಧ್ವಮೂಲಂ; ಅಧಃಶಾಖಂ' ಆದ ಧರ್ಮ; ಪಾದಪದ ಸನಾತನ ಶಾಖೆಗಳು. ಶ್ರದ್ಧಾಮಯೋಯಂ ಪುರುಷಃ ಎಂಬುದು ಮಹಾತ್ಮರಲ್ಲಿ ಅನ್ವರ್ಥಕವಾಗಿದೆ. ವ್ರತಗಳನ್ನು ಎರಡು ಬಗೆಯಿಂದ ನೋಡಬಹುದು; ಒಂದು ಕೆಳಗಿನಿಂದ; ಒಂದು ಮೇಲಿನಿಂದ. ವ್ರತವು ಧ್ಯೇಯಸಿದ್ಧಿಗಾಗಿ ಅವಶ್ಯವಾದ ಸಾಧನವಿರಬಹುದು; ಅಥವಾ, ಧ್ಯೇಯಸಿದ್ಧಿಯಾದ ಮೇಲೆಯೂ ಅಗತ್ಯವಾಗಿ ಅಂಗೀಕರಿಸಬೇಕಾದ ಅನುಷ್ಠಾನವಿರಬಹುದು. ಕುರಿಯುವದು ಅರಿಯುವದಕ್ಕೆ; ಅರಿಯುವದು ಕುರಿಯುವದಕ್ಕೆ. ಅರಿತಮೇಲೆಯೂ ಕುರಿಯುವದು ಉಂಟೇ ಉಂಟು. ಮಾನವನು, ಸತ್ತತ್ತ್ವನಿಧಿಧ್ಯಾಸದಿಂದ ಅತಿ ಮಾನವನಾಗಬಹುದು; ಶ್ರೀಮದೂರ್ಜಿತರಾದ ದೇವತೆಗಳೂ, ಮೃತ್ಯುಲೋಕದಲ್ಲಿ ತಪಸ್ಸನ್ನೆಸಗಲು ಬರುವರು. ತಪವು ಸಾಧನವೂ ಆಹುದು; ಸಾಧ್ಯವೂ ಆಹುದು.

(೧೯) ಹಾಗೆಯೇ ಅಹಿಂಸೆಯು ಸಾಧನವೂ ಆಹುದು; ಸಾಧ್ಯವೂ ಆಹುದು. ಸತ್ಯ, ಅಸ್ತೇಯ, ಬ್ರಹ್ಮಚರ್ಯಾದಿ ವ್ರತಗಳು ಅಸಾಧ್ಯಗಳಲ್ಲ; ಕಷ್ಟ ಸಾಧ್ಯಗಳಾಗಿರಬಹುದಾದರೂ, ಕೊನೆಗಾದರೂ ಸಾಧ್ಯಗಳೇ. ಸತ್ಯಸಂಧನಾದ ಯುಧಿಷ್ಠಿರನು, ಬ್ರಹ್ಮಚಾರಿಯಾದ ಮಾರುತಿಯು, ಇವರೇ ಮೊದಲಾದವರು, ಪುರಾಣಗಳಲ್ಲಿ ಕಲ್ಪಿಸಿ ಹೇಳಿದ ಕಥಾಪುರುಷರಲ್ಲ; ಸ್ವಪ್ನಲೋಕದಲ್ಲಿ ವಿಹರಿಸುವ ಅದ್ಭುತ ವ್ಯಕ್ತಿಗಳಲ್ಲ. 'ನುಡಿದರೆ ನನ್ನಿಯನ್ನೇ ನುಡಿದೇನು; ನೋಡಿದರೆ ಕೊಡಗೂಸಾಗಿಯೇ ನೋಡೇನು; ಬಾಳಿದರೆ, ಸರ್ವಭೂತಾತ್ಮನಾಗಿಯೇ, ಪ್ರೀತ್ಯುಪಾಸಕನಾಗಿಯೇ ಬಾಳೇನು, ಎಂಬ ಬಿರುದುಗಳು ಹುಸಿಯಾಗಿ ಹೊತ್ತಂಥವುಗಳಲ್ಲ; ಮೂಲಕ್ರಿಮಿ (Microbe) ಯಂಥ ಸೂಕ್ಷ್ಮ ಜೀವವನ್ನೂ ಹಿಂಸಿಸಲಿಕ್ಕಿಲ್ಲೆಂಬ ಪ್ರತಿಜ್ಞೆಯು, ಅಬುದ್ಧಿಗಮ್ಯವಾದುದಲ್ಲ.

೧೨. ಅಹಿಂಸೆಯ ಅರ್ಥವೇನು ? ಹಿಂಸೆಯ ಕಲ್ಪನೆಯೇ ಪಾಪದ ಬೀಜ. ಅಹಿಂಸೆಯು ಜೀವದ ಪರಮ ಧರ್ಮವು. ಮೈಯಿಂದಾದ ಹಿಂಸೆಗಿಂತ ಮನಸ್ಸಿನಿಂದಾದ ಹಿಂಸೆಯು ಸೂಕ್ಷ್ಮತರ; ಅಂತೆಯೇ ಭೀಕರತರ. ಕೃಷ್ಣನು ಅರ್ಜುನನಿಗೆ ಅಹಿಂಸೆಯನ್ನೇ ಉಪದೇಶಿಸಿದನು. ಶ್ರೀಕೃಷ್ಣ ಪ್ರಣೀತವಾದ ಕರ್ಮಯೋಗದಿಂದ

ಸಂಸ್ಕೃತ ಮನಸ್ಕನಾದ, ದೀಕ್ಷಾಯುಕ್ತನಾದ ಅರ್ಜುನನು ಅಹಿಂಸಾವ್ರತಬದ್ಧನಾಗಿಯೇ ಸಮರಪಂಡಿತನಾಗಿ ಹೋರಾಡಿದನು.

೧೩. ಅಸಕ್ತಃ ಕುರು ಕರ್ಮಾಣಿ॥ ಎಂಬುದೇ ಅಹಿಂಸಾ ಧರ್ಮದ ಮರ್ಮವು. ಅಸಕ್ತನಾದ ಮೇಲೆ ಹಿಂಸಿಸಿಯೂ ಅಹಿಂಸಾಪರನಾಗಬಹುದು. ಸಾಮಾನ್ಯತಃ ನಮ್ಮ ಅಹಿಂಸೆಯು ರಾಗಜನ್ಯವಾಗಲಿ ವಿರಾಗಜನ್ಯವಾಗಲಿ ಇರುವದು. ಸ್ವಾರ್ಥವೇ ರಾಗದ ಬೀಜ; ತಾತ್ಸಾರವೇ ವಿರಾಗದ ಬೀಜ. ನಮ್ಮವರೆಂದಾಗಲಿ, ಹೇಸಿಕೆಯಿಂದಾಗಲಿ ನಾವು ನೋಯಿಸದಿರುವದು. ನಾನು—ನೀನುಗಳನ್ನು ಈಡಾಡಿ ತಾನಾಗಿ ನೋಡುವವನೆ ಅಹಿಂಸಾ ಧರ್ಮದ ವ್ರತಿಯಾಗಲು ಅರ್ಹನು. ಸ್ವಾರ್ಥ—ತಾತ್ಸಾರಗಳ ಅವಳಿಜವಳಿ ಕೂಸುಗಳಿಗೆ ಅಹಂಕಾರವೇ ತಾಯಿ; ಅಜ್ಞಾನವೇ ತಂದೆ. ರಾಗದ ಗಂಟನೊಳಗೆ ವಿರಾಗದ ಗಂಟಿರುವದು; ವಿರಾಗದ ಗಂಟನೊಳಗೆ ಅರವಿನ ಹರಳಿರುವದು. ರಾಗದ ಗಂಟನ್ನು ಬಿಚ್ಚುವದು ಬಲು ಬಿಗಿ. ವಿರಾಗದ ಗಂಟನ್ನು ಬಿಚ್ಚುವದು ಅದಕ್ಕೂ ಬಿಗಿ, ಅದಕ್ಕೂ ಬಿಗಿ; ಅದು ಕಗ್ಗಂಟು. ಏಕೆಂದರೆ, ರಾಗಿಯು ಅಜ್ಞಾನಾಂಧನು; ವಿರಾಗಿಯು ಜ್ಞಾನಾಂಧನು. ಆ ಕಗ್ಗಂಟಿನ ಮುಂದೆ ಪೌರುಷದ ಹೆಮ್ಮೆಯು ಕೈಯ್ಯೂರುವದು. ಅಲ್ಲಿ ಬೇಕು **ಕರ್ಮ—ಕೌಶಲ, ಯೋಗ.** ಜ್ಞಾನಾಜ್ಞಾನಜನ್ಯವಾದ ಹೃದಯಕಾರ್ಪಣ್ಯ—ಧೀಮೂಢತೆಗಳನ್ನು ಅಳಿಸಬಲ್ಲ **ಹೆಂಗರುಳಿನ ಭಕ್ತಿಯೇ** ಆ ಕಗ್ಗಂಟನ್ನು ಬಿಚ್ಚಿ, ನನ್ನಿ—ಚೆನ್ನುಗಳ ಏಕಮೇವಾದ್ವಿತೀಯ ರೂಪವನ್ನು ತೋರಲಮ್ಮುವಳು......ನಮ್ಮ ಅಹಿಂಸೆಯು, ರಾಗ ವಿರಾಗಗಳಿಂದ ಅಲಿಪ್ತವಾದುದಲ್ಲ. ರಾಗ ವಿರಾಗಾಮಿಶ್ರಿತವಾದ ಅಹಿಂಸೆಯೇ ವಿಭೂತಿಗಳ ಜ್ವಲತ್ಕರ್ಮಗಳ ಜೀವರಸ. ತ್ಯಕ್ತೇನ ಭುಂಜೀಥಾಃ । ಅಸಕ್ತಃ ಕುರುಕರ್ಮಾಣಿ ॥ ಅಹಿಂಸಾ ಪರಮೋ ಧರ್ಮಃ ॥ ಇವುಗಳಲ್ಲಿ ಸಾರೂಪ್ಯವಿಲ್ಲದಿದ್ದರೂ, ಸಾಯುಜ್ಯವಿದೆ.

೧೪. ಅಹಿಂಸೆಯು ಉಪಾಸನೆ; ಪ್ರೀತಿಯು ಸಾಕ್ಷಾತ್ಕಾರ. ಅಹಿಂಸೆಯೇ ಪ್ರೀತಿಯಲ್ಲದಿದ್ದರೂ, ಅಹಿಂಸೋಪಾಸನೆಯಿಲ್ಲದೆ ಪ್ರೀತಿಸಾಕ್ಷಾತ್ಕಾರವಿಲ್ಲ.

೧೫. ಅಂತೆಯೇ ಅಹಿಂಸೆಯ ಸಂದೇಶವು ಮಾನವಜೀವನದಿಂದ ದೇವಜೀವನದ ಎಲ್ಲೆಗೆ ಅಭಿಮುಖನಾಗಿರುವ ಜೀವನದ ಸಂಕ್ರಾಂತಿಯ ಸೂಚನೆಯು.

೧೬. ಮಹಾತ್ಮರ ಅಹಿಂಸಾಸಂದೇಶವು ತಾರಕ ಮಂತ್ರಗಳಲ್ಲೊಂದೆಂದು ದೃಢವಾಗಿ ನನಗನಿಸಹತ್ತಿದೆ. ಅಂತೆಯೆ ಮಹಾತ್ಮರನ್ನು 'ಗುರುನಾಥಾ!' ಎಂದು ಜೀವವಾಗೀಗ ಕರೆಯುತ್ತಿದೆ. ಮಹಾತ್ಮರ ಪೀಯೂಷ ವಾಣಿಯು ನನ್ನ ಅಂತರಂಗವನ್ನು ತೊಳೆಯುವ ಗಂಗೆಯೆಂಬ ಭಾವನೆಯು ನನ್ನಲ್ಲೀಗ ಮನೆಮಾಡಿದೆ. ನನ್ನ ಗುರುವಿನ ಕಲ್ಪನೆಯು ನನ್ನನ್ನು ಬದ್ಧ ಮಾಡದಷ್ಟು ವಿಶಾಲವಾಗಿದೆ. ಮಹಾತ್ಮರಿಗಿಂತ, ಮಹಾತ್ಮರಲ್ಲಿ ಮಿಂಚಿ ಮಿನುಗುವ ಮಹಾತ್ಮ್ಯವೇ ನನ್ನ ಗುರುವೆಂದು ನಾನೆನ್ನಬಹುದು. ಎಂದರೆ

ಮಹಾತ್ಮರ ಜೀವರಾಜನಿಂದ ಕಪ್ಪ-ಕಾಣಿಕೆಯನ್ನು ಕೈಕೊಳ್ಳುವ ಆ ಭಾವದೇವನೇ-ಮಹಾತ್ಮರ ಹೃತ್ಪುಟದಲ್ಲಿ ಗರ್ಭಿತವಾಗಿರುವ ತೇಜೋವಿಶೇಷವೇ ನನ್ನ ಭಾವವೇದಿಕೆಯನ್ನಲಂಕರಿಸಿದ ಗುರುಮೂರ್ತಿ !

೧೭. ಸಖ್ಯಯೋಗದಲ್ಲಿಯೂ ಅಹಿಂಸೆಗೆ ಅಷ್ಟಿಷ್ಟು ಮಹತ್ವವೆಂದಲ್ಲ. ಪತಿಚಿತ್ತವು, ಅಳುಕಬಾರದೆಂದು ಅಹರ್ನಿಶವೂ ಜಾಗರೂಕಳಾಗಿರುವ ಸತಿಯಂತೆ ಗೆಳೆಯರೆಲ್ಲರೂ ಪರಸ್ಪರರೊಡನೆ ವರ್ತಿಸಹತ್ತಿದರೆ, ನಮ್ಮೊಳಗಿನ "ಗೆಳೆಯ"ನು ನಮ್ಮ ನಡುವೆ ಮೊಗದೋರಲಿಕ್ಕಿಲ್ಲವೇ ? —ರಾಮಚಂದ್ರ.

---

## ಮಹಾತ್ಮನಾದ ಮೋಹನನು.

ಮಹಾತ್ಮನು ಆದರ್ಶವಾದಿಯಲ್ಲ; ಆಚಾರವಾದಿ. ಅಂದರೆ, ನುಡಿದು ಮಾಡುವವನಲ್ಲ; ಮಾಡಿ ನುಡಿಯುವವನು. ಅಂದರೆ, ನುಡಿದದ್ದನ್ನು ಮಾಡದ ಹೇಡಿಯೂ ಅಲ್ಲ; ಹಿಡಿದದ್ದನ್ನು ಬಿಡುವ ಬಿಡಾಡಿಯೂ ಅಲ್ಲ.

ಮಹಾತ್ಮನು ಕವಿಯಲ್ಲದಿದ್ದರೂ, ತತ್ತ್ವಜ್ಞಾನಿಯಲ್ಲದಿದ್ದರೂ, ತ್ಯಾಗಿಯಲ್ಲದಿದ್ದರೂ, ಯತಿಯಲ್ಲದಿದ್ದರೂ, ಯೋಗಿಯಲ್ಲದಿದ್ದರೂ, ರಾಜಕಾರಣಪಟುವಲ್ಲದಿದ್ದರೂ, ತೀವ್ರ ಸುಧಾರಕನಲ್ಲದಿದ್ದರೂ-ಅವನು ಕವಿ; ತತ್ತ್ವಜ್ಞಾನಿ; ತ್ಯಾಗಿ; ಆತನು ಯತಿಯೂ ಇರುವ, ಯೋಗಿಯೂ ಇರುವ; ರಾಜಕಾರಣಪಟುವೂ ಇರುವ, ತೀವ್ರ ಸುಧಾರಕನೂ ಇರುವ. ಅಂದರೆ ಮಹಾತ್ಮನು ಅನಂತ ಅವತಾರಿಯಂತೆಯೇ ಇರುವ !

ಎಲ್ಲರಿಗೂ ಹಗುರೆನಿಸುವ ಒಳ್ಳಿಡೆಯ ಕಟ್ಟಳೆಗಳನ್ನೇ ನುಡಿದು, ನಡೆದು ಮೋಹನನು ಮಹಾತ್ಮನಾದನು.

ಇನಿವಾಲ್ದುಂಬಿದ ನಲ್ನುಡಿಗಳನ್ನೊಡನುಡಿದು ಕವಿಯಾದನು. ಸತ್ಯದ ಆಗ್ರಹಿಯಾಗಿ, ಅಸತ್ಯದ ನಿಗ್ರಹಿಯಾಗಿ, ಸಮತೆ-ಮಮತೆಗಳ ಧರ್ಮಮರ್ಮನಿರ್ದೇಶಕನಾಗಿ ತತ್ತ್ವಜ್ಞಾನಿಯಾದನು.

ತನ್ನನ್ನೇ ಮಾನವ್ಯಕ್ಕೆ ಮುಡುಪಿಟ್ಟುಕೊಂಡು ತ್ಯಾಗಿಯಾದನು. ಸಮಾಧಿಸ್ಥನಾಗಿ-ಸ್ಥಿತಪ್ರಜ್ಞನಾಗಿ, ಅಹಿಂಸಾಪರನಾಗಿ-ಸಹಿಷ್ಣುವಾಗಿ, ಎಲ್ಲದರಲ್ಲಿಯೂ ಜಯಿಷ್ಣುವಾಗಿ ಯತಿಯಾದನು-ಯೋಗಿಯಾದನು. ತ್ಯಾಜ್ಯ ರಾಜ್ಯದ ಹಗೆಯಾಗಿ, ಸ್ವರಾಜ್ಯ ಸಂಪಾದನೆಗೆ ನೀತಿರೀತಿಯ ಯೋಜಕನಾಗಿ, ಅಸ್ಪೃಶ್ಯತೆಯ ಉದ್ಧಾರಕನಾಗಿ, ರಾಜಕಾರಣಪಟುವಾದನು; ತೀವ್ರ ಸುಧಾರಕನಾದನು. ಇಂತಿದು ಮಹಾತ್ಮನಾದ ಮೋಹನನ ಭಾವರೂಪ ! —ನಾರಾಯಣ.

---

# ಅಕ್ಕಸಾಲಿಗ.

೧.

ಆಗೊಂದು ದೊಡ್ಡ ಬರ. ಅಕ್ಕಸಾಲಿಗನ ಉದ್ದಿಮೆಯು ನಿಂತಿತು. ಕೂಲಿಯಿಲ್ಲದೆ ಕೆಲಸ ಮಾಡುವನು; ಏಕೆಂದರೆ, ತನ್ನ ಕಲೆ ಕೆಡಬಾರದು; ಕಳೆಯಬಾರದು; ಬೆಳೆಯಬೇಕು.

ಜನರು ನಂಬಲಿಲ್ಲ. ಅಕ್ಕಸಾಲಿಗನ ಕೆಲಸ ಕಟ್ಟಾಯಿತು. ಮನೆಯ ಒಡವೆಗಳನ್ನೇ ಮುರಿಮುರಿದು ಮಾಡಹತ್ತಿದನು. ಹೊನ್ನನ್ನು ಕಾಸಲಿಕ್ಕೆ ಇದ್ದಲಿಯು ಇಲ್ಲದಾಯಿತು; ಅದಕ್ಕವನು ಕುಗ್ಗನ್ನು ತಂದನು; ಕುಗ್ಗು ಇದ್ದಲಿಗಿಂತ ಮಿಗಿಲು, ಮುಂದೆ ಮನೆಯೊಳಗಿನ ಬೆಳ್ಳಿ ಬಂಗಾರಗಳ ಚೀಲು ಬರಿದಾಯಿತು. ಆಗ ತಾನೆ ಅಚ್ಚಾಗದೆ ಉಳಿದ ಒಳದಗಡನ್ನು ಕಾಸಿ ಕಾಸಿ ಬಡೆದನು.

ತಗಡು ಹಿಗ್ಗಿತು; ಬೇಗೆಗೆ ಮೈಕೊಟ್ಟ ಚಿನ್ನವು, ಉಜ್ವಲವಾಯಿತು. ಊರ ಜನರೆಲ್ಲರೂ ನೋಡ ಬಂದರು; ಅಕ್ಕಸಾಲಿಗನ ಕಲೆಯನ್ನು ಹೊಗಳಿದರು.

೨.

ಜನರು ಬೆಳ್ಳಿ-ಬಂಗಾರಗಳನ್ನು ಕೊಂಡುಕೊಂಡು ಎಡತಾಕಹತ್ತಿದರು. ಆದರೇನು? ಅಕ್ಕಸಾಲಿಗನಿಗೆ ವೇಳೆಯಿರಲಿಲ್ಲ. ಕೂಲಿಯೇ ಬೇಡವೆಂದನು.

ಜನರು ಹೆಚ್ಚು ಕೂಲಿಯ ಆಶೆ ತೋರಿಸಿದರು;

ಅವನೆಂದನು,—" ಮನೆಯ ವಸ್ತುಗಳನ್ನೇ ಮಾಡಬೇಕಾಗಿದೆ. "

ಜನರಂದರು,—"ಮದುವೆಯ ಮಾಸವಿದು; ನಮ್ಮ ವಸ್ತುಗಳನ್ನು ಸಿದ್ಧ ಮಾಡಿಕೊಟ್ಟರೆ, ನಿನ್ನನ್ನು 'ಸಿರಿವಂತ'ನನ್ನಾಗಿ ಮಾಡುವೆವು.

"ಸಿರಿವಂತಿಕೆಯು ಬೇಕಿಲ್ಲ; ನಾವೀಗ ಬಳಗದೊಂದಿಗೆ 'ಹರಿದ್ವಾರ'ದ ಹಾದಿಯನ್ನು ಹಿಡಿದಿರುವೆನು; ಹೆಂಡರೂ ಮಕ್ಕಳೂ ಸಿಂಗಾರಾಗಲಿ !"

೩.

ಆ ಊರ ಅರಸನ ಅಪ್ಪಣೆ, ! 'ಅಕ್ಕಸಾಲಿಗನನ್ನು ಕರೆಯಿಸು' ಎಂದು. ಅಕ್ಕಸಾಲಿಗನು ತಾನು, ಬಣ್ಣ ಕೊಟ್ಟು ಸಿದ್ಧ ಮಾಡಿದ, ಶುದ್ಧ ಮಾಡಿದ ಬಂಗಾರದ ಹೂವನ್ನಿಟ್ಟು ಅರಸನಿಗೆ ಮಣಿದನು.

ಅರಸನು ತನ್ನ ಭಾವಚಿತ್ರವು ಆ ಅರಲಲ್ಲಿ ಅಚ್ಚಾಗಲೆಂದನು.

ಅಕ್ಕಸಾಲಿಗನು ಒಪ್ಪಿದನು; ಮನೆ ಮಾರುಗಳ ಮರೆತನು ; ತಿಂಡಿ ತಿನಸು ತೊರೆದನು; ಉಚಿತವನ್ನು ಆಶಿಸಲಿಲ್ಲ; ದುಡಿಮೆಯಲ್ಲಿ ಬಡವಾದನು; ಕಡೆಗೆ ಅರಸನ ಚಿತ್ರವನ್ನು ಅಚ್ಚುಗೊಳಿಸಿದನು.

ಚಾತುರ್ಯವನ್ನು ಬರಹೋಗುವ ಜನರು ಕಾಣಬಂದರು; ಬೇಡಬಂದರು. ಹೂ ಕಳೆದೀತೆಂದು ಅಕ್ಕಸಾಲಿಗನು ಭಯಪಟ್ಟನು. ಅರಸನ ಚಿತ್ರವು ಯಾರಿಗೂ ಕಾಣ ಲಿಲ್ಲ. ಮಂತ್ರಿ ನೋಡಿದನು; ಕಾಣಲಿಲ್ಲ; ಅರಸಿಯು ಕಂಡಳು; ಕಾಣದಾಯಿತು.

ಅರಸನು ರೇಗಿಗೆದ್ದನು; ಅಕ್ಕಸಾಲಿಗನು ಮೋಸಮಾಡಿದನೆಂದನು. ಮುಂದೆ ಕರೆತರಿಸಿ ಅಂದನು. " ನಿನಗಾವ ಶಿಕ್ಷೆ? "

ಅಕ್ಕಸಾಲಿಗನಂದನು; " ಇನ್ನೊಮ್ಮೆ ಏಕಾಂತದಲ್ಲಿ ನೋಡು "

೪.

ಅರಸನಿಂದ ಮರ್ಯಾದೆ, ಮೆಚ್ಚಿಕೆ; ಊರವರ ಒಲುಮೆ. ಸುಂದರ ಹೂ ವನ್ನು ಹಿಡಿದುಕೊಂಡು ಉಳಿತ ಅಕ್ಕಸಾಲಿಗನ ಹೂವನ್ನು ಆ ಊರ **ಚಂಚಲ** ಲಕ್ಕಮ್ಮನು ಮೋಸಮಾಡಿ ಕಾಲಕೆಳಗೆ ಹಾಕಿದಳು.

ತನ್ನ ಅತ್ಯಗಾಧ–ಕಲೆಯಿಂದ ಅಕ್ಕಸಾಲಿಗನು ಸರಸಿಯಾದರೂ, ಹೂವಿಗಾಗಿ ಲಕ್ಕಮ್ಮನ ಪಾದಗಳನ್ನು ಸೀಪಿದನು. ದಯೆಯಿಲ್ಲ ಲಕ್ಕಮ್ಮನಿಗೆ. ಅವನ ಆಶೆಯೆಲ್ಲ ನೀರಾಗಿದ್ದರೂ ಜೀವನೆಲ್ಲ ಹೂವಿನಲ್ಲಿಯೇ !

—ಲಿಂಗ.

---

# ಧರ್ಮ

—:o:—

ಧಾರಣಾತ್ ಧರ್ಮಮಿತ್ಯಾಹು: ।

## ಹೊಂದುಗೂಡಿರುವದೇ ಧರ್ಮ.

ಧರ್ಮವೆಂಬ ಮಾತಿಗೆ ಹಲವು ಅರ್ಥಗಳಿವೆ. ದಾನಮಾಡುವ ಮನಸ್ಸಿಲ್ಲದವ ನಲ್ಲಿ ಧರ್ಮಬುದ್ಧಿಯು ಇಲ್ಲವೆಂದೆನ್ನುವ ವಾಡಿಕೆಯುಂಟು. ದಿನದ ಬಳಿಕೆಯಲ್ಲಿ ತಮ್ಮ ಮತ ಪಂಥಗಳೇ ತಮ್ಮ ಧರ್ಮವೆಂದೂ, ಅಜ್ಜ ಮುತ್ತಜ್ಜರಿಂದ ನಡೆದು ಬಂದ ಕಸಬು ಕೈಗಾರಿಕೆ ಕಾಯಕಗಳೇ ತಮ್ಮ ಧರ್ಮವೆಂದೂ ಅಂದುಕೊಳ್ಳುವದುಂಟು. ತಂದೆ ತಾಯಿಗಳನ್ನು ಕಾಡುವದು ಮಕ್ಕಳ ಧರ್ಮವಲ್ಲವೆಂದೆನ್ನುವಾಗ್ಯೆ ಧರ್ಮ ಶಬ್ದದ ಅರ್ಥವು ಒಂದು ಇರುತ್ತದೆ. ಕಲಿಯುಗದಲ್ಲಿ ಧರ್ಮವು ಲೋಪವಾಗುತ್ತ ನಡೆದಿದೆ ಯೆಂದನ್ನುವಾಗ್ಯೆ ಧರ್ಮ ಶಬ್ದದ ಅರ್ಥವು ಬೇರೊಂದಾಗುತ್ತದೆ. ಒಮ್ಮೊಮ್ಮೆ ಧರ್ಮ

ವೆಂದರೆ ಪುಣ್ಯವೆಂದೂ ಒಮ್ಮೊಮ್ಮೆ ಸ್ವಭಾವ ಗುಣವೆಂದೂ ಅರ್ಥವಾಗುವದು. ಎದ್ದರೆ ಧರ್ಮ, ಕುಳಿತರೆ ಧರ್ಮವೆನ್ನುವ ಹಿಂದೂ ಧರ್ಮದವರಲ್ಲಿ 'ಧರ್ಮ'ಕ್ಕೆ ಅನೇಕಾರ್ಥಗಳಾಗುವದು ಸಹಜವಾಗಿದೆ.

ಆದರೆ "ಧರ್ಮವು ಮುಳುಗಿದರೆ ಜಗವೇ ಮುಳುಗುವದು" ಎಂದು ಜನರು ಅನ್ನುವಾಗಲೂ, "ಧರ್ಮಕ್ಕೆ ಅಳಿಗಾಲವು ಬಂದಾಗ ಅದನ್ನುಳಿಸಲು ನಾನು ಲೋಕದಲ್ಲಿ ಹುಟ್ಟಿಬರುವೆನೆಂದು" ಭಗವಂತನು ಭಗವದ್ಗೀತೆಯಲ್ಲಿ ಹೇಳಿದಾಗಲೂ, "ಕಲಿಕಾಲ ಬಂದೀತು ಕಡೆ ಮೊದಲಾದೀತು ಧರ್ಮವಬಿಡಬೇಡಿರಣ್ಣಾ" ಎಂದು ಸಾರುವಯ್ಯನವರು ಸಾರುವಾಗಲೂ "ಎತ್ತ ಧರ್ಮವಿದೆಯೋ ಅತ್ತೇ ಜಯ"ವೆಂದು ನಮ್ಮ ಪುರಾಣೇತಿಹಾಸಗಳು ಪಲ್ಲವಿಯನ್ನು ಹಾಡುವಾಗಲೂ "ಧರ್ಮ" ಶಬ್ದಕ್ಕೆ ಬೇರೆ ಬೇರೆ ವಿಶೇಷವಾದ ಅರ್ಥಗಳಾಗುವವು. ಮೇಲೆ ಹೇಳಿದ ಹಲವು ಅರ್ಥಗಳನ್ನು ಬೇರೆ ಬೇರೆಯಾಗಿ ತೆಗೆದುಕೊಂಡು ಇಲ್ಲಿ ಧರ್ಮ ಶಬ್ದಕ್ಕೆ ಹಾಗೆ ಅರ್ಥಮಾಡಹೋದರೆ ಅದು ಅಷ್ಟು ಸರಿಯಾಗುವದಿಲ್ಲ. ಅಥವಾ ಸಂಪೂರ್ಣವಾಗಿ ಕೂಡುವದಿಲ್ಲ. ಹಾಗಾದರೆ ಈ ಧರ್ಮದ ಅರ್ಥವೇನು? ಈ ಧರ್ಮವನ್ನು ಮುರಿಯುವದೆಂದರೆ ತನ್ನ ಕೈಯಿಂದ ತಾವೇ ತಮ್ಮನ್ನು ಹಾಳುಮಾಡಿಕೊಂಡಂತೆಯಂತೆ; ಈಧರ್ಮವನ್ನುಳಿಸಲು ಪ್ರತ್ಯಕ್ಷ ದೇವನೇ ಜನ್ಮ ತಾಳುವನಂತೆ; ಕಡಿದಾಟಬಡಿದಾಟಗಳ. ಕಲಿಕಾಲಬಂದರೂ, ಕಡೆ ಮೇಲಾದರೂ ಈ ಧರ್ಮವನ್ನು ಬಿಡಬಾರದಂತೆ; ಕಡೆ ಬಾಳುವ ಗೆಲವು ಬೇಕಾದವರು ಈ ಧರ್ಮವನ್ನು ಪಾಲಿಸಬೇಕಂತೆ, ಅಂಥ ಈ ಧರ್ಮವಾವುದು? ಮತ್ತು ಈ ಧರ್ಮದ ವಿರೋಧಿಯಾದ ಅಧರ್ಮವಾವುದು ?

ಒಳ್ಳೆಯ ಮನಸ್ಸಿನಿಂದ ಹೊಂದುಗೂಡಿರುವದೆ ಧರ್ಮ, ವೈಮನಸ್ಸಿನಿಂದ ಬೇರೆ ಬೇರೆ ಯಾಗುವದೆ ಅಧರ್ಮ. ಒಳ್ಳೇಮನಸ್ಸಿನಿಂದ ಹೊಂದಿಗೂಡಿರುವದೇ ಬಾಳುವವರ ಲಕ್ಷಣ, ವೈಮನಸ್ಸಿನಿಂದ ಬೇರೆ ಬೇರೆ ಯಾಗುವದೆ ಹಾಳಾಗುವವರ ಲಕ್ಷಣ. ಹೊಂದಿಗೂಡಿರುವ ಬುದ್ಧಿಯು ಕಡಿಮೆಯಾದಂತೆ ಹಾಳಾಗುವ ಹಾದಿ ಸಮೀಪಿಸಿತೆಂದು ತಿಳಿಯಬೇಕು. ಒಡಕು ಉಂಟಾದ ಮೇಲೆ ಒಡೆದು ಪುಡಿಪುಡಿಯಾಗಲೇನು ತಡ ! ಹಾಗಾಗಬಾರದೆಂಬ ಸಂಕಲ್ಪದಿಂದಲೇ ದೇವನು ದೇಹ ಧರಿಸಿ ಬರುವನು. ವೈಮನಸ್ಸನ್ನು ಇಲ್ಲದಂತೆ ಮಾಡಿ ಸಾಮರಸ್ಯವನ್ನು ಸ್ಥಾಪಿಸುವನು. ಬೇರೆ ಬೇರೆ ಯಾದವರನ್ನು ಹೊಂದುಗೂಡಿಸಿ ಒಂದು ಮಾಡುವನು. ಎಂಥ ಬಡಿದಾಟ ಕಡಿದಾಟದಲ್ಲಿಯೂ ಅದಲು ಬದಲಿನಲ್ಲಿಯೂ ತಾವು ಹೊಂದುಗೂಡಿ ಒಂದಾಗಿರಬೇಕೆಂಬ ಬುದ್ಧಿಯೊಂದು ಮಾತ್ರ ನಮ್ಮಲ್ಲಿ ನೆಲೆಗೊಂಡಿದ್ದರೆ ನಮ್ಮ ಧರ್ಮವೂ ಉಳಿಯುವದು; ನಾವೂ ಉಳಿಯುವೆವು. ಹೊಂದುಗೂಡಿರಬೇಕೆಂಬ ಬುದ್ಧಿಯೇ ಧರ್ಮದ ಮರ್ಮ. "ಎತ್ತ 'ಧರ್ಮ' ಅತ್ತ ಜಯ" ವೆಂದು ಸಾರುವ ಭಾರತದ ವಾಣಿಯಾದರೂ ಪರ್ಯಾಯದಿಂದ ಹೊಂದುಗೂಡಿರುವದು. ಜಯ ಹೊಂದುವವರು ಇಲ್ಲದವರು ಇಲ್ಲದಾಗುವರೆಂದು ಹೇಳುವದಿಲ್ಲವೇ?

ಹೊಂದುಗೂಡಿರುವ ಪಾಂಡವರು ಗೆಲ್ಲಲಿಲ್ಲವೆ? ತಲೆಗೊಂದು ಬುದ್ಧಿಯುಳ್ಳ ಕೌರವರು ಸೋತು ಸಾಯಲಿಲ್ಲವೇ? ಹೊಂದಿಕೆಯಿಲ್ಲದಾದ ಯಾದವರ ಗತಿಯು ಕಡೆಗೇನಾಯಿತು? ಹಿಂದುಸ್ಥಾನವು ಇಂಗ್ಲೀಷ ಜನರ ಕೈಸೇರಬೇಕಾದರೆ ಕಾರಣವೇನು? ಅವರು ಬಂದ ಕಾಲಕ್ಕೆ ನಮ್ಮಲ್ಲಿ ಹೊಂದಿಕೆ ಇರಲಿಲ್ಲವೆಂಬುದೇ. ಮಹಮ್ಮದೀಯರು ಬಂದು ಮೊದಲು ಜಯಶಾಲಿಗಳಾಗಲಿಕ್ಕೂ, ಎಷ್ಟೋ ದಿನಗಳ ಮೇಲೆ ಇಳಿಗಾಲವನ್ನು ಕಾಣುವವಕ್ಕೂ ಕಾರಣವಾದರೂ ಇದೇ! ಬಂದಾಗ್ಗೆ ಹೊಂದುಗೂಡಿ ಒಂದಾಗಿದ್ದರೂ ಹಿಂದುಗಡೆ ಹೊಂದಿಕೆಗೆಟ್ಟರು. ಹೊಂದಿಕೆಗೆಡಿಸುವ ದುಷ್ಟರನ್ನು ನಿಗ್ರಹಿಸಿ ಹೊಂದುಗೂಡಿರುವ ಶಿಷ್ಟರನ್ನು ರಕ್ಷಿಸಿ, ಶ್ರೀ ರಾಮಕೃಷ್ಣರು ಅವತಾರಿಗಳಾದರು. ಹೊಂದುಗೂಡಿಕೆಯ ಹಾದಿಯಿಂದ ಆರು ಮತಗಳನ್ನು ಸಂಧಿಸಿ ಶಂಕರಾಚಾರ್ಯರು ಧರ್ಮಸಂಸ್ಥಾಪಕರಾದರು. ಹದಿನೆಂಟು ಜಾತಿಯವರಿಗೂ ಹೊಂದುಗೂಡಿ ಬಾಳುವೆ ಮಾಡಹಚ್ಚಿ ಬಸವೇಶ್ವರರು ಧರ್ಮೋದ್ಧಾರಕರಾದರು. ವಿದ್ಯಾರಣ್ಯರೂ ಹುಕ್ಕಬುಕ್ಕರೂ, ರಾಮದಾಸರೂ ಶಿವಾಜಿಮಹಾರಾಜರೂ ಧರ್ಮಸಂಸ್ಥಾಪನೆಪರಿಪಾಲನೆಗಳನ್ನು ಹೊಂದುಗೂಡಿಕೆಯ ಬಾಳುವೆಗೆ ಹಾದಿಯನ್ನು ಮಾಡಿಯೇ ಕೊನೆಗಾಣಿಸಿದರು. ಅಂತೂ ಹೊಂದುಗೂಡಿರುವಂತೆ ಅನುಕೂಲಿಸಿ ಕೊಡುವವರೇ ಧರ್ಮ ಸಂರಕ್ಷಕರು. ಹೊಂದುಗೂಡಿಸುವವರೇ ಧರ್ಮವಂತರು. ಹೊಂದುಗೂಡಿಕೆಯ ಹಾದಿಯೇ ಧರ್ಮದ ಹಾದಿ, ಬಲದ ಹಾದಿ, ಜಯದ ಹಾದಿ, ಶುಭ ಮಂಗಳದ ಹಾದಿ, ಶಾಂತಿಪುಷ್ಟಿತುಷ್ಟಿಗಳ ಹಾದಿ.

ಹೊಂದುಗೂಡಿರಬೇಕೆಂಬುದೇನೋ ನಿಜ. ಆದರೆ ಅದು ಒಳ್ಳೇ ಮನಸ್ಸಿನಿಂದಿರಬೇಕು. ಅಜ್ಞಾನ ದೌರ್ಬಲ್ಯಗಳ ಮೂಲಕ ಕುರಿಹಿಂಡಿನಂತೆ ಹೊಂದುಗೂಡಿರುವದಾಗಲಿ ಯಾರೋ ಕೂಡಿಸಿರಲು ಬೇರೆಯಾಗುವ ಶಕ್ತಿಯೇ ಇಲ್ಲದೆ ಹೊರೆಯೊಳಗಿನ ಕಟ್ಟಿಗೆಗಳಂತೆ ಹೊಂದುಗೂಡಿರುವದಾಗಲೀ ಧರ್ಮಜೀವನಾದ ಕುರುಹಲ್ಲ. ವೈಮನಸ್ಸು ಬೇರೆ ಬೇರೆ ಮಾಡುವಂತೆ ಸೌಮನಸ್ಸು ಹೊಂದುಗೂಡಿಸುವದು. ಹೊಂದುಗೂಡುವಿಕೆಯ ಬಾಳ್ವೆಯ ಫಲಕ್ಕೆ ಸೌಮನಸ್ಸೆ ಬೀಜ. ಸೌಮನಸ್ಸೆಂಬ ಬೀಜಕ್ಕೆ ಹುಟ್ಟಿದ ಹೊಂದುಗೂಡಿಕೆಯ ಬಾಳ್ವೆಯ ಫಲವೇ ಧರ್ಮ. ಬಲಿಷ್ಠರಾದ ಪರರ ಬೆದರಿಕೆಯ ಒತ್ತಾಯಕ್ಕೆ ಹೊಂದಿಸಿಕೊಂಡು ಒತ್ತಟ್ಟಿಗಿರುವದು ಅಧರ್ಮಜೀವನ. ಆ ಹಾಳು ಬಾಳುವೆಯಲ್ಲಿ ಮನಸ್ಸು ಹಿಗ್ಗಿರುವದಿಲ್ಲ. ತಗ್ಗಿ ಬಗ್ಗಿ ಕುಗ್ಗಿಕೊಂಡಿರುವದು. ಸೌಮನಸ್ಸಿನಿಂದ ಹೊಂದಿಗೂಡಿರುವದು ಹೇಗೆ ಧರ್ಮವೋ ಹಾಗೆಯೇ ವೈಮನಸ್ಸಿನಿಂದ ಬೇರೆ ಬೇರೆ ಯಾಗಿರುವದೇ ಅಧರ್ಮವು. ಯಾಕಂದರೆ, ಒಳ್ಳೇ ಮನಸ್ಸಿನವರಿಗೂ ಕೆಲವರ ಕೂಡ ಹೊಂದಿಕೊಂಡಿರುವದು ಸರಿಬರುವದಿಲ್ಲ. ಆ ಕಾಲಕ್ಕೆ ಸೌಮನಸ್ಸಿನಿಂದಲೇ ಒಳ್ಳೇಯವರು ಸರಿದು ಬೇರೆ ನಿಲ್ಲಬೇಕಾಗುತ್ತದೆ. ಧನಮದದಿಂದಾಗಲೀ ಅಧಿಕಾರಮದದಿಂದಾಗಲೀ ಮತ್ತೆ ಬೇರೆಯಾವ ಬಗೆಯ ಮತದಿಂದಾಗಲಿ ಮದಾಂಧರು

ತಮ್ಮ ಅಹಂಕಾರದ ದರ್ಪದಲ್ಲಿ ಪೌರುಷದ ಜಂಭದಲ್ಲಿ ಎರಡನೇಯುವರನ್ನು ಲೆಕ್ಕಿಸದೆ ಬೇರೆಯುವರಿಗೇ ಹೊಂದಿಕೊಂಡಿರಬೇಕೆಂಬ ಉಪದೇಶಮಾಡಹತ್ತಿದರೆ ಸತ್ವಶೀಲರಾದ ವರು ತಮ್ಮ ಸತ್ವಬಲದಿಂದ ಅವರ ಮದವನ್ನು ಇಳಿಸಿ ಅವರನ್ನು ಹಾದಿಗೆ ತರುವವರೆಗೆ ಬೇರೆಯಾಗಿ ನಿಲ್ಲಬೇಕಾಗುತ್ತದೆ; ಆದರೆ ವೈಮನಸ್ಸಿನಿಂದಲ್ಲ. ಮನಸ್ಸಿಲ್ಲದೆ ಹೊಂದಿ ಕೊಂಡಿರುವದು ಧರ್ಮಜೀವನವಲ್ಲ; ಒಳ್ಳೇಮನಸ್ಸಿನಿಂದ ಬೇರೆಯಾಗಿ ನಿಲ್ಲುವದೂ ಅಧರ್ಮಜೀವನವಲ್ಲ. ಆದರೆ ಹೊಂದುಗೂಡಿರುವದೂ ಬೇರೆ ಬೇರೆಯಾಗಿರುವದೂ ಹೇಗೆ ಕಣ್ಣಿಗೆ ಕಾಣಿಸುವದೋ ಹಾಗೆ ಸೌಮನಸ್ಸು ವೈಮನಸ್ಸುಗಳು ಕಣ್ಣಿಗೆ ಕಾಣಿ ಸುವದಿಲ್ಲ. ಒಂದು ದೃಶ್ಯ, ಇನ್ನೊಂದು ಅದೃಶ್ಯ. ಒಂದು ಕಣ್ಣಿಗೆ ಕಾಣುವದೂ ಇನ್ನೊಂದು ಮನಸ್ಸಿಗೆ ಹೊಳೆಯುವದು. ಇಲ್ಲಿ ವಿವೇಕಮಾಡುವ ಬಗೆ ಹೇಗೆ? ನಿಶ್ಚ ಯದ ಹಾದಿಯು ಯಾವದು?

—ದತ್ತಾತ್ರೇಯ.

(ಮುಂದೆ ಸಾಗುವದು.)

---

# ಬರೇ ನಗಚಾಟಕಿ.

## ಯೋಗ್ಯ ದಂಪತಿಗಳು.

ಹೆಂ:— ಇದೇನು ಅಸಹ್ಯ! ದಿನಾಲು ತಡವೇ ?

ಗಂ:— (ಚೇಷ್ಟೆಯ ಸ್ವರದಿಂದ) ನಾನು ಕೆಲಸಿಗನಾಗಿದ್ದರಿಂದ ಹೊತ್ತೇ ಉಳಿ ಯುವದಿಲ್ಲ.

ಹೆಂ:— ತಲೇಬೋಳಿಸಿತು— ಯಾವಾಗಲೂ ಇಂಥ ಸುಟ್ಟಮಾತೆ !

ಗಂಡನು ಅದನ್ನು ಅನ್ನಬಾರದೆಂದು ಸುಮ್ಮನಿರುವನು.

× × ×

## ಸಮ ಹುದ್ದರಿ.

ಗೆಳೆಯ:— ಯಾಕಪ್ಪಾ ನಿನ್ನ ಕುಸ್ತಿಯದೇನಾಯಿತು ?

ಬಾಯ್ಬಡಕ:— ಮೊದಲ ದಿನ ಅವನು ನನ್ನನ್ನು ಕೆಡವಿದನು. ಎರಡನೇ ದಿನ ನಾನು ಆವನಿಗೆ ಬಿದ್ದೆ.

× × × ×

## ಸ್ವಭಾವ.

ಒಬ್ಬ ತುಂಟನಿಗೆ ಮಂದಿಗೆ ಹೆಸರಿಡುವದರಲ್ಲಿ ಬಹಳ ಪ್ರೀತಿ. ಅವನ ವಿರುದ್ಧ ಖಟ್ಲೇ ನಡೆದಕಾಲಕ್ಕೆ ತನ್ನ ಜಬಾನಿಯಲ್ಲಿ:— "ಕುಲಕರ್ಣೇರ ಕಾಮಣ್ಣನಿಗೂ ನಮ್ಮ

ಗೌಡರ ಜೋಕಮಾರನಿಗೂ ಜಗಳಹತ್ತಿತು. ಅಷ್ಟರೊಳಗೆ ಕಡೆ ಓಣಿಯು ಅದರ ಗುಂಚೀ ದೊಡ್ಡಪ್ಪನೂ ಅಲ್ಲೇ ಬಂದನು" ಹೀಗೆ ರಗಳೆ ನಡೆಯಿತು. ಮುನ್ಸೂಫರಿಗೆ ಯಾವ ಕಥೆಯನ್ನು ಹೇಳುತ್ತಾನೋ ತಿಳಿಯಲೊಲ್ಲದು. "ಸಿಕ್ಕವರಿಗೆ ಇಲ್ಲದ ಹೆಸರಿಟ್ಟು ಕರೆಯ ಬೇಡ. ಇದ್ದದ್ದನ್ನು ಇದ್ದಂತೆ ಹೇಳು" ಎನ್ನಲು, ತುಂಟ:— ಹೂನರಿ ಧರ್ಮ ರಾಯರೇ !"

× × × ×

## ಕಡೆಯ ಆಶೆ.

ಸಾಮುದ್ರಿಕ ಬಲ್ಲವ:— ನಿಮ್ಮ ಲಗ್ನವಾಗುವಂತೆ ಇಲ್ಲ. ಹೆಂಡತಿಯು ಗೆರೆಯೇ ಇಲ್ಲ, ಕೈಯಲ್ಲಿ.

ಬಡಪ್ರಾಣಿ:— ( ನಿರಾಶನಾಗಿ ) ಮಕ್ಕಳೂ ಇಲ್ಲವೇ– ನೋಡಿ ಹೇಳಿರಿ.

× × × ×

## ಅವಯುವಗಳ ಜಗಳಾಟ.

ಸುದ್ದಿಸೂರಪ್ಪ:— ಮೊದಲೇನಾಯಿತಂದಿರಿ:– ಅವನಿಗೂ ಇವನಿಗೂ ಬಾಯಿಗೆ ಬಾಯಿ ಹತ್ತಿತು. ಆ ಮೇಲೆ ಕೈಗೆ ಕೈಹತ್ತಿತು. ಅವನು ಬಾಯಿ ಸಡಿಲು ಬಿಟ್ಟ. ಇವನು ಕೈಸಡಿಲು ಬಿಟ್ಟ. ಅವನು ಕೈಕಾಲು ಕೆಡಿಸಿಕೊಂಡು ಕೈಗೆ ಬಾಯಿಗೆ ಸುರೂ; ಇನ್ನು ನಾಕು ಮಂದಿ ಬುದ್ಧೀ ಹೇಳುವವರು ಬಂದಾರೆಂದು ಇವನು ಕಾಲಿಗೆ ಬುದ್ಧೀಹೇಳಿದಾ. ಅಷ್ಟರೊಳಗೆ ನಾನಿವನ್ನ ಹಿಡಿದೆ. ಛೀ! ಲುಚ್ಚಾ! ಎಂದು ನಾನು ಕಾಲಾಗಿನವು ಕೈಯೊಳಗೆ ತಗೊಂಡು ನಿಂತೆ, ಆವಾಗ ಕೈಕಾಲು ಕಟ್ಟಿಕೊಳ್ಳಲಿಕ್ಕೆ ಬಂದಾ. ಸಿಟ್ಟಿನಕೈಯ್ಯೊಳಗೆ ಬುದ್ಧಿಕೊಡಬಾರದೆಂದು ಬಿಟ್ಟೆ. ಇಷ್ಟಾಯಿತು ಇವನ ಕಾಲೊಳಗೆ.

---

# ನನ್ನ ಹುಚ್ಚು

( ಇದು ಒಂದು ಚಿಕ್ಕಕತೆ ?.)

ನೆನಪಿನ ( ಸ್ಮೃತಿಯ) ಘನತೆಯನ್ನು ಎನಿತೆಸಿತು ಕೊಂಡಾಡಿದರೂ ತೀರದು. ನೆನಪಿನಿಂದಲೇ ಧರ್ಮ, ನೆನಪಿನಿಂದಲೇ ಕರ್ಮ, ನೆನಪು ಇರುವುದೆಂದೇ ಜಪ, ನೆನಪು ಇರುವುದೆಂದೇ ತಪ; ನೆನಪೊಂದು ಇರದಿದ್ದರೆ, ಶ್ರುತಿ-ಸ್ಮೃತಿಗಳೂ ಇತಿಹಾಸ-ಪುರಾಣಗಳೂ ಇದು ವರೆಗೆ ಉಳಿಯುತ್ತಿರಲಿಲ್ಲ; ಹಿಂದುಃಸ್ಥಾನಕ್ಕೆ, ಹಿಂದೆ ಎಷ್ಟೋಸಲ ಬಂದ ವಿಪ್ಲವಗಳಲ್ಲಿ ಸಿಕ್ಕು, ನುಗ್ಗು ನುಗ್ಗಾಗಿ ಹೋಗುತ್ತಿದ್ದುವು. ನೆನಪೊಂದು ಇರದಿದ್ದರೆ

ಸ್ವದೇಶ ಪ್ರೀತಿಯೆಲ್ಲಿಯದು ? ಸ್ವಭಾಷೆಯ ಅಭಿಮಾನವೆಲ್ಲಿಯದು ? ನಾವು ಈಗ ಸ್ವಾತಂತ್ರ್ಯಕ್ಕಾಗಿ ಬಾಯಿ ಬಿಡುವುದು, ನಮ್ಮ ಹಿಂದಣ ಪ್ರತಾಪ–ವೈಭವಗಳ ನೆನಪಿನಿಂದಲೇ, ಇದು ಇರದೆ ಇದ್ದಲ್ಲಿ ಮನುಷ್ಯನು, ಕಣ್ಣಿದ್ದು ಕುರುಡನು, ಕಿವಿಯಿದ್ದು ಕಿವುಡನು, ಮಾತುಗಳಿದ್ದು ಮೂಕನು, ಬಗೆಯಿದ್ದು ಬದುಕಿದ ಹೆಣನು. ಒಂದೇ ಮಾತಿನಲ್ಲಿ ಮುಗಿಸಬೇಕೆಂದರೆ ಈ "ನೆನಪು" ಎಂಬುದೊಂದು ಇರುವುದರಿಂದಲೇ ಜಗತ್ತು ಸುಯಂತ್ರಿತವಾಗಿ ಸಾಗಿದೆಯೆನ್ನಲು ಆತಂಕವಾರದೂ ಇರದು.

ಪರಮಾತ್ಮನು ನೆನಪೊಂದನ್ನು ಕೊಡದಿದ್ದಲ್ಲಿ, ಮನುಷ್ಯನ ಜನುಮದಲ್ಲೇನೂ ಹುರುಳಿಲ್ಲ ನೋಡಿ ! ಹಿಂದೆ ನಡೆದ ಸಂಗತಿಗಳ ನೆನಪು ಇಂದು ನಮಗೆ ಇರುವುದರಿಂದಲೇ ನಮ್ಮ ಮುಂದಿನ ಬಾಳುವೆಯಲ್ಲಿ ಬರುವ ಎಡರುಗಳಿಂದ ಕಡೆಗಾಗಲು ನಾವು ಸಮರ್ಥರಾಗುವೆವು. ಹಿಂದಿನ ನಮ್ಮ ಹುಚ್ಚುತನದ ಚಿತ್ರವು ಇಂದು ನಮ್ಮ ಕಣ್ಣೆದುರಿಗೆ ನಿಲ್ಲುವುದು. ಧನದ ರಾಶಿಯು ದೊರೆತರೂ ನೆನಪಿನಿಂದಾದಷ್ಟು ಆನಂದವಾಗದು. ಈಗ ನೋಡಿ ! ಇಂದಿನ ದೀವಳಿಗೆಯಲ್ಲಿ ನಾವೆಷ್ಟು ಆನಂದವನ್ನು ಅನುಭವಿಸಿದರೂ ಅದು ಹಿಂದಿನ ದೀವಳಿಗೆಯ ನೆನಪಿನ ಅನಂದಕ್ಕೆ ಸರಿಯಾಗಲಾರದು. ಇದು ಎಲ್ಲರ ಅನುಭವಕ್ಕೂ ಬಂದ ಮಾತು. ಭಗವಂತನು ಈ ನೆನಪಿನಲ್ಲಿ ಅಂತಹ ಇಂದ್ರಜಾಲವನ್ನೇನು ಇಟ್ಟಿರುವನೋ ಏನೋ !

ಈಗ ನಾನು ತಮಗೆ ಹೇಳುತ್ತಿರುವುದು, ನನ್ನ ಎಳೆಯತನದಲ್ಲಿಯ ನೆನಪು. ನನಗಾಗ ಆರು ವರ್ಷಗಳಾಗಿರಬಹುದು. ಇನ್ನೂ ಕಿರಿಯಳಿದ್ದರೂ ನನಗೆ ಎಷ್ಟೋ ಸಂಗತಿಗಳು ತಿಳಿಯುತ್ತಿದ್ದುವು. ತುಂಟ ಹಸುವಿನ ಕೊರಳಲ್ಲಿ ಕಟ್ಟಿದ ಗಂಟೆಯಂತೆ, ನನ್ನ ನಾಲಿಗೆಯು ಯಾವಾಗಲೂ ನುಡಿಯುತ್ತಲೇ ಇರುವುದು. ಕಂಡಮಾತನ್ನು ಕಂಡಂತೆಯೇ ಹೇಳುವುದರಲ್ಲಿ ನನ್ನ ಕೈಹಿಡಿಯುವವರು ಯಾರೂ ಇಲ್ಲವೆಂದು, ಮನೆಯವರೂ ಮಂದಿಯೂ ಮಾತಾಡುತ್ತಿದ್ದರು. ಮನೆಯಲ್ಲಿಯ ಸುದ್ದಿಯನ್ನು ಹೊರಗೆ ಬೀರುವುದೂ ಹೊರಗಿನ ಸಂಗತಿಯನ್ನೆಲ್ಲ ಮನೆಯಲ್ಲಿ ಹೇಳುವುದೂ ನನಗೆ ಬೇಸರ ಬಾರದ ಕೆಲಸ. ವಿದ್ಯೆ ಕಲಿಯದೆ ಇದ್ದ ನಮ್ಮ ತಾಯಿಗೆ ನಾನೊಂದು "ವಿಜಯ" ವರ್ತಮಾನಪತ್ರವಿದ್ದಹಾಗೆ. ನನ್ನ ಈ ಗುಣಕ್ಕೆ ಎಷ್ಟೋ ಜನರು ನನ್ನನ್ನು ಹೊಗಳಿ "ಮುದ್ದಿನ ಮೆಚ್ಚು" ಕೊಡುವರು; ಎಷ್ಟೋಜನರು "ಅಧಿಕಪ್ರಸಂಗಿ" ಎಂದು ಪದವಿಯನ್ನೂ ಕೊಡುವರು. ನನಗಾಗ ಮೆಚ್ಚೆಂದರೂ ತಿಳಿಯದು; ಪದವಿಯೆಂದರೂ ತಿಳಿಯದು. ಈಗಿನ ನನ್ನ ಬಣ್ಣದ ಮಾತಿವು. ನಡೆದ ಸಂಗತಿಯನ್ನು ಇದ್ದಕ್ಕಿದ್ದಂತೆಯೆ ಬಣ್ಣಿಸಿ, ಕೈಕಣ್ಣುಗಳಿಂದ ಅಭಿನಯಿಸಿ ಹೇಳುವುದೊಂದು ಮಾತ್ರ ಆಗ ನನಗೆ ಗೊತ್ತು. ನಾನೇನೋ ಚಲುವೆಯಂತೆ; ಮಂದಿಯೆನ್ನುತ್ತಿದ್ದರು. ದೊಡ್ಡ ದೊಡ್ಡ ಕಣ್ಣು, ನೀಟಾದ ಮೂಗು, ಕಪ್ಪು ಉಂಗುರು ಗೂದಲು, ಹೊಂಬಣ್ಣದ ಮೆಯ್ಯು ಮಾತ್ರ ನನ್ನದಿದ್ದಿತು ಸರಿ. ನಾನಿದನ್ನು ಒಪ್ಪಿಕೊಳ್ಳುವೆನು. ನಾನನ್ನೆಷ್ಟೇ ಚೆಲುವೆಯೆಂಬುದನ್ನು ಆಗ ನಾನೇನೂ ಅರಿ

ಯಿನು. ನನಗೆ ನೋಡಿದುದೆಲ್ಲ ಚೆಲುವೇ ಕಾಣುತ್ತಿದ್ದಿತು. ನನ್ನ ಚೆಲುವಿಕೆಗಾಗಿಯೂ ಮುದ್ದುಮಾತಿಗಾಗಿಯೂ ನಾನು ಎಲ್ಲರ ಮುಂಗೈಯರಗಿಳಿಯಾಗಿದ್ದೆನು. ಎಲ್ಲರೂ ನನ್ನನ್ನು ಪ್ರೀತಿಸುವರು. ನನ್ನ ಮಾತಿನರೀತಿಯನ್ನು ಕಂಡವರೆಲ್ಲ ನನ್ನ ಜಾಣ್ಮೆಯನ್ನು ಕೊಂಡಾಡಿ "ಇವಳೇನೇ ನಮ್ಮವ್ವಾ! ನಾಳೆ ಮಾಡಿಕೊಂಡ ಗಂಡನನ್ನು ಪೇಟೆಯ ಲ್ಲಿಟ್ಟು ಮಾರಾಟಮಾಡುವಳು." ಎನ್ನುವರು. ನನಗಾಗ "ಗಂಡನನ್ನು ಮಾರಿಕೊಂಡು ಬರುವುದು. ಜಾಣತನದ ಲಕ್ಷಣವೇನೋ" ಎಂದೆನಿಸುತ್ತಿತ್ತು. ಎಲ್ಲರೂ ನನ್ನನ್ನು "ಚಿತ್ರಾ!" ಎಂದು ಕರೆಯುವರು. ನನ್ನ ತೊಟ್ಟಲಲ್ಲಿಟ್ಟ ಹೆಸರಿದು. ನಮ್ಮ ತಂದೆಯು ಮಾತ್ರ ಚೇಷ್ಟೆಯಿಂದ ನನ್ನನ್ನು "ಸುದ್ದೀಸೂರಕ್ಕ" ಎಂದೂ "ಮಾತಿನಮಲ್ಲಮ್ಮ" ಎಂದೂ ಕರೆಯುತ್ತಿದ್ದನು.

ನಮ್ಮಕ್ಕ ಗಂಡುಮಗುವನ್ನು ಹೆತ್ತು, ಮೊದಲನೆಯ ಸಲ ತಮ್ಮತ್ತೆಯ ಮನೆಗೆ ಹೋಗುವಾಗ ನಾನೂ ಅವಳ ಸಂಗಡ ಹೋಗಿದ್ದೆನು, "ಹೆಸರು ಕ್ಷೀರಸಾಗರಭಟ್ಟನಾದರೂ ಮನೆಯಲ್ಲಿ ಮಜ್ಜಿಗೆಗೆ ತತ್ವಾರ" ಎಂದೇನೋ ಹೇಳುವರಲ್ಲ! ಅದರಂತೆಯೇ ನಮ್ಮಕ್ಕನತ್ತೆಯ ಮನೆ. ಅತ್ತೆಯ ಮನೆಯೆಂದು ಹೆಸರದಕ್ಕೆ; ಅತ್ತೆಯೂ ಇಲ್ಲ, ಮಾವನೂ ಇಲ್ಲ. ಇರುವವರು ಅಕ್ಕ, ಭಾವ, ಇಬ್ಬರೇ. ಈಗ ಮಗುವೊಂದು, ನಾನೊಬ್ಬಳು, ನಾಲ್ಕು ಜನರು.

ನಮ್ಮ ಭಾವ ತಾಲೂಕಆಫೀಸಿನಲ್ಲಿ ಗುಮಾಸ್ತೆಯಾಗಿರುವನು. ತಿಂಗಳೊಂದಕ್ಕೆ ಅರುವತ್ತು ರುಪಾಯಿಯ ಸಂಬಳ. ಬೊಗಸಿತುಂಬಾ ರುಪಾಯಿ ಬರುವವು. ಮನೆಯಲ್ಲಿ ಯಾವ ಮಾತಿನ ಕೊರತೆಯೂ ಇಲ್ಲ. ಸರ್ವಸ್ವಾತಂತ್ರ್ಯವೂ ಅಕ್ಕನದೇ. ಸಂಬಳದ ರೂಪಾಯಿ ಮನೆಗೆ ಬರುವುದಷ್ಟೇ ತಡ; ಅಕ್ಕನ ಪೆಟ್ಟಿಗೆಯಲ್ಲಿ ಬಂದು ಬೀಳುವವು. ಮಾಡಿಕೊಂಡು ತಿಂದರೆ ತಿಂಡಿತಿನಿಸುಗಳಿಗೆ ಕಡಿಮೆಯಿಲ್ಲ, ಎಲ್ಲವೂ ಅನುಕೂಲ. ಒಡವೆಗಳಷ್ಟು ಕಡಿಮೆಯಾಗಿದ್ದರೂ ದಿನದಿನಕ್ಕೆ ಒಂದೊಂದೇ ಹೊಸಹೊಸ ಒಡವೆಗಳು ಅಕ್ಕನ ಮೈಮೇಲೆ ಹೆಚ್ಚಾಗಿ ಕಾಣುತ್ತಿದ್ದುವು.

ನಮ್ಮಕ್ಕನಾದರೂ ನಾನು ಮುಚ್ಚಿಟ್ಟುಕೊಳ್ಳುವದಿಲ್ಲ ನೋಡಿ! ಅವಳಿಗೆ ಸಿಡುಕುತನವು ಹೆಚ್ಚು. ತನ್ನ ಮಾತುಗಳು ನಡೆಯಲೇಬೇಕೆಂಬ ಆಗ್ರಹ ಬಹಳ. ಈ ಗುಣದಿಂದ ಅವಳು ಕಾರಣವಿಲ್ಲದೆಯೆ ಬೆಲ್ಲದಂತಹ ತನ್ನ ಬಾಳುವೆಯನ್ನು, ಆಗಾಗ ಬೇವಾಗಿ ಮಾಡಿಕೊಳ್ಳುವಳು. ನನಗೆ ಇದಕ್ಕಾಗಿ ಬೇಸರ. ಭಾವನೆಂದರೆ ಪ್ರತ್ಯಕ್ಷ ಶಂಕರನವತಾರ, ಭೋಲಾನಾಥ, ಹೆರವರಿಗೆ ಉಪಕಾರಮಾಡಬೇಕೆಂಬ ಬುದ್ಧಿಯುಳ್ಳವನು, ದೊಡ್ಡಮನಸ್ಸು, ನಾಲ್ಕು ಮಂದಿಗೆ ಬೇಕಾದವನು. ಆದರೇನು? ಅಕ್ಕನ ಸಿಡುಕುತನದ ಮುಂದೆ ಅವನ ಆಟವು ನಡೆಯದು. "ಸಾವಿರ ಕುದುರೆಯ ಸರದಾರ ಮನೆಯ ಹೆಂಡತಿಗೆ ಪಿಂಜಾರ"ಹೆಂಡತಿಯನ್ನು ಆನಂದದಲ್ಲಿರಿಸಬೇಕೆಂದು, ಯಾವಾಗಲೂ ಭಾವನಪ್ರಯತ್ನ; ಅಕ್ಕನ ಸಿಡುಕು ತನವನ್ನೆಲ್ಲ ನಗೆಯ ಮೇಲೆ ಹಾಕಿ ಅಕ್ಕನ ಪಾಲಿನ ನಗುವನ್ನೂ

ತಾನೇ ನಗುತ್ತಿದ್ದನು. ಅಕ್ಕನು ಒಂದು ಕ್ಷಣದಲ್ಲಿ ನಗುತ್ತಿದ್ದವಳು ಮತ್ತೊಂದು ಕ್ಷಣದಲ್ಲಿ ಮೋರೆಗಂಟು ಹಾಕಿರುವಳು. ನನಗಿದರಿಂದ ಅಕ್ಕನ ಕಡೆಗೆ ನೋಡುವುದೆಂದರೆ ಅಂಜಿಕೆ. ಭಾವನನ್ನು ನೋಡಿದರೆ ಆನಂದವಾಗುತ್ತಿತ್ತಲ್ಲದೆ "ಪಾಪ" ಎನಿಸುತಿದ್ದಿತು. "ಅಕ್ಕ ನನ್ನವಳಾದರೆ ಭಾವ ನನ್ನವನೇ" ಎಂದು ಗಾದೆಯಿರುವುದಲ್ಲ! ಇದರ ವಿಪರೀತ ಅನುಭವವು ನನಗಲ್ಲಿ ಬರುತ್ತಿದ್ದಿತು.

ನಮ್ಮ ಅಕ್ಕನ ಗೆಳತಿಯರೆಷ್ಟೋಜನ ಮನೆಗೆ ಬರುವರು. ಆ ಮಾತು ಈ ಮಾತು ಮಾತಾಡುತ್ತ ಕುಳಿತುಕೊಳ್ಳುವರು. ಅವರಾಡುವ ಮಾತುಗಳಲ್ಲಿಯ ಮುಖ್ಯ ವಿಷಯ ವೆಂದರೆ ಒಡವೆಗಳ ಮಾತು; ಅತ್ತೆ-ಮಾವಂದಿರ ನಿಂದೆ; ಅತ್ತಿಗೆ-ಮೈದುನರ ಹಳಿವು; ಇವೇ. ಮಾತಾಡಿ ಮನೆಗೆ ಹೋಗಲು ಏಳುವರು; "ಇನ್ನೊಂದು ಸ್ವಲ್ಪ ಹೊತ್ತು ಕೂಡ್ರೇ" ಎಂದು ಅಕ್ಕನೆನ್ನುವಳು. "ಅಹುದವ್ವಾ ನಿನಗೇನು ! ಮನೆಯಲ್ಲಿ ಮಾವನ ಕಾಟವಿಲ್ಲ, ಅತ್ತೆಯ ಕಿಟಕಿಟಿಯಿಲ್ಲ. ಗಂಡ-ಹೆಂಡಿರು ರಾಜ—ರಾಣಿಯರಂತೆ ಸುಖ ವಾಗಿದ್ದೀರಿ. ಹೇಗೆ ಮಾಡಿದರೂ ನಿನಗೆ ಚೆಂದವೇ ! ನಮಗೋ ತುಸು ತಪ್ಪಾದರೆ ತೀರಿತು, ಮನೆಯಲ್ಲಿ ಮುಳ್ಳಿನ ಮೇಲೆ ನಿಲ್ಲಿಸುವರು ! ......" ಇತ್ಯಾದಿಯಾಗಿ ಇನ್ನೂ ಏನೇನೋ ಹೇಳಿ ಅಕ್ಕನ ಗೆಳತಿಯರು ತಮ್ಮ ತಮ್ಮ ಮನೆಗೆ ಹೋಗುವರು. ಅದೆಲ್ಲ ವನ್ನು ಕೇಳಿ "ನಮ್ಮಕ್ಕನೆಷ್ಟು ಪುಣ್ಯವಂತಿಯೋ" ಎಂದು ನನಗೆನಿಸುವುದು. "ಅತ್ತೆ ಮಾವಂದಿರೆಂದರೆ ಸೊಸೆಯರಿಗೆ ಏಳೇಳು ಜನ್ಮದ ವೈರಿಗಳು !" ಎಂಬ ಸಿದ್ಧಾಂತವನ್ನು ನಾನಲ್ಲಿ ಕಂಡು ಹಿಡಿದೆನು. ಸಿದ್ಧಾಂತವೇನೋ ತ್ರಿಕಾಲಾಬಾಧಿತವೆಂತೆ. ಆದರೆ ನಾನು ಮಾಡಿದ ಸಿದ್ಧಾಂತವು ನನ್ನ ಮದುವೆಯಾದೊಡನೆ ಎಲ್ಲಿಯೋ ಮರೆಯಾಯಿತು. ನಮ್ಮತ್ತೆಯು ನನ್ನ ಸಿದ್ಧಾಂತವನ್ನು ಸುಳ್ಳು ಮಾಡಿಬಿಟ್ಟಳು. ಇರಲಿ ಈ ಮಾತು ! ಇನ್ನೂ ಮುಂದೆ ಕೇಳಿ !

ಅಕ್ಕನದು ಒಡವೆಗಳ ಮೇಲೆ ಒಳ್ಳೇ ಮಮತೆ. ಒಡವೆಗಳೊಂದಿದ್ದರೆ ಊಟಬೇಡ, ತಿನಸು ಬೇಡ, ಮಾತುಬೇಡ, ಕತೆ ಬೇಡ, ಮಕ್ಕಳು ಬೇಡ, ಮರಿ ಬೇಡ, ಹೂವೀಳ್ಯದ ಗೌರಿಯಂತೆ ಯಾವಾಗಲೂ ಒಡವೆಗಳನ್ನಿಟ್ಟುಕೊಂಡು ಸಿಂಗಾರಾಗಿರಬೇಕೆಂದು ಅಕ್ಕನ ಬಗೆಯ ಬಯಕೆ. ಅಕ್ಕನಿಗೆ ಹೆಚ್ಚು ಒಡವೆಗಳನ್ನಿಟ್ಟುಕೊಳ್ಳುವವರೇ ಅಚ್ಚು ಮೆಚ್ಚಿನ ಗೆಳತಿಯರು. ಅವಳು ಗುಣವನ್ನು ನೋಡುವವಳಲ್ಲ; ಬರಿ ಹಣವನ್ನೆ. ಅಕ್ಕನಿಗೆ ಗೆಳ ತಿಯರು ದೊರೆತುದೂ ಅವಳ ಗುಣಕ್ಕಾಗಿಯಲ್ಲ; ಒಡವೆಗಳ ಅಂದ ಚೆಂದಕ್ಕೆ ಮನ ಸೋತು. ತಿಂಡಿ ತಿನಸುಗಳಿಗೆ ಮರುಳಾಗಿ. ಅಕ್ಕನು ಹೇಳಿದ ಮಾತನ್ನು ನಡೆಯಿ ಸುವುದರಲ್ಲಿ ಭಾವನಿಂದ ತುಸು ತಪ್ಪಾದರೆ ತೀರಿತು; ಮೂರು ಮೂರು ದಿನ ಮಾತಿಲ್ಲ. ಮೋರೆಯ ಗಂಟು ಬಿಚ್ಚುವುದಿಲ್ಲ. ಆದರೆ ನಾನೊಂದು ಗುರುತು ಮಾಡಿ ಇಟ್ಟಿದ್ದೆನು. ಪ್ರತಿ ತಿಂಗಳ ಮೊದಲನೆಯ ತಾರೀಕಿನ ದಿನ ಮಾತ್ರ ಅಕ್ಕನ ಉರಿಮೋರೆಯು ಅಡಗಿ ನಗೆಯು ನಲಿದಾಡುವುದು. ಅಂದು ಭಾವನಿಗೂ ಆನಂದ. ಇಬ್ಬರೂ ನಗೆಯಾಡು

ವರು; ಕೆಲೆದಾಡುವರು. ಆಗ ನಾನು "ದಿನಾಲು ಒಂದನೆಯ ತಾರೀಕು ಏಕಿರಲಿಕ್ಕಿಲ್ಲ" ಎಂದು ಕೊಳ್ಳುವೆನು. ಇಬ್ಬರೂ ನಗೆಯಾಡುತ್ತಿದ್ದಾಗ ನನಗೊಳ್ಳೇ ಆನಂದ ವಾಗುತ್ತಿದ್ದಿತು.

ಯಾವುದೋ ತಿಂಗಳ ಮೊದಲನೆಯ ತಾರೀಕು. ಅಂದು ಭಾವನಿಗೆ ಸಂಬಳ ಬರುವ ದಿನ. ಭಾವನಿಗೆ ಬೇಕಾದ ಎಲ್ಲ ಅನುಕೂಲತೆಗಳನ್ನೂ ಅಕ್ಕನು ಕೈಮುಟ್ಟ ಮಾಡಿ ಕೊಟ್ಟಳು. ಭಾವನ ಸ್ನಾನವಾಗಿ ಊಟಕ್ಕೆ ಕುಳಿತ. ನಾನೂ ಕುಳಿತಿದ್ದೆನು. ಊಟ ನಡೆದಿರಲು "ಹೋದ ತಿಂಗಳವೇ ತಪುವೆನೆಂದು ಹೇಳಿದ್ದಿರಿ; ಆಗಲಿಲ್ಲ. ಈ ತಿಂಗಳವಾದರೂ ಚಿನ್ನದ ಮುಗ್ಗೀಮಾಲೆಯನ್ನು ಮರೆಯದೆ ತರಬೇಕು-" ಎಂದು ಅಕ್ಕನು ಗಂಡ ಸರನ್ನು ಬಲೆಯಲ್ಲಿ ಕೆಡಹುವ ನೋಟ-ನಗೆ-ಅಭಿನಯಗಳಿಂದ ಹೇಳಿದಳು. ಆಗಿನ ಅವಳ ರೀತಿಯನ್ನು ಕಂಡವರು "ಇವಳು ಗಂಡನಿಗೆಷ್ಟು ವಿಧೇಯಳಾಗಿ ನಡೆಯುವಳೋ" ಎಂದು ಕೊಂಡಾಡಬಹುದಾಗಿದ್ದಿತು. ಆಗ ಇದೊಂದೂ ನನಗೆ ತಿಳಿಯದು. ಅಂದಿನ ಚಿತ್ರವು ಇಂದೆಯೂ ನನ್ನ ಕಣ್ಣಮುಂದೆ ಕಟ್ಟಿರುವುದರಿಂದ ಅದರ ಬಗೆಯನ್ನು ಕಂಡುಹಿಡಿದು ಬಣ್ಣಿಸಿದ ಈಗಿನ ನನ್ನ ಮಾತುಗಳಿವು.

"ನೀನು ನಗೆಮೊಗದಿಂದ ನಲಿದಾಡುತಿದ್ದರೆ, ಒಂದೇ ಮುಗ್ಗಿಯ ಮಾಲೆಯೇಕೆ! ಭಾಗ್ಯದ ಲಕ್ಷ್ಮಿಯನ್ನೇ ಬಾಗಿಲಲ್ಲಿ ತಂದು ಕೂಡಿಸುವೆನು. ಆದರೆ ನಿನ್ನ ಉರಿ ಮೋರೆಯನ್ನು ಕಂಡೊಡನೆಯೇ ಬಾಳುವೆಯೇ ಬೇಡವಾಗಿ ಸನ್ಯಾಸತೆಗೆದುಕೊಳ್ಳಬೇಕೆಂದೆನಿಸುವುದು" ಭಾವನು ನಗುನಗುತ್ತ ನುಡಿದನು.

ಅಕ್ಕನು ನಾಚಿ ಮೋರೆ ಕೆಳಗೆ ಮಾಡಿ "ಸಾಕು ಇಲ್ಲದ್ದೊಂದು ಮಾತು" ಎಂದು ನುಡಿದು ಮತ್ತೆ ಮೋರೆಯತ್ತಿ "ಮರೆಯದೆ ತರುವಿರಲ್ಲವೇ" ಎಂದು ಬಾಯಿಕಣ್ಣುಗಳೆರಡರಿಂದಲೂ ಮುಗುಳುನಗೆ ನಗುತ್ತ ಕೇಳಿದಳು.

ಭಾವ ಒಪ್ಪಿಕೊಂಡನು. ಊಟಮಾಡಿ ಕೈ ತೊಳೆದುಕೊಂಡು ಆಫೀಸಿಗೆ ಹೊರಟುಹೋದನು.

ಅಂದು ಅಕ್ಕನ ಆನಂದಕ್ಕೆ ಅಳತೆಯೇ ಇರಲಿಲ್ಲ. ಮನೆಗೆ ಬಂದವರೆಲ್ಲರ ಮುಂದೆಯೂ ಮುಗ್ಗಿಯ ಮಾಲೆಯ ಮಾತೇ ಮಾತು. "ಹಾಗಾದರೇನು ಬಿಡವ್ವಾ ನೀನು ಪುಣ್ಯವಂತಿ. ಹೇಳಿದಂತೆ ಕೇಳುವ ಗಂಡ ಸಿಕ್ಕಿದ್ದಾನೆ. ಇಂದು ಮುಗ್ಗಿಯ ಮಾಲೆಯನ್ನೂ ಮಾಡಿಸುವಿ! ನಾಳೆ ಬಂಗಾರದ ಮನೆಯನ್ನೂ ಕಟ್ಟಿಸುವಿ!" ಎಂದಾರೋ ಅಂದರು. ತಲೆಗೊಂದು ಮಾತಾಡಿ ಅಕ್ಕನ ದೈವವನ್ನು ಕೊಂಡಾದಿದರು. ಅಕ್ಕನು ಕೃತಕೃತ್ಯಳಾದವಳಂತೆ ನಗುತ್ತಿದ್ದಳು ಮಾತ್ರ.

"ಆಫೀಸಿನಿಂದ ಹಸಿದು ಮನೆಗೆ ಬರಬಹುದು" ಎಂದು ಹೇಳಿ, ಎಂದೂ ನಾನು ಕಾಣದ ಕಳವಳವನ್ನು ತೋರಿ, ಭಾವನಿಗಾಗಿ ಅಕ್ಕನು ತಿಂಡಿಯ ಸಿದ್ಧತೆಯನ್ನು ಮಾಡಿ

ಟ್ಟಳು. ಅಂದು ಅಕ್ಕನಿಗೆ ಹಗಲು ಇಪ್ಪತ್ತುನಾಲ್ಕು ತಾಸಿನದಿದೆಯೇನೋ ಎನಿಸಿರ ಬಹುದು. ಸೂರ್ಯನಾವಾಗ ಮುಳುಗುವನೋ ಆಫೀಸು ಯಾವಾಗ ಬಿಡುವದೋ, ಎಂದು ಆತುರವಾಗಿರಬಹುದು. ಭಾವನಾವಾಗ ಬರುವನೋ ಎಂಬ ಯೋಚನೆಯೇ ಯೋಚನೆ. ಕಡೆಗೊಮ್ಮೆ ಸಂಜೆಯಾಯಿತು. ಅಕ್ಕನ ಅರಳಿದ ಕಣ್ಣು ಬೀದಿಯ ಬಾಗಿಲ ಕಡೆಗೆಯೇ ನೋಡುತ್ತಿದ್ದುವು. ವನದಲ್ಲಡಗಿದ ಕೃಷ್ಣನು ರಾಧೆಯು ನಿಷ್ಠೆಗೆ ಮೆಚ್ಚಿ ಮೈದೋರಿದಂತೆ ಭಾವನು ಆಫೀಸಿನಿಂದ ಒಮ್ಮೆ ಬಂದು ಬಿಟ್ಟನು. ನಾನು—ಅಕ್ಕ ಕುಳಿತಲ್ಲಿಯೇ ಬಂದನು.

"ನಾನು ಹೇಳಿದ ಒಡವೆಯನ್ನು ತಂದುದಾಯಿತೇನು!" ಅಕ್ಕನು ಆತುರದಿಂದ ಕೇಳಿದಳು.

"ಇಲ್ಲ; ಇಂದೆಯೂ ತರಲು ಆಗಲಿಲ್ಲ" ಭಾವ ಸಮಾಧಾನದಿಂದ ನುಡಿದನು.

"ಅದೇಕೆ? ನೆನಪಾಗಲಿಲ್ಲವೇ? " ಇನ್ನಷ್ಟಾತುರದಿಂದ ಅಕ್ಕ ಕೇಳಿದಳು. "ನೆನ ಪೇನೋ ಆಯಿತು. ಆದರೆ ರಾಮರಾಯರಿರುವರಲ್ಲ! ಪಾಪ ಅವರ ಮಗಳು ಹಡೆದಿರು ವಳು. ಐವತ್ತು ರೂಪಾಯಿಗಳನ್ನು ಕೈಗಡ ಕೊಡಿರೆಂದು ಒಳ್ಳೇ ದೈನ್ಯದಿಂದ ಕೇಳಿ ದುದರಿಂದ ರೂಫಾಯಿಗಳನ್ನವರಿಗೆ ಕೊಟ್ಟೆನು. ಇನ್ನು ಹದಿನೈದು ದಿನಗಳಿಗೆ ಮರಳಿ ಕೊಡುವರು. ರೂಪಾಯಿ ಬಂದ ಕೂಡಲೇ ಒಡವೆಯನ್ನು ತರಬೇಕೆಂದು ಇಂದು ಬಿಟ್ಟೆನು" ಭಾವ ಮತ್ತೆ ಸಮಾಧಾನದಿಂದಲೇ ಉತ್ತರಕೊಟ್ಟನು.

ಆಯಿತು; ಅಕ್ಕನ ಮೋರೆ ಓರೆಯಾಯಿತು. ಮನವು ಕೊಂಕಿತು. ಹುಬ್ಬು ಗಳು ಗಂಟು ಹಾಕಿದುವು. ಮಾನ ಮುಕ್ಕಾಯಿತು. ಬಾಯೀಯೇನೋ ಗೊಣ ಗುಟ್ಟ ಹತ್ತಿತು. ಇನ್ನೂ ಮುಂದೆ ಏನಾಗುತ್ತಿತ್ತೋ ಏನೋ! ಯಾರೋ ಕರೆಯಲಿಕ್ಕೆ ಬಂದುದರಿಂದ ಭಾವ ಮತ್ತೆ ಹೊರಗೆ ಹೋದ.

ಅಕ್ಕ ಒಳಗೆ ಹೋದಳು. ಬಹಳ ಹೊತ್ತಾಯಿತು. ಹೊರಗೆ ಬರಲೇ ಇಲ್ಲ. "ಅಕ್ಕಾ! " ಎಂದು ಕರೆದೆ. ಏನಾದರೂ ತಿಂದು ನುಂಗುತ್ತಿರುವ ಸ್ವರದಲ್ಲಿ "ಓ,ಬಾರೇ ಇಲ್ಲಿ" ಎಂದು ಅಕ್ಕ ನನ್ನನ್ನು ಒಳಗೆ ಕರೆದಳು. ಒಳಗೆ ಹೋದೆ. ಭಾವನಿಗೆಂದು ಮಾಡಿದ ತಿಂಡಿಯಲ್ಲಿ ಅರ್ಧಕ್ಕಿಂತ ಹೆಚ್ಚು ತೀರಿತ್ತು. ಮಧ್ಯಾಹ್ನದಲ್ಲಿ ಉಳಿದ ಅನ್ನ ವನ್ನೂ, ಭಾವನಿಗೆಂದು ಮಾಡಿದ ತಿಂಡಿಯಲ್ಲಿ ಕೊಂಚವನ್ನೂ, ನನಗೆ ಹಾಕಿದಳು. ನಾನೂ ಊಟ ಮಾಡಿದೆನು. ಅಕ್ಕ ಹಾಸಿಗೆ ಹಾಸಿ ಮಲಗಿ ಬಿಟ್ಟಳು. ನಾನು ಮಗು ವಿನ ತೊಟ್ಟಿಲು ತೂಗುತ್ತ ಕುಳಿತಿದ್ದೆನು. ಭಾವನ ಊಟದ ಏರ್ಪಾಡನ್ನೇನೂ ಮಾಡದೆ ಮಲಗಿದುದನ್ನು ಕಂಡು ಅಕ್ಕನ ಮೈಯಲ್ಲಿ ಅವತಾರಸಂಚಾರವಾಗಿದೆ ಯೆಂದು ತಿಳಿದೆನು. ನಾನು ಆರುವರುಷದವಳು ಆಗ ಏನು ತಾನೇ ಮಾಡುವಂತಿದ್ದೆ!

೭॥ ಗಂಟೆಗೆ ಭಾವನು ಮನೆಗೆ ಬಂದನು. ಮೊಗಸಾಲೆಯಲ್ಲಿ ಕುಳಿತೇ ಕುಳಿತನು. ಊಟಕ್ಕೆ ಯಾರೂ ಎಬ್ಬಿಸಲೇ ಇಲ್ಲ. ಎದ್ದು ತಾನೇ ಒಳಗೆ ಬಂದನು. ಅಕ್ಕ ಮಲಗಿದುದನ್ನು ನೋಡಿದನು. "ಏನೇ ಚಿತ್ರಾ! ಇಂದು ಅಡಿಗೆ-ಊಟ ಇಲ್ಲವೇನೇ?" ಎಂದು ಕೇಳಿದನು. "ಏನೋ ಅಪ್ಪ! ಅಕ್ಕ ಮೂರೂ ಸಂಜೆಯಿಂದಲೂ ಮಲಗಿಬಿಟ್ಟಿದ್ದಾಳೆ" ಎಂದು ನಾನೆಂದೆನು. ಭಾವನು ಅಕ್ಕನ ಬಳಿಗೆ ಹೋಗಿ ಏಳೆಂದು ಪರಿಪರಿಯಿಂದ ಬೇಡಿಕೊಂಡನು. ತಪ್ಪಾಯಿತೆಂದನು. "ನಾಳೆಯೇ ನೀನು ಹೇಳಿದ ಒಡವೆಯನ್ನು ತಂದು ಕೊಡುವೆನು" ಎಂದು ಹೇಳಿದನು. ಆದರೇನು! ಅಕ್ಕನು ಮಿಟ್ಟನೆ ಮಿಸುಕಲಿಲ್ಲ. ಇದೆಲ್ಲವನ್ನೂ ನೋಡಿ ನನಗೆ ಅಕ್ಕನ ವಿಷಯವಾಗಿ ಬೇಸರ; ಭಾವನ ವಿಷಯವಾಗಿ ಕನಿಕರ.

ಭಾವ ಬೇಸತ್ತು ಬೆಂಡಾಗಿ, ಹೋಗಿ ಪಡಸಾಲೆಯಲ್ಲಿ ಕುಳಿತು ಕೊಂಡ. ಎದುರು ಮನೆಯ ಗೋವಿಂದರಾಯರು ತಮ್ಮ ಮನೆಯಲ್ಲಿಂದಲೇ ಕೂಗಿ "ಏನು ರಾಯರೇ! ಊಟವಾಯಿತೇ? " ಎಂದು ಭಾವನನ್ನು ಕೇಳಿದರು. "ಹೂ ಆಯಿತು, ನಿಮ್ಮದಾಯಿತೋ? " ಎಂದು ಮರಳಿ ಭಾವ ಕೇಳಿದ. ನನಗೆ ನಗೆ ಬಂದಿತು. ಮೆಲ್ಲನೆ ನಕ್ಕು ಬಿಟ್ಟೆನು. ನಮ್ಮಕ್ಕನು ಉಂಡು ಉಪವಾಸಿ, ಭಾವನು ಉಪವಾಸವಿದ್ದು ಉಂಡವನು. ಹೇಗಿದೆ ನೋಡಿ ರೀತಿ !

ಮರುದಿನ ಮುಂಜಾವಿನಲ್ಲಿ ಎದ್ದು ಭಾವ ಮಗ್ಗಿಯ ಮೂಲೆಯ ತಂದಾಗಲೇ ಅಕ್ಕ ಮುಸುಕ ತೆಗೆದಳು. ದಿನದ ಮನೆಯ ಕೆಲಸಕ್ಕೆ ತೊಡಗಿದಳು. ನಮ್ಮ ತಂದೆ ದಿನಾಲು ಸಂಜೆಯಲ್ಲಿ ನಮಗೆ ಹಾಡ ಕಲಿಸುತಿದ್ದ. ಅದರಲ್ಲಿ " ತಂದು ಬಂದರೆ ತನ್ನ ಪುರುಷಗೆ ಬನ್ನಿ ಬಳಲಿದಿರೆಂಬಳು । ಒಂದು ದಿನವು ತಾರದಿದ್ದರೆ ಹಂದಿ ನಾಯಂತೆ ಬೊಗಳ್ವಳು" ಎಂಬುದೊಂದು ನುಡಿಯನ್ನೂ ನಾನು ಕಲಿತಿದ್ದೆನು. ನಮ್ಮಕ್ಕನ ಅಂದಿನ ರೀತಿಯನ್ನು ಕಂಡು, ಆಗ ಈಗಿನಂತೆ ನಾನು ದೊಡ್ಡವಳಾಗಿದ ರೆ ನನಗೆ ಈ ನುಡಿಯು ನೆನಪು ಆಗದೆ ಹೋಗುತ್ತಿರಲಿಲ್ಲ.

" ಇಷ್ಟು ಚಂಡಿತನದಿಂದ ನಡೆದರೂ ಭಾವ, ಅಕ್ಕನನ್ನು ಎಷ್ಟೋ ಪ್ರೀತಿಯಿಂದ ನಡೆಯಿಸಿಕೊಳ್ಳುವನು. ಸಿಟ್ಟಿಗೇಳನು. ಭಾವನಿಗೇನು ಹುಚ್ಚೇ ! ಅವನಿಗೆ ಬುದ್ಧಿ ಕೊಂಚ ಕಡಿಮೆಯೇ" ಎಂದು ನಾನಾಗ ಅಂದು ಕೊಂಡೆ. ಆದರೆ ಈಗಿನ ನನ್ನ ಅನುಭವದಿಂದ " ಭಾವನಿಗೇನೂ ಬುದ್ಧಿ ಕಡಿಮೆಯಲ್ಲ. ನನಗೇ ಆ ವಿಷಯವು ಆಗ ತಿಳಿಯದು. ಭಾವನಿಗೆ ಹುಚ್ಚೆಂದುದು ನನ್ನ ಹುಚ್ಚುತನವೇ" ಎಂದು ಈಗೇನೋ ಸರಿಯಾಗಿ ಕಂಡು ಹಿಡಿದಿರುವೆನು.

ನಮ್ಮಣ್ಣನ ಉಪನಯನಕ್ಕೆಂದು ನಾನು—ಅಕ್ಕ ನಮ್ಮೂರಿಗೆ ಬಂದೆವು. ಉಪನಯನದ ಕೆಲಸ ಮುಗಿಯಿತು. ಒಂದುದಿನ, ಅಮ್ಮ-ಚಿಕ್ಕಮ್ಮ-ಅಕ್ಕ-ಇನ್ನೂ ಯಾರೋ

ಹೆಂಗಸರು ಮಾತಾಡುತ್ತ ಕುಳಿತಾಗ ಅಕ್ಕನ ಮಗ್ಗಿಯ ಮಾಲೆಯ ಕತೆಯನ್ನು-ಇದ್ದುದಿದ್ದಂತೆಯೇ-ಒಂದೂ ಬಿಡದೆ-ಎಲ್ಲವನ್ನೂ ಹೇಳಿದೆನು. ಹೇಳುವಾಗ ನಾನು ಅಕ್ಕನ ಕಡೆಗೆ ಆಗಾಗ ಮುಗುಳು ನಗೆ ನಗುತ್ತ ನೋಡುತ್ತಿದ್ದೆನು. ಅಕ್ಕ ಸಿಟ್ಟಿನ ನೋಟದಿಂದ ನನ್ನ ಕಡೆಗೆ ನೋಡುತ್ತಿದ್ದರೂ ಮುಖದಲ್ಲಿ ಮುಗುಳು ನಗೆಯು ವಾಸಿಸುತ್ತಿತ್ತು. ನನ್ನ ಮಾತು ಕೇಳಿ ಎಲ್ಲರೂ ನಕ್ಕರು. ಅಕ್ಕನಿಗೆ ಚೇಷ್ಟೆ ಮಾಡಿದರು. ನಮ್ಮ ತಾಯಿ ಅಕ್ಕನಿಗೇನಾದರೂ ಸಿಟ್ಟುಮಾಡಬಹುದೆಂದು ನನ್ನ ಕಲ್ಪನೆ. ಆದರೆ ಅದನ್ನೇನೂ ಕೇಳಬೇಡಿ. ಇದು ನನ್ನ ಮೊದಲನೆಯ ಹುಚ್ಚುತನದ ಮಾದರಿಯಾಯಿತು.

ಎಳೆಯ ತನದ ಇನ್ನೊಂದು ನೆನಪನ್ನು ಇಲ್ಲಿಯೇ ಹೇಳಿಬಿಡಬೇಕೆಂದು ನನ್ನ ಬಯಕೆ. " ಇದೇನು ! ಕವಿತೆಯಲ್ಲ ಕಾದಂಬರಿಯಲ್ಲ; ಒಣರಗಳೆಯ ರಾಮಾಯಣ" ಎಂದೆಲ್ಲರೂ ಅನ್ನಬಹುದು. "ಬೇಸರ ಬಂದಿರದಿದ್ದರೆ ಮುಂದೆ ಓದಿ ನೋಡಿ! ಬಂದಿದ್ದರೆ ಬಿಟ್ಟು ಬಿಡಿ! " ಎಂದು ನಾನೂ ಅನ್ನುವೆನು.

ಇನ್ನು ಹೇಳಬೇಕೆಂದಿರುವ ನನ್ನ ನೆನಪು ಒಳ್ಳೇ ಬೆಲೆಯುಳ್ಳದೆಂದು ನನಗೆನಿಸುವುದು. ನಮ್ಮಕ್ಕನ ಮನೆಯಿಂದ ಬಂದ ಬಳಿಕ ಆದ ಸಂಗತಿಯಿದು.

ನಮ್ಮೂರ ಕರಣಿಕರ ಮಗ, ನನ್ನಕಿಂತಲೂ ೩--೪ ತಿಂಗಳಿಗೆ ಕಿರಿಯ. ಹೆಸರೋ ಕಿಟ್ಟನೆಂದು ನನಗೆ ಗೊತ್ತು. ನನ್ನದೂ ಕಿಟ್ಟನದೂ ಗೆಳೆತನ ಬಹಳ. ಕಿಟ್ಟನ ತಾಯಿ ಸೀತಮ್ಮ ನನ್ನನ್ನೊಳ್ಳೇ ಪ್ರೀತಿಸುವರು. ನಾನು-ಕಿಟ್ಟ ಹಗಲೆಲ್ಲ ಜೊತೆಯಾಗಿಯೇ ಆಡುತಿರುವೆವು. ನಡು ನಡುವೆ ಒಂದೊಂದು ದಿನ ಬಡಿದಾಡಿದರೂ ಮರುದಿನವೇ ಮರಳಿ ಮಾತಾಡುವೆವು. ಕೂಡಿ ಆಡುವೆವು. ನಮ್ಮ ನಮ್ಮ ಮನೆಯವರು ಏನಾದರೂ ತಿಂಡಿ ತಿನಸುಗಳನ್ನು ಕೊಟ್ಟರೆ ನಾವಿಬ್ಬರೂ ಕೂಡಿಯೇ ತಿನ್ನುವೆವು. ಕರಣಿಕರಿಗೆ ಕಿಟ್ಟನೊಬ್ಬನೇ ಮಗನು. ತಾಯಿ ತಂದೆಗಳ ಸಲಿಗೆ ಹೆಚ್ಚು. ಆದುದರಿಂದ ಮನೆಯಲ್ಲಿ ಕಿಟ್ಟನ ತುಂಟತನದ ಹಾವಳಿ ಬಹಳ.

ಕಾರ್ತಿಕ ಶುದ್ಧ ಏಕಾದಶಿಯ ದಿನ. ಮರುದಿನವೇ ತುಳಸಿಯ ಮದುವೆ. ಎಲ್ಲರ ಮನೆಯಲ್ಲಿಯೂ ತುಳಸಿಯ ಕಟ್ಟೆಗಳನ್ನು ಸಾರಿಸುವುದು, ಸುಣ್ಣ ಹಚ್ಚುವುದು, ಬಣ್ಣದಿಂದ ಚಿತ್ರ ತೆಗೆಯುವುದು, ಮೊದಲಾದ ಕೆಲಸಗಳು ನಡೆದಿವೆ. ಅಂದು ನಮ್ಮ ಮನೆಯಲ್ಲಿ ಕೆಲವರಿಗೆ ನಿರಾಹಾರ, ಕೆಲವರಿಗೆ ಇಮ್ಮಡಿ ಆಹಾರ, "ದಶಮಿ" " ಅಕ್ಕಿಯ ಉಸಳಿ " ಎಂದು ಬೇರೆ ಹೆಸರಿನಿಂದ ಮಾಡಿದ ಅನ್ನ ರೊಟ್ಟಿಗಳ ಉಪಹಾರವನ್ನು ನಾನು ಮಾಡಿದೆನು. ಉಪಹಾರವಾದೊಡನೆಯೆ ಕಿಟ್ಟನ ಮನೆಗೆ ಆಡಲು ಹೋದೆನು.

ನಾನು ಹೋದಾಗ ಮೊಗಸಾಲೆಯಲ್ಲಿ ಕರಣಿಕರು ಕಾಗದದ ಗಂಟು ಬಿಚ್ಚಿಕೊಂಡು ಕುಳಿತಿದ್ದರು. ಕಿಟ್ಟನ ತಾಯಿ ಸೀತಮ್ಮ, ನಡುಮನೆಯಲ್ಲಿ ಮನೆಗೆಲಸಗಳನ್ನು ಮಾಡುತ್ತ ಕುಳಿತಿದ್ದರು. ಕಿಟ್ಟನು ಚಿಕ್ಕ ಬಂಡಿಯನ್ನು ತೆಗೆದುಕೊಂಡು ನಡು

ಮನೆಯಿಂದ ಪಡಸಾಲೆಗೂ, ಪಡಸಾಲೆಯಿಂದ ನಡುಮನೆಗೂ ಎಳೆಯುತ್ತ ಓಡಾಡುತ್ತಿದ್ದನು. ನಾನೂ ಹೋಗಿ ಕಿಟ್ಟನೊಡನೆ ಆಡತೊಡಗಿದೆನು.

"ಏನೋ ಕಿಟ್ಟ ನಿನ್ನ ಕುಣಿದಾಟ! ಹೊರಗೆ ಆಡಲು ನಿನಗೆ ಸ್ಥಳವೇ ಇಲ್ಲವೇನು? ಇಂದೇ ಸಾರಿಸಿದ ಮನೆ, ನೆಲವೆಲ್ಲ ಒಡೆದು ಹೋಯಿತು. ನೋಡೆ ಚಿತ್ರಾ! ನೀನೂ ನಿಮ್ಮ ಮನೆಯಲ್ಲಿ ಹೀಗೆಯೇ ಮಾಡುವಿ ಏನವ್ವಾ?" ಸೀತಮ್ಮ ಬೇಸರದ ದನಿಯಿಂದ ನುಡಿದರು.

"ನಾನು ಇಲ್ಲೇ ಆಡುವವನು; ನೀನೇನು ಮಾಡುವೆ" ಕಿಟ್ಟನು ಗಟ್ಟಿಸಿ ಉತ್ತರ ಕೊಟ್ಟನು.

"ನಿನ್ನ ಕಿಡಿಗೇಡಿತನಕ್ಕೆ ಕಡೆಯಿಲ್ಲದಾಯಿತಪ್ಪ! ಛೀ, ಛೀ, ಇಲ್ಲದ್ದೊಂದು ಇಗ್ಗೆಲಸ ಮಾಡುವುದು ಒಳ್ಳೇತನವಲ್ಲ. ನಿನ್ನೆ ದೊಂಬೆಯಾಡಿ ಬೇಳೆ ಅಕ್ಕಿ ಬೆರಿಸಿ ಬಿಟ್ಟೆ. ಅವನ್ನೀಗ ನೆಟ್ಟಗೆ ಮಾಡಲು ಸುಮ್ಮಸುಮ್ಮನೆ ೨-೩ ತಾಸು ಕಳೆಯಬೇಕಾಯಿತು. ಸಣ್ಣವನೆಂದು ಕೈಕಾದರೆ ಹೆಚ್ಚೆಚ್ಚು ಮಾಡುವಿ. ಇನ್ನು ಮುಂದೆ ನಿನಗೆ ಕೈತೋರಿಸದೆ ಬಿಡುವುದಿಲ್ಲ. ಅದರಿಂದಲೇ ನೀನು ಹಾದಿಗೆ ಬರುತ್ತಿ" ಸೀತಮ್ಮ ಸಿಟ್ಟಿನಿಂದ ಗದರಿಸಿದರು.

"ಅದೇನು ಮಾಡುತ್ತಿ ಮಾಡು" ಎಂದವನೆ ಕಿಟ್ಟನು ಬೇರೆ ಬೇರೆ ಮಾಡಿಟ್ಟದ್ದ ಬೇಳೆ ಅಕ್ಕಿಗಳನ್ನು ಮರಳಿ ಬೆರಿಸಿ ಬಿಟ್ಟನು.

"ನಾನೊಲ್ಲೆ ನಮ್ಮವ್ವ ಈ ಹುಡುಗನಿಗೇನು ಮಾಡಬೇಕೋ ತಿಳಿಯಲೊಲ್ಲದು" ಎಂದು ನುಡಿದು ಸೀತಮ್ಮ ಕಿಟ್ಟನನ್ನು ಹೇಗೆಹೇಗೋ ಬಯ್ದರು.

ಬೈದಂತೆಯೇ ಕಿಟ್ಟನು ಮರಳಿ ಬೈದ, ನನಗೆ ಕಿಟ್ಟನ ವಿಷಯವಾಗಿ ಸಿಟ್ಟು ಬಂದಿತು. ಏನೂ ಮಾತಾಡದೆಯೆ ಬೆಪ್ಪಾಗಿ ನಿಂತು ಬಿಟ್ಟಿದ್ದೆನು.

ಸೀತಮ್ಮನಿಗೆ ತಡೆಯಲಾರದಷ್ಟು ಸಿಟ್ಟುಬಂದಿತು. ಅವರು ದಡದಡನೆ ಪಡಸಾಲೆಗೆ ಹೋಗಿ ಕರಣಿಕರೆದುರಿನಲ್ಲಿ ನಿಂತು "ಹುಡುಗನ ತುಂಟತನವು ಘನವಾಯಿತು. ಈಗ ಮೂರು ತಾಸುಗಳಿಂದ ಕಷ್ಟಬಟ್ಟು ಬೇರೆ ಬೇರೆ ಮಾಡಿಟ್ಟದ್ದ ಬೇಳೆ ಅಕ್ಕಿಗಳನ್ನು ಬೇಕೆಂತಲೆ ಮತ್ತೆ ಬೆರಿಸಿಬಿಟ್ಟನು. ಸಿಟ್ಟು ಮಾಡಿ ಬಯ್ದರೆ ಮರಳಿ ಬಯ್ಯುವನು, ಇವನಿಗೇನು ಮಾಡಬೇಕು. "ಸಲಿಗೆಯ ನಾಯಿ ತಲೆಗೇರಿತಂತೆ" ಎಂದು ಸಿಡಿಯುತ್ತ ನುಡಿದರು.

ಲೆಕ್ಕದಲ್ಲೇನು ತಪ್ಪುಗಂಟಾಗಿತ್ತೋ ಏನೋ! ಕರಣಿಕರು ಒಳ್ಳೇ ಗಂಭೀರತನದಿಂದ ಕುಳಿತಿದ್ದರು. ಕಣ್ಣುಮುಟ್ಟೆ ಕಿಟ್ಟನ ದೊಂಬೆಯನ್ನೂ ಕಂಡಿದರು. ಸೀತಮ್ಮನ ಮಾತು ಕೇಳಿದ ಬಳಿಕಂತೂ ಒಳ್ಳೇ ಸಿಟ್ಟಿಗೊಂಡರು. ಬಹಳ ಹೊತ್ತಿನಿಂದಲೂ ಬಾಯಲ್ಲಿ

ಹಿಡಿದುಕೊಂಡಿದ್ದ ತಂಬಾಕನ್ನು, ಎದ್ದು ಉಗುಳಿ “ಎಲ್ಲಿರುವನವ! ನಡೆ, ಅವನಿಗೊಂದು ಕೈತೋರಿಸುತ್ತೇನೆ” ಎಂದು ಕೈಯಲ್ಲಿ ರೂಲುಪಟ್ಟಿಯನ್ನು ಹಿಡಿದುಕೊಂಡು ಕಾಲಪ್ಪಳಿಸುತ್ತ ಕರಣಿಕರು ಬಂದರು. ಕಿಟ್ಟನು ಗಾಬರಿಯಾಗಿ ಬಂಡಿಯನ್ನಲ್ಲೇ ಬಿಟ್ಟು, ಓಡಿ ಹೋಗಬೇಕೆಂದು ಯತ್ನಿಸಿದನು; ಸಾಧ್ಯವಾಗಲಿಲ್ಲ. ಕರಣಿಕರು ಬಂದು ಕಿಟ್ಟನನ್ನು ಬಡಿಯಲಿಕ್ಕೆ ಕೈಮೇಲೆತ್ತಿದರು. ನನ್ನೆದೆ ದಡದಡ ಹಾರಹತ್ತಿತು. ಕಿಟ್ಟನ ಮೇಲಿನ ಸಿಟ್ಟು ಇಳಿದುಹೋಗಿ ‘ಅಯ್ಯೋ ಪಾಪ’ ಎನಿಸಿತು. ಎಂತಹ ಏಟು ಬೀಳುವುದೋ ಎಂದು ಬೆವರುಗಣ್ಣುಗಳಿಂದ ನೋಡುತ್ತಿದ್ದೆನು. ಕರಣಿಕರು ಕೈಯೆತ್ತುತ್ತಿದ್ದಾಗಲೇ ಕಿಟ್ಟ ದುಡುದುಡು ಓಡಿಹೋಗಿ ಸೀತಮ್ಮನಿಗೆ ತೆಕ್ಕೆಬಿದ್ದನು. ಅವನನ್ನೆತ್ತಿಕೊಂಡು ಸೀತಮ್ಮ ಮುದ್ದಿನ ಮೇಲೆ ಮುದ್ದು ಕೊಡುತ್ತ ಎದೆಗವಚಿಕೊಂಡರು. ಕರಣಿಕರು “ಕಳ್ಳಾ ನಿನ್ನದೆಷ್ಟು ಕಾಟವೋ” ಎಂದು ನೊಣ ಜಾಡಿಸಿದಂತೆ ಬಡಿಯುವ ಸೋಗು ಮಾಡಿದರು. ಸೀತಮ್ಮ ಅವನನ್ನು ಸೆರಗಿನಿಂದ ಮುಚ್ಚಿಕೊಂಡರು. “ನೀನೇ ಸಲಿಗೇ ಕೊಟ್ಟು ಹುಡುಗನನ್ನು ಕೆಡಿಸಿರುವಿ”. ಎಂದು ಕರಣಿಕರು ಮೋರೆ ಗಂಟು ಹಾಕಿ ನುಡಿದು, ಮರಳಿ ಮೊಗಸಾಲೆಗೆ ಹೋಗಿ ಕುಳಿತುಕೊಂಡರು. ಸೀತಮ್ಮನ ರೀತಿಯನ್ನು ಕಂಡು ನನಗೆ ಆಶ್ಚರ್ಯವಾಯಿತು. “ನಮ್ಮ ಭಾವನಂತೆಯೇ ಇವಳೂ ಹುಚ್ಚಿಯೇನೋ” ಎಂದು ಮನಸ್ಸಿನಲ್ಲಿ ಅಂದು ಕೊಂಡೆ. ಹಾಗೆಯೇ ಮನೆಗೆ ಬಂದು ಬಿಟ್ಟೆ.

ಮನೆಯಲ್ಲಿ ಅಮ್ಮ ಮರುದಿನ ತುಳಸಿಯ ಮದುವೆಗಾಗಿ ಹಪ್ಪಳ ಸಂಡಿಗೆ ಮಾಡಿ ಮುಗಿಸಿ, ಅದೇ ಸೇವಿಗೆ ಮಾಡುವುದಕ್ಕೆ ಕುಳಿತಿದ್ದಳು. ನಾನುಹೋಗಿ ಅಮ್ಮನ ಹತ್ತರ ಕುಳಿತೆ. ನನ್ನ ಮೋರೆಯ ಮೇಲೆ ಅದೆಂತಹದೋ ಒಂದು ನಗೆಯ ಝಳುಕು ಮೂಡಿತ್ತು ಎಂದು ಕಾಣುವುದು.

“ಏನೋ ವಿಶೇಷವಿದ್ದಂತೆ ಕಾಣುತ್ತದೆ. ಮತ್ತೇನಮ್ಮಾ ಹೊಸ ಸಮಾಚಾರ” ನಮ್ಮಮ್ಮ ನನ್ನ ನಗೆಯ ಬಗೆಯನ್ನರಿತು ಕೇಳಿದಳು.

“ಏನೂ ಇಲ್ಲ. ಕರಣಿಕರ ಕಿಟ್ಟನ ತಾಯಿ ಸೀತಮ್ಮ ಎಂತಹ ಹುಚ್ಚಿಯೇ!” ನಾನು ಒಳ್ಳೆ ಗಂಭೀರತನದಿಂದ ನುಡಿದೆನು.

“ಅದೇಕೆ ಅವಳ ಹುಚ್ಚುತನವನ್ನು ನೀನೇನು ಕಂಡುಹಿಡಿದಿ ? ಖೋಡಿ ಹುಡಿಗಿ” ಅಮ್ಮನು ನಸುನಗುತ್ತ ಆತುರದಿಂದ ಕೇಳಿದಳು.

ಕರಣಿಕರ ಮನೆಯಲ್ಲಿ ನಡೆದ ಎಲ್ಲ ಸಂಗತಿಯನ್ನು ಒಂದೂ ಉಳಿಯದಂತೆ ಅಮ್ಮನಿಗೆ ಹೇಳಿದೆನು. ಅವಳು ಹು. ಹು. ಎನ್ನುತ್ತಲೂ ನಡುನಡುವೆ ಆಶ್ಚರ್ಯ, ಸಿಟ್ಟು, ನಗೆ ಇವುಗಳ ಭಾವನೆಯನ್ನು ಮೋರೆಯ ಮೇಲೆ ತರುತ್ತಲೂ ಎಲ್ಲ ಕೇಳುತಲಿದ್ದಳು.

ಎಲ್ಲವನ್ನೂ ಹೇಳಿ “ಅಮ್ಮಾ ! ತುಂಟತನ ಮಾಡಿ ಬಾಯಿಗೆ ಬಂದಂತೆ ಬಯ್ದು

ಆ ಕೆಟ್ಟ ಮೋರೆಯ ಮಗುವನ್ನು ಮುದ್ದಿಸಲು ಸೀತಮ್ಮನ ಮನಸ್ಸು ಹೇಗೆ ಮೆಚ್ಚಿದ್ದೀತೆ? ಅವಳಿಗೇನೆನ್ನಬೇಕು? ಹುಚ್ಚಿಯಲ್ಲವೇ ಅವಳು!" ಎಂದು ನುಡಿದೆ.

"ಅವಳಲ್ಲ ಹುಚ್ಚಿ, ನೀನು ಮಾತ್ರ ಹಿರಿಯ ಹುಚ್ಚಿ" ಅಮ್ಮನೆಂದು ಬಿಟ್ಟಳು. ನನಗೊಳ್ಳೆ ಆಶ್ಚರ್ಯವಾಯಿತು. ಆಗ ಅಮ್ಮನ ಮಾತು ಕೇಳಿ ಸುಮ್ಮನೆ ಕುಳಿತೆನು. ಆಗ ಹಾಗಾಯಿತು. ಈಗಲೋ! ನಾನೊಳ್ಳೆ ಮನೆಗೆಲಸದಲ್ಲಿ ತೊಡಗಿರುವೆನು. ನನ್ನ ಮಗು ಚಿನ್ನಮೂರ್ತಿ ಚೀರಿಚೀರಿ ಅಳತೊಡಗುವುದು. ಆಗ ನನಗೊಳ್ಳೆ ಸಂತಾಪವಾಗಿ "ಈ ಹುಡುಗನನ್ನೇನು ಮಾಡಲಿ" ಎನಿಸುವುದು. ಒಂದು ಏಟು ಕೊಡಬೇಕೆಂದು ತೊಟ್ಟಿಲ ಬಳಿಗೆ ಹೋಗುವೆನು. ನನ್ನನ್ನು ನೋಡಿದೊಡನೆಯೆ ಮಗುವಿನ ಮುಖ ಮರುಳುವುದು. ಮಗುವಿನ ಮೋರೆಯನ್ನು ನೋಡಿದೊಡನೆಯೆ ನನ್ನ ಎದೆಯುರಳುವುದು. ಆಗ ನನ್ನ ಸಿಟ್ಟು ಹಿಟ್ಟು ಮುಕ್ಕುವುದು. ನಾನಾಗ ಮಗುವನ್ನೆತ್ತಿಕೊಂಡು ಮುದ್ದಾಡಿ ಮುಂಡಾಡಿ ತೊಡೆಯಲ್ಲಿ ಮಲಗಿಸಿಕೊಳ್ಳುವೆನು. ಮನೆಗೆಲಸವನ್ನೆಲ್ಲ ಮರೆತು ಬಿಟ್ಟು ಮಗುವಿನ ಮೋರೆಯನ್ನು ನೋಡುತ್ತ ತಾಸೋ ಎರಡು ತಾಸೋ ಹಾಗೆಯೆ ಮೈಮರೆತು ಕುಳಿತುಕೊಳ್ಳುವೆನು. ಆಗ ಹಿಂದೆ ನನಗೆ ಅಮ್ಮನೆಂದಿದ್ದ, "ಅವಳಲ್ಲ ಹುಚ್ಚಿ ನೀನು ಮಾತ್ರ ಹಿರಿಯ ಹುಚ್ಚಿ" ಎಂಬ ಮಾತು ನೆನಪಿಗೆ ಬರುವುದು. "ನಾನು ಈಗಿನ ನನ್ನ ಭಾವನೆಯಂತೆ ಆಗ ಹುಚ್ಚಿ; ಆಗಿನ ನನ್ನ ಭಾವನೆಯಂತೆ ಈಗ ಹುಚ್ಚಿ, ಅಂತೂ ನಾನೇನೋ ಹುಚ್ಚಿಯೇ ಸರಿ! ಅಮ್ಮನ ಮಾತೇನೂ ಸುಳ್ಳಲ್ಲ" ಎಂಬ ವಿಚಾರವು ಈಗ ಎಷ್ಟೋ ಸಲ ನನ್ನ ಬಗೆಯಲ್ಲಿ ಬಂದು ಬಂದು ಹೋಗುತ್ತಿರುವುದು. ಇದು ನನ್ನ ಹುಚ್ಚುತನದ ಇನ್ನೊಂದು ಮಾದರಿಯು.

ಗಾಂಧಿಯವರು ಮಹಾತ್ಮರು. ಅವರು ಸತ್ಯದ ಕೂಡ ಹೋರಾಡಿದ ಸಂಗತಿಯನ್ನು ಬರೆದು ತಿಳಿಸುತ್ತಿರುವರಂತೆ, ನಾನೋ ಪಾಪ! ಬಡ ಹೆಂಗಸು. ಕೈಲಾದಮಟ್ಟಿಗೆ ನಾನು ನನ್ನ ಹುಚ್ಚುತನದೊಡನೆ ಹೋರಾಡಿದ ಕತೆಯನ್ನು ಬರೆದು ಜನರಿಗೆ ತಿಳಿಸಬೇಕೆಂದಾಶೆಯಾದುದರಿಂದ ಇಲ್ಲಿ ಬರೆದಿರುವೆನು. ಬೇಡವೆಂದರೆ ಇಷ್ಟಕ್ಕೆ ಬಿಟ್ಟು ಕೊಡುವೆನು. ಬೇಕೆಂದರೆ ಮತ್ತೆ ಬರೆದು ತಮಗೆ ಬೇಸರ ಕೊಡುವೆನು.

ಓಂ ಶಾಂತಿಃ ಶಾಂತಿಃ ಶಾಂತಿಃ

—ಆನಂದಕಂದ.

# ತಾರುಣ್ಯ.

ತಾರುಣ್ಯವೆಂಬುವದು ಕಾರುಣ್ಯದಾಗರವು ।
ತಾರುಣ್ಯವೆಂಬುವದು ಸಾಹಸದ ಸಾಗರವು ।
ತಾರುಣ್ಯವೆಂಬುವದು ವೀರ ವಿಕ್ರಮಮೂರ್ತಿ ತ್ರಿಭುವನವ್ಯಾಪ್ತಕೀರ್ತಿ ॥

ತಾರುಣ್ಯವೆಂಬುವದು ಸಿಂಗರದ ನೆಲೆಗಟ್ಟು ।
ತಾರುಣ್ಯವೆಂಬುವದು ಸೋಜಿಗದ ಹಿರಿಮೆಟ್ಟು ।
ತಾರುಣ್ಯವೆಂಬುವದು ಬದ್ಧಜೀವದ ಮುಕ್ತಿ ಸೃಷ್ಟಿನಿರ್ಮಾಣ ಶಕ್ತಿ ॥೧॥

ತಾರುಣ್ಯವಹುದೆಂದುದಲ್ಲಾಗಬಲ್ಲದೇ? ।
ತಾರುಣ್ಯ ಹುಟ್ಟಿಸಿದುದಿಲ್ಲಾಗ ಸಲ್ಲುದೇ? ।
ತಾರುಣ್ಯ-ಬದುಕಿಸುವೆನೆನೆ ಕೊಲ್ಲಲಾಪನವನಾವನವನೀತಲದೊಳು? ॥

ತಾರುಣ್ಯವಿರುವಲ್ಲಿ ಹೆದರಿಕೆಯು ಹೊಲ್ಲದಾ ।
ತಾರುಣ್ಯವಿರುವನುವೆ ಕಲ್ಪವೃಕ್ಷದ ಬನವು ।
ತಾರುಣ್ಯ ತ್ರೈಮೂರ್ತಿಯೊಳು ಜಗವ ಹುಟ್ಟಿಸುತ್ತುಳಿಸುತ್ತಳಿಸುತಿಹುದು ॥೨॥

ನನ್ನ ನಾಡಿನ ತರುಣ ತಾರುಣ್ಯವೆಲ್ಲಿಹುದು? ।
ನನ್ನ ನಾಡಿನ ಕರುಣ ಕಾರುಣ್ಯವೆಲ್ಲಿಹದು? ।
ನನ್ನ ನಾಡಿನ ಅರುಣ ಆರುಣ್ಯವಿನ್ನುವರೆಗೇಕೆ ಮೂಡುವದಿಲ್ಲವು? ॥

ನನ್ನ ನಾಡಿನ ಕರುಣ ತರುಣಾರುಣಪ್ರಭೆಯು ।
ಕೆನ್ನ ಕೆಂಬೆಳಕು ಹೊರಹೊಮ್ಮುವಾ ಕಾಲಕ್ಕೆ ।
ತನ್ನ ಮರಣದ ಹಡದಿಯನ್ನು ತೊತ್ತಳಿಯುತ್ತ ಹೊಸಶರಣ ಬರುವನಾಗ ॥೩॥

## " ಸಂಕಲ್ಪ. "

ಇಂದಿಲ್ಲ ಮುಂದಿಲ್ಲ ಹಿಂದೆಯಿದ್ದಿದ್ದಿಲ್ಲ ॥
ಎಂದಿಗೂ ಒಪ್ಪೆನಾ ನನ್ನೆಯನ್ನು ॥

ಬಂದಬಂದದ್ದೆಲ್ಲ ಸಂದಪ್ರಸಾದವೆಂ ।
ದಂದು ಉಣ್ಣುವೆ ನಿನ್ನ ನ್ಯಾಯವನ್ನು ॥೧॥

ತಿಳಿಯದಿದ್ದರು ಒಳಿತು, ತಿಳಿದರಂತೂ ಒಳಿತು ।
ಹೊಳೆದು ಹೋಗಲಿಯೆಂದು ದಿಟ್ಟಿಸುವೆನು ॥

ಉಳಿದರಷ್ಟೇ ನಾನು ಅಳಿದರಷ್ಟೇ ನಾನು ॥
ಬೆಳಕಿನೊಡೆಯನೆ ನೀನೆ ಹುಟ್ಟಿಸುವವನು ॥೨॥

ಏನು ಆಗುವದೆಂದು ನಾನು ನೋಡುತ್ತೀಗ ॥
ನೀನು ಮಾಡುವದನ್ನು ಜಪ್ಪಿಸಿಹೆನು. ॥
ಜ್ಞಾನರೂಪನೆ ನೀನು ಜ್ಞಾನ ಹುಟ್ಟಿಸು ಎಂದು ॥
ಜ್ಞಾನ ಸಾಧನವನ್ನೆ ಒಪ್ಪಿಸುವೆನು ॥೩॥

ಮಾಡುವದು ಬಿಡುವದೂ ಕೂಡಿಹದು ನಿನ್ನನ್ನು ॥
ಮಾಡು ಬಿಡು ನನ್ನ ಹಿತ ಬಂಧು ನೀನು ॥
"ಮಾಡಿಬಿಡು" ಎಂದು ಮಾತಾಡದೆ ನಂಬಿರುವ ॥
ಮಾಡಿಮಾಡಿಸುವವನೆ, ಬಲವ ನೀಡು ॥೪॥

—ಅಂಬಿಕಾತನಯದತ್ತ.

---

# ಚೀನದ ವಿದ್ಯಾರ್ಥಿಗಳಿಗೆ ರವೀಂದ್ರರ ಉಪದೇಶ

ಏಶಿಯಾಖಂಡದ ಯಾವದೋ ಒಂದು ಮೂಲೆಯಲ್ಲಿರುವ ನನಗೆ ನಿಮ್ಮ ಆಮಂತ್ರಣವು ಬಂದ ದಿನವೇ ಸುದಿನವೆಂದು ನಾನು ತಿಳಿದಿರುವೆನು. ನಿಮ್ಮ ಆಮಂತ್ರಣಕ್ಕಾಗಿ ನಾನು ನಿಮ್ಮನ್ನು ಅಭಿನಂದಿಸದಿರೆನು.

ನಿಮ್ಮ ಔತಣವನ್ನು ನೋಡಿ ನನ್ನ ಮನವು ಮುದುಡಿಕೊಂಡಿತು. ನಿಮ್ಮ ಆಚಾರ ವಿಚಾರಗಳ ಬಗ್ಗೆ ಉಂಟಾಗಿರುವ ವಿರೋಧಮತಗಳನ್ನು ನಾನೆಷ್ಟೋ ಓದಿಕೊಂಡಿದ್ದೆನಾದ್ದರಿಂದ ನಾನು ನನ್ನೊಳಗೆ "ನನ್ನಾರಿಸುವಲ್ಲಿ ನನ್ನಿಂದ ಈ ಜನರು ಏನು ಬಯಸುತ್ತಿರಬಹುದು ? ಇವರಿಗುಪಯೋಗವಾಗುವ ಸಂದೇಶವನ್ನು ನಾನಾದರೂ ಹೇಳತಕ್ಕದ್ದೇನು ?" ಎಂದು ಕೇಳಿಕೊಂಡೆನು

ನಾತಾಳಿಯಿಂದಲೂ ನಾನಿದರ ವಿಚಾರದಲ್ಲಿಯೇ ಇದ್ದು ಮೈಯ್ಯಲ್ಲಿ ನೆಮ್ಮದಿ ಇಲ್ಲದ್ದರಿಂದ, ಅದರಲ್ಲಿಯೂ ಹೊರಡುವದಕ್ಕೆ ನನ್ನ ಮನಃಸಿದ್ಧತೆಯಾಗಿರದ್ದರಿಂದ ಹೊರಡುವ ಹೊತ್ತನ್ನು ಮುಂದಕ್ಕೆ ನೂಕಹತ್ತಿದೆನು. ಇಷ್ಟರಲ್ಲಿ ನನ್ನ ನಾಡಿನಲ್ಲಿಯೂ ವಸಂತನು ಬೀಸಹತ್ತಿದನು.

ಮೊದಲೇ ಪ್ರಯತ್ನ ಪೂರ್ವಕವಾಗಿ ಭಾಷಣವನ್ನು ಹೊಂದುಗೂಡಿಸ ಬೇಕೆಂಬ ವಿಚಾರವು ಒಳಗೆ ಚುಚ್ಚುತ್ತಿತ್ತು. ನಿಮ್ಮ ಮುಂದೆ ಬೇರೆ ಭಾಷೆಯಲ್ಲಿ ಮಾತಾಡಬೇ

ಕಾದ್ದರಿಂದ ಇದಕ್ಕೆ ಪೂರ್ವಸಿದ್ಧತೆಯು ಅವಶ್ಯವಿತ್ತು. ಅದಕ್ಕೆ ವೇಳೆಯೂ ಬೇಕಾಯಿತು. ಆದರೆ ಸೌಸವವು ಕವಿಯ ಮನಃಸಾಗರದಲ್ಲಿ ಸಂಗೀತ ತರಂಗಗಳನ್ನು ಎಬ್ಬಿಸಿ ಮಾಡಬೇಕೆಂದಿದ್ದ ಕರ್ತವ್ಯವನ್ನು ತನ್ನ ಆಳವಾದ ಒಡಲಲ್ಲಿಟ್ಟು ಕಾಣದಂತೆ ಮಾಡಿತು. ಆದರೂ ಕರ್ತವ್ಯಪರಾಙ್ಮುಖತೆಯು ನನ್ನನ್ನು ಚುಚ್ಚದಿರಲಿಲ್ಲ. ವ್ಯರ್ಥವಾಗಿ ಹೊತ್ತುಗಳೆದ-ಅದೇಕೆ? ಅದಕ್ಕೂ ಕೆಡಕನ್ನೇ ಮಾಡಿದ ನಾನು ಜೀನದ ಗೆಳೆಯರ ಮುಂದೆ ಹೇಗೆ ನಿಲ್ಲಲಿ ಎಂದೆನಿಸಿತು. ಆದರೆ ನೀವು ನಿಜವಾಗಿ ಕವಿಗಳಿಂದ ಕೆಲಸಗಳು ಮೆಟ್ಟುಗೂಡುವವೆಂದು, ಅಪೇಕ್ಷಿಸಲಾರಿರಿ. ಗಾಳಿಯಲ್ಲಿ ಹಾರಾಡುವ ಜೀವನದ ಗುಟ್ಟನ್ನು ತಮ್ಮ ಕೈದುಗಳಿಂದ ಹಿಡಿದು ಭವಿಷ್ಯದ್ವಾಣಿಯ ಸುಸ್ವರವನ್ನು ಜಗತ್ತಿನಲ್ಲೆಲ್ಲ ತೂರಿಬಿಡುವದೇ ಕವಿಗಳ ಕೆಲಸವು. ನಿಜವಾಗಿ ಕವಿಗಳ ಕೆಲಸವು ಲೋಕಜಾಗೃತಿಯ ಕಾಲಕ್ಕೆ. ಯಾಕಂದರೆ ಜನತೆಯನ್ನು ಮುಸುಕಿದ ಮಂಜು, ಸದ್ದಿಲ್ಲದೆ ಹರಿದು ಹೋಗಿರುವದನ್ನೂ; ಮುತ್ತಿ ಮುಸುಕಿ ಹತ್ತೊತ್ತಿ ಹಣ್ಣು ಮಾಡಿದ ಮಾಗಿಯು ಮುಗಿದಿರುವದೆಂಬದನ್ನೂ ಕವಿಯು ಜನತೆಗೆ ಆತ್ಮವಿಶ್ವಾಸದಿಂದ ಸಾರಿಸಾರಿ ಹೇಳುವನು. ನಾನಾದರೂ ಈಗ ಅದನ್ನೇ ಹೇಳುವೆನು. ಮಾನವ್ಯವನ್ನೇ ಬಿಗಿದು ಬಿಡುವಂಥ ಮಂಜಿನ ಸೆರೆಯಲ್ಲಿ ಜಗತ್ತೇ ಸಿಕ್ಕು ಹೋಗಿತ್ತು. ಇದೀಗ ಸೆರೆಮನೆವಾಗಿಲುಗಳು ತೆರೆಯುತ್ತಲಿವೆ. ಯಾಕಂದರೆ ಇದೋ ವಸಂತನು ತನ್ನ ಸೌಸವವನ್ನು ಸೂಸಹತ್ತಿದ್ದಾನೆ.

ನನ್ನ ಕರ್ತವ್ಯಪರಾಙ್ಮುಖತೆಯೂ ಸೋಮಾರಿತನವೂ ನಿಮಗೆ ಅನಿಸಿರುವವೆಂದು ನನಗೆ ನೆಚ್ಚಿಗೆಯುಂಟು. ಮುದಿರೆಯ ಮೋಹಕ್ಕೆ ಬಿದ್ದ ನಿಮ್ಮ ಕವಿಗಳನ್ನೂ ಮರೆವುಗೇಡಿಯಾಗ ಮಾಡಿದ ಈ ಸುಗ್ಗಿಯ ತೆಂಗಾಳಿಯ ಔಷಣವೂ ನಿಮ್ಮ ಔತಣವೂ ಒಂದೇ ಅಲ್ಲವೇ ! ನಿಮ್ಮ ಆದರದ ಆಪಾರವನ್ನೊಡೆದು ನಿಮ್ಮ ಪ್ರೇಮವನ್ನು ಸಂಪಾದಿಸುವದಕ್ಕಾಗಿ ನಾನು ಕೂಡ ನನ್ನ ಕೆಲಸಗಳನ್ನು ಬಿಡಬೇಕಾಯಿತು. ಬೇರೆ ಖಂಡದವರು ಮೆಟ್ಟು ಮೆಟ್ಟಿಗೂ ನಿಟ್ಟು ನಿಟ್ಟಿಗೂ ಕೆಲಸ ಕೆಲಸವೆಂದು ಬಡಕೊಳ್ಳುವವರು. ಆದ್ದರಿಂದ ಅಂಥಲ್ಲಿ ನನ್ನ ಉಳಿವಿಗಾಗಿ ನಾನು ನನ್ನ ಗಾಯನದ ಗುಂಗನ್ನು ಬದಿಗಿಟ್ಟು ಕರ್ತವ್ಯವನ್ನು ಮಾಡಬೇಕಾಗುವದು.

ಕೇಳಿಸದೆ ಗಾಳಿಯಲ್ಲಿಯೇ ತಿರುಗುವ ಸ್ವರವನ್ನು ಹಿಡಿಯುವದೂ ಕೊನೆ ಮೊದಲಿಲ್ಲದ ಕನಸಿನಲ್ಲಿ ನೆಚ್ಚಿಗೆಯನ್ನು ನೆಡಿಸುವದೂ ಹುಟ್ಟದ ಹೂವಿನ ಸುದ್ದಿಯನ್ನು ಮುಂದಾಗಿಯೇ ನಂಬದ ನಾಡಿನಲ್ಲಿ ತುಂಬುವದೂ ಕವಿಗಳ ಕಾರ್ಯವೆಂದು ನಾನು ತಿಳಿಯುವೆನು.

ನಂಬಿಗೆಗಳ್ಳರು ಈಗಲೂ ಅನೇಕರುಂಟು. ಆಗುವದೆಂಬ ನಂಬಿಗೆಯೇ ಆಗದ್ದನ್ನು ಆಗಿಸುವದೆಂದು ಅವರು ನಂಬುವದಿಲ್ಲ. ನೆಚ್ಚಿಗೆ ಇಲ್ಲದಿದ್ದರೆ ಮೇಲಿಂದ ಮೇಲೆ ಬರುವ ನಿಮ್ಮ ಹೊತ್ತು ಗೊತ್ತುಗಳನ್ನು ನೀವು ಗುರುತಿಸಲಾರಿರಿ. ತಜ್ಞರೂ ಅದರಂತೆ

ನಂಬಿಗೆ ಗೇಡಿಗಳೂ ಒಡಕುಗಳನ್ನು ಹಬ್ಬಿಸಿರುವರು. ಆದರೆ ಆ ಒಡಕುಗಳನ್ನು ಹೊಂದುಗೂಡಿಸಿ ರಾಷ್ಟ್ರಗಳನ್ನು ಉಂಟುಮಾಡಿದವನು ಆ ಅಂತರ್ದೃಷ್ಟನೂ ಸ್ಥಿರಭಕ್ತಿಯೋಗ ಸುಲಭನೂ ಆದ ಆ ಸನತ್ಕುಮಾರನು ಈ ನಿರ್ಮಾಣಶಕ್ತಿಯಲ್ಲಿ ಅಂತವಿಲ್ಲದ ಆತ್ಮವಿಶ್ವಾಸವು ತುಂಬಿಕೊಂಡಿತ್ತೆಂದು ನಿಮ್ಮ ಇತಿಹಾಸದಿಂದಲೇ ಕಂಡು ಬರುವಂತಿದೆ. ಆರ್ವಾಚೀನರಾದ ಗಾವಿಲರಿಂದ ಕಾರ್ಯವೇನೂ ಆಗದು. ಟೀಕೆಯೇ ಅವರ ಇಡಗಂಟು. ಕೆಡಿಸುವದೊಂದೇ ಅವರ ಕಾರ್ಯ. ಇರಲಿ. ಸಂಸ್ಕೃತ ವೈವಿಧ್ಯದಿಂದ ದೂರವಾದ ರಾಷ್ಟ್ರಗಳು ಒಂದು ಗೂಡುವ ಕ್ರಾಂತಿಕಾರಕ ಕಾಲದಲ್ಲಿ ಹುಟ್ಟಿದ್ದಕ್ಕೆ ಹರಿಸಿಗೊಳ್ಳುವಾ. ಈ ಕಾಲದ ದುಃಖದ ದೀರ್ಘಿಕೆಯೂ ನೆತ್ತರದ ನೆರೆಯೂ ಕಡೆಪೂರೈಸುವಂಥವಲ್ಲ. ಯಾಕಂದರೆ ಹೆಣಗಾಟ ಹೋರಾಟಗಳು ಆತ್ಮನ ಸ್ವಭಾವಗಳಲ್ಲ. ಜಗತ್ಕ್ರಾಂತಿಕಾರಕವಾದ ಪವಾಡಗಳು ಆಗುತ್ತಿರುವವೆಂಬದರ ಕುರುಹುಗಳು ಕಾಣಹತ್ತಿವೆ. ನೀವು ನನ್ನನ್ನು ಕರೆಸಿಕೊಂಡಿದ್ದೂ ಅವುಗಳಲ್ಲೊಂದು.

ನೂರಾರು ವರ್ಷಗಳಿಂದ ನೀವು ಕ್ಷತ್ರಿಯರನ್ನೂ ವೈಶ್ಯರನ್ನೂ ಉಳಿದ ಬೇರೆ ಆಗಂತುಕ ಅತಿಥಿಗಳನ್ನೂ ಕರೆದಿರುವಿರಿ. ಆದರೆ ಇದುವರೆಗೆ ಎಂದೂ ಕವಿಯನ್ನು ಕರೆದಿರುವದಿಲ್ಲ. ನೀವು ನನ್ನ ಪೌರುಷಕ್ಕೆ ಮಾನಗೊಡುವದೇನೂ ಮಹತ್ತ್ವದ ಮಾತಲ್ಲ; ಸರಿ, ಆದರೆ ಈಗ ಬೀಸುತ್ತಿರುವ ಹೊಸ ಯುಗದ ವಸಂತನ ಗಾಳಿಯನ್ನು ಗೌರವಿಸುವದು ಮಹತ್ತ್ವದ ಮಾತಲ್ಲವೇ ? ಅವಕ್ಕಾಗಿ ನೀವು ನನ್ನಿಂದ ಸಂದೇಶವನ್ನೇನೂ ಅಪೇಕ್ಷಿಸ ಬೇಡಿರಿ. ಜನರು ಪಕ್ಷಿಗಳನ್ನು ಸಂದೇಶವನ್ನು ಕಳಿಸಲು ಉಪಯೋಗಿಸಿಕೊಳ್ಳುವರು. ಜನರು ಯುದ್ಧದ ಹೊತ್ತಿನಲ್ಲಿ ಪಕ್ಷಿಗಳಿಗೆ ಬೆಲೆಕೊಡುತ್ತಿದ್ದರು. ಅವು ಬಹಳ ಹಾರುವವೆಂತಲ್ಲ; ಆದರೆ ಕೊಲ್ಲಲು ಸಹಾಯವಾಗುವವೆಂದು. ಆದ್ದರಿಂದ ಕವಿಗಳನ್ನು ಸದ್ದಿಗಾರರನ್ನಾಗಿ ಮಾಡಬೇಡಿರಿ.

ಜಗದ ಜೀವಿತದ ಏರಿಕೆಯ ಹಿಗ್ಗಿನಲ್ಲಿಯೂ ಹಾಗೂ ನಿಮ್ಮ ಸುಖಗಳಲ್ಲಿಯೂ ನನ್ನನ್ನು ಕೂಡಗೊಡಿರಿ. ನಾನೇನೂ ವೇದಾಭ್ಯಾಸಜಡನಲ್ಲ. ಆದ್ದರಿಂದ ನನಗೆ ಅಧ್ಯಕ್ಷರ ಗದ್ದುಗೆಯನ್ನು ಕೊಡದೆ, ನಿಮ್ಮ ಮನದ ಮನೆಯೊಳಗೆ ನನಗಾಗಿ ಎಡೆ ಇಡಿರಿ. ನಾನು ನಿಮ್ಮ ಮನವನ್ನು ಗೆಲ್ಲಬೇಕಾಗಿರುವದರಿಂದ ನಿಮ್ಮ ಹತ್ತರ ಬಂದಿರುವೆನು. ಮುಂದೆ ಒಂದು ದಿನ ನಿಮ್ಮ ಒಳಗಿನ ಶಕ್ತಿಯು ರೂಪಗೊಂಡು ನಿಮ್ಮ ಹಾಗೂ ಇಡೀ ಏಶಿಯಾದ ಏಳಿಗೆಯಾಗಿ ಆ ಆನಂದದಲ್ಲಿ ನಾವೆಲ್ಲರೂ ಕೂಡಿ ಆಡುವೆವೆಂಬ ನಂಬಿಗೆಯಿಂದ ಬಂದಿರುವೆನು. ನಿಮ್ಮಲ್ಲಿ ನನಗೆ ಯಾವದೇ ತರದ ಜಾತಿಯು ಹಾಗೂ ಆಚರಣೆಯ ಭಿನ್ನತೆಯು ಎಳ್ಳಷ್ಟೂ ಅನಿಸುವದಿಲ್ಲ. ಭರತ ವರ್ಷವು ನಿಮ್ಮನ್ನು ಒಡಹುಟ್ಟಿದವರೆಂದು ತಿಳಿದೇ ತನ್ನ ಪ್ರೇಮವನ್ನು ಕಳಿಸಿದ ಕಾಲವನ್ನು ನಾನು ನೆನಪುಗೊಟ್ಟಿರುವೆನು. ಆ ಹತ್ತುಗಡೆಯು ಇನ್ನೂ ನಮ್ಮ ಉತ್ತರದವರ

ಹೃದಯದೊಳಗೆ ಹುಗಿದುಕೊಂಡಿರುವದೆಂದು ನನಗನಿಸುವದು. ನೂರಾರು ವರ್ಷಗಳಿಂದ ಬೆಳೆದ ಹುಲ್ಲಿನಿಂದ ಹಾದಿಯು ಹೂಳಿಕೊಂಡಿದ್ದರೂ ಹೊಳವಿನ್ನೂ ಹೋಗಿರುವದಿಲ್ಲ.

ಬಹು ಸಾಹಸಮಾಡಿ ಹಿಂದಿನದೆಲ್ಲವನ್ನೂ ನೀವು ನೆನಪಿನಲ್ಲಿ ತಂದುಕೊಂಡ ಬಳಿಕ ನಿಮ್ಮೊಳಗಿಂದ ಯಾವನೊಬ್ಬ ಅಂತರ್ದೃಷ್ಟ್ಯನು ಪ್ರೇಮದ ನುಡಿಯನ್ನೇ ಹರವಿ ಅದರಿಂದ ಎಲ್ಲ ಒಡಕುಗಳನ್ನು ಒಡೆದು ಅನೇಕ ವರ್ಷಗಳಿಂದಲೂ ಬಾಯಿಬಿಟ್ಟಿದ್ದಕ್ಕೆ ಬಾಂಧವ್ಯದ ಒಡ್ಡನ್ನು ಹಾಕುವವನು ಎದ್ದು ಹೊರಬೀಳುವನೆಂದು ನಾನು ಬಯಸುವೆನು. ವರ್ಷವರ್ಷಕ್ಕೆ ಏಶಿಯಾದ ಮಹಾತ್ಮರು ಪ್ರೇಮದ ತಳಿಹಾಕಿ ಜಗವನ್ನು ಸವಿಯಾಗಿ ಮಾಡಿರುವರು. ಏಶಿಯಾ ಖಂಡವು ಈಗಲೂ ಕೂಡ ಅಂಥವರನ್ನು ಕಾರ್ಯ ಕೊನೆಗಾಣಿಸುವದಕ್ಕೋಸ್ಕರ ಬರಮಾಡಿಕೊಳ್ಳಲು ಬಯಸುವದು. ಯುದ್ಧ ಮಾಡುವದಕ್ಕಾಗಲೀ ಇಲ್ಲವೇ ತನಗಾಗಿ ಲಾಭಪಡೆದುಕೊಳ್ಳಲಿಕ್ಕಾಗಲೀ ಅಲ್ಲ, ಆದರೆ ಜಗದೊಳಗೆ ಧಾರ್ಮಿಕ ಕಟ್ಟನ್ನು ಕಟ್ಟುವದಕ್ಕಾಗಿ ಬಯಸುವದು.

ಕಷ್ಟಗಳ ಕಾರ್ಮೋಡಗಳನ್ನೂ ಕೂಡ ಭೇದಿಸಿ ಜೀವಿತದ ದಾರಿಗೆ ಬೆಳಕು ಬೆಳಗುವ ಬೆಳಕನ್ನು ಹುಟ್ಟಿಸಿದ ಖಂಡದವರೆಂದು ನಾವೆಲ್ಲರೂ ಅಭಿಮಾನ ಪಡುವ ಕಾಲವು ಈಗ ಒದಗಿ ಬಂದಿರುವದು.

—ಶೇಷ

---

# ಪ್ರೇಯವೂ ಶ್ರೇಯವೂ

ಸಕಲ ಉಪನಿಷತ್ತುಗಳ ಕೊನೆಯಾದ ಕಠೋಪನಿಷತ್ತಿನಲ್ಲಿ ಒಂದು ಸುಂದರವಾದ ಕಥೆಯುಂಟು. ವಾಜಶ್ರವಸ್ಸನಿಗೆ ನಚಿಕೇತನೆಂಬೋರ್ವ ಕುಮಾರನಿದ್ದನು. ವಾಜಶ್ರವಸ್ಸನು ಒಂದು ಯಜ್ಞವನ್ನು ಮಾಡಿ ತನ್ನ ಎಲ್ಲ ಹಣವನ್ನೂ ದಾನಮಾಡಿದನು. ಅದರಲ್ಲಿ ಮುದುಕಾದಂಥ ಉಪಯೋಗವಿಲ್ಲದ ಆಕಳುಗಳಿದ್ದವು. ಅಂಥ ಆಕಳುಗಳನ್ನು ದಾನವಾಗಿಕೊಟ್ಟರೆ ಆನಂದರಹಿತವಾದ ಲೋಕಕ್ಕೆ ತನ್ನ ತಂದೆಯು ಹೋಗುವನೆಂಬರಿಕೆಯುಳ್ಳ ನಚಿಕೇತನು ಆ ದೋಷವನ್ನು ಹೋಗಲಾಡಿಸುವದಕ್ಕಾಗಿ ತಂದೆಗೆ ಅಂದದ್ದು "ಅಪ್ಪಾ, ನನ್ನನ್ನು ಯಾರಿಗೆ ಕೊಡುತ್ತೀ." ತಂದೆಯು ಕೋಪಾವಿಷ್ಟನಾಗಿ "ನಿನ್ನನ್ನು ಕೊಡುತ್ತೇನೆ ಯಮನ ದವಡೆಗೆ." ಈ ಪ್ರಕಾರವಾಗಿ ಅಂದದ್ದನ್ನು ಚೇಷ್ಟೆಯೆಂದೆಣಿಸಿ ನಚಿಕೇತನು ಮತ್ತೆ ಎರಡು ಸಲ ಹಾಗೆಯೇ ಕೇಳಿದನು. ತಂದೆಯು ಉತ್ತ

ರವು ಮೊದಲಿದ್ದಂತೆಯೇ ಇತ್ತು. ಆದ್ದರಿಂದ ನಚಿಕೇತನು ಯಮುನಗರಿಗೆ ಬಂದು ಯಮನನ್ನು ಕಾಣದೇ ಅವನ ಮನೆಯೆಡೆಯಲ್ಲಿ ಮೂರು ದಿವಸಗಳನ್ನು ಕಳೆದನು. ಆ ಮೇಲೆ ಯಮನು ಬಂದು, ಮಂತ್ರಿಗಳನ್ನು ಕೇಳಲಾಗಿ ಅತಿಥಿಯಾದಂಥ ಬ್ರಾಹ್ಮಣ ನನ್ನು ಮೂರು ದಿನಗಳ ವರೆಗೆ ಆತಿಥ್ಯವಿಲ್ಲದೆ ಅವಮಾನ ಮಾಡಿದುದಕ್ಕೆ ಅವನಿಗೆ ಮೂರು ವರಗಳನ್ನು ಕೊಡಬೇಕೆಂಬ ಅವರ ಹೇಳಿಕೆಯಂತೆ ನಚಿಕೇತನಿಗೆ ಮೂರು ವರಗಳನ್ನು ದಯಪಾಲಿಸಿದನು. ನಚಿಕೇತನು ಮೊದಲನೆಯ ವರವನ್ನು ತನ್ನ ತಂದೆಯು ಕೋಪವನ್ನು ತೊರೆಯುವಂತೆಯೂ ನನ್ನನ್ನು ಪ್ರೇಮ ದೃಷ್ಟಿಯಿಂದ ನೋಡು ವಂತೆಯೂ ಕೇಳಿಕೊಂಡನು. ಎರಡನೆಯ ವರವು ಅಗ್ನಿಯ ಗುಟ್ಟು. ಇವೆರಡೂ ವರ ಗಳನ್ನು ಯಮರಾಜನು ದಯಪಾಲಿಸಿದ ಮೇಲೆ ನಚಿಕೇತನು ಅಧ್ಯಾತ್ಮಜ್ಞಾನವನ್ನು ಕೇಳಿ ದನು. ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇಽಸ್ತೀತ್ಯೇಕೇ ನಾಯಮಸ್ತೀತಿ ಚೈಕೇ, ಎತದ್ವಿದ್ಯಾಮನುಶಿಷ್ಟಸ್ತ್ವಯಾಹಂ ವರಾಣಾಮೇಷ ವರಸ್ತೃತೀಯಃ ॥ ಮನುಷ್ಯನು ತೀರಿದ ಮೇಲೆ ಅವನ ಆತ್ಮವು ಇರುವದೆಂತ ಕೆಲವರು, ಇರುವದಿಲ್ಲೆಂತ ಕೆಲವರು ಅನ್ನುವದುಂಟು. ಇದರ ರಹಸ್ಯವೇನೆಂಬದನ್ನು ಹೇಳು. ಇದೇ ನನ್ನ ಮೂರನೆಯ ವರವಾಗಿರುತ್ತದೆ. ವರವು ದೇವಗಂಧರ್ವರಿಗೂ ಅಸಾಧ್ಯವಾದ್ದರಿಂದ ಮತ್ತೆ ಬೇಕಾದ ದ್ದನ್ನು ಕೇಳು, ತರುಣ ಸ್ತ್ರೀಯರನ್ನು ಕೇಳು, ಚಪಲ ಕುದುರೆಗಳನ್ನು ಕೇಳು; ಬೇಕಾ ದಷ್ಟು ಧನಧಾನ್ಯವನ್ನು ಕೇಳು. ಹೀಗೆ ನಚಿಕೇತನ ಮನಸ್ಸು ಚಂಚಲವಾಗಿದೆಯೋ ಇಲ್ಲವೋ ನೋಡಬೇಕೆಂದು ಯಮನು ನುಡಿಯುತ್ತಿರಲು, ನಚಿಕೇತನು "ನನಗೆ ಇದ ರಲ್ಲಿ ಯಾವದೂ ಬೇಡ. ಧನದಿಂದ ಮನುಷ್ಯನ ತೃಪ್ತಿಯಾಗಲಾರದು. ( ನವಿತ್ತೇನ ತರ್ಪಣೀಯೋ ಮನುಷ್ಯಃ) ಎಂದು ಗಟ್ಟಿಯಾಗಿ ವಿಷಯಭೋಗದ ಇಚ್ಛೆಯಿಲ್ಲವೆಂದು ಉತ್ತರವನ್ನು ಕೊಟ್ಟಮೇಲೆ ಯಮನು ಇವನೇ ಆಧ್ಯಾತ್ಮಿಕಜ್ಞಾನಕ್ಕೆ ಯೋಗ್ಯ ಅಧಿ ಕಾರಿಯೆಂದರಿದು ಆಧ್ಯಾತ್ಮಿಕ ಜ್ಞಾನದ ಮೊದಲನೆಯ ಅಮೃತಬಿಂದುವನ್ನು ನಚಿಕೇತ ನಿಗೆ ಕುಡಿಸಿದನು. ಇದೇ ಆ ಸೂತ್ರವು "ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತ ಸ್ತೌ ಸಂಪರೀತ್ಯ ವಿವಿನಕ್ತಿಧೀರಃ , ಶ್ರೇಯೋಹಿಧೀರೋಽಭಿ ಪ್ರೇಯಸೋ ವೃಣೀತೇ ಪ್ರೇಯೋ ಮಂದೋ ಯೋಗಕ್ಷೇಮಾದ್ವೃಣೀತೇ " "ಈ ಜಗತ್ತಿನಲ್ಲಿರುವ ಮನುಷ್ಯ ನೆದುರಿಗೆ ಶ್ರೇಯಸ್ಸು ಮತ್ತು ಪ್ರೇಯಸ್ಸು ಹೀಗೆರಡು ಬಂದು ನಿಲ್ಲುವವು. ಧೀರನಾ ದಂಥವನು ಇವೆರಡರಲ್ಲಿ ತನ್ನ ಆತ್ಮಕ್ಕೆ ಸದ್ಗತಿಯನ್ನೀಯುವಂಥ ಶ್ರೇಯಸ್ಸನ್ನು ಆರಿಸು ತ್ತಾನೆ. ತಿಳಿಗೇಡಿಯು ಮಾತ್ರ ತನ್ನ ಯೋಗ ಕ್ಷೇಮದ ಚಿಂತೆಯಿಂದ ಮನಸ್ಸನ್ನು ತುಂಬಿಕೊಂಡು ಪ್ರೇಯಸ್ಸನ್ನೇ ಆರಿಸುತ್ತಾನೆ. ಶ್ರೇಯಸ್ಸನ್ನು ಆರಿಸುವಂಥವರು ಧೀರರು ಜಾಣರು, ಪ್ರೇಯಸ್ಸನ್ನು ಆರಿಸುವಂಥವರು, ಮಂದರು, ಅಭಾಗಿಗಳು, ಕೀಳರು ಎಂಬುವದೇ ಈ ಉಪನಿಷತ್ತಿನ ತಾತ್ಪರ್ಯವಾಗಿರುವದು.

ಶರೀರಿಯಲ್ಲಿ ಎರಡು ಅಂತಸ್ತುಗಳಿವೆ. ಒಂದು ಶರೀರ, ಎರಡನೆಯದು ಆತ್ಮ ಜೀವವು ಯಾವಾಗಲೂ ಭೌತಿಕ ಸುಖವನ್ನು ದಾಟಿ ಅಮೃತ ಸುಖವನ್ನು ಬಯಸುತ್ತಿರುತ್ತದೆ. ನಚಿಕೇತನು ಅಂದದ್ದು ನಿಜವು. 'ನವಿತ್ತೇನ ತರ್ಪಣೀಯೋ ಮನುಷ್ಯಃ, "ಬರೇ ಧನದಿಂದ ಅಂದರೆ ಆಧಿಭೌತಿಕ ಸುಖಾನುಭವದಿಂದ ತೃಪ್ತಿಯು ಸಿಗುವದಿಲ್ಲ. ಇಂದ್ರಿಯಾನುಭವದ ವಿಷಯುವಾಗಿ ಭಗವಾನ್ ಮನುವು ತನ್ನ ಸ್ಮೃತಿಯಲ್ಲಿ ತ್ರಿಕಾಲಾನುಧಿತವಾದ ತತ್ವವೊಂದನ್ನು ಹೇಳಿರುವನು. ಅದಾವದೆಂದರೆ 'ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ, ಹವಿಷಾ ಕೃಷ್ಣವರ್ತೇವ ಭೂಯ ಏವಾಭಿವರ್ಧತೇ " ಮನುಷ್ಯನ ಇಚ್ಛೆಯು ಆಯಾ ಇಚ್ಛೆಗಳ ತಪ್ತಿಯಿಂದ ತೃಪ್ತಿಯನ್ನು ಹೊಂದುವದಿಲ್ಲ. ಆ ಇಚ್ಛಾಪೂರ್ತಿಯಿಂದ ಅದು ಇನ್ನಷ್ಟು ಬೆಳೆಯುತ್ತದೆ. ಇಂದ್ರಿಯ ತೃಪ್ತಿಯು ಆಗುವದಿಲ್ಲವೆಂದ ಮೇಲೆ ಸುಖವೂ ಆಗುವದಿಲ್ಲವೆಂದಂತೆಯೇ ಆಯಿತು. ಮತ್ತು ಈ ಇಂದ್ರಿಯಗಳ ಬೆನ್ನು ಹತ್ತಿದವನ ಸ್ಥಿತಿಯು ಭಗವದ್ಗೀತೆಯಲ್ಲಿ ಹೇಳಿದಂತೆ ಕಡೆಗೆ ಹಾಳಾಗಿ ಹೋಗುವದರಲ್ಲಿಯೇ ಇರುತ್ತದೆಂಬದು ಎಲ್ಲರಿಗೂ ತಿಳಿದ ಮಾತಾಗಿದೆ. ಹಸಿವೆ, ನೀರಡಿಕೆ ಮುಂತಾದ ದೇಹದ ಕಾಮನೆಗಳನ್ನು ಪೂರೈಸಲಿಕ್ಕೆ ಬೇಕು. ಆದರೆ ಇವುಗಳನ್ನು ತಣಿಸಿದರೆ ಆಗುವ ಕ್ಷಣಿಕ ಆನಂದವನ್ನು ಆತ್ಮಿಕಸುಖವೆಂದು ಮಾತ್ರ ತಿಳಿಯಬಾರದು. ಇಂದ್ರಿಯಗಳನ್ನೇ ತಣಿಸುತ್ತ ಈ ಜಗತ್ತಿನಲ್ಲಿ ಕಾಲಹರಣ ಮಾಡುವದು ಪ್ರೇಯೋಮಾರ್ಗವು. ಇದರಿಂದ ಇಂದ್ರಿಯಸುಖವು ಸಿಗುವದು. ಇಂದ್ರಿಯಗಳು ಎಂದಿಗೂ ತೃಪ್ತಿಯನ್ನು ಪಡೆಯುವದಿಲ್ಲವಾದಕಾರಣ ಇದೇ ಮಾರ್ಗದಿಂದ ಹೋದರೆ ಇಂದ್ರಿಯಗಳ ಗುಲಾಮನಾಗಿ ಮನುಷ್ಯನು ಪಶುವೃತ್ತಿಗೆ ಇಳಿಯುವನು. ಎರಡನೇಯ ಮಾರ್ಗವು ಈ ಇಂದ್ರಿಯ ತೃಪ್ತಿಯನ್ನು ಬದಿಗಿರಿಸಿ ಯಾವದಾದರೊಂದು ತತ್ವದ ಬೆನ್ನು ಹತ್ತಿಹೋಗುವದು. ಇದಕ್ಕೆಯೇ ತತ್ವಜೀವನವೆಂದೆನ್ನುವರು. ಈ ಜಗತ್ತಿನಲ್ಲಿರುವ ಮಾನವ್ಯದ ಕ್ಷೀರಸಾಗರದ ಕೆನೆಯಾದ ಮಹಾತ್ಮರೆಲ್ಲರೂ ಇದೇ ಮಾರ್ಗವನ್ನನುಸರಿಸಿರುವರು. ಅಥವಾ ಈ ತತ್ವಜೀವನದಿಂದಲೇ ಆವರು ಮಹಾತ್ಮರಾದರು. ಈ ಜಗತ್ತಿನಲ್ಲಿ ಮನುಷ್ಯನು ಜೀವಿಸುವ ವರೆಗೆ ಈ ಎರಡೂ ಮಾರ್ಗಗಳು ಅವನ ಮುಂದೆ ಬಂದು ನಿಲ್ಲುವವು. ಮನುಷ್ಯನು ಬೇಕಾದ ಮಾರ್ಗವನ್ನು ಹಿಡಿಯಬಹುದು. ಪ್ರೇಯೋಮಾರ್ಗವನ್ನು ಹಿಡಿದರೆ ಅವನು ಪಶುವಾಗುವದು. ಶ್ರೇಯೋ ಮಾರ್ಗವನ್ನು ಹಿಡಿದರೆ ಆತನು ಮಹಾತ್ಮನಾಗುವನು. ಇಂಥ ತತ್ವಜೀವಿಗಳು ಯಾವ ಸಮಾಜದಲ್ಲಿ ವಿಪುಲವಾಗಿರುವರೋ ಆ ಸಮಾಜಕ್ಕೆ ಎಂದೂ ಸಾವು ಬರದು. ಯಾವ ಸಮಾಜದಲ್ಲಿ ಇಂಥ ಜನರ ಕೊರತೆಯಿರುವದೋ ಆ ಸಮಾಜವು ಬೇಗನೇ ಅಧೋಗತಿಗೆ ಇಳಿಯುವದರಲ್ಲಿ ಏನೂ ಸಂದೇಹವಿಲ್ಲ. ಆ ತತ್ವವು ಕುಟುಂಬ ರಕ್ಷಣೆಯೇ ಇರಲಿ, ರಾಷ್ಟ್ರರಕ್ಷಣೆಯೇ ಇರಲಿ, ವಿಶ್ವಬಂಧುತ್ವವೇ ಇರಲಿ, ಯಾವದೇ ಇರವಲ್ಲದೇಕೆ— ಆ ತತ್ವಾಚರಣೆಯ ಮಾರ್ಗದಲ್ಲಿ ಯಾವ ಗಂಡಾಂತರಗಳು ಬಂದರೂ ಅವುಗಳನ್ನು ಬದಿಗೊತ್ತಿ ಹೋಗುವ

ವನಿಗೆ ಕಠೋಪನಿಷತ್ತಿನಲ್ಲಿ ಧೀರನೆಂಬ ಸಂಜ್ಞೆಯನ್ನು ಕೊಟ್ಟಿರುವರು. ನರನು ಧೀರನಾಗಬೇಕಾದರೆ ತನ್ನ ಇಂದ್ರಿಯಗಳನ್ನೆಲ್ಲ ತನ್ನ ವಶದಲ್ಲಿಟ್ಟುಕೊಂಡು ಯಾವದಾದರೊಂದು ತತ್ವವನ್ನು ಸ್ವಧರ್ಮಾನುಸಾರವಾಗಿ ಹುಡಕಿ ಆ ತತ್ವದ ಆಚರಣೆಯಲ್ಲಿ ತನ್ನ ಎಲ್ಲ ಇಂದ್ರಿಯ ಸುಖವನ್ನು ಆಹುತಿಯನ್ನಾಗಿ ಕೊಟ್ಟರೆ ಆತನು ಧೀರನಾಗುವನು. ಆತನೇ ನಿಜವಾದ ಆರ್ಯನು.

ಆರ್ಯರ ಧ್ಯೇಯವಾದ ಈ ಧೀರತೆಯ ತತ್ವವನ್ನು ವಿಶದಗೊಳಿಸಲಿಕ್ಕೆ ಎಲ್ಲ ಪುರಾಣದ ಕಥೆಗಳು ಹುಟ್ಟಿರುತ್ತವೆ. ಆರ್ಯರಾರು? ಸ್ವಪ್ನದಲ್ಲಿಯೂ ಕೂಡ ತನ್ನ ರಾಜ್ಯವನ್ನು ದಾನ ಮಾಡಿದ್ದರಿಂದ ಆ ರಾಜ್ಯದಲ್ಲಿರುವದು ಪಾಪವೆಂದೆಣಿಸಿ ಹುಲಿಕರಡಿಗಳಿಂದಿಡಿಕಿರಿದ ಕಾಂತಾರದೊಳಗೆ ಸೇರಿ ತನ್ನ ಹೆಂಡರು ಮಕ್ಕಳನ್ನು ಮಾರಿಕೊಂಡು ಗುರುದಕ್ಷಿಣೆಯನ್ನು ಕೊಡಲೆತ್ನಿಸಿದ ಶ್ರೀ ಹರಿಶ್ಚಂದ್ರರಾಯನು ಆರ್ಯನು. ಈ ಜೀವವಿರುವವರೆಗೆ ಬೇಕಾದದನ್ನು ಬೇಡಿದರೆ ಕೊಡುವೆನೆಂಬ ಘೋರ ವ್ರತವನ್ನು ಹಿಡಿದು ತನ್ನ ಕವಚಕುಂಡಲಗಳನ್ನು ರಣರಂಗದಲ್ಲಿ ದಾನ ಬೇಡಲು ಬಂದ ಶ್ರೀಕೃಷ್ಣನಿಗೆ ಕೃಷ್ಣಾರ್ಪಣವೆಂದು ತನ್ನ ಜೀವವನ್ನೇ ಧಾರೆಯೆರೆದು ಕೊಟ್ಟ ಕರ್ಣನು ಆರ್ಯನು ತನ್ನ ಮಗನ ಮಾಂಸದ ಅಡಿಗೆಯನ್ನು ಊಟ ಮಾಡಲಿಚ್ಛೆಯುಳ್ಳ ಭೈರಾಗಿಯನ್ನು ಸಂತೋಷಗೊಳಿಸಬೇಕೆಂದು ಒನಕೆಯಿಂದ ಮಗನ ರುಂಡವನ್ನು ಒರಳಲ್ಲಿ ಜಜ್ಜಿದ ಚಾಂಗುಣೆಯು ಆರ್ಯವನಿತೆ. ಎಷ್ಟೆಂತ ಹೇಳಬೇಕು! ಎಲ್ಲ ಪುರಾಣಗಳಲ್ಲಿಯ ಮಹಾತ್ಮರ ಚರಿತ್ರೆಗಳೂ ಜಗತ್ತಿನ ಎಲ್ಲ ಸಾಧುಸಂತರ ಚರಿತ್ರೆಗಳೂ ಇದೇ ತತ್ವವನ್ನು ತಿಳಿಸುವವು. ಪ್ರೇಯವೆಂದರೇನು ಶ್ರೇಯವೆಂದರೇನು ಎಂಬವನ್ನು ತಿಳಿಮಾಡುವದಕ್ಕಾಗಿ ಕವಿಕುಲಗುರುವಾದ ಭಗವಾನ್ ಕಾಲಿದಾಸನು ತನ್ನ ರಘುವಂಶದ ೨ನೇ ಸರ್ಗದಲ್ಲಿ ದಿಲೀಪನ ಚರಿತ್ರೆಯ ಉದಾಹರಣೆಯನ್ನು ಕೊಟ್ಟು ತಿಳಿಸಿರುವನು. ದಿಲೀಪನು ತನ್ನ ಹೊಟ್ಟೆಯಲ್ಲಿ ಮಕ್ಕಳಿಲ್ಲದ್ದರಿಂದ ವಸಿಷ್ಠನ ಆಶ್ರಮಕ್ಕೆ ಹೋಗಿ ತನ್ನ ವಂಶವು ನಿಲ್ಲಬಾರದಾಗಿ ಅಂಗಲಾಚಿ ಬೇಡಿಕೊಂಡನು. ಅದಕ್ಕೆ ಆ ಋಷಿಯು ತನ್ನ ಆಶ್ರಮದಲ್ಲಿರುವ ಕಾಮಧೇನುವಿನ ಸೇವೆಯನ್ನು ಅನನ್ಯ ಭಕ್ತಿಯಿಂದ ಮಾಡೆಂತ ಹೇಳಿದನು. ಆ ಮೇರೆಗೆ ದಿಲೀಪನೂ ಆತನ ಹೆಂಡತಿಯಾದ ಸುದಕ್ಷಿಣೆಯೂ ಮಾಡುತ್ತಿರಲು ಒಂದು ದಿನ ಆ ಅರಸನ ಮನಸ್ಸನ್ನು ಪರೀಕ್ಷಿಸಬೇಕೆಂದು ಆ ಆಕಳು ಮಾಯೆಯಿಂದ ಬಂದು ಸಿಂಹವನ್ನು ನಿರ್ಮಿಸಿದಳು. ಆ ಸಿಂಹವು ಆ ಆಕಳನ್ನು ಹಿಡಿಯಿತು. ಆಗ ಆಕಳು ಬೆದರಿನಿಂತಿರಲು ರಾಜನಾದ ದಿಲೀಪನು ತನ್ನ ಬತ್ತಳಿಕೆಯಿಂದ ಬಾಣವನ್ನು ತೆಗೆಯಲೆತ್ನಿಸಿದನು. ಆತನ ಕೈಯು ಆ ಮೂಡಿಗೆಗೆ ಅಂಟಿಕೊಂಡಿತು. ಆಗ ಆ ಸಿಂಹವು ರಾಜನಿಗೆ ಅಂದದ್ದು "ಎಲೈ ಅರಸನೇ! ಇಷ್ಟೇಕೆ ಸಾಹಸ? ನಾನು ಇಲ್ಲಿಯ ದೇವದಾರು ವೃಕ್ಷದ ರಕ್ಷಣೆಗಾಗಿ ಶಿವನಿಂದ ನೇಮಿಸಲ್ಪಟ್ಟಿದ್ದೇನೆ. ನಿನ್ನ ಶಸ್ತ್ರಾಸ್ತ್ರಗಳ ಪ್ರಭಾವವು

ಇಲ್ಲಿ ನಡೆಯದು. ನಡೆ ಇಲ್ಲಿಂದ! ನಾನು ಬಹಳ ದಿನ ಉಪವಾಸವಿದ್ದೇನೆ. ಈ ಆಕಳನ್ನು ತಿಂದು ನನ್ನ ಹಸಿವೆಯನ್ನು ಹಿಂಗಿಸುತ್ತೇನೆ." ಹೀಗೆನ್ನಲು ರಾಜನು, "ಎಲೈ ಸಿಂಹವೇ! ನೀನು ಅಂದದ್ದೆಲ್ಲ ನಿಜ. ನಾನು ಕ್ಷತ್ರಿಯನು. ದೀನರನ್ನು ಪರಿಪಾಲನೆ ಯನ್ನು ಮಾಡುವದರಿಂದ ನನಗೆ ಕ್ಷತ್ರಿಯನೆಂದೆನ್ನುತ್ತಾರೆ. ಆದ್ದರಿಂದ ನೀನು ನನ್ನನ್ನು ತಿನ್ನು. ಈ ಆಕಳನ್ನು ಬಿಡು. ನಾನು ಸತ್ತರೆ ಏನೂ ಆಗುವದಿಲ್ಲ. ಈ ಆಕಳು ಸತ್ತರೆ ನನ್ನ ಗುರುಗಳ ನಿತ್ಯವಿಧಿಗಳು ಲೋಪವಾಗುವವು." ಅದಕ್ಕೆ ಸಿಂಹವು "ಇದೆಲ್ಲ ನಿಜ. ನಿನ್ನಂಥ ತಿಳಿಗೇಡಿಯು ನೀನೇ. ಒಂದು ಸೊಟ್ಟ ಆಕಳಿನ ದೆಸೆಯಿಂದ ತನ್ನ ಪ್ರಾಣವನ್ನರ್ಪಿಸುವ ಮೂರ್ಖನಾದಂಥವ ನೀನೊಬ್ಬನೇ. ಆ ಋಷಿಗೆ ಸಾವಿರಾರು ಆಕಳುಗಳನ್ನು ಕೊಡು. ಈ ಆಕಳನ್ನು ನಾನು ತಿನ್ನುವೆನು. ಕಲ್ಯಾಣಪರಂಪರೆಗ ಳಿಂದ ಕೂಡಿದಂಥ ನಿನ್ನ ಹೊಳೆಯುವ ಈ ದೇಹವನ್ನು ಉಳಿಸು. ಮತ್ತು ಸುಖದಿಂದ ನಿನ್ನ ರಾಜಧಾನಿಗೆ ಹೋಗಿ ಪ್ರಜಾಪರಿಪಾಲನೆಯನ್ನು ಮಾಡು." ಅರಸನು "ಎಲೈ ಸಿಂಹರಾಜನೇ ನೀನು ಹೇಳಿದ್ದೆಲ್ಲ ಯೋಗ್ಯವಾಗಿರುವದು. ಆದರೆ ಈ ಆಕಳು ಕಾಮ ಧೇನುವಾದ್ದರಿಂದ ಬೇಕಾದಷ್ಟು ಆಕಳುಗಳನ್ನು ಕೊಟ್ಟರೂ ಋಷಿಗೆ ತೃಪ್ತಿಯಾಗಲಾ ರದು. ನನ್ನ ಈ ಮರ್ತ್ಯವಾದ ದೇಹದ ರಕ್ಷಣಾರ್ಥವಾಗಿ ನಿನಗೆ ಕರುಣೆ ಬಂತು. ನನ್ನ ಯಶಃಶರೀರದ ಕಡೆಗಷ್ಟು ಗಮನವನ್ನು ಕೊಡು. ಕ್ಷತ್ರಿಯರಿಗೆ ಯಶಸ್ಸಿನಕಿಂ ತಲೂ ಈ ಚಂಚಲವಾದ ದೇಹವು ಮಿಗಿಲಾಗಿದ್ದಲ್ಲ. ಆದ್ದರಿಂದ ನನ್ನ ಮೇಲೆ ಕನಿಕ ರವನ್ನು ತೋರಿ ನನ್ನನ್ನು ತಿಂದು ಬಿಡು. ಮತ್ತು ಈ ಆಕಳನ್ನು ಬಿಡು. ಆಕೆಯು ಮನೆಗೆ ಹೋಗಲಿ" ಹೀಗೆ ಅರಸನು ನುಡಿದು ತನ್ನ ದೇಹವನ್ನು ಆ ಸಿಂಹಕ್ಕೆ ಅರ್ಪಣ ಮಾಡಿದನು. ಈ ಕಥೆಯಲ್ಲಿ ದಿಲೀಪನ ಮುಂದೆ ಎರಡು ಮಾರ್ಗಗಳು ಒಡೆದು ಕಾಣಿ ಸುತ್ತಿದ್ದವು. ಮೊದಲನೆಯದು ಇಂದ್ರಿಯಗಳಿಗೆ ಸುಖವನ್ನೀಯುವ ಮಾರ್ಗ. ಹೊಸ ಹರೆಯತನ; ತಾರುಣ್ಯ ಲಾವಣ್ಯಗಳಿಂದ ಕೂಡಿದಂಥ ಹೆಂಡತಿ; ವಾತ್ಸಲ್ಯದಿಂದ ತುಂಬಿ ತುಳುಕುವ ಪ್ರಜೆಗಳಿಂದ ತೀವಿದ ರಾಜ್ಯ; ರಾಜ್ಯವೆಂದರೆ ಬೇಕಾದ ಸುಖೋ ಪಭೋಗದ ತವರೂರು. ಇಷ್ಟೆಲ್ಲ ಒಂದು ಕಡೆ. ಎರಡನೆಯ ಕಡೆಗೆ ಒಂದೇ ಒಂದು ನಿಮಿಷದಲ್ಲಿ ಭಯಂಕರವಾದ ಮರಣ. ಈ ಎರಡರಲ್ಲಿ ಯಾವದು ಬೇಕೆಂಬದನ್ನು ಯಾರಿಗಾದರೂ ಕೇಳಿದರೆ ಏನು ಹೇಳಬಹುದು? ಮೊದಲನೆಯದೆಂದೇ ಹೇಳಬಹುದು. ಆದರೆ ದಿಲೀಪನು ಆರ್ಯವೀರನಿದ್ದದರಿಂದ ತತ್ವಜೀವಿಯಾಗಿದ್ದನು. ಅವನಿಗೆ ಈ ಆಧಿಭೌತಿಕ ದೇಹವೊಂದೇ ಇರಲಿಲ್ಲ. ಅವನಿಗೆ ಇನ್ನೊಂದು ಯಶಃಶರೀರವಿತ್ತು. ಈ ಶರೀರವು ಭೌತಿಕ ಶರೀರಕ್ಕಿಂತ ಹೆಚ್ಚೆಂದು ಅವನಿಗೆ ಕಾಣಿಸುತ್ತಿತ್ತು. "ಸಂಭಾವಿತಸ್ಯ ಚಾಕೀರ್ತಿಃ ಮರಣಾದತಿರಿಚ್ಯತೇ!" ಎಂದು ಭಗವಂತನು ಹೇಳಿದಂತೆ ಈ ಕ್ಷತ್ರಿಯ ವೀರನಿಗೆ ತನ್ನ ಯಶಸ್ಸು ಶರೀರಕ್ಕಿಂತಲೂ ಮಿಗಿಲಾದ್ದರಿಂದ ಆತನು ಈ ದೇಹ ವನ್ನು ಬಿಟ್ಟುಬಿಡಲು ಸಿದ್ಧನಾದನು.

ಈ ತತ್ವವು ನಮ್ಮ ಆರ್ಯಾವರ್ತದಲ್ಲಿ ಈಗ ಮಾಯವಾದ್ದರಿಂದ ಎಲ್ಲ ಕಡೆಗೆ ಆಳುತನವು ಹೆಚ್ಚುತ್ತಲಿದೆ. ದುಡ್ಡು ಎಲ್ಲರನ್ನೂ ಆಳುತ್ತದೆ. ಸ್ವಾರ್ಥವೆಂದರೆ ತೀರಿತು ಬೈರಾಗಿಗಳೂ ಬಾಯಿ ತೆರೆಯಹತ್ತಿದ್ದಾರೆ. ಇಂಥ ಅನಾರ್ಯ ಹಿಂದುಸ್ಥಾನವನ್ನು ತಿರುಗಿ ಆರ್ಯತನದ ಪಟ್ಟಕ್ಕೆ ಕೂಡಿಸಬೇಕಾದರೆ ಆರ್ಯಭೂಮಾತೆಯ ಮಕ್ಕಳಾದ ನಮ್ಮಲ್ಲಿ ಶ್ರೇಯೋಮಾರ್ಗದ ಆಚರಣೆಯು ಬಲು ಉತ್ಕಟತೆಯಿಂದ ನಡೆಯಲಿಕ್ಕೆ ಬೇಕು. ತಮ್ಮ ಸ್ವಾರ್ಥವೇ ಎಲ್ಲಕ್ಕೂ ಹೆಚ್ಚಿನದೆಂದು ಎಲ್ಲಿಯವರೆಗೆ ನಾವು ತಿಳಿದು ಕೊಂಡು ನಮ್ಮ ಜೀವನ ಕಾರ್ಯವನ್ನು ನಡೆಸಿರುವೆವೋ ಅಲ್ಲಿಯವರೆಗೆ ನಮಗೆ ಸ್ವರಾಜ್ಯಸ್ವಾತಂತ್ರ್ಯದ ಮಾತೆಲ್ಲಿಯದು ! ಸೆಲುವಿಗೆ ಹಾರದ ಬೆಕ್ಕು ಸ್ವರ್ಗಕ್ಕೆ ಹಾರ ವದೆಂತು? ನಮ್ಮ ಕುಟುಂಬಗಳಲ್ಲಿಯೂ ಸಹ ತತ್ವಭಜನೆಯನ್ನು ಮರೆತಂಥ ನಾವು ರಾಷ್ಟ್ರದ ತತ್ವಾಚರಣೆಯನ್ನು ಎಂದು ಮಾಡುವೆವು ? ಪರಮಾತ್ಮನು ನಮ್ಮ ಜನರಿಗೆ ಶ್ರೇಯೋಮಾರ್ಗವನ್ನು ತೋರಿಸಿ ರಾಷ್ಟ್ರದ ಏಳಿಗೆಗಾಗಿ ಮಡಿಯುವ ಧೈರ್ಯವನ್ನು ಕೊಡಲಿ ಎಂದು ಬೇಡಿ ಈ ಲೇಖವನ್ನು ಮುಗಿಸುವೆವು.

—ಶ್ರೀಧರ.

---

## ಅಭಯಯಾಚನೆ!

ಆತುರದಿ ಹಾತೊರೆದು ಬಂದೆ 'ಅಪ್ಪಾ' ಎಂದು ।
ಯಾತರದು ಕಾತರವು ನಿನ್ನ ಬಳಿಗಿಂದು ॥ ಪಲ್ಲ ॥

ಹೆರತನದ ಹೆದರಿಕೆಯು ಹೃದಯದೊಳು ಹೊಕ್ಕಿಹದು ।
ನರತನದ ಹುದಲೊಳಗೆ ಜೀವ ಸಿಕ್ಕಿಹದು ॥
ಹೊರತನದ ಬಲೆಯೊಳಗೆ ಬುದ್ಧಿ ಬಳಲಾಡುವದು ।
ಪರ! ನಿನ್ನ ಕಿಂಕರಗೆ ಅಭಯಕರ ನೀಡೋ ॥ ೧ ॥

ಎತ್ತೆತ್ತ ನೋಡಿದರು ಮತ್ತೆ ಬೇರೇ ಇಲ್ಲ ।
ಅತ್ತ ನೀನೇ ಮತ್ತು ಇತ್ತ ನೀನು ॥
ಸುತ್ತಿರುವ ಬೆದರಿಕೆಯ ಬಟ್ಟೆಯಂ ಬಿಚ್ಚ್ಯೊಗೆದು ।
ಬತ್ತಲಾದೆನು ಬಾಲನಂತೆ ನಾನೂ ॥ ೨ ॥

ಮುಚ್ಚಿಡುವದೇಕಿನ್ನು ಬಚ್ಚಿಡುವದಿನ್ನೆಲ್ಲಿ ।
ಮುಚ್ಚುಮರೆ ಮಾಳ್ಪದಕೆ ಮುಸುಕು ಇಹುದೆಲ್ಲಿ ॥
ನೆಚ್ಚು ಮೆಚ್ಚುಗಳನ್ನು ಬಿಚ್ಚಜೀವದೊಳೊತ್ತಿ ।
ಹೊಚ್ಚಿ ಪ್ರೀತಿಯ ಸೆರಗು ಎತ್ತಿಕೋಳೆನ್ನ ॥ ೩ ॥

—ಅಂಬಿಕಾ ತನಯದತ್ತ.

---

## ಮೊಟ್ಟ ಮೊದಲು ಮೂಸಿದ ಮಲ್ಲಿಗೆಗಳು!

ಆಹಹಾ! ಮಲ್ಲಿಗೆ–ಮಲ್ಲಿಗೆ–ಮಲ್ಲಿಗೆ! ಜಾಜಿಮಲ್ಲಿಗೆ– ಸೂಜಿ ಮಲ್ಲಿಗೆ! ದುಂಡ ಮಲ್ಲಿಗೆ–ಚೆಂಡು ಮಲ್ಲಿಗೆ! ಆಹಹಾ! ಮಲ್ಲಿಗೆ–ಬಿಳಿ ಮಲ್ಲಿಗೆ! ಚಿಕ್ಕಂದಿನಲ್ಲೊಮ್ಮೆ ಮೂಸಿದೆನಿವೇ ಮಲ್ಲಿಗೆಗಳನ್ನು–ಬೊಗಸೆದುಂಬ ತುಂಬಿದ ಈ ಬಿಳಿಮಲ್ಲಿಗೆಗಳನ್ನು! ಬಿಳಿಬಿಸಿಲ ಕಂಡು ಮುದ್ದಿಟ್ಟಿರುವೆನು; ನೀಲಿಯ ಮುಗಿಲ ಕಂಡು ನಲಿದಾಡಿರುವೆನು; ಹಚ್ಚನೆಯ ನೆಲವ ಕಂಡು ಮೆಚ್ಚಿರುವೆನು. ಕಾರುಕಗ್ಗತ್ತಲೆಯ ನಟ್ಟನಡು ರಾತ್ರಿಯಲ್ಲಿ ಹೊಳೆಯಿಂದ ಸೂಸಿ ಬರುವ ಕಲಕಲವನ್ನು ಕೇಳಿರುವೆನು. ನಲ್ಲನನ್ನಷ್ಟುಗೈಯ್ಯ: ನಲ್ಲಳು ಮುಸುಕುದೆರೆಸಂತೆ ಬಿನ್ನನೆ ನನ್ನೆದುರಿಗೆ ಬಂದು ನಿಂತ ಬೆಳಗಾಲದೊಳಗಿನ ಬಂಗಾರದ ಸಂಜೆಯುನ್ನು ಹಾಳುನೆಲದೊಳಗಿಂದ ಹಾಯ್ದು ಹಾದಿರುಗುವ ಹೊತ್ತಿನಲ್ಲಿ ಮನಸಾರೆ ನೋಡಿರುವೆನು. ಆದರೂ ಅಂದು ಚಿಕ್ಕಂದಿನಲ್ಲಿ ಮೊಟ್ಟ ಮೊದಲು ಮೂಸಿದ ಬೊಗಸೆದುಂಬ ತುಂಬಿದ ಬಿಳಿಮಲ್ಲಿಗೆಗಳ ಕಂಪಿನಿಂದ ನನ್ನ ನೆನವು ಇನ್ನೂ ಈಗಲೂ ಘಮುಘುಮಿಸುತ್ತದೆ. ನನ್ನ ಆಯುಷ್ಯದಲ್ಲಿ ಷ್ಟೋ ಸೊಗಸಿನ ದಿನಗಳು ಬಂದು ಹೋದವು. ನಾನೂ ಹಬ್ಬ ಹುಣ್ಣಿವೆಗಳನ್ನೆಲ್ಲ ನಗೆಗಾರರಕೂಡ ನಕ್ಕು ಕಳೆದಿರುವೆನು. ಮೋಡ ಗವಿದ ಮುಂಜಾವುಗಳನ್ನೆಲ್ಲ ಹಾಡು ಗೊಣಗುಟ್ಟುವದರಲ್ಲಿ ಹಾಳು ಮಾಡಿರುವೆನು. ಹೆಂಡತಿ ಹೆಣೆದ ಬಕುಲ ಮಾಲೆಯನ್ನು ಸಂಜೆಯಲ್ಲಿ ಧರಿಸಿ ಸುಖಬಟ್ಟಿರುವೆನು. ಆದರೂ ಅಂದು ಚಿಕ್ಕಂದಿನಲ್ಲಿ ಮೊಟ್ಟ ಮೊದಲು ಮೂಸಿದ ಬೊಗಸೆದುಂಬ ತುಂಬಿದ ಬಿಳಿ ಮಲ್ಲಿಗೆಗಳ ಕಂಪಿನಿಂದ ನನ್ನ ನೆನವು ಇನ್ನೂ ಈಗಲೂ ಘಮು ಘುಮಿಸುತ್ತಿದೆ.

---

## ಮೆಚ್ಚು.

ಪ್ರಪಂಚ ಪ್ರವಾಹದಲ್ಲಿ ತೇಲಿ ಅಗಲುವ ಮುನ್ನ ನಿನಗೇನಾದರೂ ಮೆಚ್ಚನೀಯಬೇಕೆಂದು ಮಾಡಿರುವೆ. ನನ್ನ ಮನದಲ್ಲೆನ್ನ ಕೊಂಡು ಕೊಳ್ಳಬಹುದೆಂದು ಬಗೆಯುವ ಹುಚ್ಚಿ ನಾನಲ್ಲ. ನಿನ್ನ ಜೀವವಿನ್ನೂ ಎಳಕ; ನಿನ್ನ ಹಾದಿಯಿನ್ನೂ ಸಿಡಿದು; ನಮ್ಮ ಪ್ರೀತಿ ನಿನಗೆ ಅರಗುಟುಕು; ಅಂತೆಯೇ ನೀನು ನಮ್ಮನ್ನು ಬಿಟ್ಟೋಡುವೆ ನನ್ನ ಮಗುವೇ! ನಿನ್ನ ಆಟನೋಟ ಬೇರೆ; ನಿನ್ನ ಗೆಳೆಗೆಳೆತಿಯರು ಬೇರೆ; ನಮ್ಮ ನೆನವು ನಿನಗೇಕಾದೀತು? ಚಿಂತೆಯಿಲ್ಲೆನ್ನ ಮಗುವೇ! ಕಳೆದ ದಿವಸಗಳನ್ನೆಳೆಯಲಿಕ್ಕೆ ನಮ್ಮ ಮುಪ್ಪಿನಲ್ಲಿ ಸಾಕಷ್ಟು ಹೊತ್ತುಂಟು ನನ್ನ ಮಗು! ಬಾಯಿಗೆ ಬರಲಾರದುದನ್ನು ಬಯಕೆಯಿಂದ ಹಿಂಗಿಸಿಕೊಳ್ಳಲೂ ಹೊತ್ತುಂಟು ನನ್ನ ಮಗುವೇ! ಗುಡ್ಡದ ಹೊಟ್ಟೆಯಲ್ಲಿ ಹುಟ್ಟಿದ ಹೊಳೆಯು ಅದರ ಒಡ್ಡನ್ನೊಡೆದೋಡಿ ಹಾಡಿ ಹರಿಯುವದಿಲ್ಲವೇ! ಆನರೆ ಆ ಗುಡ್ಡವು ಇದ್ದಲ್ಲಿಡ್ಡುಕೊಂಡು ಅದನ್ನು ದಿಟ್ಟಿಸಿ ನಿಟ್ಟಿಸಿ ನನ್ನಿಯಿಂದ ನೋಡಿ ನೋಡಿ ನಲಿಯುವದಲ್ಲವೇ ನನ್ನ ಮಗು!

ಓಂ ನಲ್

# ಸ್ವಧರ್ಮ

॥ ಜಯಂ ಭದ್ರಂ ಶುಭಂ ಮಂಗಲವ್ ॥

ವರ್ಷ-೩ | ಶಕ ೧೮೪೮ ಅಕ್ಷಯ ಸಂ॥-ಆಷಾಢ. | ತಿಂ.-೪

## "ಹೆಮ್ಮೆ" "ಮುಳಿಸು"-ಎಲ್ಲಿ?

ಹೆಮ್ಮೆ ನನಗಿಲ್ಲವೇನೆ!
ಅಮ್ಮಯ್ಯ! ಮುಳಿಸು ನಿನಗಿಲ್ಲವೇನೆ?
ಏನಾದರೂ ನಿನ್ನ ಮಾತನ್ನು ಕೇಳದೆಯೆ
ನಾನು ಮರುಮಾತಾಡೆ ಗದ್ದರಿಸಿ ಬೈಯ್ಯುವಿಯೆ
ಸಿಡುಕಿನಲಿ ನಿನ್ನಬಳಿಯಿಂದೆ ಹೊರಡುವೆನು
"ಬರುವಿಯೇ ಮತ್ತೆನ್ನ ಬಳಿಗೆ" ಎನ್ನುವಿನೀನು
"ಇಲ್ಲ ನಡಿನಡಿ ಬರುವದಿಲ್ಲ" ಎನ್ನುವೆನು
ಒಳ್ಳೆ ಹೆಮ್ಮೆಯು ಮಾತ ಹೇಳಿಹೋಗುವೆನು
ಹೋಗಿನಾನಲ್ಲಿಂದೆ ಅಕ್ಕನೊಡನಾಡುವೆನು
ಆಗವಳು ಕಾಡುತ್ತ ಅಳಿಸುವಳು ನನ್ನನ್ನು
ಅಳುತಳುತೆ ಮರುಳಿ "ಅಮ್ಮಾ" ಎಂದು ನಾನಿನ್ನ
ಬಳಿಯಲಿಯೆ ಬಂದು ದೂರನ್ನು ಹೇಳುವೆನಮ್ಮಾ
ಗದ್ದರಿಸಿ ಅಕ್ಕನನು, ನನ್ನ ಮೆಯ್‌ದಡವಿ
ಮುದ್ದಿಡುತೆ ಮತ್ತೆ ಕರೆಕೊಂಡು ರಂಬಿಸುವಿ
ನನ್ನ ಹೆಮ್ಮೆಯು ಆಗ ಹೋಗುವದದೆಲ್ಲಿ?
ನಿನ್ನ ಆ ಮುಳಿಸು ಮರೆಯಾಗುವದದೆಲ್ಲಿ?

—ಕೃ. ಶ್ರೀ. ಬೆಟಗೇರಿ "ಕವಿಭೂಷಣ"

ಸವಿ:— ಇವು ಚಿಕ್ಕಮಗುವು ತಾಯಿಗೆ ಹೇಳುವ ಮಾತು. ಚಿಕ್ಕಮಕ್ಕಳ ಇಂಥ ಮುದ್ದುಮಾತಿನ ಬಣ್ಣನೆಯು ಪ್ರಾಚೀನ ಕಾವ್ಯಪ್ರಪಂಚದಲ್ಲಿ ಅಲ್ಲಲ್ಲಿ ತೋರಿಬರುವದುಂಟು. ಆದರೆ ಹಿಂದಿನ ಆ ಕವಿಗಳ ಅಂಥ ಬಣ್ಣನೆಗೂ, ಇಂದಿನ ಈ ಕವಿಯ ಇಂಥ ಬಣ್ಣನೆಗೂ ಬಿಡುವು ಬಹಳ. ಹೀಗೆನಿಸಿದರೂ, ಮೇಲಿನ ಕವಿತೆಯನ್ನೋದುತ್ತಲೇ ಭಾಗವತದಲ್ಲಿಯ ಯಶೋದಾ ಕೃಷ್ಣರ ಸಲ್ಲಾಪದ ಲೀಲಾ ಪ್ರಸಂಗವು ನೆನಪಿಗೆ ಬಾರದೆ ಹೋಗದು. ಮೇಲಿನ ನುಡಿಗಳಲ್ಲಿ ಭಕ್ತ—ಭಗವಂತನಲ್ಲಿಯ ಸಂಬಂಧವು ಹೀಗಿರುವದುಂಟೆಂದು ಸೂಚಿತವಾಗುವಂತಿದೆ. “ **ಅಂಗಾಲಿಗೆ ಹೇಸಿಗೆಯಿಲ್ಲ; ಕರುಳಿಗೆ ನಾಚಿಗೆಯಿಲ್ಲ** ” ಎಂದು ಹೇಳುವ ಗಾದೆಯ ಸವಿಯುಂಡವರಿಗೆ ಹೆಚ್ಚಿಗಿನ್ನೇನು ಸವಿಗೊಡಬೇಕು. ಎಲ್ಲವೂ ತಿಳಿತಿಳಿಯಾಗಿದೆ. ದಿನ ಬೆಳಗಿದರೆ ಮಕ್ಕಳ ಮುದ್ದುಮಾತು ಕೇಳಿಕೇಳಿ ಮೋದಿಸುವ ತಂದೆ ತಾಯಿಗಳಿಗಂತೂ ಮೇಲಿನ ನುಡಿಗಳಲ್ಲಿಯ ಸವಿಯು ಗೊತ್ತೇಗೊತ್ತು. ಚಿಕ್ಕಂದಿನಲ್ಲಿ ಅಕ್ಕರದ ಮಾತಾಡಿ ಗೊತ್ತಿದ್ದ ಬೆಳೆದುಬಂದ ನಮ್ಮೆಲ್ಲರಿಗೂ ಈ ಕವಿತೆಯ ಸವಿಯು ತಿಳಿದೇ ತಿಳಿಯುವದು.

---

# ಮೊದಲಿನ ಹದಿಮೂರು ಉಪನಿಷತ್ತುಗಳು.

ಮೊದಲು:—ಭಾರತೀಯ ಆಧುನಿಕ ಪ್ರಮುಖ ತತ್ವಜ್ಞಾನಿಗಳಲ್ಲೊಬ್ಬರೂ, ಅತ್ಯಂತ ಸೂಕ್ಷ್ಮ ಹಾಗೂ ತೀಕ್ಷ್ಣ ಬುದ್ಧಿಯವರೂ, ಅನುಭಾವಿ (Mystic) ಗಳೂ ಎಂದು ಹೆಸರಾಗಿರುವ **ಶ್ರೀ ರಾನಡೆ ರಾಮುಭಾವೂ** ಅವರು ಮೊದಲಿನ ಹದಿಮೂರು ಉಪನಿಷತ್ತುಗಳನ್ನು ಈಗ ಹತ್ತು—ಹನ್ನೆರಡು ವರ್ಷಗಳಿಂದ ಬಹು ಪರಿಶ್ರಮಪೂರ್ವಕವಾಗಿ ಅಭ್ಯಾಸಮಾಡಿ, ಪ್ರತಿಯೊಂದು ಉಪನಿಷತ್ತನ್ನು ಬಗೆದು ( ಪೃಥಃಕರಿಸಿ, ವಿಮರ್ಶಿಸಿ ) ಅವೆಲ್ಲವುಗಳಲ್ಲಿ ಹೇಳಿರುವ ಹಲವು ತತ್ವಜ್ಞಾನ ವಿಷಯಕ ಮಾತುಗಳನ್ನೆಲ್ಲ ಸಂಗ್ರಹಿಸಿ, ಏಕೀಕರಿಸಿ, ಒಳಹೊರಗೂ ಅಂದವಾಗಿಯೂ ಮುದ್ದಾಗಿಯೂ ಇರುವಂಥ ಒಂದು ಮಹತ್ವದ ಗ್ರಂಥವನ್ನು ರಚಿಸಿ ಸನಾತನ ಧರ್ಮ-ಹಾಗೂ ತತ್ವಜ್ಞಾನದ ಬಹು ದೊಡ್ಡ ಸೇವೆಯನ್ನು ಮಾಡಿರುವರು. ಈ ಗ್ರಂಥವು ಹೊರಬಿದ್ದು ಇನ್ನೂ ಮೂರು ತಿಂಗಳು ಸಹ ಆಗಿಲ್ಲ. ಈ ಹಿರಿ ಹೊತ್ತಿಗೆಯು ಬರೆದವರ ಬಗೆಯ ಬಸುರಿನಲ್ಲಿದ್ದಾಗಿನಿಂದಲೇ ಜಗನ್ಮಾನ್ಯ ಪಂಡಿತರಾದ ಶ್ರೀ ಭಾಂಡಾರಕರ ಪ್ರಭೃತಿ ವಿದ್ವಾಂಸರಿಂದ ಹೊಗಳಸಿಕೊಂಡಿದೆ. ಇದು ಅಚ್ಚುಕಟ್ಟಾಗಿ ಹೊರಬೀಳುವ ಹಾದಿಯನ್ನು ತತ್ವಜ್ಞಾನ ಧರ್ಮ, ಹಾಗೂ ಅನುಭವದ ದಾರಿಗರು ಬಹುದಿನಗಳಿಂದ ಕಾದುಕೊಂಡಿದ್ದರು. ಆ ಹೊತ್ತಿಗೆಯು ಇದೀಗ ಹೊರಬಿದ್ದಿತು. ಇಂಗ್ಲಿಶಭಾಷೆಯಲ್ಲಿ ಆ ಗ್ರಂಥವಿರುವದರಿಂದ

ಬರೆ ಕನ್ನಡವನರಿತ ಧರ್ಮ-ತತ್ತ್ವಜ್ಞಾನದ ಜಿಜ್ಞಾಸುಗಳಿಗೆ ಅದರ ಲಾಭವು ಕೆಲಮಟ್ಟಿಗಾದರೂ ದೊರೆಯಬೇಕೆಂಬುದೇ ಈ ಬರಹದ ಗುರಿಯು.

**ಗ್ರಂಥಕಾರರು:**—ವಿದ್ವನ್ಮಾನ್ಯ ಶ್ರೀ ರಾನಡೆಯವರು ಪೌರ್ವಾತ್ಯ ಹಾಗೂ ಪಾಶ್ಚಿಮಾತ್ಯರಿಗೆ ಅತ್ಯಂತ ಉಪಯುಕ್ತವೂ ಮಾನ್ಯವೂ ಆಗಿರುವ ಔಪನಿಷದಿಕ ತತ್ತ್ವಜ್ಞಾನದ ಈ ಗ್ರಂಥವನ್ನು ಬರೆದು ದೊರಕಿಸಿರುವ ಈ ಯಶಸ್ಸಿನಲ್ಲಿ ಕರ್ನಾಟಕಸ್ಥರೂ ಸಾನಂದಾಭಿಮಾನಿಗಳಾಗಲಿಕ್ಕೆ ಬಲವಾದ ಕಾರಣಗಳಿವೆ. ಈ ಗ್ರಂಥಕಾರರು ಸಾಮಾನ್ಯವಾಗಿ ಮರಾಠಿಗರೆಂದು ಎಣಿಸಲ್ಪಡುತ್ತಿದ್ದರೂ ಒಂದು ರೀತಿಯಲ್ಲಿ ಅವರು ಕನ್ನಡಿಗರೇ ಅಹುದು. ಏತಕ್ಕೆಂದರೆ ಅವರ ಹುಟ್ಟು-ಬಳವಿಗಳ ನಾಡು ಜಂಬುಕಂಡಿ. ಅವರಿಗೆ ಅನುಭಾವದೋರಿದ ಆಧ್ಯಾತ್ಮ ಗುರುಗಳು ಉಮದಿಯ ಸಾಧು ಮಹಾರಾಜರು, ಅಚ್ಚಗನ್ನಡಿಗರು. ಇವರ ಮಠದ ಪದಪದ್ಯಗಳೂ, ಗುರುಪರಂಪರೆಯೂ ಕೆಚ್ಚ ಕನ್ನಡಿಗರದಾಗಿದೆ ( ಭಜನಾವಲಿಯಲ್ಲಿ ಇತ್ತೀಚೆ ಹಲಕೆಲವು ಮರಾಠಿ ಸಂತರ ಪದಗಳೂ ಸೇರಿದುದು ವಿಶೇಷ ಮಾತಲ್ಲ. )ಶ್ರೀ ರಾನಡೆಯವರ ಮುಖ್ಯ ಆಶ್ರಮವೂ ವಾಸಸ್ಥಾನವೂ ನಿಂಬಾಳ, ವಿಜಾಪೂರ ಜಿಲ್ಲೆ, ಕರ್ನಾಟಕದ ಕಟ್ಟೇಮನೆ. ಶ್ರೀ. ರಾನಡೆಯವರು ಪ್ರಸ್ತುತ ಗ್ರಂಥದ ಹೊಳವು ಹಾಕಿ ಸಾರಾಂಶರೂಪದಲ್ಲಿ ಮೊಟ್ಟಮೊದಲು ಉಪನ್ಯಾಸರೂಪದಲ್ಲಿಹೇಳಿದ್ದು ಬೆಂಗಳೂರಲ್ಲಿ !—ಕರ್ನಾಟಕದ ರಾಜಧಾನಿಯಲ್ಲಿ! ಹೊರ್ತು ಶ್ರೀ ರಾನಡೆಯವ ಪ್ರಸ್ತುತ ಗ್ರಂಥಕ್ಕೂ ಅವರು ಬರೆಯಲು ಹೊಳವು ಹಾಕಿರುವ ಭಾರತೀಯ ಧರ್ಮ ಹಾಗೂ ತತ್ತ್ವಜ್ಞಾನ ಗ್ರಂಥಗಳ ವಿಶ್ವಕೋಶಕ್ಕೂ ಆರ್ಥಿಕ ಹಾಗೂ ಬೇರೆ ಹಲವು ತರದ ಸಹಾಯಮಾಡಿ ಮೊಟ್ಟ ಮೊದಲು ನೆರವಾದದ್ದು ಕನ್ನಡಿಗರ ಜಂಬುಕಂಡಿ ಸಂಸ್ಥಾನವು.

ಜಂಬುಕಂಡಿ ಸಂಸ್ಥಾನದಲ್ಲೆಲ್ಲ ಕನ್ನಡ ಶಾಲೆಗಳೇ ಆಗಿ, ಅದು ಕರ್ನಾಟಕದ ಕೇಂದ್ರಾಭಿಮುಖವಾಗಿದ್ದರೆ, ಕರ್ನಾಟಕಕ್ಕೊಂದು ಸ್ವತಂತ್ರ ವಿಶ್ವವಿದ್ಯಾಲಯವು ಇರುತ್ತಿದ್ದರೆ ಶ್ರೀ. ರಾನಡೆಯವರಂಥ ಎಷ್ಟೋ ರತ್ನಗಳು ಕರ್ನಾಟಕ ಮಾತೆಯ ಮಣ್ಣಿನಲ್ಲಿ ಹುಟ್ಟಿ, ಅವಳಿಂದಲೆ ಬಳೆದು ಬುದ್ಧಿ ಸಾಹಸಾದಿ ಬೆಡಗಿನಿಂದ ಥಳಳಳಿಸಿ ಪರನಾಡುಗಳಲ್ಲಿ ಎಸೆಯುತ್ತಿದ್ದರೂ ಕರ್ನಾಟಕ ಮಾತೆಗೆ ಮಾತ್ರ ‘ ಇದು ತನ್ನ ಮಗು , ತನ್ನ ಅಕ್ಕರದ ಕಂದ ವೆಂದು ತಾಯಿಯ ಕರಳಿನ ಕಕ್ಕುಲತೆಯಿಂದ ಹೇಳಲು ಅಸಿಮಿಸಿಗೊಳ್ಳುವ ಇಂದಿನಂಥ ಹೊತ್ತು ಎಂದೂ ಬರುತ್ತಿದ್ದಿಲ್ಲ !

ಶ್ರೀ. ರಾನಡೆ ಅವರ ಉಚ್ಚ ಶಿಕ್ಷಣವೂ, ಮುಂದೆ ಅವರು ಪ್ರೊಫೆಸರರಾಗಿ ಕೆಲಸ ಮಾಡಿದ್ದು ಮಹಾರಾಷ್ಟ್ರದಲ್ಲಿ. ಆದುದರಿಂದ ಅವರ ಶಿಷ್ಯರೂ ಸ್ನೇಹಿತರೂ ಅತ್ತಕಡೆಗೆ ಹೆಚ್ಚಾಗಿದ್ದರೆ ಅಚ್ಚರಿಯಿಲ್ಲ. ಆದರೂ ಶ್ರೀ. ರಾನಡೆಯವರು ಕನ್ನಡವನ್ನು ಮರೆತಿಲ್ಲ; ಕನ್ನಡಿಗರ ಬಾಂಧವ್ಯ ಬಿಟ್ಟಿಲ್ಲ. ಕರ್ನಾಟಕದ ಅನುಭವ ಗ್ರಂಥಗಳ

ಸೂಕ್ಷ್ಮ ಅಭ್ಯಾಸ ಮಾಡಲು ಬಹಳ ತವಕ ಪಡುತ್ತಿದ್ದಾರೆ. ಶ್ರೀ. ಬಸವೇಶ್ವರಾದಿ ಶರಣರ ವಚನಗಳನ್ನು ಓದಿಸಿ ಕೇಳಿ ತಿಳಕೊಳ್ಳುತ್ತಿದ್ದಾರೆ. ಎಷ್ಟೋ ಭಾಷೆಗಳ ತುಲನಾತ್ಮಕ ಅಭ್ಯಾಸ ಮಾಡಿದ ಪಂಡಿತ ರಾನಡೆಯವರಿಗೆ ಕನ್ನಡವನ್ನು ಕೈವಶಮಾಡಿ ಕೊಳ್ಳಲು ಕಠಿಣವೆಂದು ಯಾರೂ ಹೇಳಲಿಕ್ಕಿಲ್ಲ. ತತ್ವ ಜಿಜ್ಞಾಸುಗಳಾದ ಕರ್ನಾಟಕದ ಪದವೀಧರರೂ ವಿದ್ವನ್ಮಣಿ ರಾನಡೆಯವರ ಬಳಿ ಸಮಿತ್ಪಾಣಿಗಳಾಗಿ ಹೋಗಿ ಅವರ ಜ್ಞಾನದ ಲಾಭವನ್ನು ಪಡೆಯುವ ಈ ಸಂಧಿಯನ್ನು ಕಳೆಯಲಿಕ್ಕಿಲ್ಲವೆಂದು ನಂಬಿಗೆ. ಜ್ಞಾನ ಹಾಗೂ ಸಾಧನ ಮಾರ್ಗದವರಿಗೆ ಅವರ ಆಶ್ರಮದ ಬಾಗಿಲು ಯಾವಾಗಲೂ ತೆರದದ್ದೇ ಇದೆ.

**ಹೊತ್ತಿಗೆಯ ಹೊರವ್ಯೈಕುರಿತು:**— ಇಂಥ ಉಪನಿಷತ್ತು ಇಷ್ಟುಗಂಟೆಗೆ ಇಂಥದಿನ ಇಂಥ ಸ್ಥಳದಲ್ಲಿ ಬರೆಯಲ್ಪಟ್ಟಿತೆಂದು ಎಲ್ಲಿಯೂ ಉಲ್ಲೇಖವಿಲ್ಲ. ಅದರಿಂದ ಹಲಕೆಲವು ಒಳಹೊರಗಿನ ಪ್ರಮಾಣಗಳ ಮೇಲಿಂದ ಅವುಗಳ ಕಾಲವನ್ನು ಸ್ಥೂಲಮಾನದಿಂದ ಕಂಡುಹಿಡಿದಿರುವರು. ಪ್ರಸ್ತುತ ಒಂದೊಂದು ಅಧ್ಯಾಯದ ವಿವೇಚನೆಯಾದ ಬಳಿಕ ಅದರ ಕೊನೆಗೆ ಮೇಲ್ಕಾಣಿಸಿದ ಹದಿಮೂರೂ ಉಪನಿಷತ್ತುಗಳೊಳಗಿನ ತಮ್ಮ ವಿವೇಚನಕ್ಕೆ ಆಧಾರಭೂತವಾದ ಮಂತ್ರಗಳನ್ನು ದೇವನಾಗರಿಯಲ್ಲಿ ಮುದ್ರಿಸಿದ್ದಾರೆ. ಹಾಗೂ ಪ್ರತಿಯೊಂದು ಪ್ರಕರಣದಲ್ಲಿ ವಿಷಯಾಂತರವಾಗದಂತೆ ಬಲು ಎಚ್ಚರದಿಂದ ಪಾಶ್ಚಾತ್ಯ ತತ್ವಜ್ಞರ ವಿಶೇಷತಃ ಗ್ರೀಕ ತತ್ವಜ್ಞಾನಿಗಳ ವಿಚಾರಗಳನ್ನೂ ತಕ್ಕೊಂಡು ಹೋಲಿಕೆಹೊಲ್ಲ (ಸಾಮ್ಯವೈಷಮ್ಯ) ಗಳನ್ನು ಅಲ್ಲಲ್ಲಿ ತೋರಿಸಿದ್ದಾರೆ. ಇದನ್ನೋದುವಾಗ ಪಂ. ರಾನಡೆಯವರು ಮಾಡಿರುವ ಗ್ರೀಕ, ಜರ್ಮನ್ ಮುಂತಾದ ಪರಭಾಷೆಗಳ ಆಳವಾದ ಅಭ್ಯಾಸವನ್ನು ಕಂಡು ಓದುಗರಿಗೆ ಅವರಲ್ಲಿ ಆದರವುಂಟಾಗದಿರದು.

ಗ್ರಂಥಕ್ಕೆ ಅಡಿಗಲ್ಲಾಗಿರುವ ಹದಿಮೂರು ಉಪನಿಷತ್ತುಗಳನ್ನು ಕಾಲಾನುಕ್ರಮದಲ್ಲಿ ಹೀಗೆ ಗುಂಪುಗಳನ್ನು ಮಾಡಿ ಕೊಟ್ಟಿದ್ದಾರೆ. ೧. ಬೃಹದಾರಣ್ಯಕ ಹಾಗೂ ಛಾಂದೋಗ್ಯ. ೨. ಈಶ ಮತ್ತು ಕೇನ. ೩ ಐತರೇಯ ತೈತ್ತಿರೀಯ, ಮತ್ತು ಕೌಷೀತಕಿ. ೪ ಕಠ, ಮುಂಡಕ ಮತ್ತು ಶ್ವೇತಾಶ್ವತರ. ೫ ಪ್ರಶ್ನ, ಮೈತ್ರಿ ಹಾಗೂ ಮಾಂಡೂಕ್ಯ.

ಈ ಗ್ರಂಥದಲ್ಲಿ ಒಟ್ಟು ಏಳು ಪ್ರಕರಣಗಳಿವೆ. ಅವುಗಳ ಹೆಸರುಗಳಿಂದ ಆಯಾ ಪ್ರಕರಣದಲ್ಲಿ ವಿವೇಚಿತ ವಿಷಯದ ಕಲ್ಪನೆಯು ಸಹಜವಾಗಿ ಬರುವಂತಿದೆ. ಆ ಪ್ರಕರಣಗಳು ಅನುಕ್ರಮವಾಗಿ ಯಾವವೆಂದರೆ:—೧ ಪೀಠಿಕೆ. ೨ ಉಪನಿಷತ್ತಿನೊಳಗಿನ ಜಗದುತ್ಪತ್ತಿ ವಿಚಾರದ ವಿಕಾಸ. ೩ ಉಪನಿಷತ್ತಿನೊಳಗಿನ ಮಾನಸಶಾಸ್ತ್ರ ವಿಚಾರಗಳು. ೪ ಉಪನಿಷತ್ತಿನಲ್ಲಿ ಕಂಡುಬರುವ ದ್ವೈತಾದ್ವೈತ ಹಾಗೂ ಷಡ್ದರ್ಶನಾದಿ ಅರ್ವಾಚೀನ ತತ್ವಜ್ಞಾನದ ಮೊಳಿಕೆಗಳು. ೫ ಔಪನಿಷದಿಕ ಆತ್ಯಂತಿಕ ಸತ್ಯದ ನಿರ್ಣಯವು ೬. ಔಪನಿಷದಿಕ ನೀತಿಶಾಸ್ತ್ರವಿಚಾರ. ೭ ಔಪನಿಷದಿಕ ಅನುಭಾವ ಮಾರ್ಗವು. ಈ

ಪ್ರಕರಣಗಳಲ್ಲದೆ ೨೨ ಪುಟಗಳ ಮುನ್ನುಡಿಯೂ, ಕೊನೆಗೆ ೫೬ ಪುಟಗಳ ವರ್ಣಾನುಕ್ರಮದ ಸೂಕ್ಷ್ಮ ಸೂಚಿಯೂ, ೧೮ ಪುಟಗಳಲ್ಲಿ ಜಡಿದು ತುಂಬಿ ಬರೆದ ಉಪನಿಷತ್ತುಗಳನ್ನು ಕುರಿತು ಎಲ್ಲ ಪಾಶ್ಚಾತ್ ಭಾಷೆಗಳಲ್ಲಿ ಇಂದಿನ ತನಕ ಆಗಿರುವ ಎಲ್ಲ ಸಣ್ಣ ದೊಡ್ಡ ಪುಸ್ತಕಗಳ ತಕ್ಕ ಪರಾಂಬರಿಕೆಯೂ ಇದೆ. ಒಟ್ಟು ಗ್ರಂಥವು ಹಿರಿ ಆಕಾರದ ಸುಮಾರು ೪೫೦ ಪುಟಗಳುಳ್ಳದ್ದಾಗಿದೆ.

ಗ್ರಂಥದ ಭಾಷೆಯ ಬಗ್ಗೆ ಹೇಳಲು ನಾನು ಅಧಿಕಾರಿಯಲ್ಲ. ಯೋಗಿ ಅರವಿಂದರೇ ಒಮ್ಮೆ ಶ್ರೀ ರಾನಡೆಯವರ ಪದೌಚಿತ್ಯ, ಸುಲಭ ಮನೋಹಾರಿಣಿಯಾದ ಶೈಲಿ, ಪಂಡಿತಪಾಮರರಿಗೂ ಅಷ್ಟೇ ರಂಜನೆಯಾಗುವಂತೆ ಕೈಕೊಂಡ ವಿಷಯವನ್ನು ನಿಸ್ಸಂದಿಗ್ಧವಾಗಿ, ಸ್ಪಷ್ಟವಾಗಿ, ಸುಬೋಧವಾಗಿ ಹೇಳುವ ಬಗೆಗಳನ್ನು ಹೊಗಳಿರುವುದನ್ನು ಓದಿದಂತೆ ನೆನಪಿದೆ. ಬಳಿಕ ಇತರೇ ಜನಗಳ ಹೊಗಳಿಕೆ ಬೊಗಳಿಕೆಗಳನ್ನು ಆರು ಎಣಿಸುವರು ? ಆದರೂ ಇಷ್ಟೊಂದು ನಿರ್ಭಯದಿಂದ ಹೇಳಬಹುದು. ರಾನಡೆಯವರ ಭಾಷೆಯು ತತ್ವಜ್ಞನಿಗೆ ಸಲ್ಲುವಂತಹದಿದೆ. ಅದು ಕವಿಯ ವಾಗ್ವೈಖರಿಯಲ್ಲ. ಯೋಗಿ ಅರವಿಂದ ಹಾಗೂ ಅನುಭಾವಿ ರಾನಡೆಯವರ ಭಾಷೆಗಳನ್ನು ದಿಟ್ಟಿಸಿದರೆ ಈ ಮಾತಿನ ಮನವರಿಕೆಯಾಗುವದು. ರಾನಡೆಯವರ ನುಡಿವೆಣ್ಣಿನ ಪದಗಳ ಎಣಿಕೆ ಮಾಡಲು ಬಹುದು; ಅರವಿಂದರ ನುಡಿವೆಣ್ಣಿನ ಪದಗಳಿಗೆ ಎಣಿಕೆಯಿಲ್ಲ. ರಾನಡೆಯವರ ನುಡಿವೆಣ್ಣು ಒಂದು ಋಷ್ಯಾಶ್ರಮದ ಒಬ್ಬ ಪ್ರೌಢೆ. ಅರವಿಂದರ ನುಡಿವೆಣ್ಣು ಸ್ವರ್ಗಲೋಕದ ದೇವಾಂಗನೆ. ಮೊದಲಿನವಳ ಪ್ರೌಢ, ಸುಸ್ಪಷ್ಟ ನಡೆಯಿಂದ ಅವಳ ಸಂಪೂರ್ಣದರ್ಶನವಾಗಿ ಅವಳಲ್ಲಿ ಇನ್ನು ತಿಳಿಯುತಕ್ಕುದೇನಿಲ್ಲವೆಂದು ಓದುಗರ ಕಲ್ಪನೆಯಾಗಿ ಒಂದು ತರದ ಸಮಾಧಾನವೂ, ಇನ್ನು ತಿಳಿಯುವುದೇನೂ ಉಳಿಯಲಿಲ್ಲವೆಂದು ಒಂದುಬಗೆಯ ಅಸಮಾಧಾನವೂ ಉಂಟಾಗುತ್ತದೆ. ಆ ಮತ್ತೋರ್ವ 'ಮಿಂಚಿನಂದದಿ ಹೊಳೆವ' ಅಪ್ಸರೆಯ ಪದವಿನ್ಯಾಸವು ಇಲ್ಲಿಗೆ ಮುಗಿಯಿತು ಇಲ್ಲಿಗೆ ಮೊದಲಾಯಿತೆಂದು ಹೇಳುವುದೆ ಕಷ್ಟ. ಸಿಕ್ಕಳು ಸಿಗಲಿಲ್ಲೆಂಬುವಂತೆ ಓದುಗನ ಜೀವಭಾವಕ್ಕೆ ಚಡಪಡಿಕೆಯನ್ನುಂಟುಮಾಡಿ ಒಂದುನಿಮಿಷ ಸಿಕ್ಕಳೆಂಬ ಸಂತೋಷವನ್ನೂ, ಮತ್ತೊಂದು ನಿಮಿಷದಲ್ಲಿ ಮಿರಿಹೋದಳೆಂದು ಕಳವಳವನ್ನು ಹುಟ್ಟಿಸುವುದು. ಒಂದೊಂದು ಕೆಲಸದಲ್ಲಿ ಇವೆರಡೂ ತರದ ಭಾಷೆಗಳು ಅತ್ಯವಶ್ಯ. ನಿಶ್ಚಿತ ಉದ್ದಗಲುಗಳುಳ್ಳ ಒಂದು ವಿಷಯದ ಜ್ಞಾನಕ್ಕೆ ಮೊದಲಿನ ಭಾಷೆ ಬೇಕು. ಅಳವಿಗಳಿದ ಭಾವಲೋಕದ ಅನುಭಾವ ಹೊಂದಲು ಎರಡನೆಯ ಭಾಷೆಯೇ ಬೇಕು. ಓದುಗರನ್ನು ರಾನಡೆಯವರ ಭಾಷೆಯು ಗುರಿಯ ನೆರೆಯಲ್ಲಿ ತಂದಿರಿಸುವುದು. ಅರವಿಂದರ ಭಾಷೆಯು ಗುರಿಯಲ್ಲಿ ನೆರಿಸುವುದು. ಒಂದು ಕೈಹಿಡಿದೊಯ್ದು ಒಂದಾಗಹೇಳಿ ನಿಲ್ಲುವುದು; ಮತ್ತೊಂದು ಜುರಿಕೊಟ್ಟು ತೂಗಿ ತಾಕಹಚ್ಚುವುದು. ಒಂದು ಸಮೀಪವಲ್ಲೊಯ್ಯುವುದು ; ಮತ್ತೊಂದು ಸಾಮರಸ್ಯವನ್ನು ಮಾಡುವುದು. ಎರಡೂ ಭಾಷೆಗಳು ನಮ್ಮ ವಿಕಾಸಕ್ಕೆ ಅವಶ್ಯಕ. ಒಂದು ಹಿರಿದು ಒಂದು ಕಿರಿದೆಂದು ಹೇಳಲು ಆಗುವದಿಲ್ಲ.

**ಗ್ರಂಥದ ಉದ್ದೇಶವು:**—ಅನುಭಾವಿಗೆ ಶ್ರದ್ಧೆಯು ಅವಶ್ಯಕವೆಂದು ಅನಾದಿ ಕಾಲದಿಂದ ಸಾರುತ್ತಿರುವರು. ಶ್ರದ್ಧೆ, ನಿಷ್ಠೆ, ನೆಚ್ಚುಗಳೆಂಬ ಶಬ್ದಗಳನ್ನಾಡತ್ತಲೆ ಅಲ್ಲಿ ವಿಚಾರವಿಮರ್ಶೆಗಳ ಸಂಪೂರ್ಣ ಅಭಾವವೆಂದು ಈವರೆಗಿನ ತಿಳುವಳಿಕೆ. ಆದುದ ರಿಂದ ಎಷ್ಟೋ ಬುದ್ಧಿವಂತರು ಶ್ರದ್ಧೆಯ ವಿರುದ್ಧವಾಗಿ ದೊಡ್ಡ ಕೋಲಾಹಲವನ್ನೆಬ್ಬಿ ಸಿದ್ದಾರೆ. ಶ್ರದ್ಧೆಯೆಂದರೆ ಕುರುಡುನಂಬಿಗೆ; ನಂಬಿದ ಗುರುವು ಅಥವಾ ಗ್ರಂಥವು ಹೇಳಿ ದುದನ್ನು ಕಣ್ಣುಮುಚ್ಚಿ—ಹೊರಗಣ್ಣಲ್ಲ ಒಳಗಣ್ಣುಮುಚ್ಚಿ, ವಿಚಾರಮಾಡದೆ ಬಗೆದು ಭಾವಿಸದೆ, ಅರಿತು ತಿಳಿಯದೆ ಒಮ್ಮೆಲೆ ಅಹುದೆಂದು ತಲೆಹಾಕುವುದೆ ಶ್ರದ್ಧೆ ಎಂದು ಅನುಭವದ ದಾರಿಗರಲ್ಲಿ ಬಹುಜನರ ತಿಳುವಳಿಕೆ. ಆದರೆ ಇದು ತೀರ ತಪ್ಪು. ಸವಿಚಾರಿ ಶ್ರದ್ಧೆಯಿಂದಲ್ಲದೆ ಅವಿಚಾರಿ ಶ್ರದ್ಧೆಯಿಂದ ಆತ್ಮವು ಅಳವಟ್ಟು ಅನುಭವದೋರದು. ಬುದ್ಧಿಗೂ ವಿರೋಧವಿಲ್ಲ. ಬುದ್ಧಿಯು ಶ್ರದ್ಧೆಯನ್ನು ಶುದ್ಧತರ, ಶುದ್ಧತಮಮಾಡು ವುದು. ಬುದ್ಧಿಯುಕ್ತ ಶ್ರದ್ಧೆಯು ಅಂದರೆ ಸವಿಚಾರಿ ಶ್ರದ್ಧೆಯು ಅನುಭಾವಿಗೆ ವಿರೋ ಧಕವಲ್ಲ; ಪೋಷಕವು ಎಂಬೀಮಾತನ್ನು ಶ್ರೀ ರಾನಡೆಯವರು ಜನರ ಮನಸ್ಸಿನಮೇಲೆ ಈ ಗ್ರಂಥ ಮುಖಾಂತರವಾಗಿ ಮೂಡಿಸಬೇಕೆನ್ನುತ್ತಾರೆ. ಈ ವರೆಗೆ ಅಶಕ್ಯವೆಂದೆಣಿಸಿದ ಅರಿವಿನ ಅನುಭಾವವು (Rational Mysticism) ಶಕ್ಯವಿದೆ, ಸಾಧ್ಯವಿದೆ, ಸತ್ಯ ವಿದೆ ಎಂಬದು ಓದುಗರಿಗೆ ಸ್ವಲ್ಪಾಂಶದಿಂದಾದರೂ ಮನವರಿಕೆಯಾದರೆ ತಮ್ಮ ಈ ಗ್ರಂಥಲೇಖನ ಶ್ರಮದ ಸಾರ್ಥಕವಾಯಿತೆಂದು ಶ್ರೀ ರಾನಡೆಯವರು ಹೇಳುತ್ತಾರೆ. ಇದು ಗ್ರಂಥದ ಮುಖ್ಯೋದ್ದೇಶವು.

ಉಳಿದೆರಡು ಉದ್ದೇಶಗಳಾವರೂ ಯಾವ ಬಗೆಯಿಂದಲೂ ಕಡಿಮೆಯವಿಲ್ಲ. ಒಂದು ಹಿಂದೂ ಜನರಿಗೆ ಸಂಬಂಧಿಸಿದ್ದು. ಮತ್ತೊಂದು ಪಾಶ್ಚಾತ್ಯರಿಗೆ ಸಂಬಂಧಿ ಸಿದ್ದು. ನಮ್ಮ ಜನರು ಉಪನಿಷತ್ತು, ಗೀತಾ ಅಥವಾ ಬೇರೆ ಯಾವದೇ ಪ್ರಾಚೀನ ಧರ್ಮಗ್ರಂಥಕ್ಕೆ ಶಬ್ದವಿಜ್ಞಾನ ಶಾಸ್ತ್ರ ದೃಷ್ಟಿಯಿಂದಲೇ ಪ್ರತಿಪದಾರ್ಥವನ್ನೂ ನಿಶ್ಚ ಯಿಸಿ ಅರ್ಥ-ಭಾವಾರ್ಥಗಳನ್ನು ಬರೆಯುವ ಪ್ರಯತ್ನವನ್ನು ಈ ವರೆಗೂ ಮಾಡಿಲ್ಲ. ದ್ವೈತವೇ, ಅದ್ವೈತವೆ! ಅಥವಾ ವಿಶಿಷ್ಟಾದ್ವೈತವೇ ಹೀಗೆ ಯಾವದೊಂದು ಪಂಥದ ಸಿದ್ಧಾಂತಗಳನ್ನು ಮೊದಲು ಇಟ್ಟುಕೊಂಡು, ಬಳಿಕ ಆ ಸಿದ್ಧಾಂತಗಳನ್ನು ಹೇಳುವುದ ಕ್ಕಾಗಿಯೇ ಉಪನಿಷತ್ತು, ಗೀತಾ, ಬಾದರಾಯಣಸೂತ್ರಾದಿಗಳೆಲ್ಲ ಹುಟ್ಟಿರುವವ ವೆಂದು ಸಿದ್ಧಪಡಿಸುವುದಕ್ಕಾಗಿ ಶಬ್ದಾರ್ಥಗಳ ಎಳೆದಾಟವನ್ನು ನಡಿಸುವದು ಪರಿಪಾಠ ವಾಗಿದೆ! ಭಗವಾನ್ ಶ್ರೀ ಕೃಷ್ಣನು ಯಾವ ಮಾತಿನ ಪ್ರತಿಪಾದನಕ್ಕಾಗಿ ಗೀತೆಯನ್ನು ಹೇಳಿದನೋ ಇಂದು ಒಬ್ಬನು ಅದು ಕರ್ಮಪ್ರವರ್ತಕವೆಂದು, ಇನ್ನೊಬ್ಬನು ಜ್ಞಾನ ಮಾರ್ಗದ್ದೆಂದೂ ಮತ್ತೊಬ್ಬನು ಭಕ್ತಿಪಂಥದ್ದೆಂದೂ ಹಲವರು ಹಲವು ಬಗೆಯಾಗಿ ಅರೆದಾಟನಡಿಸಿದ್ದಾರೆ. ಇವರ ತಿಕ್ಕಾಟದಲ್ಲಿ ಪಾಪ! ಗೀತೆಯು ವಿಲಿಪಿಲಿ ಒದ್ದಾಡುತ್ತಿದೆ! ಇದೆ ಹಾಡು ಉಪನಿಷತ್ತುಗಳದು.

ಉಪನಿಷತ್ತುಗಳ ಅರ್ಥಮಾಡುವಾಗ ಶ್ರೀ ರಾನಡೆಯವರು ಹಿಂದಿನ ಹಟವಾದ ಪದ್ಧತಿಯ ಜೋಲಿಗೆ ಬಿದ್ದಿಲ್ಲ. ದ್ವೈತಾದ್ವೈತಾದಿ ಯಾವ ಸಾಂಪ್ರದಾಯದವರ ಅರ್ಥದ ನಿರರ್ಥಕ ಎಳೆದಾಟಗಳಲ್ಲಿಯೂ ಸಿಲುಕದೆ ಶಬ್ದಕ್ಕಿರುವ ಧಾತ್ವರ್ಥವನ್ನೇ ಕೇವಲ ಅನುಲಕ್ಷಿಸಿ ಮಂತ್ರದ್ರಷ್ಟ ಮಹರ್ಷಿಯ ಮೂಲೋದ್ದೇಶವನ್ನು ಬಿಚ್ಚಿಹೇಳುವುದಕ್ಕೆ ಪ್ರಯತ್ನಿಸಿದ್ದಾರೆ. ನಮಗೆ ಅಪೂರ್ವವಾದ ಪಾಶ್ಚಾತ್ಯ ಪದ್ಧತಿಯನ್ನು ಅನುಸರಿಸಿ ಎತ್ತಕಡೆಗೂ ಒಲಿಯದೆ, ತೂಕಹಿಡಿದು ಇದ್ದುದನ್ನು ಇದ್ದಕಿದ್ದಂತೆ ಹೇಳುವ ಹೊಸ ಬಗೆಯಿಂದ ಇದನ್ನು ಬರೆದಿರುವರು.

ಇದರಿಂದ ಇಂದಿನತನಕ ಗೊತ್ತಿಲ್ಲದ ಎಷ್ಟೋ ಮಾತುಗಳು ಬೈಲಿಗೆ ಬಂದು ಜನರು ಆಶ್ಚರ್ಯಚಕಿತರಾಗಬಹುದು. ಬಹೂದೂರಿನ ಗಿಡಗಳೂ ಗುಡ್ಡದ ಸಾಲುಗಳೂ ನಡುವೆ ಕೆಲವೊಂದು ಅಂತರವಿದ್ದರೂ ಒಂದೇ ಸಾಲಿನಲ್ಲಿದಂತೆ ತೋರುತ್ತವೆ. ಮುಗಿಲಲ್ಲಿ ಮಿರಗುವ, ಹೊಳೆಯುವ ಎಸೆಯುವ ಬೆಳಗುವ ಬೇರೆ ಬೇರೆ ಗ್ರಹನಕ್ಷತ್ರಾದಿಗಳಲ್ಲಿ ಸಾವಿರಾರು ಮೈಲಿನ ಅಂತರವಿದ್ದರೂ ನಮಗೆ ಅವೆಲ್ಲ ಒಂದೇ ಪಾತಳಿಯಲ್ಲಿ ಅಂಟಿಕೊಂಡಿರುವಂತೆ ಭಾಸವಾಗುತ್ತದೆ. ಇದೇ ಮೇರೆಗೆ ಉಪನಿಷತ್ತುಗಳಲ್ಲಿ ಹೇಳಿರುವ ತತ್ವಜ್ಞಾನವೆಲ್ಲ ಒಂದೇ ಇರುತ್ತದೆಂದು ಜನರ ತಿಳುವಳಿಕೆ ಇದೆ. ಆದರೆ ಒಳಮಾತು ಬೇರೆಯಿದೆ. ಹಿಮವತ್ಪರ್ವತವು ಒಂದೇ ಒಂದು ಬೆಟ್ಟದ ಸಾಲಿಲ್ಲ. ಬೆಟ್ಟದ ಮುಂದೆ ಬೆಟ್ಟ, ಬೆಟ್ಟದ ಮುಂದೆ ಬೆಟ್ಟಗಳು ಸಾಲ್ಗೊಂಡು ಒಟ್ಗೊಂದು ಹಿಮಾಲಯ ಪರ್ವತವೆನಿಸುತ್ತದೆ. ಸಮುದ್ರ ಸಪಾಟಿಯಿಂದ ಏರುತ್ತೇರುತ್ತ ಗೌರೀಶಂಕರವೆಂಬ ಉತ್ತುಂಗ ಶಿಖರವು ಮುಗಿಲಮುಟ್ಟಿದೆ. 'ಇದೇನು'? ಎಂಬ ಬೆರಗಿನಿಂದ ಆರಂಭವಾಗಿ 'ಅದೇ ನಾನು' ಎಂಬ ಅಳತೆಮೀರಿದ (ಅನಂತದ) ಲ್ಲಿ ಬಂದು ಉಪನಿಷನ್ಮಂತ್ರಗಳು ವಿರಾಮಗೊಳ್ಳುತ್ತವೆ. ಈ ಉಪನಿಷದ್ಭೂಮಿಕೆಯಲ್ಲಿ ಯಾವದೊಂದು ತತ್ವಜ್ಞಾನದ ವಿಚಾರವಷ್ಟೇ ಇಲ್ಲ. ಹಲವು ತತ್ವಜ್ಞಾನಗಳ ಮೊಳಕೆಗಳಿವೆ. ಇವೆಲ್ಲವುಗಳೂ ಯಥಾ ಕಾಲದಲ್ಲಿ ಬೆಳಿಗೆಗೊಂಡು ಜಗತ್ತಿಗೆ ಬೆರಗುಮಾಡಿದ ಭಾರತೀಯ ಧರ್ಮ ತತ್ವಜ್ಞಾನಗಳ ತನಿವಣ್ಣಗಳು ಧರಿಸಿದ ಮಾಮರದ ಒಂದು ತೋಪು ಆಗಿದೆ. ಸಾಂಖ್ಯ, ವೇದಾಂತ ಯೋಗ ಶಾಸ್ತ್ರಾದಿಗಳಿಗೆಲ್ಲ ಉಪನಿಷತ್ತೆಂಬದೊಂದೇ ಸಾಮಾನ್ಯ ಕ್ಷೇತ್ರವಾದರೂ, ಸಾಂಖ್ಯರಾಗಲಿ, ವೇದಾಂತಿಗಳಾಗಲಿ, ಅಥವಾ ಬೇರೆ ಯಾವ ಪಂಥದವರಾಗಲಿ ಉಪನಿಷತ್ತುಗಳೆಲ್ಲ ತಮ್ಮದ್ದೊಂದೇ ಮತ ಪ್ರತಿಪಾದನಕ್ಕಾಗಿ ಹುಟ್ಟಿರುವವೆಂದು ಹೇಳುವುದು ಹೆಮ್ಮೆಯ ಮಾತಾಗುವುದು.

ಪಾಶ್ಚಾತ್ಯರಲ್ಲಿ ಉಪನಿಷತ್ತುಗಳ ಬಗ್ಗೆ ಎಷ್ಟೋ ತಪ್ಪು ಕಲ್ಪನೆಗಳಿವೆ. ಉಪನಿಷತ್ತುಗಳನ್ನು ಸಂಸ್ಕೃತದಲ್ಲಿ ಬರೆದಿದ್ದರೂ ಆಧುನಿಕ ಶಾಸ್ತ್ರೀಯ ಜ್ಞಾನದ ಪ್ರಗತಿಯಾಗದ ಅಸಂಸ್ಕೃತ ಕಾಲದಲ್ಲಿ ೪–೫ ಸಾವಿರ ವರ್ಷಗಳ ಹಿಂದೆ ರಚಿಸಿರುವರು. ಅವುಗಳಲ್ಲಿ ಆಧುನಿಕ ತತ್ವವಿದ್ದರು ಸಂಶೋಧಿಸಿ ತೆಗೆದಿರುವ ಹಲವು ಬಗೆಯ ವಿಚಾರ

ಕ್ರಾಂತಿಯ ಸುಳುವು ಸಹ ಸಿಗಲಿಕ್ಕಿಲ್ಲೆಂದು ಕೆಲವರು ತರ್ಕಿಸಬಹುದು. ಇದು ಕೇವಲ ನಿರಾಧಾರವಾದ ತರ್ಕವೇ ಸರಿ. ಯಾಕಂದರೆ ಉಪನಿಷತ್ತಿನಲ್ಲಿ ಆಧುನಿಕ ಬರ್ಗಸೊನ, ಮೇಯರ, ವಾರ್ಡ, ಟೇಲರ ಮುಂತಾದ ತತ್ವವಿದರ ವಿಚಾರ ಸರಣಿಯನ್ನು ಅಚ್ಚಳಿಯದೆ ನಿಚ್ಚಳವಾಗಿ ಕಾಣಲಿಕ್ಕೆ ಸಿಗುತ್ತದೆ. ವೇದಾಂತದ ಕೊನೆಯ ಸಿದ್ಧಾಂತದ ಸಂಸ್ಥಾಪಕರಾದ ಮಹರ್ಷಿ ಅರುಣಿ ಹಾಗೂ ಯಾಜ್ಞವಲ್ಕ್ಯರ ಮುಂದಿನ ಆ ಮಾತಿನಲ್ಲಂತೂ ಇನ್ನೂ ಯಾರೂ ಹಾರಿಲ್ಲ; ಹಾರುವುದೂ ಇಲ್ಲ. ದ್ವೈತಾದ್ವೈತಗಳ ವಿಚಾರಗಳಲ್ಲದೆ ಉಪನಿಷತ್ತಿನಲ್ಲಿ ಸುಖವಾದ, ಅಜ್ಞೇಯವಾದ, ಕರ್ಮವಾದ, ವಿಚಾರಸ್ವಾತಂತ್ರ್ಯವಾದ, ಸಂಕಲ್ಪವಾದ, ಮುಂತಾದ 'ವಾದ'ಗಳಿವೆ; ಸುಪ್ರಜಾನಿರ್ಮಾಣ ವಿಚಾರ, ಆಯುರ್ವರ್ಧನ ವಿಚಾರ, ಮರಣಾನಂತರ ಸ್ಥಿತಿ ವಿಚಾರ, ಪುನರ್ಜನ್ಮ ವಿಚಾರ, ಜಗದುತ್ಪತ್ತಿ ವಿಚಾರ, ನಿದ್ದೆ, ಕನಸು, ನನಸುಗಳ ವಿಚಾರ ಮೊದಲಾದ ಹಲವು ಮಾತುಗಳನ್ನು ಕುರಿತು ಹೆಚ್ಚುಕಡಿಮೆ ವಿಸ್ತೃತ ಎಷ್ಟೋ ವಿಚಾರಗಳಿವೆ. ಅವುಗಳಲ್ಲಿ ಇಂದಿನ ತನಕ ಮನುಷ್ಯನಿಗೆ ನಿಲುಕಿರುವ ಯಾವ ವಿಚಾರದ ಮೊಳಕೆಯೂ ಬಹುತರ ಉಪನಿಷತ್ತುಗಳಲ್ಲಿ ಸಿಗುವದಿಲ್ಲವೆಂಬುವಂತಿಲ್ಲ. ಆ ಮೊಳಿಕೆಗಳಲ್ಲಿ ಕೆಲವುಗಳ ವಿಕಾಸವು ಸಂಪೂರ್ಣವಾಗಿದೆ. ಕೆಲವುಗಳು ಸಂಪೂರ್ಣದ ಸಮೀಪಕ್ಕೆ ಬಂದಿವೆ. ಇನ್ನೂ ಕೆಲವುಗಳ ವಿಕಾಸವು ಆಗಬೇಕಾಗಿದೆ.

ಅದ್ವೈತ ಅನುಭಾವ ಮಾರ್ಗದ ಸಂಪೂರ್ಣ ವಿಕಾಸವಾಗಿದ್ದು ಅದನ್ನು ಅರ್ವಾಚೀನ ತರ್ಕಶುದ್ಧ ಪದ್ಧತಿಯಿಂದ ಬರೆದು ಮಾನವ ಕುಟುಂಬದ ಉದ್ಧಾರಕ್ಕಾಗಿ ಪ್ರಕಟಿಸುವುದು ನಿಜವಾದ ಸನಾತನ ಧರ್ಮಾಭಿಮಾನಿಗಳ ಕರ್ತವ್ಯವಾಗಿದೆ. ದ್ವೈತ, ವಿಶಿಷ್ಟಾದ್ವೈತಗಳನ್ನೂ ಅರ್ವಾಚೀನ ವಿವೇಚನ ಪದ್ಧತಿಯಿಂದ ಜಗತ್ತಿನ ಮುಂದಿರಿಸುವುದು ಅತ್ಯವಶ್ಯವು. ಇನ್ನು ಆರಂಭದ ಸ್ಥಿತಿಯಲ್ಲಿರುವ ಆನುವಂಶಿಕ ಸಂಸ್ಕಾರ ವಿಚಾರಾದಿಗಳನ್ನು ಅರ್ವಾಚೀನ ಶಾಸ್ತ್ರೀಯ ಶೋಧಗಳ ಸಹಾಯದಿಂದ ಸಂಶೋಧಿಸಿ ಆ ಜ್ಞಾನಶಾಖೆಯನ್ನು ಬೆಳಿಸುವುದು ಆರ್ಯರ ಜ್ಞಾನರಾಶಿಯ ಹಕ್ಕುದಾರರೆಂದು ಹೇಳಿಕೊಳ್ಳುವ ನಮ್ಮೆಲ್ಲರ ಹಿರಿಗೆಲಸವಾಗಿದೆ.

ಉಪನಿಷತ್ತುಗಳ ತತ್ವಜ್ಞಾನವು ಮಾನವನ ಮನಸ್ಸಿಗೆ ಹಿಗ್ಗು ಕೊಡುವದಿಲ್ಲ! ಕುಗ್ಗಿಸುವುದು, ತಗ್ಗಿಸುವುದೆಂದು ಕೆಲವು ಯುರೋಪೀಯರ ಆಕ್ಷೇಪ ! ಔಪನಿಷದಿಕ ತತ್ವಜ್ಞಾನವು ಮನುಷ್ಯನಿಗೆ ಸಂಸಾರದ ಬಗ್ಗೆ ಎದೆಗುಂದಿಸಿ ಅವನನ್ನು ಪ್ರಪಂಚದಿಂದ ಓಡಿಸುವುದು; ಆನಂದದ ಸುದ್ದಿಯೂ ಅವರಲ್ಲಿಲ್ಲ. ಈ ತತ್ವಜ್ಞರು ಸಂಸಾರವು ಹೇಯವೆಂದು ಆವಾಗಲೂ ಮೋರೆ ಕಿವಚಿ ಹೆಂಗಸು ಕೆಟ್ಟ, ಹುಡುಗರು ಕೆಟ್ಟ, ದುಡ್ಡು ದುಗ್ಗಾಣಿ ಕೆಟ್ಟ; ಎಂದು ಮುಂತಾಗಿ ಆಡಿಕೊಳ್ಳುವ ದುರ್ಮುಖರೇ ನಮ್ಮ ಸಮಾಜ ಧುರೀಣರೆಂದೂ ಅವರ ಟೀಕೆ ! ಆನಂದ, ಹಿಗ್ಗುಗಳನ್ನು ಅವರಿಂದ ನಾವು ಕಲಿತಿರು

ವೆವಂತೆ ! 'ಹಿಗ್ಗಿನಿಂದಲೆ ಒಂದು ಎರಡಾಯಿತು' ಎಂದು ಸಾರಿರುವ ಉಪನಿಷತ್ಕಾರರಷ್ಟು ಹಿಗ್ಗಿನ ನೆಲೆಯು ಟೀಕಾಕಾರಗಿಗೇನು ತಲೆ ಗೊತ್ತಿದೆ ? ಉಪನಿಷತ್ತುಗಳ ಉಗಮವೇ ಹಿಗ್ಗಿನಲ್ಲಿ (ಆನಂದದಲ್ಲಿ) ಇದೆ. आनंदात हि एव खलु इमानि भूतानि जायन्ते । ಎಂದು ಋಷಿಯು ಅಂದದ್ದು. ಹಿಗ್ಗಿನಿಂದಲೋ ತಗ್ಗಿನಿಂದಲೋ? ನಿಜವಾಗಿ ಉಪನಿಷತ್ತಿನಲ್ಲಿ ಹಿಗ್ಗಿನ ಹೆಚ್ಚಳವನ್ನು ಅಷ್ಟಿಷ್ಟು ಹೇಳಿಲ್ಲ. ಇಷ್ಟು ಮೀರಿ 'ಉಪನಿಷತ್ತಿನಲ್ಲಿ ತಗ್ಗು (Pessimism) ಕಾಣುವವರು ಅದನ್ನೇ ಹೊಂದಲಿ, ಹಿಗ್ಗು ಕಾಣುವವರ ಅದನ್ನುಣ್ಣಲಿ' ಎಂದು ಶ್ರೀ ರಾನಡೆಯವರ ಮಾತಿನಲ್ಲಿ ಹೇಳುವ ಹೊರ್ತು ಮತ್ತೇನು !

ಉಪನಿಷತ್ತಿನ ಮಂತ್ರಶಕ್ತಿಯು ಅತ್ಯದ್ಭುತವಿದೆ. ಅದು ನವಜೀವನದ ಆಗರ; ಅಮೃತದ ಸಾಗರ, ಇದನ್ನು ಓದಿ ಹಾಗೆ ನಡೆದವರು ಚೈತನ್ಯವಂತರೂ, ತೇಜೋಮಯರೂ, ಅಮರರೂ ಆಗುವುದರಲ್ಲಿ ಸಂದೇಹವಿಲ್ಲ. ಇದನ್ನೋದಿದ ಪೂರ್ವ ಪಶ್ಚಿಮದ ಪಂಡಿತರು ಸ್ವಾನುಭವದಿಂದ ಈ ಮಾತನ್ನು ಹೇಳಿದ್ದಾರೆ. ಕೆಲರು ಉಪನಿಷತ್ತನ್ನೋದಿ ತಮಗೆ ಹೊಸ ಜನ್ಮ ಬಂತೆಂದರು; ಕೆಲರು, ಜನ್ಮಸಾರ್ಥಕವಾಯಿತೆಂದರು; ಕೆಲರು ಆನಂದದಿಂದ ಮೈಮರೆತು ತನ್ಮಯರಾದರು.

ಈ ಕಾರಣದಿಂದಲೆ ಆಗ್ರಹದಿಂದ ನಮ್ಮ ಹಿರಿಯರು ಹೇಳುತ್ತಿರುವುದು ಉಪನಿಷತ್ತುಗಳನ್ನೋದಿ ಅಮರರಾಗಿರೆಂದು; ತೇಜಸ್ವಿಗಳಾಗಿರೆಂದು, ಓಜಸ್ವಿಗಳಾಗಿರೆಂದು, ಆರ್ಯವೀರ್ಯಕ್ಕೆ ಒಪ್ಪುವಂತಹ ಬ್ರಹ್ಮತೇಜಸ್ವಿಗಳಾಗಿರೆಂದು.

ಹಾಗಾದರೆ ಇಂಥ ಪವಿತ್ರವೂ, ರಮಣೀಯವೂ, ತೇಜೋದಾಯಕವೂ, ಆಗಿರುವ ಉದಾತ್ತವಿಚಾರಗಳ ಅಮೃತವನ್ನು ಕುಡಿದು ಹೊಳೆಯಲು ಕನ್ನಡಿಗರು ಬಯಸರೇ ?

---

ಓಂನಲ್

# ಮಠಗಳ ಪುನರುಜ್ಜೀವನ.

( ಬಿಂದುಮಾಧವ. )

ಸ್ವಧರ್ಮದ ೧ನೇ ವರ್ಷದ ೩ನೇ ಸಂಚಿಕೆಯಲ್ಲಿ ಮಠಾಧಿಪತಿಗಳ ಮೆರವಣಿಗೆ ಎಂಬಲೇಖವು ಶ್ರೀ. ಸುರೇಂದ್ರರಾವ ದೇಸಾಯಿ ಇವರಿಂದ ಪ್ರಸಿದ್ಧವಾಗಿರುವದಷ್ಟೇ. ಅದರಲ್ಲಿ "ಮಠಪತಿಗಳಿಗೆ ತಮ್ಮ ತಮ್ಮ ಮಠಗಳ ಪರಿಪೂರ್ಣಜ್ಞಾನವಿರುವದಿಲ್ಲ. ಯತಿಧರ್ಮದಂತೆ ಅವರ ಆಚರಣೆಯು ಇರುವದಿಲ್ಲ. ಮಠಗಳು ಯಾವ ಉದ್ದೇಶವಾಗಿ ಸ್ಥಾಪಿಸಲ್ಪಟ್ಟವೋ ಆ ಉದ್ದೇಶವೇ ನಷ್ಟವಾಗಿ ಹೋಗಿದೆ" ಇವೇ ಮೊದಲಾದ ವಿಧಾ

ನಗಳು ಮಾಡಲ್ಪಟ್ಟಿವೆ. ಬರಹದ ಬರವಣಿಗೆಯು ಬಿರುಸಾಗಿದ್ದರೂ ಅದರಲ್ಲಿ ಪ್ರತಿಪಾದಿತವಾದ ವಿಧಾನಗಳು ಬಹು ಅಂಶದಿಂದ ನಿಜವಿರುವವೆಂದು ನಾವು ಒಪ್ಪಲೇಬೇಕಾಗುವದು. ಉಳಿದ ವಿಷಯಗಳಲ್ಲಿ ನಾವು ಅವನತಿಯನ್ನು ಹೊಂದಿದಂತೆ ವಿಪರೀತ ಪರಿಸ್ಥಿತಿಯಿಂದ ಈ ಸಂಸ್ಥೆಗಳೂ ಅವನತಿಯನ್ನು ಹೊಂದಿವೆ ಎಂಬುದರಲ್ಲಿ ಏನೂ ಸಂಶಯವಿಲ್ಲ. ಆದದ್ದು ಆಗಿಹೋಯಿತು. ಮುಂದೆ ಅವುಗಳನ್ನು ಹೇಗೆ ಸುಧಾರಿಸಬೇಕು. ಎಂಬುದೇ ನಮ್ಮ ಮುಂದಿರುವ ಮುಖ್ಯ ಪ್ರಶ್ನೆಯು. ಚಾತುರ್ಮಾಸವು ಸಮೀಪಿಸಿರುವದರಿಂದ ಮಠಾಧಿಪತಿಗಳಾದ ಶ್ರೀಗಳವರು ೪ ತಿಂಗಳ ಮುಟ್ಟಿಗಾದರೂ ಒಂದೇ ಸ್ಥಳದಲ್ಲಿರುವದರಿಂದ ಈ ವಿಷಯವನ್ನು ವಿಚಾರಿಸಲು ಇದು ಒಳ್ಳೇ ಸಮಯವೆಂದು ಇದರ ವಿವೇಚನೆಯನ್ನು ನಮಗೆ ತಿಳಿದ ಮಟ್ಟಿಗೆ ಮಾಡಬೇಕೆಂದಿದ್ದೇವೆ.

ಈ ವಿಷಯವು ಬಹಳ ಮಹತ್ವದ್ದಿರುವದರಿಂದ ವಿಚಾರವಂತರಾದ ಎಲ್ಲ ಜನರು ತಮ್ಮ ತಮ್ಮ ವಿಚಾರಗಳನ್ನು ಜನರೆದುರಿಗೆ ಇಟ್ಟು ಚರ್ಚಿಸಬೇಕೆಂದು ನಮ್ಮ ಬಿನ್ನಹದ ಬೇಡಿಕೆಯು.

(೧). ಸಮಾಜದ ಸುಧಾರಣೆ ಪೋಷಣೆಯಾಗಿ ಆಧ್ಯಾತ್ಮಿಕ ಆಧಿಭೌತಿಕ ಸುಧಾರಣೆಗಳಿಂದ ಸಮಾಜವು ಆದರ್ಶಪ್ರಾಯವಾಗಬೇಕಾದರೆ ಧಾರ್ಮಿಕ ಶಿಕ್ಷಣವೂ ಶಾಸನವೂ ಅವಶ್ಯವೆಂದು ತಿಳಿದು ನಮ್ಮ ಮುಂದಾಳುಗಳು ಮಠಗಳನ್ನು ಸ್ಥಾಪಿಸಿದರು. ಅಂದಮೇಲೆ ಈ ಸಂಸ್ಥೆಗಳು ಸಾರ್ವಜನಿಕ ಸಂಸ್ಥೆಗಳೆಂದು ಬೇರೆ ಹೇಳುವ ಕಾರಣವಿಲ್ಲ. ಆದ್ದರಿಂದಲೇ ಇವುಗಳಿಗೆ ಸಂಸ್ಥಾನವೆಂಬ ಹೆಸರೂ ಬಿದ್ದದೆ. ಇವುಗಳ ಮೂಲ ಸ್ವರೂಪವು ಹಾಗೆ ಸಾರ್ವಜನಿಕವಿದ್ದರೂ ಸದ್ಯಕ್ಕೆ ವಿಪರೀತವಾಗಿದೆ. ಮಠಗಳು ಸತ್ತಾಧಾರಿಗಳ ತವರಮನೆಯಾಗಿವೆ. ಮಠಗಳ ಕಾರಭಾರಕ್ಕೂ ಜನರಿಗೂ ಏನೂ ಸಂಬಂಧವಿರುವದಿಲ್ಲ. ಮಠಾಧಿಪತಿಗಳು ಸಂಚಾರಕ್ಕಾಗಿ ಹೊರಡಬೇಕು. ಜನರು ಧರ್ಮಗುರುಗಳು ಬಂದಿರುವರೆಂದು ಮಾನಮರ್ಯಾದೆಯಿಂದ ಕರೆತಂದು ಅವರ ಪಾದಪೂಜೆಯನ್ನು ಮಾಡಬೇಕು. ಅವರು ತೃಪ್ತಿಯನ್ನು ಹೊಂದುವಷ್ಟು ( ಸಾಲಮಾಡಿದರೂ ಚಿಂತೆಯಿಲ್ಲ.) ಗುರುದಕ್ಷಿಣೆಯನ್ನು ಕೊಡಬೇಕು. ಇಷ್ಟರ ಹೊರ್ತು ಜನರಿಗೂ ಮಠಗಳಿಗೂ ಏನೂ ಸಂಬಂಧವಿರುವದಿಲ್ಲ. ಇಷ್ಟರಿಂದಲೇ ಜನರು ತಾವು ಕೃತಾರ್ಥರಾದೆವೆಂದೂ ಶ್ರೀಗಳವರು ಭಕ್ತರನ್ನು ಉದ್ಧರಿಸಿದೆವೆಂದೂ ತಿಳಿದು ಸಂತೋಷಗೊಳ್ಳುವದನ್ನು ಕಂಡು ನಮಗಂತೂ ವಿಷಾದವಾಗುತ್ತದೆ. ಮಠಗಳ ಧರ್ಮಕಾರ್ಯವು ಸುಸೂತ್ರವಾಗಿ ಜರುಗಿ ಜನರು ಧರ್ಮನಿಷ್ಠರೂ ತೇಜಸ್ವಿಗಳೂ ಆಗಬೇಕೆಂದು ಸದಂತಃಕರಣದಿಂದ ಪ್ರೇರಿತರಾಗಿ ಜನರು ಮಠಗಳಿಗೆ ಹೇರಳವಾದ ದ್ರವ್ಯವನ್ನು ಉತ್ಪನ್ನವನ್ನು ಹಾಕಿಕೊಟ್ಟಿರುವರು, ಕೊಡುತ್ತಿರುವರು, ಕೊಡಲೂ ಬಹುದು. ಆದರೆ ಈ ಹಣವು ಈ ಉದ್ದೇಶವಾಗಿ ಉಪಯೋಗಿಸಲ್ಪಡುತ್ತಿದೆಯೋ? ಆನೆ ಒಂಟೆಗಳನ್ನಿಟ್ಟು ಹೆಚ್ಚಿನ ಆಡಂಬರವನ್ನು ಬೆಳೆಸುವದರಲ್ಲಿಯೂ ತಿಂದುಂಡು ವ್ಯರ್ಥವಾಗಿ ದುರ್ವಿನಿಯೋಗವಾಗತೊಡ

ಗಿದೆ. ಇಷ್ಟೇ ಅಲ್ಲ. ಒಂದು ರೀತಿಯಿಂದ ಅಧರ್ಮಕ್ಕೆ ಎಡೆಗೊಟ್ಟಂತಾಗಿದೆ. ಮಠಗಳಲ್ಲಿ ವಾಸಿಸುವ (ದಿಂಡೇರು) ಜನರು ಎಷ್ಟು ನೀತಿವಂತರಿರುತ್ತಾರೆಂಬುವವನ್ನು ವಾಚಕರೇ ವಿಚಾರ ಮಾಡಿ ನೋಡಬೇಕು. ಹೀಗೆ ಆ ಹಣವೆಲ್ಲವೂ ಅಪಾತ್ರದಲ್ಲಿ ವೆಚ್ಚವಾಗ ತೊಡಗಿದೆ. ಜನರಿಂದ ಬಂದ ಹಣವು ಅವರಸಲುವಾಗಿ ಬೇರೆರೀತಿಯಿಂದ ಉಪಯೋಗಿಸಲ್ಪಡುವದು ಅಧರ್ಮವಲ್ಲವೇ ? ಧಾರ್ಮಿಕ ಶಿಕ್ಷಣ, ವೇದಶಾಸ್ತ್ರೋತ್ತೇಜನ, ಮತ ಪ್ರಚಾರ ಈ ರೂಪವಾಗಿ ಅವರಿಗೆ ಮರಳಿ ಮುಟ್ಟುವದು ನ್ಯಾಯವಲ್ಲವೇ? ಆದರೆ ಮುಟ್ಟುತ್ತಿರುವದೋ?

ಹೊಟ್ಟೆಗಿಲ್ಲದೆ ಬಡತನದಿಂದ ಬಳಲಿ ಲಕ್ಷಾವಧಿ ಜನರು ನಿರ್ವಾಹವಿಲ್ಲದೆ ಧರ್ಮಾಂತರ ಹೊಂದುವವನ್ನು ನಾವು ಪ್ರತ್ಯಕ್ಷವಾಗಿ ದಿನಾಲು ನೋಡುವದಿಲ್ಲವೇ ? ಹಿಂದೂ ಧರ್ಮೀಯರು ಪ್ರತಿವರ್ಷ ಲಕ್ಷಗಟ್ಟಲೆ ಜನರು ಕುಲಗೆಡಹತ್ತಿದ್ದಾರೆ. ಇದೇ ರೀತಿಯು ಹೀಗೆಯೇ ನಡೆದರೆ ಸ್ವಲ್ಪ ದಿನಗಳಲ್ಲಿಯೇ ಹಿಂದೂ ಸಮಾಜವು ಹಾಳಾಗುವದಿಲ್ಲವೇ ? ನಿರ್ವಾಹವಿಲ್ಲದೆ ಹೊಟ್ಟೆಗಾಗಿ ಧರ್ಮಾಂತರ ಹೊಂದುವ ಜನರು ನಮ್ಮ ಧರ್ಮದಲ್ಲಿಯೇ ಉಳಿಯುವಂತೆ ಮಠಗಳ ದ್ರವ್ಯವು ವೆಚ್ಚವಾದರೆ ನಿಜವಾದ ಧರ್ಮರಕ್ಷಣೆಯಾಗುವದಿಲ್ಲವೇ ? ನಮ್ಮ ದುರ್ದೈವದಿಂದಲೋ ಅವರ ದುರ್ದೈವದಿಂದಲೋ ಶ್ರೀಗಳವರಂತೂ ಕಣ್ಣುಮುಚ್ಚಿರುವರು. ಮಾಡುವದೇನು ? ಪ್ರತಿ ವರ್ಷ ಲಕ್ಷಾವಧಿ ಜನರನ್ನು ಕಳಕೊಳ್ಳುತ್ತಿರುವೆವು ಮಾತ್ರ.

ಹೀಗೆ ಮಠಾಧಿಕಾರಿಗಳು ಇಂದು ಕೈಕೊಳ್ಳಬೇಕಾದ ಅನೇಕ ಕಾರ್ಯಗಳಿರುತ್ತವೆ. ಇಂಥ ಪ್ರತ್ಯಕ್ಷ ಧರ್ಮರಕ್ಷಣೆಯ ಹಾಗು ಜನ ಕಲ್ಯಾಣದ ಕಾರ್ಯಗಳನ್ನು ಕೈಕೊಂಡರೆ ಮಠಗಳಮೇಲೆ ಜನರ ಭಕ್ತಿ-ವಿಶ್ವಾಸಗಳು ಹೆಚ್ಚುವವು. ಮಠಗಳ ಹಾಗೂ ಧರ್ಮದ ಉತ್ಕರ್ಷವೂ ಆಗುವದರಲ್ಲಿ ಸಂದೇಹವಿಲ್ಲ. ಆದರೆ ಎಲ್ಲಿಯವರೆಗೆ ಮಠಗಳು ಲೋಕಕಲ್ಯಾಣದ ಕಾರ್ಯಗಳನ್ನು ಕೈಕೊಂಡಿಲ್ಲವೋ ಅಲ್ಲಿಯವರೆಗೆ ಜನರಿಂದ ಮಾನಮರ್ಯಾದೆಗಳನ್ನು ಬಯಸುವದು ಅನ್ಯಾಯವೂ ಅಧರ್ಮವೂ ಆಗಿರುವದು.

ಮೇಲೆ ನಾವು ಉದಾಹರಣೆಗೆಂದು ಒಂದೇ ವಿಷಯವನ್ನೆತ್ತಿದ್ದೆವು. ಆದರೆ ಇಂದು ಮಠಗಳು ಕೈಕೊಳ್ಳುವ ಅನೇಕ ಮಹತ್ವದ ಕಾರ್ಯಗಳುಂಟು. ಅವುಗಳಲ್ಲಿ ನಮಗೆ ಹೊಳೆದವುಗಳನ್ನು ಇಲ್ಲಿ ಹೇಳುವೆನು. (ಅ) ಧಾರ್ಮಿಕ ಶಿಕ್ಷಣ, (ಬ) ಧರ್ಮಾಂತರ ಪ್ರತಿಬಂಧ ಹಾಗು ಶುದ್ಧೀಕರಣ, (ಕ) ಸಂಸ್ಕೃತ ವಿದ್ಯಾಪೀಠಸ್ಥಾಪನೆ, (ಡ) ವೇದ ಶಾಸ್ತ್ರೋತ್ತೇಜನ, (ಇ) ಧರ್ಮಶಾಸನ, (ಈ) ಪರಿಸ್ಥಿತಿಗನುಸರಿಸಿ ಆಚಾರ ಧರ್ಮ ನಿರ್ಣಯ, (ಉ) ಧರ್ಮಗ್ರಂಥಗಳ ಪರೀಕ್ಷಣ, (ಊ) ಧಾರ್ಮಿಕ ಅನ್ಯಾಯಗಳ ತೀರ್ಪು, ಹೀಗೆಯೇ ಅನೇಕ ವಿಷಯಗಳುಂಟು. ಮಠಗಳ ಕಾರ್ಯಕ್ಷೇತ್ರವು ಎಷ್ಟು ವಿಸ್ತಾರವಿರುವದೆಂಬುದನ್ನೂ ಅವುಗಳನ್ನು ಕೈಕೊಂಡು ಕಾರ್ಯನಡಿಸಿದರೆ ಜನರ

ಕಲ್ಯಾಣವೆಷ್ಟಾಗುವದೆಂಬುದನ್ನೂ ವಾಚಕರೇ ವಿಚಾರಿಸಬೇಕು. ಇವುಗಳಲ್ಲಿ ಪ್ರತಿ ಯೊಂದರ ಮೇಲೆ ಒಂದೊಂದು ನಿಬಂಧನನ್ನೇ ಬರೆಯುಬಹುದು. ಆದರೆ ವಿಸ್ತಾರ ಭಯದಿಂದ ಮುಖ್ಯ ವಿಷಯುಗಳಮೇಲೆ ಕೆಲ ಸಂಕ್ಷಿಪ್ತ ಮಾತುಗಳನ್ನು ಬರೆದು ಎಲ್ಲ ವಿಷಯುಗಳ ವಿಚಾರವನ್ನು ವಾಚಕರಮೇಲೆಯೇ ಹೊರಿಸುವದು ಯೋಗ್ಯ ಕಾಣುತ್ತದೆ.

(ಬ) ಧರ್ಮಾಂತರ ಪ್ರತಿಬಂಧದ ಕಾರ್ಯವಂತೂ ಸದ್ಯಕ್ಕೆ ಎಷ್ಟು ಮಹತ್ವದ್ದಾ ಗಿದೆ ಎಂಬುದನ್ನಂತೂ ವಿವರಿಸುವ ಕಾರಣವಿಲ್ಲ. ಇನ್ನು ಧರ್ಮಾಂತರವಾದ ಜನ ರನ್ನು ಪುನಃ ಪ್ರಾಯಶ್ಚಿತ್ತಗಳನ್ನು ಕೊಟ್ಟು ಅವರನ್ನು ಶುದ್ಧೀಕರಿಸುವ ಕಾರ್ಯವೂ ಅಷ್ಟೇ ಮಹತ್ವದ್ದಾಗಿದೆ. ಇದಕ್ಕೆ ಶಾಸ್ತ್ರಗಳಲ್ಲಿ ಆಧಾರಗಳುಂಟೆಂದೂ ಕೇಳುತ್ತೇವೆ. ಈ ಕಾರ್ಯವನ್ನು ಮಠಾಧಿಪತಿಗಳು ಕೈಕೊಳ್ಳದಿದ್ದರೆ ಯಾರು ಕೈಕೊಳ್ಳಬೇಕು ? ಈ ಕಾರ್ಯವನ್ನು ಕೈಕೊಂಡರೆ ಹಿಂದೀರಾಷ್ಟ್ರದ ಕಲ್ಯಾಣವಾಗುವದು.

ನೂರು ನೂರಾಐವತ್ತು ವರ್ಷಗಳಿಂದ ನಮ್ಮಲ್ಲಿ ಪಾಶ್ಚಾತ್ಯ ಶಿಕ್ಷಣವು ಪ್ರಾರಂಭ ವಾಗಿದೆ. ಬ್ರಾಹ್ಮಣನೇ ಇರಲಿ, ಲಿಂಗವಂತನೇ ಇರಲಿ, ಜೈನನೇ ಇರಲಿ, ಯಾರೇ ಇದ್ದರೂ ಅವರಿಗೆ ತಮ್ಮ ಧರ್ಮದ ಅರಿವು ಇರುವದಿಲ್ಲ. ರಾಮಾಯಣ ಮಹಾಭಾರ ತಗಳು ಏಸೂಕ್ರಿಸ್ತನಿಂದ ಬರೆಯಲ್ಪಟ್ಟಿರುವವೆಂದು ಹೇಳುವ ಅನೇಕ ಪಂಡಿತರು ನಮ್ಮಲ್ಲಿ ದೊರೆಯುವದು ದುರ್ಲಭವಲ್ಲ (!) ಪಾಶ್ಚಿಮಾತ್ಯ ಸಂಸ್ಕೃತಿಯ ಸಹವಾಸ ದಿಂದ ಧರ್ಮದ ಬಗ್ಗೆ ಅನಾದರವುಂಟಾಗತೊಡಗಿದೆ. ನಾಸ್ತಿಕವಾದವು ಮತ್ತೆ ತಲೆ ಯೆತ್ತತೊಡಗಿದೆ. ವರ್ಣಸಂಕರವು' ಭರದಿಂದ ನಡೆದದೆ. ಇದೆಲ್ಲವೂ ಧಾರ್ಮಿಕ ಶಿಕ್ಷಣದ ಅಭಾವದ ಪರಿಣಾಮವು. ಇದನ್ನು ಕಂಡು ನಮ್ಮ ಮುಖಂಡರಲ್ಲಿ ಕೆಲವರು ಧಾರ್ಮಿಕ ಶಿಕ್ಷಣವು ಅವಶ್ಯವಾಗಿ ಬೇಕೆಂದು ಅನ್ನಹತ್ತಿದ್ದಾರೆ. ಬರೆ ಬಾಯಿಯಿಂದ ಅಂದರೆ ಆಗುವದೇನು ? ಸರಕಾರವಂತೂ ಪರಧರ್ಮೀಯವಿದ್ದು ತಮ್ಮ ಧರ್ಮಕ್ಕೆ ಪ್ರೋತ್ಸಾಹನಕೊಡುವಂಥದಿದೆ. ಆದ್ದರಿಂದ ನಮ್ಮ ಧಾರ್ಮಿಕ ಶಿಕ್ಷಣದ ಪ್ರಶ್ನೆಯನ್ನು ನಾವೇ ಬಿಡಿಸಿಕೊಳ್ಳಬೇಕು. ಮಠಪತಿಗಳು ಈ ಕಾರ್ಯವನ್ನು ಕೈಯಲ್ಲಿ ತೆಗೆದು ಕೊಂಡು ವ್ಯವಸ್ಥೆಮಾಡಿದರೆ ತೀವ್ರವಾಗಿಯೇ ಕಾರ್ಯವು ಫಲಿಸುವದು. ಲಿಂಗವಂತರಿ ಗಂತೂ ಈ ಕಾರ್ಯವು ಬಹು ಹಗುರಿದೆ. ಯಾಕಂದರೆ ಪ್ರತಿಯೊಂದು ಊರಿಗೆ ಒಂದು ಮಠವು ಇದ್ದೇ ಇರುವದು. ಅಲ್ಲಿ ಆಚಾರಸಂಪನ್ನರೂ ವಿದ್ವಾಂಸರೂ ಆದ ಜನರನ್ನು ನಿಯಮಿಸಿದರೆ ತೀರಿತು.

(ಈ) ಸಧ್ಯಕ್ಕೆ ನಮ್ಮ ಸಮಾಜದ ಆಚರಣೆಯು ಯಾವ ಶಾಸ್ತ್ರದಂತೆಯೂ ಇಲ್ಲ; ಸ್ಮೃತಿಯಂತೆಯೂ ಇಲ್ಲ. ಆದರೆ ನಾವು ವೇದ ಧರ್ಮೀಯರೆಂದೂ ಸ್ಮೃತಿಯಂತೆ ನಡೆ ಯುವವರೆಂದು ಹೇಳಿಕೊಳ್ಳಲು ಹಿಂದೆ ಮುಂದೆ ನೋಡುವದಿಲ್ಲ. ಯಾವನಾದರೊಬ್ಬನು

ರೂಢಿಗೆ ವಿರುದ್ಧವಾದ ಕೆಲಸವನ್ನು ಮಾಡಿದ ಕೂಡಲೆ ಮಾತ್ರ ಅದು ಯೋಗ್ಯವಿರಲಿ ಅಯೋಗ್ಯವಿರಲಿ ಅವನ ಮೇಲೆ ಹರಿಹಾಯ್ದು ಅವನಿಗೆ ಬಹಿಷ್ಕಾರ ಹಾಕುತ್ತೇವೆ. ಇದು ಅವನತಿಯ ಲಕ್ಷಣವೇ ಹೊರ್ತು ಉನ್ನತಿಯ ಲಕ್ಷಣವಲ್ಲ. ನಮ್ಮ ಧರ್ಮ ಶಾಸ್ತ್ರದಲ್ಲಿ ಹಾಕಿಕೊಟ್ಟ ಎಲ್ಲ ವಿಧಿ ನಿಷೇಧಗಳು ಸಧ್ಯದ ಪರಿಸ್ಥಿತಿಯಲ್ಲಿ ಪಾಲಿಸಲು ಶಕ್ಯವಿಲ್ಲ. (ನಾವು ಪಾಲಿಸುವದಿಲ್ಲ ಪಾಲಿಸುತ್ತಿರುವೆವೆಂದು ತಿಳಿದಿರುವೆವು. ಮಾತ್ರ) ಆಚಾರಗಳು ದೇಹಗಳು ಅವುಗಳ ಮೂಲಭೂತವಾದ ತತ್ವಗಳು ಅವುಗಳ ಆತ್ಮಗಳು ದೇಹವು ಅನಿತ್ಯವಾದದ್ದು. ರೂಪಾಂತರವನ್ನು ಮೇಲಿಂದ ಮೇಲೆ ಹೊಂದುವಂಥಾದ್ದು. ಆದ್ದರಿಂದ ನಮ್ಮ ಆಚಾರಗಳು ಬದಲಾದರೂ ಅವುಗಳ ಮೂಲಭೂತವಾದ ತತ್ವಗಳು ಬದಲಾಗದಂತೆ ಎಚ್ಚರ ತೆಗೆದುಕೊಂಡರೆ ತೀರಿತು. ಪರಿಸ್ಥಿತಿಯು ಬದಲಾದಂತೆ ಆಚಾರಗಳು ಬದಲಾಗಲೇಬೇಕು ಯಾಕಂದರೆ ಪ್ರಕೃತಿಯ ಧರ್ಮವೇ ಅದು. ನಾವು ಒಲ್ಲೆನೆಂದರೆ ಕೇಳುವದಿಲ್ಲ. ಪ್ರಕೃತಿಯು ತಾನೇ ನಡಿಯಲು ಹಚ್ಚುವದು. ಧರ್ಮಶಾಸ್ತ್ರದಲ್ಲಿಯ ವಿಧಿನಿಷೇಧಗಳಲ್ಲಿ ಯಾವದು ಅವಶ್ಯವು ಯಾವದು ಅನಾವಶ್ಯಕವು ಎಂಬುದನ್ನು ವಿಚಾರಿಸುವ ಸಮಯವು ಉಂಟಾಗಿದೆ. ಆದ್ದರಿಂದ ಶಾಸ್ತ್ರದಿಂದ ಪ್ರತಿಪಾದಿತವಾದ ವಿಧಿ ನಿಷೇಧಗಳ ಮೂಲತತ್ವಗಳನ್ನು ಹುಡುಕಿ ಪರಿಸ್ಥಿತಿಗನುಸರಿಸಿ ಅವುಗಳಲ್ಲಿ ಕೆಲವು ಅವಶ್ಯಕಗಳೆಂದೂ ಕೆಲವು ಅನಾವಶ್ಯಕಗಳೆಂದೂ ಕೆಲವು ಮುಖ್ಯವೆಂದೂ ಕೆಲವು ವೈಕಲ್ಪಿಕವೆಂದೂ ನಿರ್ಣಯಿಸುವದು ಅವಶ್ಯವಾಗಿದೆ. ಇದು ವ್ಯಕ್ತಿಯ ಕಾರ್ಯವಲ್ಲೆಂದೂ ಬಹುಕಠಿಣಕಾರ್ಯವೆಂದೂ ನಾವು ಬಲ್ಲೆವು. ಇದು ಎಷ್ಟು ಕಠಿಣಕಾರ್ಯವಿರುವದೋ ಅಷ್ಟೇ ಮಹತ್ವದ್ದಿರುವದು. ಯಾಕಂದರೆ, ಪರಿಸ್ಥಿತಿಯು ಬದಲಾಗಿದೆ. ಎಷ್ಟೋ ಕರ್ಮಗಳು ಅಶಕ್ಯವಾಗಿವೆ. ಪರಿಸ್ಥಿತಿಯಿಂದ ಅಶಕ್ಯವಾದ ಆಚಾರವು ಶಾಸ್ತ್ರಕ್ಕೆ ಅವಶ್ಯವೇ ಎಂದು ಹಟಹಿಡಿಯುವದು ಒಳಿತಾಗುವದಿಲ್ಲ, ಯಾಕಂದರೆ ಯಾವದೊಂದು ನಿಯಮವು ಅಥವಾ ಕಾಯದೆಯು ಆಚರಣೆಗಳಲ್ಲಿ ಆಚರಿಸಲು ಅಶಕ್ಯವಾಗಿ ಆಚರಿಸಲ್ಪಡದಿದ್ದರೆ ಅದು ಇದ್ದರೂ ಅಷ್ಟೇ! ಬಿಟ್ಟರೂ ಅಷ್ಟೆ! ಶಾಸ್ತ್ರದಲ್ಲಿ ಮಾತ್ರ ಉಳಿಯುವದು. ಸಮಾಜ ಶಾಸ್ತ್ರದ ದೃಷ್ಟಿಯಿಂದ ಇದು ವ್ಯರ್ಥವೆಂದೂ ಅಧರ್ಮವೆಂದೂ ತಿಳಿಯಲ್ಪಡುತ್ತದೆ. ಇಂಥ ವಿಷಯಗಳ ಸಲುವಾಗಿ ಆಗ್ರಹವನ್ನು ಹಿಡಿದು ಉಪಯೋಗವೇನು? ಪರಿಸ್ಥಿತಿಯಂತೆ ಬದಲು ಮಾಡಲೇಬೇಕು. ಧರ್ಮ ಶಾಸ್ತ್ರದಲ್ಲಿಯೂ ವ್ಯವಹಾರದಲ್ಲಿಯೂ ಪ್ರವೀಣರಾದ ವಿದ್ವಾಂಸರ ಮಂಡಲವನ್ನು ಮಾಡಿ ಅವರಿಂದ ಸಧ್ಯದ ಪರಿಸ್ಥಿತಿಯಲ್ಲಿ ಯಾವ ಚಾರಗಳನ್ನು ಪಾಲಿಸಬೇಕು. ಯಾವುಗಳನ್ನು ವೈಕಲ್ಪಿಕವೆಂದು ತಿಳಿಯಬೇಕೆಂಬುದನ್ನು ನಿರ್ಣಯಿಸಿದರೆ ಸಮಾಜಕ್ಕೆ ಧರ್ಮಬಂಧನಗಳನ್ನು ಪಾಲಿಸಲು ಅನುಕೂಲವಾಗಿ ಧರ್ಮದಿಂದ ದೂರಹೋದಂತೆ ಕಾಣುವ ಸಮಾಜವು ಸಮೀಪಕ್ಕೆ ಬಂದಂತೆ ಕಾಣುವದು. ಧರ್ಮಶಾಸನ ದೃಷ್ಟಿಯಿಂದ ದೊಡ್ಡ ಕಾರ್ಯವಾದಂತಾಗುವದು. ಎಲ್ಲ ಮತಾಧೀಶರು ಕೂಡಿ ಈ ಕಾರ್ಯವನ್ನು ಕೈಕೊಂಡರೆ ಎಂಥ ಭಂಗಾರದಂತಾಗುವದು!

ಮನಸ್ಸಿನಲ್ಲಿ ಮಂಡಿಗೆ ಮಾಡಿದರೆ ಗೋದೀ ರೊಕ್ಕ ಕೊಡುವವರಾರು ? ಎಂಬ ಪ್ರಶ್ನೆಯು ಸಹಜವಾಗಿ ಬರುವದು. ಮೇಲಿನ ಎಲ್ಲ ಕಾರ್ಯಗಳಿಗೆ ಪೂರೈಸುವಷ್ಟು ದ್ರವ್ಯವು ಮಠಗಳಲ್ಲಿರುವದೆಂದು ನಮ್ಮ ಅಭಿಪ್ರಾಯವಲ್ಲ. ಈ ಕಾರ್ಯವು ಅವ್ಯಾಹತವಾಗಿ ನಡೆಯಬೇಕಾದರೆ ವಿಪುಲವಾದ ದ್ರವ್ಯರಾಶಿಯು ಬೇಕೆಂಬುದನ್ನು ಬಲ್ಲೆವು. ಆದರೆ ಈ ಲೋಕಹಿತದ ಕಾರ್ಯಗಳನ್ನು ಕೈಕೊಂಡು ಮಠಗಳಲ್ಲಿ ಆಗುವ ಅವ್ಯವಸ್ಥೆಗಳಿಗೆ ಬಡ್ಡು ಹಾಕಿದರೆ ಜನರಿಂದ ಧನದ ಪ್ರವಾಹವು ಶ್ರೀಗಳವರ ಕಡೆಗೆ ತಾನೇ ಹರಿಯತೊಡಗುವದು. ಕೇವಲ ಮನೆಗೆ ಬಂದು ಪೂಜೆಮಾಡಿದರೇ ಧನದ ಮಳೆ ಸುರಿವಾಗ ಇಂಥ ಲೋಕ ಕಲ್ಯಾಣದ ಕಾರ್ಯವನ್ನು ಕೈಕೊಂಡರೆ ಧನ ದೊರೆಯುವದಿಲ್ಲವೇ ! ನಿಸ್ಸಂದೇಹವಾಗಿ ಧನದ ಸೂರಿಯಾಗುವದೆಂದು ನಮ್ಮ ನಂಬಿಗೆಯಿದೆ. ಸಧ್ಯಕ್ಕೆ ಸಮಾಜದಲ್ಲಿ ಕ್ರಾಂತಿಕಾರಕ ವಿಚಾರಗಳು ಬೇರೂರಹತ್ತಿವೆ. ಶ್ರೀಗಳವರಿಗೆ ದಕ್ಷಿಣೆಯನ್ನು ಕೊಟ್ಟು ಧನವನ್ನು ಸೂರೆಗೆಯ್ಯುವದಕ್ಕಿಂತ ಕಟುಕನ ಕೈಯಿಂದ ಕರಕರನೆ ಕೊಯ್ಯುವ ಆಕಳನ್ನು ಬಿಡಿಸಿ ತರುವದು ಹೆಚ್ಚಿನ ಧರ್ಮವಲ್ಲವೇ ! ಶ್ರೀಗಳವರನ್ನು ಕರೆದು ಅನೀತಿವಂತರಾದ (ಧಿಂಡೇರಿಗೆ) ಜನರಿಗೆ ಊಟವನ್ನು ಹಾಕುವದಕ್ಕಿಂತ ಹೊಟ್ಟೆಗಿಲ್ಲದೆ ಪರಧರ್ಮವನ್ನು ಸ್ವೀಕರಿಸುವ ಬಡ ಜನರಿಗೆ ಸಹಾಯಮಾಡಿ ಧರ್ಮರಕ್ಷಣೆಯನ್ನು ಮಾಡುವದು ಹೆಚ್ಚಿನ ಧರ್ಮವಲ್ಲವೇ ? ಮುಂತಾದ ಕ್ರಾಂತಿ ಕಾರಕ ವಿಚಾರಗಳು ತರಣ ತಲೆಯಲ್ಲಿ ಬರಹತ್ತಿವೆ. ಇಷ್ಟೇಅಲ್ಲ. ಈ ವಿಚಾರಗಳ ವೃಕ್ಷವು ಇನ್ನೂ ಬೆಳೆದಿದೆ. ಮಠಗಳಿಂದ ಲೋಕ ಕಲ್ಯಾಣದ ಕಾರ್ಯಗಳ ಬದಲು ಗುರುಗಳು ಊರಿಗೆ ಬಂದರೆ ಆಗುವ ತೊಂದರೆಗಳನ್ನು ಕಂಡು ಎಷ್ಟೋ ಬಿಸಿ ರಕ್ತದ ತರುಣರ ತಲೆಯಲ್ಲಿ ಜರ್ಮನಿಯಲ್ಲಿ ಮಾರ್ಟಿನ ಲೂಥರನು ಮಠಗಳನ್ನು ಕೆತ್ತಿ ಒಗೆದಂತೆ ಇಲ್ಲಿಯೂ ನಾಶಮಾಡಬೇಕೆಂಬ ವಿಚಾರಗಳು ಉದ್ಭವವಾದದ್ದನ್ನು ಈ ಬರಹಗಾರನು ಬಲ್ಲನು. ಧರ್ಮದ ಅವನತಿಯನ್ನು ಕಂಡು ವಿಚಾರವಂತರ ಮನಃಪ್ರವೃತ್ತಿಯು ನಿಜವಾದ ಧರ್ಮದ ಕಡೆಗೆ ಎಳೆಯುತೊಡಗಿದೆ. ಇವು ಉದಯೋನ್ಮುಖಸಾಮ್ರಾಜ್ಯದ ಸುಚಿಹ್ನಗಳೆಂದು ಅನ್ನಬಹುದು. ಈ ವಿಚಾರ ಕ್ರಾಂತಿಯ ಗುಟ್ಟನ್ನರಿತು ಮಠಾಧಿಪತಿಗಳು ಎಚ್ಚೆತ್ತು ಲೋಕಕಲ್ಯಾಣದ ಕಾರ್ಯವನ್ನು ಕೈಕೊಳ್ಳಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇವೆ.

ಮೇಲಿನ ಎಲ್ಲ ಕಾರ್ಯಗಳು ಪೂರ್ಣವಾಗಿ ಕೈಗೂಡಬೇಕಾದರೆ; ಈಗಿನ ಮಠಗಳ ವ್ಯವಸ್ಥೆಯಲ್ಲಿ ಬದಲಾವಣೆಗಳನ್ನು ಮಾಡಬೇಕು. ಈಗ ಮಠದ ವ್ಯವಸ್ಥೆಯು ವ್ಯಕ್ತಿನಿಷ್ಠವಿರುತ್ತದೆ. ಆದರೆ ಇನ್ನು ಮುಂದೆ ಒಂದು ವ್ಯಕ್ತಿಯ ಕೈಯಲ್ಲಿ ಅಧಿಕಾರ ಕೊಡದೆ ದೇಶದಲ್ಲಿಯ ಸಚ್ಛೀಲ ಆಚಾರಸಂಪನ್ನರಾದ, ವಿದ್ವಾಂಸ ಜನರ ಪ್ರತಿನಿಧಿಗಳ ಕೈಯಲ್ಲಿ; ಕೊಡಬೇಕು. ಅಂದರೆ ಸಮಾಜಕ್ಕೂ, ಮಠಗಳಿಗೂ, ಪರಸ್ಪರವಾಗಿ ಸಂಬಂಧಬೆಳೆದು; ಜನರಲ್ಲಿ ಮಠಗಳ ಬಗ್ಗೆ ಆದರ ಉತ್ಪನ್ನವಾಗುವದು. ದೊಡ್ಡ ದೊಡ್ಡ ಊರುಗಳಲ್ಲಿ ಧರ್ಮ ಸಭೆಗಳನ್ನು ಸ್ಥಾಪಿಸಿ ತಾಲೂಕ ಜಿಲ್ಹೆಗಳಲ್ಲಿ ಅವುಗಳ ಕೇಂದ್ರ

ಗಳನ್ನು ಮಾಡಬೇಕು. ಈ ಸಭೆಗಳಿಂದ ಪ್ರತಿನಿಧಿಗಳನ್ನು ಆರಿಸಿ ಪ್ರಾತಿನಿಧಿಕ ಸಂಸ್ಥೆ ಯನ್ನು ಮಾಡಬೇಕು. ಹೀಗೆ ಧರ್ಮ ಸಾಮ್ರಾಜ್ಯವು ಸ್ಥಾಪಿತವಾಗಿ ಕಾರ್ಯವು ಪ್ರಾರಂಭವಾದರೆ ವಿಸ್ಖಲಿತವಾದ ಸಮಾಜವು ಮತ್ತೆ ಧರ್ಮದಿಂದ ಕಳೆದುಂಬುವದು.

ಈ ಕಾರ್ಯವು ಎಷ್ಟು ಮಹತ್ವದ್ದಿರುವದೋ ಅಷ್ಟೇ ಸುಲಭವಿರುವದು. ಯಾಕಂ ದರೆ ಈ ನಮ್ಮ ಯಾವ ಕಾರ್ಯದಲ್ಲಿಯೂ ಸರಕಾರವು ಕೈ ಹಾಕುವದಿಲ್ಲ. ನಾವು ಸ್ವತಂತ್ರರಿರುವೆವು. ಇಂಥ ಸ್ಥಿತಿಯಲ್ಲಿ ನಮ್ಮಿಂದ ಈ ಕಾರ್ಯವು ಆಗದಿದ್ದರೆ ನಮ್ಮಂಥ ಕೈಲಾಗದವರು ನಾವೇ ಎಂದು ಹೇಳಬೇಕಾಗುವದು. ಎಲ್ಲ ಕಾರ್ಯಗಳನ್ನು ಕೈಕೊ ಳ್ಳಲು ಮಠಾಧೀಶರೇ ಅಧಿಕಾರಸ್ಥರೆಂದು ನಮ್ಮ ಪೂರ್ಣವಾದ ವಿಶ್ವಾಸವುಂಟು. ಅವರು ಮೊದಲಿನಿಂದಲೂ ಈ ಕಾರ್ಯವನ್ನು ನಡಿಸುತ್ತ ಬಂದಿರುವರು. ಬಿಕ್ಕಟ್ಟಿನ ಪರಿಸ್ಥಿತಿಯ ಮೂಲಕ ಎಲ್ಲ ಕಾರ್ಯಗಳು ನಿಂತು ಹೋಗಿವೆ. ನಮ್ಮ ಸಮಾಜದ ತಳಹದಿಯೇ ಧರ್ಮದ ಮೇಲಿರುವದರಿಂದ ಆ ಧಾರ್ಮಿಕ ಭಾವನೆಯನ್ನು ಜಾಗೃತಿಗೊಳಿಸಿ ಕಾರ್ಯ ಮಾಡಬೇಕೆಂದು ಶ್ರೀಗಳವರಿಗೂ ವಿಚಾರವಂತರಾದ ಜನರು ಈ ವಿಚಾರಗಳನ್ನು ಶ್ರೀ ಗಳವರ ಮುಂದೆ ಇಡಬೇಕೆಂದು ಜನರಿಗೂ ಬೇಡಿಕೊಂಡು ಈ ಬರಹವನ್ನು ಇಲ್ಲಿಗೇ ಮುಗಿಸುತ್ತೇವೆ.

[ಸುಧಾರಿಸಿಕೊಳ್ಳುವ ರೀತಿಗಳು ಇಬ್ಬಗೆಯಾಗಿವೆ. ವಿಚಾರದ ಧೋರಣೆಯಿಂದ ಸಮರ್ಪಕ ಮಾರ್ಪಾಟಗಳನ್ನು ಮಾಡಿಕೊಂಡು ಸುಧಾರಿಸಲು ಪ್ರಯತ್ನಿಸುವದು ಒಂದುಬಗೆ. ಇದು ಮಾನವಂತರಾದ ವಿಚಾರಿಗಳ ಹಾದಿ. ಯಾವದಾದರೊಂದು ಚಳವ ಳಿಯ ಪ್ರತೀಕಾರವಾಗುವ ವರೆಗೂ ಸುಮ್ಮನಿದ್ದು ಆ ಮೇಲೆ ಸುಧಾರಿಸಲೆಳಸುವದು ಇನ್ನೊಂದು ಬಗೆ. ಇದು ವಿಚಾರದ ಧೋರಣೆಯಿದ್ದವರು ತುಳಿಯುವ ಹಾದಿಯಲ್ಲ; ಆದ್ದರಿಂದ ನಮ್ಮ ಮಠಗಳ ಪುನರುಜ್ಜೀವನವೂ ಸುಧಾರಣೆಯೂ ಮೊದಲನೆಯ ಮಾರ್ಗವನ್ನನುಸರಿಸಿ ಆಗಲಿ ಎಂದು ಹಾರೈಸಿ ಬರೆದ ಒಂದು ಲೇಖನವಿದು.

—ಸಂಪಾದಕ.]

ಓಂ ಶಾಂತಿಃ ಶಾಂತಿಃ ಶಾಂತಿಃ

---

## ಮಾತಿಗೆ ಮಾತು.

ಸಿಟ್ಟಿನ ಅಧಿಕಾರಿ:— (ಕಾರಕೂನನಿಗೆ) ಏನ್ರೀ ದೇವರು ನಿಮಗೆ ಬುದ್ಧಿಯನ್ನೇ ಕೊಟ್ಟಿಲ್ಲವೇನು ?

ತುಂಟ ಕಾರಕೂನ:— ಅಹುದು ರಾಯರೇ ! ತಮ್ಮಂತವರಿಗೆಲ್ಲ ಕೊಟ್ಟು ಕೊಟ್ಟು ದೇವರ ಬಳಿಯಲ್ಲಿಯೇ ಬುದ್ಧಿ ಉಳಿದಿಲ್ಲ.

## ಓಂ ನಲ್
## "ನನ್ನ ಆಟ"
( ಕೊಪ್ಪಳದ–ಗೆಳೆಯರಿಂದ )

ಆಡುವೆನು ಆಟವನು ಬಗೆಯ ಬಯಲಲ್ಲಿ ।
ನೀಡೆನಗೆ ದೇವ ಜಯ ವೀಯಾಟದಲ್ಲಿ ॥
ನಾನೊಬ್ಬನೇ ಒಂದು ಹನ್ನೊಂದು ಜನರವರು ।
ಏನು ಮಾಡಲಿ ! "ಹುಡದಿ" ಗೆಂದು ಕರೆಯುವನರು ॥
ಒಳಗಾರು ಹೊರಗೈದು ಹುದ್ದರಿಗಳವರಿಹರು ।
ಒಳಹೊರಗೆ ನನ್ನೊಬ್ಬನನ್ನೆ ಬಿಟ್ಟಿಹರು ॥
ಸುತ್ತೆಲ್ಲ ಮುಗಿಬಿದ್ದು ನನ್ನನ್ನು ಹಿಡಿದಿಹರು ।
ಎತ್ತ ? ನಾನೆಂತು ? ಅವರನ್ನು ಗೆದೆಯುವದು ॥
ಇರು ಅದಕೆ ದೇವ ಹಿಂದೆನ್ನ ರಕ್ಷಕನಾಗಿ ।
ಹೊರಿಸುವೆನು ಅವರಿಗೊಂದುಪ್ಪು ಚೆನ್ನಾಗಿ ॥
ಬಗೆಯೆ ಅವರಲ್ಲಿರುವ ಹಿರಿಯಹುದ್ದರಿ ತಾನು ।
ಬಿಗಿಯಾಗಿ ಅವನನ್ನೆ ನಾನು ಕಟ್ಟುವೆನು ॥
ನೀಡು ದೇವನೆ ಇನ್ನು ಅಮಿತ ಧೈರ್ಯವ ನೀನು ।
ಮಾಡಿ ಬಹು ಸಾಹಸವ ನಾನು ಗೆದೆಯುವೆನು ॥ "ನಾ. ಭಾ."

---

## ಶೋಧಕ ಬುದ್ಧಿ

ವಿದ್ಯಾರ್ಥಿ:— ಏನ್ರೀ ಮಾಸ್ತರ ! ಬೆಳದಿಂಗಳು ಹ್ಯಾಂಗ ಹೆಚ್ಚಿ ತಿನ್ನಲಿಕ್ಕೆ ಬರತದರೀ ?

ಮಾಸ್ತರರು:— ಬರುವದೆಂದು ಯಾರು ಹೇಳಿದರೋ ನಿನಗೆ ?

ವಿದ್ಯಾರ್ಥಿ:— ನಮ್ಮ ಮೂರನೇ ಪುಸ್ತಕದೊಳಗ ಅವ ಅದ್ರೀ "ಚಂದ್ರನ ಪ್ರಕಾಶ ಹೆಚ್ಚೀ ತಿಂದ್ಯಾಕೆ ಕುಂತೀ" ಅಂತ !

+ + + +

## ಮಹತ್ವದ ಪ್ರಶ್ನೆಯು

ಯಾರೋ ತಮ್ಮ ಜಾತಿಯ ಉತ್ಪತ್ತಿಯ ಇತಿಹಾಸವನ್ನು ಬರೆಯುದವರಿದ್ದರೆಂತೆ. ಅವರಿಗೆಷ್ಟೋ ಸಂಗತಿ ತಿಳಿಯಬೇಕಾಗಿದ್ದಿತು. ಅದಕ್ಕಾಗಿ ಅವರು ವರ್ತಮಾನ ಪತ್ರದಲ್ಲಿ ಕೆಲವು ಪ್ರಶ್ನೆಗಳನ್ನು ಕೇಳಿದ್ದರು. ಅದರಲ್ಲಿ "ನಮ್ಮ ಜಾತಿಯ ಜನರ ಉತ್ಪತ್ತಿ ಸ್ಥಾನವಾವುದು ?" ಎಂಬದೊಂದು ಪ್ರಶ್ನೆ.

# ಸಂಸಾರವೆಂದರೆ ಸೂಜಿಗಲ್ಲು.

## ಒಂದು ಚಿಕ್ಕ ಕತೆಯು.

ಬರೆದವನು:— ಆನಂದಕಂದ.

### ೧.

ಈ ಪ್ರಪಂಚದಲ್ಲಿ ಪೂರ್ಣಸುಖಿಯಾದ ಪ್ರಾಣಿಯು ಸಿಕ್ಕುವುದೆಂದರೆ, ಕುಂಬಾರನ ಆವಿಗೆಯಲ್ಲಿ ಬಂಗಾರದ ಚೆಂಬುವು ದೊರೆತಂತೆಯೆ ಸರಿ! ಅದರಲ್ಲಿಯೂ ಮನುಷ್ಯ ಮಾತ್ರನಾದವನು, ಗಂಡುಸಿರಲಿ ಹೆಂಗುಸಿರಲಿ! ಹಿರಿಯನಿರಲಿ ಕಿರಿಯನಿರಲಿ! ಬಡವನಿರಲಿ ಬಲ್ಲಿದನಿರಲಿ! ಅರಸನಿರಲಿ ತಿರುಕನಿರಲಿ! ಬಲವಂತನಿರಲಿ ಬಲಹೀನನಿರಲಿ! ಎಂತಹವನೇ ಇದ್ದರೂ, ಅವನಿಗೆ ಸಂಸಾರದಲ್ಲಿ ದುಃಖಗಳು ಒದಗತಕ್ಕುವೆ? ಎಳೆಮಗುವಿಗೇನಾದರೂ ನೋವು ಉಂಟಾಗಿ ಅಳುತಿರುವಾಗ, ಕಕ್ಕುಲತೆಯ ತಾಯಿಯು ಇನಿದಾಗಿ ಜೋಗುಳವಾಡಿಯೊ, ಗಂಟೆಯ ಬಾರಿಸಿಯೊ, ಇನ್ನೇನನಾದರೂ ಹಂಚಿಕೆ ಮಾಡಿಯೊ, ಮಗುವಿಗಾದ ನೋವನ್ನು ಮರೆಯಿಸುವಳಲ್ಲವೆ! ಆಗ ಮಗುವು ತನಗೆಷ್ಟು ವೇದನೆಯುಂಟಾಗುತಿದ್ದರೂ, ಕ್ಷಣ ಮಾತ್ರ ಅದನ್ನು ಮರೆತು, ತಾಯಿಯ ಮೋರೆ ನೋಡುತ್ತ, ನಗುವುದು; ಆಡುವುದು. ಅದರಂತೆಯೆ—ನಾವು ಸಾಂಸಾರಿಕದುಃಖಗಳಿಂದ ಬಳಲಿ ಅಳುತಿರುವಾಗ, ವಿಶ್ವಜನನಿಯಾದ ಪರಮೇಶ್ವರೀ ಶಕ್ತಿಯು, ಹಲವು ಬಗೆಯ ಆಶೆಯ ಆಮಿಷಗಳನುಂಟುಮಾಡುವ, ಮಂಜುಲಗೀತೆಗಳನು ನಮ್ಮ ಕಿವಿಯೊಳಗೆ ಹಾಡುವಳು; ನಮಗಾದ ದುಃಖಗಳನು ಮರೆಯಿಸುವಳು. ಇಂತು ಮಾಡದಿದ್ದರೆ, ಆ ಲೀಲಾಲೋಲನಾದ ಜಗದೀಶ್ವರನ ನಾಟಕವು ಸರಿಯಾಗಿ ಸಾಗಬೇಕೆಂತು?

ಪರಮಾತ್ಮನು ಈಗ ನಗುತಿರುವವರನ್ನು ಇನ್ನೊಂದು ನಿಮಿಷದಲ್ಲಿ ಅಳಿಸಬಲ್ಲನು. ಈ ಕ್ಷಣದಲ್ಲಿ ಅಳುತಿರುವವರನ್ನು ಮತ್ತೊಂದು ಕ್ಷಣದಲ್ಲಿ ನಗಿಸಬಲ್ಲನು. ಅವನ ಈ ಕೃತಿಗೆ ನಿಷ್ಕೃತಿಯೇನಾದರೂ ಉಂಟೆ? ಉಂಟೆಂದು ಬಲ್ಲವರು ಹೇಳುವರು. ನಾವೇನೂ ಅದನ್ನು ಕಂಡವರಲ್ಲ. ಸಾಂಸಾರಿಕರಾದ ನಮಗದು ಶಶವಿಷಾಣ (ಮೊಲದಕೋಡು)ವೆ! ಇರಲಿ! ಸಾಕಿನ್ನು ಈ ವೇದಾಂತದ ಮಾತು. ಹೊಬತ್ತಿಯ ಹೊಸೆಯುವಾಗಿನ ನಮ್ಮ ಹೆಣ್ಣುಮಕ್ಕಳ ಹುಚ್ಚುಚಚ್ಚು ವೇದಾಂತವಿದು. ಕೇಳಿ ನಗಬೇಡಿ ಮತ್ತೆ!

ತಮಗರಿಯದ ಮಾತಿದು. ಮೊದಲು ನಮ್ಮ ಮನೆಯಲ್ಲಿ ಮಂದಿಯೆಷ್ಟು! ಮಕ್ಕಳೆಷ್ಟು! ದನವೆಷ್ಟು! ಕರುವೆಷ್ಟು! ನಮ್ಮ ಮನೆಯೆಂದರೆ ಗೋಕುಲದಂತಿದ್ದಿತು. ನಮ್ಮ ಮನೆಗೆ ಬಂದು ಹೋಗುವವರೆಲ್ಲ "ಅಹಹ! ಏನು ನಿಮ್ಮ ದೈವ! ಸಂತಾನ ಸಂಪತ್ತು

ಎರಡೂ ಕಲೆತಿದ್ದುದನು ಕಾಣಬೇಕಾದರೆ, ತಮ್ಮ ಮನೆಯಲ್ಲಿಯೆ" ಎಂದು ಮೊದಲಾಗಿ ನಮ್ಮ ತಂದೆಯ ಭಾಗ್ಯವನ್ನು ಕೊಂಡಾಡುತಿದ್ದರು.

ನಮ್ಮ ತಾಯಿಯ ಹೊಟ್ಟೆಯಿಂದ ನಾವು, ಮೂವರು ಹೆಣ್ಣುಮಕ್ಕಳು; ನಾಲ್ವರು ಗಂಡುಮಕ್ಕಳು; ಮನೆಯಲ್ಲಿ ಯಾವ ಮಾತಿನದೂ ಕೊರತೆಯಿಲ್ಲ. ಎಲ್ಲರೂ ಆನಂದದಿಂದ ನಗುತ್ತ ನಲಿಯುತ್ತಲಿದ್ದೆವು. ಸಂಸಾರವು ಸವಿಯಾಗಿ ಸಾಗಿದ್ದಿತು.

ಪ್ರಾಪಂಚಿಕಸುಖವು ಮಿಂಚಿನಂತೆಯೆಂದೂ, "ನೀರಗುರಳಿಯಂತೆಯೆಂದೂ, ನಮ್ಮ ದಾಸವರ್ಯರು ಹೇಳಿರುವರಲ್ಲ! ಅವರ ಮಾತೇನು ಹುಸಿಯೆ! ನಮ್ಮ ಭರತಖಂಡದ ಜನರನ್ನು ಬಕ್ಕರಿಸಲು, ಬಕಾಸುರನಂತೆ ಬಾಯ್ದೆರೆದು ಬಂದ ಗಂಟಿನರೋಗ (ಪ್ಲೇಗ) ವು, ನಮ್ಮ ಸಂಸಾರದ ಸವಿಯನೆಲ್ಲ ಕೆಡಿಸಿಬಿಟ್ಟಿತು. ಮೊದಲತುತ್ತಿಗೆ ನಮ್ಮ ತಂದೆಯವರನ್ನೇ ನುಂಗಿ ನೀರು ಕುಡಿಯಿತು. ಮುಂದೆ ಕ್ರಮವಾಗಿ ನನ್ನ ತಂಗಿಯೊಬ್ಬಳು, ಒಬ್ಬ ಅಣ್ಣ, ಇಬ್ಬರು ತಮ್ಮಂದಿರು, ಆ ಬೇನೆಯ ಬಾಯಿಗೆ ಬಲಿಯಾದರು. ದುಃಖಿತೆಯಾದ ನಮ್ಮ ತಾಯಿಯನ್ನು ಮಾತನಾಡಿಸಲು, ನಮ್ಮಕ್ಕ ಅತ್ತೆಯ ಮನೆಯಿಂದ ಬಂದಿದ್ದಳು. ಪಾಪ! ಬಂದ ಮೂರು ದಿನಗಳಲ್ಲಿಯೆ ಅವಳಿಗೂ ಮರಣವೆ! ಒಂದೇ ಒಂದು ತಿಂಗಳಲ್ಲಿ ಅದೆಂತಹ ಅನಾಹುತ! ಅದೆಷ್ಟು ಜನರ ಮರಣ! ಬೀಸುವಕಲ್ಲಿನಲ್ಲಿ ಸಿಕ್ಕು ಹಿಟ್ಟಾಗುವಾಗ, ಹೊರಗೆ ಸಿಡಿದು ಬಿದ್ದ ಕಾಳುಗಳಂತೆ, ನಮ್ಮ ತಾಯಿ, ನಾನು, ನಡುವಿನ ತಮ್ಮ ಗೋಪಾಲ, ಮೂವರೆ ಉಳಿದೆವು. ನಾವು ಆ ಬೇನೆಯ ಬಾಯಲ್ಲಿ ಹಿಡಿಸಲಿಲ್ಲವೋ ಏನೊ !

ಮಂದಿ ಮಕ್ಕಳುಗಳಿಂದ ತುಂಬಿ ತುಳುಕುತಿದ್ದ ನಮ್ಮ ಮನೆಯಾಗ "ರಣರಣ" ಸುರಿಯುತಿದ್ದಿತು. ಅಯ್ಯೋ! ಆಗಿನದೆಲ್ಲ ನೆನಪಾದರೆ, ಮೈಮೇಲೆ ಮುಳ್ಳುಗಳೇಳುವುವು. ಎದೆಯಲ್ಲಿ ಧಡಕ್ಕೆನ್ನುವುದು. ಏಳೇಳು ಜನ್ಮದ ವೈರಿಗೂ ಕೂಡ ಅಂತಹ ವೇಳೆಯನ್ನು ತರಬೇಡವೆಂದು, ದೇವರಿಗೆ ಬೇಡಿಕೊಳ್ಳುವೆನು. ಹೋಗಲಿ! ಬಿಡಿ! ಹಿಂದಿನದನ್ನು ನೆನೆದು ಹಿತ್ತಲೊಳಗೆ ಅತ್ತರೆಂತೆ! ಹೋದವರು ಹೋದರು. ಈಗಿನ ಸುಖದ ಸಮಯದಲ್ಲಿ, ಇಲ್ಲದ ದುಃಖವನ್ನು ಜ್ಞಾಪಿಸಿಕೊಂಡು ಕಣ್ಣೀರಿಡುವುದರಲ್ಲಿ ಅರ್ಥವಾದರೂ ಏನಿದೆ?

ನನಗಾಗ ಹದಿನಾಲ್ಕು ವರ್ಷದ ವಯಸ್ಸು ಅದೇ ವರುಷವೇ ನನ್ನ ಮದುವೆಯಾಗಿದ್ದಿತು. ಇನ್ನೂ ಅತ್ತೆಯ ಮನೆಗೆ ಹೋಗಿರಲಿಲ್ಲ. ಗೋಪಾಲನು ಎಂಟು ವರುಷದವನಿದ್ದ. ಸತ್ತವರಿಗಾಗಿ ಅಳುವುದಾದರೂ ಎಷ್ಟು! ದಿನ ಹೋದಂತೆ ನಮ್ಮ ತಾಯಿಯ ಅಳುವು ಕಡಿಮೆಯಾಗುತ್ತಲೆ ನಡೆಯಿತು. ಇಷ್ಟು ದಿನ ಹಲವು ಮಕ್ಕಳಲ್ಲಿ ಹರಿದು ಹಂಚಿ ಹೋಗಿದ್ದ ನಮ್ಮ ತಾಯಿಯ ಪ್ರೇಮಕ್ಕೆ, ಈಗ ನಾವಿಬ್ಬರೆ ಅಧಿಕಾರಿಗಳು. ಅದರಲ್ಲಿ, ಗೋಪಾಲನು ಒಬ್ಬನೆ ಒಬ್ಬ ಗಂಡಸುಮಗ; ಹೆಣ್ಣುಮಕ್ಕ

ಗಿಂತಲೂ ಗಂಡುಮಕ್ಕಳ ಮೇಲೆ ತಾಯಂದಿರ ಪ್ರೇಮವು ಹೆಚ್ಚಾಗಿರುವುದು, ನಾಡಿನ ನಡತೆಯೆ ಅಲ್ಲವೆ ! ನಮ್ಮ ತಾಯಿಗೆ ಗೋಪಾಲನೆಷ್ಟು ತಿಂದರೂ ಕಡಿಮೆ, ಎಷ್ಟು ಉಂಡರೂ ಕಡಿಮೆ; ಅವನ ಹುಡುಗಾಟವೂ ಚೆಂದ, ಕಿಡಿಗೇಡಿತನವೂ ಚೆಂದ; ಅವನೇನಾದರೂ ಬೇಡಿದರೆ ಕೂಡಲೆ ಸಿದ್ಧ. ಹೆಚ್ಚು ಹೇಳುವುದೇನು ! ಹೆಂಗುಸುರು ತಮ್ಮ ಜೀವದಕಿಂತಲೂ ಹೆಚ್ಚಾಗಿ ಜೋಕೆ ಮಾಡುವುದೆಂದರೆ, ಮುತ್ತುರತ್ನದ ಆಭರಣಗಳನ್ನು. ನಮ್ಮ ತಾಯಿ ಅದಕ್ಕಿಂತಲೂ ಹೆಚ್ಚಾಗಿ ಗೋಪಾಲನನ್ನು ನೋಡುತಿದ್ದಳು. ಸೌಭಾಗ್ಯದ ಅಧಿದೈವತವಾದ ಗಂಡನೇ ಹೋದ ಮೇಲೆ, ಹೆಣ್ಣುಮಕ್ಕಳಿಗೆ ಮುತ್ತು ರತ್ನಗಳ ಒಡವೆಗಳಿಂದೇನು ಪ್ರಯೋಜನ ? ಅವರಿಗಾಗ ಮಕ್ಕಳೇ ಮುತ್ತು, ಮಕ್ಕಳೇ ರತ್ನ, ಏನೆಲ್ಲವೂ ಮಕ್ಕಳೇ. ಅಹುದಲ್ಲವೇ ?

ನಮ್ಮ ತಾಯಿ ಗೋಪಾಲನನ್ನೊಬ್ಬನನ್ನೆ ಇಷ್ಟು ಪ್ರೀತಿಸುತಿದ್ದಳೆಂತಲ್ಲ. ನನ್ನನ್ನೂ ಹೆಚ್ಚಾಗಿ ಪ್ರೀತಿಸುತಲಿದ್ದಳು. ನನ್ನದು ನಾನೇ ಹೇಳಿಕೊಳ್ಳುವುದೇನೆಂದು ಬಿಟ್ಟೆನು ಇಷ್ಟೆ! ನಮ್ಮಿಬ್ಬರ ಇಷ್ಟವನ್ನು ಸಲಿಸುವುದರಲ್ಲಿಯೆ, ನಮ್ಮ ತಾಯಿಗೆ ಆನಂದ. ನಮ್ಮನ್ನು ಲಾಲಿಸಿ ಪಾಲಿಸುವುದರಲ್ಲಿ ಅವಳು ತನ್ನ ದುಃಖವನೆಲ್ಲ ಮರೆತುಬಿಟ್ಟಳು. ಎಂದಾದರೂ ಒಂದೊಂದು ದಿನ ಹಿಂದಿನದನ್ನು ನೆನೆದು, ಕಂಬನಿಗರೆಯುವಳು.

## ೨.

ಎಂದಿಗಾದರೂ ಹೆಣ್ಣು ಹೆರವರದೇ ಅಲ್ಲವೆ! “ಕೊಟ್ಟ ಹೆಣ್ಣು ಕುಲಕ್ಕೆ ಹೊರತು” ಎಂದೇನೋ ಹೇಳುವರಲ್ಲ ! ನಾನು ಕಡೆಯವರಿಗೂ ತಾಯಿಯ ಬಳಿಯಲ್ಲಿಯೆ ಇರುವೆನೇ ! ನಾಲ್ಕಾರು ತಿಂಗಳುಗಳಲ್ಲಿಯೆ ನನಗೆ, ಅತ್ತೆಯ ಮನೆಗೆ ಹೋಗಿ, ಅಲ್ಲಿಯೇ ಇರಬೇಕಾಗಿ ಬಂದಿತು. ನನ್ನನಗಲಿರಬೇಕಾದರೆ ತಾಯಿಗೆಷ್ಟೋ ವ್ಯಸನವಾಯಿತು. ವ್ಯಸನ ಪಟ್ಟು ಮಾಡುವುದೇನು !

ನಾನೇನೊ ಅತ್ತೆ ಮಾವಂದಿರಿಗೆ ಮೂಲವಾಗಿ ಹುಟ್ಟಿರುವೆನೆಂದು, ನನ್ನ ಜಾತಕದಿಂದ ತಿಳಿದಿದ್ದಿತೆಂತೆ. ಆದುದರಿಂದ ನಮ್ಮ ತಂದೆ ಅದೆಷ್ಟೋ ಕಷ್ಟಪಟ್ಟು ಹುಡುಕಿ, ಅತ್ತೆ ಮಾವಂದಿರಿಲ್ಲದ ಮನೆಗೆ ನನ್ನನ್ನು ಕೊಟ್ಟಿದ್ದರು. ನಾನಲ್ಲಿ ಹೋದಾಗ ಮನೆಯಲ್ಲಿಯ ಜನರೆಂದರೆ, ನಾವಿಬ್ಬರು ; ನಮ್ಮ ಅತ್ತೆಯ ಅಕ್ಕನೆಂತೆ, ಅವರೊಬ್ಬರು. ನಮ್ಮ ನಾದಿನಿ ಮೂರು ವರ್ಷದ ಹೆಣ್ಣುಮಗು ವೇಣೂ ಒಬ್ಬಳು. ನಾಲ್ಕು ಜನರೆ. ನಾದಿನಿ ಮೈದುನರು ಅಂದೇ ಹುಟ್ಟಿದವರಿದ್ದರೂ, ಅವರೊಡನೆ ಮಾತನಾಡುವಾಗ, ಬಹುವಚನವನುಪಯೋಗಿಸಬೇಕೆಂತೆ. ಇದು ನಮ್ಮ ರೂಢಿಯ ಸ್ಮೃತಿನಿಯಮ. ಇದನ್ನು ಮೀರಿದರೆ ಮಹಾ ಪಾತಕವೇನೋ! ನಾನು ಮಾತ್ರ ಆ ಪಾತಕ ಮಾಡಿದೆನು. ತಾಯಿಯಿಲ್ಲದ ಆ ವೇಣುವನ್ನು, ನನ್ನ ಹೊಟ್ಟೆಯ ಮಗಳಂತೆಯೆ ತಿಳಿದು ಸಾಕಿ ಸಲುಹಿದೆ. ಮುದ್ದಾಡಿ ಮುಂಡಾಡಿದೆ. ಎಂದ ಮೇಲೆ ಅ-

ಳೊಡನೆ ಬಹುವಚನದಿಂದ ಮಾತನಾಡುವುದಾದರೂ ಹೇಗೆ ? ನನಗೇನೊ ನಾಚಿಕೆಯೆ ನಿಸುವುದು; ಅಲ್ಲದೆ "ವೇಣೂ" ಎಂದು, ಅವಳನ್ನು ಮುದ್ದಾಗಿ ಕರೆದರೆಯೇ ನನಗೆ ಆನಂದ. ವೇಣುವಾದರೂ ನನಗೆ "ಅತ್ತಿಗೆ" ಎನ್ನುತಿರುವುದಿಲ್ಲ. "ಅಕ್ಕಮ್ಮಾ" ಎನ್ನುವಳು. ಬಹುವಚನದಿಂದ ಮಾತನಾಡಳು. ನನಗದೇ ಚೆಂದಕಾಣುವುದು. ವೇಣುವು ದೊಡ್ಡವಳಾದೊಡನೆ ನನ್ನನ್ನು "ಅತ್ತಿಗೆ" ಎಂದು ಕರೆಯಲು, ನಮ್ಮ ಮನೆ ಯೊಳಗಿನ ಮುದುಕಮ್ಮ, ಅವಳಿಗೆ ಎಷ್ಟೊ ಬಲವಂತ ಪಡಿಸಿದಳು. ವೇಣುವು ಕೇಳಲೆ ಇಲ್ಲ. "ಹೋಗೇ ಇದೇನು? ಅಸಂಯ್ಯ !" ಎಂದು ಬಿಟ್ಟಳು ಇನ್ನು ಮುಗಿಸಿಬಿಡು ವೆನೀಮಾತನ್ನು. ಹೆಣ್ಣುಮಕ್ಕಳಿಗೆ ತಮ್ಮ ಅತ್ತೆಯ ಮನೆಯ ಮಾತನ್ನು, ಎಷ್ಟು ಹೇಳಿದರೂ ಕಡಿಮೆಯೆ ಅಲ್ಲವೇ?

ನಮ್ಮ ಗೋಪಾಲನೊಳ್ಳೆ ಚುರುಕು ಬುದ್ಧಿಯ ಹುಡುಗ ನೋಡಿ! ಎಳೆಯ ತನದಲ್ಲಿ ಕೂಡ ಓದಿನ ಕಡೆಗೆಯೆ ಒಲವು ಹೆಚ್ಚು. ಕನ್ನಡ ಆರನೆಯ ತರಗತಿ ಮುಗಿ ಯುವವರೆಗೂ ನಾನು ನೋಡಿದೆನಲಾ! ಅವನು ಪರೀಕ್ಷೆಯಲ್ಲಿ ಅಪಯಶಸ್ಸು ಪಡೆದುದು ಒಮ್ಮೆಯೂ ಇಲ್ಲ. ವರುಷ ವರುಷಕ್ಕೂ ಮುಂದಿನ ತರಗತಿಗೆ ಜಿಗಿಯುತಿದ್ದ. ಮನೆ ಯಲ್ಲಿ ಹಿರಿಯರಾದ ಗಂಡುಸುರು ಯಾರೂ ಇರಲಿಲ್ಲವಾದರೂ, ನಮ್ಮ ತಾಯಿ ಗೋಪಾ ಲನ ವಿದ್ಯಾಭ್ಯಾಸದ ಕಡೆಗೆ ಓರೆಗಣ್ಣು ಮಾಡಲಿಲ್ಲ. ಮುದ್ದಿನಿಂದ ಬಳೆಯಿಸಿದ ಮಕ್ಕ ಳನ್ನು ಅಗಲಿರುವುದು, ತಾಯಂದಿರಿಗೆ ಅದೆಷ್ಟೊ ಕಷ್ಟದ ಕೆಲಸವಲ್ಲವೇ? ಅದರ ಲ್ಲಿಯೂ ಗೋಪಾಲನಂತೂ ಒಬ್ಬನೆ ಒಬ್ಬ ಅಪರೂಪದ ಮಗು. ನಮ್ಮ ತಾಯಿ ಇದನ್ನೆನೂ ಎಣಿಸದೆ, ಮಗನು ಜಾಣನಾಗಲೆಂದು, ಇಂಗ್ಲಿಷ ಕಲಿಯಲು ಧಾರವಾಡ ದಲ್ಲಿಟ್ಟಳು. ಅಲ್ಲಿಯಾದರೂ ಗೋಪಾಲನು ತನ್ನ ಚುರುಕು ಬುದ್ಧಿಯನು ತೋರಿಸದಿ ರಲಿಲ್ಲ. ಶಾಲೆಯಲ್ಲಿಯೂ ಮನೆಯಲ್ಲಿಯೂ ಓದಿಯೋದಿ, ಐದು ವರುಷಗಳಲ್ಲಿಯೆ ಕೊನೆಯ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಕಾಲೇಜಿನಲ್ಲಿ ಸೇರಿದನು.

ಕಾಲೇಜಿನಲ್ಲಿ ಓದಲಿಕ್ಕೆ ನಿಂತು ಎರಡು ವರ್ಷವಾಗಿದ್ದಿತು. ಅವನಿಗಾಗ ಹತ್ತೊಂ ಬತ್ತು ವರ್ಷಗಳು ತುಂಬಿದ್ದುವು. ಗೋಪಾಲನು ಮೊದಲಿನಿಂದಲೂ ಸ್ವೇಚ್ಛೆಯಾಗಿ ಬಳೆದ ಹುಡುಗ. ಬೇಡಿದಾಗ ತಾಯಿ ದುಡ್ಡು ಕಳಿಸುತಿದ್ದಳು. ಏನು ಮಾಡಿದರೂ ಅವನ ನ್ನಾರೂ ಕೇಳುವಂತಿಲ್ಲ. ಇಷ್ಟೆಲ್ಲ ಅನುಕೂಲತೆಯಿದ್ದರೂ, ಅದೇನು ಕಾರಣವೋ! ಪಟ್ಟಣವಾಸದ ದುಷ್ಟ ಸಂಸ್ಕಾರಗಳೇನೂ ಗೋಪಾಲನಿಗಾಗಿಲ್ಲ. ಅವನೊಳ್ಳೆ ವಿವೇಕ ಶಾಲಿ.

ಗೋಪಾಲನಿಗೆ ಕಾವ್ಯಗಳನೋದುವುದರಲ್ಲಿಯೂ, ತಾನೇ ಹೊಸತಾಗಿ ಕವಿತೆ ಗಳನ್ನು ರಚಿಸುವುದರಲ್ಲಿಯೂ ಬಲು ಪ್ರೀತಿ. ತಾನು ರಚಿಸಿದ ಎಷ್ಟೋ ಕವಿತೆಗಳನ್ನು ನನಗೂ ತಾಯಿಗೂ ಓದಿ ತೋರಿಸುವನು, ಅರ್ಥ ಹೇಳುವನು. ಅದರಲ್ಲಿ ಗಂಭೀರ

ವಿಚಾರಗಳೇ ಹೆಚ್ಚು. ಸತ್ಯ-ಪ್ರೇಮ-ಜೀವಾತ್ಮ-ಪರಮಾತ್ಮ-ಬ್ರಹ್ಮ-ವಿಶ್ವ ಇತ್ಯಾದಿ ಅಧ್ಯಾತ್ಮಿಕ ವಿಚಾರಗಳೆ ಅವನ ಕವಿತೆಯಲ್ಲಿ ತುಂಬಿರುತಿದ್ದುವು. ಮೊದ ಮೊದಲು ನನಗೇನೂ ತಿಳಿಯುತಿರಲೇ ಇಲ್ಲ. ಆದರೂ ಎಲ್ಲವೂ ತಿಳಿಯುವುದೆಂಬಂತೆ ತೋರಿಸಲು, ಗಂಭೀರಳಾಗಿ ಕುಳಿತು ಕೇಳುತಲಿದ್ದೆನು. ಒಮ್ಮೊಮ್ಮೆ ಸರಿಯಾಗಿ ತಿಳಿಯಿತೆಂಬಂತೆ, ಏನೇನೋ ಅರ್ಥಕ್ಕೆ ಅನರ್ಥ ಮಾಡಿಕೊಂಡು ನಗುತಿದ್ದೆನು. ನಮಗೆಲ್ಲವೂ ತಿಳಿಯುವುದೆಂದು ಭಾವಿಸಿ, ತನ್ನ ಕಾವ್ಯದಲ್ಲಿಯ ಭಾವವನ್ನು ಮೋರೆಯ ಮೇಲೆ ತಂದು, ಭಾವದಂತೆ ಧ್ವನಿಯನ್ನು ಬದಲಿಸುತ್ತ, ಗೋಪಾಲನೂ ಒಳ್ಳೇ ಗಂಭೀರತನದಿಂದ ಕವಿತೆಯನೋದಿ ಹೇಳುತಿದ್ದ. ಆದರೂ ಆಗ ಸರಿಯಾಗಿ ಅರ್ಥವಾಗುತಿರಲಿಲ್ಲ. ಈಗ ಮಾತ್ರ, ಗೋಪಾಲನ ಕವಿತೆಯನೋದಿ ತಿಳಿದುಕೊಳ್ಳುವಷ್ಟು ಜಾಣೆಯಾಗಿರುವೆನು. ಎಡೆಬಿಡದೆ ಕಟೆಯುವುದರಿಂದ, ಕಾಡ ಕಲ್ಲು ಕೂಡ ಕಮನೀಯ ಮೂರ್ತಿಯಾಗುವುದಲ್ಲವೇ ! ಗೋಪಾಲನು, ಆಗಾಗ ನನಗೆ ಕವಿತೆಯನೋದಿ ಹೇಳುವುದೇನು? ಕಡಿಮೆಯೆ ! ನಾನೀಗ ಗೋಪಾಲನ ಕವಿತೆಯನ್ನು, ಓದಿ ತಿಳಿದುಕೊಳ್ಳುವೆನಿಷ್ಟೇ ಅಲ್ಲ; ಏನೇನೋ ಕೆಲವು ಕವಿತೆಗಳನ್ನೂ ಮಾಡುತಿರುವೆನು. ಅದೆಂತಹ ಕವಿತೆ ! ದಾರದಲ್ಲಿ ಮುತ್ತು ಪೋಣಿಸುವರಲ್ಲ ! ಅದರಂತೆಯೇ ಬರೀ ಶಬ್ದಗಳ ಪೋಣಿಕೆ. "ಎದ್ದು ಬೇಗನೇ ಮೋರೆ ತೊಳೆಯಿರಿ" ಎಂಬ ಪದ್ಯದ ಮಾದರಿಯವು. ಗೋಪಾಲನ ಕವಿತೆಯಲ್ಲಿದ್ದ ಎದೆಯನರಳಿಸುವ ಗುಣವು, ನನ್ನ ಕವಿತೆಯಲ್ಲಿಲ್ಲ. ಆದರೂ ಗೋಪಾಲನು ನನ್ನ ಕವಿತೆಯನೊಳ್ಳೆ ಬಣ್ಣಿಸುವನು. ಓದಿ ಆನಂದ ಪಡುವನು. ಓದುಗರು ನನ್ನ ಕವಿತೆಯ ನೋಡಿದರೆ ನಕ್ಕು ಬಿಡಬಹುದು. ಗೋಪಾಲನಿದನ್ನು ವರ್ಣಿಸುವ ಕಾರಣವೆಂದರೆ, ಅವನ ಪ್ರೀತಿಯ ಲಕ್ಕ ನಾನು. ಕಾಗೆ ತನ್ನ ಮಗುವಿಗೆ ಕೋಗಿಲೆಯೆಂದು ಕರೆದಂತೆಯೆ ಇರಬಹುದು ಅವನ ವರ್ಣನೆ.

೩.

ಗೋಪಾಲನು ಧಾರವಾಡದಲ್ಲಿಯೆ ಇರುವನು. ನಡುನಡುವೆ ಬಿಡುವಿನಲ್ಲಿ ಬಂದು ಊರಲ್ಲಿ ಇರುವನು. ನಾನಾದರೂ ಆಗಾಗ ತಾಯಿಯನ್ನು ಕಾಣಲು ತವರಮನೆಗೆ ಹೋಗುತಿದ್ದೆನು. ನಾನು ಹೋದಾಗ, ತಾಯಿಯು ನನ್ನನೆಷ್ಟೋ ಪ್ರೀತಿಸುವಳು ಎಷ್ಟೋ ಉಪಚರಿಸುವಳು. ಮನೆಗೆಲಸವನೇನಾದರೂ ಮಾಡುವೆನೆಂದರೆ, ಕೈಯಿಂದೆ ಹಿಡಿಯಗೊಡುತಿರಲಿಲ್ಲ. ತಿಂಡಿತಿನಿಸು ಮಾತ್ರ ಗಳಿಗೆಗೊಂದು ಚೆಂದ. ಕಾಲುಚಾಚಿಕೊಂಡು ಕುಳಿತು, ಬಂದುಹೋದವರ ಕೂಡ ಹರಟೆಯ ಹೊಡೆಯುತ್ತ ಹಗಲು ಹನ್ನೆರಡುತಾಸೂ ಮುಯ್ಯದ ಗೌರಿಯಂತೆ ಸುಮ್ಮನೆ ಕುಳಿತಿರುವೆನು. ಅದನೆಲ್ಲ ಬಣ್ಣಿಸಿ ಹೇಳುವುದೇನಿದೆ. ತಮ್ಮ ತಾಯಿಯ ಹೊಟ್ಟೆಯಿಂದ ಒಬ್ಬಳೆ ಒಬ್ಬಳಾಗಿ ಹುಟ್ಟಿದ ಹೆಣ್ಣುಮಕ್ಕಳು ಪಾಠಕವರ್ಗದಲ್ಲಾರಾದರೂ ಇದ್ದರೆ, ತಾವು ಅತ್ತೆಯ ಮನೆಯಿಂದ ತವರ ಮನೆಗೆ ಹೋದಾಗಿನ ಆನಂದದ ಅನುಭವವನ್ನು ಜ್ಞಾಪಿಸಿಕೊಂಡು ನೋಡಿ!

ಸಾತಕಸೋದರ ವರ್ಗಕ್ಕೆ ಈ ಆನಂದದ-(ಮಾತೃಪ್ರೇಮದ) ಅನುಭವವು ಎಂದಿಗೂ ಸಿಕ್ಕದು. ಅದು, ಪರಮಾತ್ಮನು ಹೆಣ್ಣುಮಕ್ಕಳ ಸಲುವಾಗಿಯೆ ಕಟ್ಟಿಟ್ಟಮುಡುಪು. ಪುರುಷರಿಗೆ ಅದರಲ್ಲಿ ಪಾಲಿಲ್ಲ. ಅವರದನ್ನು ತಮ್ಮ ಕಲ್ಪನಾಶಕ್ತಿಯಿಂದಲೆ ಕಾಣಬೇಕು.

ನಮ್ಮ ತಾಯಿಯೊಡನೆ ಮಾತನಾಡಲು, ಪ್ರತಿದಿನವೂ ಎಷ್ಟೋಜನ ಹೆಣ್ಣು ಮಕ್ಕಳು ನಮ್ಮ ಮನೆಗೆ ಬರುವರು. ನಾನು ಹೋದಾಗಲಂತೂ ಹೆಚ್ಚಾಗಿ ಬರುವರು. ಒಂದು ಮಹಿಳಾಸಮ್ಮೇಲನವೆ ನೆರೆದಂತಾಗುತಿದ್ದಿತು. ಎರಡೆರಡು ತಾಸು ಹಾಗೆಯೆ ಕೂಡುವರು. ನಮ್ಮ ಮನೆಯಲ್ಲಿ ಗಂಡುಸುರಾರೂ ಇರಲಿಲ್ಲ. ನಮ್ಮೆಲ್ಲರ ಮಾತಿನ ಮಳೆಯನ್ನು ತಡೆಯುವವರಾರು ? ನಾವಾಡುವ ಮಾತುಗಳಿಗೆ ಮೊದಲಿಲ್ಲ; ಕೊನೆ ಯಿಲ್ಲ. ಎಲ್ಲಿಂದ ಹುಟ್ಟುತಿದ್ದಿತೊ! ಎಲ್ಲಿಗೆ ಮುಗಿಯುತಿದ್ದಿತೊ! ನಮ್ಮದು ನಮಗೇ ತಿಳಿಯುತಿರಲಿಲ್ಲ. ದಿನದಿನವೂ ಅಷ್ಟು ಹೊತ್ತು ಮಾತನಾಡಲು ಅವೆಲ್ಲಿಯ ಹೊಸ ವಿಷಯಗಳು ಸಿಕ್ಕುತಿದ್ದವೋ ಏನೋ!

ನಮ್ಮ ತಾಯಿ ಹಿಂದಿನದನ್ನೆಲ್ಲ ನೆನೆದು, ಬಂದವರೆದುರಿಗೆ ಕಣ್ಣೀರಿಡುವಳು. "ಮನೆಗೆ ಮುತ್ತೈದೆಯರು ಬಂದರೆ ಕುಂಕುಮ ಹಚ್ಚುವುದಕ್ಕೆ ಕೂಡ ಮನೆಯೊಳ ಗಾರೂ ಇಲ್ಲ. ಮಗಳು ಮನೆಗೆ ಬಂದಾಗ ಮಾತ್ರ, ಕೊಂಚ ಆನಂದದಲಿರುವೆನು. ಅವ ಳಿದ್ದಾಗ ಮನೆ ತುಂಬಿದಂತಿರುವುದು. ಹೋದೊಡನೆಯೆ ಎಲ್ಲವೂ ಹಾಳುಹಾಳು ಸುರಿ ಯುವುದು." ಎಂದು ಕಳವಳದಿಂದ ನುಡಿಯುವಳು. ಕೂಡಿದ ಜನರಲ್ಲಾರಾದರೂ "ನಿಮಗೇನಾಗಿದೆ ಬಿಡಿ ! ಬಂಗಾರದಂತಹ ಗಂಡಸುಮಗನಿದ್ದಾನೆ. ಪ್ರಬುದ್ಧನಾಗಿ ದ್ದಾನೆ. ಬೇಗನೆ ಮದುವೆಯ ಮಾಡಿಬಿಡಿರಲ್ಲಾ! ಆ ಕಾಲಕಡಗದ ಮೊದಲಗಿತ್ತಿಯು, ಮನೆಗೆ ಬಂದು ನಲಿದಾಡಲು ತೊಡಗಿದರೆ, ನಿಮ್ಮ ಅಳುವೆಲ್ಲ ಎಲ್ಲಿ ಓಡಿಹೋಗುವು ದೋ!" ಇತ್ಯಾದಿಯಾಗಿ ಏನೇನೋ ಹೇಳಿ, ನಮ್ಮ ತಾಯಿಯನ್ನು ಸಂತವಿಡುವರು. ಮಗನ ಮದುವೆಯ ಮಾತು ಹೊರಡುತ್ತಲೆ, ತಾಯಿಯ ಮುಖವು ಅರಳುವುದು. ಅಳುವು ಮಾಯವಾಗುವುದು.

ಗೋಪಾಲನು ದೊಡ್ಡವನಾದ. ತಮ್ಮ ಮಕ್ಕಳ ಮದುವೆಯು ಬೇಗನೆ ಆಗ ಬೇಕೆಂದು ತಾಯಂದಿರ ಹಂಬಲವು ಅದೆಷ್ಟಿರುವುದೆಂಬುದನ್ನು, ಓದುವವರು ತಿಳಿದೆ ಇರುವಿರಿ. ನಮ್ಮ ತಾಯಿ, ಎರಡು ವರ್ಷಗಳಿಂದಲೂ ಗೋಪಾಲನೆದುರಿನಲ್ಲಿ ಮದು ವೆಯ ವಿಷಯವಾಗಿ ಮಾತನಾಡುವಳು. ಆ ಮಾತನೆತ್ತಿದೊಡನೆಯೆ ಗೋಪಾಲನು ತಿಳಿಯಲಾರದಂತಹ ದೊಡ್ಡ ದೊಡ್ಡ ತತ್ವಜ್ಞಾನದ ಗುಳಿಗೆಗಳನು ಉರುಳಿಸಿ, ಭಾವಿಕ ಳಾದ ನಮ್ಮ ತಾಯಿಯನ್ನು ಸುಮ್ಮನಿರಿಸುತಿದ್ದನು. ಆದರೂ ಸೊಸೆಯ ಮೋರೆಯ ನೆಂದು ಕಾಣುವೆನೊ! ಎಂಬ ಆತುರವು, ಅವಳಿಗೆ ದಿನದಿನಕ್ಕೂ ಹೆಚ್ಚುತಿದ್ದಿತು.

ಪ್ರತಿವರ್ಷದಂತೆ ಅನಂತ ಚತುರ್ದಶಿಗೆಂದು ನಮ್ಮ ತಾಯಿ ಕರೆಯಿಸಿದುದರಿಂದ, ನಾನುಹೋದೆನು. ನಾಲ್ಕು ದಿನದ ರಜೆಯನ್ನು ಪಡೆದುಕೊಂಡು ಗೋಪಾಲನೂಬಂದನು. ಅನಂತನ ಪೂಜೆಯೇನೊ ವಿಜೃಂಭಣೆಯಿಂದ ಸಾಗಿತು. ಪೂಜೆ-ನೈವೇದ್ಯ-ಮಂಗಲಾ

ರತಿಗಳು ಮುಗಿದುವು. ನಮ್ಮ ಆಚಾರ್ಯರು ನಗುನಗುತ್ತ "ಗೋಪಾಲನ ಮದುವೆ ಬೇಗನೆ ಆಗಲಿ! ಚೆಲುವೆಯಾದ ಸೊಸೆ ದೊರೆಯಲಿ! ಎಂದು, ಅನಂತಸ್ವಾಮಿಯನ್ನು ಪ್ರಾರ್ಥಿಸಿಕೊಳ್ಳಿಯಮ್ಮಾ!" ಎಂದು ನಮ್ಮ ತಾಯಿಗೆ ಹೇಳಿದರು. ಅವಳು ಅದೆಷ್ಟೋ ಭಕ್ತಿಯಿಂದ ಬಂದು, ಸಾಷ್ಟಾಂಗ ನಮಸ್ಕಾರ ಮಾಡಿ, ಗಲ್ಲಗಲ್ಲಬಡೆದುಕೊಂಡು, ಕಣ್ಣು ಮುಚ್ಚಿ, ಕೈಮುಗಿದು ನಿಂತುಕೊಂಡಳು. ಬಾಯಲ್ಲಿಯೆ ಏನೇನೊ ಹೇಳಿದಳೇನೊ! ತುಟಿಗಳು ಅಲುಗಿದುದು ಮಾತ್ರ ನನಗೆ ಕಂಡಿತು. ತಾಯಿಯ ಭಾವಿಕತನವನ್ನು ಕಂಡು ನನಗೆ ನಗೆ ಬಂದುಬಿಟ್ಟಿತು. ಪೂಜೆಯ ಕೆಲಸವೆಲ್ಲವು ಮುಗಿಯಿತು. ಪಕ್ವಾನ್ನದ ಊಟ ವಾಯಿತು.

ಮನೆಗೆಲಸ ಮುಗಿದೊಡನೆಯೆ ನಾನು—ಗೋಪಾಲ—ತಾಯಿ ಮಾತನಾಡುತ್ತ ಕುಳಿತಿದ್ದೆವು. ಎಂದಿನಂತೆಯೆ ನಮ್ಮ ತಾಯಿಯು ಗೋಪಾಲನ ಮದುವೆಯ ಮಾತನ್ನೇ ಮೊದಲಿಗೆ ಎತ್ತಿದಳು. "ಗಂಟೆಗೊಂದೇ ಸ್ವರ" ಎನ್ನುವಂತೆ ಗೋಪಾಲನೂ ತನ್ನ ತತ್ವ ಜ್ಞಾನದ ಚೀಲವನ್ನು ಬಿಚ್ಚಿದ. ನಮ್ಮ ತಾಯಿ ಮಾತನಾಡದೆ, ಅಸಮಾಧನದಿಂದ ಸುಮ್ಮನೆ ಕುಳಿತಳು.

ಬಳಿಕ ಗೋಪಾಲನು, ತನ್ನ ಧಾರವಾಡದ ಸುದ್ದಿಯನೆಲ್ಲವನ್ನೂ ಹೇಳಿದ. "ಅಲ್ಲಿಗೆ ಮೈಸೂರಿನವರೊಬ್ಬರು ಪಂಡಿತರು ಬಂದಿರುವರು. ಯೋಗವಾಸಿಷ್ಠದ ವಿಷಯದಲ್ಲಿ ಪ್ರವಚನವಾಗುವುದು. ನಾನು ದಿನಾಲು ಕೇಳಲು ಅಲ್ಲಿಗೆ ಹೋಗುವೆನು" ಎಂತಲೂ ಹೇಳಿದ . ನಾನು, ತಾಯಿ, ಬೆರಗಾಗಿ ಗೋಪಾಲನ ವೃತ್ತಾಂತವನೆಲ್ಲವನ್ನೂ ಬಾಯ್ದೆರೆದು ಕೇಳಿದೆವು. ತಾನು ಹೊಸತಾಗಿ ರಚಿಸಿದ ಕವಿತೆಗಳನೆಷ್ಟೋ ಗೋಪಾಲನು ಓದಿ ತೋರಿಸಿದ. ಆ ಕವಿತೆಗಳಲ್ಲಿ ಸಂಸಾರದ ಕಹಿತನವೇ ಕಂಡುಬರುತಿದ್ದಿತಲ್ಲದೆ, ಸವಿಯು ಸ್ವಲ್ಪವದರೂ ವರ್ಣಿತವಾಗಿರಲಿಲ್ಲ.

"ಗೋಪಾ! ನೀನು ದಿನದಿನಕ್ಕೂ ದಾಸನಾಗುತ್ತ ನಡೆದೆಯಲ್ಲ!" ಕಿರಿನಗೆಯಿಂದ ನಾನು ಮಾತನಾಡಿದೆ.

"ಅಹುದು. ನೀತಿರಹಿತವಾದ ಸಾಂಸಾರಿಕಸಮಾಜವನ್ನು ನೋಡಿ ನೋಡಿ, ವಿಚಾರಿಯಾದವನು ಬೇಸತ್ತು ದಾಸನಾದರೂ ಆಗಬೇಕು. ಸನ್ಯಾಸಿಯಾದರೂ ಆಗಬೇಕು. ನನಗೇನೊ ದಾಸನಾಗುವುದರಲ್ಲಿಯೆ ಆನಂದ, ಇದರಿಂದಲೆ ಸಮಾಜದಲ್ಲಿ ಸುಧಾರಣೆಯನ್ನು ಮಾಡಲು ಸರಿಯಾಗುವುದು. ಎತ್ತು ಕೆಸರೊಳಗೆ ಸಿಕ್ಕುಬಿದ್ದಂತೆ, ಮನುಷ್ಯನು ಒಮ್ಮೆ ಸಂಸಾರದಲ್ಲಿ ಸಿಕ್ಕುಬಿದ್ದನೆಂದರೆ ಆಯಿತು. ಹೆಂಡಿರು-ಮಕ್ಕಳು ಎಂದು ಮೋಹಕ್ಕೆ ಒಳಗಾಗಿ ಅವನಿಂದ ಯಾವ ಕಾರ್ಯಗಳೂ ಆಗವು. ದೇಶದ ಉದ್ಧಾರವಾಗಲಿ ಧರ್ಮದ ಉದ್ಧಾರವಾಗಲಿ ಆಗಬೇಕಾದರೆ ಸಂಸಾರಿಗಳಿಂದದು ಸಾಧ್ಯವಲ್ಲ. ಅದಕ್ಕೆ ಬೇಕು, ಬ್ರಹ್ಮಚಾರಿಗಳು, ಹರಿದಾಸರು, ಸಂತರು, ಸನ್ಯಾಸಿಗಳು" ಗೋಪಾಲನು ಚಿಕ್ಕದೊಂದು ಉಪನ್ಯಾಸ ಮಾಡಿದಂತೆ, ಗಂಭೀರನಾಗಿ ಹೇಳಿದನು.

ಇದು ಪುರಾಣವೈರಾಗ್ಯವೆಂಬುದು ನಮ್ಮ ತಾಯಿಯ ಭಾವಿಕ ಬುದ್ಧಿಗೆ ಹೊಳೆಯಲಿಲ್ಲ. ಗೋಪಾಲನ ಮಾತನ್ನು ಕೇಳಿದೊಡನೆಯೇ ಅವಳು ಅಧೀರೆಯಾದವಳು; ಬೆಚ್ಚಿಬಿದ್ದಳು.

"ಏನೋ ಗೋಪಾ ಇದು! ಹಬ್ಬವಿಲ್ಲ ಹುಣ್ಣಿವೆಯಿಲ್ಲ! ಶುಕ್ರವಾರವಿಲ್ಲ! ಮಂಗಳವಾರವಿಲ್ಲ. ಏನೇನೋ ಅಭದ್ರಮಾತನಾಡುತಿರುವೆಯಲ್ಲ! ಇನ್ನೊಮ್ಮೆ ಇಂತಹ ಕೆಟ್ಟ ಮಾತುಗಳನಾಡಿದರೆ, ನನಗೆ ತಡೆಯಲಿಕ್ಕಿಲ್ಲ ನೋಡು. ಇಷ್ಟುದಿನ ಕಲಿತ ಜಾಣತನವಿದೇಯೇನು ? ನಾನು ನಿನ್ನ ಮೋರೆ ನೋಡುತ್ತಲೇ ದಿನಗಳೆಯುತಲಿರುವೆನು. ......" ಕುತ್ತಿಗೆಯ ಸಿರಗಳು ಬಿಗಿದು ಬಂದುದರಿಂದ ತಾಯಿಗೆ ಮುಂವೆ ಮಾತನಾಡುವುದಾಗಲಿಲ್ಲ. ಗೋಪಾಲನೇನೂ ಮಾತನಾಡಲಿಲ್ಲ. ಕಿರಿನಗೆ ನಗುತ್ತ ತಾಯಿಯ ಕಡೆಗೊಮ್ಮೆ ನನ್ನ ಕಡೆಗೊಮ್ಮೆ ನೋಡುತಲಿದ್ದನು.

"ಇದಕೇಕೆ ಇಷ್ಟು ಅಂಜುವಿ ಬಿಡೇ ಅವ್ಮಾ! ಇವನ ಮಾತುಗಳು ನಿಜವೆಂದು ನಂಬಿರುವಿಯೇನು? ಮೊದಮೊದಲು ಹೀಗೆ ಮಾತನಾಡುವವರು ಬಲುಮಂದಿ, ಈ ವಿಚಾರವು ಕೊನೆಯತನಕ ಉಳಿದರೆ ತೀರಿಹೋಯಿತು. ನನಗೆಲ್ಲ ಗೊತ್ತು. ಇಂತವರು ಹಿಂದಿನಿಂದ ಸಂಸಾರಸುಖವು ಸಿಕ್ಕೀತೊ ! ಇಲ್ಲವೊ ! ಎಂದು ಹುಚ್ಚರಂತೆ ಬಾಯ್ ಬಿಡುತ್ತ ಹೀಗೆಯೆಅಡ್ಡಾಡುವರು. ಸಂಸಾರವೆಂದರೆ ಸೂಜಿಗಲ್ಲಿದ್ದಂತೆ; ಮನುಷ್ಯಪ್ರಾಣಿಯು ಕಬ್ಬಿಣವಿದ್ದಂತೆ. ಸೂಜಿಗಲ್ಲಿದ್ದಕಡೆಗೆ ಕಬ್ಬಿಣವು ತಾನಾಗಿಯೆ ಹೋಗುವುದಲ್ಲವೇ! ಅದರಲ್ಲಿ ಅಂತಹ ಅದ್ಭುತವಾದ ಆಕರ್ಷಕ ಶಕ್ತಿಯೇ ಇದೆ. ಸಂಸಾರದ ಸೆಳೆತವಾದರೂ ಇದೇ ಬಗೆಯದು" ನಾನು ತಾಯಿಯ ಕಡೆಗೆ ನೋಡುತ್ತ, ಮುಗುಳುನಗೆ ನಗುತ್ತ, ಗೋಪಾಲನಿಗೆ ಮೊನೆಮಾತುಗಳನಾಡಿದೆನು. ಇದುನೋಡಿ ! ನಾನಿಷ್ಟು ಮಾತನಾಡಲು ಕಲಿತುದೂ ಗೋಪಾಲನ ಶಿಕ್ಷಣದಿಂದಲೆ. ಆದರೆ ನನ್ನ ಮಾತಿನಲ್ಲಿ, ನನ್ನ ಅನುಭವವನ್ನಷ್ಟು ಮಾತ್ರ ಹೆಚ್ಚಾಗಿ ಬೆರೆಯಿಸಿರುವೆನು. ಅನ್ನದಲ್ಲಿ ತಿಳಿದುಪ್ಪ ಬೆರೆಯಿಸಿದಂತೆ.

"ಸಾಧನೆಯಿಂದ, ಸೂಜಿಗಲ್ಲಿನ ಸಾಮರ್ಥ್ಯವನ್ನು ಕೂಡ ಕಡಿಮೆಮಾಡಬಹುದು" ಗೋಪಾಲನು ಬಿಂಕದಿಂದ ನುಡಿದನು.

"ಆಹಹ! ಆಗಲಿ ನೋಡೋಣವಲ್ಲ! ನಿನ್ನ ಸಾಮರ್ಥ್ಯದ ಬಣ್ಣವನ್ನು! ಗೋಪಾ! ಮುದುಕಿಯ ಆಟ ಮುಂದಿರುವುದು. ತಿಳಿಯಿತೇನು!?" ನಾನು ನಗುತ್ತಲೆ ಮಾತನಾಡಿದೆ.

"ನೋಡುವಿಯಂತೇಳು! ನನ್ನ ಸಾಮರ್ಥ್ಯ" ಗೋಪಾಲನೂ ಕಿರಿನಗೆಯಿಂದ ನುಡಿದ.

"ಸಾಕು ಬಿಡು! ಗೊತ್ತಿದೆ ನಿನ್ನ ಸಾಮರ್ಥ್ಯ! ಅಲ್ಲದ ಸಲ್ಲದ ಹುಚ್ಚು ಯೋಚನೆಗಳನ್ನು ಮಾತ್ರ ತಲೆಯಲ್ಲಿ ತುಂಬಿಕೊಳ್ಳಬೇಡ ನೋಡು! ಒಳ್ಳೇ ಬುದ್ಧಿಯ ಕಲಿ

ತಿರುವಿ ಬಿಡು! ಇನ್ನು ನಾನೇನೂ ನಿನ್ನ ಮಾತುಗಳಿಗೆ ಮರುಳಾಗುವವಳಲ್ಲ. ಈ ವರುಷ ನೀನು ಮದುವೆಯು ಮಾಡಿಕೊಳ್ಳಲೇಬೇಕು.'' ನಮ್ಮ ತಾಯಿ ಅಳುವುದನ್ನು ನಿಲ್ಲಿಸಿ ಅಧಿಕಾರವಾಣಿಯಿಂದ ಹೇಳಿದಳು. ತಾಯಿಯ ಮನವನೇಕೆ ನೋಯಿಸಬೇಕೆಂದೋ ಏನೋ! ಗೋಪಾಲನು ಇದಕ್ಕೆ ಮರುಮಾತನಾಡಲಿಲ್ಲ. ನಮಗರಿಯದಂತೆ ಮಾತಿನ ಸಂದರ್ಭವನ್ನೇ ಬದಲಿಸಿ ಬಿಟ್ಟನು. ಇಂತಹವಕೆಲ್ಲ ಅವನೊಳ್ಳೆ ಚತುರ.

ಅಂದಿನ ದಿನವೆಲ್ಲವೂ ನಮ್ಮ ತಾಯಿ ನನ್ನೊಡನೆ ಮಾತನಾಡಿದುದರಲ್ಲಿ ಮುಕ್ಕಾಲುಪಾಲೆಲ್ಲವೂ ಗೋಪಾಲನ ಮದುವೆಯ ವಿಷಯ.

೪.

ನಮ್ಮ ನಾದಿನಿ, (ನಾದಿನಿಯೆಂದು ಹೇಳಲು ಮನಸ್ಸಿಗೆ ಹೇಗೆ ಹೇಗೆಯೋ ಎನಿಸುವುದು.) ವೇಣುವನ್ನು ಕಂಡರೆ ನನಗೆಷ್ಟೊ ಆನಂದ; ಎಷ್ಟೋ ಮಮತೆ—ಮೆಚ್ಚಿಕೆ. ಹೊಟ್ಟೆಯ ಮಕ್ಕಳಲ್ಲಿರದ ಪ್ರೇಮವು ವೇಣುವಿನಲ್ಲಿ. ಅದೇನು ಕಾರಣವೋ! ನನ್ನದು ನನಗೇ ಆಶ್ಚರ್ಯವೆನಿಸುತಿದ್ದಿತು. ಕಾರಣವನ್ನು ಕುರಿತು ನಾನು ಯೋಚಿಸುತಿರಲು, “ಒಳಗಿರ್ಪೊಂದು ನೆವಂ ಪದಾರ್ಥಗಳತಾಂ ಕಟ್ಟಳ್ಕರಿಂ ಕಟ್ಟುಗುಂ। ತಿಳಮಾತ್ರಂ ಬಹಿರಂಗ ಕಾರಣಗಳಂ ಪ್ರೇಮಂಗಳಾಶ್ರೈಸವು” ಎಂದಿರುವ ಉತ್ತರರಾಮಚರಿತ್ರ ನಾಟಕದೊಳಗಿನ ಪದ್ಯವು ಜ್ಞಾಪಕಕ್ಕೆ ಬರುವುದು. ಈ ಪದ್ಯವು ಕೇಳಲು ಎಷ್ಟು ಕರ್ಣಕಠೋರವಾಗಿದ್ದರೂ, ತಿಳಿದುಕೊಳ್ಳಲು ಎಷ್ಟು ಕಠಿನವಿದ್ದರೂ ಅರ್ಥವೊಳ್ಳೆ ಸ್ವಾರಸ್ಯವಾಗಿರುವುದು. ಒಮ್ಮೆ ಈ ಪದ್ಯದ ವಿಷಯದಲ್ಲಿ ಒಂದು ತಮಾಷೆಯಾಯಿತು. ಅದನ್ನಷ್ಟು ಹೇಳುವೆನು ಕೇಳಿ!

ನನಗೆ ಈ ಪದ್ಯವನ್ನು ಹೇಳಿಕೊಟ್ಟವನು ನಮ್ಮ ಗೋಪಾಲ. ಮೊದಲನೆಯ ಸಲ ಇದನ್ನು ನಾನು ಕೇಳಿದಾಗ “ಇದೇನೋ ಗೋಪಾ! ಯಾವಭಾಷೆಯದೋ ಈ ಪದ್ಯ? ಒಡ್ಡರ ಮಾತಿನದೇನು” ಎಂದು ಬೆರಗಾಗಿ ಕೇಳಿದೆ.

ಗೋಪಾಲನು ನಗುತ್ತ “ಅಲ್ಲವಮ್ಮಾ ಕನ್ನಡ ಭಾಷೆಯದೇ! ಹೆಚ್ಚಾಗಿ ಹಳೆಗನ್ನಡ ಶಬ್ದಗಳಿವೆ, ಇಷ್ಟೇ!” ಎಂದು ಹೇಳಿದನು.

“ಒಲ್ಲೆನಪ್ಪಾ ನಿನ್ನ ಹಾಳುಹಳೆಗನ್ನಡ. ಕೇಳಿದವರ ಕಿವಿಗಳೇ ಕಿವುಡಾಗಬಹುದು” ನಾನು ನಗುತ್ತ ನುಡಿದೆನು.

ಗೋಪಾಲನಿಗೊಳ್ಳೆ ಅಭಿಮಾನವುಂಟಾಯಿತು. “ನೀನೇನು ಬಲ್ಲೆ ಹಳೆಗನ್ನಡದ ಸವಿಯನ್ನು? ಮುದ್ದಣ ಮನೋರಮೆಯರ ಮಾತನ್ನು ಕೇಳುತ್ತ ಕುಳಿತೆಯೆಂದರೆ, ನಿನಗೆ ಹಸಿವೆನೀರಡಿಕೆ ಕೂಡ ಆಗಲಿಕ್ಕಿಲ್ಲ. ಆದರೆ ಇಷ್ಟು ಮಾತ್ರ ನಿಜ. ನಾನೀಗ ಹೇಳಿದ ಪದ್ಯ ರಚಿಸಿದ ಕವಿಗೆ, ಇಂಪಾಗಿ ಕೇಳುವ ಶಬ್ದಗಳೇ ಗೊತ್ತಿದ್ದಿಲ್ಲವೇನೊ! ಇಡೀ ಉತ್ತರ

ರಾಮಚರಿತ್ರೆಯೊಳಗಿನ ಪದ್ಯಗಳ ಭಾಷೆಯೆಲ್ಲವೂ ಹೀಗೆ ಕರ್ಣಕಠೋರವೇ! ಕಂಚಿನ ತಾಳ ಕಟಿದ ಹಾಗೆ. ಗುಡ್ಡದಲ್ಲಿ ಹೊಳೆಯು ಹರಿದ ಹಾಗೆ. ಅದೆಲ್ಲವೂ ಇರಲಿ! ಈ ಪದ್ಯದ ಅರ್ಥವೆಷ್ಟು ಸ್ವಾರಸ್ಯವಿದೆ ಬಲ್ಲೆಯಾ?" ಎಂದು ಅಭಿಮಾನದ ಆವೇಶದಲ್ಲಿ ನುಡಿದನು.

"ಅದೇನಪ್ಪಾ ನಿನ್ನ ಅರ್ಥದ ಸ್ವಾರಸ್ಯ" ನಾನು ಹಂಗಿಸುವ ದನಿಯಲ್ಲಿ ನುಡಿದೆನು. ಗೋಪಾಲನು ಅದರ ಅರ್ಥವನೆಲ್ಲ ತಿಳಿಯಾಗಿ ತಿಳಿಸಿಹೇಳಿದನು. ಕೇಳಿ ಆನಂದವಾಯಿತು. ತಲೆದೂಗಿದೆನು. "ಈ ಪದ್ಯ, ಚಕ್ಕುಲಿ ಇದ್ದಂತಿದೆ ನೋಡೋ ಗೋಪಾ" ಎಂದು ನುಡಿದೆನು.

"ಅಂದರೇನಮ್ಮಾ ನಿನ್ನ ಮಾತಿನ ಅರ್ಥ!" ಗೋಪಾಲನು ವಿಸ್ಮಿತನಾಗಿ ಕೇಳಿದನು. "ತಿಳಿಯಲಿಲ್ಲವೇನು ನಿನಗೆ? ಚೆಕ್ಕುಲಿಯು ಹೊರಗೆ ಕಾಣಲಿಕ್ಕೇನೊ ಮುಳ್ಳು ಮುಳ್ಳು; ಬಿರುಸು ಬಿರುಸು; ಆದರೆ ಚೆನ್ನಾಗಿ ಅಗಿದುತಿಂದರೆ ಅದೆಷ್ಟೋ ರುಚಿಕೊಡುವುದು. ಅದರಂತೆಯೆ ಅಲ್ಲವೇ ಈ ಪದ್ಯ" ನಾನು ಹೇಳಿದೆ. ನನ್ನ ಮಾತು ಕೇಳಿ ಗೋಪಾಲನು ಬಹಳವಾಗಿ ನಕ್ಕು ಬಿಟ್ಟ.

"ಹಲ್ಲಿಲ್ಲದ ಮುದುಕರು ಚೆಕ್ಕುಲಿಯನ್ನು ಕಂಡು ಮೂಗು ಮುರಿಯುವಂತೆ, ನಿನಗೆ ತಿಳಿಯದುದಕ್ಕಾಗಿ ಈ ಪದ್ಯವನ್ನು ಕೇಳಿ ಮೂಗು ಮುರಿದೆಯಲ್ಲವೆ?" ಗೋಪಾಲನು ಮಾತನಾಡಿದ, ನಾನೂ ನಕ್ಕೆನು.

ನಾನು ಏನನೋ ಹೇಳುತಲಿದ್ದೆ. ಅದೆಲ್ಲವನ್ನು ಬಿಟ್ಟು, ಅಟ್ಟದಾಟದೊಳಗಿನ ಅಡ್ಡಸೋಗಿನಂತೆ, ನಡುವೆಯೇ ಈ ಪದ್ಯದ ರಗಳೆ ಹೇಳಿದೆ. ಹರಿದಾಸರು ಕೀರ್ತನ ಮಾಡುತಿರುವಾಗ, ನಡುವೆ ನಗಿಸುವ ಕತೆಯನ್ನು ಹೇಳುತಿರುವರಲ್ಲ; ನನ್ನ ರೀತಿಯಾದರೂ ಅದರಂತೆಯೇ ಆಯಿತಲ್ಲವೆ ಈಗ!

ನಮ್ಮ ವೇಣುವಿಗಾಗ ಹನ್ನೆರಡು ವರ್ಷಗಳು ಪೂರ್ತಿಯಾಗಿ, ಹದಿಮೂರರಲ್ಲಿ ಬಿದ್ದಿತ್ತು. ವೇಣುವು ಒಳ್ಳೇ ಸೊಬಗಿನ ಹೆಣ್ಣು. ಬಲು ಚೆನ್ನೆ. ವಯಸ್ಸಾದಂತೆ ಅವಳ ಅವಯವಗಳು, ಅಳತೆಯ ಔಚಿತ್ಯವನರಿತು ಬಳೆದಿದ್ದುವು. ಮುಖವೊ ಬಂಗಾರದ ಬಟ್ಟಲಿನಂತಹದು; ಕೈವಾರಕ್ಕೆ ಹಚ್ಚಿದಂತೆ ದುಂಡು ದುಂಡಾದುದು. ಮಧ್ಯದಲ್ಲಿ ನೇರವಾದ ಮೂಗು, ಸಂಪಿಗೆಯ ಮೊಗ್ಗೆಯನಿಟ್ಟಂತೆ. ಅದರ ಕೆಳಗೆ ಚೆಂದುಟಿಗಳಿಂದೊಪ್ಪುತಿರುವ ಬಾಯಿ, ಮಧ್ಯಾಹ್ನ ಮಲ್ಲಿಗೆಯ ( ಗುಲ್‌ಬಾಸರ) ಎಸಳುಗಳೆರಡನ್ನು ಜೋಡಿಸಿಟ್ಟಂತೆ. ಎಡ ಬಲದಲ್ಲೆರಡು ಅರಳಿದ ಗುಲಾಬಿಯ ಹೂಗಳನಿಟ್ಟಂತೆ, ಕೆನ್ನೆಯ ಬಣ್ಣದ ಬೆಡಗು; ಅದಕ್ಕೆ ಮೇಲೆರಡು ದೊಡ್ಡ ದೊಡ್ಡವಾದ ಕಳೆಯುಳ್ಳ ಕಣ್ಣುಗಳು; ಬೆದರಿದ ಚಿಗರೆಯ ಕಣ್ಣೆನಂತಹವು. ಹೆಚ್ಚಾಗಿ ದಿಟ್ಟಿಸಿ ನೋಡಿದರೆ, ಕಣ್ಣುಕೊಂಚ ಮೆಳ್ಳವೆಂದು ಕಾಣುವುದು. ಇದರಿಂದವಳ ಸೌಂದರ್ಯಕ್ಕೆ ಕೊರತೆಯೇನೂ ಇಲ್ಲ ಇನ್ನಷ್ಟು ಬಣ್ಣಕೊಟ್ಟಂತಾಗಿದೆ.

ವೇಣುವು, ಆ ಕಾಮನಬಿಲ್ಲಿನ ಬಣ್ಣದ ಪತ್ತಲವನುಟ್ಟುಕೊಂಡು, ನೀಳವಾದ ಬಿಡುಮುಡಿಯನ್ನು ಜೋಲಾಡಿಸುತ್ತ, ಕಾಲಗೆಜ್ಜೆಯನು ನುಡಿಸುತ್ತ ವೈಯಾರದಿಂದ ನಡೆಯಲು ತೊಡಗಿದಳೆಂದರೆ, ನಮ್ಮ ಆಳುಮಗ ಲಕ್ಷ್ಮಣನು, ಜೋಳದ ರಾಶಿಯಲ್ಲಿ ಹಾಡುತಿರುವ "ಗೋದಿಯ ಸಸಿಯಾಂಗ ನವಿಲಾ ಕುಣಿದ್ಹಾಂಗ" ಎಂಬ ಹಂತಿಯ ಹಾಡು ಜ್ಞಾಪಕಕ್ಕೆ ಬರುವುದು. ಆಗ ಹುಚ್ಚಿಯಂತೆ ಅವಳ ಬೆಡಗನ್ನು ನೋಡುತ್ತ, ಮನೆಗೆಲಸ ಮರೆತು ಹಾಗೆಯೇ ನಿಲ್ಲುವೆನು. "ನಮ್ಮ ವೇಣುವಿನ ಕೈಯ್ಯ ಹಿಡಿಯುವವನು, ಅದೆಷ್ಟು ಪುಣ್ಯವಂತನೋ:" ಎನ್ನುವೆನು. "ನನ್ನ ವೇಣುವಿಗೆ ತಕ್ಕವನಾದ ಗಂಡನು ದೊರೆಯಲಿ!" ಎಂದು ಮನದಲ್ಲಿಯೆ ದೇವರಿಗೆ ಮೊರೆಯಿಡುವೆನು.

ವೇಣುವು ಸುಸ್ವರೂಪೆಯಿದ್ದಂತೆ, ಸುಗುಣೆಯೂ ಅಹುದು. ಹಟವಾರಿಯಲ್ಲ, ಸಿಡುಕಿನಾಕೆಯಲ್ಲ. ಬಿಂಕದವಳಲ್ಲ, ಚೆಲ್ಲಾಟದ ಹುಡುಗಿ. ತಾಯಿ ತಂದೆಯಿಲ್ಲದ ಹುಡುಗೆಯೆಂದು, ನಾವು ಮನೆಯಲ್ಲವಳಿಗೆ ಯಾವ ಕೊರತೆಯನ್ನೂ ಮಾಡಿರಲಿಲ್ಲ. ವೇಣುವು ಯಾವಾಗಲೂ ನಗುತ್ತ ಕೆಲೆಯುತ್ತಲೆ ಇರುವಳು. ಮನೆಯಲ್ಲಿ ಏನೇನನಾದರೂ ವಿನೋದದ- ಚೇಷ್ಟೆಯ ಮಾತುಗಳನಾಡಿ ನಮ್ಮಿಬ್ಬರನ್ನೂ ನಗಿಸುತಿರುವಳು. ವೇಣುವನ್ನು ಪ್ರೀತಿಸದವರು ನಮ್ಮೂರಲ್ಲಿ ಇರಲೇ ಇಲ್ಲವೆಂದರೂ ಸಲ್ಲುವುದು.

೫

ದೀವಳಿಗೆಯ ಹಬ್ಬಬಂದಿತು. ಗೋಪಾಲನಿಗೆ ಹಬ್ಬಕ್ಕೆ ಇಲ್ಲಿಯೇ ಬರಬೇಕೆಂದು, ಕಾಗದ ಬರೆಯಿಸಿದೆ; ಬೇರೆಯಾಗಿ ನಾನೂ ಒಂದು ಬರೆದೆ. ಅನಂತ ಚತುರ್ದಶಿಗೆ ಹೋದಾಗ, "ದೀವಳಿಗೆಯ ಹಬ್ಬಕ್ಕೆ ಗೋಪಾಲನನ್ನು ಅಲ್ಲಿಗೇ ಕರೆಯಿಸಿಕೊಳ್ಳುವೆನು" ಎಂದು ನಮ್ಮ ತಾಯಿಗೆ ಹೇಳಿಕೊಂಡಿದ್ದೆ. ಅವಳೂ ಸಮ್ಮತಿಸಿದ್ದಳು,

ಗೋಪಾಲನು ಧಾರವಾಡದಿಂದ ಹೊರಟು ಇಲ್ಲಿಗೇ ಬಂದುಬಿಟ್ಟ. ಅಂದು ನನಗೆಷ್ಟು ಉಲ್ಲಾಸವೆಂದು ಹೇಳಲಿ! ಗೋಪಾಲನು ಬಂದು, ಪ್ರವಾಸದ ಬಟ್ಟೆಗಳನ್ನು ತೆಗೆದು, ಮೊಗಸಾಲೆಯಲ್ಲಿ ಮಾತನಾಡುತ್ತ ಕುಳಿತಿದ್ದ. ನಾನು "ನಿನ್ನಳಿಯನನ್ನು ಕರೆದುಕೊಳ್ಳಪ್ಪಾ ಗೋಪಾ!" ಎಂದು ನನ್ನ ಮಗು ರಂಗನಾಥನನ್ನವನ ಕಡೆಗೆ ಕೊಟ್ಟೆನು. ಅವನು ಎತ್ತಿಕೊಂಡು ಮಾತನಾಡಿಸಿ ಮುದ್ದುಕೊಟ್ಟನು. ಮಗುವಿನ ಕೈಯೊಳಗೆ ತಾನು ತಂದಿದ್ದ ಹಾಲುಂಡೆ (ಪೆಢೆ)ಯೊಂದನ್ನು ಕೊಟ್ಟನು. ಮಗುವು ಮಾವನ ಮೋರೆಯನ್ನು ಕಂಡು ನಕ್ಕಿತು. "ತುಂಟಾ" ಎಂದು ಮತ್ತೊಂದು ಮುತ್ತುಕೊಟ್ಟನು.

"ಬರೀ ಮುತ್ತುಕೊಟ್ಟರೆ ಕೇಳುವವನಲ್ಲ. ಹಡೆದು ಹೆಣ್ಣುಕೊಡು! ಎನ್ನು ಮಾವನಿಗೆ!" ನಾನು ಮಗುವಿಗೆ ಹೇಳಿದೆ. ಒಂದು ವರ್ಷದ ಕಂದಮ್ಮ! ಅದಕೇನು ತಿಳಿಯುವುದು? ಹೆಂಗುಸುರದಿದೊಂದು ಹುಚ್ಚುತನ. ನಾನೆಷ್ಟೋ ವ್ಯವಹಾರ ಚತುರೆಯೆಂದು ನನಗೆ ಹೆಮ್ಮೆ. ಆದರೆ ಹೆಣ್ಣಿನ ಸ್ವಭಾವವೆಲ್ಲಿ ಹೋಗುವುದು? ಒಮ್ಮೊಮ್ಮೆ ನನ್ನ ಹುಚ್ಚುತನವನ್ನು ಕಂಡು, ನನಗೇ ನಗೆ ಬರುವುದು. ನಾನು ಆಡಿದ ಮಾತಿಗೆ ಗೋಪಾಲನು ನಕ್ಕುಬಿಟ್ಟ.

ವೇಣುವು ಗೋಪಾಲನನ್ನು ಇದುವರೆಗೂ ನೋಡಿರಲಿಲ್ಲ. ಅವಳೀಗ ದೊಡ್ಡ ಹುಡುಗೆ; ನಾಚಿಕೆ ಲಜ್ಜೆ ಎಲ್ಲವೂ ತಿಳಿಯುತಿದ್ದಿತು. ಗುರುತಿಲ್ಲದವರ ಎದುರಿಗೆ ಬರ ಲಿಕ್ಕೆ, ಹುಡುಗೆಯರು ಅದೆಷ್ಟು ಮುರುಕ ಮಾಡುವರೆಂಬುದನ್ನು ತಾವು ತಿಳಿದಿಲ್ಲವೆ! ಅದರಲ್ಲಿ ವೇಣುವಂತೂ ಬಲು ಗಡಸುಗಾರ್ತಿ; ಒಳ್ಳೇ ಒನಪಿನವಳು. ಒಳಗೆ ನಿಂತು ಕೊಂಡೇ ಕಣ್ಣರಳಿಸಿ ರೆಪ್ಪೆಹಾಕದೆ ಅವಳು ಗೋಪಾಲನನ್ನು ನೋಡುತಲಿದ್ದಳು. ಹೊರಗೆ ಬರುವಂತಿಲ್ಲ; ನೋಡಬೇಕೆಂದೇನೊ ಕುತೂಹಲ.

ಒಂದೇ ಮನೆಯಲ್ಲಿದ್ದ ಮೇಲೆ, ಪರಿಚಯವಾಗುವುದಕ್ಕೆಷ್ಟು ವೇಳೆ. ಎಲ್ಲರ ಊಟ ಉಪಹಾರಗಳು, ಕೂಡಿಯೇ ಒಂದೇ ಸ್ಥಳದಲ್ಲಾಗುತ್ತಿದ್ದುವು. ಒಂದೆರಡು ದಿನಗಳ ಲ್ಲಿಯೇ ವೇಣುವಿಗೆ ಗೋಪಾಲನ ಪರಿಚಯವಾಯಿತು. ಮೊದಮೊದಲು ವೇಣುವು ಗೋಪಾಲನೊಡನೆ ಮಾತನಾಡಬೇಕಾದರೆ ನಾಚಿಕೊಳ್ಳುವಳು. ಮೋರೆ ಕೆಳಗೆ ಮಾಡು ವಳು. ಪರಿಚಯವು ಹೆಚ್ಚು ಹೆಚ್ಚಾದಂತೆ ನಾಚಿಕೆಯು ಓಡಿಹೋಯಿತು. ಎಲ್ಲರಂತೆ ಗೋಪಾಲನ ಸಂಗಡಲೂ ವೇಣುವು ತನ್ನ ಸ್ವಭಾವೋಚಿತವಾದ ಚೇಷ್ಟೆಯು ಮಾತು ಗಳನಾಡಿ ನಗೆಯಾಡುವಳು. ಆದರೂ, ಸೂಕ್ಷ್ಮದೃಷ್ಟಿಯಿಂದ ನೋಡುವವರಿಗೆ ಆ ನಗೆ ಯಲ್ಲಿ— ಆ ಮಾತಿನಲ್ಲಿ— ಒಂದು ಬಗೆಯ ಸಂಕೋಚವೃತ್ತಿಯು ಕಂಡು ಬರುತ್ತಿದ್ದಿತು.

ಗೋಪಾಲನು ಇದು ವರೆಗೂ ಹುಡುಗೆಯರೊಡನೆ ಹೆಚ್ಚಾಗಿ ಮಾತನಾಡಿದ ವನಲ್ಲ. ವೇಣುವಿನೊಡನೆ ಮಾತನಾಡಲು ಅವನೂ ಮೊದಲು ಹುದುಗಿಕೊಳ್ಳುತಿ ದ್ದನು. ಬರಬರುತ್ತ ವೇಣುವಿನ ಸರಸಮಾತಿಗೆ ಪ್ರತಿಯಾಗಿ ತಾನೂ ಸರಸವಾಡು ವನು. ಆಗಾಗ ಇಬ್ಬರೂ ಕೂಡಿ ಮಾತನಾಡುವರು; ನಗುವರು; ಕೆಲೆಯುವರು. ಹುಡುಗೆಯರ ಕೂಡ ಸರಸವಾಡಲು ಅದಾವನ ಮನಸ್ಸು ಮೆಚ್ಚದು? ಗೋಪಾಲ ನೇನು ಶುಕಾಚಾರ್ಯನ ಅವತಾರವೇ?

ನರಕ ಚತುರ್ದಶಿಯದಿನ, ಮುಂಜಾನೆ ಎಲ್ಲರೂ ಫಲಾಹಾರಕ್ಕೆ ಕುಳಿತರು. ಈ ಆಹಾರದಲ್ಲಿ ಫಲವೇನೂ ಇರಲಿಲ್ಲ. ಆದರೂ ಇದು ಫಲಾಹಾರವೆ. ಗೋಪಾಲನು ಕರ ಜಿಯ ಕಾಯಿಯನೊಂದನ್ನು ಮುರಿದುಕೊಂಡು ಬಾಯಲ್ಲಿ ಹಾಕಿದ; "ಇದೇನು! ಕರ ಜಿಯ ಕಾಯಿಯಲ್ಲಿ ಕಾರದ ಪುಡಿಯೇಕೆ" ಎಂಬ ಆಶ್ಚರ್ಯದಿಂದ ನುಡಿದು, ಬಾಯೊ ಳಗಿನದನ್ನು ಕೆಳಕ್ಕೆ ಹಾಕಿದ. ವೇಣುವು ಅಲ್ಲಿಯೇ ಕುಳಿತಿದ್ದಳು. ತನ್ನ ಸೀರೆಯ ಸೆರ ಗಿನಿಂದ ಬಾಯಿ ಮುಚ್ಚಿಕೊಂಡು ನಗೆಯನ್ನು ತಡೆಯಲು ಅದೆಷ್ಟೊ ಪ್ರಯತ್ನಪಡುತ ಲಿದ್ದಳು. ಏನುಮಾಡಿದರೂ ನಗೆ ಕೇಳಲಿಲ್ಲ. ಗೋಪಾಲನ ಆಶ್ಚರ್ಯದಿಂದ ಕೂಡಿದ ಮೋರೆಯನ್ನು ನೋಡುತ್ತಲೆ, ಖೊಕ್ಕೆಂದು ಗಟ್ಟಿಯಾಗಿ ನಕ್ಕುಬಿಟ್ಟಳು. "ವೇಣುವನ್ನು ಕೇಳು ಅಲ್ಲಿಯೆ ಕುಳಿತಿರುವಳು" ಎಂದು ನಾನೂ ನಗುತ್ತಹೇಳಿದೆ. "ಇದೆಲ್ಲ ವೇಣುವಿ ನದೆ ಕುಚೋದ್ಯವೆಂದು ಕಾಣುವುದು" ಎಂದು ಫಲಾಹಾರಕ್ಕೆ ಕುಳಿತವರೆಲ್ಲರೂ ನುಡಿದು

ನಕ್ಕರು. ಗೋಪಾಲನು ಆಗ ಮಾಡಿದನೇನು? ಸಿಟ್ಟುಗೇಳಲಿಲ್ಲ. ಮುಗುಳು ನಗೆ ನಗುತ್ತ, ತನ್ನ ಕಣ್ಣಿನಿಂದ ವೇಣುವನ್ನು ನುಂಗಿ ಬಿಡುವನೇನೋ ಎಂಬಂತೆ, ಕಣ್ಣರಳಿಸಿ ನೋಡಿದನು. ಅದು ನಿತ್ಯದ ನೋಟವಲ್ಲ. ಆ ನೋಟದಲ್ಲೇನೋ ಮಾಟವಿದ್ದೀತು. ವೇಣುವು ನಾಚಿಕೆಯಿಂದ ಮೋರೆ ಕೆಳಗೆ ಮಾಡಿ ನಗುತಲಿದ್ದಳು.

ಮಧ್ಯಾಹ್ನದ ಊಟವಾದೊಡನೆ ವೇಣುವು ಎಲ್ಲರಿಗೂ ಎಲೆಪಟ್ಟಿಯನ್ನು ತಾನಾಗಿ ಮಾಡಿಕೊಟ್ಟಳು. ಎಲ್ಲರ ಬಾಯಿಯೂ ಕೆಂಪಾಯಿತು. ಆದರೆ ಗೋಪಾಲನದೊಬ್ಬನದೇ ಮಾತ್ರ ಬಾಯಿಯೆಲ್ಲವೂ ಹಸುರು ಬಣ್ಣ. ಆಗವನು "ಇದೇನಿದು! ಇದೂ ವೇಣುವಿನ ಹುಡುಗಾಟವೆಂದೇ ಕಾಣುವುದು" ಎಂದು ನಗುತ್ತ ನುಡಿದ. ಬಾಯನ್ನು ಸ್ವಚ್ಛವಾಗಿ ತೊಳೆದುಕೊಂಡು ಬೇರೆ ತಾಂಬೂಲವನ್ನು ಹಾಕಿಕೊಂಡ. ಇದನ್ನೆಲ್ಲ ಕಂಡು ವೇಣುವು ಒಳಗೆ ನಿಂತುಕೊಂಡು ಹೊಟ್ಟೆ ಹಿಡಿಸಲಾರದಷ್ಟು ನಗುತಲಿದ್ದಳು. ಎಲ್ಲರೂ ನಕ್ಕರು. ನಾನು ನಗುತ್ತ "ಎಂತಹ ಕೆಟ್ಟಮೋರೆಯವಳೇ ನೀನು!" ಎಂದು ವೇಣುವಿಗೆಂದೆ. ಅಂದಿನಿಂದಲೂ ಗೋಪಾಲನು, ಪ್ರತಿಯೊಂದು ವಿಷಯದಲ್ಲಿಯೂ ವೇಣುವಿನ ಹುಡುಗಾಟದ ಸಲುವಾಗಿ, ಒಳ್ಳೇ ಎಚ್ಚರಪಡುತಲಿದ್ದನು.

ಭಾವಬಿದಿಗೆಯದಿನ ಗೋಪಾಲನಿಗೆ ಸ್ನಾನಕ್ಕೆ ನೀರ ಕೊಡುತಲಿದ್ದೆನು. ಒಳಗೆ ಮಗುವು ಅಳಲು ತೊಡಗಿತು. ವೇಣುವನ್ನು ಕರೆದೆ. "ನಾನು ಈಗಲೆ ಮಗುವನ್ನು ಸುಮ್ಮನಾಗಿಸಿ ಬರುವೆನು; ಅಲ್ಲಿಯವರೆಗೂ ಗೋಪಾಲನಿಗೆ ಒಂದೆರಡು ತಂಬಿಗೆ ನೀರು ಕೊಡೆ!" ಎಂದು ದೈನ್ಯದಿಂದ ಹೇಳಿಕೊಂಡೆನು. "ಹೋಗೇ ನಮ್ಮವ್ವಾ" ಎಂದು ಕಣ್ಣು ತಿರುಗಿಸುತ್ತ ವೇಣುವು ಹೋಗಿ ಬಿಟ್ಟಳು. ಕೊಡಬೇಕೆಂದೇನೊ ಅವಳ ಮನದಲ್ಲಿರಬಹುದು. ಆದರೂ ನಾಚಿಕೆಯೊಂದಿರುವುದಲ್ಲ!

"ಇವನಿಗೇಕೆ ನೀರು ಕೊಡುವಿ! ನಾಳೆ ನಿನ್ನ ಕೈಹಿಡಿಯುವನಲ್ಲ ಚೆದುರ। ಅವನಿಗೆ ಮಾತ್ರ ಕುಣಿದಾಡುತ್ತ ಕೊಡುವೆಯಂತೆ" ನಾನು ವೇಣುವಿಗೆಂದೆ. ನನ್ನ ಮಾತು ವೇಣುವಿಗೆ ಕೇಳಿಸಿತೋ ಇಲ್ಲವೋ! ಅಳುವ ಕೂಸನ್ನು ಸುಮ್ಮನಾಗಿಸಲು ಅವಳು ಲಗುಬಗೆಯಿಂದ ಒಳಗೆ ಹೋಗಿದ್ದಳು.

ನಾನಾಡಿದ ಈ ಮಾತಿನಿಂದ ಗೋಪಾಲನು ಅಧೀರನಂತಾದನು. ಮೋರೆಯು ಕಳೆಯು ಇಳಿದಂತಾಯಿತು. ಅದೇಕೋ! ವೇಣುವು ಮಗುವನ್ನು ರಂಬಿಸಿದುದರಿಂದ, ಗೋಪಾಲನ ಸ್ನಾನ ಮುಗಿಯುವ ವರೆಗೂ ನಾನೇ ನೀರ ಹನಿಸಿದೆನು.

ಗೋಪಾಲನ ವೃತ್ತಿ ಈಗ ವಿಲಕ್ಷಣವಾಯಿತು. ಊಟಕ್ಕೆ ಕುಳಿತಾಗ, ಪಗಡೆಯಾಡಲು ಕುಳಿತಾಗ, ಸಮಯಸಾಧಿಸಿ, ಕಣ್ಣು ಕದಲಿಸದೆ ವೇಣುವಿನ ಕಡೆಗೆ ನೋಡಿಯೇ ನೋಡುವನು. ತಾನು ಹೀಗೆ ನೋಡುತ್ತಿರುವುದನ್ನು ಬೇರೆ ಯಾರಾದರೂ ಕಂಡು ಬಿಡುವರೇನೋ! ಎಂದು ಬಗೆದು, ಆಗಾಗ ಬೆದರುನೋಟದಿಂದ ಸುತ್ತಲೂ ನೋಡು

ವನು. ಅವನು ಈ ರೀತಿ ವೇಣುವನ್ನು ನೋಡುತಿರುವಾಗ ನಾನೂ ಬೇಕೆಂತಲೆ ಗೋಪಾಲನ ಕಡೆಗೆ ನೋಡುತಲಿದ್ದೆ. ಒಂದೆರಡು ಸಲ ನಾನು ತನ್ನನ್ನು ನೋಡುತ್ತಿ ರುವುದು ಗೋಪಾಲನಿಗೆ ತಿಳಿಯಿತು. ಆಗ, ಮೈಮರೆತು ಕುಳಿತಾಗ ಯಾರಾದರೂ ಹಿಂದೆ ಬಂದು ಹೆದರಿಸಿದರೆ, ಟಣಕ್ಕನೆ ಹಾರುವಂತೆ ಗೋಪಾಲನು ಬೆಚ್ಚಿ ಬಿದ್ದನು. ಮುಖಭಂಗಿತನಾಗಿ, ಮೋರೆಯ ಕೆಳಗೆ ಮಾಡಿದನು. ಗೋಪಾಲನ ಮನಸ್ಥಿತಿ ಯನ್ನು ಆಗಲೆ ನಾನು ಗುರುತಿಸಿದೆನು. ಆದರೂ ಬಹಿರಂಗವಾಗಿ ಮಾತನೇನೂ ಆಡಲಿಲ್ಲ. "ವೇಣೂ ಗೋಪಾಲರು ದಂಪತಿಗಳಾದರೆ, ಒಳ್ಳೇ ಒಪ್ಪಾಗಿ ಕಾಣಬಹು ದಲ್ಲವೆ?" ಎಂದು ಮನದಲ್ಲಿಯೆ ಅಂದುಕೊಂಡೆನು.

ದೀವಳಿಗೆ ಮುಗಿದ ಮರುದಿನವೇ ಗೋಪಾಲನು ಊರಿಗೆ ಹೋಗುವವನಿದ್ದ. ಆದರೆ ಹಬ್ಬಮುಗಿದು ನಾಲ್ಕು ದಿನಗಳಾದರೂ, ಹೊರಡುವ ಮಾತನ್ನೇ ಎತ್ತಲಿಲ್ಲ. ಐದನೆಯ ದಿನವೆ ನಮ್ಮ ತಾಯಿಯ ಕಡೆಯಿಂದ, ಗೋಪಾಲನನ್ನು ಕರೆಯಲು ಮನು ಷ್ಯನು ಬಂದನು. ಅಂದು ಗೋಪಾಲನು ಊರಿಗೆ ಹೊರಟನು. ಹೋಗುವಾಗ ಅವನ ಮುಖದ ಮೇಲೆ ಉಲ್ಲಾಸದ ಕಳೆಯಿರಲಿಲ್ಲ.

ತಮಗೆ ಬೇಕಾದವರು ಮನೆ ಬಿಟ್ಟು ಬೇರೆಯೂರಿಗೆ ಹೋದರೆ ಮನಸ್ಸಿಗೆ ಹೇಗೆನಿಸುವುದೆಂಬುದನ್ನು, ವಾಚಕರೇನು ಅರಿಯರೇ ? ಗೋಪಾಲನು ಹೋದಬಳಿಕ ಒಂದೆರಡುದಿನ ನಮಗೆಲ್ಲರಿಗೂ ಹಿಡಿದು ಬಿಟ್ಟಂತಾಯಿತು. ಮನೆಯೂ ಭಣ ಭಣ ! ಮನವೂ ಭಣ ಭಣ ! ವೇಣುವಂತೂ ಆಗ ಎರಡು ಮೂರುದಿನ, ತನ್ನ ನಗೆಯನ್ನೂ, ಬೆಡಗನ್ನೂ, ಚೇಷ್ಟೆಯನ್ನೂ, ಅದೆಲ್ಲಿಗೆ ಕಳುಹಿಸಿದ್ದಳೊ ಏನೊ !

ಗೋಪಾಲನು ಹೋದ ಮರುದಿನ ಮಾತನಾಡುತ್ತ ಕುಳಿತಾಗ ಗೋಪಾಲನ ಆಟವನೆಲ್ಲ ಮನೆಯಲ್ಲಿ ಹೇಳಿದೆನು "ವೇಣುವನ್ನು ಗೋಪಾಲನಿಗೇಕೆ ಕೊಡಬಾರದು" ಎಂದು ಕೇಳಿದೆನು. "ಗೋಪಾಲನದೂ ನಿಮ್ಮ ತಾಯಿಯದೂ ಒಪ್ಪಿಗೆಯಿದ್ದರೆ, ನನ್ನ ದೇನೂ ತಡೆಯಿಲ್ಲ; ಆನಂದದಿಂದ ಕೊಡಬಹುದು." ಎಂದು ನುಡಿದರು. ಅದನ್ನು ಕೇಳಿ ನನಗೆ ಎಂದೂ ಇಲ್ಲದಷ್ಟು ಆನಂದವಾಯಿತು.

೬

ಗೋಪಾಲನು ಊರಿಗೆ ಹೋಗಿ, ಆರೇಳು ದಿನಗಳಾಗಿದ್ದುವು. ಒಂದುದಿನ ಮುಂಜಾನೆ ವೇಣುವಿಗೆ ಹೆಳಲು ಹಾಕುತ್ತ ಕುಳಿತಿದ್ದೆನು. ಮನೆಯ ಕುಂಬಿಯ ಮೇಲೆ ಕುಳಿತು, ಕಾಗೆಯೊಂದು " ಕ್ರಾ ಕ್ರಾ " ಎಂದು ಯಾಹಾಗಿನಿಂದಲೂ ಕಿರಿಚುತಿದ್ದಿತು. "ಏನೇ ಅಕ್ಕಮ್ಮಾ, ಕಾಗೆಯಾರನ್ನೋ ಕರೆಯುತಿರುವುದಲ್ಲ; ಯಾರಾದರೂ ಊರಿಂದ ಬರುವರೇನೊ ! " ಎಂದು ವೇಣುವು ನುಡಿದಳು. "ಅಹುದು ! ಬರುವರು, ನಿನ್ನನ್ನು ನೋಡಲಿಕ್ಕೆ" ನಾನು ನಗೆಯಾಡಿದೆನು. "ನೋಡಲಿಕ್ಕೆ ನಾನೇನು ಪ್ರದರ್ಶನದೊಳ ಗಿನ ವಸ್ತುವೇ ? ಅಲ್ಲದೆ ಮನೆಗೆ ಬರುವವರೆಲ್ಲರೂ ನನ್ನನ್ನು ನೋಡಲಿಕ್ಕೆಯೆ ಬರುವ

ರೇನು!" ವೇಣುವು ಪ್ರತಿಮಾತನಾಡಿದಳು. ಅವಳ ಕೊಂಕುಮಾತು ಕೇಳಿ ನನಗೆ ನಗೆ ಬಂದಿತು.

ಅದೇದಿನ ಸಂಜೆಯ ಕಡೆಗೆ, ದೇವರ ಗುಡಿಗೆ ಹೋಗಿಬರಬೇಕೆಂದು, ಮಗುವ ನ್ನೆತ್ತಿಕೊಂಡು ತುಪ್ಪದ ದೀಪ ತೆಗೆದುಕೊಂಡು, ಹೊರಟೆನು. ಬೀದಿಯ ಬಾಗಿಲ ಹೊರಗೆ ಬರುವುದರಲ್ಲಿಯೆ, ಎತ್ತಿನ ಬಂಡಿಯೊಂದು ಬಂದು, ನಮ್ಮ ಮನೆಯ ಬಳಿ ಯಲ್ಲಿಯೆ ನಿಂತಿತು. ಅದಾರದೆಂದು, ನಾನು ಬೆರಗುಬಟ್ಟು ನೋಡುತಿರುವಲ್ಲಿ, ಬಂಡಿ ಯೊಳಗಣಿಂದ ನಮ್ಮ ತಾಯಿ ಕೆಳಗಿಳಿದಳು. "ಇವಳು ಈಗೇಕೆ ಬಂದು ಬಿಟ್ಟಳು!" ಎಂದು ಆಶ್ಚರ್ಯ. ಆಶ್ಚರ್ಯದ ಇಮ್ಮಡಿಯಾಗಿ ಆನಂದ. ಓಡುವ ವೇಗದಿಂದ ನಡೆದು ಹೋಗಿ ಮಗುವು ಕಂಕುಳಲ್ಲಿರುವಾಗಲೆ ತಾಯಿಗೆ ನಮಸ್ಕರಿಸಿದೆ. ಬಾಯತುಂಬಾ ಆ ಶೀರ್ವಾದ ಮಾಡಿದಳು. ದೇವರಿಗೆ ಹೋಗುವುದು ಅಲ್ಲಿಯೇ ಉಳಿಯಿತು. ಪ್ರತ್ಯ ಕ್ಷವಾಗಿ, ಮಾತೆಯ ಮೂರ್ತಿಮಂತ ದೈವತವು ಮುಂದೆ ಬಂದು ನಿಂತಿರಲು, ಗುಡಿ ಯೊಳಗಣ ಕಲ್ಲದೇವರನು ಆಗ ಕೇಳುವವರಾರು ! ಆದರೂ ನಾನು ಇದ್ದಲ್ಲಿಂದಲೆ ದೇವರಿಗೆ ಕೈಮುಗಿದೆನು. ತಾಯಿಯನ್ನು ಒಳಗೆ ಕರೆದುಕೊಂಡು ಹೋದೆನು.

ಮಗುವಿನೊಡನೆ ಮುದ್ದಾಟ, ಆ ಊರೊಳಗಿನ ನನ್ನ ಪರಿಚಯದ ಜನರ, ಕ್ಷೇಮ ವಿಚಾರಣೆ, ಮೊದಲಾದ ಮಾತುಗಳಲ್ಲಿ, ನಮ್ಮ ತಾಯಿ ಬಂದ ಕಾರಣವನ್ನು ಕೇಳುವುದು ಆಗಲೇ ಇಲ್ಲ; ನಮ್ಮ ತಾಯಿಯೂ ಆಗ ಹೇಳಲಿಲ್ಲ.

ರಾತ್ರಿ ಊಟವಾದೊಡನೆ ನಾವಿಬ್ಬರೂ ಮಾತನಾಡುತ್ತ ಕುಳಿತೆವು. ಆಗ "ಏನೇ ಅಮ್ಮಾ! ಕನಸಿನಲ್ಲಿಲ್ಲ, ಮನಸಿನಲ್ಲಿಲ್ಲ. ಒಮ್ಮಿಂದೊಮ್ಮೆಯೆ ಬಂದು ಬಿಟ್ಟೆಯಲ್ಲ ! ಮಗುವಿನ ಮೋರೆಯನ್ನು ನೋಡುವ ಮನಸ್ಸಾಯಿತೇನೊ" ಎಂದು ನಾನು ಆತುರದಿಂದ ಕೇಳಿದೆನು.

"ಅಹುದು ! ಮಗುವನ್ನು ನೋಡುವುದೊಂದೂ ಆಯಿತು. ಮತ್ತೊಂದು ವಿಶೇಷ ಕಾರಣವೂ ಇದೆ." ತಾಯಿ ನುಡಿದಳು.

"ಅದೇನಮ್ಮಾ ! ವಿಶೇಷ ಕಾರಣ!" ನಾನು ಬೆರಗಾಗಿ ಕೇಳಿದೆನಾದರೂ, ಮನ ಸಿನಲ್ಲಿ ಕಾರಣವೇನಿರಬಹುದೆಂಬುದನ್ನು, ತರ್ಕದಿಂದ ಕಂಡು ಹಿಡಿದಿದ್ದೆನು. ನಾನು ತರ್ಕಿಸಿದುದು ನಿಜವೂ ಆಯಿತು.

ನಮ್ಮ ತಾಯಿ ಹೇಳತೊಡಗಿದಳು. ನಾನೇನೂ ಮಾತನಾಡದೆ " ಹುಂ ಹುಂ " ಎನ್ನುತ್ತ, ನಗಬೇಕೆಂದೆನಿಸಿದಾಗ ನಗುತ್ತ, ಕೇಳುತಿದ್ದೆನು.

"ಇಲ್ಲಿಂದ ಬಂದಾಗಿನಿಂದಲೂ ಗೋಪಾಲನು ಉದಾಸೀನನಾಗಿಯೆ ಇರುವನು. ಮೋರೆ ಬಾಡಿ ಬತ್ತಿಯಾಗಿರುವುದು. ಮೊದಲಿನ ಉಲ್ಲಾಸದ ಕಳೆಯೇ ಇಲ್ಲ. ಸದಾ

ಸರ್ವದಾ ಏನನೋ ಯೋಚಿಸುತಲೆ ಇರುವನು. ಹೆಚ್ಚಿಗೆ ಮಾತಿಲ್ಲ ಕತೆಯಿಲ್ಲ. ನಾನೇ ಪೀಡಿಸಿ ಇಲ್ಲಿಯ ಸುದ್ದಿಯನೆಲ್ಲ ಕೇಳಿಕೊಂಡೆನು. ಮೂರು ನಾಲ್ಕುಸಲ ಮಾತ್ರ ತಾನಾಗಿಯೆ, ನಿಮ್ಮ ವೇಣುವಿನ ಸೌಂದರ್ಯವನ್ನೂ ಸದ್ಗುಣವನ್ನೂ ಬಣ್ಣಿಸಿದನು. ಊಟಕ್ಕೆ ಕುಳಿತನೆಂದರೆ, ತಾನೇನು ಉಣ್ಣುವೆನೆಂಬುದರ ಅರಿವು ಕೂಡ ಅವನಿಗಿರದು. ಕೈಯಲ್ಲಿ ಪುಸ್ತಕ ತೆಗೆದುಕೊಂಡು ಓದಲು ಕುಳಿತುಕೊಳ್ಳುವನು. ತೆರೆದ ಪುಸ್ತಕ ತೆರೆದಂತೆಯೇ ಇರುವುದು; ತಾನೆತ್ತಕಡೆಗೋ ನೊಡುತ್ತ, ಏನನೊ ಚಿಂತಿಸುತಲಿರುವನು. “ ಏನೋ ಗೋಪಾ ! ನೀನು ಉದಾಸೀನನಾಗಿರುವುದಕೇನು ಕಾರಣ ! ಯಾವಾಗಲೂ ಏನನ್ನು ಯೋಚಿಸುತಿರುವಿ ? ” ಎಂದು ಆಗಾಗ ನಾನು ಕಳವಳದಿಂದ ಕೇಳುವೆನು. “ ಎಲ್ಲಿಯ ಉದಾಸೀನತೆಯೇ ? ನನಗೇತರ ಯೋಚನೆ? ” ಎಂದು ಹಾರಿಸಿ ಮಾತನಾಡುವನು. ಮೋರೆಯಮೇಲೆ ಮುಗುಳು ನಗೆಯನ್ನು ಬಲುಮೆಯಿಂದ ಎಳೆದು ತಂದು ನಿಲ್ಲಿಸುವನು. ಆ ನಗೆಯಲ್ಲಿ ವಿಷಾದವು ತುಂಬಿ ತುಳುಕುತಿರುವುದು. ಇವನೇನೊ ಮನಸಿನ ಮಾತನ್ನು ಮುಚ್ಚಿಕೊಳ್ಳುತಿರುವನೆಂಬುದು, ನನ್ನ ಮಂದ ಬುದ್ಧಿಗೂ ತಿಳಿದು ಬಂದಿತು. ಇವನೇನು ಯೋಚಿಸುತಿರಬಹುದೆಂಬುದನ್ನು, ಎಷ್ಟು ಭಾವಿಸಿದರೂ ಬಗೆಹರಿಯದಾಯಿತು. ಹಿಂದಕೊಮ್ಮೆ ನಾವು ಮಾತನಾಡುತ್ತ ಕುಳಿತಿರುವಾಗ, ಗೋಪಾಲನೇನೊ ಹುಚ್ಚುಚ್ಚು ನುಡಿದಿದ್ದನಲ್ಲ ! ಅಂದಿನ ಮಾತಿನ ನೆನಪಾಗಿ ನನ್ನೆದೆ ನಡುಗುತಿದ್ದಿತು.

ಮೊನ್ನೆ ತಾನಾಗಿಯೆ ನನ್ನ ಬಳಿಗೆ ಬಂದನು. “ಅಮ್ಮಾ ! ಹೊಸತಾಗಿ ನಾನೊಂದು ಕವಿತೆ ರಚಿಸಿರುವೆನು, ಓದಿ ತೋರಿಸುವೆನು ಕೇಳು” ಎಂದನು. ನನಗೆ ಇದ್ದುದರಲ್ಲಿಯೆ ನಸುಜೀವ ಬಂದಂತಾಯಿತು. ಕವಿತೆಯನೋದಿದನು. ನನಗದರಲ್ಲಿ ತಿಳಿಯಬೇಕೇನು ಮಣ್ಣು! ಒಡೆದು ಬಿಡಿಬಿಡಿಸಿ ಅರ್ಥ ಮಾಡಿ ಹೇಳಿದನು. “ಶಕುಂತಲೆಯನ್ನು ಮೊದಲನೆಯ ಸಲ ನೋಡಿದಾಗ ದುಷ್ಯಂತನ ಮನಸ್ಥಿತಿಯು ಹೇಗಾಗಿದ್ದಿತು” ಎಂಬುದನ್ನು ಕವಿತೆಯಲ್ಲಿ ಬಣ್ಣಿಸಿದ್ದನು. ಅದರೊಳಗಿನ ಎಷ್ಟೋ ಮಾತುಗಳು, ಗೋಪಾಲನ ಆಗಿನ ಮನಸ್ಥಿತಿಯನ್ನು ಚಿತ್ರಿಸುವಂತಹವಿದ್ದುವು. ಇದುವರೆಗೂ ಗೋಪಾಲನು ಎಷ್ಟೊ ಕವಿತೆಗಳನ್ನು ಓದಿ ತೋರಿಸಿರುವನಲ್ಲ ! ಅವುಗಳ ಬಗೆಯೇ ಬೇರೆ; ಮೊನ್ನಿನ ಕವಿತೆಯ ಬಗೆಯೇ ಬೇರೆ. ಕೇಳಿ ಚಕಿತಳಾದೆನು. “ಬಂದಾಗಿನಿಂದಲೂ ನಾಲ್ಕೈದು ಸಲ ವೇಣುವಿನ ಚೆಲುವಿಕೆಯನ್ನು ಬಣ್ಣಿಸಿರುವನು. ಇಂದೊ ಇಂತಹ ಕವಿತೆಯ ರಚಿಸಿರುವನು. ಇದೆಲ್ಲದರ ಅರ್ಥವೇನು ?” ಎಂದು ಬಗೆದು ನೋಡಿದೆನು. ಗೋಪಾಲನ ಯೋಚನೆಯ ಒಗಟವು ನಸು ಒಡೆದಂತಾಯಿತು. ಮನಸ್ಸಿಗೇನೋ ಸಮಾಧಾನವೆನಿಸಿತು. ಶೇಷಾಚಲವಾಸಿಯಾದ ಶ್ರೀನಿವಾಸನು, ಬೇಟೆಯಾಡಲು ವನಕ್ಕೆ ಹೋಗಿ, ಅಲ್ಲಿ ಪದ್ಮಾವತಿಯನ್ನು ಕಂಡುದೂ, ಮನೆಗೆ ಬಂದು ಮಾತನಾಡದೆ ಚಿಂತೆಯಿಂದ ಮಲಗಿದುದೂ, ನನ್ನ ಜ್ಞಾಪಕಕ್ಕೆ ಬಂದಿತು. ಗೋಪಾಲನ ಯೋಚನೆಯ

ಕಾರಣವು ಮೂರೂ ಮುಕ್ಕಾಲು ಪಾಲು ತಿಳಿದಂತಾಯಿತು. ನನ್ನ ಎದೆಯ ಮೇಲಿನ ದೊಂದು ದೊಡ್ಡ ಬಂಡೆಗಲ್ಲು ಕೆಳಗೆ ಉರುಳಿ ಬಿದ್ದಂತಾಯಿತು.

ಗೋಪಾಲನು ತನ್ನ ಯೋಚನೆಯ ಕಾರಣವನ್ನು ನನಗೆ ತಿಳಿಸುವುದು, ಸಂಭವ ವಾಗಿ ಕಾಣಲಿಲ್ಲ. ನನಗೇನೊ ಅದನ್ನು ತಿಳಿದುಕೊಳ್ಳಬೇಕೆಂದು ತುಂಬಾ ಆತುರ. ಇದರ ವಿಷಯ, ನಿನಗೇನಾದರೂ ತಿಳಿದಿರಬಹುದೇನೋ! ಎನಿಸಿತು. ಏನಾದರೂ ಎಳೆಯು ಹೊರಟರೆ, ಇಲ್ಲಿಯೆ ಹೊರಡಬಹುದೆಂದು ತಿಳಿದೆನು. "ಬಹಳ ದಿನವಾಯಿತು. ಮಗು ವಿನ ಮೋರೆಯ ನೋಡುವಂತಾಗಿದೆ. ಒಂದೆರಡುದಿನ ಹೋಗಿ ಬರುವೆನು" ಎಂದು ಗೋಪಾಲನಿಗೆ ಹೇಳಿ, ಹೊರಟು ಬಂದು ಬಿಟ್ಟೆ. ಇದರ ವಿಷಯವನ್ನು ನೀನೇನಾದರೂ ತಿಳಿದಿರುವೆಯಾ !" ಇಷ್ಟೆಲ್ಲ ಹೇಳಿ ತಾಯಿಯು ನನ್ನಕಡೆಗೆ ಕುತೂಹಲದ ನೋಟದಿಂದ ನೋಡಲು ತೊಡಗಿದಳು.

ನಾನು ಇದನೆಲ್ಲವನ್ನೂ ಇಷ್ಟು ಹೊತ್ತು ಸುಮ್ಮನೆ ಕೇಳುತಲಿದ್ದೆ. ನಗೆಯೊಳ್ಳೆ ತುಂಬಿ ಬಂದಿದ್ದಿತು. ಹೇಳುವುದೆಲ್ಲ ಮುಗಿಯಲು ಬಹಳವಾಗಿ ನಕ್ಕುಬಿಟ್ಟೆ. ತಾಯಿಯು ಅಧೀರೆಯಾಗಿ ನೋಡುತ್ತ ತಾನೂ ನಗುತಲಿದ್ದಳು.

ನಾನು ದೀವಳಿಗೆಯಲ್ಲಿ ನಡೆದ ವೇಣೂಗೋಪಾಲರ ಎಲ್ಲ ಲೀಲೆಯನ್ನೂ ತಾಯಿಗೆ ವಿವರಿಸಿ ಹೇಳಿದೆ. ಅವಳು ಅದೇಷ್ಟೊ ಆನಂದಿತಳಾಗಿ, ತೆರೆದ ಬಾಯಿಂದ ಕೇಳುತಿ ದ್ದಳು. ಕೊನೆಗೆ "ಅಮ್ಮಾ ಪದ್ಮಾವತಿಯನ್ನು ಕಂಡ ಶ್ರೀನಿವಾಸನು, ಚಿಂತೆಮಾಡುತ್ತ ಮನೆಯಲ್ಲಿ ಮಲಗಿದ. ನೀನೀಗ ಬಕುಲಾದೇವಿಯಾಗಿ ಇಲ್ಲಿಗೆ ಬಂದೆಯೇನು ? " ನಾನು ನಗುನಗುತ್ತ ನುಡಿದೆನು.

" ಅಹುದು, ಆ ಶ್ರೀನಿವಾಸನು ತನ್ನ ಚಿಂತೆಯ ಕಾರಣವನೆಲ್ಲವನ್ನೂ ಬಕುಲಾ ದೇವಿಗೆ ಹೇಳಿ, ಆಕಾಶರಾಜಪುರಕ್ಕೆ ಅವಳನ್ನು ಕಳುಹಿದನು. ಅಲ್ಲದೆ ಅವಳಿಗಿಂತ ಮೊದಲು, ತಾನೇ ಕೊರವಂಜಿಯ ವೇಷವನ್ನು ತಳೆದು ಹೋಗಿ, ತನ್ನ ಕಾರ್ಯಸಾಧಿಸಿ ಕೊಂಡನು. ಆದರೆ ನಮ್ಮ ನಾಚುಗುಳಿ ಶ್ರೀನಿವಾಸನು ಕೊರವಂಜಿಯಾಗುವುದೊಂ ದೆಡೆಗೆ ಉಳಿಯಿತು. ಮನಸಿನೊಳಗಿನ ಮಾತನ್ನು ಕೂಡ ಹೊರಗೆ ಬಿಚ್ಚಿ ಆಡುವವನಲ್ಲ" ನಮ್ಮ ತಾಯಿಯೂ ನಗುತ್ತ ನುಡಿದಳು.

" ಅಮ್ಮಾ ಬಕುಲಾದೇವಿಗಿಂತಲೂ ನೀನು ಬಲು ಜಾಣೆ ನೋಡು! "ನಾನೆಂದೆನು.

" ಅದು ಹೇಗೆಯೆ " ತಾಯಿ ಆತುರದಿಂದ ಕೇಳಿದಳು.

" ನೋಡು! ಶ್ರೀನಿವಾಸನು ತಾನಾಗಿಯೆ ಬಾಯಿಬಿಚ್ಚಿ ಹೇಳುವವರೆಗೂ, ಅವನ ಚಿಂತೆಯ ಕಾರಣವು ಬಕುಲಾದೇವಿಯ ಮಂದಬುದ್ಧಿಗೆ ತಿಳಿಯಲಿಲ್ಲ. ಆದರೆ ಗೋಪಾ ಲನ ಚಿಂತೆಯ ಕಾರಣವನ್ನು, ನೀನಾಗಿಯೆ ಅವನ ನಡೆನುಡಿಗಳ ಮೇಲಿಂದ ಕಂಡು ಹಿಡಿದೆ. " ನಾನೆಂದೆನು; ಇಬ್ಬರೂ ನಕ್ಕೆವು.

"ಪದ್ಮಾವತಿಯನ್ನು ದೊರಕಿಸಿದರಲ್ಲವೆ ನನ್ನ ಜಾಣತನಕ್ಕೆ ಸಾರ್ಥಕ!" ನಮ್ಮ ತಾಯಿ ಮತ್ತೆ ಬಯಕೆಯ ನೋಟದಿಂದ ನನ್ನನ್ನು ನೋಡುತ್ತ ನುಡಿದಳು. ನಾನು ಗೋಪಾಲನ ವಿಷಯದಲ್ಲಿ ಮನೆಯಲ್ಲಿ ಮಾತನಾಡಿದುದನ್ನೂ, ವೇಣುವನ್ನು ಗೋಪಾಲನಿಗೆ ಕೊಡಲು ಒಪ್ಪಿದುದನ್ನೂ ಹೇಳಿದೆ. ಕೇಳಿ ನಮ್ಮ ತಾಯಿಗೆ ಅದೆಷ್ಟು ಹಿಗ್ಗು! ಅದೆಷ್ಟು ಆನಂದ!

ನಮ್ಮ ಮಾತು ಮುಗಿಯುತಿರುವಷ್ಟರಲ್ಲಿಯೆ ನಿದ್ದೆಯಿಂದ ಎದ್ದಿರುವ ರಂಗನಾಥನನ್ನು ಕರೆದುಕೊಂಡು, ವೇಣುವು ನಾವು ಕುಳಿತಲ್ಲಿಗೆ ಬಂದಳು. ನಮ್ಮ ತಾಯಿ ವೇಣುವನ್ನು ಕಣ್ಣರಳಿಸಿ ನೋಡಿ "ಏನೇ ಮಾಟಗಾರ್ತಿ! ನನ್ನ ಮಗನಿಗೇನು ಮೋಹಮಂತ್ರ ಮಾಡಿರುವಿಯೆ?" ಎಂದು ನಗೆಯಾಡಿದಳು. ಅವಳಿಗೆ ಆ ಮಾತಿನ ಅರ್ಥವು ಹೇಗೆ ತಿಳಿಯಬೇಕು. ಸುಮ್ಮನೆ ನಿಂತುಬಿಟ್ಟಳು.

"ವೇಣುವು ಗೋಪಾಲನಿಗಲ್ಲದೆ ಮತ್ತಾರಿಗೆ ಮೋಹವನುಂಟುಮಾಡಬೇಕು! ತನ್ನ ಮೋಹಮಂತ್ರದಿಂದದು ಯಾವಾಗಲೂ ಆ ಗೋಪಾಲನ ಕರದಲ್ಲಿ ಕುಣಿದಾಡುವುದಲ್ಲವೇ?" ನಾನು ಮಾತನಾಡಿದೆನು.

ವೇಣುವಿಗೇನು ತಿಳಿಯಿತೋ! ಅವಳು ಮಗುವನ್ನು ನನ್ನ ಕಡೆಗೆ ಕೊಟ್ಟು, ನಾಚಿಕೆಯ ನಗೆನಗುತ್ತ, ಕೆಳಗೆ ಮೋರೆಮಾಡಿ, ಮಿಂಚಿನವೇಗದಿಂದ ಹೋಗಿಬಿಟ್ಟಳು.

ನನಗಾಗ ಗೋಪಾಲನನ್ನಾವಾಗ ನೋಡುವೆನೊ! ಹಿಂದಿನ ಅವನ ಮಾತನ್ನು ಜ್ಞಾಪಕಕ್ಕೆ ತಂದುಕೊಟ್ಟು ಯಾವಾಗ ಮೂದಲಿಸಿ ನಗುವೆನೊ! ಎಂದು ಆತುರವುಂಟಾಯಿತು. ಆದುದರಿಂದ, ನಾಲ್ಕುದಿನ ತಾಯಿಯೊಡನೆ ಹೋಗಿ ಬರುವೆನೆಂದು ಹೇಳಿ, ಮನೆಯಲ್ಲಿ ಅಪ್ಪಣೆ ಪಡೆದುಕೊಂಡೆನು.

ಮುಂಜಾವಿನ ಕಾಗೆಯ ಶಕುನವೂ ಸತ್ಯವಾಯಿತು. ನನ್ನ ಮಾತೂ ನಿಜವಾಯಿತು.

೭

ತಾಯಿಯೊಡನೆ ಊರಿಗೆ ಹೋದೆನು. ಗೋಪಾಲನನ್ನು ನೋಡಿದೊಡನೆಯೆ ನಗೆಯು ಉಕ್ಕಿಬಂದಿತು. ಸಂಯಮ ಶಕ್ತಿಯಿಂದದನ್ನು ತಡೆಯಲು ಹವಣಿಸಿದೆ. ಆಗಲಿಲ್ಲ. ನಾನು ನಕ್ಕ ಕಾರಣವು ಗೋಪಾಲನಿಗೆ ತಿಳಿಯಿತೇನೋ! ಮೋರೆ ಹುಚ್ಚಿಟ್ಟಿತು. ಆದರೂ ಮೋರೆಯಮೇಲೆ ಕೈಗಡತಂದ ನಗೆಯಿದ್ದಿತು.

ನಾನು ಹೋದದಿನ ಗೋಪಾಲನ ಉದಾಸೀನತೆಯೂ ಯೋಚನೆಯೂ ಕೊಂಚ ಕಡಿಮೆಯಾಗಿದ್ದುವು. ನನ್ನೊಡನೆ ಮಾತನಾಡುತ್ತ, ನಗುತ್ತ ಕುಳಿತಿದ್ದನು. ಅವನ ಮನವನ್ನು ಇನ್ನಿಷ್ಟು ಪರೀಕ್ಷಿಸಬೇಕೆಂದು ಯೋಚಿಸಿದೆನು. ಒಂದು ತಮಾಷೆಮಾಡಿದೆನು.

"ಗೋಪಾ ! ನೀನು ಬಾಗಿಲುಕೋಟೆಯ ನೋಡಿರುವಿಯೇನೋ !" ನಾನು ಕೇಳಿದೆನು.

"ಅಹುದು ! ನೋಡಿರುವೆನು ಅದೇಕೆ ಬೇಕಾಗಿದೆಯೀಗ ?" ಗೋಪಾಲನು ಕೇಳಿದನು.

"ಏತಕ್ಕೂ ಇಲ್ಲ; ವೇಣುವನ್ನಲ್ಲಿಗೆ ಕೊಡಬೇಕೆಂದಿರುವೆವು. ಅದಕ್ಕೇ ಕೇಳಿದೆ. ಊರು ಚೆನ್ನಾಗಿದೆಯಲ್ಲವೇ?" ನಾನೊಂದು ದೊಡ್ಡ ಬುರುಡಿಯನುರುಳಿಸಿದೆನು.

ನನ್ನಮಾತು ಕಿವಿಗೆ ಬಿದ್ದೊಡನೆಯೆ, ಗೋಪಾಲನ ಮೋರೆ, ಮೋಡಮುಸುಕಿದ ಚಂದ್ರನಂತಾಯಿತು. ಬಾಯಿಂದ ಬೇಗನೆ ಮಾತುಗಳೇ ಹೊರಡಲಿಲ್ಲ. "ವೇಣುವನ್ನು ಬಾಗಿಲುಕೋಟೆಗೆ ಕೊಡಬೇಕೆಂದಿರುವಿರೇನು ?" ಎಂದಿಷ್ಟು ಮಾತನಾಡಬೇಕಾದರೆ ಅವನಿಗೆ ಸಾಕುಬೇಕಾಗಿ ಹೋಯಿತು. ಬಡವಾದ ದನಿ, ಜಡವಾದ ನಾಲಿಗೆ, ಎಡುವುತಿದ್ದ ಮಾತು, ಆಗ ಗೋಪಾಲನದು. ನಾನು ಅಷ್ಟಕ್ಕೆ ಮಾತು ಮುಗಿಸಲಿಲ್ಲ. ಮತ್ತೆ ನಗೆ ಮಾಡಿದೆನು.

"ವೇಣುವನ್ನು ಕೊಡುವುದು ಬಾಗಿಲುಕೋಟೆಗಲ್ಲ. ಆ ಊರಿನಲ್ಲಿರುವ ಯಾರಿಗೊ! ಸ್ವಲ್ಪದಿವಸಗಳಲ್ಲಿಯೆ ವೇಣುವನ್ನವರು ನೋಡಲಿಕ್ಕೆ ಬರುವವರಿದ್ದಾರೆ" ನಾನೆಂದೆನು.

ಗೋಪಾಲನೇನೂ ಹೆಚ್ಚಿಗೆ ಮಾತನಾಡಲಿಲ್ಲ "ಹೀಗೆನು?" ಎಂದು ತಲೆಯಲ್ಲಾಡಿಸಿ ಕೇಳಿದನು. ಕೇಳುವಾಗ ಕಿರಿನಗೆ ನಗುತಿದ್ದನು. ಆ ನಗೆಯು ಅವನಿಗಾದ ವಿಷಾದವನ್ನು ಸಾರಿ ಹೇಳುವಂತಿದ್ದಿತು. ಗೋಪಾಲನ ಮನವನ್ನು ಪೂರ್ಣವಾಗಿ ಪರೀಕ್ಷಿಸಿದಂತಾಯಿತು. ಗೋಪಾಲನು ವೇಣುವಿನಲ್ಲಿ ನಟ್ಟ ಮನಸ್ಸುಳ್ಳವನಾಗಿರುವನೆಂಬುದಕ್ಕೆ ಇದಿಷ್ಟೇ ಸಾಕಾಗಿ ಹೋಯಿತು. ಅವನ ಬಾಡಿದ ಮೋರೆಯನ್ನೂ ವಿಷಾದದ ನಗೆಯನ್ನೂ ಕಂಡು, ಕೆಡಕೆನಿಸಲಿಲ್ಲ; ಆನಂದವಾಯಿತು. ನಾನು ಮುಂದೆ ಮಾತಿನ ಸಂದರ್ಭವನ್ನು ಬೇಕೆಂತಲೆ ಬದಲಿಸಿಬಿಟ್ಟೆನು. ಬೇರೆ ಏನೇನೋ ಮಾತನಾಡಿದೆವು. ಆಗ ಗೋಪಾಲನು ಮನಸ್ಸಿಲ್ಲದೆ ಮಾತನಾಡುತಿದ್ದ. ಇದೆಲ್ಲವನ್ನೂ ನಮ್ಮ ತಾಯಿಗೆ ಹೇಳಿದೆ. ಅವಳಿಗೆ ಸ್ವರ್ಗಸುಖ ಸಿಕ್ಕಂತಾಯಿತು.

ಸಂಜೆಯ ಕಡೆಗೆ ಗೋಪಾಲನು ನನ್ನ ಬಳಿಗೆ ಬಂದು ಕುಳಿತ. "ಅಕ್ಕಮ್ಮಾ ! ಇಂದೇಕೋ ಮನಸ್ಸಿಗೆ ನೆಮ್ಮದಿಯಿಲ್ಲ. ಒಂದೆರಡು ಪದಗಳನಾದರೂ ಹೇಳಬಾರದೆ?" ಎಂದು ದೈನ್ಯದಿಂದ ಕೇಳಿದ. ನನಗೆ ಮತ್ತೊಂದು ವಿನೋದ ಮಾಡಬೇಕೆನಿಸಿತು. ಹಾಡಲು ಒಪ್ಪಿಕೊಂಡೆನು.

"ವನವನ ಸಂಚರಿಸಿ । ಒಬ್ಬಳ । ವನಿತೆಯಳನು ಕಂಡು ।

"ಮನಸಿಟ್ಟನು ಆ । ವನಿತೆಯ ಮೇಲೇ ಕೋಲುಕೋಲೆನ್ನ" ॥

ಎಂದಿಷ್ಟೇ ಹಾಡು ಹೇಳಿದೆ. ನಗೆಬಂದುಬಿಟ್ಟಿತು. ಗಟ್ಟಿಯಾಗಿ ನಕ್ಕೆ.

" ಇದೇನಮ್ಮಾ! ಇಷ್ಟೇಕೆ ನಗುವು? ಹಾಡನ್ನು ಮೊದಲಿನಿಂದ ಹೇಳುವುದನ್ನು ಬಿಟ್ಟು, ನಡುವೇ ಪ್ರಾರಂಭಿಸಿದೆಯಲ್ಲ! ಆಗಲಿ! ಯಾವುದೇ ಆಗಲಿ! ಮುಂದೆಯಾದರೂ ಹೇಳಲ್ಲ! " ನನ್ನ ಭಾವವನ್ನು ಅರಿತುಕೊಳ್ಳದವನಂತೆ ಗೋಪಾಲನು ನುಡಿದ. ನಾನು ಮತ್ತೆ ಹಾಡಲು ತೊಡಗಿದೆನು:—

" ಆ ಮಾನಿನಿಯಳನು । ಕಾಣುತೆ। ವ್ಯಾಮೋಹಿಸಿಯುವನು ।

" ತಾ ಮಾತಾಡದೆ ಮನದಿ ಮಿಡುಕುತಿಹ ಕೋಲುಕೋಲೆನ್ನ ।

ಓದುಗರೇ ! ನಾನು ರಚಿಸಿದ ಪದ್ಯವಿದು ಓದಿ ನಗಬೇಡಿ ಮತ್ತೆ ! ನಾನಿದನು ಹಾಡಿದ ಕೂಡಲೆ "ಇದೆಲ್ಲಿಯ ಪದ್ಯವಮ್ಮಾ! ಮೊದಲು ಹೇಳಿದುದೇನೋ ವೇಂಕಟೇಶ ಪಾರಿಜಾತ ದೊಳಗಿನದು" ಗೋಪಾಲನು ಬೆರಗಾಗಿ ಕೇಳಿದನು.

"ಇದು ಗೋಪಾಲ ಪಾರಿಜಾತದೊಳಗಿನದು" ನಾನು ಹೇಳಿದೆನು.

" ಅದೆಲ್ಲಿಯ ಗೋಪಾಲಪಾರಿಜಾತವು ? ನಾನು ಹೆಸರುಕೂಡ ಕೇಳಿಲ್ಲವಲ್ಲ! " ಗೋಪಾಲನು ಇನ್ನಿಷ್ಟು ಬೆರಗಾಗಿ ಕೇಳಿದನು.

" ಗೋಪಾಲಪಾರಿಜಾತವೆಂದರೆ ಹೊಸದು. ನಾನೇ ರಚಿಸುತಲಿರುವೆನು. ಅದ ರಲ್ಲಿಯದೀ ಪದ್ಯವು. ಆ ಪಾರಿಜಾತವೀಗ ಅರ್ಧಮರ್ಧವಾಗಿದೆ ಬೇಗನೆ ಮುಗಿಯಲೂ ಬಹುದು "

" ಹೀಗೇನು ? ನೀನೊಬ್ಬ ಕವಿಯಿತ್ರಿಯಾಗುವಿ ಬಿಡಮ್ಮಾ ! ಬೇಗನೆ ಮುಗಿಸಿ ಬಿಡಲ್ಲ ಆ ಕಾವ್ಯವನ್ನು ! ನೀನು ನನಗದನು ತೋರಿಸಿಯೆ ಇಲ್ಲವಲ್ಲ! " ಗೋಪಾಲನೆಂ ದನು.

" ಕಾವ್ಯ ಮುಗಿಯದ ಹೊರತು ನಿನಗದನು ತೋರಿಸುವಂತಿಲ್ಲ. ಕೊನೆಯ ಭಾಗವಿಷ್ಟೇ ಉಳಿದಿದೆ. ನಾಯಕ ನಾಯಿಕೆಯರ ಮದುವೆಯನ್ನಷ್ಟು ಮಾಡಿಬಿಟ್ಟರೆ ಮುಗಿದು ಹೋಗುವುದಾಕಾವ್ಯ ! ಕವಿಗಳಿಗೂ ಕಾದಂಬರಿಕಾರರಿಗೂ ನಾಟಕಕಾರ ರಿಗೂ ಹೆಣ್ಣು ಗಂಡುಗಳೆರಡನ್ನು ಕೂಡಿಸಿ ಬಿಡುವುದರಲ್ಲಿಯೆ ಆನಂದವಾಗುತಿರುವುದ ಲ್ಲವೆ? ಈಗ ನನ್ನಕಾವ್ಯದ ನಾಯಕನಾದ ಗೋಪಾಲನೊಡನೆ, ನಾಯಿಕೆಯಾದ ವೇಣು ವಿನ ಮದುವೆಯನ್ನು ಮಾಡಿ ಬಿಟ್ಟರೆ, ನನ್ನ ಕಾವ್ಯ ಮುಗಿದುಹೋಗುವುದು" ನಾನು ನಗುನಗುತ್ತ ಹೇಳಿದೆನು.

ಗೋಪಾಲನು ನಾಚಿಕೊಂಡನು. " ಏನೋ ಹುಡುಗಾಟಿಕೆ ಮಾಡುತಿರುವಿ ನೀನು. ಇದೇನಮ್ಮಾ! ನಿನ್ನ ಮಾತಿನ ಬಗೆಯೇ ತಿಳಿಯಲೊಲ್ಲದು " ತಿಳಿದೂ ತಿಳಿಯದ ವರಂತೆ ಮಾತನಾಡಿದನು.

" ನಿನ್ನೊಡನೆ ಏತರ ಹುಡುಗಾಟಿಕೆಯೋ ಗೋಪಾ ! ನೀನು ದೊಡ್ಡ ಸಾಧಕ. ಸಾಧನೆಯಿಂದ ಸೂಜಿಗಲ್ಲಿನ ಸಾಮರ್ಥ್ಯವನ್ನು ಕೂಡ ಕಡಿಮೆಮಾಡಲು ಸಮರ್ಥ

ನಾದವನು" ನಾನು ಹಂಗಿಸುವ ದನಿಯಿಂದ ಮಾತನಾಡಿ, ಮನದ ಬಯಕೆಯನ್ನು ತೀರಿಸಿಕೊಂಡು ಬಿಟ್ಟೆನು.

ಗೋಪಾಲನು ಅಪ್ರತಿಭನಾದನು. ಏನೂ ಮಾತನಾಡದೆ ಮೋರೆಯ ಕೆಳಗೆ ಮಾಡಿದನು. ತನ್ನ ಮನಸ್ಸಿನ ಮಾತನ್ನು ನಾನು ಕಂಡುಕೊಂಡಿರುವೆನೆಂಬುದು, ಆಗ ಗೋಪಾಲನ ಲಕ್ಷ್ಯಕ್ಕೆ ಪೂರ್ಣವಾಗಿ ಬಂದಿರಬಹುದು.

ಆ ಮೇಲೆ ನಗೆಯಾಡುವುದನ್ನು ಬಿಟ್ಟು ಗಂಭೀರಳಾಗಿ, ಗೋಪಾಲನ ಯೋಚನೆಯ ಕಾರಣವನೆಲ್ಲ ಕೇಳಿದೆನು. ಆಗ ಅವನೂ ಸಂಕೋಚವನೇನೂ ಇಟ್ಟುಕೊಳ್ಳದೆ ಎಲ್ಲ ಸಂಗತಿಯನ್ನು ಹೇಳಿಬಿಟ್ಟ. ಸಂಗತಿಯೆಲ್ಲವೂ ವಾಚಕರಿಗೆ ತಿಳಿದೇ ಇದೆ. ತಿಳಿ ಮನಸ್ಸಿನ ಹುಡುಗನವನು. ಆದರೂ ಒಮ್ಮೆ ತಾನಾಡಿದ ಮಾತಿಗಾಗಿ ನಾಚಿಕೊಂಡು ಇಷ್ಟುದಿನ ಮನಸ್ಸಿನ ಮಾತನ್ನು ಮುಚ್ಚಿಟ್ಟುಕೊಂಡಿದ್ದ.

* * * *

ವೇಣುವನ್ನು ಗೋಪಾಲನಿಗೆ ಕೊಡುವುದು ನಿಶ್ಚಯವಾಯಿತು. ಲಗ್ನಸಮಾರಂಭವು ಸಾಂಗೋಪಾಂಗವಾಗಿ ನೆರವೇರಿತು. ವೇಣೂ-ಗೋಪಾಲರು ಒಂದಾಗಿ ಒಪ್ಪಿದರು. ಗೋಪಾಲನೇನೂ ಮುಂದೆ ಓದಲಿಕ್ಕೆ ಹೋಗಲೆ ಇಲ್ಲ. ಊರಲ್ಲಿಯೆ ಇದ್ದುಬಿಟ್ಟನು. ಅವರಿಗೀಗೊಂದು ಮಗು ಹುಟ್ಟಿದೆ. ಅದಕ್ಕೆ ನಾನೇ "ಪಾರಿಜಾತ" ಎಂದು ಹೆಸರಿಟ್ಟಿರುವೆನು. ನಾನು ಹೆಸರು ಇಟ್ಟಂದು ಗೋಪಾ! ನನ್ನ "ಗೋಪಾಲ ಪಾರಿಜಾತ" ಕಾವ್ಯವು ಇಂದಿಗೆ ಮುಗಿಯಿತು. ಇದು ನೋಡು ನನ್ನ ಕಾವ್ಯ" ಎಂದು ಗೋಪಾಲನಿಗೆ ಮಗುವನ್ನು ತೋರಿಸಿದೆನು.

ಮೊನ್ನೆ ನಾನು ಗೋಪಾಲನ ಊರಿಗೆ ಹೋಗಿದ್ದೆ. ಆಗ "ಏನಯ್ಯಾ! ಗೋಪಾ! ನೀನು ಹರಿದಾಸನಾಗುವವನೊ! ಸನ್ಯಾಸವನ್ನೆ ತೆಗೆದುಕೊಳ್ಳುವವನೊ! ನೀನು ದೇಶೋದ್ಧಾರಕ, ಧರ್ಮೋದ್ಧಾರಕ" ಎಂದು ಗೋಪಾಲನಿಗೆ ಮೂದಲಿಸಿ ನುಡಿದೆ.

ಅವನು ನಗುನಗುತ್ತ "ಅಕ್ಕಮ್ಮಾ! ನಿನ್ನ ಮಾತೇನು ಸಟೆಯಲ್ಲ! ನಿಜವಾಗಿಯೂ "**ಸಂಸಾರವೆಂದರೆ ಸೂಜಿಗಲ್ಲು**" ಎನ್ನುತ್ತಲೆ ತನ್ನಂತೆಯೆ ಇರುವ ತನ್ನ ಮಗುವಿನ ಮುದ್ದಾದ ಮೋರೆಗೆ ಮುತ್ತುಕೊಟ್ಟನು.

ಸಾಕಿನ್ನು! ನನಗೂ ಹೇಳಿ ಬೇಸರ ಬಂದಿತು. ವಿಶ್ರಮಿಸುವೆನಿನ್ನು. ನಮಸ್ತೇ!

**ಶಾಂತಿಃ ಶಾಂತಿಃ ಶಾಂತಿಃ**

# ಪಾಶ್ಚಾತ್ಯರ ಜ್ಞೇಯವೂ ಅವರ ಜ್ಞಾನದ ಸೀಮೆಗಳೂ.

ಪಾಶ್ಚಾತ್ಯರೆಂದರೆ ಮುಳುಗುವ ದಿಕ್ಕಿನಲ್ಲಿದ್ದ ಪರದೇಶಿಗಳೆಂದು ನಮ್ಮೆಲ್ಲರ ಕಲ್ಪನೆ. ಆದರೆ ನಮ್ಮ ಕಣ್ಣಿಗೆ ಅವರು ಮುಳುಗುವ ದಿಕ್ಕಿನೊಡೆಯರಂತೆ ತೋರಿದರೂ ಮುಂದೆ ಮೂಡುವ ಸೂರ್ಯನಂತೆಯೇ ಇರುವರೆಂದು ಪ್ರಕಾಶವಾಗಿ ತೋರಿಸುವದೇ ಈ ಚಿಕ್ಕ ಲೇಖನವು ಹೊತ್ತ ಭಾರ.

ಬೇರೆ ಬೇರೆಯವರಿಗೆ ಪಾಶ್ಚಾತ್ಯರ ಬಗ್ಗೆ ಬೇರೆ ಬೇರೆ ವಿಚಿತ್ರ ವಿಚಾರಗಳು ಹೊಳೆ ದಿವೆ. ಸಿಪಾಯಿಗಳ ಬಂಡಾಯವಾದಂದಿನಿಂದ ಇವರ ಬಗ್ಗೆ ಅಜ್ಞಜನರ ಮನಸ್ಸಿನಲ್ಲಿ ಹುಚ್ಚುತನದ ಒಂದು ಬಂಡಾಯವೇ ಎದ್ದಿದೆ. ಇವರ ತಾರು-ತಂತಿಗಳನ್ನೂ ನೋಡಿ ಹಳ್ಳಿಯ ಕೆಂಚರು ಒಮ್ಮೆ ಬೆರಗಾಗುವರು. ಒಮ್ಮೆ ಗಾಬರಿಯಾಗುವರು; ಈ ಟೊಪ್ಪಿ ಗೆಯ ಜನರು ಇನ್ನೂ ಏನೇನು ಎಂಥ ಅದ್ಭುತ ಕೆಲಸಗಳನ್ನು ಮಾಡುವರೋ ಎಂದು ಮುಂದಿನದನ್ನು ನೆನಿಸಿ ಕೂಡ ಹೆದರುವರು. ಇದಾದಮೇಲೆ, ಹಿಂದುಸ್ಥಾನವೇ ಪುಣ್ಯ ಭೂಮಿಯೆಂದು ಹೇಳಿಕೊಳ್ಳುವ ಕೆಲವು ಅಚ್ಚಳಿಯದ ಧಾರ್ಮಿಕರು ವಿಲಾಯತಿಯ ಜನರದೆಂದರೆ ಹೆಸರು ಕೂಡ ತೆಗೆಯದೆಂದು ಹೇಳುತ್ತಾರೆ! "ಅವರೆಲ್ಲ ಮ್ಲೇಂಛರು, ರಾಕ್ಷಸಯೋನಿಯವರು" ಇತ್ಯಾದಿಯಾಗಿ ಅವರನ್ನು ಹಳಿಯುತ್ತ ಮನುಷ್ಯರಾಗಬೇಕಾ ದರೆ ತಮ್ಮ ಹೊಟ್ಟೆಯಲ್ಲಿಯೇ ಹುಟ್ಟಬೇಕೆಂಬಂತೆ ರೌಸಿನಿಂದುಸುರುತ್ತಾರೆ! ಇನ್ನು ಪಶ್ಚಿಮ ದೇಶಗಳನ್ನು ಕುರಿತು ಓದಿಕೊಂಡು, ಅವುಗಳ ಪರಿಚಯವಾಗಿ ನುರಿತರೂ ಕೂಡ ಮತ್ತೆ ಮೋರೆಯನ್ನು ಕಿವುಚಿ ನಮ್ಮ ಸುಶಿಕ್ಷಿತರು ಅನ್ನುತ್ತಾರೆ 'ಅವರ ಕಲ್ಚರೇ (ಸಂಸ್ಕೃತಿಯೇ) ಬೇರೆ, ಅವರದು ಬಹಿರ್ಮುಖ ದೃಷ್ಟಿಯು, ಅವರು ಸಂಪ ತ್ತಿನ ದಾಸರು' ಇದೆಲ್ಲವನ್ನು ಕೇಳಿ ಸತ್ಯವಾದಿಗೆ ಎಲ್ಲಿಯೋ ಅಂತಃಕರಣದಲ್ಲಿ ಅಳು ದಂತಾಗಿ ಇದ್ದುದನ್ನು ಪರೀಕ್ಷೆ ಮಾಡಿಯೇ ನೋಡಬೇಕೆಂದು ಅವನು ತವಕಿಸುತ್ತಾನೆ. ಅವನ ಪರೀಕ್ಷೆಯ ಫಲಿತಾಂಶವನ್ನೇ ನಾವಿಂದು ಎಲ್ಲರಿಗೂ ಸಾರಿ ಹೇಳಬೇಕೆಂದು ಇಚ್ಛಿ ಸುತ್ತಿದ್ದೇವೆ. ಅಂತೇ ಪಾಶ್ಚಾತ್ಯರ ನಿಜವಾದ ಮೂರ್ತಿಯಾವದು? ಅವರು ಈ ಜಗತ್ತಿ ನಲ್ಲಿ ಆಳವಾಗಿ ತಿಳಿದುಕೊಳ್ಳಲಿಕ್ಕೆ ಹವಣಿಸುವ ವಸ್ತುವಾವುದು? ಅವರ ಕೈಯ ಮುಟ್ಟುವವಾದರೂ ಎಲ್ಲಿಯವರೆಗೆ? ಇವೇ ಮೊದಲಾದ ಪ್ರಶ್ನೆಗಳಿಗೆ ಇಲ್ಲಿ ಯಥಾಮ ಉತ್ತರ ಬರೆಯಲಿರುವೆವು.

ಮೊಟ್ಟ ಮೊದಲು ನಮ್ಮಂತೆ ಪಾಶ್ಚಾತ್ಯರು ಮನುಷ್ಯಯೋನಿಯವರೇ ಎಂದ ಎದೆಯ ಮೇಲೆಕೈಯಿಟು ಹೇಳುತ್ತೇವೆ. ಹಿಂದಿನ ಪುರಾಣ-ಕಾಲದಲ್ಲಿ ಮಾಯ

ಸುರಾದಿಗಳು ಬ್ರಹ್ಮಾಂಡವನ್ನೇ ಭಸ್ಮವಾಗಿ ಮಾಡುವ ಭೈರವ–ಶಕ್ತಿಯನ್ನು ಪ್ರಕಟಿಸಿದಂತೆ, ಈ ಪಶ್ಚಿಮ ದೇಶದ ಜನರು ಒಂದು ತರದ ಅರ್ವಾಚೀನ–ಕಾಲದ ಅಸುರರೆಂದು ಯಾರೂ ಅಂಜಿ ಅದರುವ ಕಾರಣವಿಲ್ಲ. ಇದಲ್ಲದೆ ಅದ್ಭುತ ಶಕ್ತಿಯ ಮೇಲೆ ಆ ಜನರಲ್ಲಿ ವಿಶ್ವಾಸವೇ ಇಲ್ಲ. ಇಷ್ಟಾದರೂ ಅವರು ಅಪೂರ್ವವಾದ ಅಪರಂಪರವಾದ ಚಮತ್ಕಾರಗಳನ್ನು ಹೇಗೆ ಹೊಸ ಹೊಸದಾಗಿ ಹುಟ್ಟಿಸುವರೆಂಬದು ಬೇರೆ ವಿಷಯ. ಅದನ್ನು ಮುಂದೆ ನೋಡೋಣಂತೆ. ಈಗ ಅವರ ಮನುಷತ್ವವನ್ನು ಅರಿತುಕೊಂಡು ಅವರಲ್ಲಿ ಯಾದರೂ ದೊಡ್ಡ ಜನರು ಇದ್ದರೇ, ಇರುವರೇ ಎಂಬದನ್ನು ಸ್ಥೂಲವಾಗಿ ಎಣಿಕೆ ಹಾಕಿ, ನಮ್ಮ ಜಾತಿನಿಷ್ಠ ಜನರಿಗೆ ಪಶ್ಚಿಮದಲ್ಲಿಯೂ ದೇವರ ಹರಿಕೆಯನ್ನು ಪಡೆದ ಹಿರಿಮಕ್ಕಳು ಇರುವರೆಂದು ಒಂದಿಷ್ಟು ಮನಗಾಣಿಸಿಕೊಡೋಣ. ಇತಿಹಾಸವನ್ನು ತೆರೆದು ನೋಡಲಾಗಿ, ನಾವೆಷ್ಟು ಆರ್ಯರೋ ಅಷ್ಟೇ ಅವರೂ ಆರ್ಯರು. ಅಂತೇ ಆ ದೂರ ದಿವಸಗಳಿಂದ ಇತ್ತ ಲೋಕೋತ್ತರ ಪುರುಷರು ನಮ್ಮ ರಾಜರ್ಷಿಗಳಂತೆ ಅವರಲ್ಲಿಯೂ ಹುಟ್ಟಿರುತ್ತಾರೆ. ಪ್ಲೇಟೋ, ಸಾಕ್ರೆಟಿಸ್ ಎಂಬ ತತ್ವಜ್ಞರೂ, ನೆಪೋಲಿಯನ್ ನೆಲ್ಸನ್ನಾದಿ ವೀರ–ಧೀರರೂ, ಸ್ವತಃ ನಮ್ಮ ಅನೇಕ–ತ್ಯಾಗರಾಜರಂತಿರುವ ಕ್ರೈಸ್ತಪ್ರಭುವೇ ಮೊದಲಾದ ಧರ್ಮ ದೇವತೆಗಳೂ ಶೆಕ್ಸಪಿಯರ ಶೆಲೆ, ಕೀಟ್ಸ, ಆದಿ ಋರ–ಕವಿಗಳೂ, ಡಾರ್ವಿನ್, ನ್ಯೂಟನ್ ಮೊದಲಾದ – ಶಾಸ್ತ್ರೀಯ–ಚಿಕಿತ್ಸಕರೂ ಆಗಿ ಹೋಗಿರುತ್ತಾರಲ್ಲದೆ, ಇನ್ನೂ ಇರುತ್ತಾರೆ. ಹೀಗೆ ದೇವರು ಹಿಂದುಸ್ಥಾನವಿಷ್ಟೇ ತನ್ನದೆಂದು ತಿಳಿಯದೆ ವಿದೇಶಗಳಲ್ಲಿಯೂ ತನ್ನ ಅಂಶ–ಭೂತರಾದ ದೂತರನ್ನು ಅಲ್ಲಲ್ಲಿ ಇಟ್ಟಿರುವದೆಂಬದನ್ನು ಯಾರೂ ಮರೆಯಕೂಡದು.

ಅಂದ ಮೇಲೆ ಈ ಶ್ರೇಷ್ಠಪುರುಷರು ತಮ್ಮ ದೇಶಗಳಲ್ಲಿ ಯಾವ ಬಗೆಯ ಬೆಳಕನ್ನು ಕೆಡವಿ ತಮ್ಮ ಸುತ್ತುಮುತ್ತಿನ ಬಾಂಧವ್ಯಕ್ಕೆ ಯಾವ ಯಾವ ಸಂಸ್ಕಾರಗಳನ್ನು ಹಾಕಿಕೊಟ್ಟರೆಂಬದನ್ನು ವಿಚಾರಿಸುವಾ. ಹೀಗೆ ನಾವು ಹೇಳುವಲ್ಲಿ ಪಾಶ್ಚಾತ್ಯರ ಜ್ಞೇಯವನ್ನೂ ಅಂದರೆ ಅವರು ಅಂತಿಮವಾಗಿ ತಿಳಿದುಕೊಳ್ಳಲೆತ್ನಿಸುವ ವಸ್ತುವನ್ನು ಗುರುತು ಮಾಡಿಕೊಡುವದೇ ಆಗಿದೆ.

ಈ ಜಗತ್ತಿನ ಆದಿಯೆಲ್ಲಿ? ಅಂತವೆಲ್ಲಿ? ಇದರ ತಂದೆ ಯಾರು? ಇತ್ಯಾದಿಯಾಗಿ ವಿಶ್ವದ ಬಗ್ಗೆ ವಿಚಾರಗಳು ನಮ್ಮ ಪ್ರಾಚೀನ ಮುನಿಗಳಲ್ಲಿ ಉದಯವಾಗಿ ಅದಕ್ಕೆ ಅವರು ತಮ್ಮ ಮಂತ್ರಶಕ್ತಿಯಿಂದ,ಉತ್ತರವನ್ನಾದರೂ ಕೊಟ್ಟರೆಂದು ಶ್ರುತಿಯಲ್ಲಿಯಿದೆ. ಆದರೆ ಅವರು ತಮ್ಮ ಅನುಭವದಿಂದ ಎತ್ತಿ ಕೊಟ್ಟ ಮಾತುಗಳನ್ನು ನಾವು ನಂಬಬೇಕೇ ಹೊರತು 'ಇದು ಹೇಗೆ' ಎಂದು ಚಿಕಿತ್ಸೆಮಾಡಿ ಪ್ರಯೋಜನವಿಲ್ಲ ಯಾಕಂದರೆ ಆ

ವೇದ-ಕಾಲೀನ ಮುನಿಗಳು ಕಣ್ಣು ಮುಚ್ಚಿ ಕಣ್ಣು ತೆರೆಯುವದರೊಳಗೆ ತಮಗೆ ಹೊ
ಳೆದ ಒಟ್ಟು ಮಾತುಗಳನ್ನು ಹೇಳಿದರು. ಆದರೆ ಅದೇ ತರದ ಕುತೂಹಲದಿಂದಲೂ,
ಅದೇ ತರದ ಆದ್ಯಂತ ಸೃಷ್ಟಿಯ ವಿಷಯಕವಾದ ಜಿಜ್ಞಾಸೆಯಿಂದೂ ಹೊರಟ ಪಾಶ್ಚಾ
ತ್ಯರು ತಮ್ಮ ಅನುಭವವನ್ನು ತಾವು ತಿಳಿದ ಮಟ್ಟಿಗೆ ಸಕಲರಿಗೂ ತಿಳಿಯುವಂತೆ ಹೇಳು
ತ್ತಾರೆ. ಇದನ್ನು ಮೊದಲು ಮನಸ್ಸಿನಲ್ಲಿ ಇಟ್ಟುಕೊಂಡು ನಾವು ಪಾಶ್ಚಾತ್ಯರ ಶೋಧ
ಕ್ಷೇತ್ರವನ್ನೂ ಅದರ ಸೀಮೆಗಳನ್ನೂ ನೋಡಿಕೊಂಡು ಬರೋಣ.

ಅವರಲ್ಲಿದ್ದ ಕುತೂಹಲ ಸಮೃದ್ಧಿಯೇ ಅವರು ಕಂಡು ಹಿಡಿದ ಎಲ್ಲ ಶೋಧಗ
ಳಿಗೆ ಕಾರಣವು. ಇಂಥ ಕುತೂಹಲಗಳ ಮೂಲ ಪುರುಷನೆಂದರೆ ಸಾಧಾರಣವಾಗಿ
ನ್ಯೂಟನ್ ಎಂಬೊಬ್ಬ ಬುದ್ಧಿವಂತ ತತ್ವಾನ್ವೇಷಿಯು. ಅವನೊಂದು ದಿನ ಹಣ್ಣು ಸು
ಯುವ ಗಿಡದ ಬುಡಕ್ಕೆ ಕುಳಿತು ಓದುವಾಗ ಥಟ್ಟನೆ ಹಣ್ಣೊಂದು ನೆಲಕ್ಕೆ ಬಿದ್ದಿತು.
'ಇದೇನದ್ಭುತ'ವೆಂದು ಅದನ್ನು ಧ್ಯಾನಿಸುವಷ್ಟರಲ್ಲಿ ತಟ್ಟನೆ ದೇವಲೋಕದಿಂದ ಅವನ
ಹೃದಯದಲ್ಲಿ ಹಣ್ಣು ಬಿದ್ದಂತೆ-ಈ ನೆಲದಲ್ಲಿ ಜಗ್ಗುವ ಶಕ್ತಿಯೊಂದು ಇದೆಯೆಂಬ
ವಿಚಾರವು ತೋಚಿತು. ಇದಾದರೂ ಒಂದು ತರದ ಸ್ಫೂರ್ತಿಯಾದರೂ ಮನುಷ್ಯ
ಬುದ್ಧಿಗೆ ತಿಳಿಯುವಂತೆ ಅದರ ಫಲ ರೂಪವಾದ ಶೋಧವಿರುತ್ತದೆ. ಈ ಸ್ಫೂರ್ತಿಯ
ದೀವಿಗೆಯನ್ನೇ ಕೈಯಲ್ಲಿ ಹಿಡಿದು ಇಲ್ಲಿಯವರೆಗೆ ನ್ಯೂಟನ್‌ನಂತೆ ಅನೇಕ ಪಾಶ್ಚಾತ್ಯರು
ತಮ್ಮ ಕಣ್ಣುಗಳ ಮುಂದಿದ್ದ ಜಗತ್ತಿನ ಪ್ರತಿಯೊಂದು ಪದಾರ್ಥದ ಹುಟ್ಟನ್ನೂ ಬೆಳ
ಯನ್ನೂ ಅರಿತುಕೊಂಡರು. ಅರಿತುಕೊಳ್ಳುವಾಗಿನ ಅವರ ಪದ್ಧತಿಯೆಂದರೆ ಹೆಚ್ಚೆಚ್ಚು
ಪ್ರತ್ಯಕ್ಷಾನುಭವವನ್ನೇ ಆಧಾರವಾಗಿ ಮಾಡಿ ಎಲ್ಲ ಸಿದ್ಧಾಂತಗಳನ್ನು ಕಟ್ಟಲಿಕ್ಕೆಬೇಕು.
ಹೀಗಾಗಿ ಅವರ ಯಾವದೇ ಸಿದ್ಧಾಂತವು ಸಾಮಾನ್ಯವಾಗಿ ಎಲ್ಲ ಜನರ ಅನುಭವಕ್ಕೆ
ಸಂಬಂಧವಿರುವ ಮೂಲಕ ನಿಜವೆಂದು ತೋರದೆಎಂದೂ ಹೋಗುವದಿಲ್ಲ. ಉದಾಹ
ರಣಾರ್ಥವಾಗಿ ಈಗ ಮಳೆಯು ಎಲ್ಲಿಂದ ಬರುವದು ! ಹೇಗೆ ಹುಟ್ಟುವದು ? ಎಂಬ
ಪ್ರಶ್ನೆಯನ್ನು ಮೊದಲು ನಮ್ಮ ತಾಯಂದಿರಿಗೆ ನಾವು ಕೇಳಿದರೆ ಆರ್ಯ ಧರ್ಮವನ್ನು
ನಂಬಿರುವ ಆ ಮಾತೃ ದೇವತೆಯು ಹೇಳುವದೇನು ? "ಮಳೆರಾಜನು ಮೋಡದಲ್ಲಿ
ಇದ್ದಾನೆ. ಅವನು ದೇವರು ಹೇಳಿದಾಗ ನೀರು ಸುರಿಸುತ್ತಾನೆ ". ಇದು ನಂಬಿಗೆಯ
ಮಾತು. ಆದರೆ ಅದೇ ಪಾಶ್ಚಾತ್ಯರು ಗೊತ್ತು ಹಚ್ಚಿದ ಮಳೆಯ ಕಾರಣಗನ್ನು ಹೇ
ದರೆ ನಮ್ಮ ತಿಳಿದುಕೊಳ್ಳುವ ಮನಸ್ಸಿಗೆ ಯಾವದೂ ಅಸಂಬದ್ಧವಾಗಿ ತೋರುವದಿಲ್ಲ.
ಅಂದರೆ ಆರ್ಯರ ಹೇಳಿಕೆಗಳೆಲ್ಲ ಹಳ್ಳ ಕೂಡಿದವಲ್ಲ ! ಎನ್ನಬಹುದು. ಆದರೆ ನನ್ನ
ದೃಷ್ಟಿಯಿಂದ ಅವರ ಮಾತಾದರೂ ಸುಳ್ಳಲ್ಲ. ಆರ್ಯರ ದೃಷ್ಟಿಯು ಮೊದಲಿನಿಂದಲೂ
ಕವಿಯಂತೆ ಅವರು ಸತ್ಯವನ್ನೇ ಕಂಡರೂ ಅದನ್ನು ದೇವತಾ-ಸ್ವರೂಪದಲ್ಲಿ ಕಾಣುತ್ತಿ
ದ್ದರು. ಅದರಲ್ಲಿ ಅವರಿಗೊಂದು ಆನಂದವಿತ್ತು. ಅಂತಯೆ ಅವರ ಸತ್ಯ ತತ್ವಗಳು
ಕಾವ್ಯಮಯವಾಗಿ ಹೇಳಲ್ಪಟ್ಟವೆ. ಹಾಗಾದರೆ ಈ ಸತ್ಯವು ತಿಳಿದಿರಲಿಕ್ಕೇ ಪಾಶ್ಚಾ

ತ್ಯರ ಪರಾಕ್ರಮವೇಕೆ ? ಎಂದು ಕೇಳಬಹುದು. ಅದಕ್ಕೂ ಉತ್ತರವಿದೆ. ಅದೆಂದರೆ ಆರ್ಯರಂತೆ ಭಾವಿಕರಾಗಿ ನಾವು ಉಳಿಯದೆ ದಿನ ದಿನಕ್ಕೆ ನಮ್ಮ ಭಾವನೆಯೂ ಸವೆಯುತ್ತ ಸಾಗಿದೆ. ಆದಕ್ಕಾಗಿ ಸೃಷ್ಟಿಯು ಎಲ್ಲ ಕಡೆಯಲ್ಲಿಯು ನಮಗೆ ರೂಪು ಗೊಂಡು ಕಾಣುವದಿಲ್ಲ. ಅಂತೆಯೆ ಜ್ಞಾನೇಂದ್ರಯಗಳಿಗೆ ತಿಳಿಯುವ ಸತ್ಯವನ್ನಾದರೂ ಮೊದಲು ಕಾದಿಡಬೇಕು. ಇದೇ ಬಹಿರ್ಮುಖವಾಗುವದರ ಲಾಭ. ಬಹಿರ್ಮುಖವೆಂದು ಸುಮ್ಮನೆ ಬಯ್ಯುವದರಲ್ಲಿ ಅರ್ಥವಿಲ್ಲ. ನಮಗಿದ್ದ ಮುಖವೇ ಮೊದಲು ಬಹಿರ್ಮುಖ ವಾಗಿದ್ದ ಮೇಲೆ ಅದಕ್ಕೆ ಹತ್ತಿಕೊಂಡಿರುವ ಇಂದ್ರಿಯಗಳು ತಮಗೆ ಸರಿ ಬೀಳುವ ವಿಷಯಗಳನ್ನಷ್ಟೇ ಮನಸ್ಸಿಗೆ ಸತ್ಯವೆಂದು ಮುಟ್ಟಿಸುವವು. ಅಂದ ಮೇಲೆ ಸಾಮಾ ನ್ಯರಾದ ನಾವು ಒಮ್ಮಿಗಿಲೆ ಅಂತರ್ಮುಖರಾಗುವದಾದರೂ ಹೇಗೆ? ಆದರೆ ಬಹಿರ್ಮುಖ ತ್ವಕ್ಕೆ ಮಿತಿಯಿದೆ ಎನ್ನಿರಿ. ಬುದ್ಧಿಯಿಂದ ಈ ವಿಶ್ವದ ಬೀಜವನ್ನೇ ಕಂಡುಹಿಡಿಯುವೆ ವೆಂದು ಹೊಗಳಿಕೊಳ್ಳುವ ಭಟ್ಟಂಗಿಗಳನ್ನು ಬಯ್ಯಿರಿ. ಆದರೆ ಬಹಿರ್ಮುಖಿಗಳಾಗು ವದು ನಮ್ಮ ಸಾಧಾರಣ ಧರ್ಮವು. ಈ ರೀತಿಯಲ್ಲಿ ದೇವರು ಕೊಟ್ಟ ಬುದ್ಧಿಯನ್ನು ಬಿಟ್ಟು ಬಿಡದೆ ವಿನಿಯೋಗಿಸಿ ಈಗ ನಾವು ನೋಡುತ್ತಿರುವ ವಿದ್ಯುಚ್ಛಕ್ತಿ, ತಾರಾ ಯಂತ್ರ, ರೇಲ್ವೆ, ಮೋಟರ, ವಿಮಾನ, ಇವೇ ಮುಂತಾದ ಶೋಧಗಳನ್ನು ಪಾಶ್ಚಿ ಮಾತ್ಯರು ಮಾಡಿದರು; ಇದಲ್ಲದೆ ಮೊದಲೊಂದು ಕೆಂಡದ ಪ್ರಚಂಡದ-ಗೋಲವಿತ್ತು, ಅದರಿಂದ ಸಿಡಿದು ಹಾರಿ ಈ ಪೃಥ್ವ್ಯಾದಿ ಗೋಲಗಳು ಹುಟ್ಟಿವೆಯೆಂದು ಜಗದುತ್ಪತ್ತಿ ಯನ್ನು ಅರಿತು, ಆಗಾಗ್ಗೆ ನಾವು ನೋಡುವ ಗ್ರಹಣದ ವಿಷಯವಾಗಿ ಕಾರಣವನ್ನು ಹೇಳಿ, ಯೋಗ್ಯ ಸಮಾಧಾನವನ್ನು ಮಾಡಿದರು. ರಾಹು ಕೇತುಗಳ ಖಗ್ರಾಸವೆಂಬ ಮೊದಲಿನ ನಮ್ಮ ಕಲ್ಪನೆಯು ಕವಿಯ ಕಲ್ಪನೆಯಾಗಿ ಈಗ ಮತ್ತಿಷ್ಟು ಶೋಭಿಸಹ ತ್ತಿತು. ಇದೇ ಪ್ರಕಾರವಾಗಿ ಅನಂತ-ಸಾಹಸಗಳನ್ನು ಮಾಡಿ ಅರಿಯದ ಅನೇಕ ಮಾಯೆಗಳನ್ನು ಕೈವಶವಾಗಿ ಮಾಡಿಕೊಳ್ಳುದದಕ್ಕೆ ಇನ್ನೂವರೆಗೆ ಪಾಶ್ಚಾತ್ಯರ ಬುದ್ಧಿಯು ಹರಿಯಹತ್ತಿದೆ. ಅಂತೂ ಅವರ ಜ್ಞೇಯವೇನು ? ಈ ಜಗತ್ತು! ಈ ಪ್ರಪಂಚ! ಅವ ರನ್ನುವದೆಂದರೆ The world's workshop is the world itself and the workers are the human race" (ಜಗತ್ತಿನ ಕಾರ್ಯಮಂದಿ ರವೆಂದರೆ ಜಗತ್ತೇ ಇದ್ದು, ಮನುಷ್ಯ ಜಾತಿಯೇ ಅಲ್ಲಿಯ ಕೆಲಸಗಾರರು) Arthur-Mee, in Popular Science.

'ಅಂದರೆ ಜಡ ಸೃಷ್ಟಿಯೇ ಅಹುದಲ್ಲೋ ? ಅನೇನು ನಶ್ವರ. ಅದಕ್ಕಾಗಿ ಯಾಕಷ್ಟು ಯುತಾಯಾತಿ ಮತ್ತೆ ಮನುಷ್ಯನು ತಿಂದುಂಡು ಭೋಗಿಯಾಗಿ ಪ್ರಪಂಚ ದಲ್ಲಿ ಬೀಳಲಿಕ್ಕೇ ಅಲ್ಲವೆ ?' ಎಂದು ದೇವರ ಹುಚ್ಚು ಹತ್ತಿದ ಕೆಲವು ಜಡ ಭರತರು ಹಳಿಯಬಹುದು. ಆದರೆ ಜಗತ್ತೇ, ಈ ಜಡ ಸೃಷ್ಟಿಯೇ ಪಾಶ್ಚಾತ್ಯಾರಿಗೆ ದೇವರು. ಇದ ರಲ್ಲಿ ಮನುಷ್ಯನಿಗೆ ನಿಲುಕುವಷ್ಟು ಇದ್ದ ಎಲ್ಲ ಸತ್ಯ ಸುಖವನ್ನು ದೊರಕಿಸುವದೇ ಅವರ

ಧ್ಯೇಯ. ಅದಕ್ಕಾಗಿ ಬುದ್ಧಿ ಬಲದಿಂದ ಶೋಧ್ಧಮಾಡುವದೇ ಅವರ ಜ್ಞೇಯ. ಅವರಿಗೇನು ಜಗತ್ತು ನಶ್ವರವಾಗಿ ತೋರುವದಿಲ್ಲ. ಒಂದು ವೇಳೆ ನಶ್ವರವಿದ್ದರೂ ಕೊಟ್ಟ ಹಣವನ್ನು ಸವಿಯದೆ ಅವರೆಂದಿಗೂ ಒಗೆಯುವವರಲ್ಲ. ಅದೆಂಥ ಹಣ್ಣೆಂದು ಮೊದಲು ಹಿಚಕಿ ನೋಡುವರು. ವರ್ಣ ರೂಪ ಗುಣಗಳನ್ನು ತಿಳಿದುಕೊಳ್ಳುವರು. ಮುಂದೆ ಎಲ್ಲರ ಕೂಡ ಕುಳಿತು ಸಮಭಾವದಿಂದ ಸವಿಯುವರು. ಇದೇ ಅವರ ತತ್ವ. ಈ ಪ್ರಕಾರವಾದ ಪಾಶ್ಚಾತ್ಯ ಪ್ರಪಂಚವು ಇನ್ನಷ್ಟು ಗಮ್ಯವಾಗಬೇಕಾದರೆ Harmsworth's Popular Science ಅಂದರೆ ಲೋಕೋಪಯೋಗಿ ಶಾಸ್ತ್ರವೆಂಬ ಖಂಡಾನೇಕಗಳಲ್ಲಿ ಪ್ರಸಿದ್ಧವಾದ ಅನುಭವಾಮೃತವನ್ನು ಎಲ್ಲರೂ ಅವಶ್ಯವಾಗಿ ಓದತಕ್ಕದ್ದು. ಅದರ ಮುನ್ನುಡಿಯನ್ನಾದರು ಅಗತ್ಯವಾಗಿ ಓದಬೇಕು; ಅಂದರೆ ಪಾಶ್ಚಾತ್ಯರ ಜ್ಞೇಯವು ಸಾತ್ವಿಕವಾದುದೆಂದೂ ಪೌರುಷದ ಪರಮಾರ್ಥವಾಗಿರುವದೆಂದೂ ತಿಳಿಯದೆ ಇರದು.

It describes as plainly as the words of mancan, the thihgs that men are doing on earth to-day It looks forward as hopefully as the faith of man can to the destiny that awaits the human race. (ಈ ಶಾಸ್ತ್ರವು ಮನುಷ್ಯವಾಣಿಯ ಶಕ್ತಿಯಿದ್ದಷ್ಟು ಸ್ಪಷ್ಟವಾಗಿ, ಮನುಷ್ಯರೇ ಇಂದು ಜಗತ್ತಿನಲ್ಲಿ ಮಾಡುತ್ತಿರುವ ಮಹಿಮೆಗಳನ್ನೆಲ್ಲ ಬಣ್ಣಿಸಲಿಕ್ಕೆ ನಿಂತಿದೆ; ಅದರಂತೆ ಮನುಷ್ಯರ ಶ್ರದ್ಧೆಯು ಕೊಡಬಲ್ಲ ಎಲ್ಲ ಆಶೆಯಿಂದ ಮಾನವೀ ಕುಟುಂಬದ ಭವಿಷ್ಯವನ್ನು ಮುನ್ನೋಡುತ್ತದೆ.) ಹೀಗೆ ಮಾನವೀ ಶಕ್ತಿಗೆ ಪಾಶ್ಚಾತ್ಯರು ಕೊಡುವ ಮಹತ್ವವು ನಿಜವಾಗಿ ಶ್ಲಾಘನೀಯವಾದದ್ದು. ನಮ್ಮ ಜನರು ತಮಗೆ ತಿಳಿಯದೆ ದೊಡ್ಡ ದೊಡ್ಡ ತತ್ವಗಳನ್ನು ಹೇಳುತ್ತ 'ಮನುಷ್ಯನು ಅಲ್ಪನು, ಹೀನನು' ಎಂದು ಕೆಲಸವನ್ನು ತಪ್ಪಿಸುವ ನೆವವನ್ನು ಮುಂದೆ ಮಾಡುವದು ಜಗತ್ತಿನ ಯಜಮಾನನಾದ ಆ ಪರಮಪುರುಷನಿಗೆ ಅಸಹ್ಯವಾಗದೆ ಇರದು. ಪಾಶ್ಚಾತ್ಯರಿಗೆ ಹೀಗೆ ತೋರುತ್ತದೆ:—"ಯಾರೋ ಒಂದು ಸುಂದರವಾದ ಸೃಷ್ಟಿಯ ಮನೆಯನ್ನು ಕಟ್ಟಿ ಅದರಲ್ಲಿ ನಮ್ಮನ್ನು ಬಿಟ್ಟಿದ್ದಾರೆ. ಎಷ್ಟೋ ಅಪ್ರತ್ಯಕ್ಷವಾದ ಶಕ್ತಿಗಳು ನಮ್ಮನ್ನು ಸುತ್ತುರಿಯುತ್ತಿವೆ. ನಮ್ಮ ಸಲುವಾಗಿಯೇ ಸುಖಪಡಲಿಕ್ಕೆ ಕಟ್ಟಿದ ಮನೆಯೆಂದು ತಿಳಿಯದೆ ನಾವು ಜಗದಲ್ಲಿ ತೊಳಲಾಡುತ್ತೇವೆ. ಆದರೆ ಯೋಗ್ಯವಾದ ಹಾದಿಯಿಂದ ಈ ಸೃಷ್ಟಿಯಲ್ಲಿದ್ದ ಅನಂತ ಶಕ್ತಿಗಳನ್ನು ನಾವು ಅನುಕೂಲಿಸಿಕೊಳ್ಳಬೇಕು. ಈ ಸೃಷ್ಟಿಯು ನಮಗೇ ಬರೆದು ಕೊಟ್ಟಿದ್ದಾದರೆ ಅವು ಅನುಕೂಲವಾಗುವದರಲ್ಲಿ ಸಂದೇಹವಿಲ್ಲ." ಹೀಗೆಂದು ಈ ವರೆಗೆ ಮಾಡಿದ ನಾನಾತರದ ಪ್ರಯೋಗಗಳ ಸಿದ್ಧಿಬಲದ ಮೇಲೆ ನಿಂತು ನಿತ್ಯ ನಿತ್ಯದಲ್ಲಿ ಹೊಸ ಹೊಸ ಶೋಧಗಳನ್ನು ಮಾಡುತ್ತ ಒಂದು ತರದ ಆನಂದದಲ್ಲಿ ನಲಿಯುತ್ತ ಸತ್ಯಶೋಧಕರಾದ ಪಾಶ್ಚಿಮಾತ್ಯರು ಈ ವಿಶ್ವದ ಆಳವನ್ನೂ ಅಂತವನ್ನೂ ಪಾರವನ್ನೂ ತಿಳಿದುಕೊಳ್ಳುವದೇ ಅವರ ಜ್ಞೇಯ. ಇನ್ನು

ಮನುಷ್ಯನು ಸರ್ವಾಂಗಗಳಲ್ಲಿಯೂ ಸುಖಿಯಾಗಿ ತನಗೊಂದು ಭವಿಷ್ಯದಲ್ಲಿ ಸುರಲೋಕವನ್ನು ನಿಲ್ಲಿಸಬೇಕೆಂಬದು ಅವರ ಜ್ಞಾನದ ಸೀಮೆ. ಈಗಿದ್ದ ಪುರುಷನು ತನ್ನ ಕರ್ತವ್ಯ ಶಕ್ತಿಯಿಂದ ತನ್ನ ಮಗನನ್ನು ಹೆಚ್ಚಿನ ಪುರುಷನನ್ನಾಗಿ ಮಾಡಿ ಕಟ್ಟಕಡೆಗೆ, Superman ಪರಮಪುರುಷರಾಗಲಿಚ್ಛಿಸುವದೇ ಇವರ ಜ್ಞಾನದ ಸೀಮೆ. ಅಂತೇ ಎಲ್ಲ ಬಗೆಯ ಅಚ್ಚುಕಟ್ಟಾದ ಮಾನವಶಾಸ್ತ್ರಗಳನ್ನು ಬರೆದು ಆಯುಷ್ಯವನ್ನು ವೃದ್ಧಿಗೊಳಿಸಿ, ಜೀವನವನ್ನು ಸಂತೋಷಪಡಿಸಿ ಬಾಳಬೇಕೆಂಬುದೇ ಅವರ ಕೊನೆಯ ಆಶೆ. ಇದರಲ್ಲಿ ನ್ಯೂನವಾವುದೂ ಇಲ್ಲ. ದೇವರನ್ನು ಮರೆಯಬಹುದು; ನಾನೇ ಶಿವನೆಂದು ಭಸ್ಮಾಸುರನಂತೆ ವರ್ತಿಸಬಹುದೆಂದು ಅಂಜಿಕೆಯಿದ್ದರೆ ಅದು ಸರಿಯಲ್ಲ. ಯಾಕಂದರೆ ಯಾರು ಸತ್ಯತಃ ಈ ಪೌರುಷಾಭಿಮಾನಿ ಪಂಥದಿಂದ ಈ ವಿಶ್ವ- ವಿಮರ್ಶೆಯನ್ನು ಮಾಡುತ್ತಿರುವರೋ ಅವರಿಗೆ ಮನಸ್ಸಿನಲ್ಲಿ ವಿಶ್ವಕರ್ಮನ ಬಗ್ಗೆ ಆದರ ಭಕ್ತಿಯು ಇದ್ದೇ ಇರುತ್ತದೆ. ಯಾಕಂದರೆ ತಮ್ಮ ಕೈಸೋತು ಉಸ್ಸೆಂದು ಮೋರೆ ಇಳಿಯುವ ಪ್ರಸಂಗಗಳು ಅವರಿಗೆ ಒಂದೆರಡು ಬರುವದಿಲ್ಲ. ಅಂತೇ ದೇವರಾಟವು ಎಂದಿಗೂ ನಿಂತಿರಲಾರದು. ಅವನ ಮಹಿಮೆಯು ಶಾಶ್ವತವಾದದ್ದು. ಅಂತೇ ನಾವು ಪಾಶ್ಚಾತ್ಯರ ಜ್ಞಾನಕ್ಕೆ ಸೀಮೆಗಳಿವೆ ಎಂದು ಒಟ್ಟಾಗಿ ಹೇಳಿದುದು. ಒಂದು ಮಾಡಿಟ್ಟಗುರಿಯಿದೆ; ಅಲ್ಲಿಗೆ ಅವರ ಎಲ್ಲ ಶಕ್ತಿಯು ಜೋಲು ಮೋರೆಯನ್ನು ಹಾಕಿ ಕೂಡ್ರುವದೇ, ಆ ಸೀಮೆಯಿಂದ ಮುಂದೆ ಸಾಗಬೇಕಾದರೆ ಆರ್ಯರ ಸಹವಾಸವೇ ಬೇಕು. ಅವರ ಶಿಕ್ಷಣವೇ ಬೇಕು. ಆದರೆ ಎಷ್ಟು ಕೆಲಸವನ್ನು ಮಾಡಿದ್ದಾರೋ ಅಷ್ಟರ ಪೂರ್ತಿಯಾದರೂ ಪಾಶ್ಚಾತ್ಯರನ್ನು ನಾವು ತಿಳಿದುಕೊಂಡು ಅಭಿವಂದನೆಗಳನ್ನು ಸಮರ್ಪಿಸುವದು ಯುಕ್ತವಾದದ್ದು. ಅದಕ್ಕಾಗಿ ಅವರನ್ನು ಹೊಗಳಿ ನಾವೂ ಅವರ ಅನ್ವೇಷಣ ಕಾರ್ಯದಲ್ಲಿ ಸಹಾಯವಾಗಿ ಸಹಾನುಭೂತಿಯನ್ನು ತೋರಿಸಬೇಕು. ಅಂದರೆ ತಮಗೆ ಗೊತ್ತಿದ್ದ ಸಂಸಾರ ಸುಖದ ಊರಿಗೆ ಅವರು ಮುಟ್ಟಿಸಬೇಕು. ನಮಗೆ ಗೊತ್ತಿದ್ದ ಮುಂದಿನ ದೇವರೂರಿಗೆ ನಾವು ಕೈಹಿಡಿದು ಅವರನ್ನು ಕರಕೊಂಡು ಹೋಗಬೇಕು. ಅಂದರೇ ಮಾನವ ಜೀವನ ಸಿದ್ಧಿಯು!

—ರಂಗ

# ನೋವಿನ ಬೆಲೆಯು.

ಏನಿರಬೇಕು ಏನಿರಬಾರದು ಎಂದು ತಿಳಿದುಕೊಳ್ಳುವದು ಅರಿವು. ಏನಿದೆ ಏನಿಲ್ಲ ಎಂದು ತಿಳಿಯದಿರುವದೇ ಮರೆವು. ಅರಿವು ದೇವರ ಅರುಹು. ಮರೆವು ಜೀವನ ಕುರುಹು. ಮರೆವು ಅರಿವಾದಾಗ ಜೀವ ದೇವನಾಗುವದು. ನೋವಿನ ನೆರವಿನಿಂದ ಮರೆವು ಅರಿವಾಗುವದು. ನೋವಿರದಿದ್ದರೆ ಮರೆವಿನ ಅರಿವು ಕೂಡ ನಮಗಾಗುತ್ತಿದ್ದಿಲ್ಲ. ಪ್ರಾಣದ ಪರಿವೆಯಾದಾಗಲೇ ಜೀವಕ್ಕೆ ಮರೆವಿನ ಅರಿವಾಗುವದು. ಅರಿವಿನ ಪರಿವೆಗೆ ಮರೆವಿನ ಪರಿವೆ ಎದುರಾಗುತ್ತಲೇ ನೋವು ಉಂಟಾಗುವದು. ನೋವೆಂದರೆ 'ಇತ್ತಿಲ್ಲ ಇತ್ತ' ಎಂದು ಹಾದೀ ತೋರಿಸುವ ಸುಟ್ಟು ಬೆರಳು. ಈ ಬೆಲೆಯನ್ನರಿತವನೇ ಅರಿತನು.

ಒಂದೇ ನೋವಿಗೆ ಹಲವೊಂದು ಹೆಸರಿರುವವು. ತಿಳಿವಿನ ನೋವಿಗೆ ತಪ್ಪೆಂದೂ; ನುಡಿಯ ನೋವಿಗೆ ಹುಸಿಯೆಂದೂ; ನಡೆಯ ನೋವಿಗೆ ಕೇಡೆಂದೂ; ಎದೆಯ ನೋವಿಗೆ ದುಗುಡವೆಂದೂ; ಒಗೆತನದ ನೋವಿಗೆ ಹಗೆತನವೆಂದೂ; ಹೆಸರುಂಟು. ತಪ್ಪು ಒಪ್ಪಾಗಲಿಕ್ಕೂ; ಹುಸಿಯು ಹುರುಳಾಗಲಿಕ್ಕೂ, ಕೇಡು ಒಳಿತಾಗಲಿಕ್ಕೂ; ದುಗುಡ ಸೊಗಸಾಗಲಿಕ್ಕೂ; ಹಗೆ ನಗೆಯಾಗಲಿಕ್ಕೂ; ನೋವಿನ ನೆರವು ಬೇಕು. ಮೈ ಕೈ ನೋವು ಮರಿಮಕ್ಕಳಿಗೂ ತಿಳಿಯುವದು. ಮುಂದ ಮುಂದಿನ ನೋವು ಪುಪ್ಪಿನವರಿಗೂ ಮಸುಮಸುಕು. ಆ ನೋವನ್ನರಿತವನೇ ಅರಿತನು.

ಕಲ್ಲುಮಣ್ಣಿಗೆ ಮೈ ಕೈ ನೋವಿಲ್ಲ; ಮನಮಾತಿನ ನೋವಿಲ್ಲ; ತಿಳಿವರಿವಿನ ನೋವಿಲ್ಲ, ಕೂಟದ ಹಿಗ್ಗಿಲ್ಲ; ಬೇಟದ ತಗ್ಗಿಲ್ಲ. ಈ ಹಿಗ್ಗಿಲ್ಲದ ಇರವು ಬೇಡ ಬೇಡ. ಇದನ್ನರಿತವನೇ ಅರಿತನು.

ಮೈ ಕೈ ನೋವಿನ ಅರಿವಿನಿಂದ ಕಲ್ಲು ಮಣ್ಣು ಗಿಡಗಂಟೆಯಾಯಿತು. ಗಿಡಗಂಟೆಗೆ ಮೈ ಕೈ ನೋವಿನ ಪರಿವೆಯುಂಟು; ಮನಮಾತಿನ ಪರಿವೆಯಿಲ್ಲ, ತಿಳಿವರಿವಿನ ಪರಿವೆಯಿಲ್ಲ. ಅಗಿದ ತಗ್ಗು ತಾನೇ ಮುಚ್ಚಿಕೊಳ್ಳದು; ಕಚ್ಚಿದ ಗಿಡವು ತನ್ನನ್ನು ಮುಚ್ಚಿಕೊಳ್ಳುವದು. ಗಿಡಗಂಟೆಗೆ ಮೈ ಕೈ ಕೂಟದ ಹಿಗ್ಗುಂಟು, ಮೈ ಕೈ ಬೇಟದ ತಗ್ಗುಂಟು ತಗ್ಗು ತಿಳಿಯದಿದ್ದರೆ ಹಿಗ್ಗು ಹುಟ್ಟದು. ಇದನ್ನರಿತವನೇ ಅರಿತನು.

ಮೈ ಕೈ ಪರಿವೆಯ ಮೇರೆ ಮೀರಿ, ಮನಮಾತಿನ ಮಿಂಚನ್ನು ಕೊಂಚ ಕಂಡು, ಆ ಹೊಸ ಬಲದ ಹೊಲದಲ್ಲಿ ಹಾರಾಡಿ, ಚೀರಾಡಿ, ಅರಿವಿನ ಮರವೆಯಾಗಿ, ಪರಿವೆಯ ಪರಿವೆ ಹಾರಿ, ಹಾಡಿದ್ದೇ ಹಾಡಿ, ಮಾಡಿದ್ದೇ ಮಾಡಿ, ಹುಳಹುಪ್ಪಡಿ ಮೊದಲುಗೊಂಡು ಎತ್ತು, ಕತ್ತೆ, ಕಡೆಯಾಗಿ ಮನದ ಪರಿವೆಯ ಒಂದು ಸುಳಿಯಲ್ಲಿ ಸುತ್ತು ಸುತ್ತಾಡುತ್ತಿರುವವು.

ಹುಳಗಳು ಅಡ್ಡಾಟ, ಹಸುಗಳ ಓಡಾಟ, ಹಕ್ಕಿಗಳ ಹಾರಾಟ– ಇವೆಲ್ಲ ಆ ಹೊಸ ಬಲದ ಹಿಗ್ಗಿನ ಉಗ್ಗು. ಮೈ ಕೈ ಅರಿವಿದ್ದು ಪರಿವೆ ಕಳೆದುಕೊಂಡು, ಆ ಹೊಸ ಗಸುವಿನ ಹಿಗ್ಗಿಗಾಗಿ ಹಾ ತೊರೆಯುವವು. ಅವನ್ನು ತೋರಿಸಲಿಕ್ಕೆ ನೋವು ನೆರವಾಗುವದು. ಕಟ್ಟಿದ ಚಿಗರಿ, ಅಟ್ಟಿದ ಹುಲಿ ಈ ಮಾತಿಗೆ ಇವೇ ಸಾಕ್ಷಿ. ಇದನ್ನರಿತವನೇ ಅರಿತನು.

ಮನದಿಂದಾದ ಮಾನವನು. ಅಣುವಿಗಾಗಿ ಅಳುಕದ್ದು ಮಣ್ಣು ಹೆಂಟೆ. ತನುವಿಗಾಗಿ ಅಳುಕುವದು ಗಿಡಗಂಟೆ; ಅಸುವಿಗಾಗಿ ಅಳುಕುವದು ಪಶು; ಮನಕ್ಕಾಗಿ ಅಳುಕುವನು ಮಾನವ. ಉಗ್ಗಿದರೇನು ತಗ್ಗಿದರೇನು ಹಿಗ್ಗದ ಹೊರತು? ತಗ್ಗಿ ಉಗ್ಗಿ ಹಿಗ್ಗು ಹುಡುಕಬೇಕು; ಹುಡುಕದವ ಮಾನವನಲ್ಲ. ಹಿಗ್ಗಿಲ್ಲದೆ ತಗ್ಗುವದು ಮರುಳು. ತಗ್ಗಿ ಹಿಗ್ಗಿನ ಹಾದಿ ಹಿಡಿಯುವದೇ ಹುರುಳು. ಇದನ್ನರಿತವನೇ ಅರಿತನು.

ಇದನ್ನಾರೆಂದರು ಆರಂದರು ಎಂದು ಕೇಳಲಾಗಿ 'ನಾ ನಾ ನಾ' ಎಂದಂದಿತೊಂದು ದನಿಯು. ಇದನ್ನರಿತವನೇ ಅರಿತನು.

ಓಂ ಶಾಂತಿಃ ಶಾಂತಿಃ ಶಾಂತಿಃ

---

# ಹಿಗ್ಗಿನ ನೆಲೆಯು.

ಹಿಗ್ಗು ಹಿಗ್ಗು ಎಂದು ಹಿಗ್ಗಿತು ಜೀವ; ಹಿಗ್ಗು ಹಿಗ್ಗು ಎಂದು ಹಿಗ್ಗಿದನು ದೇವ. ಹಿಗ್ಗು ಹಿಗ್ಗೆಂದು ಒಂದು ಎರಡಾಗಿ ಎರಡೂ ಒಂದಾದವು. ಆ ಹಿಗ್ಗಿನ ನೆಲೆಯೆಲ್ಲಿ? ಆ ಹಿಗ್ಗಿನ ಸೆಲೆಯೆಲ್ಲಿ ?

ನಗೆಯದೊಂದು ನಾಡುಂಟು; ಅಲ್ಲಿ ಬೆಳಕಿನ ಹೊಳೆಯುಂಟು; ಅದರ ದಂಡೆಗೆ ಕಲ್ಲುಂಟು, ಮುಳ್ಳುಂಟು. ಆದರೆ ಅಲ್ಲಿ ಕಲ್ಲು ಕರಗುವವು, ಮುಳ್ಳು ಮುಗುಳುವವು. ಅಲ್ಲಿಯ ಅರಸೇ ಹಿಗ್ಗು.

ಜೀವಕ್ಕೆ ಗಾಳಿಯು ಪ್ರಾಣ; ಹೆಣಕ್ಕೇನು ? ಅವರ ಸುತ್ತು ಗಾಳಿಯು ಬೀಸಿದರೇನು ಸೂಸಿದರೇನು? ಹಿಗ್ಗಿನಿಂದ ಹಿಗ್ಗಿದ ಜಗದಲ್ಲಿ ಹೆಣವಿದ್ದಂತೆ ಆಗಿರುವೆನು. ಆ ಹಿಗ್ಗು ಜಗ್ಗಿಕೊಳ್ಳುವ ಬಗೆ ಹೇಗೆ ?

ಹಿಗ್ಗು ಸುತ್ತಿರುವದು; ಹಿಗ್ಗು ಮುತ್ತಿರುವದು; ಹಿಗ್ಗು ಮೇಲಿರುವದು; ಹಿಗ್ಗು ಕೆಳಗಿರುವದು; ಹಿಗ್ಗು ಹೊರಗಿರುವದು; ಹಿಗ್ಗು ಒಳಗಿರುವದು. ಹಿಗ್ಗಿನ ಹಗ್ಗದಿಂದ ಎಲ್ಲವೂ ನನ್ನನ್ನು ಬಿಗಿದಿರುವದು; ನಾನು ಎಲ್ಲವನ್ನೂ ಬಿಗಿದಿರುವೆನು.

ಹಿಗ್ಗಿಗಾಗಿ ಬಿತ್ತು ಅಗಿಯಾಯಿತು; ತಾಯಿಗೆ ಮಗುವಾಯಿತು; ಈ ಹಿಗ್ಗಿಗಾಗಿ ಜಗವು ಹೊಸ ಹೊಸದಾಯಿತು. ಇದಿಲ್ಲದಿರೆ ಎಂದೋ ಹಳಸಿ ಹೋಗುತ್ತಿತ್ತು.

ಹಿಗ್ಗು ಹುಚ್ಚುತನವಲ್ಲ, ಹಸುಳೆತನವಲ್ಲ. ಹಿಗ್ಗು ಹಡೆದವ್ವಳ ಹೊಟ್ಟೆಯಲ್ಲಿ ಹುಟ್ಟಿ, ಹಸುಳರ ಹಮುಳದಲ್ಲಿ ಹೊದಾಡಿ, ಹರೆಯದ ಹೃದಯವಂ ಹರಿಸಿ, ನನ್ನಿ ನಗೆಗಳು ಬೆರಿಸಿ ಸುರಿಸುವ ದೇವರೂಪ.

ಹಿಗ್ಗಿ ಹಿಗ್ಗಿದಂತೆ ದೇವರ ಹತ್ತರ ಬರುವಿ. ಹಿಗ್ಗ ಹಿಗ್ಗದಂತೆ ಸಾವನು ಹತ್ತರ ತರುವಿ ಜೀವಾ! ಹಿಗ್ಗಿನ ಹಾದಿಯಂ ಪಿಡಿ. ಬಡಿದರೆ ಬಗ್ಗಬೇಡ, ತಡೆದರೆ ತಗ್ಗಬೇಡ; ಕಡಿದರೂ ಕುಗ್ಗಬೇಡ, ಹಸುಳಾ, ಇದೆಲ್ಲ ನಿನ್ನ ಹಿಗ್ಗಿಗೆಂದು ತಿಳಿ.

ವೀರಜೀವಾ ! ಸುಖವೆಂಬ ಬೀದಿಯ ಬಸವಿಯನ್ನು ಬಯಸಿ ಹೇಡಿಯ ಹಾದಿಯನ್ನು ಹಿಡಿಯಬೇಡ, ಕಂಡಿಯಾ! ವೀರಜೀವಾ! ದುಃಖವೆಂಬ ಬೀದಿಬಡಕನಿಗೆ ಬೆದರಿ ಹೇಡಿಯ ಹಾದಿಯನ್ನು ಹಿಡಿಯಬೇಡ, ಕಂಡಿಯಾ! ವೀರಜೀವಾ ! ಅದು ನಿನ್ನ ಹಾದಿಯಲ್ಲ.

ಗಳಿಸದೆ ಬಳಿಸಬಾರದಂತೆ; ಕೈಲಾಗದವರು ಗಳಿಸದೇ ಬಳಿಸ ಬಯಸುವರು ! ನೀನು ಬಯಸುವರೇ ? ಯಾರ ಹಂಗೇಕೆ? ಸುಖ ದುಃಖದೊಳಗಿಂದ ಹಿಗ್ಗಿನ ಹಾಲನ್ನು ಹಿಂಡಿ ತೆಗೆಯಬೇಕು. ಅದೇ ಗಂಡಸುತನವು. ಸುಖನೋಡಿ ಕಂಗೆಡುವರೇ? ದುಃಖ ನೋಡಿ ಮುಂಗೆಡುವರೇ ? ವೀರಜೀವಾ ! ಅದಲ್ಲ ನಿನ್ನ ಹಾದಿ.

ಅಗೋ ಆ ಅಟ್ಟಂಬಟ್ಟಂ ಅರಣ್ಯದ ನಟ್ಟನಡುವೆ ಬೆಟ್ಟಗೋಟೆಯೊಂದನ್ನು ಕಟ್ಟಿದ್ದು, ನಿಟ್ಟಿರುಳಿನಲ್ಲಿ ಕೂಡ ಕಟ್ಟಾಯದ ಕಾವಲುಗಾರರು ಅದನ್ನು ಕಾಯುತ್ತಿರುವರು. ಅದರ ಸುತ್ತಿನದೆಲ್ಲ ಮಾಟಮಾಯದ ನಾಡು. ಆ ಕೋಟೆಯಲ್ಲಿ ಮಣಿಮುತ್ತಿನದೊಂದು ಅರಮನೆಯುಂಟು. ಆ ಕೋಣೆಯಲ್ಲಿ ಹೊನ್ನಿನ ಹೊರಸುಂಟು. ಆ ಹೊರಸಿನ ಮೇಲೆ ದೇವರಾಯನ ಮೂರು ಮಲ್ಲಿಗೆಯ ತೂಕದ ಮಗಳೊಬ್ಬಳು ಹಗಲಿರುಳು ನಗುತ್ತ ಕುಳಿತಿರುವಳು. ಆ ನಾಡಿನಲ್ಲಿ ಅವಳ ಕಣ್ಣುಗಳೇ ಸೂರ್ಯ ಚಂದ್ರಮರು. ಅವಳ ತುಟಿಗಳು ಸಂಜೆ ಮುಂಜಾವು. ವೀರಜೀವನೇ ! ಇಂಥ ಮಾಯಕಾರ್ತಿಯೇ ನಿನಗೆ ಮದುಮಗಳಾಗಿ ಒಪ್ಪುವಳು.

ಮದುಮಗನೇ ! ಅಲ್ಲಿಗೆ ಹೋಗಬೇಕೆಂದು ಹಂಬಲಿಸಿದವರು ಹುಚ್ಚರಾದರು, ಅಲ್ಲಿಗೆ ಹೋಗಬೇಕೆಂದು ಹವಣಿಸಿದವರು ಹಸುಗಳಾದರು. ಕೆಲವರು ಕಲ್ಲಾದರು, ಮತ್ತೆ ಹಲವರು ಮಣ್ಣಾದರು. ಅಲ್ಲಿಗೆ ಹೋಗಿ ಮದುವೆಯಾಗಿ ಬರುವದೇ ನಿನಗೆ ತಕ್ಕುದು.

ಅಪ್ಪಾ, ಅರಸುಮಗನೇ ! ಮದುಮಗನೇ ! ಹುಟ್ಟಿ ಬಾಳ್ವೆಯ ಮಾಡಬೇಕು ಹಿಗ್ಗೆಂಬ ಹೆಣ್ಣಿನಕೂಡ, ಬೆಳೆದು ಬಾಳ್ವೆಯ ಬೆಳಿಸಬೇಕು ಹಿಗ್ಗೆಂಬ ಹೆಣ್ಣಿನಕೂಡ ಅಳಿದು ಬಾಳ್ವೆಯನುಳಿಸಬೇಕು ಹಿಗ್ಗೆಂಬ ಹೆಣ್ಣಿನಕೂಡ. ಈ ಕಿವಿಮಾತನ್ನು ಮರೆಯೋ ಮರೆಯಬೇಡ, ಮರೆಯಬೇಡ, ಮರೆಯಬೇಡ !

—ಅಂಬಿಕಾತನಯದತ್ತ

**ಓಂ ಶಾಂತಿಃ ಶಾಂತಿಃ ಶಾಂತಿಃ**

# ಶ್ರೀ ವಿವೇಕಾನಂದ!

( ದ್ವಿಪದಿ ).

( “ ಶಾಂತಿ? ! ಶಾಂತಿ?? !! ” ಎಂದು ಹಲುಬಿ ಅಶಾಂತಿಗೀಡಾದುವುದು ಸ್ವಭಾವ ದೋಷ. ಶಾಂತಿನಾಥನ ಸಮರಸ ಸರಿತೆಯ ಸಾಮಗಾನದಲ್ಲಿ ದನಿಗೂಡಿಸುವದರಿಂದ ಸ್ವಭಾವನಾಶ. ಸ್ವಭಾವದೋಷವಳಿದು ಸ್ವ-ಭಾವನಾಶವಾದಾಗಳೇ ಎಲ್ಲೆಲ್ಲಿಯೂ ಅವನ ‘ಭಾವ’ !!! )

ಶ್ರೀ ವಿವೇಕಾನಂದ ! ಶರಣು !! ಶರಣು !!!
ಶ್ರೀ ವಿವೇಕಾನಂದ! ಶರಣು—ಶರಣು !! ॥ ೧ ॥

ಶ್ರೀ ವಿವೇಕಾನಂದ! ಮೂಡು—ಒಡಮೂಡು
ಶ್ರೀ—ವಿವೇಕಾನಂದವನು ನೀಡು—ನೀಡು !! ॥ ೨ ॥

× × ×

ಮಿಂಚಿನಂದದಿ ಮೂಡಿ ಮಾಯವಾಗುವರೇ? !
ಹಂಚಿಕೆಯ ಕಿರುಗೈಗೆ ನಿಲುಕಿ ಹಾರುವರೇ ?? !! ॥ ೩ ॥
ಆಶೆ ತೋರಿಸಿ ಹೀಗೆ ದೂರ ಸರಿಯುವರೇ ?
‘ ಆ ’ ಸಣ್ಣ ಗಳಿಗೆಯನು ಮುಚ್ಚಿ ಮರಿಸುವರೇ ? ॥ ೪ ॥
ನೋಡಿ ನೀಡುವನೆಂದು ‘ಬಸವ’ ಹೇಳಿದನು
ಕೂಡಿ ಆಡುವನೆಂದು ‘ಪಾರ್ಥ’ ಪೇಳಿದನು !! ॥ ೫ ॥
‘ ಸೀತೆ ’ ಹೇಳಿದಳಲ್ಲೊ “ ನಂಬು ನಂಬೆ ”ಂದು
ಏತರಲಿ ಸಿಕ್ಕುವದೊ ನಿನ್ನ ಇಂಬೊಂದು ? ॥ ೬ ॥
ನೆಲೆ ಹತ್ತಿದಂತಾಗಿ ಕಾಲು ಹಾರುವವು
ನೆಲೆಯನಲೆದಾಡಿಸುವದೆಂಥದೀ ಸೆಳವು ?? ! ॥ ೭ ॥

× × ×

ಬಳಲಿಕೆಗೆ ಬೆಚ್ಚಿ ನಾನಳಲುವವನಲ್ಲ
ಬಳಲುತಿರಲೆದೆಗರಗಿ ನೀ ಬರುವೆಯಲ್ಲ !!! ॥ ೮ ॥
ಬಲು ಬಿಸುಪು ಹೆಚ್ಚಾಗಿ ಹಾ ಹಾರದಿರಲು
ನೆಲ ಮುಗಿಲನೊಂದಿಸುವ ಮಳೆಬಹುದೆ ಮಿಗಿಲು? ! ॥ ೯ ॥
ಕರೆದರೂ ಬಾರದಲೆ ಮರೆಗಿರುವ ನೀನು
ಕರೆಯದಲೆ ಹರಿಗೊಂಡು ಆಗ ಬಹೆ !! ಏನು ?? ! ॥ ೧೦ ॥
‘ ಆಗ ’—‘ ಈಗ ’ಗಳ ನಡುವಿರುವ ಅಗಲೊಂದೇ
ಆಗಿರುವುದಗಲಿಕೆಯ ಅಗಲು—ದೆರೆ ಮುಂದೆ ॥ ೧೧ ॥
ಈ ಸಂದಿನಡ್ಡಗಲು ಹತ್ತೆಯಾದಂತೆ
ಈಸೊಂದು ಚಿಂತೆಗಳದುಂಟೆಲ್ಲಿ ಸಂತೆ? ॥ ೧೨ ॥

× × ×

ಆಶೆ ಕಡಿದರು ಕೂಡ ಆಶೆಯನು ಬಿಡದೆ
ಏಸೊ ದಿನವಾದರೂ ' ಸೀತೆ ' ಬಗೆಗೆಡದೆ ॥ ॥ ೧೩ ॥
ಆನಂದ ರೂಪನ ವಿವೇಕ ನಿಧಿಯನ್ನು
ತಾನಂದು ಪಡೆದಳಲ್ಲವೆ-ರಾಮನನ್ನು-!! ? ॥ ೧೪ ॥
ತನ್ನ ತನುಮನ ನೀಡಿ ' ರಾಧಿಕಾಕನ್ಯೆ '
ಮುನ್ನ ತಾ ಪಡೆದಳಲ್ಲವೆ ' ಕೃಷ್ಣ ' ನನ್ನೆ!! ॥ ೧೫ ॥
' ರಾಮ ' ನೊಲಿದನು ಅಚಲವಾದ ನಂಬುಗೆಗೆ !
' ಶ್ಯಾಮ ಸುಂದರ ' ನೊಲಿದನ್ನೆ ಸಮರ್ಪಣೆಗೆ !! ॥ ೧೬ ॥
" ರಾಮ ಕೃಷ್ಣ " ರು ನಿನ್ನ ಹುಡುಕುತ್ತ ಬಂದು
ಈ ಮರ್ತ್ಯ ಲೋಕದಲಿ ಕೈ ಹಿಡಿದರಂದು !!! ॥ ೧೭ ॥
ಆವ ಮೋಹನಮಂತ್ರವಿತ್ತೊ ನಿನ್ನಲ್ಲಿ ????
' ಆ ' ವೊಂದೆ ಮಂತ್ರವನ್ನೂದೊ ನನ್ನಲ್ಲಿ !!! ॥ ೧೮ ॥

× × ×

ಶ್ರೀ ವಿವೇಕಾನಂದ ! ಮೂಡು-ಒಡಮೂಡು !!
ಶ್ರೀ-ವಿವೇಕಾನಂದವನು ನೀಡು-ನೀಡು !! ॥ ೧೯ ॥
ಶ್ರೀ ವಿವೇಕಾನಂದ ! ಶರಣು !! ಶರಣು !!!
ಶ್ರೀ-ವಿವೇಕಾನಂದ ! ಶರಣು !! ಶರಣು !!! ॥ ೨೦ ॥

—ಚೆನ್ನ.

---

## ಸರಳ ಉತ್ತರ.

ವಾತದೋಷದಿಂದ ಒಬ್ಬರ ಕಾಲು ಮಡಿಚಿಕೊಳ್ಳಲು ಬರದಂತಾಗಿತ್ತು.
**ಅವರಿಗೊಬ್ಬರು:–** ಏನ್ರೀ! ಈಗ ನಿಮ್ಮ ಕಾಲು ನೆಟ್ಟಗಿದೆಯೋ'?
**ಮೊದಲಿನವರು:–** ಈಗಲೂ ನೆಟ್ಟಗೇ ಇದೆ.

---

## ಸೇರಿಗೆ ಸವ್ವಾಸೇರು.

ಇಬ್ಬರು ಸಹವಾಸಿ ಬ್ರಾಹ್ಮಣರ ಹುಡುಗರಿಗೂ ಒಬ್ಬ ಮುಸಲ್ಮಾನರ ಹುಡುಗನಿಗೂ ಜಗಳ ನಡೆಯಿತು. ಆಗ ಮು.-ಹು:- ನಾನಾರು ಗೊತ್ತಿದೆಯೋ? ಷೇರ್ (ಸಿಂಹ) ನಾನು!" ಎಂದು ಬೆದರಿಸಲು ಆ ಸಹವಾಸಿ ಪೋರರು "ನಾವಾರು ಗೊತ್ತಿದೆಯೋ ನಾವು ಸವ್ವಾಸೇರು" ಎಂದು ಗದ್ದರಿಸಿದರು.

---

ಓಂ ನಲ್

# ಸ್ವಧರ್ಮ

॥ ಜಯಂ ಭದ್ರಂ ಶುಭಂ ಮಂಗಲಮ್ ॥

ವರ್ಷ-೩ | ಶಕ ೧೮೪೮ ಅಕ್ಷಯ ಸಂ॥-ಶ್ರಾವಣ. | ತಿಂ.-೫

## ಓ ಹಾಡೇ!

ಕವಿ:—ಅಂಬಿಕಾತನಯದತ್ತ.

ಬಗೆಯು ನಗೆಯಲಿ ಸುಳಿವ ಉಗೆವಾಡದಲಿ ಕುಳಿತ।
ಜಗವ ಗೆಲ್ಲಲು ನಸುಕಿನಲ್ಲಿ ಅದೆ ದರದಳಿತ॥
ಕಮಲ ಕೋರಕದಂತೆ ಬಾಯ್ದೆರೆದ ಚೆನ್ನೆ?।
ವಿಮಲ ತಾರಗೆಯಂತೆ ಗೈಯ್ವೆ ಕಣ್ಸನ್ನೆ॥
ಬೆಂದು ಬಂದೆನು ಒಂದೆ ವರವ ನೀಡೇ?।
ಓ ಹಾಡೆ, ಓ ಹಾಡೆ, ಓ ಹಾಡೇ? ॥೧॥

ತುಸುವು ಕೇಳಿದ ಕೂಡ ಸೊಲ್ಲ ಮರೆತಿರಬೇಕು।
ರಸವ ಹೀರಿದಕೂಡ ಎಲ್ಲ ಅರಿತಿರಬೇಕು॥
ಇಂಥ ಪದವನು ಹಾಡು ಹಾಡೊಮ್ಮೆ ನಲ್ಲೆ।
ಅಂಥ ತನಿಗುಸುರನ್ನು ನೀನೋರ್ವೆ ಬಲ್ಲೆ॥
ಹೇಳು—ಕೇಳುವೆ; ನನ್ನ ಧನ್ಯಮಾಡೇ?।
ಓ ಹಾಡೆ, ಓ ಹಾಡೆ, ಓ ಹಾಡೇ ॥೨॥

ಭೋಗ ಯೋಗದ ಪದವೆ! ಜೈನವಾಙ್ಮಯ ಮಧುವೆ।
ಯೋಗಭೋಗದ ಹದವೆ! ವಚನ ಬ್ರಹ್ಮನ ವಧುವೆ॥
ಮುದ್ದು ವಿಠಲಗೆ ಮಾರಿಕೊಂಡ ದಾಸಿ?।
ಮುದ್ದಣನ ಲಲ್ಲೆವಾತಿನ ಪ್ರೇಮರಾಶೀ॥
ಜೀವ ಜೀವಾಳದಲಿ ಬೆರೆತು ಕೂಡೇ।
ಓ ಹಾಡೆ, ಓ ಹಾಡೆ, ಓ ಹಾಡೇ ॥೩॥

ಮುಂಗೈಯ ಮೇಲೆ ಅಂಗಜನ ಅರಗಿಳಿಯಿರಿಸಿ ।
ಮುಂಗಾವಲೆಂದು ಸುಗ್ಗಿಯು ಕೋಕಿಲವ ಸರಿಸಿ ॥
ನೂರುಕಣ್ಣಿನ ನವಿಲ ಸತ್ತಿಗೆಯ ಮಾಡೀ ।
ಚಾರುತಮ ಸರಸ ಅರಸಂಚೆಯನು ಪೂಡಿ ॥
ಬಂದು ನನ್ನಿದಿರಲ್ಲಿ, ನಾಟ್ಯವಾಡೇ ।
ಓ ಹಾಡೆ, ಓ ಹಾಡೆ, ಓ ಹಾಡೆ ॥ ೪ ॥

“ ಜಡಿಮಳೆಯು ಜಡಿವಂತೆ ಹಾಡಿದರೆ ಹಾಡುವದು ।
ಇಡಿಯಿಳೆಯು ಹಸುರಾಗಿ ಮೂಡಿದರೆ ಮೂಡುವದು ” ॥
ಮಾತು ಮಾತಾಡವ್ವ ಮತ್ತೆ ಮಾತಾಡೇ ।
ಸೋತೆನೊಂದೇ ಮಾತು ಕೇಳಿ ಮಾತಾಡೆ ॥
ತೆರವುಗೊಡದಿರು ಮೌನ ಬೇಡ ಬೇಡೇ ।
ಓ ಹಾಡೆ, ಓ ಹಾಡೆ, ಓಹಾಡೇ ॥ ೫ ॥

“ ಬಿಡಿಸಿ ಸೆರೆವಿಡಿದು, ಸೆರೆಗೈದು ಬಿಡುಗಡೆಗೊಳಿಸಿ ।
ಕೆಡಿಸಿ ಕಟ್ಟುತ, ಮತ್ತೆ ಕಟ್ಟಿ ಕೆಡಿಸುತಲುಳಿಸಿ ॥
ಸೂಸಲದ ಒಲವುಳ್ಳ ಮಾತಮಾತಾಡು ।
ಮೀಸಲದ ರಸವುಳ್ಳ ಒಳಹಾಡ ಹಾಡು ” ॥
ತಡೆಯದಿರು ತಡೆಯದಿರು ಹಾಗೆ ಯಾಡೆ ।
ಓ ಹಾಡೆ, ಓ ಹಾಡೆ, ಓ ಹಾಡೇ ॥ ೬ ॥

“ ಬಿತ್ತಿದರೆ ಬಿತ್ತುವದು ಮುಕ್ಕುಚಿಕ್ಕೆಯು ಕಾಳು ।
ಮುತ್ತುರತುನವ ಬಿತ್ತಿ ಮಾಡದಿರು ಹೊಲಹಾಳು ॥
ಜೀವವನು ಚಾಚಿ ಮುಗಿಲಂಗಳಕೆ ಹಚ್ಚಿ ।
ದೇವನೊಡೆನುಡಿವಂತೆ ಮಾಡು ಮೆಚ್ಚಿ ॥
ಏಳು ಮಲಗಿದಿಯಾಕೆ ಶರಣನಾಡೇ” ।
ಓ ಹಾಡೆ, ಓ ಹಾಡೆ, ಓ ಹಾಡೇ ” ॥ ೭ ॥

ಅಳುವಕೂಸನು ಲಾಲಿಯೆಂದು ಮಲಗಿಸುವಂತೆ ।
ಬಳಲಿದಂತಹ ಬಗೆಯ ಸಂತವಿಸಿದೌಶಾಂತೆ ॥
ಮುನ್ನ ಬಗೆಯಲಿ ಹಾಡ ನೀನೀನೆ ಹೆತ್ತಿ ।
ನನ್ನ ನಾಲಿಗೆ ನಿನ್ನ ಬಿರಿಸೂಲಗಿತ್ತೀ ॥
ಇಲ್ಲದಿರೆ ಹಾಡುವದು ನನ್ನ ಪಾಡೇ ? ।
ಓ ಹಾಡೆ ! ಓ ಹಾಡೆ ! ಓ ಹಾಡೆ ! ॥ ೮ ॥

ಸವಿ:—ಕವಿಯು ಭಾವನೆಯೊಡನೆ ಬೆರೆತುಹೋದಾಗಿನ ಕವಿತೆಯಿದೊಂದು. ಎದೆಯನ್ನರಳಿಸಿ, ಹಾಡಾಗಿ ಹೊರಗೆ ಬರುತಿರುವ, ಅವರ್ಣನೀಯಳಾದ, ಅವಿನಾಶಿಯಾದ, ಅಚಿರಳಾದ ಅ-ರೂಪಳಾದ ಭಾವದೇವಿಯನುದ್ದೇಶಿಸಿ ಕವಿಯು ಮಾತನಾಡಿರುವನು. ಆ ದೇವಿಯನ್ನೆ "ಓ ಹಾಡೇ" ಎಂದು ಕರೆದಿರುವನು. ಕವಿ ಕುಂಜರನು ತನುವಿಲ್ಲದಲ್ಲಿ ಪ್ರಾಣಪ್ರತಿಷ್ಠಾಪನೆಯನ್ನು ಮಾಡುವವನಲ್ಲವೇ.

೧. ಕವಿಯು ಅವಿದಿತವಾದ ಭಾವನಾಲಹರಿಯಲ್ಲಿ ಮುಳುಗಿ ಏಳುತಿರುವನು. ಬಗೆಯು ಬಾಯ್ದೆರೆದಿದೆ. ಏನನೋ ಹೇಳಬೇಕೆಂದೆನಿಸಿದೆ. ಏನನೋ ಹೇಳಲು ಅಕಿ ಬಾಯತೆರೆದಂತೆ, ಅದೇತಕೋ ಕಣ್ಸನ್ನೆ ಮಾಡುತಿರುವಂತೆ ದೇವಿಯ ಮೂರ್ತಿಯ ಕಣಸೊಂದು ಒಳಗಣ್ಣಿಗೆ ಕಾಣುತಲಿದೆ. ಕವಿಯು ಮೈಮರೆತು ಆ ದೇವಿಗೆ "ಓ ಹಾಡೇ! ಹಾಡೆ ಹಾಡೆ!" ಎಂದು ವೈಖರಿವಾಣಿಯಲ್ಲಿ ನುಡಿದು ಬೇಡಿಕೊಳುತಿರುವನು.

೨. "ಎಲೌ ಹಾಡೇ! ಹಾಡನ್ನು ಕೊಂಚವೆ ಕೇಳಿದರೂ, ನಾವು ಶಬ್ದಪ್ರಪಂಚವನ್ನು ದಾಟಿ ಆಚೆಗೆ ಹೋಗಬೇಕು. ರಸವನ್ನು ನಸುವೆ ಹೀರಿದರೂ, ವಿಶ್ವದ ತಿಳಿವು ಉಂಟಾಗಬೇಕು. ಇಂತಹ ಹಾಡ ಹೇಳುವ ಚಾತುರ್ಯವನ್ನು ಅರಿತವಳು ನೀನೊಬ್ಬಳೆ ಆದುದರಿಂದ ಹಾಡು ಹಾಡು! ಕೇಳಿ ಧನ್ಯನಾಗುವೆನು. ಎಂದು ಕವಿಯು ಮತ್ತೆ ಮಾತನಾಡುವನು.

೩. ಭಾವದೇವಿಗೂ ಕನ್ನಡ ವಾಙ್ಮಯಕ್ಕೂ ಇರುವ ಬೆಸುಗೆಯನ್ನು ಕಂಡು ಹಿಡಿದ-ಕನ್ನಡನುಡಿಯ ನೆಲೆಯರಿತ-ಕವಿಯು ಮುಂದೆ ನುಡಿದಿರುವನು. "ಓ ಹಾಡೇ! ರಸರಾಜ್ಯದ ರಾಣಿಯೇ! ನೀನು ಜೈನಕವಿಗಳ ಮನದಲ್ಲಿ ಮನೆಮಾಡಿ, ಭೋಗಯೋಗವನ್ನು ಸಮವೆಂದೆಣಿಸುವ ವಿದೇಹಸ್ಥಿತಿಯನ್ನು ಹೊಗಳಿ ಹಾಡಿದೆ. ವೀರಶೈವ ವಚನಕಾರರ ಎದೆಯಲ್ಲಿ ನಲಿದಾಡಿ ಯೋಗದಿಂದ ಭೋಗಕಾಣುವ ಯೋಗಾರೂಢಸ್ಥಿತಿಯನ್ನು ಕೊನೆದು ಕೊಂಡಾಡಿದೆ. ವೈಷ್ಣವ ದಾಸರ ಹೃದಯದಲ್ಲಿದ್ದು ಭಕ್ತಿಮಾರ್ಗದ ಮೇಲಿನ ಮೆಟ್ಟಲಾದ ಆತ್ಮನಿವೇದನವನ್ನು ಬಣ್ಣಿಸಿ ಹಾಡಿದೆ. ಮುದ್ದಣನ ಮನದ ಮನೆಯವಳಾಗಿ ಪ್ರೇಮದ ಪದಗಳನ್ನು ಸವಿಗೂಡಿಸಿ ನುಡಿದೆ. ಇಂತು ರಸವೈವಿಧ್ಯದಿಂದ ಕೂಡಿರುವ ನೀನೀಗ ನನ್ನ ಜೀವದ ಜೀವಾಳವಾಗು. ಹಾಡು ಹಾಡು." ಎಂಬ ಮಾತನ್ನು ಸರಸವಾಗಿ ವರ್ಣಿಸಿರುವನು.

೪. ಮುಂದಿನ ನುಡಿಯಲ್ಲಿ "ಸೌಂದರ್ಯ-ಮಾಧುರ್ಯ-ತನ್ಮಯತೆ-ಪರಮಹಂಸಾವಸ್ಥೆಗಳನ್ನು ನೆನಪಿಗೆ ತಂದುಕೊಡುವ, ಅಲ್ಲದೆ ಸಂಗೀತದಲ್ಲಿಯ ಸ್ವರಶಾಸ್ತ್ರದ ಅಭಿಮಾನದೇವತೆಗಳಾದ, ಅರಗಿಳಿ-ಮರಿಗೋಗಿಲೆ-ಗರಿನವಿಲು-ಅರಸಂಚೆಗಳನು ನಿನ್ನ ಊಳಿಗದ ಆಳುಗಳನಾಗಿ ಮಾಡಿಕೊಂಡುಬಂದು, ನನ್ನಿದಿರಿನಲ್ಲಿ ನಾಟ್ಯವನಾಡು" ಎಂದು ಕವಿಯು ತನ್ನ ದೇವಿಗೆ ಬಿನ್ನವಿಸುವನು.

೫. ಈ ನುಡಿಯಲ್ಲಿ ಭಾವನೆಯಲ್ಲಿಯದೊಂದು ಉದ್ರೇಕ. "ಹಾಡುವುದಾವ್ವ ಆ ಗಾನಲೋಲನ ಸವಿಗೊಳಲಿನಂತೆ ಸ್ವರವನ್ನು ಹಿಂಗಿಸದೆ ಹಾಡಬೇಕು" ಎಂದು ಇದನ್ನೇ ಕವಿಯು ದಿವ್ಯವಾಣಿಯೆಂದು ಕಂಡು ಮುನ್ನಿನಂತೆಯೆ ಮತ್ತೆ ಮತ್ತೆ ಭಾವ್ಸ ದ್ರಿಕ್ತನಾಗಬೇಕೆಂದು ಬಯಸುತಿರುವುದನ್ನು ಬಣ್ಣಿಸಲಾಗಿದೆ.

೬. "ಓ ಹಾಡೇ! ಹಾಡು ಹಾಡು! ಅದಾವುದೊ ಮೋಹದಿಂದ ಕಟ್ಟುವಡ ಜೀವದ ಜಂಗುಳಿಯನ್ನು ಆ ಕೊರಳಗಣ್ಣಿಯಿಂದ ಬಿಡಿಸು. ಒಲವಿನಿಂದ ಒಡಗೂಡಿ ನಿನ್ನ ನಾದದ ಮೋಹದಿಂದ ಮತ್ತೆ ಬಿಗಿದು ಕಟ್ಟು. ಮರಳಿ ಬಿಚ್ಚಿ ಬಿಡುಗಡೆಯೊ ದಿಸು" ಎಂದು ಬೇಡಿಕೊಳುತಿರುವ ಹೃದಯ ಸ್ಪರ್ಶಿಯಾದ ಕಲ್ಪನೆಯನಿಲ್ಲಿ ಕಾಣಬ ಹುದು.

೭. ಈ ನುಡಿಯಲ್ಲಿ ಇನ್ನೊಂದು ಭಾವೋದ್ರೇಕ. ಕವಿಯು ಕನ್ನಡ ನಾಡಿ ಕಿರಿರೂಪು ತಾನಾಗಿರುವನು. ಅವನ ಭಾವವೇ ಅವನಿಗೆ ನಿರ್ದೇಶಿಸಿ ಹೇಳುವುದು "ಓ ಹಾಡೆ! ಶರಣರನಾಡೇ ನೀನೂ ಹಾಡೇ ಇರುವೆ. ಏಳು ಮಲಗಿದೆಯೇಕೆ? ಯೋಗಿ ಗಳು ಖೇಚರಿ ಮುದ್ರೆಯನು ಸಾಧಿಸುವಂತೆ ನಿನ್ನ ಜೀವವನ್ನು ಚಾಚಿ ಮುಗಿಲಿನಂಗ ಳಕೆ ಮುಟ್ಟಿಸು. ಮಂಜುಲವಾಗಿ ಹಾಡು. ನೀನು ಹಾಡುವ ಹಾಡು ಒಂದೇ ಒಂದಾಗಿ ದ್ದರೂ ಅದನ್ನು ಕೇಳಿ ಆ ದೇವರಾಯನು ಒಡನುಡಿಯಬೇಕು. ಬಿತ್ತಿ ಬೆಳೆಯುವು ದ್ದರೆ ಒಂದೇ ಒಂದು ಮುಕ್ಕಾಗಲೊಲ್ಲದೇಕೆ ಚಿಕ್ಕೆಗಳನೇ ಬಿತ್ತಿ ಬೆಳೆ" ಕಲ್ಪನೆಯು ಎದೆ ಯನೆಳೆಯುವಂತಹದು.

೮. ಕೊನೆಗೆ ಹಿಂದೆ ಹೇಳಿದ ಭಾವೋದ್ರೇಕದಿಂದ ತಣಿದ ಮನದವನಾದ ಕವಿಯು ತನ್ನ ಕನಸಿನಲ್ಲಿಯ ದೇವತೆಗೆನ್ನುವನು. "ಓ ಹಾಡೇ! ನಾನು ಶರಣನಾ ದರೂ ಹಾಡೇನೂ ಅಲ್ಲ. ಹಿಂದೆ ನೀನೆ ನನ್ನ ಹೃದಯದಲ್ಲಿ ನಿಂತು ಹಲವು ಹಾಡು ಳನ್ನು ಹಡೆದೆ. ಆಗ ನನ್ನ ನಾಲಗೆ ನಿನ್ನ ಸೂಲಗಿತ್ತಿಯಾಯಿತು ಇಷ್ಟೆ! ನಿನ್ನೊಲುಮೆ ದಿದ್ದರೆ ನನಗೆಲ್ಲಿಯದು ಹಾಡುವ ಯೋಗ್ಯತೆ!! ಎಂದು ನಿರಭಿಮಾನಿಯಾಗಿ ನುಡಿದಿ ವನು.

ಇದೀಗ ಕವಿತೆಯ ಸವಿ. ಸಕ್ಕರೆ ತಿಂದವನು ಸವಿಯನ್ನು ಅನುಭವಿಸಿರುವನು. ಆದರೆ ಆ ಸವಿಯನ್ನು ಬಾಯಿಂದ ಬಣ್ಣಿಸಿ ಹೇಳುವುದು ಸಾಧ್ಯವೇ?

—ಸವಿದ ಸವಿಗಾರ

# ಬುದ್ಧನೂ, ಬಸವನೂ.

( ಸಿಂಪೀ ಲಿಂಗನು ಬರೆದುದು )

ಎಲ್ಲ ಧರ್ಮಗಳ ತವರು ಮನೆಯು ನಮ್ಮ ಏಶಿಯಾ ಖಂಡವಷ್ಟೇ ? ಧರ್ಮಗಳೆಲ್ಲಾ ಇಲ್ಲಿಂದಲೆ ಹರಿಬಿದ್ದು, ಜಗತ್ತನೆಲ್ಲಾ ಪಸರಿಸಿ ಬಿಟ್ಟವೆ ! ಜಗತ್ತಿನ ಬಹು ಜನಗಳು, ಯಾವ ಧರ್ಮವನ್ನು ಧಾರಣ ಮಾಡಿರುವರೋ, ಆ (ಬೌದ್ಧ) ಧರ್ಮ ಸ್ಥಾಪಕನು, ಏಶಿಯಾ ಖಂಡದಲ್ಲಿ ಹುಟ್ಟಿದನೆಂದೂ, ಧರ್ಮಬೋಧೆಯನ್ನು ಮಾಡಿದನೆಂದೂ ಮತ್ತೊಮ್ಮೆ ಹೇಳಲು ಬೇಡ! ಬೌದ್ಧ ಧರ್ಮವು ಜಗತ್ತಿನಲ್ಲಿ ಹೇಗೆ ಹೆಚ್ಚೋ, ಹಾಗೆ ವೀರಶೈವ ಮತವೂ ಕರ್ನಾಟಕದಲ್ಲಿ ಹೆಚ್ಚು! ಈ ಮತವನ್ನು ಉಜ್ವಲಗೊಳಿಸಿದ ಮಹಾತ್ಮನೇ ಬಸವನು. ಬುದ್ಧನು, ಧರ್ಮಸ್ಥಾಪಕನು; ಬಸವನು ಪತಿತಪಾವನನು. ಧರ್ಮಸ್ಥಾಪಕರು, ಸಮಾಜೋನ್ನತಿಗೆ ಎಷ್ಟು ಕಾರಣರೋ, ಅದಕ್ಕೂ ಹೆಚ್ಚು ಹೊಣೆಗಾರರು ಪತಿತಪಾವನರು! ಬೌದ್ಧಧರ್ಮ ಪ್ರಾಚುರ್ಯದಲ್ಲಿ, ಹಿಂದು ಧರ್ಮವನ್ನು ಎತ್ತಿ ಹಿಡಿದ ಶಂಕರಾಚಾರ್ಯನೂ ಅಸಾಮಾನ್ಯನು.

ನದಿಯ ಮೂಲವನ್ನೂ, ಸಾಧುಗಳ ಮೂಲವನ್ನೂ ಎಣಿಸಬಾರದೆಂದು ಹೇಳುತ್ತಿರುವ ಹಿರಿಯರ ಮಾತಿನಲ್ಲಿ ಮರ್ಮವಿರಬೇಕಷ್ಟೇ ! ಮಹಾತ್ಮರ ಜನ್ಮವು, ಮಾಹಾತ್ಮ್ಯವನ್ನು ಕೊಡುವುದಿಲ್ಲ. ಬುದ್ಧನು ಅರಸು ಮಗನಾದರೆ, ಬಸವನು ಬ್ರಾಹ್ಮಣನ ಮಗನು! ಯಾವುದು ಮಿತಿಮೀರುವುದೋ ಅದರಲ್ಲಿ ಅನಾದರಣೆಯೂ, ಅಸಹ್ಯತೆಯೂ, ಹುಟ್ಟುವುದು ಸಹಜ ! ಅಂತಹ ಬಿಕ್ಕಟ್ಟಿನಲ್ಲಿ ಯಾರು ಧೈರ್ಯದಿಂದ ಮುಂದೆ ನಿಲ್ಲುವರೋ ಅವರಿಂದಲೇ ಜಗತ್ತಿನ ಏಳಿಗೆಯಾಗಹತ್ತುವದು. ಬುದ್ಧನ ಕಾಲದಲ್ಲಿ ಹಿಂಸೆಯೇ ಮೊದಲಾದವುಗಳು ತೋರಿಬಂದುವು. ಬಸವನ ಕಾಲದಲ್ಲಿ ಅನೇಕ ಆಡಂಬರಗಳು ಬೇಸರವನ್ನುಂಟು ಮಾಡಿದವು. ಬುದ್ಧನು, ಮುಪ್ಪು, ರೋಗ, ಹೆಣಗಳನ್ನು ಕಂಡು-ಕಂಡು ವೈರಾಗ್ಯವನ್ನು ತಂದುಕೊಂಡನು; ಬುದ್ಧನ ವೈರಾಗ್ಯಕ್ಕೆ ಈ ಮೂರು ಮೂರ್ತಿಗಳೇ ಕಾರಣ, ಬಸವನಾದರೋ, ಕರ್ಮಮಾರ್ಗದ ಮುಂಚೆಯ ಕಾಲದಲ್ಲಿ ಮನೆ ಬಿಡಬೇಕಾಯ್ತು.

ಪ್ರಪಂಚದಲ್ಲಿ ಇದ್ದರೇನೆ, ಇಲ್ಲವೆ ಬಿಟ್ಟರೇನೆ ಮಹಾಕಾರ್ಯಗಳು ಆಗುತ್ತವೆನ್ನುವುದು ತೀರ ತಪ್ಪು! ನಾಡು ಬಿಟ್ಟು ಕಾಡು ಸೇರಿದ ಕೈಲಾಗದವರು ಈಗ ಎಣಿಸಲಾಗದಷ್ಟು ಹೊರಡುವರು. ಅವರಿಂದ ಈಗ ಏನು ತಾನೇ ಮಹಾಕಾರ್ಯ ! ಬುದ್ಧನು ಮನೆಬಿಟ್ಟು ಜ್ಞಾನಿಯಾದನು. ಹೆಂಡಿರು ಮಕ್ಕಳೂ ಮಹಾಕಾರ್ಯಗಳಿಗೆ ವಿಘ್ನಕಾರಿಗಳಾಗುತ್ತಾರೆಂಬುದು, ಕೆಲ ಮಟ್ಟಿಗೆ ನಿಜವಾದರೂ-“ಕಂದ ಮೂಲಗಳನ್ನು ತಿಂದು,

ತಪಸ್ಸು ಮಾಡುವ ಸನ್ಯಾಸಿಗಿಂತಲೂ ಅಲಿಪ್ತನಾದ ಸಂಸಾರಿಯೇ ಶ್ರೇಷ್ಠನು." ಎಂಬ ಶ್ರೀ ವಿವೇಕಾನಂದರ ವಾಣಿಯಂತೆಯೂ ಆಗುತ್ತದೆ! ಬುದ್ಧನು ಮನೆಬಿಟ್ಟು ಜ್ಞಾನಿಯಾದಂತೆ, ಬಸವನು ರಾಜಕಾರಣವನ್ನು ಕೈಕೊಂಡು ಮತಪ್ರಸಾರದ ಕೆಲಸಕ್ಕೆ ಅಡ್ಡಿಯನ್ನು ತಂದುಕೊಂಡನು. ಮಂತ್ರಿತ್ವದಿಂದಲೇ ಬಸವನು ಇಷ್ಟು ಮತಪ್ರಸಾರಣೆ ಮಾಡಿದನೆಂಬುದು, ಸುಳ್ಳು ಮುದ್ದೆ. ಅಧಿಕಾರವು, ಮತಪ್ರಸಾರಕ್ಕೆ ಮುಖ್ಯವಾದುದಲ್ಲ. ಸಾತ್ವಿಕವಾದುದಲ್ಲ ! ಹಾಗಿದ್ದರೆ, ಬುದ್ಧನು ರಾಜನಾಗಿ ಬೌದ್ಧಮತವನ್ನು ಬೆಳೆಸುವ ಬುದ್ಧಿಯಿಲ್ಲದ ಅಬುದ್ಧನೇ ? ರಾಜಾಶ್ರಯವು ಪ್ರಸಾರಕ್ಕೆ ಸಹಾಯವಾಗುತ್ತದೆ. ಅಶೋಕ ಮಹಾರಾಜನ ಆಶ್ರಯದಲ್ಲಿ ಬೌದ್ಧ ಧರ್ಮವು ಬೆಳೆಯಲಿಲ್ಲವೇ ? ಬಸವನು ರಾಜಾಶ್ರಯನಾಗಿದ್ದರೂ, ಸಂಬಳ ತೆಗೆದುಕೊಂಡು ಹೆಗ್ಗಡೆತನವನ್ನು ಸಾಗಿಸುತ್ತಾ ಇದ್ದನು. ಬಿಜ್ಜಳರಾಯನ ಆಸರದಿಂದ ವೀರಶೈವ ಮತವು ಪ್ರಸಾರವಾಗುವದು ಶಕ್ಯವೇ ಇರಲಿಲ್ಲ. ಏಕೆಂದರೆ, ಬಿಜ್ಜಳನು ಜೈನಧರ್ಮಿಯು; ಬಸವನು ವೀರಶೈವನು. ಹೀಗೆ ಪರಸ್ಪರ ವಿರುದ್ಧ ಮತಾನುಯಾಯಿಗಳಾಗಿದ್ದರೂ, ಮೊದ ಮೊದಲು ಬಿಜ್ಜಳನು ಬಸವನ ಧರ್ಮಕಾರ್ಯದಲ್ಲಿ ಕೈಹಾಕಿದಂತಿಲ್ಲ. ಪರಧರ್ಮ ಸಹಿಷ್ಣುತೆ ಇದ್ದರೂ, ಸತ್ಯವೆಂದು ನಂಬುವದು, ಧರ್ಮವಷ್ಟೇ ? ಬಸವನಾದರೊ, ಲಿಂಗವಿಲ್ಲದವರನ್ನು ಭವಿಗಳೆಂದು ಬಳಿಕೆಯನ್ನ ಇಟ್ಟರಲಿಲ್ಲ! ಧರ್ಮ ಪ್ರಸಾರಕ್ಕೆ ಬಲ್ಮೆ ಜುಲ್ಮೆಗಳನ್ನೇನೂ ಮಾಡಲಿಲ್ಲ.

ವಾಙ್ಮಯ, ಶಿಕ್ಷಣ, ಸೀತಿ–ನಡೆವಳಿ, ಆಚಾರವಿಚಾರ ಮೊದಲಾದುವುಗಳಲ್ಲಿ ಯಾವ ಸಂಗತಿಯನ್ನೆ ತೆಗೆದುಕೊಳ್ಳಲಿ ! ಅವೆಲ್ಲಾ ಪುರುಷರಿಗೆ ಸಂಬಂಧಪಟ್ಟವೆಯೆ ಹೊರತು, ಸ್ತ್ರೀಯರನ್ನು ಎಣಿಕೆಯಲ್ಲೂ ಎಣಿಸಿಲ್ಲ ! 'ಸ್ತ್ರೀಯರೂ ಮನುಷ್ಯರೇ ? ಎಂಬುವ ಭಾವನೆಯೂ ಬಾರದ ಸಮಯದಲ್ಲಿ, ಬುದ್ಧನು ಭಿಕ್ಷುಗಳನ್ನಾಗಿ ಸ್ತ್ರೀಯರನ್ನೂ ಸೇರಿಸಿಕೊಂಡನು! ಅಕ್ಕ ನಾಗಮ್ಮ, ನೀಲಾಂಬೆಯೆ ಮೊದಲಾದ ಹೆಣ್ಮಕ್ಕಳ ಹೆಸರನ್ನು ಕೇಳಿದರೆ ವೀರಶೈವರಲ್ಲೂ ಸ್ತ್ರೀಯರಿಗೆ ಪುರುಷರಂತೆ, ಪ್ರಾಶಸ್ತ್ಯವಿದೆಯೆಂದು ಅನಿಸುವುದು ! ಹೀಗೆ ಪತಿತರೆಂದ ಸ್ತ್ರೀಯರನ್ನು ಪಾವನ ಮಾಡಿದವನು, ಪತಿತಪಾವನನಾದ ಬಸವನೇ ಅಲ್ಲವೇ ?

ಎಲ್ಲಿ ನೋಡಿದರೂ, ಕಂಡು ಬರುತ್ತಿರುವ ಮೂರ್ತಿ ಪೂಜೆಗೆ ಬೇಸತ್ತ ಮಹಮ್ಮದ ಪೈಗಂಬರರು 'ದೇವರು ಒಬ್ಬನೇ' ಎಂದು ಸಾರುವ ಮುಸಲ್ಮಾನೀ ಧರ್ಮವನ್ನು ಸ್ಥಾಪಿಸಿ, ಎಲ್ಲರ ಗುರಿಯನ್ನೂ ಒಂದರ ಕಡೆಗೇ ಎಳೆದಂತೆ ಬಸವನೂ, ಹನ್ನೆರಡು ದೇವರುಗಳನ್ನೆಲ್ಲಾ ಹಳ್ಳಾ ಕಾಣಿಸಿ, ಇಷ್ಟಲಿಂಗವೇ ದೇವರೆಂದೂ, ಬೇರೆ ದೇವತೆಗಳನ್ನು ಕಲ್ಪಿಸಿಕೊಳ್ಳಬಾರದೆಂದೂ ಹೇಳಿರುವ ಮತ ತತ್ತ್ವವನ್ನು ನೆನೆಪಿಗೆ ತಂದುಕೊಟ್ಟನು; ಸ್ಪಷ್ಟಮಾಡಿಕೊಟ್ಟನು ! ಬುದ್ಧನು, ಅನೇಕ ದೇವತೆಗಳ ದೇವಾಲಯಗಳನ್ನೆಲ್ಲಾ ವಿಹಾರಗಳನ್ನು ಮಾಡಿದನು,

ಆತನನ್ನು ಅರಿಯಲಿಕ್ಕೆ ಅನೇಕ ಹಾದಿಗಳು! ಒಬ್ಬನು ಜ್ಞಾನದಿಂದರಿತರೆ, ಇನ್ನೊಬ್ಬನು ಭಕ್ತಿಯಿಂದಲೂ, ಮತ್ತೊಬ್ಬನು ಹಟದಿಂದಲೂ, ಮಗದೊಬ್ಬನು ಬೇರೊಂದು ದಾರಿಯಿಂದಲೂ ಅರಿಯುತ್ತಾನೆ. ಜ್ಞಾನಿಯು, ಜ್ಞಾನದಿಂದ ಮಿಗಿಲಾದವನು; ಭಕ್ತನು ಭಕ್ತಿಯಿಂದ ಮಿಗಿಲಾದವನು. ಜ್ಞಾನಿಯು ಜ್ಞಾನದಿಂದ ಪರಿಪೂರ್ಣನಾದರೆ, ಭಕ್ತನು, ಭಕ್ತಿಯಿಂದ ಪರಿಪೂರ್ಣನು. ಇಬ್ಬರೂ ಪರಿಪೂರ್ಣರು ಇಬ್ಬರೂ ಶ್ರೇಷ್ಠರು. ಜ್ಞಾನಿಯೆ ಹೆಚ್ಚೆಂದಾಗಲಿ, ಭಕ್ತನೇ ಮೇಲಿನವನೆಂದಾಗಲಿ ಅನ್ನಲಿಕ್ಕೆ ಬರುವದೇ ಇಲ್ಲ. ಒಬ್ಬನು, ಗಣಿತವಿಷಯದಲ್ಲಿ ನಿಷ್ಣಾತನಿದ್ದರೆ, ಮತ್ತೊಬ್ಬನು ಇತಿಹಾಸವನ್ನು ಬಲ್ಲವನಾಗಿರಬೇಕು. ಬೇರೆ ಬೇರೆ ವಿಷಯಜ್ಞರನ್ನು "ಮೇಲು-ಕೀಳು" ಎಂದೆಣಿಸಲಿಕ್ಕೆ ಬರುವುದೇ ಇಲ್ಲ. ಕಲ್ಪಿಸಲಿಕ್ಕೂ ಆಗದು. ಹಾಗೆ ಭಕ್ತನೂ, ಜ್ಞಾನಿಯೂ! ಜ್ಞಾನಿಯು ಜ್ಞಾನ ಜ್ಯೋತಿಯಲ್ಲಿ ಆ ಅನಂತನ ರೂಪರೇಷೆಯನ್ನು ಕಂಡಿದ್ದರೆ, ಭಕ್ತನು ಎದೆಗರಗಿದ ತಿಳಿಯಲ್ಲಿ, ಆತನ ರೂಪಬಿಂಬವನ್ನು ಕಂಡಿರಬಹುದು. ಅಂತೂ, ಆತನ ಗುರುತು, ಇಬ್ಬರಿಗೂ ಉಂಟು. ಬುದ್ಧನು, ಜ್ಞಾನಿಯು! ಬಸವನು ಭಕ್ತನು!!

ಸತ್ಪಾತ್ರದಾನವು ಭೂಷಣಪ್ರದವಷ್ಟೇ ? ಸಿಕ್ಕಸಿಕ್ಕವರಿಗೆ ದಾನಸಿಗುತ್ತದೆಂದು, ಎಲ್ಲರೂ ಬೇಡುಗರೇ ಆಗುವದೆಂತು ?! ಮತ್ತೊಂದು ದೃಷ್ಟಿಯಿಂದ ಎಲ್ಲರೂ ಬೇಡುಗರೇ ! ಕೊಡುವ ಶಿವನೇನು ಬಡವನಲ್ಲ ! ಆದರೆ, ಪ್ರಾಪಂಚಿಕರು, ಹೀಗೆ ಲಕ್ಷಿಸದೆ ದಾನದಲ್ಲಿ , ಸತ್ಪಾತ್ರದಾನವೆಂದು ಸೀಮೆಯನ್ನು ಗೊತ್ತುಮಾಡಿಕೊಂಡಿದ್ದಾರೆ ! ಪರರಿಗೆ ಸಹಾಯವನ್ನೂ, ಉಪಕಾರವನ್ನೂ ಮಾಡುವುದರಲ್ಲಿ ತನ್ನನ್ನು ಸಹ ಸಮರ್ಪಣ ಮಾಡುವದು ಗೃಹಸ್ಥಾಶ್ರಮಿಯ ಧರ್ಮವು! ದಾನ ಸಿಗುವ ಹಾದಿಯಿಂದ ಕೆಲಸವಿಲ್ಲದೆ ತಿರುಗುವ ಹೊಟಗೇಡಿಗಳನ್ನು ರಕ್ಷಿಸುವುದು, ಧರ್ಮವೆನಿಸುವದಿಲ್ಲ ! ಅದು ಸಮಾಜವನ್ನು-ಸಂಪತ್ತನ್ನು ಸುಲಿಯುವ ಸುಡಿಗೆಯೆನ್ನಬಹುದು! "ಜಗತ್ತು, ಇನ್ನವರ ದಾನಕ್ಕಾಗಿ, ಅಡ್ಡಗಣಿಸಿ ನಿಲ್ಲುವದಿಲ್ಲ; ನಿಂತಿರುವದಿಲ್ಲ." ಎಂದು ವಿವೇಕಾನಂದರು ಹೇಳಿದ್ದು ನಿಜವಾದುದು! ಗೃಹಸ್ಥಾಶ್ರಮಿಗಳು ಅದರಲ್ಲೂ ವಿಶೇಷವಾಗಿ ವೈಶ್ಯರು ಉಳಿದ ಆಶ್ರಮದವರನ್ನು ಸಂರಕ್ಷಿಸುವದಲ್ಲದೆ, ಪೋಷಿಸುವದಲ್ಲದೆ ಬೇಡು-ಭಿಕಾರಿಗರಿಗೂ ಅನ್ನಹಾಕಿ ಸಲಹಿದರೆ ಬರುವುದೇನು? ಬುದ್ಧನು, ಭಿಕ್ಷುಗಳನ್ನು ಉಂಟುಮಾಡಿದ್ದೊಂದು ಆರ್ಥಿಕದೃಷ್ಟಿಯಿಂದ ಸಮಾಜನಷ್ಟವೆಂದೇ ಹೇಳಬಹುದು ! ಬಸವನು-"ಬೇಡಿಸಿಕೊಳ್ಳುವವ ಭಕ್ತನಲ್ಲ; ಬೇಡುವವ ಜಂಗಮನಲ್ಲ!!" ಎಂದು ಬೋಧಿಸಿದ್ದಾನೆ! ಅವನು ಕಾಯಕವೇ ಕೈಲಾಸವೆಂದುಕೊಂಡನು; ನಡೆದುಕೊಂಡನು. ಅವನು ಯಾವುದೊಂದು ಪರರಿಗೆ ಅಹಿತವಾಗದಂಥ, ಹಿಂಸೆಯುಲ್ಲದಂಥ ಕಾಯಕವನ್ನು ಕೈಕೊಳ್ಳಿರೆಂನುವವನು. ಸಾವಿರಾರು ಜನ ಜಂಗಮರು ಕಲ್ಯಾಣದಲ್ಲಿ ಉಣ್ಣುತ್ತಿದ್ದರೂ, ಒಬ್ಬೊಬ್ಬ ಭಕ್ತನು ಭಕ್ತಿಯಿಂದ ಅಷ್ಟಾವರಣಗಳಲ್ಲೊಂದಾದ ಜಂಗಮನನ್ನು ತಂದು

ಣಿಸುವದೇ ಅಸಂಖ್ಯಾಂಕವಾಗುತ್ತಿತ್ತು. ಜಂಗಮರೆಂದರೆ, ಭಿಕ್ಷುಗಳಂತೆ ಬೇಡಿತಿನ್ನು ವವರಲ್ಲ; ಭಕ್ತರ ಬಯಕೆಯಂತೆ ಸಲ್ಲಿಸುವವರು.

ಬುದ್ಧ-ಬಸವರಿಬ್ಬರೂ ನೀತಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟವರು! ಯಾರಾದರೂ ಯುಕ್ತವಾದ ಯುಕ್ತಿಯನ್ನು ಕಲ್ಪಿಸಿ ಹೇಳಬಹುದು; ಅತ್ಯದ್ಭುತವಾದ ನುಡಿಗಳನ್ನು ನುಡಿಯಬಹುದು; ಆದರೆ ಅದರಂತೆ ನಡೆಯದಿದ್ದರೆ ಎಲ್ಲವೂ ಬರೀ! ನುಡಿಯಂತೆ ನಡೆಯುವುದೊಂದು ಹೆಚ್ಚಿನವರ ಲಕ್ಷಣ; ಗುಣ! ಬಸವನು ಮಾತ್ರ ಹೀಗೆ ಮಾಡಿದನು! ನುಡಿಯಂತೆ ನಡೆಯುವದೊಂದು, ಬಸವನ ಜೀವನರಹಸ್ಯವೆನ್ನಬಹುದು.

ಬುದ್ಧನಾದರೋ, "ನೀನು ಬೋಧಕನಾಗಬೇಡ, ಆದರ್ಶ (ಉದಾಹರಣೆ) ಪುರುಷನಾಗು" ಎಂದು ಬೋಧಿಸಿದುದು, ಬಸವನ ಹಾದಿಯನ್ನೆ ತೋರಿಸುತ್ತದೆ. ಹೀಗೆ ಬುದ್ಧ-ಬಸವರ ಜೀವನ ಲಹರಿಯು. ಒಂದೇಯಾಗಿದ್ದರೂ, ಅವು ಬೇರೆ ಬೇರೆ ಪ್ರವಾಹಗಳಾಗಿ ಹರಿದಿವೆ. ಬುದ್ಧನ ಹಾದಿಯನ್ನೇ ಅನುಸರಿಸಿ ಅನುಕರಣ ಮಾದಿದುದು ಬಸವನಲ್ಲಿಲ್ಲ! ಆದರೆ ಬೇರೊಂದು ಹಾದಿಯಿಂದ-ವಿಚಾರದಿಂದ ಬುದ್ಧನು ಮುಟ್ಟಿದ ಗುರಿಯನ್ನೇ ಗೆಲ್ಲಲನುವಾದನು.

ಮತ್ತೊಂದು ಮಾತು:—ಬುದ್ಧ-ಬಸವರ ಜಯಂತಿಗಳು ವೈಶಾಖದಲ್ಲೇ ಬರುತ್ತವೆ.

( ಕಳೆದ "ಬಸವಜಯಂತಿ"ಗಾಗಿ ಬರೆದು ವಿಜಾಪುರದ ಗೆಳೆಯರಲ್ಲೋದಿದುದು. )

---

## ಶ್ರೀಗುರು ಅರವಿಂದ ಘೋಷರ

### ಪೂರ್ಣಯೋಗವೂ ಅದರ ಉದ್ದೇಶವೂ.

ನಾವು ಆಚರಿಸಬೇಕಾದ ಯೋಗವು ಕೇವಲ ನಮಗಾಗಿಯಲ್ಲ; ಆದರೆ ಇಡೀ ಮಾನವ ಸಂತತಿಗಾಗಿ. ಪೂರ್ಣಯೋಗದ ಸಾಧಕನು ಮೊದಲು ತಾನು ಮುಕ್ತನಾಗಿರುವದು ಅಗತ್ಯವಿದ್ದರೂ ತಾನು ಮುಕ್ತನಾಗುವದೇನು ಪೂರ್ಣಯೋಗದ ಉದ್ದೇಶವಲ್ಲ; ಆದರೆ ಇಡೀ ಮಾನವ ಸಂತತಿಯು ಮುಕ್ತಿಯೇ ಇದರ ಉದ್ದೇಶ. ನಮಗೆ ಕೈವಲ್ಯಾನಂದ ದೊರೆಯಬೇಕೆಂದಲ್ಲ-ಆದರೆ ನಾವು ಯಾವುದನ್ನು ಸತ್ಯಯುಗವೆಂದು ಕರೆಯುವೆವೊ, ಕ್ರೈಸ್ತರು ಯಾವುದಕ್ಕೆ ಸ್ವರ್ಗಸಾಮ್ರಾಜ್ಯ (Kingdom of heaven) ವೆಂದು ಕರೆಯುವರೋ ಅದನ್ನು-ಆ ದಿವ್ಯ ಆನಂದವನ್ನು (ಭಗೀರಥನು ಗಂಗೆಯನ್ನು ಇಳೆಗೆ ತಂದಂತೆ ) ಈ ಭೂಮಿಯಲ್ಲಿ ಅವತರಿಸಹಚ್ಚಬೇಕೆಂದು ಪೂರ್ಣಯೋಗವು ಬೇಕು. ತನ್ನಿಷ್ಟಕ್ಕೆ ತನಗೆ ಮೋಕ್ಷದ ಅಗತ್ಯವೇನೂ ಇಲ್ಲ; ಯಾಕಂದರೆ ಆತ್ಮವು

ತಾನು ನಿತ್ಯಮುಕ್ತನು; ಮತ್ತು ಬಂಧನವೆಂಬುದು ಭ್ರಾಂತಿಯಲ್ಲದೆ ಬೇರೊಂದಿಲ್ಲ. ನಿಜವಾಗಿ ನಾವು ಬಂಧನಕ್ಕೊಳಗಾದವರಲ್ಲ. ದೇವರ ಲೀಲಾವಿನೋದಕ್ಕಾಗಿ ಬಂಧನ ಕ್ಕೊಳಗಾದ ಆಟವನ್ನು ಆಡುತ್ತಿರುವೆವು. ದೇವರ ಚಿತ್ತಕ್ಕೆ ಬಂದಕೂಡಲೇ ನಾವು ಬಿಡುಗಡೆಯಾಗುವೆವು. ಯಾಕಂದರೆ, ಆ ನಮ್ಮ ಪರಮಾತ್ಮನೇ ಆಟಹೂಡಿದ ಮಾಟ ಗಾರ. ಅವನ ಕೃಪೆಯಿಲ್ಲದೆ, ಅವನ ಅಪ್ಪಣೆಯಿಲ್ಲದೆ, ಯಾವ ಜೀವಕ್ಕೂ ಅವನ ಈ ಲೀಲಾವಿನೋದವನ್ನು ಬಿಟ್ಟು ಹೋಗಲು ಬರದು. ಭೋಗ ಮತ್ತು ವೈರಾಗ್ಯ, ಸುಖ ಮತ್ತು ದುಃಖ, ಆನಂದ ಮತ್ತು ಶೋಕ, ಈ ಮೊದಲಾದ ದ್ವಂದ್ವಗಳ ಭೋಗವನ್ನೂ ಅಜ್ಞಾನದ ಭೋಗವನ್ನೂ ಎಷ್ಟೋಸಲ ಆ ದೇವನ ಚಿತ್ತಕ್ಕೆ ಬಂದಿರುವದರಿಂದಲೇ ನಮ್ಮ ಮನದ ಮುಖವಾಗಿ ನಾವು ಪಡೆಯುವೆವು. ಯುಗಯುಗಾಂತರಗಳಲ್ಲಿಯೂ ಎಷ್ಟೋ ದೇಶಗಳಲ್ಲಿ, ಈ ಲೀಲಾವಿನೋದಿಯು ಈ ಭೋಗದ ಆಟವನ್ನು ಆಡೇ ಆಡು ವನು; ಆಡೇ ಆಡುವನು. ಅವನಿಗೆ ಅದರ ಬೇಸರವೇ ಇಲ್ಲ. ಯೋಗದಾಟವನ್ನು ಹೂಡುವದು, ಅವನ ಕನಸುಮನಸಿನಲ್ಲಿಯೂ ಬರುವಂತೆ ತೋರುವದಿಲ್ಲ. ಇದೇನು ಅಂಥ ಪಾಪವಲ್ಲ; ಇದನ್ನು ಹಳಿಯಬೇಕಾಗಿಯೂ ಇಲ್ಲ; ಇದರಿಂದ ಹಿಂಜರಿಯಬೇಕಾ ಗಿಯೂ ಇಲ್ಲ; ಇದು ದೇವನ ಲೀಲೆ. ತಾನು ಮುಕ್ತನೆಂಬುದನ್ನು ಅರಿತುಕೊಂಡು, ಲೀಲಾತತ್ವವನ್ನು ತಿಳಿದುಕೊಂಡು, "ಆಟದ ಬಗೆಯನ್ನು ಬದಲಿಸಬೇಕು" ಎಂದು ದೇವನಾಜ್ಞೆಯಾಗುವವರೆಗೂ, ಅವನು ಹೂಡಿದ ಆಟದಲ್ಲಿ ಬೆರೆತುಕೊಂಡವನೇ ಜಾಣನು.

ದೇವನು ಇಂದು ಹಾಗೆ ಆಜ್ಞಾಪಿಸಿರುವನು. ದೇವನು ಯಾವಾಗಲೂ ತನ ಗಾಗಿ ಒಂದು ದೇಶವನ್ನು ಮೀಸಲಾಗಿಟ್ಟುಕೊಳ್ಳುವನು. ಅಲ್ಲಿ ಅವನ ದಿವ್ಯಜ್ಞಾನ ವನ್ನು ಅನೇಕಾನೇಕ ಸಂಕಟಪರಂಪರೆಗಳೊಳಗಿಂದ ಕೆಲವರಾಗಲಿ ಹಲವರಾಗಲಿ ನಿರಂತರವಾಗಿ ಕಾದಿಡುವರು. ಈಗ, ಈ ಸದ್ಯದ ಚತುರ್ಯುಗದಲ್ಲಿಯಂತೂ ಅಂಥ ಆ ದೇಶವು **ಭರತಖಂಡವೇ** ಆಗಿದೆ. ಅಜ್ಞಾನದ, ದ್ವಂದ್ವಗಳ, ಲೋಭಮೋಹಗಳ, ರಾಗದ್ವೇಷಾದಿಗಳ, ಕೋಪ ಮತ್ತು ಪಾಪಗಳ-ಅಂತೂ-ಏನು-ತಾಮಸಿಕ ಮತ್ತು ರಾಜ ಸಿಕಸುಖಗಳ ಪೂರ್ಣೋಪಭೋಗವನ್ನು ಪಡೆಯಬೇಕೆಂದು, ಯಾವ ಕಾಲಕ್ಕೆ ಆ ಲೀಲಾವಿನೋದಿಯು ಚಿತ್ತದಲ್ಲಿ ಬರುವದೋ, ಆ ಆ ಕಾಲಕ್ಕೆ ಅವನು ಈ ಭರತಖಂಡ ದಲ್ಲಿಯ ಜ್ಞಾನವನ್ನು ತಗ್ಗಿಸಿ, ಅದನ್ನು ದೌರ್ಬಲ್ಯದಲ್ಲಿಯೂ ದುಃಸ್ಥಿತಿಯಲ್ಲಿಯೂ ನೂಕಿಬಿಡುವನು. ಯಾಕಂದರೆ, ಭರತಖಂಡವು ತನ್ನ ಈ ಬಗೆಯ ಲೀಲಾವಿನೋದದಲ್ಲಿ ಅಡ್ಡಬರಬಾರದೆಂದು, ಮತ್ತು, ಈ ಹುಡಿಯೊಳಗಿನ ಹುಡುಗರಾಟವನ್ನು ಬಿಟ್ಟುಕೊಟ್ಟು, ನರನೊಳಗಿನ **ನಾರಾಯಣನು** ಮತ್ತೆ ವೀರ್ಯವಂತನೂ ಜ್ಞಾನಿಯೂ ಆನಂ ದಿಯೂ ಆಗಿ ಆಡಬೇಕೆಂದು ಯಾವಕಾಲಕ್ಕೆ ಅವನ ಚಿತ್ತಕ್ಕೆ ಬರುವದೋ ಆ ಕಾಲಕ್ಕೆ ಅವನು ಮತ್ತೆ ತನ್ನ ದಿವ್ಯಜ್ಞಾನವನ್ನು ಭರತಖಂಡದಲ್ಲಿ ಸುರಿಸುವನು. ಆ ಮೇಲೆ

ಭರತಖಂಡವು ತನ್ನ ಆ ದಿವ್ಯಜ್ಞಾನವನ್ನೂ ಅದರ ಫಲಗಳಾದ ಬುದ್ಧಿ, ವೀರ್ಯ, ಆನಂದಗಳನ್ನೂ ಇಡೀ ಜಗತ್ತಿಗೆ ನೀಡುವದು. ಜ್ಞಾನವು ಸಂಕೋಚದಿಂದ ತರಂಗ ತರಂಗವಾಗಿ ಪ್ರವಹಿಸುವ ಕಾಲಕ್ಕೆ, ಭರತಖಂಡದೊಳಗಿನ ಯೋಗಿಗಳು ಸಂಸಾರದಲ್ಲಿ ವಿರಕ್ತಿಯುಳ್ಳವರಾಗಿ, ತಮ್ಮ ಮುಕ್ತಿ–ಆನಂದಗಳಿಗಾಗಿಯೇ ಆಗಲಿ ತಮ್ಮ ಕೆಲ ಶಿಷ್ಯರ ಮುಕ್ತಿಗಾಗಿಯೇ ಆಗಲಿ ಯೋಗವನ್ನಾಚರಿಸುವರು. ಆದರೆ ಅದೇ ಜ್ಞಾನವು ಸಂಕೋಚವಿಲ್ಲದೆ ತೆರೆತೆರೆಯಾಗಿ ಉಕ್ಕಿ ಬರುವಾಗ, ಭರತಖಂಡದ ಆತ್ಮವು ಉಬ್ಬಿನಿಂದ ಮುಂದೆ ಸಾಗುತ್ತಿರುವಾಗ, ಅದೇ ಯೋಗಿಗಳು ಈ ಪ್ರಪಂಚದಲ್ಲಿ ಸೇರಿ ಈ ಇಡೀ ಪ್ರಪಂಚಕ್ಕಾಗಿಯೇ ಯೋಗವನ್ನಾಚರಿಸುವರು. ಜನಕ, ಅಜಾತಶತ್ರು, ಕಾರ್ತವೀರ್ಯರಂಥ ರಾಜರ್ಷಿಗಳೂ, ರಾಜಯೋಗಿಗಳೂ ಮತ್ತೆ ಜಗದ ಪಟ್ಟವನ್ನೇರಿ ಖಂಡ ಖಂಡಾಂತರಗಳನ್ನು ಆಳತೊಡಗುವರು.

ದೇವನ ಲೀಲೆಯು ಸತ್ಯಯುಗದಿಂದ ಕಲಿಯುಗಕ್ಕೂ, ಕಲಿಯುಗದಿಂದ ಸತ್ಯಯುಗಕ್ಕೂ ಅಂದರೆ, ಚೊಕ್ಕ ಬಂಗಾರದಂಥ ಕಾಲದಿಂದ ಕಗ್ಗ ಕಬ್ಬಿಣದಂಥ ಕಾಲಕ್ಕೂ, ಕಗ್ಗ ಕಬ್ಬಿಣದಂಥ ಕಾಲದಿಂದ ಚೊಕ್ಕ ಭಂಗಾರದಂಥ ಕಾಲಕ್ಕೂ ಯಾವಾಗಲೂ ಹೋಗಿ ಬರುತ್ತಿರುವದು. ಪೌರಾಣಿಕ ಪದ್ಧತಿಯನ್ನು ಬಿಟ್ಟು ರೂಢಿಯ ಮಾತಿನಲ್ಲಿ ಹೇಳುವದೆಂದರೆ, ಯಾವಕಾಲಕ್ಕೆ, ಸಾಕಷ್ಟು ಹೊಂದುಗೂಡುವಿಕೆಯೂ ಸ್ಥೈರ್ಯವೂ ಜಗದಲ್ಲುಂಟಾಗಿ, ಜನರಿಗೆ ಕೆಲಕಾಲದ ಮಟ್ಟಿಗಾದರೂ, ಕೆಲವೊಂದು ರೀತಿಯಲ್ಲಿ ತಮ್ಮ ಪೂರ್ಣತೆಯ ಅನುಭವವು ದೊರೆಯುವುದೋ ಅದೇ ಕಾಲವು **ಸತ್ಯಯುಗವು.** ಸ್ಥಿರತೆಯನ್ನು ಹೊಂದಿದ ಶುದ್ಧಸತ್ವಾವಸ್ಥೆಯಲ್ಲಿ, ಸ್ವಾಭಾವಿಕವಾಗಿ ಹೊಂದಿಕೆ ಗೂಡಿಸುವ ( Harmony ) ಗುಣವೇ ಇದೆ. ಆದರೆ ಅದೇ ಬರಬರುತ್ತ ಕಾಲಾಂತರದಲ್ಲಿ ಸಡಿಲಾಗಲು, ವ್ಯಕ್ತಿಯೂ ಸಮಾಜವೂ ಕೂಡಿಯೇ ತಮ್ಮ ಸಂಕಲ್ಪ ಬಲದಿಂದ ಅದನ್ನು ಎತ್ತಿ ಹಿಡಿಯುವರು; ಆ ಕಾಲವೇ **ತ್ರೇತಾಯುಗವು.** ಮುಂದೆ ಅದರಲ್ಲಿ ಹೆಚ್ಚು ಸಡಿಲುಂಟಾಗಲು ಬೌದ್ಧಿಕಬಂಧನಗಳಿಂದಲೂ, ಸರ್ವಸಮ್ಮತವಾದ ಶಾಸ್ತ್ರದಿಂದಲೂ ಹೊಂದಿಕೆ ಗೂಡಿಸುವರು; ಆ ಕಾಲವೇ **ದ್ವಾಪರಯುಗವು.** ಆ ಮೇಲೆ **ಕಲಿಯುಗದಲ್ಲಿ,** ಸ್ಥೈರ್ಯವು ಇಲ್ಲದಾಗಿ, ಸತ್ವಾವಸ್ಥೆಯಡಗಿ, ಹೊಂದಿಕೆ ಹಾಳಾಗಿ, ಎಲ್ಲಿ ನೋಡಿದಲ್ಲಿ ಒಡಕೇ ಒಡಕು ಉಂಟಾಗುವದು. ಆದರೆ **ಕಲಿಯುಗವೆಂದ**ಷ್ಟಕ್ಕೆ ಅದು ಕೇವಲ ಕೆಟ್ಟಕಾಲವೆಂದಂತಲ್ಲ. ಯಾಕಂದರೆ, ಮತ್ತೆ ಮುಂದೆ ಬರುವ ಸತ್ಯಯುಗದ ಸಾಮಗ್ರಿಯನ್ನು ಸಿದ್ಧಪಡಿಸಿಕೊಳ್ಳತಕ್ಕಕಾಲವೇ ಇದು. ಮುಂದೆ ಬರತಕ್ಕ ಸತ್ಯಯುಗವೂ ಹಿಂದಿನದಕ್ಕಿಂತ ಹೆಚ್ಚಿನದು. ಈಗ ಸದ್ಯಕ್ಕೆ ಒಂದು ಕಲಿಯುಗವು ಹೋಗಿ ಒಂದು ಸತ್ಯಯುಗವು ಬರಲಿದೆ. ಹೋದ ಕಲಿಯುಗದ ಹಾವಳಿಯು ಕಣ್ಣೆದಿರೇ ಇದೆ. ಪೂರ್ವದ ಸಂಸ್ಕಾರಗಳೂ ಪೂರ್ವದ ಜ್ಞಾನವೂ ಎಲ್ಲ ಮಾಯವಾಗಿವೆ. ವೇದಗಳೂ ಉಪನಿಷತ್ತುಗಳೂ ಪುರಾಣೇತಿಹಾಸಗಳೂ ಸ್ಮೃತಿಗಳೂ

ಹಿಂದಿನ ಸತ್ಯಯುಗದ ಅವಶಿಷ್ಟಸ್ಮಾರಕಗಳಾಗಿ ಉಳಿದಿವೆ. ಈಗಿದ್ದ ಸ್ಥಿತಿಯೊಳಗಿಂದ ಹೊಸದೊಂದು ಹೊಂದಿಕೆಗೂಡಿರುವ ಬಾಳ್ವೆಯ ರೀತಿಯನ್ನೂ ಮತ್ತೊಂದು ಪೂರ್ಣತ್ವದ ಮೆಟ್ಟನ್ನೂ, ಸ್ಥಾಪಿಸಲು–ಮುಟ್ಟಲು ಉಚಿತವಾದ ಕಾಲವು ಹತ್ತರಕ್ಕೆ ಬಂದಿದೆ. ಅಂತೆಯೆ ಎತ್ತ ನೋಡಿದತ್ತ ಸಾಮಾಜಿಕ, ಬೌದ್ಧಿಕ, ನೈತಿಕ, ಧಾರ್ಮಿಕಸುಧಾರಣೆಯ ವಿಚಾರಗಳ ಸುಳಿದಾಟವು ಕಂಡುಬರುತ್ತದೆ. ಕೆಳಗಿನಿಂದ ಮೇಲಿನವರಿಗೆ ಎಲ್ಲರೂ ತಮ್ಮ ತಮ್ಮ ಉನ್ನತಿಯನ್ನು ಮಾಡಿಕೊಳ್ಳಲು ಯಥಾಶಕ್ತಿ, ಯಥಾಮತಿ ಪ್ರಯತ್ನಿಸತೊಡಗಿದ್ದಾರೆ. ಆದರೆ ಹೊಂದಿಕೆಗೂಡಿಸುವ ಹಾದಿಯು ಇನ್ನೂ ಯಾರಿಗೂ ಕಂಡಿಲ್ಲ. ಅಂತೆಯೆ ಎಲ್ಲೆಲ್ಲಿಯೂ ಅಸಮಾಧಾನ.

ಈ ಹೊಂದುಗೂಡುವಿಕೆಯ ಬಾಳ್ವೆಯನ್ನು ಈ ಸಮಂಜಸವಾದ ಸಮನ್ವಯುವನ್ನು ಭರತಖಂಡವೇ ಗೊತ್ತುಹಚ್ಚಬಲ್ಲದು. ಬೇರೆಯವರಿಗೆ ಇದು ಅಸಾಧ್ಯ. ಯಾಕಂದರೆ, ಯಾವವಾದರು ಕೆಲವು ಗುಣಗಳನ್ನು ಹೆಚ್ಚು ಮಾಡಿಕೊಂಡು ಬೇರೆ ಯಾವವಾದರು ಅವಗುಣಗಳನ್ನು ಕಡಿಮೆಮಾಡಿಕೊಂಡು, ಹಾಗೆಹೀಗೆ–ಹೇಗಾದರೂ ಸರಿಗೊಳಿಸಿದರೆ ಈ ಸಮಂಜಸವಾದ ಸಮನ್ವಯುವನ್ನಾಗಲಿ, ಇಡಿಗೆ ಇಡಿ ಬಾಳ್ವೆಯ ಹೊಂದುಗೂಡಿಕೆಯ ಹಾದಿಯನ್ನಾಗಲಿ ಹುಡುಕಿದಂತಾಗದು. ಇದಕ್ಕೆ ಸರಿಗೊಳಿಸುವುದು ಸಾಲದು; ಇಲ್ಲಿ ಬೇಕು ಬದಲು–ಪಲ್ಲಟ. ಮನುಷ್ಯನ ಈಗಿನ ಸ್ವಭಾವವೇ ಮಾರ್ಪಟ್ಟರೆ ಈ ಸಮನ್ವಯುಕ್ಕೆ ಸಾಧನವಾಗುವದು. ಮತ್ತು ಇಂಥ ಈ ಮಾರ್ಪಾಟು–ಪಲ್ಲಟವು ಯೋಗದಿಂದಲ್ಲದೆ ಸಾಧ್ಯವಿಲ್ಲ. ಸಂಗೀತದಲ್ಲಿ ಸ್ವರಕ್ಕೆ ಸರವು ಹೊಂದುಗೂಡಿ ಲೀನವಾಗಿ ಕೇಳುವವರನ್ನು ಹೇಗೆ ತಲ್ಲೀನರನ್ನಾಗಿ ಮಾಡುವವೋ ಹಾಗೆ ತಲ್ಲೀನತೆಯನುಂಟುಮಾಡುವ ಸ್ವರಮೇಳನದಂಥ ಸಾಮರ್ಥ್ಯವೇ ಈಗಿನ ಸಂಸಾರದಲ್ಲಿಯೂ ಸಂಸಾರಿಕರಲ್ಲಿಯೂ ಇಲ್ಲದಾಗಿದೆ. ಈಗಿನ ಸಂಸಾರವೊಂದು ಅಪಸ್ವರದ ಮೊಟ್ಟೆ; ಅದಕ್ಕಾಗಿ ಮನುಷ್ಯನ ಮನವೂ ಅಂತಃಕರಣವೂ ಕೃತಿಯೂ ಬದಲಾಗಬೇಕು, ಈ ಬದಲು, ಈ ಪಲ್ಲಟವು, ರಾಜಕಿಯ–ಸಾಮಾಜಿಕಸಂಸ್ಥೆಗಳ ಮೂಲಕವಾಗಿಯಾಗಲಿ ಹೊಸ ಮತ ತತ್ವಜ್ಞಾನದಿಂದಾಗಲಿ ಆಗತಕ್ಕುದಲ್ಲ. ಯಾಕಂದರೆ ಈ ಬಾಹ್ಯೋಪಚಾರಗಳಿಂದ ನಮಗೆ ನಿಜವಾಗಿ ಬೇಕಾದ ಪಲ್ಲಟವಾಗದು. ಹಾಗಾದರೆ, ನಮ್ಮ ಅಂತರಾತ್ಮನನ್ನೂ ಈ ಜಗವನ್ನೂ ಸಾಕ್ಷಾತ್ಕರಿಸಿಕೊಂಡು ಆ ಅಪರೋಕ್ಷಜ್ಞಾನದ ಬಲದಿಂದ ಈಗಿನ ಜೀವಿತಕ್ಕೆ ನೂತನರೂಪವನ್ನು ಕೊಡಬೇಕು. ಅದೇ ನಮಗೆ ಬೇಕಾದ ಮಾರ್ಪಾಟು–ಪಲ್ಲಟ.

ಈ ಮಾರ್ಪಾಟನ್ನು **ಪೂರ್ಣಯೋಗದಿಂದಲೇ** ಸಾಧಿಸಿಕೊಳ್ಳಬಹುದು. ಹಾಗಾದರೆ ಈ 'ಪೂರ್ಣಯೋಗ' ವೆಂದರೇನು ? ಪೂರ್ಣಯೋಗವು ಬೇರೆಯೋಗಗಳಂತೆ ಯಾವದಾದರೂ ಉದ್ದಿಷ್ಟಕ್ಕೆ ತನ್ನನ್ನು ಕಟ್ಟಿಕೊಂಡಿಲ್ಲ. ಮುಕ್ತಿಲಾಭವೂ ಕೈವಲ್ಯಾನಂದವೂ ಕೂಡ ಅದರ ಗುರಿಯಲ್ಲ. ಹಾಗಾದರೆ ಉದ್ದಿಷ್ಟವಿಲ್ಲದ್ದು ಇದೆಂಥ

ಯೋಗ ? ಎಂದು ಕೇಳಿದರೆ–ಹಾಗಲ್ಲ ಇದಕ್ಕೆ ತನ್ನದೆಂದು ಪ್ರತ್ಯೇಕವಾದ ಉದ್ದಿಷ್ಟ ವಿಲ್ಲ; ದೇವನ ಲೀಲಾಸಂಕಲ್ಪವನ್ನು ಸಫಲಗೊಳಿಸಲನುವಾಗುವದೇ ಇದರ ಉದ್ದಿಷ್ಟ ಎಂದು ಹೇಳಬಹುದು. ಅವನ ಉದ್ದಿಷ್ಟವೇ ಇದರ ಉದ್ದಿಷ್ಟ. **ನರನಲ್ಲಿಯು ನಾರಾಯಣನು ಉದಯಿಸಬೇಕು; ಮಾನವ ಜಾತಿಯು ದೇವಜಾತಿಯಾಗ ಬೇಕು**, ಇದೇ ಇದರ ಉದ್ದಿಷ್ಟ. ಈ ಉದ್ದಿಷ್ಟಸಾಧನೆಗೆ ಹಠಯೋಗ–ರಾಜಯೋಗ ಗಳು ಸಾಲವು; ಭಕ್ತಿ–ಜ್ಞಾನ–ಕರ್ಮ ಈ ಯೋಗತ್ರಯಗಳಿಂದಲೂ ಕಾರ್ಯವಾ ಗದು. ಇದಕ್ಕಾಗಿ ಅದಕ್ಕೂ ಮೇಲಿನ ಮೆಟ್ಟಲಿನ **ಅಧ್ಯಾತ್ಮಯೋಗದ** ಆಧಾ ರವು ಬೇಕು. ಹಾಗಾದರೆ **ಅಧ್ಯಾತ್ಮಯೋಗದ** ತತ್ವವಾದರೂ ಏನು ? ನಮಗೆ ಕಾಣುವ ಕಾಣದ ಎಲ್ಲ ವಸ್ತುಗಳೂ ಅಂದರೆ ನಾವೂ ಬೇರೆಯವರೂ ವಸ್ತುಗಳೂ ಸಂ ಗತಿಗಳೂ ದೇವತೆಗಳೂ ದಾನವರೂ ಯಕ್ಷರೂ ಕಿನ್ನರರೂ-ಅಂತೂ ನಮಗೆ ತಿಳಿಯುವ ಹೊಳೆಯುವ ಎಲ್ಲವುಗಳೂ ಒಂದೇ ಒಂದು ಪರಬ್ರಹ್ಮವೆಂಬ ಆತ್ಮಾನುಭವದ ಜ್ಞಾನ ವಾಗಬೇಕು. ವೃತ್ತಿಯಲ್ಲಿಯೂ ಕೃತಿಯಲ್ಲಿಯೂ ಪರಾತ್ಪರಪುರುಷನಿಗೆ ನಿಃಶೇಷ ವಾಗಿ ಕೇವಲ ಶರಣರಾಗಿರಬೇಕು.

[ಮುಂದೆಸಾಗುವದು.]

**( ಶ್ರೀಗುರು ಅರವಿಂದರ ಜನ್ಮೋತ್ಸವಕ್ಕಾಗಿ )**

---

## ಒಪ್ಪಿಗೆ ಮತ್ತು ವಿಮರ್ಶೆ

೧ **ಭಾವಗೀತೆ**:—ಆಯ್ಕೆಗಾರ, ಶ್ರೀ. ಕೃ. ಶ್ರೀ. ಬೆಟಗೇರಿ. ಪ್ರಕಾಶಕರು, ಕರ್ನಾಟಕ ಶಿಕ್ಷಣ ಸಮಿತಿ, ಧಾರವಾಡ. ಬೆಲೆ ೧–೦–೦

೨ **ಶಿವಾನುಭವ**:–ಸಂಚಿಕೆಗಳು ೨-೩ ಸಂಪಾದಕರು ಶ್ರೀ. ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪೂರ. ವಾರ್ಷಿಕ ಚಂದಾಹಣ ರೂ. ೩–೦–೦

೩ **ಕೊಡಗಿನ ರಾಮೇಶ್ವರದೇವಾಲಯ**:—ಬೆಲೆ ೧–೦–೦

**ಕನ್ನಡ ಉಪನಿಷತ್–ಪ್ರಕಾಶ. ಭಾಗ ೧.** (ಅನುವಾದಕರು:–ಶ್ರೀ ರಂಗರಾವ ದಿವಾಕರ M. A. LL. B. ಕರ್ಮವೀರ ಸಂಪಾದಕ; ಧಾರವಾಡ.)

ಉಪನಿಷತ್ತೆಂಬ ಕಾಮಧೇನುವನ್ನು ದೇವಲೋಕದಿಂದ, ಅಂದರೆ ದೇವಭಾಷೆ, ಸಂಸ್ಕೃತದೊಳಗಿಂದ, ಕನ್ನಡ ನಾಡಿಗೆ ತಂದು ಶ್ರೀರಂಗರಾಯರು ಬಹು ದೊಡ್ಡ ಕೆಲಸ ಮಾಡಿದರು. ಈ ಕಾಮಧೇನುವನ್ನೇ ಕರೆದು, ಗೌಳಿಗ ಶ್ರೀಕೃಷ್ಣನು ಅರ್ಜುನನ ಹೇಡಿ ತನವ ಹೋಗಲಾಡಿಸಿದನು; ಅರ್ಜುನನು ಗೀತೆಯು ಅಮೃತಮಯಕರ್ಣರಸಾಯನ ವನು ಕುಡಿದು, ಚೇತನಗೊಂಡು ಹೊಸ ಹುರುಪಿನಿಂದ, ಎದ್ದು, ಸದ್ದು ಹೊಡೆದು ನಿಂತನು. ನಷ್ಟಮೋಹನಾದನು. ಕರ್ತವ್ಯತತ್ಪರನಾಗಿ ಇಹಪರಶ್ರೇಯೋದಾಯಕ ವಾದ ದಾರಿಯನ್ನು ಹಿಡಿದನು. ಇಂಥ ಅಮೃತವನ್ನು ಕೊಡುವ ಆ ಉಪನಿಷದ್ಗೋವನು

ಕನ್ನಡಿಗರ ಮನೆಗೆ ತಂದಿರಲು, ಅದನ್ನು ಕರೆಯದೆ ಬಾಗಿಲಹಾಕಿಕೊಂಬ 'ಬೇಡ'ರು-ಬೇಡವೆಂಬುವವರು ಯಾರಾದರುಂಟೆ ?

ಈ ಕಾಮಧೇನುವನ್ನು ತರುವುದಕ್ಕಾಗಿ, ಶ್ರೀ ದಿವಾಕರರಿಗೆ ಸೆರೆಮನೆಯಲ್ಲಿ ಎರಡು ವರ್ಷಕ್ಕಿಂತ ಹೆಚ್ಚು ಕಾಲ ಕಾಯಬೇಕಾಯಿತು. ಆ-ಶ್ರಮ ಜೀವಿಗಳಾ ಕಠಿಣತಪದಲ್ಲಿ ರಬೇಕಾಯಿತು. ಹಗಲಿರುಳು ಕನ್ನಡಿಗರ ಏಳ್ಗೆಗಾಗಿಯೇ ಮೆಯ್ಮಾತುಮನಗಳಿಂದ ಸವೆಯುತ್ತಿರುವ ಶ್ರೀ ದಿವಾಕರರಿಗೆ ಇದು ಮತ್ತಿಷ್ಟು ಹೊಳಪುಗೊಡುವಂಥ ಮಾತು. ಷಂಢನೂ, ಹೇಡಿಯೂ, ಪುಕ್ಕನೂ, ಹೆದರಿ-ಬೆದರಿ-ಬಾಯ್ಬಿಟ್ಟು-ಬಳಲಿ-ತತ್ತಿರಿಸುತ್ತ ನೆಲಕ್ಕುರುಳಿದವನೂ ಆದ ಅರ್ಜುನನಿಗೆ ಯಾವ ಆವಿನ ದಿವ್ಯ ಹಾಲು ಹೊಸ ಜೀವಕಳೆ ತುಂಬಿ-ವೀರನೆಂದು-ಶೂರನೆಂದು-ನರವೀರನೆಂದು, ತ್ರಿಭುವನಕೀರ್ತಿಯನ್ನು ಮಾಡಿತೋ ಆ ಹಸುವಿನ ಹಾಲೇ ಇಂದು ಕುಕ್ಕರಿಸಿ ನೆಲಹಿಡಿದಿರುವ ಕನ್ನಡಿಗರಿಗೂ ಕಲಿಗಳೆಂದು-ಕಡುಗಲಿಗಳೆಂದು-ಬಂಟರೆಂದು-ಬಲ್ಲಾಳರೆಂದು-ಗತಕೀರ್ತಿಯನ್ನು ಮರಳಿ ದೊರಕಿಸುವ ಗಂಡುಗಲಿಗಳನ್ನು ಮಾಡದಿರುವದೇ? ಉಪನಿಷತ್ತಿನಲ್ಲಿ ಅಂಥ ಮಂತ್ರ ಶಕ್ತಿಯಿದೆಯೆಂದು ಪೂರ್ವ-ಪಶ್ಚಿಮದ ಪಂಡಿತರು ಬಾಯಾರೆ ಹೇಳಿದ್ದಾರೆ. ಅನುಭಾವಿಗಳೂ ಹಾಗೆ ಸಾರುತ್ತಿದ್ದಾರೆ. ಅದುಕಾರಣ ಕನ್ನಡಿಗರು ಮನೆಗೆ ಬಂದ ಈ ಹಸುವನ್ನು ಕರೆಯದೆ ಬಿಡಬಾರದು; ವೀರ್ಯತೇಜೋಬಲದಾಯಕವಾದ ಈ ಪಾಲ್ಗುಡಿಯದೆ ಇರಬಾರದು.

ಶ್ರೀ ರಂಗರಾಯರು ಉಪನಿಷತ್ತುಗಳನ್ನು ಕನ್ನಡಿಸಿ ಕನ್ನಡಿಗರಿಗೆ ತಾವು ಯಾರೆಂದು ನೋಡಿಕೊಳ್ಳಲಿಕ್ಕೆ ಅವಕಾಶಮಾಡಿಕೊಟ್ಟರು. ಬೇನೆಗೆ ತಕ್ಕಮದ್ದು. ಅಂಥ ಇಂಥ ಪುಸ್ತಕಗಳ ರೂಪಾಂತರಗಳಿಗೆ ಕೈಹಾಕದೆ ಉಪನಿಷತ್ತುಗಳನ್ನೇ ಆರಿಸಿದ್ದು ಒಳ್ಳೆಯದಾಯ್ತು. ಶ್ರೀ ದಿವಾಕರರು ಸೆರೆಮನೆಗೆ ಹೋದರೂ ಕನ್ನಡಿಗರ ಸೇವೆಯನ್ನು ಅಲ್ಲಿಯೂ ನಿಲ್ಲಿಸಲಿಲ್ಲ; ಉಪನಿಷತ್-ಪ್ರಕಾಶವನ್ನು ಕೊಟ್ಟರು. ಕರ್ನಾಟಕದಲ್ಲಿ ಸೆರೆಮನೆಗೆ ಹೋದವರಲ್ಲಿ ಹೀಗೆ ಮಾಡಿದವರೆಷ್ಟು ಜನ? ಒಂದು ಕೈ ಬೆರಳಿನ ಮೇಲೆ ಎಣಿಸುವಷ್ಟೂ ಸಿಕ್ಕುವದಿಲ್ಲ!

ಸದ್ಯಕ್ಕೆ ಪ್ರಕಟವಾಗಿರುವ ಉಪನಿಷತ್ಪ್ರಕಾಶದ ಮೊದಲನೆಯ ಭಾಗದಲ್ಲಿ ಭಾಷೆಯ-ಮುದ್ರಣದ-ದೃಷ್ಟಿಯಿಂದ, ಇನ್ನೂ ಕುಂದುಕೊರತೆಗಳುಳಿದಿವೆ. ಶ್ರೀ ದಿವಾಕರರಿಗೆ ನೂರಾರು ಕೆಲಸಗಳು. ಬಡತನದ ಮೂಲಕ, ಹತ್ತು ಮಂದಿಯಿಂದ ಒಂದೊಂದುಕೆಲಸ ಮಾಡಿಸಿಕೊಂಬುದೂ ಅಶಕ್ಯ. ಅದರಿಂದ ಅಚ್ಚಿನ ತಪ್ಪುಗಳಾಗಲಿ, ಕೆಲ ವಾಕ್ಯಗಳು ಭಾಷಾಂತರದಲ್ಲಿ ಹಿಂದುಮುಂದಾಗಲಿ, ಆಗಿದ್ದರೆ ಓದುಗರು ಸೈರಿಸದಿರರು. ಪುನರ್ಮುದ್ರಣದ ಕಾಲಕ್ಕೆ ಈ ತಪ್ಪುಗಳು ಉಳಿಯುಲಿಕ್ಕಿಲ್ಲೆಂದು ನಮ್ಮ ವಿಶ್ವಾಸವು.

ಆರ್ಯತತ್ವಜ್ಞಾನದ ಅಡಿಗಲ್ಲು ಉಪನಿಷತ್ತುಗಳು. ಅವುಗಳ ಅನುವಾದಕರು ನುಡಿಯಂತೆ ನಡೆಯುಳ್ಳ ಶ್ರೀ ರಂಗರಾಯರು. ಇಷ್ಟೇ ಮಾತುಗಳು, ಈ ಪುಸ್ತಕವನ್ನು

ಪ್ರತಿಯೊಬ್ಬ ಕನ್ನಡಿಗನೂ ಹತ್ತರಿಟ್ಟು ಓದಿ, ಹಾಗೆ ನಡೆಯಲಾರಂಭಿಸಬೇಕೆಂದು ಆಗ್ರಹದಿಂದ ಹೇಳಲಿಕ್ಕೆ ಸಾಕಷ್ಟಿವೆ, ಬೆಲೆಯು ೧೨ ಆಣೆ. ಪುಸ್ತಕದ ಮಾನದಿಂದ ಹೆಚ್ಚೇನೂ ಅಲ್ಲ.

"ಪತಿವ್ರತೆಯ ಪ್ರಭಾವ"—ಲೇಖಕರು:- ಬ. ರಾ. ಕೌಜಲಗಿ. ಪ್ರಚಲಿತ ಕನ್ನಡ ವಾಙ್ಮಯದಲ್ಲಿ ಪ್ರಸಿದ್ಧವಾದ ಕಥೆ-ಕಾದಂಬರಿಗಳ ಸಂಖ್ಯೆಯು ತೀರ ಕಡಿಮೆ. ಎಷ್ಟೋ ಲೇಖಕರು ಬರೆಯಬೇಕೆಂಬ ಅಪೇಕ್ಷೆಯಿಂದ ಸಿವಡುಗಟ್ಟಲೆ ಬರೆಯುತ್ತಾರೆ. ಆದರೆ, ಅವು ಬಯಲಿಗೆ ಬರುವದಾಗುವದಿಲ್ಲ. ಬಂದರೆ, ಎಲ್ಲಿಯಾದರೂ ಮಾಸಿಕಗಳಲ್ಲಿ ಚೂರುಚೂರಾಗಿ ಪ್ರಕಟವಾಗುತ್ತವೆ. ಈ ಕೊರತೆಯನ್ನು ಕೆಲಮಟ್ಟಿಗೆ ಹೋಗಲಾಡಿಸುವದಕ್ಕೆ 'ಪತಿವ್ರತೆಯಪ್ರಭಾವ' ವೆಂಬ ಚಿಕ್ಕ ಕಾದಂಬರಿಯನ್ನು ಬ. ರಾ. ಕೌಜಲಗಿಯವರು ಸ್ವಧರ್ಮಕ್ಕಾಗಿ ಬರೆದಿದ್ದರು. ಅದನ್ನೀಗ ಪುಸ್ತಕರೂಪವಾಗಿ ಪ್ರಕಟಿಸಿದ್ದಾರೆ. ಕಥಾನಕವು 'ಪುಣ್ಯಪ್ರಭಾವ' ವೆಂಬ ಗಡಕರಿಯವರ ನಾಟಕದಿಂದ ಎತ್ತಿದುದರಿಂದ, ಈ ಪುಸ್ತಕಕ್ಕೆ ಒಂದು ತರದ ಶೋಭೆಯೆ ಉಂಟಾಗಿದೆ. ಇದಲ್ಲದೆ ಕಥಾಗತವಾದ ವಸ್ತು-ಪಾತ್ರಗಳ ಸ್ಥಿತಿಯನ್ನು ಲೇಖಕರು ಸಂಪೂರ್ಣವಾಗಿ ಕನ್ನಡಿಸಿ ವಿಜಯನಗರದಲ್ಲಿಯೇ ಆದ ಸಂಗತಿಯೇನೋ ಅನಿಸುವಂತೆ ಮಾಡಲು ಯತ್ನಿಸಿದ್ದಾರೆ. ಇನ್ನು ಪ್ರಥಮ-ಪ್ರಯತ್ನವೆಂದರೂ ಕಥಾರೀತಿಯಲ್ಲಿ ಕೆಲವು ಮುಚ್ಚಿಕೊಂಡು ಹೋಗದ ದೋಷಗಳಿವೆ. ಪ್ರಾಸಾನುಪ್ರಾಸದ ಸೆಳವಿಗೆ ಬಿದ್ದು ಅವರ ಒಕ್ಕಣಿಕೆಯು ಸ್ವಲ್ಪ ದೇಶೀಯಕಾವ್ಯ ರೂಪವನ್ನು ಹೊಂದಿದೆ. ಗಡಕರಿಯವರ 'ಪುಣ್ಯಪ್ರಭಾವ'ದ ಬೆಳಕಿನಲ್ಲಿ ಬರೆದುದರಿಂದ ಭಾವಾವೇಶದಲ್ಲಿ ಕ್ಷುದ್ರವಾದ ವ್ಯಾಕರಣದೋಷಗಳನ್ನು ಲಕ್ಷಿಸಿಲ್ಲ. ಮರಾಠಿ ಭಾಷೆಯು ನಡುನಡುವೆ ಅವರ ಶೈಲಿಯನ್ನು ಮೋಹಿಸಿಬಿಟ್ಟಿದೆ. ಹಕಾರಕ್ಕಿಂತ ಪಕಾರವೇ ಒಳಿತೆಂದು ಅವರು ಎಷ್ಟೋ ಕಡೆಗೆ 'ಪೊಂದಿ, ಪೋಗಿ' ಎಂದು ಸಹಜವಾಗಿ ಬರೆದಿರುತ್ತಾರೆ. ಹೀಗೆ ಭಾಷೆಯಲ್ಲಿ ಅನೌಚಿತ್ಯವು ಅಲ್ಪಸ್ವಲ್ಪವಾಗಿ ಕಂಡು ಬರುವದು.

ಬೆಲೆ ೦-೬-೦ ಕರ್ನಾಟಕ ಮಹಾವಿದ್ಯಾಲಯ ಧಾರವಾಡ

---

# ಬರೇ ನಗಚಾಟಿಕಿ!

## ಒಂದು ಚುಟ್ಕಾನಾಟಕ.

ಶ್ರೀ. ಕೆ. ತ. ಸರದಾರ–ಬರೆಹಗಾರ.

(ಇಬ್ಬರು ಒಂದು ಹಳೆಯ ಪಂಜೆಯನ್ನು ಪರದೆಯಂತೆ ಹಿಡಿದು ನಿಂತಿರುವರು. ಮುಂದೆ ಸೂತ್ರಧಾರನು ನಿಂತಿರುವನು.)

ಸೂತ್ರಧಾರ:—ನಟಿಯು ಇಂದು ನಮ್ಮ ನಾಟಕಾ ನೋಡಬೇಕೆಂದು, ಸಭಾಸದರಿಗಾಜ್ಞಾಪಿಸಿರುವೆನೆಂದು ನನಗೆ ಹೇಳಿದಳು. ಸಭಾಸದರು ಸಿದ್ಧರಾಗಿದ್ದರೆ ನಾಟಕಾ ಆರಂಭಿಸತೇನೆ. ಆಗಬಹುದು ಅಂದ್ರಾ! ಸರಿ. (ಒಳಕ್ಕೆ ಹೋಗಿ ಕೂಡಲೆ ಬಂದು)

ಆದ್ರೆ ಮಹಾಸ್ವಾಮಿ, ಒಂದು ವಿಷಯು. once more (ಒನ್ಸಮೋರ) ಅಂದರೆ Part (ಪಾರ್ಟ) ದಾರರ ಇಷ್ಟ. ಗ್ಯಾಲ್ರಿಯಿಂದ ಏಕ್ ಹಿಂದುಸ್ತಾನೀ ಬೋಲೋ ಅಂದರೆ ನಮ್ಮಿಂದ ಸಾಧ್ಯವಿಲ್ಲ. ಲೇ! ಹೊಡೀರೋ ಪಟಾಸ. (ತೆರೆಯೊಳಗೆ "ಢಂ") ಎಳಿಯೋ ಪರದೇ. (ಪರದೆ ಹಿಡಿದಿದ್ದವರು ಬಟ್ಟೆಯನ್ನು ಕೆಳಕ್ಕೆ ಬಿಡವರು) ಲೇ ದುಷ್ಯಂತ, ಬಾರೋ ಮುಂದಕ್ಕೆ. ಎಲ್ಲೋ ಷುರುಮಾಡೊ. (ಒಳಕ್ಕೆ ಹೋಗುವನು).

ದುಷ್ಯಂತ:—ಎಲೈ ವಿದೂಷಕನೆ, ಈ ವನವು ಎಷ್ಟು ಶೋಭಾಯಮಾನವಾಗಿರುವದು!

ವಿದೂಷಕ:—(ಕಣ್ಸನ್ನೆ ಮಾಡಿ) ಮಿತ್ರನೆ, ಹುರಗಡ್ಲೆಚಟ್ನಿ ಇಲ್ಲದಿದ್ದರೆ ದೋಸೆಗೆ ಎಷ್ಟು ಮಸಾಲೆ ಹಾಕಿದ್ದರೆ ತಾನೆ ಏನು ಪ್ರಯೋಜನ ?

ದು:—ನೀನು ನನ್ನ ಪ್ರೇಮವಿಚಾರವನ್ನು ಕುರಿತು ಹಾಸ್ಯಮಾಡುವೆಯಾ ?

ವಿ:—ಛೆ! ಛೆ! ಕಾಫಿಹೋಟ್ಲು ವಿಚಾರ ಮಾತನಾಡಿದೆನಯ್ಯಾ.

ಸೂ:—ಲೇ, ಜ್ಞಾನವಾಗಿ ಮಾತಾಡೊ. ನಾಟಕಾ ಹಾಳಮಾಡಿ ಬಿಡತೀಯಲ್ಲೊ. ಲೇ, ಹತ್ತಿರ ಬಂದು ನಿಂತಕೊಂಡು ತಪ್ಪಿದ್ದು ಸರಿಯಾಗಿ ಹೇಳಿಕೊಡೋ ಮುಠ್ಠಾಳಾ.

ದು:—ಮಿತ್ರನೆ, ನಾನು ಇಂದು ಒಂದು ಹಿತಕರವಾದ ಸ್ವಪ್ನವನ್ನು ಕಂಡೆನು.

ವಿ:—(ಆಸಕ್ತಿಯಿಂದ) ಏನು ಆಲೂಗೆಡ್ಡೆ ಪಲ್ಯ ತಿನ್ನುತಿದ್ದೆಯಾ ಕನಸಿನಲ್ಲಿ?

ಸೂ:—(ಹಲ್ಲುಕಚ್ಚಿ) ಅಯ್ಯೊ!

ದು:—ಇಲ್ಲ. ಓರ್ವ ಅಂಗನಾಮಣಿಯು ಸಖಿಯರೊಡನೆ ಒಂದು ತಪೋವನದಲ್ಲಿ ಸಂಚರಿಸುತ್ತಿದ್ದಳು.

ವಿ:—(ಉತ್ಸಾಹದಿಂದ) ಊ ಹೂ! ಹಾಗೇನು? ಸರಿ. ನೀನು ಅವಳನ್ನು ಮದುವೆಮಾಡಿಕೊ. ನನಗೆ ಈರುಳ್ಳಿ ಹುಳ್ಳಿ, ಕೋಸುಗೆಡ್ಡೆ ಪಲ್ಯ, ಆಲೂಗೆಡ್ಡೆ ಬೋಂಡ, ಇವೆಲ್ಲವೂ ಮನವಾರೆ ದೊರೆಯುವವು.

ಸೂ:—ಅಯ್ಯೊ, ಈ ಹೊಟ್ಟೆಬಾಕನನ್ನು ರಂಗಸ್ಥಳಕ್ಕೆ ಬಿಡುವದಕ್ಕ ಮುಂಚೆ ಈರುಳ್ಳಿಹುಳ್ಳಿ ಇದನ್ನೆಲ್ಲ ಕಂಪನಿ ಖರ್ಚಿನಿಂದ ತಿನಿಸಿ ಕಳಸಬೇಕಾಗಿತ್ತು. ಎಂಥ ಮೋಸವಾಯ್ತು ?

ದು:—ಆ ಅಂಗನಾಮಣಿಯನ್ನು ನಾನು ಕಂಡು......ಕಂಡು......ಲೇ ಮುಂದಕ್ಕೇನೊ ?

ವಿ:—ನಿನ್ನ ಪಾರ್ಟಿಂದೂ ನಾನೇ ಗಟ್ಟಮಾಡಬೇಕೇನೋ ? ಹೇಳಲೇನೋ ಮಾಲಿಕರಿಗೆ ?

ದು:—ಮರೆತು ಹೋತಲ್ಲೊ ; ಏನೊ ಮಾಡೋದು ?

ವಿ:—ಬಜಾಯಿಸೋ ಬಂ...........

ದು:—ನೀನೇ ಏನಾದರೂ ನಕಲಿ ಮಾಡಿಬಿಡೋ ಹೊರಕೋಗೋಣ.

ವಿ:—ಲಂಚ ಏನು ಕೊಡತಿ? ಕನಸಿನಲ್ಲಿ ಕಂಡೆಯಲ್ಲ ಅಂಥಾ ... ?

ದು:—ಅವಮಾನ ಆಗೋ ಹಾಗಾಯ್ತಲ್ಲೊ. ಹೊತ್ತಕಳೀ ಬೇಡವೋ ಹೊಡತ ಬೀಳುತ್ತೆ.

ಸೂ:—ಯಾಕ್ರೋ ಉಸುರುಮೆತ್ತಗಾಯ್ತು? (Zinc sheet [ಝಿಂಕ್ ಸೀಟ] ಮೇಲೆ ಕಲ್ಲುಬೀಳುವುದು. ಶಬ್ದ.)

ಅಯ್ಯೋ ಕಲ್ಲು ಬೀಳುವದಕ್ಕೆ ಸುರು ಆಯ್ತಲ್ಲ. ಇನ್ನೇನ್ಗತಿ? ಲೇ, ಬೇಗ ಒಂದು ಹಿಂದುಸ್ತಾನೀ ಹಾಡೋ. ನೀನು ಇದು ಹಾಡೊ "ಕಡುಬು."

ವಿ:—ಕಾಯ್ ಕಡುಬು ತಿಂದೆನು;
ಹುಯ್—ಕಡಬು ತಿಂದೆನು,
ಉದ್ದಿನ್—ಕಡುಬು ತಿಂದೆನು,
ತಿಂದು—ತಿಂದು—ನೀರಕುಡದೆನು,
ಹಾಲ್—ಕೀರ ಕುಡಿದೆನು.

ಅಯ್ಯೋ! ಹೆಚ್ಚಾಯಿತು. ಸ್ವಾಮೀ ಸೂತ್ರಧಾರರೆ, ಪರದೆ ಬಿಡು ಅನ್ನಿ. ಇಲ್ಲದಿದ್ರೆ ನಾವು ಒಳಕ್ಕೆ ಬಂದು ಬಿಡತೀವೆ.

ಸೂ:—ಹೂ! ಆಮೇಲೆ ದುಡ್ಡು ವಾಪಸ ಕೊಡು ಅಂತಾರಲ್ಲ, ನಿಮ್ಮ ತಾತ ಕೊಡೋನು? ಹಾಗೇ ಸ್ವಲ್ಪ ಹೊತ್ತು ನಿಂತಿದ್ದು ನಾಟಕಾಯಿತು ಅನಿಸಿಬಿಟ್ಟು ಬನ್ನಿರೋ ಒಳಕ್ಕೆ.

ವಿ:—ಏನು ನಾಟಕಾ ಆಯ್ತು ಅನಸೋದು? ಇಲ್ಲಿ ಇನ್ನೊಂದು ನಿಮಿಷ ಇದ್ದರೆ ನಂಪ್ರಾಣಹೋಗುತ್ತೆ.

ಸೂ:—ಸಂಬಳ ಏನ ಸುಮ್ಮನೇ ಬರುತ್ತೇನೋ ಸೂಕ್ರಾ?

ದು:—ಎಲೈ, ಮಿತ್ರನೆ, ಇಂತಹ ದುರ್ಘಟಪ್ರಸಂಗವೊದಗಿದರೆಂತು ಕರ್ತವ್ಯವು? ನನ್ನ ಮಂತ್ರಿಯನ್ನು ಬರಮಾಡಿ ಆತನೊಡನೆ ಆಲೋಚಿಸಲೇ?

ವಿ:—ಲೇ, ನಿನ್ನ ಮಂತ್ರಿಗಿಂತ್ರಿ ಆಮೇಲಾಗಲೋ. ಸದ್ಯಕ್ಕೆ ಸರಿಯಾದ್ದು ಕಂಬಿ ಕಿಳೋದೆ. ಅಯ್ಯೋ, ಅಲ್ಲಿ ನೋಡೋ ರೆಕ್ಕೆ ಇಲ್ಲದ ಪಕ್ಷಿಗಳು (ಪಾದರಕ್ಷಾ) ನಡೆಯೋ ಓಡೋ. (ಓಡಿಹೋಗುವರು)

ಸೂ:—ನೋಡಿದಿರೋ? ಇಂಥ ಬೇಜವಾಬದಾರಿ ಭೂಪರನ ನಂಬಿಕೊಂಡ್ರೆ ಚಪ್ಪರಾಕೀಳೋದು ತಾನೆ ನಾನು? ಕಲ್ಲಿಗೆ ಹೆದರಿಕೊಂಡೋಡಿ ಹೋದರಲ್ಲ. ಇನ್ನು ಲೋಹಬಿದ್ದಿದ್ದರೆ ಏನು ಗತಿ ಇವರಿಗೆ. ನನ್ನ ಅದೃಷ್ಟ. ನನಗೆ ಸಿಕ್ಕುವರೆಲ್ಲ ಇಂಥವರೇ ಸಿಗತಾರೆ. ಮೊನ್ನೆ ರತ್ನಾವಳಿಕಂಪನಿಗೆ ಹೋಗಿದ್ದೆ. ಚಿನ್ನದ ಗಡಿಯಾರ, ಚಿನ್ನದ ಥೊಡ, ಚಿನ್ನದುಂಗುರ, ಎಲ್ಲಾ ಚಿನ್ನದ್ದೇ ಎಸೀತಾ ಇದ್ದರು ಜನ. ಯಾರಾದರೂ ರಂಗಸ್ಥಳಬಿಟ್ಟು ಒಳಕ್ಕೆ ಓಡಿಹೋದರೆ? ಇಲ್ಲ. ಇವರಿಗೆಲ್ಲ ಸಂಬಳಕ್ಕೆ ಸೊನ್ನೆಸುತ್ತಿ ಥಗಲ್ಲುಟ್ಟಿಕೊಟ್ಟು ಓಡಸತೀನಿ. ಮಹಾಶಯರಲ್ಲಿ ವಿಜ್ಞಾಪನೆ. ತೊಂದರೆ ಕ್ಷಮಿಸಬೇಕು. ನಾಳೆ ಬೇರೆ ಇಬ್ಬರು ಹೊಸ ಆಕ್ಟರ್ಸ ಬರತಾರೆ. ನಾಟಕಾ ಚೆನ್ನಾಗುತ್ತೆ. ಯಥಾರೀತಿಯಾಗಿ ಪ್ರೋತ್ಸಾಹ ಕೊಡುತ್ತಾ ಬರಬೇಕು.

---

# ಕಾಣದ ಕೈ!

## ಒಂದು ಚಿಕ್ಕ ಕಥೆಯು.

### ಬರೆದವನು:— ಆನಂದಕಂದ.

### ೧.

ಬೇಕಾದಂತಹ ಊಳಿಗವನೆಲ್ಲ ಮಾಡಬಹುದು. ಆದರೆ ಹಳ್ಳಿಯ ಕರಣಿಕನಾಗುವುದೆಂದರೆ ಹೊಲ್ಲದ ಕೆಲಸ. ಕರಣಿಕನು, ಎಂತಹ ಕುಲೀನನಿರಲಿ! ಎಷ್ಟೇ ಕಲಿತವನಿರಲಿ ! ಗೌರವಶಾಲಿಯಿರಲಿ ! ವಯಸ್ಸು ಹೋದವನಿರಲಿ !. ಹತ್ತು ರೂಪಾಯಿ ಸಂಬಳದ ಪೋಲೀಸ ಜವಾನನಿಗೆ ಕೂಡ, ಹೆದರಿ ಹಿಂಜರಿಯಬೇಕಾಗುವುದು. ಹೆಚ್ಚಿನ ಅಧಿಕಾರಿಗಳೆದುರಿಗೆ ಹೋಗುವಾಗಲಂತೂ, ಕರಣಿಕರು, ತಮ್ಮ ಮರ್ಯಾದೆಯನ್ನು ಮನೆಯಲ್ಲಿ ಮುಚ್ಚಿಟ್ಟೇ ಹೋಗಬೇಕು. ಇಲ್ಲವಾದರೆ, ಅವರ ಮರ್ಯಾದೆಯ ಮಾರಾಟವು ಕಾಸಿಗೆ ಪಂಛೇರಾಗುವುದು.

ಮೇಲಿನ ಅಧಿಕಾರಿಗಳನ್ನು ಕಂಡರೆ ಕರಣಿಕರು, ಅಸುರರನ್ನು ಕಂಡಂತೆ ಒಳಗೊಳಗೆ ಬೆದರಿ ಬೀಳುತಿರುವರು. ಆದರೆ ಆಚರಣೆಯಲ್ಲಿ, ದೇವರನ್ನು ಕಂಡಂತೆ ಭಕ್ತಿ ವಿಶ್ವಾಸಗಳನ್ನು ತೋರಿಸದೆ ಹೋದರೆ, ಬೇರೆ ಗತಿಯೆ ಇಲ್ಲ. ಅಧಿಕಾರಿಗಳನ್ನು ಒಂದೇ ದಿನದಲ್ಲಿ ಇಪ್ಪತ್ತು ಸಲ ಕಂಡರೂ, ಕಂಡಸಲವೊಮ್ಮೆ ಕರಣಿಕರು, ವಿನಯದಿಂದ ಕೈ ಮುಗಿಯಲೇ ಬೇಕು. ಖಾದ್ಯೋಪಹಾರನೈವೇದ್ಯ—ಸುವರ್ಣಪುಷ್ಪದಕ್ಷಿಣೆಗಳಿಂದ, ಅವರ ಮನವನ್ನು ತಣಿಸಲೇ ಬೇಕು. ಅವರ ಒಲುಮೆಗಾಗಿ, ಷೋಡಶೋಪಚಾರಗಳಿಂದ ಪೂಜಿಸಲೇ ಬೇಕು. ಎಂದರೆಯೇ ಕರಣಿಕರಿಗೆ ಮೋಕ್ಷ- ಇಲ್ಲದಿದ್ದರೆ, ಜನ್ಮ ಕುಂಡಲಿಯಲ್ಲಿ ಇಲ್ಲದಿದ್ದರೂ, ಜನ್ಮಸ್ಥಾನದಲ್ಲಿ ಹೊಸತಾಗಿ ಶನಿಗ್ರುಹವನ್ನು ಬರೆಯಬೇಕಾಗುವುದು. ಎಂತಲೇ ಕರಣಿಕರಲ್ಲಿ, ಅಧಿಕಾರಿಗಳ ಕಣ್ಣಿಗೆ ಇಂಗುಹಚ್ಚುವ ಕಲೆಯು, ಸ್ವಾಭಾವಿಕವಾಗಿ ಇರಬೇಕಾಗುವುದು. ನಿಸ್ಪೃಹನಾಗಿದ್ದುಕೊಂಡು, ಯಾರ ದಾಕ್ಷಿಣ್ಯವೂ ಇಲ್ಲದೆ, ನಿರ್ಭಯವೃತ್ತಿಯಿಂದ ಕೆಲಸಮಾಡುವ ಕರಣಿಕರು, ಆರು ತಿಂಗಳ ವರೆಗಾದರೂ ತಡೆಯುವರೇನೊ! ಎಂದು ಸಂಶಯ. ಭಾವಿಕ ಜೀವಿಯಿದ್ದರಂತೂ ಕೆಲಸವೇ ಮುಗಿಯಿತು. ಇದಕ್ಕಾಗಿಯೆ ಕೃಷ್ಣರಾಯರು, ಕರಣಿಕತನದ ಹೊರೆಯನ್ನು ತಮ್ಮ ಮಗನ ಮೇಲೆ ಹೊರಿಸಲು ಹಿಂದೆಗೆಯುತಲಿದ್ದರು.

ಕೃಷ್ಣರಾಯರಿರುವ ಊರು, ಕಲ್ಲಹಳ್ಳಿ. . ಅವರಿಗೀಗ ವಯಸ್ಸು ಐವತ್ತಕ್ಕೆ ಮಿಕ್ಕಿದೆ. ಪರಂಪರೆಯಿಂದ ತಮ್ಮ ಮನೆತನಕ್ಕೆ ನಡೆದು ಬಂದಿರುವ ಕರಣಿಕತನವನ್ನು, ಇದು ವರೆಗೂ ತಾವೇ ಮಾಡುತ್ತ ಬಂದಿರುವರು. ಮುಪ್ಪಿನ ಕಾಲದಲ್ಲಿ ಅಧಿಕಾರಿಗಳ ಮನವೊಲಿಸುವುದು, ಕೃಷ್ಣರಾಯರಿಗೆ ಬೇಸರು ಬಂದು ಹೋಗಿದ್ದಿತು.

ರಾಮಮೂರ್ತಿಯೊಬ್ಬನೆ ಕೃಷ್ಣರಾಯರಿಗೆ ಗಂಡುಸು ಮಗ. ಅವನಿಗೀಗ ಇಪ್ಪತ್ತೈದು ವರುಷ. ಕರಣಿಕನಾಗಿರುವುದಕ್ಕೆ ಸಾಕಷ್ಟು ಅವನ ಶಿಕ್ಷಣವಾಗಿದ್ದಿತು. ರಾಮಮೂರ್ತಿಯ ಹೃದಯವು ಹಸು ಮಗುವಿನದು. ಆದರೆ ಮನವೊ ವಿಶಾಲವಾದುದು. ಮುನ್ನೋಟದ ಬಗೆಯುವನಲ್ಲ. ಹೆಮ್ಮೆ-ಬಿಂಕಗಳನ್ನು ಕಳೆದುಕೊಳ್ಳುವುದಕ್ಕೆ, ಮುನ್ನಿನ ಜನ್ಮದಲ್ಲಿ ಅವನೇನು ಮಾಡಿರುವನೆೋ ! ಮುಚ್ಚಿ ಮಾತನಾಡುವುದೆಂದರೆ ರಾಮಮೂರ್ತಿಯ ಮನಸ್ಸಿಗೆ ನೊಣಕಡಿದಂತೆ. "ಇವರು ನಮ್ಮವರು" ಎಂದೊಮ್ಮೆ ಎನಿಸಿ ಬಿಟ್ಟರಾಯಿತು. ಎಂತಹ ಮಾತನಾದರೂ ಒಡೆದು ಆಡುವನು. ಮಾನಾಪಮಾನದ ಮಾತುಗಳು, ಇವನೆದೆಯನ್ನು ಹಿಗ್ಗಿಸುತಿರಲೂ ಇಲ್ಲ, ತಗ್ಗಿಸುತಿರಲೂ ಇಲ್ಲ. ಹೆಂಗುಸರೊಡನೆ ಮಾತನಾಡುವಾಗ, ತನ್ನ ತಂಗಿ-ತಾಯಿಯರೊಡನೆ ಮಾತನಾಡುವಾಗಿನ ಭಾವನೆಯಿಂದಲೆ ಆಡುವನು.

ರಾಮಮೂರ್ತಿ, ಅಳಿಯತನಕ್ಕೆಂದು ಮೊದಲನೆಯುಸಲ ಮಾವನ ಮನೆಗೆ ಹೋಗಿದ್ದ. ಒಂದು ದಿನ ತಾನು ಕುಳಿತ ಹಜಾರದಲ್ಲಿ, ಹೆಚ್ಚಾಗಿ ಕಸ ಬಿದ್ದುದನ್ನು ಕಂಡ ಕೂಡಲೆ ರಾಮಮೂರ್ತಿ, ಹಾಸಿದ ಹಾಸುಗೆಯು ಚಟ ಚಟ ಕೈಯ್ಯಿಂದ ಕೊಡವಿ ಇಟ್ಟು, ಪೊರಕೆ ತೆಗೆದುಕೊಂಡು ಕಸ ತೆಗೆಯಲು ತೊಡಗಿದ. ರಾಮಮೂರ್ತಿಯ ಹೆಂಡತಿ ಒಳಗೆ ನಿಂತುಕೊಂಡು ನೋಡಿದಳು. ನಗೆ ಬಂದಿತು. ತಾಯಿಯ ಬಳಿಗೆ ಬಂದು, ಹೊಟ್ಟೆ ಹಿಡಿಸಲಾರದ ನಗೆ ನಗುತ್ತ, ಇದನೆಲ್ಲ ಹೇಳಿದಳು. ಅವರು ಬಂದು ರಾಮಮೂರ್ತಿಯನ್ನು ಬಿಡಿಸಿ ತಾವೇ ಕಸಗೂಡಿಸಿ ಹಾಸಿಕೊಟ್ಟರು.

ರಾಮಮೂರ್ತಿಯ ಹೆಂಡತಿಯು, ಅತ್ತೆಯ ಮನೆಗೆ ಬಂದಾಗ ತನ್ನ ಅತ್ತೆಗೂ, ನಾದಿನಿ ಇಂದಿರೆಗೂ, ಈ ಸಂಗತಿಯನ್ನು ಅದೆಷ್ಟೋ ನಗುತ್ತ ಹೇಳಿದಳು. ಅವರೂ ಮನವಾರೆ ನಕ್ಕರು. ಇಂದಿರೆಯು "ರಾಮಣ್ಣಾ ನೀನೇನು ಅಳಿಯತನಕ್ಕೆ ಹೋಗಿದ್ದೆಯೋ ಕಸ ಬಳಿಯಲಿಕ್ಕೆ ಹೋಗಿದ್ದೆಯೊ ಮಾವನ ಮನೆಗೆ?" ಎಂದು ನಗೆಯಾಡಿದಳು. ರಾಮಸ್ವಾಮಿಯು ಸ್ವಾಭಾವಿಕವಾಗಿ "ಏಕೆ! ಇದರಲ್ಲೇನು ವಿಶೇಷ!" ಎಂದು ನುಡಿದು ಬಿಟ್ಟನು. ಅವನ ಸರಳ ಹೃದಯಕ್ಕಿದೊಂದು ಸಣ್ಣ ಉದಾಹರಣೆ.

"ನಮ್ಮ ರಾಮಮೂರ್ತಿ ಈ ಯುಗದ ಮನುಷ್ಯನೇನೂ ಅಲ್ಲ. ಮುಂದೆ ಕರಣಿಕತನವನ್ನು ಹೇಗೆ ಸಾಗಿಸುವನೊ" ಎಂದು ಕೃಷ್ಣರಾಯರು ಆಗಾಗ ಮಾತನಾಡುವರು.

ಸಾಧುಸ್ವಭಾವದ ಮಗ, ವಿನಯಶೀಲೆಯಾದ ಸೊಸೆ, ಅನುಕೂಲೆಯಾದ ಹೆಂಡತಿ, ಸಿರಿವಂತರ ಸೊಸೆಯಾದ-ಸುಗುಣೆಯಾದ-ಹೆಣ್ಣುಮಗಳು, ಉಣ್ಣಲು ಉಡಲು ಕಡಿಮೆಯಿಲ್ಲದಷ್ಟು ಸಂಪತ್ತು, ಇವೆಲ್ಲವುಗಳಿಂದ, ಕರಣಿಕರಮನೆಯು ಆನಂದದ ಆಗರವಾಗಿದ್ದಿತು.

೨.

ಚಿನ್ನಪ್ಪನು ಕರಣಿಕರ ಕಮತಿಗ, ಹೂವಿನ ತೋಟವನ್ನು ಮೊದಲಿನಿಂದಲೂ ಅವನ ಮನೆತನದವರು ಮಾಡುತ್ತ ಬಂದಿದ್ದರು. ಅದನ್ನೇ ಈಗ ಚಿನ್ನಪ್ಪ ಮಾಡುತಿ

ರುವನು. ಚಿನ್ನಪ್ಪ ಚಿಕ್ಕವನಿರುವಾಗಲೆ ತಂದೆ ತೀರಿದನು. ಆದುದರಿಂದ, ಅವನ ತಾಯಿ ಗಂಗಮ್ಮ, ಎಳೆಸುಗುವಾದ ಚಿನ್ನಪ್ಪನನ್ನು ಕಟ್ಟಿಕೊಂಡು, ತವರ ಮನೆಗೆ ಹೋಗಿ ಬಿಟ್ಟಳು. ಚಿನ್ನಪ್ಪ ಬಳೆದು ದೊಡ್ಡವನಾಗುವವರೆಗೆ ಅಲ್ಲಿಯೆ ಇದ್ದಳು. ಚಿನ್ನಪ್ಪನಿಗೆ ಅವನ ಸೋದರಮಾವನು ತನ್ನ ಮಗಳು ನೀಲಮ್ಮನನ್ನು ಕೊಟ್ಟು, ಮದುವೆ ಮಾಡಿದನು. ಈ ಅವಧಿಯಲ್ಲಿ ಕರಣಿಕರ ತೋಟವನ್ನು, ಚಿನ್ನಪ್ಪನ ದೂರಿನ ಕಕ್ಕನಾದ ರಾಮಯ್ಯನು ಮಾಡುತಲಿದ್ದ.

ಚಿನ್ನಪ್ಪನು ಮನೆತನಸಾಗಿಸಲು ತಕ್ಕವನಾದೊಡನೆಯೆ, ತಾಯಿ–ಹೆಂಡತಿಯರನ್ನು ಕರೆದುಕೊಂಡು, ಮರಳಿ ತನ್ನೂರಿಗೆ ಬಂದನು. ಕೂಡಲೆ ಕರಣಿಕರು, ರಾಮಯ್ಯನಿಂದ ತೋಟವನ್ನು ಬಿಡಿಸಿ, ಚಿನ್ನಪ್ಪನಿಗೆ ಕೊಟ್ಟರು. ಇದರಿಂದ ರಾಮಯ್ಯನು ನೊಂದುಕೊಂಡನಾದರೂ ಬಹಿರಂಗದಲ್ಲೇನೂ ತೋರಗೊಡಲಿಲ್ಲ.

ಚಿನ್ನಪ್ಪನ ಮನೆಯಲ್ಲಿ ಆನೆಯಂತಹ ನಾಲ್ಕು ಎತ್ತುಗಳು. ಜೀತದ ಆಳೊಬ್ಬ. ತಾನೂ ಮೈಮುರಿದು ದುಡಿಯುವನು. ಹೈನ-ಹಾಲು, ಕಾಳು-ಕಡಿಗಳಿಗೆ ಕೊರತೆಯೇನೂ ಇಲ್ಲ. ಚಿನ್ನಪ್ಪನು ಅಲಸಿಗನಲ್ಲ. ಹಾಳುಹರಟೆಗಾರನಲ್ಲ. ತುಂಟನಲ್ಲ. ಇಲ್ಲದ ಉದ್ದನೀರಿಗೆ ಹೋಗುವವನಲ್ಲ. ಜನಗಣತಿಯ ಲೆಕ್ಕದಲ್ಲಿ, ಚಿನ್ನಪ್ಪನ ಹೆಸರು ಕಲಿತವರ ವರ್ಗದಲ್ಲಿ ಬರುವುದು. ಅದೇತಕೆಂದರೆ ಚಿನ್ನಪ್ಪನಿಗೆ ತನ್ನ ಹೆಸರನಷ್ಟು ಬರೆಯಲಿಕ್ಕೆ ಬರುವುದು.

ಹೆಚ್ಚಿಗೆ ಕಲಿತವನಲ್ಲದಿದ್ದರೂ ಚಿನ್ನಪ್ಪನು ರಸಿಕ, ಸವಿಗಾರ. ಹುಣ್ಣಿಮೆಯ ಚಂದ್ರನನ್ನೂ, ಹೂಬಿಟ್ಟ ಮಲ್ಲಿಗೆಯನ್ನೂ, ನೋಡಿದಾಗ, ಕಲಿಯದವರ ಎದೆಯರಳದೇನು? ತಂಗಾಳಿಯ ತಣ್ಪು, ಹೊತ್ತಿಗೆಯ ಹೊರೆಯನೋದದವರನ್ನು "ಹಾ" ಎನಿಸದೇನು? ಗಿಳಿಗಳ ಉಲಿವನಾಗಲಿ, ಕೊಳಲಿನ ಇಂಚರವನಾಗಲಿ ಕೇಳಿ, ಬರೆಯಲು ಬಾರದವರ ಕಿವಿಗಳು ಹಿಗ್ಗವೇನು? ಪ್ರಪಂಚದಲ್ಲಿಯ ರಸವನ್ನು ಕಂಡು ಹಿಡಿದು, ಅದನ್ನು ಅನುಭವಿಸುವ ಶಕ್ತಿಯು, ಮನುಷ್ಯನಿಗೆ ನಿಸರ್ಗದತ್ತವಾದುದು. ಕಸ್ತೂರಿಮೃಗವು ಸುಗಂಧವನ್ನು ಬಯಸಿ, " ಆಂಗ್ಲೋ ಇಂಡಿಯನ್ ಡ್ರಗ್ " ಕಂಪನಿಗೆ ಹೋಗಿ "ಓಟೋದಿಲ್‌ಬಹಾರ " ವನ್ನು ಬೇಡಿದರೆ, ನಗೆ ಬರುವ ಸಂಗತಿಯಲ್ಲವೇ ! ಓದು ಬರಹ ಕಲಿತು, ಕುಲರಸಿಕನಾಗಬೇಕೆಂದು ಹಂಬಲಿಸುವುದೂ ಇದರಂತೆಯೆ.

ಚಿನ್ನಪ್ಪನ ಹೆಂಡತಿ ನೀಲಮ್ಮ, ಬಲು ಬೆಡಗುಗಾರ್ತಿ. ಸೊಬಗಿನವಳು. ಸೊಗಸನ್ನು ಸೂಸುತಿರುವ ಬೊಗಸೆಗಣ್ಣುಗಳು, ಅರೆವೆರೆ ( ಅರ್ಧಚಂದ್ರ )ಯಂತೊಪ್ಪುತಿರುವ ಅಂದವಾದ ಹಣೆ, ಕಂದಿ ( ಕಲಂಕ )ನಂತೆ ಕಾಣುತಿರುವ ಹಣೆಯ ಹಚ್ಚೆ, ತಲೆಯಮೇಲೆ ಹೊದ್ದುಕೊಂಡಿರುವ ಸೆರಗನ್ನು ದಾಟಿ, ಹಣೆಯನ್ನು ಬಳಸಿ ಹಾರಾಡುತಿರುವ, ಕಪ್ಪಾದ ಸುಳಿಗುರುಳುಗಳು, ತಿದ್ದಿ ಬರೆದಂತಿರುವ ಕೊನೆಹುಬ್ಬುಗಳು,

ಮುಗುಳು ನಗೆಗೆ ಮನೆಯಾಗಿರುವ ಮುದ್ದು ಮುದ್ದಾದ ಬಾಯಿ, ಮಿರುಗು ಕೊಟ್ಟಂ ತಿರುವ ಮೈಬಣ್ಣ, ಇವೆಲ್ಲವುಗಳು ಯಾರನಾದರೂ ಬೆರಗುಗೊಳಿಸುವಂತಹವಿದ್ದುವು. ಹೆಚ್ಚಿಗೇನು ಹೇಳುವುದು ! ಚಿನ್ನಪ್ಪನಿಗೆ ನೀಲಮ್ಮನು ತಕ್ಕವಳಾದ ಹೆಂಡತಿ, ಚಿನ್ನಕ್ಕೆ ರನ್ನ ಕೂಡಿಸಿದಂತೆ ಇವರಿಬ್ಬರ ಹೊಂದಿಕೆ.

ಮೊದಲಿನಿಂದಲೂ ಚಿನ್ನಪ್ಪ–ನೀಲಮ್ಮ ಒಂದೇ ಮನೆಯಲ್ಲಿದ್ದು, ಕೂಡಿ ಆಡಿ ಬಳೆ ದವರು. ಇಬ್ಬರೂ ಅನ್ಯೋನ್ಯವಾಗಿರುವರು. ಚಿನ್ನಪ್ಪನನ್ನು ನೋಡಿದ ನೀಲಮ್ಮನ ಮೋರೆ, ಅರಳಿದ ತಾವರೆ. ರೇಶಿಮೆಯ ಹುಳುವಿನ ಮೆಯ್ಯಿಂದ ಎಳೆ ಹೊರಡುವು ದಲ್ಲ ! ಅದರಂತೆ ನೀಲಮ್ಮನ ನೋಟದಿಂದ ಹೊರಡುತಿರುವ ಹೊಳಪಿನ ಕದಿರು(ಕಿರಣ) ಗಳು, ಎಳೆಗಳಾಗಿದ್ದಲ್ಲಿ, ಒಂದೇ ಒಂದು ನಿಮಿಷದಲ್ಲಿ, ಚಿನ್ನಪ್ಪನ ಮೆಯ್ಯನ್ನೆಲ್ಲ ಮುಸುಕಿ ಬಿಡುತಿದ್ದಳು. ನೀಲಮ್ಮನು ಚಿನ್ನಪ್ಪನನ್ನು ಭಾವದ ದೇವನನ್ನಾಗಿ ಮಾಡಿಕೊಂಡು ತನ್ನ ನಗೆಮಲ್ಲಿಗೆಯಿಂದ ಪೂಜಿಸುವಳು. ವಿನೋದದಿಂದ ಬೆರೆತಿರುವ ತನ್ನ ಮೆಲು ಮಾತುಗಳ ಮಂತ್ರದಿಂದ ಮೆಚ್ಚಿಸುವಳು.

ಚಿನ್ನಪ್ಪನೇನು ಕಡಿಮೆಯವನೇ! ಅವನೂ ನಗೆಗಾರ, ಬಗೆಗಾರ. ನೀಲಮ್ಮನೊಡನೆ ಅದೆಷ್ಟೋ ಸರಸವಾಡುವನು. ಅವಳ ಚೆಲುವಾದ ಮೋರೆಯನ್ನು ಕಣ್ಣರಳಿಸಿ ನೋಡಿ ಯೇ ನೋಡುವನು. ನೋಡುವ ಭರದಲ್ಲಿಯೆ ಒಮ್ಮೊಮ್ಮೆ ಎದ್ದು ನಿಂತು, "ಕರ್ನಾಟ ಕದ ಹೆಣ್ಣೇ ನೀನು ಕಾಡಿಗ್ಗಣ್ಣ ನಡಸಣ್ಣ ಸಿಂಹನಾಂಗ ನಿಂದು ಬಾಳ ಡೌಲತಿ" ಎಂದು ಹಾಡುತ್ತ ಕೈಹಿಡಿದು ಸೆಳೆಯುವನು. ನೀಲಮ್ಮನು ನಾಚಿಕೊಂಡು, "ಯಾರಾದರೂ ನೋಡುವರೇನೋ" ಎಂದು ಬೆದರುಗಣ್ಣುಗಳಿಂದ ಸುತ್ತಲೂ ನೋಡಿ, ಸರಿದು ಹೋಗುವಳು. ಚಿನ್ನಪ್ಪನು ಹೆಂಡತಿಗೆ "ನೀಲಾ" ಎಂದೋ "ನೀಲೆ" ಎಂದೊ, ಹೆಸರುಗೊಂಡೇ ಕರೆಯುತಿರುವನು. ಹೊರಗಿನವಳೇ ? ಸೋದರಮಾವನ ಮಗಳು.

ಚಿನ್ನಪ್ಪನಲ್ಲಿ ರಾಮಮೂರ್ತಿಯದೊಳ್ಳೇ ವಿಶ್ವಾಸ. ರಾಮಮೂರ್ತಿಯಲ್ಲಿ ಚಿನ್ನ ಪ್ಪನದೊಳ್ಳೇ ಶ್ರದ್ಧೆ. ಪರಸ್ಪರರಲ್ಲಿಯೂ ಅನೂನವಾದ ಸ್ನೇಹ. ಒಂದೇ ಹೊಟ್ಟೆಯಿಂದ ಹುಟ್ಟಿದ, ಅಣ್ಣತಮ್ಮಂದಿರಲ್ಲಿಯೂ ಇಷ್ಟು ಮಮತೆ– ಮೆಚ್ಚಿಕೆಯಿರದು. ಚಿನ್ನಪ್ಪನು ತನಗೆ ಬಿಡುವು ದೊರೆತಾಗಲೆಲ್ಲ, ರಾಮಮೂರ್ತಿಯ ಬಳಿಯಲ್ಲಿಯೆ ಬಂದು ಕುಳಿತಿರು ವನು. ರಾಮಮೂರ್ತಿಯು ಅವನಿಗೆ ಭಾರತ–ರಾಮಾಯಣ, ಬೇರೆ ಕಥೆ-ಕಾದಂಬರಿಗಳು, ಇವನೆಲ್ಲ ಓದಿ ಹೇಳುವನು. ಚಿನ್ನಪ್ಪನೂ ಬೇಸರಿಯದೆ ಕುತೂಹಲಿಯಾಗಿ ಕೇಳು ವನು. ಚಿನ್ನಪ್ಪನು ರಾಮಮೂರ್ತಿಗೆ ನಲುಮೆಯಿಂದ "ರಾಮಣ್ಣಾ" ಎಂದು ಕರೆಯು ವನು. ರಾಮಮೂರ್ತಿಯು ಚಿನ್ನಪ್ಪನಿಗೆ ಸಲಿಗೆಯಿಂದ "ಚಿನ್ನಾ" ಎಂದು ಕೂಗುವನು. ಇಬ್ಬರದೂ ನಸು ಹೆಚ್ಚುಕಡಿಮೆ ಒಂದೇ ವಯಸ್ಸು.

ನೀಲಮ್ಮನಂತೂ ಕರಣಿಕರ ಮನೆಮಗಳಿದ್ದಂತೆ. ರಾಮಮೂರ್ತಿಯ ತಂಗಿ–ಇಂದಿರೆಗೂ ಅವಳಿಗೂ ಜೀವಾಳದ ಗೆಳೆತನ. ರಾಮಮೂರ್ತಿಯ ತಾಯಿಗೂ ಹೆಂಡತಿಗೂ ಬೇಕಾದವಳು. ಕರಣಿಕರ ಮನೆಯವರು ನೀಲಮ್ಮನನ್ನು ಹೊರಗಿನವಳೆಂದು ಭಾವಿಸಿರಲೇ ಇಲ್ಲ. ನೋಡಿದರೆ ಒಂದೇ ಕುಲದವರಲ್ಲ; ಒಂದೇ ಜಾತಿಯವರಲ್ಲ. ಪ್ರೇಮ ಗೆಳೆತನಗಳು ಜಾತಿ–ಕುಲ–ಗೋತ್ರಗಳನ್ನು ನೋಡುವವೇ ! ಮನೆಗೆಲಸ ಮುಗಿದೊಡನೆಯೆ ನೀಲಮ್ಮನು ಕರಣಿಕರ ಮನೆಗೆ ಬರುವಳು. ಇಂದಿರೆಯೊಡನೆ, ಬೇರೆಯವರೊಡನೆ ಮಾತನಾಡುವಳು, ನಗುವಳು; ಕೆಲೆಯುವಳು.

ರಾಮಮೂರ್ತಿ ಇಂದಿರೆಯೊಡನೆ ಮಾತನಾಡುವಂತೆ–ನಗೆಯಾಡುವಂತೆ–ನೀಲಮ್ಮನೊಡನೆಯೂ ತಿಳಿಮನದಿಂದ ಮಾತನಾಡುವನು. ನಿರ್ವಿಕಾರದ ಬುದ್ಧಿಯಿಂದ ನಗೆಯಾಡುವನು. ರಾಮಮೂರ್ತಿಯ ಅಕಲ್ಮಷವಾದ ಆಚರಣೆಯನ್ನು, ಚದುರೆಯಾದ ನೀಲಮ್ಮನು ಸರಿಯಾಗಿ ಕಂಡುಹಿಡಿದಳು. ಅವನನ್ನು ಪರಕೀಯನೆಂದೆಣಿಸದೆ, ಸಂಕೋಚವಿಲ್ಲದೆ ಮಾತನಾಡುವಳು. ಇಂದಿರೆಯಂತೆ ತಾನೂ ರಾಮಮೂರ್ತಿಗೆ ನಗೆಯಾಡುವಳು. ಎಳೆ ಮಗುವಿನಂತಹ ಎದೆ, ಅಲ್ಲದೆ ಚಿನ್ನಪ್ಪನ ನಂಬುಗೆಯ ಗೆಳೆಯ, ಸಾಲದುದಕ್ಕೆ ತನ್ನ ಒಡನಾಡಿ–ಇಂದಿರೆಯ ಅಣ್ಣ; ಎಂದಮೇಲೆ ನೀಲಮ್ಮನು ರಾಮಮೂರ್ತಿಯೊಡನೆ ಮಾತನಾಡಿದರೆ-ಸರಸವಾಡಿದರೆ-ಅದರಲ್ಲಿ ಅಪರಾಧವೇನಿರುವುದು? ಅಕ್ಕ-ತಮ್ಮ, ಅಣ್ಣ-ತಂಗಿ, ತಾಯಿ-ಮಗ, ತಂದೆ-ಮಗಳು ಪರಸ್ಪರರಲ್ಲಿ ಮಾತನಾಡಿದರೆ, ವಿಪರೀತವಾಗಿ ಯಾರಾದರೂ ಭಾವಿಸುವರೇನು ?

೩

ಪ್ರಶಾಂತವಾಗಿರುವ ಸಾಗರವು, ಬಿರುಗಾಳಿ ಬೀಸಿ, ನೋಡ ನೋಡುವುದರಲ್ಲಿಯೆ ಅಲ್ಲೋಲಕಲ್ಲೋಲವಾಗುವುದು. ಮಿರುಗುವ ತಾರೆಗಳಿಂದ ಬೆಳಗುತಿರುವ ಮುಗಿಲನ್ನು, ನಿಮಿಷದಲ್ಲಿಯೆ ಕಾರ್ಮೋಡವು ಮುಸುಕಿ ಬಿಡುವುದು. ಹಸುರೆಲೆ-ಹೂ-ಕಾಯಿಗಳ ವೃಕ್ಷರಾಜಿಯಿಂದ ಹೊಳೆಯುತಿರುವ ಕಾಡು, ಕಾಡಕಿಚ್ಚಿನಿಂದ ಕ್ಷಣಾರ್ಧದಲ್ಲಿ ಸೀದು ಸೀಕರಿಗೊಳ್ಳುವುದು. ಇದೆಲ್ಲವೂ ಆ ಕಾಲರಾಯನ ಕೈಚಳಕ. ಜಗಚ್ಚಾಲಕನ ಮಾಯೆಯ ಮಾಟ.

ಕರಣಿಕರು, ತನ್ನನ್ನು ಬಿಡಿಸಿ ಚಿನ್ನಪ್ಪನಿಗೆ ತೋಟವನ್ನು ಕೊಟ್ಟದುದಕ್ಕಾಗಿ, ರಾಮಯ್ಯನಿಗೆ ಎದೆಗುದಿ. ಗೊಬ್ಬರದಲ್ಲಿಯ ಕಿಡಿಯಂತೆ, ಹೊಟ್ಟೆಯಕಿಚ್ಚು ಒಳಗೊಳಗೆಯೆ ಹೊತ್ತುತಲಿದ್ದಿತು. ರಾಮಯ್ಯನು ಸಾಹಸಿಗ, ಮೋಸಗಾರ, ಮಾತು ಅರಳೆಯಂತೆ ಮಿದುವು; ಎದೆಯು ಕಬ್ಬಿಣದಂತೆ ಕಠಿನ. ಹೇಗಾದರೂ ಮಾಡಿ, ಕರಣಿಕರಿಗೂ ಚಿನ್ನಪ್ಪನಿಗೂ ಪರಸ್ಪರರಲ್ಲಿ ಕೆಡುಕು ಮನವುಂಟಾಗುವಂತೆ ಮಾಡಬೇಕೆಂದು, ರಾಮಯ್ಯನ ಹಂಬಲ. ಚಿನ್ನಪ್ಪನ ವಿರುದ್ಧವಾಗಿ ತಾನೇನು ಹೇಳಿದರೂ, ಕರಣಿಕರು ಕಿವಿಗೊಡಲಾರರೆಂದು, ರಾಮಯ್ಯನದು ಬಲವಾದ ನಂಬುಗೆ, ಆದೇಕೋ ! ಏನು ಮಾಡ

ಬೇಕೆಂಬ ಬಗೆಹರಿಯದ ಆಲೋಚನೆಯಲ್ಲಿ, ೨-೩ ವರ್ಷಗಳು ಸಂದುಹೋದುವು ಕರಣಿಕರ ವಿಷಯವಾಗಿ ಚಿನ್ನಪ್ಪನ ಮನವನ್ನೇ ಕಲುಷಿತವಾಗಿ ಮಾಡುವುದು, ರಾಮ ಯ್ಯನಿಗೆ ಹಗುರಾಗಿ ಕಂಡಿತು. ಆದುದರಿಂದ ಈಗ ರಾಮಯ್ಯನೊಳ್ಳೇ ಚಿನ್ನಪ್ಪನ ಹಿತ ಚಿಂತಕನು. ಕಳ್ಳನು ಕೋಶಾಗಾರದ ಕಾವಲುಗಾರನಾದಂತೆ.

ಲೌಕಿಕಜನರಿಗೆ ಹೆಂಡತಿಯೆಂಬುವುದೊಂದು ಅಭಿಮಾನದ ಮೂರ್ತಿ. ಮಂದಿ ತಮ್ಮ ಜಾತಿಕುಲಗಳನ್ನು ಹಳಿಯಲಿ ! ಬಂಧು ಭಾಂಧವರನ್ನು ನಿಂದಿಸಲಿ ! ತಾಯಿ ಅಕ್ಕ ತಂಗಿಯರಿಗೆ ಹೆಸರಿಡಲಿ ! ಇನ್ನಾರಿಗಾದರೂ ಹಳಿದಾಗ—ಹೆಸರಿಟ್ಟಾಗ—ಬರದಷ್ಟು ಕೋಪವು, ಆಗದಷ್ಟು ತಾಪವು, ಹೆಂಡತಿಗೆ ಹೆಸರಿಟ್ಟರೆ ಬರುವುದು; ಆಗುವುದು. ಜನರು ಆಗ ಕಣ್ಣಿದ್ದು ಕುರುಡರು; ಕಿವಿಯಿದ್ದು ಕಿವುಡರು. ಅವರ ಅರಿವು ಮರೆಯಾಗುವುದು. ಬಗೆಯು ಬಯಲಾಗುವುದು.

ರಾಮಯ್ಯನು ಇದನೆಲ್ಲ ಚೆನ್ನಾಗಿ ತಿಳಿದು ನೋಡಿದ. ಬಹಳ ದಿವಸದ ಬಗೆಯ ಬಯಕೆಯನು ತೀರಿಸಲು ಯೋಚಿಸಿದ. ವಿಚಾರದಲ್ಲಿರುವುದನ್ನು ಮೆಲ್ಲಗೆ ಆಚಾರದಲ್ಲಿ ತರಲು ತೊಡಗಿದ.

"ಏನೋ ಚಿನ್ನಾ ! ನಿಮ್ಮ ತಾಯಿ ಅರೆಹುಚ್ಚಿಯಂತವಳು. ನೀನೊ 'ಹೊಲ ತೋಟ' ಎಂದು ಯಾವಾಗಲೂ ಹೊರಗೆಯೆ ಇರುವೆ. ನಿನ್ನ ಹೆಂಡತಿಯಿನ್ನೂ ಹರ ಯದ ಹುಡುಗೆ. ಹೆಂಗುಸುರಿಗೆ ಹೆಚ್ಚಾಗಿ ಸ್ವಾತಂತ್ರ್ಯ ಕೊಡುವುದು ಉಚಿತವಲ್ಲ ಎಡಗಣ್ಣು ಬಲಗಣ್ಣುಗಳಿಂದ ನೋಡುತಿರಲೇ ಬೇಕು. 'ಹೆಂಗುಸು ತಿರುಗಿ ಕೆಟ್ಟಿತು; ಗಂ ಡುಸು ಕೂತು ಕೆಟ್ಟಿತು, ಎಂದಿರುವುದನ್ನು ನೀನು ಕೇಳಿಲ್ಲವೇ!" ಈ ಬಗೆಯ ಮಾತು ಗಳನ್ನು ರಾಮಯ್ಯನು ಚಿನ್ನಪ್ಪನೆದುರಿಗೆ ನಾಲ್ಕಾರು ಸಲ ಹೇಳಿದ. "ಇವನು ಇದನೇನು ಹೇಳುತಿರುವನು" ಎಂದು ಚಿನ್ನಪ್ಪನು ಬೆರಗುಗೊಳುತಿದ್ದ; ಮನದೊಳಗೆ ಯೋಚಿಸು ತಲಿದ್ದ.

ಮನುಷ್ಯನ ಹೃದಯವು ಕನ್ನಡಿಯಂತಿರುವುದು. ಕಲಿತವರಾದ ನಾವು, ಬುದ್ಧಿ ಭಾಸ್ಕರನ ಪ್ರತಾಪದಿಂದ, ಈ ಕನ್ನಡಿಯ ಪಾರಜವನೆಲ್ಲ ಹಾರಿಸಿಬಿಡುವೆವು. ಆದರೆ ಕಲಿಯದವರದು, ದಿನದಿನವೂ ರಾವುಗನ್ನಡಿಯಂತಾಗುವುದು. ಯಾವುದಾದರೂ ಭಾವ ನೆಯ ಚಿತ್ರವು ಅದರೊಳಗೆ ಭವ್ಯವಾಗಿ—ಸ್ಫುಟವಾಗಿ—ಮೂಡುವುದು. ಒಮ್ಮೆ ಮೂಡಿ ದುದನ್ನು ಅಳಿಸುವುದೆಂದರೆ, ಅದೆಷ್ಟೊ ಕಷ್ಟದ ಕೆಲಸ. ಚಿನ್ನಪ್ಪನು ರಾಮಯ್ಯನ ಬೆಲ್ಲ ಬೆರೆತ ಮಾತುಗಳಿಗೆ ಬೆರಗಾದ. ಮರುಳಾದ. ಅವನಿಗೆ "ರಾಮಯ್ಯನ ಮಾತಿನಲ್ಲಿ ಹುರು ಳೇನಾದರೂ ಇರಬಹುದೇನು?" ಎನಿಸಿತು. ಬರಬರುತ್ತ ಚಿನ್ನಪ್ಪನು ರಾಮಯ್ಯನ ಮಾ ತುಗಳಿಗೆ ಹೆಚ್ಚಾಗಿ ಕಿವಿಗೊಡಲು ತೊಡಗಿದ.

"ಚಿನ್ನಪ್ಪ ತನ್ನ ಬಲೆಗೆ ಬೀಳುವುದು ಇನ್ನು ಕಠಿನವಿಲ್ಲ" ಎಂದು ರಾಮಯ್ಯ ಕಂಡುಹಿಡಿದ. ಚಿನ್ನಪ್ಪನ ಮನಸಿನಲ್ಲಿ, ನೀಲಮ್ಮನ ವಿಷಯವಾಗಿಯೂ, ರಾಮಮ್ಮೂ

ರ್ತಿಯ ವಿಷಯವಾಗಿಯೂ, ಸಂಶಯವುಂಟಾಗುವಂತಹ ಅದೆಷ್ಟೋ ಮಾತುಗಳನ್ನು, ಆಗಾಗ ಪರ್ಯಾಯದಿಂದ ಹೇಳುತಲಿದ್ದ. ನೀಲಮ್ಮನ ಶುದ್ಧಚಾರಿತ್ರ್ಯಕ್ಕೆ ಹೊಲಸು ಬಣ್ಣ ಬಳಿಯುವ ಅದೆಷ್ಟೋ ಸುದ್ದಿಗಳು, ಕರ್ಣಪರಂಪರೆಯಾಗಿ ಚಿನ್ನಪ್ಪನ ಕಿವಿಗೆ ಬೀಳುವಂತೆ, ಹಂಚಿಕೆ ಮಾಡಿದ. ರಾಮಯ್ಯನು ಹೇಳುತಿರುವಾಗ, ಚಿನ್ನಪ್ಪನಿಗೆ ಅವನ ಮಾತು ನಿಜವೇನೋ ಎನಿಸುತಿದ್ದಿತು. ಆದರೆ ನೀಲಮ್ಮನ ನಿರ್ಮಲ ಹೃದಯವನ್ನು ನೆನೆದು, ಅವಳ ಕೃತ್ರಿಮತೆಯೇನೂ ಕಂಡುಬರದ ಕಣ್ಣನೋಟವನ್ನು ಕಂಡು, ಸಾತ್ವಿಕಮಂದಹಾಸ್ಯದಿಂದ ಕೂಡಿರುವ ಮುದ್ದುಮೋರೆಯನ್ನು ನಿಟ್ಟಿಸಿ, "ರಾಮಯ್ಯನ ಮಾತನಂಬುವುದು ನನ್ನ ಮರುಳುತನ" ಎಂದು ಮರಳಿ ಎನಿಸುತಿದ್ದಿತು.

ಸೋಮವಾರದ ದಿನ. ಚಿನ್ನಪ್ಪನಿಗೆ ತೋಟದಲ್ಲಿ ಬೇರೆ ಕೆಲಸವೇನೂ ಇರಲಿಲ್ಲ. ಬಾಳೆಯ ಬನವನ್ನು ನೋಡುತ್ತ ಸುತ್ತುತಿದ್ದನು "ತಾನೇ ನೀರನುಣಿಸಿ ಬೆಳೆಯಿಸಿದ ಬನವು, ಎಷ್ಟು ಸೊಗಸಾಗಿ ಕಾಣುತಿರುವುದಲ್ಲ"ಎಂದು ಅಭಿಮಾನದಿಂದ ಹಿರಿಹಿರಿ ಹಿಗ್ಗುತಿದ್ದನು. ತನ್ನೊಳಗೆ ತಾನೇ ಕಿರಿನಗೆ ನಗುತಲಿದ್ದನು. ಅಷ್ಟರಲ್ಲಿಯೇ ಅಲ್ಲಿಗೆ ರಾಮಯ್ಯನು ಬಂದ. ಇಬ್ಬರೂ ಅಲ್ಲಿಯೆ ಕುಳಿತರು. ಅದೆಷ್ಟೊ ಮಾತುಗಳನಾಡಿದರು.

ಕೊನೆಗೆ "ಚಿನ್ನಾ ನೀನು ಏನೇ ಅನ್ನು, ನೀಲಮ್ಮನ ವಿಷಯದಲ್ಲಿ ನನಗೆ ಸಂಶಯವೆನಿಸುವುದು. ಅಲ್ಲವೋ ! ರಾಮಮೂರ್ತಿಯು ನಿಮ್ಮ ಯಜಮಾನನಾಗಿದ್ದರೇನಾಯಿತು? ನಿನಗೆ—ಅವನಿಗೆ—ಗೆಳೆತನವಿದ್ದರೇನಾಯಿತು? ಅವನೇನು ಗಂಡುಸಲ್ಲವೇ? ಏನು ವಯಸ್ಸು ಹೋದವನೇ? ಇನ್ನೂ ಹರಯದಭಾರ. ಅವನೊಡನೆ ನೀಲಮ್ಮನದು ಸಲಿಗೆಯಿಷ್ಟೇಕೆ? ಮಾತುಕತೆಗಳೇಕೆ? ನಗೆಯಾಡುವುದೇಕೆ? ಈ ನಡತೆ ನನಗೇನೂ ಸರಿಬೀಳದಪ್ಪಾ!" ಎಂದು ರಾಮಯ್ಯನು ಗಂಭೀರತನದಿಂದ ನುಡಿದ.

"ಏನು ಚಿಕ್ಕಪ್ಪಾ! ಇದರಲ್ಲಿ ತಪ್ಪಾಯಿತೇನು? ನಿಮ್ಮ ಪಾರ್ವತಿಯೊಡನೆ ನಾನು ಮಾತನಾಡುವುದಿಲ್ಲವೇನು? ಅವಳು ನನ್ನೊಡನೆ ನಗೆಯಾಡುವುದಿಲ್ಲವೇನು? ರಾಮಮೂರ್ತಿಯು ನೀಲೆಯನ್ನು ಬೆನ್ನಲಿ ಬಿದ್ದವಳಂತೆ ತಿಳಿದು ಕೊಂಡಿದ್ದಾನೆ. ನನಗೆ ಇದರಲ್ಲಿ ನಸುವಾದರೂ ವಿಪರೀತ ತೋರದು. ರಾಮಣ್ಣನ ಹೃದಯವು ಅದೆಷ್ಟು ತಿಳಿಯಾಗಿದೆಯೆಂಬುದನ್ನು, ನಾನು ಸರಿಯಾಗಿ ಅರಿತಿರುವೆನು. ಎಂತಲೇ ಆವನ ವಿಷಯದಲ್ಲಿ ನನಗೆಂದೂ ಸಂಶಯಬಾರದು." ಚಿನ್ನಪ್ಪನು ಚಲಿಸದ ಹೃದಯದಿಂದ ನುಡಿದ.

"ಹುಚ್ಚನಿರುವಿ ನೀನು! ಇನ್ನೂ ಹುಡುಗ ! ಸಂಸಾರದ ಅನುಭವದ ಪೆಟ್ಟುಗಳಿನ್ನೂ ತಲೆಗೆ ಬಡಿದಿಲ್ಲ. ಏನೋ ಚಿನ್ನಾ ! ಬೆಂಕಿಯ ಬಳಿಯಲ್ಲಿ ಬೆಣ್ಣೆಯನಿಟ್ಟರೆ ಕರಗದೆ ಇರುವುದೆ ? ಅರಳಿ ಕಂಪುಸೂಸುತಿರುವ ಸಂಪಿಗೆಹೂವು ಕೈಗೆ ದೊರೆತಾಗ, ಮೂಸಿ ನೋಡದ ಮರುಳನು ಲೋಕದಲ್ಲಿ ಯಾವನಾದರೂ ಇರುವನೇ ? "ಹೆಣ್ಣು ಹೊನ್ನು ಹಣ್ಣುಗಳನ್ನು ಕಂಣೆಂದೆ ಕಂಡು ಬಯಸದವರಿಲ್ಲ" ಎಂಬ ಮಾತನ್ನು ಕೇಳಿ

ಲ್ಲವೆ? ಚಿನ್ನಾ! "ಹರೆಯದ ಹೆಣ್ಣು ಮಕ್ಕಳೊಡನೆ, ಹಡೆದತಂದೆ ಕೂಡ ಹೆಚ್ಚಾಗಿ ಮಾತ ನಾಡಬಾರದು" ಎಂದು ಹಿರಿಯರು ಹೇಳುವರಲ್ಲ! ಈ ಮಾತು ಹುಸಿಯೆಂದು ತಿಳಿಯ ಬೇಡ. ರಾಮಮೂರ್ತಿಯೂ ನಮ್ಮಂತೆಯೆ ಉಂಡುಟ್ಟ ಮನುಷ್ಯ. ಅವನೇನು ದೇವ ರೇ ? ಸಾಧುವೇ ? ಸಂತನೇ? ಸನ್ಯಾಸಿಯೇ? ಅವನದೇನು ಹೆಚ್ಚುಗಾರಿಕೆ? ನೋಡಪ್ಪಾ! ನಿನ್ನದು ಅವನದು ಜೀವಾಳದ ಗೆಳೆತನ. ಇಬ್ಬರಲ್ಲಿಯೂ ಬಲವಾದ ನಂಬುಗೆ. ನಡುವೆ ನಾವು ಹೊರಗಿನವರು ಮಾತನಾಡಿ, ಅದೇಕೆ ಕೆಟ್ಟವರಾಗಬೇಕು?" ರಾಮಯ್ಯ ಎದೆಗೆ ನಡುವಂತೆ ಮೊನೆಮಾತುಗಳನಾಡಿದನು.

"ಚಿಕ್ಕಪ್ಪ! ನೀನು ನನ್ನ ಹೆಂಡತಿಗೆ ಹೆಸರನಿಟ್ಟುದುದನ್ನೂ ತಾಳಿಕೊಂಡೆನು. ಆದರೆ ರಾಮಣ್ಣನ ಹೆಸರಿಗೆ ಹೊಲಸು ಬಳಿಯುತಿರುವುದನ್ನು ಕಂಡು, ನನ್ನಿಂದೆ ಸಹಿಸುವು ದಾಗದು. ಇನ್ನೊಮ್ಮೆ ಈ ಮಾತನ್ನು ನನ್ನ ಮುಂದೆ ನುಡಿಯಬೇಡ. ರಾಮಮೂರ್ತಿಯು ನಮ್ಮನಿಮ್ಮೊಳಗಿನ ಮನುಷ್ಯನಲ್ಲ. ನಿಜವಾಗಿಯೂ ಅವನೊಬ್ಬ ಸಾಧುವು" ಚಿನ್ನಪ್ಪನು ಕನಿಕರದ ದನಿಯಿಂದ ನುಡಿದ.

"ಸಾಧುವೇ! ಅವನೆಂತಹ ಸಾಧು! ಅಹುದಹುದು ತಿಳಿಯಿತು! ಕಾಮಸಾಧುವ ಲ್ಲವೇ! ಚಿನ್ನಾ ಬರೀ ಮಾತುಗಳನ್ನು ಬೆಳೆಯಿಸುವುದರಿಂದ ಬರುವುದಾದರೂ ಏನು! "ನೀಲ ಮ್ಮನ ವಿಷಯವಾಗಿ ರಾಮಮೂರ್ತಿಯ ಮನವು ತಿಳಿಯಾಗಿಲ್ಲ" ಎಂದು ಒಂದೇ ಮಾ ತಿನಲ್ಲಿ ಹೇಳಿ ಬಿಡುವೆನು. ನೀನು ಬೇಕಾದರೆ ಪರೀಕ್ಷೆಮಾಡಿ ನೋಡು. ನಾನು ಕಂಡು ದುದೆಲ್ಲವನ್ನು ಬಾಯಿಬಿಚ್ಚಿ ಹೇಳಲಿಕ್ಕೆ ನನ್ನ ಮನವು ಮೆಚ್ಚದು. ಈಗ ಹೆಚ್ಚಿಗೇನೂ ಹೇಳುವದಿಲ್ಲ- ಮನೆಗೆ ಬೆಂಕಿ ತಗಲುವ ಮೊದಲೆ ಮುನ್ನೋಡಿ ನಡೆಯುವದು ಒಳಿತು. ಏನೇ ಇರಲಿ ! ನೀಲಮ್ಮನ ಮೇಲೆ, ನಿನ್ನ ಕಣ್ಣಿರಲಿ, ಎಂದರಾಯಿತು" ಎಂದು ನುಡಿದು ರಾಮಯ್ಯನು, ಚಿನ್ನಪ್ಪನ ಹರಗಿ ಹದಗೊಳಿಸಿದ ಎದೆಯಲ್ಲಿ, ಸಂಶಯದ ಬೀಜವನ್ನು ಬಿತ್ತಿದನು. ಕೂಡಲೆ "ನಾನೀಗ ಮನೆಗೆ ಹೋಗಬೇಕಾಗಿದೆ." ಎಂದು ನುಡಿದು ಹೋ ಗಿಬಿಟ್ಟನು. ಚಿನ್ನಪ್ಪನು ಬಹಳ ವೇಳೆಯವರೆಗೆ ಆಲೋಚಿಸುತ್ತ, ಅಲ್ಲಿಯೆ ಕುಳಿತಿದ್ದ. ರಾಮಯ್ಯನು ಊದಿದ ಮಾಟದ ಮಂತ್ರವು, ಅವನನ್ನು ಮಂಕು ಮಾಡಿತೇನೋ !

ಎಂದಿನಂತೆ ಚಿನ್ನಪ್ಪನು ನೀಲಮ್ಮನೊಡನೆ ಮಾತನಾಡುವನು; ನಗೆಯಾಡುವನು. ಆದರೆ ಅವನಿಗೀಗ ಅದಾವುದೊ ಸಂಕೋಚವೃತ್ತಿಯು ನಡುವೆಬಂದು ನಿಂತು, ಹಿಡಿದು ಬಿಟ್ಟಂತೆ ಮಾಡುತಿದ್ದಿತು. ಚಿನ್ನಪ್ಪನ ಕಂಣುಗಳಿಗೆ ಈಗ ಹೊಸದೊಂದು ಕೆಲಸ ; ನೀಲಮ್ಮನ ಪ್ರತಿಯೊಂದು ಕೃತಿಯ ಕಡೆಗೂ ನಿಟ್ಟಿಸಿ ನೋಡುತಿರುವುದು. ಆದರೆ ನೀಲಮ್ಮನಿಗೆ ಇದಾವುದರ ಸುಳಿವು ಕೂಡ ತಿಳಿಯದು. ಅವಳು ತನ್ನ ಮೊದಲಿನ ದಿನಚ ರ್ಯೆಯಲ್ಲಿ, ಕೊಂಚವೂ ಹೆಚ್ಚುಕಡಿಮೆ ಮಾಡಿರಲಿಲ್ಲ.

೪.

ರಾಮಮೂರ್ತಿಯ ತಂಗಿ ಇಂದಿರೆಯು, ಇದೀಗ ಅತ್ತೆಯ ಮನೆಯಿಂದ ಬಂದಿ ರುವಳು. ಆದುದರಿಂದ ನೀಲಮ್ಮನು ಕೈತೆರವಾದಾಗಲೆಲ್ಲ ಕರಣಿಕರ ಮನೆಗೆ ಬಂದು

ಕುಳಿತುಕೊಳ್ಳುವಳು. ಇಬ್ಬರೂ ಕೂಡಿ ಅದೆಷ್ಟೋ ಮಾತನಾಡುವರು, ಏನನಾದರೂ ಆಟವನಾಡುವರು.

ಚಿನ್ನಪ್ಪನ ತಾಯಿ ಗಂಗಮ್ಮ, ಭಾವಿಕಮುದಿಕೆ; ಈಗಿನ ಕಾಲದಲ್ಲಿ ಅವಳಿಗೆ ಅರಿ ಹುಚ್ಚಿಯೆಂದು ಹೇಳಿದರೂ ನಡೆಯುವುದು. ಗಂಗಮ್ಮನಿಗೆ ಸೊಸೆಯು ತಪ್ಪುಮಾಡಿದು ದೂ ತಿಳಿಯದು; ಒಪ್ಪು ಮಾಡಿದುದೂ ತಿಳಿಯದು. ನೀಲಮ್ಮನಲ್ಲಿ ಅವಳದು ನಿರಪೇಕ್ಷ ವಾದ ಪ್ರೇಮ. ಮಗನಹೆಂಡತಿ, ಅಣ್ಣನ ಮಗಳು, ಅಲ್ಲದೆ ಗಂಗಮ್ಮನಿಗೆ ಹೆಣ್ಣು ಮಕ್ಕಳಿಲ್ಲ. ಮಗಳೆಂದರೂ ನೀಲಮ್ಮ, ಸೊಸೆಯೆಂದರೂ ನೀಲಮ್ಮ ; ನೀಲಮ್ಮನೇನು ಮಾಡಿದರೂ ಅವಳಿಗೆ ಅಕ್ಕರತೆ. ನೀಲಮ್ಮನು ಅಡ್ಡದಾರಿಯ ತುಳಿಯುವವಳಲ್ಲವೆಂದು, ಆ ಮುದುಕೆಯ ಭಾವಿಕ ನಂಬುಗೆ. ಅದರಂತೆಯೇ ನೀಲಮ್ಮನ ನಡೆವಳಿಕೆಯಾದರೂ ಗಂಗೆಯ ನೀರಿನಂತಹದು. ನೀಲಮ್ಮನು, ಕರಣಿಕರ ಮನೆಗೆ ಹೆಚ್ಚಾಗಿ ಹೋಗಿಬರುತಿ ರುವುದಕ್ಕೆ ಅತ್ತೆಯದೇನೂ ಆಕ್ಷೇಪಣೆಯಿಲ್ಲ.

ಒಂದುದಿನ ಸಂಜೆಯ ನಾಲ್ಕುಗಂಟೆ, ಕರಣಿಕರ ಮನೆಯಲ್ಲಿ ನೀಲಮ್ಮ–ಇಂದಿರೆ ಕೂಡಿ ಪಗಡೆಯನಾಡುತಿದ್ದರು. ರಾಮಮೂರ್ತಿಯು ಬಳಿಯಲ್ಲಿಯೆ ನೋಡುತ್ತ ಕುಳಿತಿದ್ದ. ನಮ್ಮ ಅಕ್ಕತಂಗಿಯರು ಕೂಡಿ ಆಡುತಿರುವಾಗ ನಾವು ಬಳಿಯಲ್ಲಿದ್ದು ನೋಡುವುದಿಲ್ಲವೇ ?

"ಇಂದಿರಾ ! ಇಲ್ಲಿಗೆ ಕೊಂಚ ಬಂದು ಬಿಟ್ಟುಹೋಗೇ" ಒಳಗಣಿಂದೆ ತಾಯಿಯ ಕೂಗು ಕೇಳಿತು. ಇಂದಿರೆಯು ಅವಸರದಿಂದ ಎದ್ದುಹೋಗುವಾಗ, ಕಾಲುತೊಡಕಿ ಬೀಳುವಂತಾದಳು. " ಹಂ ಮೆಲ್ಲಗೆ ಹೋಗಮ್ಮ! ಎಲ್ಲಿಯಾದರೂ ಬಿದ್ದು ಕಾಲುಗೀಲು ಮುರಿದುಕೊಂಡೆಯೆಂದರೆ ಏನಾದೀತು ನೋಡು " ಎಂದು ರಾಮಮೂರ್ತಿ ನಗುತ್ತ ನುಡಿದ. ನೀಲಮ್ಮನೂ ನಕ್ಕಳು.

ಇಂದಿರೆಯು ಒಳಗೆ ಹೋದಳು. ರಾಮಮೂರ್ತಿ, ನೀಲಮ್ಮ, ಇಬ್ಬರೆ ನಡು ಮನೆಯಲ್ಲಿ ಕುಳಿತಿರುವರು. ಆಗ ನಕ್ಕ ನಗೆಯು ಇನ್ನೂ ಇಬ್ಬರ ಮೋರೆಯಮೇಲೆಯೂ ಮುಗುಳಾಗಿ ಮೂಡಿದ್ದಿತು. ಚಿನ್ನಪ್ಪನು ರಾಮಮೂರ್ತಿಯನು ಕಾಣಬೇಕೆಂದು ಬಂ ದನು. ಹಜಾರದಲ್ಲಿ ಇರಲಿಲ್ಲ. ನೇರವಾಗಿ ನಡುಮನೆಗೆ ಬಂದುಬಿಟ್ಟನು. ನೋಡಿದನು ರಾಮಮೂರ್ತಿ–ನೀಲಮ್ಮ ಇಬ್ಬರೇ ಕುಳಿತಿರುವರು. ಇಬ್ಬರ ಮೋರೆಯಮೇಲೆಯೂ ಮೆಲುನಗೆ. ಚಿನ್ನಪ್ಪನ ಎದೆ ದಡದಡಿಸಿತು ಮೈನವಿರೆದ್ದಿತು. ಏನನೂ ಮಾತನಾಡದೆ ಅದೆಂತಹದೊ ನೋಟದಿಂದ, ನೀಲಮ್ಮನ ಕಡೆಗೊಮ್ಮೆ ರಾಮಮೂರ್ತಿಯ ಕಡೆಗೊಮ್ಮೆ ನೋಡುತ್ತ ನಿಂತನು.

" ಇದೇನೋ ಚಿನ್ನಾ ! ಹೀಗೇಕೆ ನೋಡುತ್ತ ನಿಂತುಕೊಂಡೆ ? ಏನು ಕೆಲಸ ವಿದೆಯೋ ? ಇಂದಿರೆ-ನೀಲಮ್ಮ ಪಗಡೆಯಾಡುತಿರುವರು. ತಮಾಷೆಗಾಗಿ ನಾನೂ ನೋಡುತ್ತ ಕುಳಿತಿರುವೆನು. ಅಮ್ಮ ಕರೆದಳು, ಇಂದಿರೆಯು ಇದೇ ಈಗ ಒಳಕ್ಕೆ ಹೋಗಿ

ರುವಳು. ನಿಂತುಕೊಂಡೆಯೇಕೆ ? ಕೆಲಸವಿಲ್ಲದಿದ್ದರೆ ನೀನೂ ಕುಳಿತುಕೋ ! ಒಂದು ಗಳಿಗೆ ನೋಡೋಣ " ರಾಮಮೂರ್ತಿಯು ನಿರ್ವಿಕಾರ ಬುದ್ಧಿಯಿಂದ ನುಡಿದನು.

ಚಿನ್ನಪ್ಪನು ತನ್ನ ಬಗೆಯನ್ನು ಹೆಚ್ಚಾಗಿ ಹೊರಗೆ ತೋರಗೊಡಲಿಲ್ಲ. ನಸುವೆ ತೋರಿಸಿದ್ದರೂ ಅದನ್ನು ಒಮ್ಮೆಲೆ ಕಂಡುಕೊಳ್ಳುವಷ್ಟು, ರಾಮಮೂರ್ತಿಯ ಬುದ್ಧಿ ಚುರುಕೂ ಅಲ್ಲ.

"ಈಗ ಕೆಲಸವಿದೆ. ಕುಳಿತುಕೊಳ್ಳುವಂತೆಯಿಲ್ಲ. ಬಾಳೆಯ ಕಾಯಿಗಳಿಗೆ ಗಿರಾಕಿ ಬಂದಿದೆ. ನೀವು ನಾಳೆ ಮುಂಜಾನೆ ತೋಟಕ್ಕೆ ಬಂದುಬಿಡಿ. ಇದನ್ನು ಹೇಳಿಹೋಗ ಬೇಕೆಂದೇ ಇಲ್ಲಿಗೆ ಬಂದಿದ್ದೆ " ಎಂದು ನುಡಿದವನೆ ಚಿನ್ನಪ್ಪ ನಡೆದೇ ಬಿಟ್ಟ. ಅಲ್ಲಿ ನಿಲ್ಲಲೇ ಇಲ್ಲ.

ನೀಲಮ್ಮನು ಚತುರೆ, ಚಿನ್ನಪ್ಪನ ನೋಟದ ಬಗೆಯನ್ನೂ, ಮಾತಿನ ರೀತಿಯನ್ನೂ, ಅವಸರದಿಂದ ಅಲ್ಲಿ ನಿಲ್ಲದೆ ಹೋಗಿ ಬಿಟ್ಟುದನ್ನೂ, ಕಂಡಳು. " ಇದೇನೋ ಹೊಸ ಬಗೆಯಾಗಿರುವುದು" ಎಂದು ತಿಳಿದಳು. ಎದೆ ಗದಗದಿಸಿತು, ಮೋರೆಯಕಳೆ ಇಳಿಯಿತು. ಆಡುವುದಕ್ಕೆ ಮನಸು ಒಲ್ಲದಾಯಿತು. ಇಂದಿರೆಯು ಬಂದೊಡನೆಯೆ ಏನೇನೋ ಮನೆಗೆಲಸದ ಕಾರಣ ಹೇಳಿ " ಮತ್ತೆ ಬರುವೆನು " ಎಂದು ನುಡಿದು, ಮನೆಗೆ ಹೋಗಿ ಬಿಟ್ಟಳು.

ಚಿನ್ನಪ್ಪನು ಅಂದು ತೋಟದಿಂದ ಮನೆಗೆಬಂದ. ಮೋರೆ ಬಾಡಿದ್ದಿತು. ಏನನೋ ಯೋಚಿಸುತಿರುವಂತೆ ಕಂಡಿತು. " ನೀಲೇ! ನೀನಿನ್ನು ಕರಣಿಕರ ಮನೆಗೆ ಕಾಲಿಕ್ಕ ಕೂಡದು " ಎಂದು ಚಿನ್ನಪ್ಪನು ಬಿಟ್ಟತಾದ ( ಕರ್ಕಶವಾದ ) ಮಾತಿನಿಂದ ನೀಲಮ್ಮನಿಗೆ ಅಂದೇ ಹೇಳಿದ. ಕೇಳಿ ಅವಳೆದೆಗೆ ಸಿಡಿಲು ಬಡಿದಂತಾಯಿತು. "ತನ್ನ ಗಂಡನ ಮನವು ಇಂದೆಯೇ ಹೀಗಾಗಲು ಕಾರಣವೇನು" ಎಂದು ಯೋಚಿಸಿದಳು.

ರಾಮಮೂರ್ತಿಯ ವಿಷಯದಲ್ಲಿ ಚಿನ್ನಪ್ಪನ ಮನವು ಕಲುಷಿತವಾಗಿದ್ದರೂ, ಅವನ ಸೌಮ್ಯವಾದ ಸಾತ್ವಿಕ ಮುಖವನ್ನು ನೋಡಿದಾಗ, ಮೋಸವೇನೇನೂ ಬೆರೆಯದ ಮಾತುಗಳನು ಕೇಳಿದಾಗ, ಹೃದಯದ ಕೊಲಸು ಉಡುಗುತಿದ್ದಿತು. ಮತ್ತೆ ರಾಮ ಮೂರ್ತಿಯ ಮೋರೆಯು ಮರೆಯಾದೊಡನೆಯೆ, ಚಿನ್ನಪ್ಪನ ಎದೆಯಲ್ಲಿ ಚಿಂತೆಯಸಂತೆ ನೆರೆಯುವುದು. ಕ್ರೋಧ ಮತ್ಸರಗಳು ಕೇಕೆಹಾಕಲು ತೊಡಗುವುವು. ರಾಮಮೂರ್ತಿಯಿಂದ ಆದಷ್ಟು ದೂರವಿರಬೇಕೆಂದು, ಮನವೆಳಸುವುದು. ಮರಳಿ ರಾಮಮೂರ್ತಿಯ ಪರಿಶುದ್ಧವಾದ ಪ್ರೇಮದ ನೆನಪಾದೊಡನೆಯೆ ಚಿನ್ನಪ್ಪನ ಮನವು ತೂಗುಯ್ಯಾಲೆಯನಾಡುವುದು.

೫

ಕನ್ನಡಿಯು ಅದೆಷ್ಟು ಹೊಳಪುಳ್ಳದೇ ಇರಲಿ ! ಚೊಕ್ಕಟ ಒರಸುತಿರದಿದ್ದರೆ ದಿನಾಲು ಅಷ್ಟಷ್ಟೇ ಧೂಳಿ ಕುಳಿತು, ಮೋರೆ ಕಾಣದಂತಾಗುವುದು. ಮನುಷ್ಯನ ಬಗೆ-

ಗನ್ನಡಿಯದಾದರೂ ಇದೇರೀತಿ. ಯಾರ ವಿಷಯಕವಾಗಿಯಾದರೂ ಸಂಶಯಬಂದಾಗ, ಅದನ್ನು ಹೊರಗೆ ಆಡಿತೋರಿಸಿ, ಸಂಶಯನಿರಸನ ಮಾಡಿಕೊಳ್ಳದಿದ್ದರೆ, ಆ ಬಗೆಗನ್ನಡಿಗೂ ಹೊಲಸು ಮುಸುಕುತ್ತ ಹೋಗುವುದು. ಸಂಶಯಾಸ್ಪದರಾದ ಜನರ ಪ್ರತಿಯೊಂದು ಕೃತಿಯನ್ನೂ, ಮನುಷ್ಯನು ಆಗ ವಿಪರೀತವಾಗಿ ತಿಳಿಯುವನು. ಅವರಿಂದ ಸ್ವಾಭಾವಿಕವಾಗಿ ತಪ್ಪು ತಡೆಗಳಾದರೂ ಅದನ್ನು ಅಪರಾಧವಾಗಿ ಭಾವಿಸುವನು.

ಚಿನ್ನಪ್ಪನು ಮೂರುನಾಲ್ಕು ದಿನಗಳಿಂದ ಕರಣಿಕರ ಮನೆಗೆ ಬಂದಿರಲಿಲ್ಲ. ರಾಮಮೂರ್ತಿಗೆ ಚಿನ್ನಪ್ಪನನ್ನು ಕಾಣಬೇಕೆಂದು ಕುತೂಹಲ. ತಾನಾಗಿಯೆ ಚಿನ್ನಪ್ಪನ ಮನೆಗೆ ಹೋದನು. ಚಿನ್ನಪ್ಪನಿನ್ನೂ ತೋಟದಿಂದ ಬಂದಿರಲಿಲ್ಲ. ಗಂಗಮ್ಮನೂ ಮನೆಯಲ್ಲಿರಲಿಲ್ಲ. ಎಲ್ಲಿಯೋ ಹೊರಗೆ ಹೋಗಿದ್ದಳು. ನೀಲಮ್ಮನು, ಕಾಳುಕಡಿ ಹಸನು ಮಾಡುತ್ತ ಪಡಸಾಲೆಯಲ್ಲಿಯೆ ಕುಳಿತಿದ್ದಳು.

" ಏನು ನೀಲಮ್ಮ! ಚಿನ್ನನಿನ್ನೂ ಮನೆಗೆ ಬಂದಿಲ್ಲವೇನು? " ರಾಮಮೂರ್ತಿ ಆತುರದಿಂದ ಕೇಳಿದನು.

"ಇಲ್ಲ ಇನ್ನೂ ಬಂದಿಲ್ಲ. ಇಷ್ಟರಲ್ಲಿಯೆ ಬರಬಹುದು. ಏನು ಕೆಲಸವಿದ್ದಿತೇ!" ನೀಲಮ್ಮನು ಸ್ವಾಭಾವಿಕವಾದ ಮೆಲುನಗೆಯ ಮೋರೆಯಿಂದ ಕೇಳಿದಳು.

" ಕೆಲಸವೇನೂ ಇರಲಿಲ್ಲ. ಮೂರು ನಾಲ್ಕುದಿನಗಳಿಂದ ಚಿನ್ನಪ್ಪನನ್ನು ನೋಡಿಯೇ ಇಲ್ಲ. ಮನೆಯಕಡೆಗೆ ಏಕೆಬಂದಿಲ್ಲವೆಂಬುದನು ಕಾಣಲು ಬಂದೆ " ರಾಮಮೂರ್ತಿ ಹೇಳಿದನು.

ನೀಲಮ್ಮನ ಮನವು ಹೇಗೆ ಹೇಗೆಯೋ ಆಯಿತು. ಅದು ಬಹಿರಂಗದಲ್ಲಿ ಒಡೆದು ತೋರದಂತೆ ಅವಳು ಎಚ್ಚರಪಟ್ಟಳು "ಮೂರುನಾಲ್ಕು ದಿನಗಳಿಂದ ನನಗೂ ಬರುವದಾಗಿಯೇ ಇಲ್ಲ. ಇಂದಿರಕ್ಕ, ಏನೆನ್ನುತಿರುವಳೋ! ಮನೆಗೆಲಸದಲ್ಲಿ ಕೊಂಚವಾದರೂ ಬಿಡುವೇ ದೊರೆಯಲೊಲ್ಲದು" ನೀಲಮ್ಮನು ವಸ್ತುಸ್ಥಿತಿಯನ್ನು ಮರೆಮಾಡಿ ಹೇಳಿದಳು.

"ಇಂದಿರೆಯು ' ನೀಲಮ್ಮನೇಕೆ ಬಂದಿಲ್ಲವೋ ' ಎಂದು ಯಾವಾಗಲೂ ಕನವರಿಸುತ್ತಲೆ ಇರುವಳು. ಇರಲಿ! ನೀಲಮ್ಮಾ , ನಾನಿಲ್ಲಿಗೆ ಬಂದಿದ್ದೆನೆಂದು ಚಿನ್ನಪ್ಪನಿಗೆ ಹೇಳು. ಅವನನ್ನು ನಮ್ಮ ಮನೆಗೆ ಕಳುಹಿಸು." ರಾಮಮೂರ್ತಿ ಮಾತನಾಡಿ ಮರಳಿ ನಡೆದ- ಇನ್ನೂ ಬಾಗಿಲು ದಾಟಿರಲಿಲ್ಲ. ಹೊರಗಣಿಂದೆ ಚಿನ್ನಪ್ಪನೂ ಬಂದನು; ರಾಮಮೂರ್ತಿಯನ್ನು ಮನೆಯಲ್ಲಿ ಕಂಡನು. ಸಂತಪ್ತನಾದನು.

ಚಿನ್ನಪ್ಪನು ಮಾತನಾಡುವದಕ್ಕೆ ಮೊದಲೇ ರಾಮಮೂರ್ತಿ ನುಡಿದನು. "ಏನೋ ಚಿನ್ನಾ! ಈಗ ಮೂರು ನಾಲ್ಕು ದಿನಗಳಿಂದ ಮನೆಯಕಡೆಗೆ ಬಂದೇ ಇಲ್ಲವಲ್ಲ! ಅದೇಕೆಂದು ನೋಡಲು ಈಗ ನಾನೇ ಇಲ್ಲಿಗೆ ಬಂದುಬಿಟ್ಟೆನು. ಇನ್ನೂ ಊಟವಾಗಿಲ್ಲವೇನೋ

ಮೊದಲು ಊಟಮಾಡು! ಬಳಿಕ ಕೆಲಸವಿಲ್ಲದಿದ್ದರೆ ಮನೆಯಕಡೆಗೆ ಬಂದು ಬಿಡು."

ರಾಮಮೂರ್ತಿಯು ಅಂತಃಕರಣದಿಂದಾಡಿದ ಈ ಮಾತುಗಳಿಂದ, ಚಿನ್ನಪ್ಪನ ಸಂತಾಪವು ಕೊಂಚ ಶಮನವಾಯಿತು. "ತೋಟದಲ್ಲಿ ಕೆಲಸ ಹೆಚ್ಚಾಗಿಯಿದೆ. ಬರ ಲಿಕ್ಕೆ ವೇಳೆಯು ತೆರವೇ ಇಲ್ಲ. ಊಟಮಾಡಿ ನಾನು ಬರುವೆನು. ನೀವು ನಡೆಯಿರಿ" ಎಂದು ಕುಗ್ಗಿದ ದನಿಯಲ್ಲಿ ಅವನು ಮಾತನಾಡಿದನು.

ರಾಮಮೂರ್ತಿ ಹೋಗಿಬಿಟ್ಟ. ಚಿನ್ನಪ್ಪನ ಮನದಲ್ಲಿ ಮತ್ತೆ ಗಲಾಟೆಯೆದ್ದಿತು. ರಾಮಮೂರ್ತಿಯು ತಾನಿಲ್ಲದಾಗ–ತಾಯಿಯಿಲ್ಲದಾಗ–ತಮ್ಮ ಮನೆಗೆ ಬಂದುದಕ್ಕಾಗಿ ಬಗೆ ಹರಿಯದ ಯೋಚನೆಯವನಿಗೆ. ಊಟವನ್ನು ಕೂಡ ಸರಿಯಾಗಿ ಮಾಡಲಿಲ್ಲ. "ಹೀಗೇಕೆ" ಎಂದು ನೀಲಮ್ಮ ಕೇಳಿದರೆ "ಇಂದೇಕೋ ಮೈಯಲ್ಲಿ ಚೆನ್ನಾಗಿಲ್ಲ" ಎಂದ ಚಿನ್ನಪ್ಪನ ಉತ್ತರ. ಹೆಚ್ಚಿಗೆ ಮಾತುಗಳಿಲ್ಲ. ನೀಲಮ್ಮನು ಇದನೆಲ್ಲ ಕಂಡು ಹುಚ್ಚಿ ಯಂತಾದಳು. ಊಟವಾದೊಡನೆಯೆ ಚಿನ್ನಪ್ಪನು ಕರಣಿಕರ ಮನೆಗೆ ಹೋಗಲಿಲ್ಲ ಮುಸುಕು ಹಾಕಿ ಮಲಗಿಬಿಟ್ಟ. ಮಲಗಿದುದು ನಿದ್ರೆಯಲ್ಲಿಯೋ ಯೋಚನೆಯಲ್ಲಿಯೋ ತಿಳಿಯದು.

ಇದಾದ ಮರುದಿನವೆ ಸಂಜೆಯಕಡೆಗೆ ರಾಮಮೂರ್ತಿ, ಚಾವಡಿಯ ಕಟ್ಟೆಯ ಮೇಲೆ ಕುಳಿತುಕೊಂಡಿದ್ದ. ಬಳಿಯಲ್ಲಿ ಎಷ್ಟೋ ಜನರು ಕುಳಿತಿದ್ದರು. ಅವರಲ್ಲಿ ಚಿನ್ನಪ್ಪನೂ ಇದ್ದ, ಎಲ್ಲರೂ ಕೂಡಿ ಏನೇನೋ ಮಾತನಾಡುತಿದ್ದರು. ನಡುನಡುವೆ ಗಟ್ಟಿಯಾಗಿ ನಗುತಿದ್ದರು. ನೀರತರಲು ಹೋಗಿ ಬರುವ ದಾರಿ, ಈ ಚಾವಡಿಯ ಮುಂಬದಿಯಲ್ಲಿಯೇ ಹಾದು ಹೋಗಿರುವುದು. ನೀರ ಕೊಡ ಹೊತ್ತುಕೊಂಡು, ದನ ಗಳಿಗೆ ನೀರು ಕುಡಿಸಿಕೊಂಡು, ಅದೆಷ್ಟೋ ಜನರು ಹೋಗಿಬರುತಲಿದ್ದರು.

ನೀಲಮ್ಮನು ನೀರು ತುಂಬಿದ ಕೊಡ ಹೊತ್ತುಕೊಂಡು ಬಂದಳು. ಸಂಗಡ ಬೇರೆ ನಾಲ್ಕಾರು ಜನ ಹೆಣ್ಣುಮಕ್ಕಳು; ಎಲ್ಲರೂ ಕೂಡಿ ಮಾತನಾಡುತ್ತ ಬರುತಲಿದ್ದರು. ತೀರ ಚಾವಡಿಯ ಬಳಿಗೆ ಬಂದರು. ತಮ್ಮೊಳಗೆ ಅದಾವ ಮಾತನಾಡಿದ್ದರೊ? ಎಲ್ಲರ ಮೋರೆಯಮೇಲೆಯೂ ನಗೆಮಲ್ಲಿಗೆ ಅರಳಿದ್ದಿತು. ಎಲ್ಲರೂ ಚಾವಡಿಯ ಬಳಿಯಿಂದೆ ಹಾದು ಹೋದರು. ಹೋಗುವಾಗ ನೀಲಮ್ಮನ ನಗೆಮೊಗದ ನೋಟ, ರಾಮಮೂ ರ್ತಿಯ ನೋಟ, ಸ್ವಾಭಾವಿಕವಾಗಿ ಸಮ್ಮಿಲಿತವಾದುವು. ಇವರಿಬ್ಬರ ನೋಟದ ಕೂ ಟವನ್ನು ಚಿನ್ನಪ್ಪನು ಕಂಡುಹಿಡಿದ. ಮೈ ಜುಮ್ಮೆಂದಿತು. ನವಿರೆದ್ದಿತು. ಸಂಶಯಸಾಗ ರದಲ್ಲಿ ಬಲವಾದ ಬಿರುಗಾಳಿ ಬೀಸಿ, ತೆರೆಗಳು ತಾಕಲಾಡಿದುವು. ಹೃದಯದಲ್ಲಿ ಅಸ ಹ್ಯವಾದ ಗಲಬಿಲಿಯುಂಟಾಯಿತು. ಕೆಂಗಣ್ಣು ಅರಳಿದುವು. ತಲೆಯು ಕಾದು ಹೋಯಿತು. ಅದೆಲ್ಲವನು ಮುಚ್ಚಿಕೊಂಡು ಕೆಲವೇಳೆ ಹಾಗೆಯೇ ಕುಳಿತ. ಬಳಿಕ ಮನೆಗೆ ಹೋಗುವೆನೆಂದು ಹೊರಟ. ಹೋಗುವಾಗ ಚಿನ್ನಪ್ಪನು ರಾಮಮೂರ್ತಿಯನ್ನು ಹೃದಯವಿದಾರಕವಾದ ನೋಟದಿಂದ ನೋಡಿದ. ರಾಮಮೂರ್ತಿ ಇದನೇನೂ ಕಾಣಲಿಲ್ಲ.

ನೀಲಮ್ಮನ ವಿಷಯವಾಗಿ ಚಿನ್ನಪ್ಪನ ಬಗೆಯಲ್ಲಿ ಹುಟ್ಟದ ಸಂಶಯದ ಸಸಿಯು, ಇಂದು ಬೆಳೆದು, ಮರವಾಗಿ, ಫಲಬಿಟ್ಟಿತು. ನೀಲಮ್ಮನ ಮುಗುಳು ನಗೆಯು, ಚಿನ್ನಪ್ಪನ ಕಣ್ಣಲ್ಲಿ ಮುಳ್ಳಿನಂತೆ ಚುಚ್ಚಲುತೊಡಗಿತು. ಅವಳ ಚೆಲುವಿಕೆಯು, ಚೇಳಿನಂತೆ ಎದೆಗೆ ಕುಟುಕಲು ತೊಡಗಿತು. ನಲುಮೆಯ ಮೆಲುಮಾತುಗಳು ಕಾದ ಪಾದರಸದಂತೆ ಕಿವಿಯನ್ನು ಭೇದಿಸಲು ತೊಡಗಿದುವು. ಚಿನ್ನಪ್ಪನ ಭಾವರಾಜ್ಯದ ರಾಣಿಯಾದ ನೀಲಮ್ಮನೀಗ, ಕ್ರೂರರಕ್ಕಸಿಯಾಗಿ ತೋರಿದಳು. ಚಿನ್ನಪ್ಪನು ಹೆಂಡತಿಯೊಡನೆ ಮನಬಿಚ್ಚಿ ಮಾತನಾಡದಾದನು. ಸರಸವಾಡುವುದೂ ನಗುವುದೂ ದೂರವೇ ಉಳಿಯಿತು. ನೀಲಮ್ಮನೇನಾದರೂ ಅಂತಃಕರಣದಿಂದ ಮಾತನಾಡಿಸಿದರೆ ಚಿನ್ನಪ್ಪನಿಗೆ ಅಸಹ್ಯವೆನಿಸಲುತೊಡಗಿತು.

ಚಿನ್ನಪ್ಪನು ಹೀಗೇಕೆಮಾಡುತಿರುವನೆಂಬುದು ನೀಲಮ್ಮನಿಗೆ ತಿಳಿಯದು. ಆದರೂ ತನ್ನ ವಿಷಯದಲ್ಲಿ ಇವನೇನಾದರೂ ಸಂಶಯಪಟ್ಟುಕೊಂಡಿದ್ದಾನೆ; ಎಂದು ಸರಿಯಾಗಿ ಕಂಡು ಹಿಡಿದಳು. ಇದನ್ನು ದೂರಮಾಡಲು ಹಂಚಿಕೆ ಹಾಕಿಹಾಕಿ ದಣಿದಳು. ಕಳವಳದಿಂದ ಕಂಬನಿಗರೆದಳು.

ಚಿನ್ನಪ್ಪನಿಗೆ ನೀಲಮ್ಮನು ದಿನದಿನಕ್ಕೂ ಹೆಚ್ಚು ಹೆಚ್ಚು ತ್ಯಾಜ್ಯಳಾಗಿ ತೋರಲು ತೊಡಗಿದಳು. ನೀಲಮ್ಮನ ಎದೆಯೊಡನೆ ಬೆಸುಗೆಯೊಂದಿದ್ದ ಚಿನ್ನಪ್ಪನ ಎದೆಯೀಗ ಬಿಟ್ಟು ಬೇರೆಯಾಯಿತು. ಹೃದಯವು ಬಿಡುವುದಕ್ಕೂ ಕೂಡುವುದಕ್ಕೂ, ಬಹಳ ವೇಳೆ ಬೇಕಾಗುವುದಿಲ್ಲ. ಅರಳಿ ನಗುತಿರುವ–ಕಂಪುಸೂಸುವ-ಗುಲಾಬಿಯ ಹೂವನೊಂದನ್ನು, ನಾವು ನೋಡಿದೆವೆಂದರೆ, ಅದನ್ನು ತೆಗೆದುಕೊಂಡು ಮುಡಿಯಬೇಕೆಂಬ ಬಯಕೆಯುಂಟಾಗುವುದಕ್ಕೆ ಬಹಳ ವೇಳೆ ಬೇಕಾಗುವುದೇನು ! ಅದರಂತೆಯೆ ಯಾವುದಾದರೊಂದು ಒಡವೆಯು, ಅಸಹ್ಯವೆಂದು ಮನಸಿಗೆನಿಸಿದರೆ, ಅದನ್ನು ಬಿಸಾಡಿ ಬಿಡಬೇಕೆಂಬ ಭಾವನೆಯುಂಟಾಗಲಿಕ್ಕೂ ಬಹಳವೇಳೆ ಬೇಕಿಲ್ಲವಷ್ಟೇ? ಇವೆರಡೂ ಭಾವಗಳು ಮುಗಿಲಲ್ಲಿ ಮಿಂಚುಮೂಡಿದಂತೆ ನಮ್ಮೆದೆಯಲ್ಲಿ ಮೂಡುವವು; ಇದೆಲ್ಲವೂ ಆ ಕಾಲರಾಯನ ಕೈ ಚಳಕ.

ರಾಮಮೂರ್ತಿಯು ಯಾವ ಪಾಪವನ್ನೂ ಅರಿಯದವನು. "ಮೊದಲಿನಂತೆ ಚಿನ್ನಪ್ಪನು ತನ್ನೊಡನೆ ಮನಸುಬಿಚ್ಚಿ ಮಾತನಾಡನೇಕೆ? ಹೆಚ್ಚಾಗಿ ಮನೆಗೆ ಬರಲೊಲ್ಲನೇಕೆ?" ಎಂದು ಯೋಚಿಸಿ ಯೋಚಿಸಿ ಹಣ್ಣಾಗುವನು.

೩

ನೀಲಮ್ಮನ ತವರೂರಲ್ಲಿ ಜಾತ್ರೆ. ಎಲ್ಲರನ್ನೂ ಕರೆದುಕೊಂಡು ಹೋಗಬೇಕೆಂದು ನೀಲಮ್ಮನ ತಂದೆಯು ಕಲ್ಲಹಳ್ಳಿಗೆ ಬಂದನು. ಚಿನ್ನಪ್ಪನಿಗೆ ನೀಲಮ್ಮನಲ್ಲಿ ಅನಾದರವುಂಟಾಗಿದ್ದರೇನಾಯಿತು? ಮನೆಗೆ ಬಂದ ಮಾವನನ್ನು ಆದರಿಸಿದ, ಉಪಚರಿಸಿದ, ಬಹಳ

ದಿವಸಕ್ಕೆ ಅಣ್ಣ ಬಂದಿರುವನೆಂದು ಗಂಗಮ್ಮನು ಸವಿಯೂಟದ ಅಡಿಗೆ ಮಾಡಿದಳು. ಚಿನ್ನಪ್ಪನು ತನ್ನ ಮನಸಿನ ದುಗುಡವನ್ನು ನಸುವಾದರೂ ಹೊರಗೆ ತೋರಗೊಡಲಿಲ್ಲ.
ರಾತ್ರಿಯ ಊಟವಾದೊಡನೆ ಚಿನ್ನಪ್ಪ-ಮಾವ ಮಾತನಾಡುತ್ತ ಕುಳಿತರು. "ಎಲ್ಲರೂ ಜಾತ್ರೆಗೆ ಬರಬೇಕು." ಎಂದು ಅದೆಷ್ಟೊ ಬಲವಂತದಿಂದ ಮಾವನು ಹೇಳಿದ. ಚಿನ್ನಪ್ಪ ಸಮ್ಮತಿಸಲಿಲ್ಲ. ಏನೇನೋ ಮನೆತನದ ತೊಂದರೆಗಳನ್ನು ಮುಂದೆ ಮಾಡಿ, ತನಗೆ ಬರುವುದಾಗದೆಂದು ನುಡಿದ. ಮಾವನು ಹಂಚಿಕೆಗಾಣದವನಾದನು. "ನೀಲಮ್ಮ ನನ್ನಾದರೂ ಕಳಿಸುವೆಯೋ ಇಲ್ಲವೋ" ಎಂದು ಮತ್ತೆ ಮಾವನು ದೈನ್ಯದಿಂದ ಕೇಳಿದನು.

ಚಿನ್ನಪ್ಪನು ನಸುಹೊತ್ತು ಆಲೋಚಿಸಿದ. ಬಳಿಕ "ಆಗಲಿ! ಮಾವಾ ಅವಳನ್ನು ಅಗತ್ಯವಾಗಿ ಕರೆದುಕೊಂಡು ಹೋಗು. ಇನ್ನೆರಡು ದಿನಗಳಲ್ಲಿ ಅವಳನ್ನು ನಾನೇ ನಿಮ್ಮೂರಿಗೆ ಕಳಿಸಬೇಕೆಂದಿದ್ದೆ. ನೀನೆ ಬಂದಿರುವೆ; ಒಳಿತಾಯಿತು. ಕರೆದುಕೊಂಡು ಹೋಗು. ನನಗೆ ಅತ್ತಿತ್ತ ಹೋಗಬೇಕಾದ ಕೆಲಸಗಳಿವೆ. ಆದುದರಿಂದ ನಾನೇ ಕರೆಯಲಿಕ್ಕೆ ಬರುವವರೆಗೂ ಕೆಲವು ದಿನ ಅವಳು ನಿಮ್ಮಲ್ಲಿಯೇ ಇರಲಿ" ಚಿನ್ನಪ್ಪನು ಸಮಾಧಾನದ ಸೋಗಿನಿಂದ ಹೇಳಿದ. ಆದರೆ ಎದೆಯು ದಡದಡಿಸುತಲಿದ್ದಿತು. ನಾಲಗೆ ಎಡವುತಲಿದ್ದೀತು.

ಚಿನ್ನಪ್ಪನ ಮಾತಿನ ರೀತಿಯು, ಮುದಿತನದ ಮಂದಬುದ್ಧಿಯ ಮಾವನಿಗೆ ತಿಳಿಯಲಿಲ್ಲವೇನೋ! ಕೇಳಿ ವಿಶೇಷವೇನೂ ಎನಿಸಲಿಲ್ಲ. ನೀಲಮ್ಮನನ್ನು ಕರೆದುಕೊಂಡು ಹೊರಟುಬಿಟ್ಟನು. ಗಂಗಮ್ಮನನ್ನು ಕರೆದರೆ ಅವಳೂ ಒಲ್ಲೆನೆಂದಳು. "ತಾನು ಕೆಲವು ದಿನ ಕಣ್ಣಮರೆಯಾಗಿದ್ದರಾದರೂ, ತನ್ನ ಗಂಡನ ಮನದತೊಡಕು ಕಡಿಮೆಯಾಗಬಹುದು" ಎಂದು ನೀಲಮ್ಮನಿಗೆ ಎನಿಸಿತು. ಅದಕ್ಕೆಂತಲೇ ಅವಳು ಊರಿಗೆ ಹೊರಡಲು ಒಪ್ಪಿದಳು. ತನ್ನನ್ನು ಬಿಟ್ಟು ಒಬ್ಬಳೇ ಹೊರಡಲು ನೀಲಮ್ಮನು ಸಮ್ಮತಿಸಿದುದೂ, ಚಿನ್ನಪ್ಪನಿಗೆ ವಿಪರೀತವಾಗಿಯೆ ಕಂಡಿತು. ಆಯಿತು. ಒಮ್ಮೆ ನೀಲಮ್ಮನು ಚಿನ್ನಪ್ಪನ ಹೊರಗಣ್ಣಿಂದೆ ಮರೆಯಾದಳು.

ಚಿನ್ನಪ್ಪನು ರಾಮಮೂರ್ತಿಯ ಸಲುವಾಗಿ ಎಷ್ಟೋ ಮನನೊಂದು ಕೊಂಡಿದ್ದನು. ಅವನಿಂದಲೆ ತಾನು ಬಾಳುವೆಗೇಡಾಗುವ ವೇಳೆಯೊದಗಿತೆಂದು ತುಂಬಾ ತಿಳಿದಿದ್ದನು. ಆದರೆ ಕರಣಿಕರ ಮನೆತನದ ಮೇಲಿನ ಮಮತೆ, ಚಿನ್ನಪ್ಪನಿಗೆ ನಸುವೂ ಕಡಿಮೆಯಾಗಿರಲಿಲ್ಲ. ಮನೆಯವರೆಲ್ಲರೊಡನೆಯೂ ಮೊದಲಿನಂತೆ ಮನಬಿಚ್ಚಿ ಮಾತನಾಡುತಿದ್ದ. ತೋಟವನಿನ್ನೂ ಬಿಟ್ಟಿರಲಿಲ್ಲ. ಆದರೆ ರಾಮಮೂರ್ತಿಯೊಡನೆ ಮಾತ್ರ, ಹೆಚ್ಚಾಗಿ ಮಾತು ಕತೆಗಳಿಲ್ಲ. ಎಂದಾದರೂ ಕಾರಣ ವಿಶೇಷದಿಂದ ಮಾತನಾಡಿದರೆ ಬಾಯಿಂದಷ್ಟೇ! ಹೃದಯದಿಂದಲ್ಲ.

ನೀಲಮ್ಮನನ್ನು ಕಳುಹಿಸಿದರೂ ಚಿನ್ನಪ್ಪನ ಜೀವಕ್ಕೆ ಸಮಾಧಾನವಿಲ್ಲ. ಮೊದಲಿನ ಇಮ್ಮಡಿಯಾಗಿ ಈಗ ಅವನಿಗೆ ಯೋಚನೆ. ಒಂದೇ ಒಂದು ತಿಂಗಳಲ್ಲಿ ಆನೆಯಂತಿದ್ದ ಚಿನ್ನಪ್ಪ ಆಡಿನಂತಾದ. ಕೆಲಸಕ್ಕೆ ಒಲ್ಲದ ಮನದವನಾದ. ತುಂಬಿ ತಳತಳಿಸುತಿದ್ದ ಚಿನ್ನಪ್ಪನ ಮೋರೆ ಈಗ ಒಣಗಿದ ಸಂಡಿಗೆಯಂತಾಗಿದ್ದಿತು. ಅವನ ತಾಯಿಗೆ ಇದೆಲ್ಲದರ ಕಾರಣವು ಹೇಗೆ ಗೊತ್ತಾಗಬೇಕು! "ಅಯ್ಯೋ! ನನ್ನ ಮಗ ಇಷ್ಟೇಕೆ ಸೊರಗಿದ. ಯಾರೇನು ಮದ್ದು ಹಾಕಿದರೋ! ಮಾಟಮಾಡಿದರೊ!–" ಎಂದು ನುಡಿದು ತನಗಾಗದವರನ್ನು ಬೆಯ್ಯುವಳು. ಗಟ್ಟಿಯಾಗಿ ಅಳುವಳು.

ರಾಮಮೂರ್ತಿಯು ಚಿನ್ನಪ್ಪನ ಮನವನ್ನು ಗುರುತಿಸದೆ, ಮುಂದುವರೆದು ತಾನಾಗಿಯೇ ಮಾತನಾಡಿಸುವನು. "ಏನೋ ಚಿನ್ನಾ! ಇಷ್ಟೇಕೆ ಸೊರಗಿದೆಯೋ ? ನೀಲಮ್ಮನು ಹೋದುದಕ್ಕೆ ಯೋಚನೆಯೇನು? ನೀಲಮ್ಮ ಹೋಗಿ ಬಹಳ ದಿನಗಳಾದುವು. ಬೇಗನೆ ಕರಯಿಸಲೊಲ್ಲೆಯೇಕೆ?" ಎಂದು ತಿಳಿಮನದಿಂದ ಕೇಳುವನು. ಇದೆಲ್ಲವೂ ಚಿನ್ನಪ್ಪನ ಎದೆಬೇನೆಗೆ ಅಪಥ್ಯವೇ.

ನೀಲಮ್ಮನು ಹೋಗಿ ನಾಲ್ಕು ತಿಂಗಳಾಯಿತು. ಗಂಗಮ್ಮನು, ಬೇಗನೆ ನೀಲೆಯನ್ನು ಕರೆಯಿಸೆಂದು ಎಷ್ಟು ಹೇಳಿದರೂ, ಚಿನ್ನಪ್ಪನು ಆ ಮಾತನ್ನು ಲಕ್ಷಿಸುತಿರಲೇ ಇಲ್ಲ. ತಾನೂ ಕರೆಯಲು ಹೋಗಲಿಲ್ಲ. ಕಲ್ಲಹಳ್ಳಿಗೆ ಬರುವ ತನ್ನೊಬ್ಬ ಸ್ನೇಹಿತನ ಕೂಡ ಚಿನ್ನಪ್ಪನ ಮಾವನು "ನೀಲಮ್ಮ ಅಲ್ಲಿಗೆ ಬರುವೆನೆಂದು ಒಂದೇಸವನೆ ಆತುರಪಡುತಲಿದ್ದಾಳೆ. ಬೇಗನೆ ಬಂದು ಕರೆದುಕೊಂಡು ಹೋಗು !" ಎಂದು ಹೇಳಿ ಕಳುಹಿಸಿದ. ನೀಲಮ್ಮನ ಆತುರವನ್ನು ಕೇಳಿಯೂ, ಚಿನ್ನಪ್ಪನದು ಕಹಿಯಾದ ಕಲ್ಪನೆಯೆ.

"ಅಲ್ಲಿಯೇ ಇದ್ದುಕೊಂಡು ಏನು ಮಾಡಿದರೂ ನಾನೇನೂ ನೋಡಲಿಕ್ಕೆ ಬರುವುದಿಲ್ಲ. ಆದರೆ ಇಲ್ಲಿಗೆ ಕರೆದುಕೊಂಡು ಬಂದು, ನನ್ನ ಮನೆಯನ್ನು ಸೂಳೆಗೇರಿಯಾಗಿ ಮಾಡಲಾರೆ" ಎಂದು ಚಿನ್ನಪ್ಪನು ಬಂದವರೆದುರಿಗೆ ಹೇಳಿದನು. "ಇದರಂತೆಯೆ ಮಾವನಿಗೆ ಹೇಳಬೇಕು" ಎಂತಲೂ ತಿಳಿಸಿದನು.

## ೭.

ಊರಿಗೆ ಹೋಗುವಾಗ ದಾರಿಯಲ್ಲಿಯೇ ನೀಲಮ್ಮನ ತಂದೆಯು ಅವಳಿಗೆಷ್ಟೋ ಮಾತುಗಳನು ಹೇಳಿದನು. ಚಿನ್ನಪ್ಪನು ಹೇಳಿದ್ದನಲ್ಲ! "ನಾನೇ ಕರೆಯಲಿಕ್ಕೆ ಬರುವವರೆಗೆ ಕೆಲವು ದಿನ ಅವಳು ನಿಮ್ಮಲ್ಲಿಯೇ ಇರಲಿ" ಎಂದು; ಅದನ್ನೂ ಹೇಳಿದನು. ಕೇಳಿ ನೀಲಮ್ಮ ನಡುಗಿದಳು. ಕಹಿ ಮೋರೆ ಮಾಡಿದಳು. ಆದರೆ ತಂದೆಗೆ ಇದರ ಸುಳಿವು ತಿಳಿಯಗೊಡಲಿಲ್ಲ. ಮನದ ಮಾತನೂ ಒಡೆದು ಆಡಲಿಲ್ಲ.

ಈ ವರ್ಷ ಜಾತ್ರೆಯೊಳ್ಳೇ ಸಡಗರದಿಂದಾಯಿತೆಂದು, ಮಂದಿಯೆಲ್ಲರೂ ಮಾತನಾಡುವರು. ನೀಲಮ್ಮನು ಮಾತ್ರ ಉದಾಸೀನಳಾಗಿಯೆ ಇರುವಳು. ಜಾತ್ರೆಯಲ್ಲಿ ಹೆಚ್ಚಾಗಿ

ಹೊರಗೆ ಕೂಡ ಹೋಗಲಿಲ್ಲ. ಇವಳು ಹೀಗೇಕೆ ಮಾಡುತಿರುವಳೆಂಬುದು ಮನೆಯವರಿಗೆ ಒಡೆಯದ ಒಗಟ. ತಾಯಿ ಪೀಡಿಸಿ ಕೇಳಿದರೆ, " ನನಗೇನಾಗಿದೆಯೇ " ಎಂದು ನೀಲಮ್ಮನು ಹಾರಿಸಿ ಮಾತನಾಡುವಳು.

ನಾಲ್ಕು ತಿಂಗಳುಗಳು ಕಳೆದುವು. ನೀಲಮ್ಮನನ್ನು ಕರೆಯಲಿಕ್ಕೆ ಚಿನ್ನಪ್ಪ ತಾನೂ ಬರಲಿಲ್ಲ. ಬೇರೆಯವರನ್ನೂ ಕಳಿಸಲಿಲ್ಲ. ಕಲ್ಲಹಳ್ಳಿಯ ಕಡೆಯ ಸುದ್ದಿಯೇ ನೀಲಮ್ಮನಿಗಿಲ್ಲ. ಅವಳು ಬೆದರಿದಳು. ತಳವಳಿಸಿದಳು. ತಂದೆ ತಾಯಿಗಳಿಗೆ, " ಅದೇಕೋ ನನ್ನನಿನ್ನೂ ಕರೆಯಲಿಕ್ಕೆ ಬರಲೇ ಇಲ್ಲ. ನಾನು ಹೋಗುವೆನು. ಬೇಗನೆ ಕಳುಹಿಸಿ ಬಿಡಿ. " ಎಂದು ಆಗಾಗ ನುಡಿಯುವಳು. " ನಾನೇ ಕರೆಯಲಿಕ್ಕೆ ಬರುವೆನೆಂದು ಚಿನ್ನಪ್ಪ ಹೇಳಿರುವನು. ಹೋಗುವೆಯಂತೆ ನಸು ತಾಳಲ್ಲ ! ಇಷ್ಟೇಕೆ ಆತುರ! ನಿನ್ನಗಂಡನು ನಿನ್ನನ್ನು ಅಗಲಿ ಎಲ್ಲಿಯೂ ಹೋಗುವುದಿಲ್ಲ" ಎಂದು ನೀಲಮ್ಮನ ತಂದೆ ತಾಯಿಗಳು ನಗೆಯಮೇಲೆ ಹಾಯಿಸಿ ಮಾತನಾಡಿ ಬಿಡುವರು. ಇದನ್ನು ಕೇಳಿ, ನೀಲಮ್ಮನು ವಿಷಾದದ ನಗೆ ನಗುವಳು. ನಗೆಯೊಡನೆಯೆ ಕಣ್ಣೀರ ಸುರಿಸುವಳು. " ಸಾಕು ಬಿಡೇ ಹುಚ್ಚಿಯೇನು ನೀನು ? ಗಂಡನನ್ನಗಲಿ ಮೂರು ನಾಲ್ಕು ತಿಂಗಳು ಯಾರಾದರೂ ಇರುವರೋ ಇಲ್ಲವೋ ? ಚಿನ್ನಪ್ಪನಿಗೆ ಏನೋ ಕೆಲಸ ವಿರಬಹುದು; ಅದಕೆಂತಲೆ ತಡೆದಿರಬಹುದು. ಇಷ್ಟಕ್ಕೆಯೆ ಎಷ್ಟು ನೊಂದುಕೊಳ್ಳುವಿಯೇ " ಎಂದು ತಾಯಿ ನೀಲಮ್ಮನಿಗೆ ಸಿಟ್ಟುಮಾಡಿ ಹೇಳುವಳು. ಇಷ್ಟೆಲ್ಲವಾದರೂ, ತನ್ನ ವಿಷಯವಾಗಿ ಚಿನ್ನಪ್ಪನ ಮನಸ್ಸು ಶುದ್ಧವಾಗಿ ಇಲ್ಲವೆಂಬುದನು, ಒಡೆದು ಆಡುವ ಧೈರ್ಯ ಚಿನ್ನಮ್ಮನಿಗಾಗಲೊಲ್ಲದು.

ನೀಲಮ್ಮನ ಈ ಆತುರಕ್ಕಾಗಿಯೆ ಅವಳ ತಂದೆಯು, ಅದಾರ ಕಡೆಯಿಂದಲೋ ಕಲ್ಲಹಳ್ಳಿಗೆ " ನೀಲಮ್ಮ ಅಲ್ಲಿಗೆ ಬರಲು ಆತುರಪಡುತಿರುವಳು ಬೇಗನೆ ಬಂದು ಕರೆದುಕೊಂಡು ಹೋಗು!" ಎಂದು ಹೇಳಿ ಕಳುಹಿಸಿದನು. ಅದಕ್ಕೆ ಪ್ರತಿಯಾಗಿ ಚಿನ್ನಪ್ಪ ಮಾವನಿಗೆ ಹೇಳಿ ಕಳುಹಿಸಿದ ಮರುಮಾತಿನ ಸಂಗತಿಯು, ಓದುವವರಿಗೆ ಈ ಮೊದಲೆ ವಿದಿತವಾಗಿದೆ.

ಚಿನ್ನಪ್ಪನು ಹೇಳಿ ಕಳುಹಿದ ಮಾತುಗಳನು ಕೇಳಿ, ನೀಲಮ್ಮನ ತಂದೆ-ತಾಯಿ ಚಕಿತರಾದರು. ಮುಂಗಾಣದವರಾದರು. ಮಾತೆತ್ತದೆ ಕುಳಿತರು. ಅವರು ಯಾವ ಸಂಗತಿಯನೂ ಅರಿಯದವರು.

ನೀಲಮ್ಮನಿಗೆ ಈ ಮಾತು ತಿಳಿಯಿತು. ಜರ್ರನೆ ಜರಿದಳು, ಕಣ್ಣಿಂದೆ ನೀರು ತುಳುಕಿತು. ಬಾಯಿಂದೆ ಮಾತು ಹೊರಡದಾಯಿತು. ಕಣ್ಣಿಗೆ ಕತ್ತಲೆ ಕವಿಯಿತು. ತಲೆ ತಿರುಗಲು ತೊಡಗಿತು, ಕೆಳಕ್ಕೆ ಬೀಳುವವಳೆ, ಅಷ್ಟರಲ್ಲಿಯೆ ಅವಳ ತಾಯಿ ಬಂದು, ಸಾವರಿಸಿ ಹಿಡಿದು, ತನ್ನ ತೊಡೆಯ ಮೇಲೆ ನೀಲಮ್ಮನ ತಲೆಯನ್ನು ಮಡಗಿ, ಮಲ

ಗಿಸಿಕೊಂಡಳು. ಕೈಯಿಂದೆ ಮೈದಡವುತ್ತ "ನೀಲಾ! ನೀಲಾ!" ಎಂದು ನಡುಗುವ ದನಿಯಿಂದ ಕೂಗಿದಳು. ಕೊಂಚವೇಳೆಯಲ್ಲಿಯೆ ನೀಲಮ್ಮನು ಎಚ್ಚರಗೊಂಡಳು. ಬಿಸುಸುಯ್ದಳು. ಕಂಬನಿಗರೆದಳು. ಕೈಯಿಂದೆ ಹಣೆಗೆ ಹೊಡೆದುಕೊಂಡಳು.

"ನೀಲಾ ! ಎನೇನೇ ಅಮ್ಮಾ! ಇದು ?" ತಾಯಿ ಮರುಕದಿಂದ, ಬೆದರುದನಿಯಲ್ಲಿ ಕೇಳಿದಳು. ನೀಲಮ್ಮನು ಕಣ್ಣೀರಸುರಿಸುತ್ತಲೇ ಕುಗ್ಗಿದ ದನಿಯಿಂದ ಹೇಳಲು ತೊಡಗಿದಳು.

"ನಾನೇನನೂ ಅರಿಯೆನಮ್ಮಾ! ನಾನಿಲ್ಲಿಗೆ ಬಂದೆನಲ್ಲ! ಅದಕ್ಕೆ ಮೊದಲು ಒಂದು ತಿಂಗಳಿಂದ, ಅವರ ಮನದಲ್ಲಿ ನನ್ನ ಬಗೆಗೆ ಏನೋ ಸಂಶಯವುಂಟಾಗಿದೆಯೆಂದು ನನಗೆ ನಿಸಿದ್ದಿತು. ಬಾಯಿಬಿಚ್ಚಿ ಏನನೂ ಆಡದಿದ್ದರೂ, ಒಮ್ಮೆ "ಕರಣಿಕರ ಮನೆಗೆ ಇನ್ನು ನೀನು ಕಾಲಿಕ್ಕಕೂಡದು; ಎಂದು ಕಟ್ಟಪ್ಪಣೆಯಾಯಿತು. ನೋಟದಲ್ಲೇನೋ ಹೊಸ ಬಗೆಯು ಬಂದಿತು. ಮೊದಮೊದಲು ನನ್ನೊಡನೆ ಮಾತನಾಡುತಿದ್ದರೂ, ಏನಾದರೂ ಕಾರಣವಿದ್ದರೆ ಅಷ್ಟೆ! ಅದೂ ಎಂತಹ ಮಾತು? "ಹೀಗೇಕೆ" ಎಂದು ನಾನು ಕಳವಳದಿಂದೆ ಕೇಳಿದರೆ, "ಹೇಗೆ!" ಎಂದು ನನಗೇ ಮರಳಿ ಪ್ರಶ್ನೆ. ಇಲ್ಲಿಗೆ ಬರುವ ಮೊದಲು ಎರಡು ದಿವಸವಂತೂ ನನ್ನೊಡನೆ ತೀರ ಮಾತನಾಡಲಿಲ್ಲ. "ನೀಲೆಯನ್ನು ತವರ ಮನೆಗೆ ಕಳುಹಿಸಿ ಬಂದುಬಿಡು!" ಎಂದು ತಾಯಿಗೆ ಹೇಳಿದುದನ್ನೂ ಒಮ್ಮೆ ಕೇಳಿದೆನು. ನನ್ನೆದೆಗೆ ಈಟಿಯಿಂದ ಇರಿದಂತಾಯಿತು. ಅಷ್ಟರಲ್ಲಿಯೆ ಅಪ್ಪನು ಜಾತ್ರೆಗೆಂದು ಕರೆಯಲು ಬಂದ. ಎಷ್ಟು ಕರೆದರೂ ಬರಲು ಒಪ್ಪಲೇ ಇಲ್ಲ. "ಕೆಲವು ದಿನ ಕಣ್ಮರೆಯಾಗಿದ್ದರೆ ಮನದ ದುಗುಡವಾದರೂ ದೂರವಾಗಬಹುದು" ಎಂದು ನನಗೆ ತೋರಿತು. ತಂದೆಯೊಡನೆ ನಾನು ಇಲ್ಲಿಗೆ ಬರಲು ಸಮ್ಮತಿಸಿದೆನು. ಬಂದು ನಾಲ್ಕುತಿಂಗಳಾದರೂ ಕರೆಯಲಿಕ್ಕೆ ಬರದುದರಿಂದ ಬೆದರಿದೆನು. ಅದಕೆಂತಲೆ "ಬೇಗನೆ ನನ್ನನ್ನು ಕಳುಹಿಸಿ ಕೊಡಿರಿ" ಎಂದು ನಿಮಗೆ ಬೆನ್ನುಹತ್ತಿದೆನು..." ಅಳುತಳುತಲೆ ನೀಲಮ್ಮನು ಇದನೆಲ್ಲ ಹೇಳಿದಳು.

ಕೇಳಿ ತಂದೆತಾಯಿ ಒಳಗೆ ನಡುಗಿದರು. ಆದರೂ "ಬಿಡಮ್ಮಾ! ಇದಕೇಕಿಷ್ಟು ಅಳುವೆ? ಯಾರಾದರೂ ಏನಾದರೂ ಹೇಳಿರಬಹುದು. ಕಿವಿಮಂತ್ರ ಊದಿರಬಹುದು. ಎಂತಲೇ ಇದೆಲ್ಲ ನಡೆದಿದೆಯೆಂದು ಕಾಣುವುದು. ಹುಡುಗಬುದ್ಧಿ ಜಾರಿಬಿದ್ದಿ. ನಮ್ಮ ಚಿನ್ನನು ಮುಂದಿಯ ಮಾತನ್ನು ಕೇಳುವವನಲ್ಲ! ಆದರೆ ವಿಷವೇಳೆಯೊಂದು ಇರುವುದಲ್ಲ. ನೀಲಾ ! ನೀನೇನೂ ಚಿಂತೆಮಾಡಬೇಡ. ಇನ್ನೆರಡುದಿನಕ್ಕೆ ನಾನೇ ನಿನ್ನನ್ನು ಕರೆದುಕೊಂಡು ಹೋಗಿ, ಕಳಿಸಿಬರುವೆನು. ಚಿನ್ನನ ಕಿವಿ ಚೆನ್ನಾಗಿ ಹಿಂಡಿ, ಬುದ್ಧಿಯ ಕಲಿಸಿ ಬರುವೆನು. ನೀನೆಂತಹ ಹುಚ್ಚಿಯೇ ! ನಾನು ಅಲ್ಲಿಗೆ ಬಂದಾಗ ಈ ಮಾತನೇಕೆ ಹೇಳಲಿಲ್ಲ ! ಆಗಲೇ ಎಲ್ಲ ಕೆಲಸ ಮುಗಿಸಿ ಬರುತಲಿದ್ದೆ" ಇತ್ಯಾದಿಯಾಗಿ ನೀಲಮ್ಮನನ್ನು ಅವಳ ತಂದೆ ಸಮಾಧಾನಗೊಳಿಸಿದನು. ಆದರೆ ನೀಲಮ್ಮನ ಎದೆಯು ಕಳವಳವು,

+

ಕೊಂಚವೂ ಕಡಿಮೆಯಾಗಲಿಲ್ಲ. ಮುಂದೆ ತಾಸೆರಡುತಾಸುಗಳಲ್ಲಿಯೆ, ನೀಲಮ್ಮನಿಗೆ ಕೆಂಡದಂತಹ ಜ್ವರ. ತಲೆಸಿಡಿದು ಬೀಳುವಂತಹ ನೋವು. ತೀರ ಹಾಸಿಗೆಯನ್ನೇ ಹಿಡಿದು ಬಿಟ್ಟಳು.

ಎಂಟು ಹತ್ತು ದಿನಗಳಾದುವು. ನೀಲಮ್ಮನಿಗೆ ಅಂದು ಏರಿದ ಜ್ವರವು ಇನ್ನೂ ಇಳಿದಿರಲೇ ಇಲ್ಲ. ನಡುನಡುವೆ ಮೈಮರೆತು, ಏನೇನನೋ ಕನವರಿಸುತಿರುವಳು. ಆ ಕನವರಿಕೆಯಲ್ಲಿಯ ಮಾತುಗಳೆಂದರೆ, ಚಿನ್ನಪ್ಪನೊಡನೆ ತಾನು ಸರಸವಾಡುತಿರುವಂತೆ; ಚಿನ್ನಪ್ಪನು ಸಿಟ್ಟನಿಂದ ಮಾತನಾಡದಿರಲು, ತನ್ನ ಅತ್ತೆಯ ಮುಂದೆ ಅಥನು ಹೇಳುತಿರುವಂತೆ; ಇಂದಿರೆಯೊಡನೆ ಆಟವಾಡುತಿರುವಂತೆ; ರಾಮಮೂರ್ತಿಯೊಡನೆ ನಗೆಯಾಡಿದಂತೆ. ನೀಲಮ್ಮನು ಆಗಾಗ ಬೆಚ್ಚಿ ಬೀಳುವಳು. ಎಚ್ಚತ್ತಿರುವಾಗ ಅದಾವುದೋ ಯೋಚನೆಂುಲಿರುವಳು, ಕಣ್ಣೀರ ಕಾಲುವೆ ಹರಿಸುವಳು, ಚಡಪಡಿಸುವಳು. ನಿಟ್ಟುಸಿರು ಬಿಡುತ್ತ, ಈ ಬದಿಯಿಂದ ಆ ಬದಿಗೆ ಹಾಸಿಗೆಯಲ್ಲಿ ಹೊರಳಾಡುವಳು. ಇದನೆಲ್ಲವನು ಕಂಡ ನೀಲಮ್ಮನ ತಾಯ್ತಂದೆಗಳಿಗೆ, ಅಳುವು ತುಂಬಿಬರುತಲಿದ್ದಿತು. ಒಬ್ಬಳೇ ಒಬ್ಬಳಾಗಿರುವ, ತಮ್ಮ ಮಗಳಿಗೊದಗಿದ ಈ ವಿಪತ್ತಿನಿಂದ, ಅವರು ದಿಕ್ಕುಕಾಣದವರಾದರು. ಹಲವು ದೇವರಿಗೆ ಹರಕೆ ಹೊತ್ತರು. ನೀಲಮ್ಮನನ್ನು ಗಂಡನಬಳಿಗೆ ಕಳಿಸಬೇಕೆಂದಿರಲು ನಡುವೆ ಇದೊಂದು ತೊಡಕು.

ಒಂದುದಿನ ರಾತ್ರಿ, ತಾಯಿ ನೀಲಮ್ಮನಿಗೆ ಔಷಧ ಕುಡಿಯಲು ಹಲವು ಬಗೆಯಿಂದ ಹೇಳಿ ನೋಡಿದಳು. ಆದರೂ ನೀಲಮ್ಮನು ನಿರಾಕರಿಸಿಯೇ ಬಿಟ್ಟಳು.

"ಅಮ್ಮಾ! ಸುಮ್ಮನೆ ಏಕೆ ಬಲುಮೆ ಮಾಡುವೆ ? ಈ ಔಷಧದಿಂದ ನನ್ನ ಬೇನೆ ಕೊಂಚವೂ ಕಡಿಮೆಯಾಗದು" ನೀಲಮ್ಮನು ಸಣ್ಣ ಸ್ವರದಲ್ಲಿ ನುಡಿದಳು.

"ಹಾಗಾದರೆ ಏನು ಮಾಡಬೇಕೆನ್ನುವಿ!" ಬಿಗಿದ ಕಂಠದಿಂದ ತಾಯಿ ಕೇಳಿದಳು. ನೀಲಮ್ಮನು ಮಾತನಾಡದೆ ಇದ್ದಳು, "ನೀಲಾ? ಮನದಲಿದ್ದುದನು ಹೇಳಮ್ಮಾ!" ಮತ್ತೆ ತಾಯಿಯೆಂದಳು.

"ಅಮ್ಮಾ ! ಏನು ಹೇಳಲೇ ? ಒಮ್ಮೆ ಆ ಮೋರೆಯನು ನೋಡಿಬಿಟ್ಟೆನೆಂದರೆ, ನನ್ನ ಬೇನೆಯೇ ಉಳಿಯದು" ನೀಲಮ್ಮನು ಮೆಲ್ಲಗೆ ನುಡಿದು ಉಸ್ಸೆಂದು ಉಸಿರ್ಗರೆದಳು.

ನೀಲಮ್ಮನ ತಂದೆಗೆ ಈ ಮಾತು ತಿಳಿಯಿತು. ಅವನು ಮರುದಿನವೇ ಚಿನ್ನಪ್ಪನನ್ನು ಕರೆದುತರಲು, ತನ್ನ ತಮ್ಮ ಮಲ್ಲೇಶನನ್ನು ಕಲ್ಲಹಳ್ಳಿಗೆ ಕಳುಹಿಸಿದ.

(೮)

ಮಲ್ಲೇಶನು ಕಲ್ಲಹಳ್ಳಿಗೆ ಬಂದ. ಚಿನ್ನಪ್ಪನು ಉಚಿತರೀತಿಯಿಂದ ತನ್ನ ಚಿಕ್ಕ ಮಾವನನ್ನು ಉಪಚರಿಸಿದ. ಬಂದ ಕಾರಣವನ್ನು ಕೇಳಿದ. ಮಲ್ಲೇಶನು ನೀಲಮ್ಮನ ಸ್ಥಿತಿ

ಯನೆಲ್ಲ ವಿಸ್ತರಿಸಿ ವಿವರಿಸಿದ. " ಬೇನೆಯು ಜಡವಿದೆ, ಬಂದ ಉರಿ ಆರಿಲ್ಲ. ಯಾವಾಗಲೂ ನಿನ್ನೊಡನೆ ಮಾತನಾಡಿದಂತೆಯೇ ಬಡಬಡಿಸುವಳು. ಎಚ್ಚರದಿಂದಿರುವಾಗ ನಿನ್ನನ್ನು ನೆನೆದು, ಕಣ್ಣೀರಿಡುವಳು. ನಿನ್ನನ್ನು ಒಮ್ಮೆಯಾದರೂ ಕಾಣಬೇಕೆಂದು ನೀಲಮ್ಮನ ಮನದಾಶೆ; ಎಂತಲೇ ಅವಸರದಿಂದ ನಾನೀಗ ಓಡಿ ಬಂದಿರುವೆನು. " ಎಂದು ಮರುಕದ ಮಾತು ಹೇಳಿದನು.

ಚಿನ್ನಪ್ಪನು ಇದನೆಲ್ಲವನೂ ಕೇಳಿದ; ಕೇಳಿ ಎದೆಯು ಕರಗನೀರಾಯಿತು. ಮಲ್ಲೇಶನಿಗೆ ಕಾಣದಂತೆ ಕಣ್ಣೀರ ಮಿಡಿದ. ನೀಲಮ್ಮನ ಬಳಿಗೆ ಹೋಗಬೇಕೆಂದು, ಮನವು ಕ್ಷಣಮಾತ್ರ ಹರಿದಾಡಿತು, ಮರಳಿ ಮೊದಲಿನಂತೆಯೆ ಕಲ್ಲಾಗಿ ತನ್ನ ಸ್ಥಳದಲ್ಲಿ ಕುಳಿತು ಕೊಂಡಿತು. ತನ್ನ ಮನದ ನೋವಿನ ಮಾತನೆಲ್ಲವನೂ, ಮಲ್ಲೇಶನಿಗೆ ಚಿನ್ನಪ್ಪನು ಹೇಳಿ ಬಿಟ್ಟ. ಅಲ್ಲದೆ,"ನೀಲೆ-ರಾಮಮೂರ್ತಿಯವರ ವಿಷಯದಲ್ಲಿದ್ದ ಸಂಶಯವು, ದೃಢವಾಗಿ ಹೋಗಿದೆ. ನೀಲೆಯ ಬಗೆಗಂತೂ ನನ್ನ ಮನಸು ಹೇಸಿಕೊಂಡಿದೆ. ಇನ್ನು ಅವಳ ಮೋರೆಯನ್ನು ನೋಡುವುದು ಈ ಜನ್ಮದಲ್ಲಿಯಂತೂ ನನ್ನಿಂದಾಗದು" ಎಂದು ನಿಷ್ಠುರನಾಗಿ ನುಡಿದುಬಿಟ್ಟ. ಮಲ್ಲೇಶನು ಅದೆಷ್ಟೋ ತಿಳಿಸಿ ಹೇಳಿದ; ಕೈಮುಗಿದು ಬೇಡಿಕೊಂಡ; ಆದರೂ ಚಿನ್ನಪ್ಪನು ತನ್ನ ಉಡದ ಹಿಡಿತ ಬಿಡಲಿಲ್ಲ. ಊರಿಗೆ ಬರಲು ಒಪ್ಪಲಿಲ್ಲ. ಮಲ್ಲೇಶನು ಹಂಚಿಕೆಗಾಣದವನಾಗಿ, ಬಾಡಿದ ಮೋರೆಯಿಂದ, ಬಂದಹಾಗೆಯೇ ಹೋಗಿಬಿಟ್ಟ. ಊಟವನ್ನು ಕೂಡ ಮಾಡಲಿಲ್ಲ.

ಚಿನ್ನಪ್ಪನ ಮನಸ್ಸಿಗೆ ಸಮಾಧಾನವೇ ಇಲ್ಲ. ಹೊಟ್ಟೆಯಲ್ಲಿ ಪಂಜುಹಚ್ಚಿದಂತೆ ಉರಿ. ಊಟವನ್ನು ಮಾಡಲೇ ಇಲ್ಲ. ಮನೆಯಲ್ಲಿ ಕುಳಿತುಕೊಳ್ಳುವುದು ಆಗದುದರಿಂದ ತೋಟದ ಕಡೆಗೆ ಹೋಗಿಬಿಟ್ಟ.

ಅಂದು ಊರಲ್ಲಿ ಜನರ ಬಾಯಲ್ಲೆಲ್ಲ, ನೀಲಮ್ಮ-ರಾಮಮೂರ್ತಿಯರ ವಿಷಯವಾಗಿಯೆ ಮಾತುಗಳು. ಈ ಸುದ್ದಿ ಕರಣಿಕರ ಮನೆಯವರ ಕಿವಿಗೂ ನಿಙುಕಿತು. ಕೇಳಿ ಬೆರಗಾದರು; ಬೆಚ್ಚಿ ಬಿದ್ದರು.

ರಾಮಮೂರ್ತಿಯು ಬೇರೆ ಹಳ್ಳಿಗೆ ಹೋಗಿದ್ದ. ಅವನಿಗೆ ಇದಾವ ಸಂಗತಿಯು ತಿಳಿಯದು. ಹಳ್ಳಿಯೊಳಗಿನ ಕೆಲಸ ತೀರಿಸಿಕೊಂಡು ಮನೆಗೆ ಬರಬೇಕಾದರೆ, ಅವನಿಗೆ ಮೂರುಗಂಟೆ ವೇಳೆಯಾಯಿತು. ಇನ್ನೂ ಊಟವಿಲ್ಲ ಉಡಿಗೆಯಿಲ್ಲ. ಮನೆಯಲ್ಲಿ ಎಲ್ಲರ ಊಟವೂ ಮುಗಿದು ಹೋಗಿದ್ದಿತು. ರಾಮಮೂರ್ತಿಯು ಬಂದವನೆ ಸ್ನಾನಮಾಡಿದ; ಉಣ್ಣಲು ಕುಳಿತ. ಅವನ ತಾಯಿ ಊಟಕ್ಕೆ ನೀಡುತಿದ್ದಳು. ರಾಮಮೂರ್ತಿಯು ಉಣ್ಣಲಿಕ್ಕೆ ಮೊದಲು ಮಾಡಿದ. ತಾಯಿಗೆ ತಡೆಯಲು ಆಗಲಿಲ್ಲ.

" ಪಾಪ ! ನೀಲಮ್ಮನಿಗೊಳ್ಳೆ ಜಡವಾಗಿದೆಯಂತೆ; ಚಿನ್ನಪ್ಪನನ್ನು ಕರೆಯಲು ಅವರ ಚಿಕ್ಕ ಮಾವ ಬಂದಿದ್ದ." ತಾಯಿ ಕನಿಕರದ ದನಿಯಿಂದ ನುಡಿದಳು.

" ಚಿನ್ನಪ್ಪ ಹೋದನೇನು ಊರಿಗೆ" ರಾಮಮೂರ್ತಿ ಆತುರದಿಂದ ಕೇಳಿದ.

"ಇಲ್ಲ. ಹೋಗಲಿಲ್ಲ."ತಾಯಿ ಒಂದು ವಿಧವಾದ ದನಿಯಿಂದ, ಮೆಲ್ಲಗೆ ನುಡಿದಳು.

"ಏನು ಚಿನ್ನಪ್ಪ ಹೋಗಲಿಲ್ಲವೇ? " ರಾಮಮೂರ್ತಿಯು ಬೇಗಾಗಿ ಕೇಳಿದ.

" ಇಲ್ಲವಪ್ಪಾ ! ಚಿನ್ನಪ್ಪನು ನಿನ್ನಮೇಲೆಯೊಂದು ಅಪವಾದ ಹೊರಿಸಿರುವನು." ತಾಯಿ ಮೆಲುದನಿಯಲ್ಲಿಯೇ ಹೇಳಿದಳು.

"ಅದೇನದು! ಅಪವಾದವೆಂತಹದು" ರಾಮಮೂರ್ತಿಯು ಬೆಚ್ಚಿಬಿದ್ದು ಕೇಳಿದ.

"ನೀಲಮ್ಮನನ್ನು ನೀನೇನೊ ಇಟ್ಟುಕೊಂಡಿರುವೆಯಂತೆ; ಅದಕ್ಕಾಗಿ ಚಿನ್ನಪ್ಪನು ನೀಲಮ್ಮನ ಮೋರೆ ಕೂಡ ನೋಡುವುದಿಲ್ಲವೆಂದು, ಹೇಳಿಕಳುಹಿಸಿದನಂತೆ" ತಾಯಿ ಕಹಿ ಮೋರೆಮಾಡಿ, ಕಿರಿದನಿಯಲ್ಲಿ ನುಡಿದಳು.

"ಏನು! ನೀಲಮ್ಮನನ್ನು ನಾನು ಇಟ್ಟುಕೊಂಡಿರುವೆನೆ ? ಚಿನ್ನಪ್ಪ ಹೀಗೆ ಹೇಳುವನೇ!" ಎಂದು ಆಶ್ಚರ್ಯದ ಸ್ವರದಲ್ಲಿ ನುಡಿದು, ರಾಮಮೂರ್ತಿಯು ನಸುವೇಳೆ ಹುಚ್ಚಿಟ್ಟ ಮೋರೆಯಿಂದ ಸುಮ್ಮನೆ ಕುಳಿತ. ನಾಲ್ಕಾರು ತುತ್ತುಗಳನ್ನು ಮಾತ್ರ ಬಾಯಲ್ಲಿ ಹಾಕಿ ಕೊಂಡಿದ್ದ. ಹಾಗೆಯೇ ಆಪೋಶನ ತೆಗೆದುಕೊಂಡು ಎದ್ದು ಬಿಟ್ಟ.

"ಇದೇನೋ! ಹೀಗೇಕೆ ಎದ್ದುಬಿಟ್ಟೆಯೋ ರಾಮೂ" ಎಂದು ಕೇಳುತಿರುವ ತಾಯಿಯ ಮಾತುಗಳ ಕಡೆಗೆ, ರಾಮಮೂರ್ತಿಯ ಲಕ್ಷ್ಯವೇ ಇಲ್ಲ. " ಅಯ್ಯೋ! ಹಸಿದುಬಂದಿದ್ದ ನಾನು ಪಾಪಿ. ಈಗೇತಕೆ ಇದನ್ನೆಲ್ಲ ಹೇಳಿದೆನೊ! ನನ್ನ ನಾಲಿಗೆ....." ಎಂದು ತಾಯಿ ತನ್ನನ್ನು ತಾನೇ ಬೆಯ್ದುಕೊಂಡಳು.

ರಾಮಮೂರ್ತಿಯು ಬಂದು ಹಜಾರದಲ್ಲಿ ಕುಳಿತ. ಚಿನ್ನಪ್ಪನು ತನ್ನ ಬಳಿಗೆಬರುವುದನ್ನು ಬಿಟ್ಟದುದಕ್ಕೂ, ಹೆಚ್ಚಾಗಿ ಮಾತನಾಡದಿರುವುದಕ್ಕೂ, ಕಾರಣವೇನೆಂಬುದನ್ನು ಕಂಡುಹಿಡಿದ. ಬಹಳ ಹೊತ್ತಿನವರೆಗೆ ತನ್ನೊಳಗೆ ತಾನೇ ಏನೇನೋ ಯೋಚಿಸಿದ. ಬಳಿಕ ಎದ್ದು, ಮೆಯ್ ಮೇಲೆ ಒಂದೇ ಒಂದು ಕಿರಿಯಂಗಿಹಾಕಿಕೊಂಡು, ಹೊರಬಿದ್ದು ನಡೆದ. ಚಿನ್ನಪ್ಪನ ಮನೆಗೆ ಬಂದ. ಚಿನ್ನಪ್ಪನು ತೋಟದಲ್ಲಿರುವನೆಂಬುದನ್ನು ತಿಳಿದು ಕೊಂಡು ಹಾಗೆಯೆ ತೋಟದಕಡೆಗೆ ತೆರಳಿದ.

## ೯.

ಮನೆಯಲ್ಲಿ ಸಮಾಧಾನವಾಗದುದರಿಂದ, ಚಿನ್ನಪ್ಪನು ತೋಟಕ್ಕೆ ಹೋದನೆಂದು ಈ ಮೊದಲು ಹೇಳಿದೆಯಷ್ಟೇ? ತೋಟಕ್ಕೆ ಬಂದ. ಬಾಳೆಯ ಬನದಲ್ಲಿ ತಿರುಗಾಡಿದ. ಮಲ್ಲಿಗೆಯ ಹಂದರದ ಕೆಳಕ್ಕೆ ಕುಳಿತ. ಚಿಗಿತ ಮಾಮರದಡಿಯಲ್ಲಿ ಮಲಗಿದ. ಏನು ಮಾಡಿದರೂ ಶಾಂತತೆಯೇ ಇಲ್ಲ. ಕೊನೆಗೆ ಚಿನ್ನಪ್ಪನು ಗುಡಿಸಿಲಿಗೆ ಬಂದು, ಹಾಸಿದ ಚಾಪೆಯಮೇಲೆ ಬಿದ್ದುಕೊಂಡ. ಯೋಚನಾ-ತರಂಗದಲ್ಲಿ ಮುಳುಗಿಹೋದ. ಹಿಂದೆ ಎಳೆಯ

ತನದಲ್ಲಿ ತಾನು-ನೀಲಮ್ಮ ಕೂಡಿ ಆಡಿದುದು, ಚಿನ್ನಪ್ಪನಿಗೆ ನೆನಪಾಯಿತು. ಮದುವೆಯ ಕಾಲದಲ್ಲಿ ನಗೆಗಣ್ಣಿಂದ ನೋಡುತ್ತ, ಇಬ್ಬರೂ ಒಬ್ಬರೊಬ್ಬರ ಕೈಹಿಡಿದುದು ಸ್ಮರಣೆಗೆ ಬಂದಿತು. ದೊಡ್ಡವರಾಗಿ ಕಲ್ಲಹಳ್ಳಿಗೆ ಬಂದಮೇಲೆ, ಗಂಡ-ಹೆಂಡತಿ ಕೂಡಿ ಸುಖದಿಂದಿದ್ದ ಕಾಲವು ಜ್ಞಾಪಕಕ್ಕೆ ಬಂದಿತು. ನಲುಮೆಯಿಂದ ನಗೆಮಾತನಾಡಿದುದು ನೆನಪಿಗೆ ಬಂದಿತು.

"ಒಮ್ಮೆ ಸೀಗೆಯ ಹುಣ್ಣಿಮೆಯ ಮುಂದೆ, ಚಿನ್ನಪ್ಪನ ದೇಹಾರೋಗ್ಯ ಚೆನ್ನಾಗಿರಲಿಲ್ಲ. ಸಿಕ್ಕಸಿಕ್ಕುದನು ತಿನ್ನುವಂತಿರಲಿಲ್ಲ. ಹುಣ್ಣಿಮೆಯದಿನ ಗಂಗಮ್ಮನು ಮನೆಯಲ್ಲಿ ಅದೆಷ್ಟೊ ಸವಿಯುಣಿಸುಗಳನು, ದೇವರಿಗೆ ಎಡೆಕೊಡಲು ಮಾಡಿದಳು. ಸೊಸೆಗೆ ತಿನ್ನುವುದಕ್ಕೆ ಬೇಕಾದಷ್ಟು ಬಲವಂತಪಡಿಸಿದಳು, ಆದರೆ ನೀಲಮ್ಮನು ಅವುಗಳನು ಮುಟ್ಟಲಿಲ್ಲ." ಈ ಸಂಗತಿಯು ಚಿನ್ನಪ್ಪನ ಜ್ಞಾಪಕಕ್ಕೆ ಬರದೆ ಇರಲಿಲ್ಲ.

"ಇನ್ನೊಮ್ಮೆ ಚಿನ್ನಪ್ಪನು ಸಂತೆಗೆ ಹೋಗಿದ್ದ. ಗುಡುಗುಮಿಂಚು ತೋರಿ, ಸಿಡಿಲುಬೀಳುವಂತಾಯಿತು. ಮನೆನೆಗೆದು ಬೀಳುವಂತೆ ಬಿರುಗಾಳಿ ಬೀಸಿತು. ಸುರಿಮಳೆಯು ಬಲವಾಗಿ ಸುರಿಯಿತು. ಚಿನ್ನಪ್ಪನಿಗೆ, ಅಂದು ನಡುದಾರಿಯ ಹಳ್ಳಿಯಲ್ಲಿಯೆ ಇರಬೇಕಾಯಿತು. ಅಂದು ರಾತ್ರಿ ನೀಲಮ್ಮನು ಊಟ ಮಾಡಲಿಲ್ಲವಂತೆ. ನಿದ್ರೆಬರದೆ ರಾತ್ರಿಯೆಲ್ಲವೂ ತಳಮಳಿಸುತಿದ್ದಳಂತೆ. ಬೆದರಿ ಬೆದರಿ ಬೀಳುತಿದ್ದಳಂತೆ, ಚಿನ್ನಪ್ಪನು ಮರಳಿ ಬಂದೊಡನೆಯೆಇದನ್ನು ಗಂಗಮ್ಮ ಹೇಳಿದಳು." ಇದೂ ಚಿನ್ನಪ್ಪನ ನೆನಪಿನ ಪಟದ ಮೇಲೆ ಮೂಡಿತು.

ಒಂದೋ ಎರಡೋ ! ಇಷ್ಟು ದಿನದ ತನ್ನ ಜೀವನನ್ನೇ ಚಿನ್ನಪ್ಪನು ಅಳೆದು ಬಳಚುತಿದ್ದನು. ಕಣ್ಣೀರು ಹಳ್ಳವಾಗಿ ಹರಿಯುತಲಿದ್ದಿತು. ಬಾಯಿಮೂಗುಗಳಿಂದ ಬಿಸಿಯಾದ ಉಸುರು ತಡೆತಡೆದು ಹೊರಡುತಿದ್ದಿತು.

"ನೀಲೇ! ನೀನು ನಿಜವಾಗಿಯೂ ಕೆಟ್ಟಿಲ್ಲವೇ? ಆ ಹಾರುವರ ಹಂದೆಯು ನಿನ್ನ ಮೈಯನ್ನು ಮುಟ್ಟಿ ಮೈಲಿಗೆ ಮಾಡಿಲ್ಲವೆ? " ಒಮ್ಮೆಲೇ ಚಿನ್ನಪ್ಪನು ಗಟ್ಟಿಯಾಗಿ ನುಡಿದ. ಮಾತನಾಡುತ್ತಲೆ ದಿಗ್ಗನೆ ಎದ್ದು ಕುಳಿತ. ಗುಡಿಸಿಲ ಬಾಗಿಲಲ್ಲಿ ರಾಮಮೂರ್ತಿ.

"ಚಿನ್ನಾ! ಏನಿದು ನಿನ್ನ ಮರುಳತನ!..." ಎಂದಿಷ್ಟೇ ರಾಮಮೂರ್ತಿ ನುಡಿದ. ಕೊರಳು ಬಿಗಿದು ಬಂದುದರಿಂದ ಮುಂದೆ ಮಾತುಗಳು ಹೊರಡಲಿಲ್ಲ. ಕಣ್ಣೀರು ಪಳಪಳನೆ ಸುರಿದುವು.

ಚಿನ್ನಪ್ಪನು ಮಾತನೇನೂ ಆಡಲಿಲ್ಲ. ಕೆಂಗಣ್ಣಿನ ನೋಟದಿಂದ, ರಾಮಮೂರ್ತಿಯನ್ನು ನೋಡಲು ತೊಡಗಿದ.

"ಅಯ್ಯೊ! ಚಿನ್ನಾ! ನನ್ನ ತಂಗಿ ಇಂದಿರೆಯೊಡನೆ ನನ್ನನ್ನು ಹೊಂದಿಸಿದ ಪಾಪ ಕಟ್ಟಿಕೊಳ್ಳುವೆಯಾ ? ..." ಮತ್ತೆ ದುಃಖ ಉಕ್ಕಿಬಂದುದರಿಂದ, ರಾಮಮೂರ್ತಿಗೆ ಮಾತನಾಡಲು ಬಾರದಾಯಿತು. ಹಾಗೆಯೆ ಮುಂದೆಬಂದು ಚಿನ್ನಪ್ಪನ ತೊಡೆಯ

ಮೇಲೆ ಹಣೆಯನಿಟ್ಟು ಬಿದ್ದುಕೊಂಡ; ಅಳುವು ಸೂಸಿ ಹೊರಬಿದ್ದಿತು; ಕಣ್ಣಿಂದ ನೀರು ಕಾಲುವೆಯಾಗಿಹರಿಯಿತು. ಚಿನ್ನಪ್ಪನು ಕದಲದೆ ಕುಳಿತುಬಿಟ್ಟಿದ್ದನು. ಚಿನ್ನಪ್ಪನ ಹೃದಯಪಟದ ಮೇಲೆ, ಇದುವರೆಗೂ ಮೂಡಿರುವ ರಾಮಮೂರ್ತಿಯ ವಿಕೃತವಾದ ಚಿತ್ರವು, ರಾಮಮೂರ್ತಿಯಃ ಕಂಬನಿಯಿಂದ ಸಂಪೂರ್ಣವಾಗಿ ಅಳಿಸಿಹೋಯಿತು. ಅದರ ಸ್ಥಳದಲ್ಲಿ, ಈಗಿನ ಶುದ್ಧ-ಸಾತ್ವಿಕ-ಮೂರ್ತಿಯು ಮೂಡಿತು; ಚಿನ್ನಪ್ಪನ ಎದೆ ಕರಗಿ, ನೀರಾಗಿ, ಉಕ್ಕೇರಿ, ಕಣ್ಣಿಂದ ಹೊರಬಿದ್ದಿತು.

"ಅಯ್ಯೋ ಚಿನ್ನಾ! ನನ್ನ ತಂಗಿ ಇಂದಿರೆಯೊಡನೆ...ನನ್ನನ್ನು ಹೊಂದಿಸಿದ ಪಾಪ ಕಟ್ಟಿಕೊಳ್ಳುವೆಯಾ?" ಎಂದು ನುಡಿದ ರಾಮಮೂರ್ತಿಯ ಮಾತುಗಳ ಅಂಜನವು, ಚಿನ್ನಪ್ಪನ ಕಣ್ಣಪರೆಯನ್ನು ಹರಿದುಬಿಟ್ಟಿತು, ಇದುವರೆಗೆ ಹೊಲಸುಮೆಯ್ಯವಳಾಗಿ ಕಾಣುತಿದ್ದ ನೀಲಮ್ಮನು, ಈಗ ಕಳೆಯುಳ್ಳ ಮೋರೆಯವಳಾಗಿ ತನ್ನ ಕಣ್ಣೆದುರಿಗೆ ಬಂದು ನಿಂತಂತೆ, ಚಿನ್ನಪ್ಪನು ಕಂಡನು. ಎಷ್ಟೋ ವೇಳೆಯವರೆಗೆ ಮಾತನಾಡದೆ ಇಬ್ಬರೂ ಕಣ್ಣೀರಸುರಿಸುತಲಿದ್ದರು. ಏನನೋ ಹೇಳಬೇಕೆಂದು ರಾಮಮೂರ್ತಿಯು ಮೇಲಕ್ಕೆದ್ದು ಕುಳಿತುಕೊಂಡ. ಬಾಯಿಂದ ಮಾತುಗಳೇ ಹೊರಡಲೊಲ್ಲವು. ಒಬ್ಬರನೊಬ್ಬರು ಕಣ್ಣಬಡೆಯದೆ ನೋಡಿಯೇ ನೋಡಿದರು. ಅವರಿಬ್ಬರ ನೋಟಗಳು ಆಡಿದ ಮೂಕ ಮಾತಿನ ಅರ್ಥ ಹೇಳುವುದು ಕಠಿನಕೆಲಸ.

ಚಿನ್ನಪ್ಪನು ಒಮ್ಮೆಲೆ ಮೇಲಕೆದ್ದ. ರಾಮಮೂರ್ತಿಯ ಅಡಿಗಳೆರಡನ್ನೂ ಗಟ್ಟಿಯಾಗಿ ಹಿಡಿದುಕೊಂಡ. "ರಾಮಣ್ಣಾ ತಿಳಿಯದ ತಮ್ಮನದಿದೊಂದು ತಪ್ಪನ್ನು ತಾಳಿಕೊಳ್ಳುವೆಯಾ?" ನಡುಗುವ ದನಿಯಿಂದ ನುಡಿದ. ಕಂಬನಿಯಿಂದ ಕಾಲ ತೋಯಿಸಿದ.

"ಚಿನ್ನಾ! ಒಂದೇ ಏಕೆ! ಇಂತಹ ನೂರು ತಪ್ಪುಗಳನಾದರೂ ತಾಳುವೆನು, ಆದರೆ ನನ್ನದೊಂದು ಮಾತನ್ನು ದಯವಿಟ್ಟು ನೀನು ನಡೆಯಿಸಬೇಕು.' ರಾಮಮೂರ್ತಿ ಸಮಾಧಾನದಿಂದ ಹೇಳಿದ.

"ಅದಾವ ಮಾತು? ನೀನೀಗ ಏನು ಹೇಳಿದರೂ ಕೇಳುವೆನು, ರಾಮಣ್ಣಾ! ನಿನ್ನ ಹಣ್ಣಾದ ಹೃದಯವನ್ನು ತಿಳಿಯದೆ ತುಳಿದ ಪಾಪಿ ನಾನು." ಚಿನ್ನಪ್ಪನು ಕಣ್ಣೀರ ಮಿಡಿಯುತ್ತ ನುಡಿದ.

"ಇನ್ನು ಶಾಂತನಾಗು. ಚಿನ್ನಾ! ಉಳಿದ ರಗಳೆಯೆಲ್ಲ ಏನೇ ಇರಲಿ! ನೀನು ನೀಲಮ್ಮನನ್ನು ಕಾಣಲು ನಾಳೆ ಬೆಳಗಿನಲಿಯೆ ಹೋಗಬೇಕು. ಇದೊಂದು ನನ್ನ ಮಾತನ್ನು ಕೇಳುವೆಯಾ?" ರಾಮಮೂರ್ತಿಯು ಎದೆ ಕರಗುವಂತೆ ನುಡಿದ.

ಚಿನ್ನಪ್ಪನು ಕೃತಜ್ಞತೆಯಿಂದ ಕೂಡಿರುವ ನೋಟದಿಂದ, ಕಣ್ಣರಳಿಸಿ ರಾಮಮೂರ್ತಿಯನ್ನು ನೋಡಿದ. "ರಾಮಣ್ಣಾ! ಇನ್ನು ನಿನ್ನ ಮಾತನ್ನು ಮೀರುವುದನ್ನು, ನಾನು

ಪಾಪವೆಂದು ತಿಳಿಯುವೆನು." ಎಂದು ನುಡಿದ. ಆಗ ರಾಮುಮೂರ್ತಿಗಾದ ಆನಂದವನ್ನು ಬಣ್ಣಿಸುವವರಾರು! ತಲೆಯ ಮೇಲಿರುವ ಗುಡ್ಡವೊಂದು ಕೆಳಗೆ ಬಿದ್ದಂತಾಯಿತು.

೧೦.

ನೀಲಮ್ಮನಿಗೆ ಜ್ವರವು ದಿನದಿನಕ್ಕೂ ಮಿಗಿಲು. ಔಷಧವನಂತೂ ಮುಟ್ಟುತ್ತಿರಲಿಲ್ಲ. ಹೊಟ್ಟೆಯಲ್ಲಿ ಅಗುಳು ಅನ್ನವಿಲ್ಲ; ಹನಿ ಹಾಲಿಲ್ಲ. ಮಲ್ಲೇಶನು ಚಿನ್ನಪ್ಪನನ್ನು ಕರೆಯಲಿಕ್ಕೆ ಹೋದದಿವಸ, ನೀಲಮ್ಮನಿಗೆ ಏನೋ ಒಂದು ಬಗೆಯ ಸಮಾಧಾನ; ಅಂದು ಅವಳ ನೋಟದಲ್ಲಿ ಆಶೆಯು ತುಂಬಿತುಳುಕುತಿದ್ದಿತು. ಆಗಾಗ ಕಣ್ಣರಳಿಸಿ ಸುತ್ತಲೂ ನೋಡುವಳು. ಮಲ್ಲೇಶನು ಸಂಜೆಗೆ ಮರಳಿ ಬಂದ. ಆದರೆ ಚಿನ್ನಪ್ಪನು ಬರಲೇ ಇಲ್ಲ. ಅಲ್ಲಿ ನಡೆದ ಎಲ್ಲ ಸಂಗತಿಯನ್ನೂ ಮಲ್ಲೇಶನು, ಅಣ್ಣನಿಗೂ ಅತ್ತಿಗೆಗೂ ಹೇಳಿದ. ಕೇಳಿ ನಡುಗಿದರು. ಕಂಬನಿಗರೆದರು; ಚಿನ್ನಪ್ಪ ಬರದಿದ್ದುದು ನೀಲಮ್ಮನಿಗೆ ತಿಳಿಯಿತು. ನಿರಾಶೆಯ ನಿಟ್ಟುಸಿರು ಬಿಟ್ಟಳು. ಮೋರೆ ಮುದುಡಿಸಿದಳು. ಮನದಲ್ಲಿ ಮರುಗಿದಳು. ಅಂದು ರಾತ್ರಿಯಲ್ಲಿ ನೀಲಮ್ಮನಿಗೆ ದಿನಕ್ಕೆ ಇಮ್ಮಡಿಯಾಗಿ ಜ್ವರ. ಮೈಮುಟ್ಟಿದರೆ ಕಾದ ಹಂಚು ಹಿಡಿದಂತೆ; ಮೈಮೇಲೆ ಜೋಳವನಿಟ್ಟರೆ ಅರಳಾಗುವಂತೆ.

ಮರುದಿನ ನಾಲ್ಕುತಾಸು ವೇಳೆಯಾಗಿದೆ. ನೀಲಮ್ಮನು ಜ್ವರದಿಂದ ಹೊಯ್ದುಹೋಳಿಗೆಯಾಗುತಿರುವಳು. ಅಸಹ್ಯವಾದ ಸಂಕಟಪಡುತಿರುವಳು. ಮನೆಯವರು ಅವಳ ಸಂಕಟವನ್ನು ನೋಡಲಾರದವರಾಗಿದ್ದರು. ನೀಲಮ್ಮನ ತಂದೆತಾಯಿಗಳ ಎದೆಯಳಲ ನಂತೂ ಬಣ್ಣಿಸಲಾಗದು. ಎಲ್ಲರೂ ನೀಲಮ್ಮನ ಬಳಿಯಲ್ಲಿ ಜೋಲುಮೋರೆಯಿಂದ ಕುಳಿತಿರುವರು. ಒಮ್ಮಿಂದೊಮ್ಮೆ ಚಿನ್ನಪ್ಪನು ಒಳಗೆ ಬಂದ. ಅಲ್ಲಿ ಕುಳಿತವರಿಗೆಲ್ಲ ಆಶ್ಚರ್ಯ. ಅದರೊಡನೆಯೆ ಆನಂದ. ನೀಲಮ್ಮನ ತಂದೆ-ತಾಯಿಗಳಿಗಂತೂ ಬಾಯಿಂದ ಮಾತುಗಳೇ ಹೊರಡವು.

ಚಿನ್ನಪ್ಪನು ಬಂದವನೇ ಆತುರದಿಂದ, ನೀಲಮ್ಮನ ಹಾಸಿಗೆಯಬಳಿಗೆ ಹೋದನು. ತೀರ ಪಕ್ಕದಲಿಯೇ ಕುಳಿತನು. "ನೀಲಾ! ನಿನ್ನ ಹೂವಿನಂತಹ ಹೃದಯವನ್ನು ಹಿಂಡಿ ಹಿಸುಕಿದ ಪಾಪಿ ನಾನು ! ನನ್ನ ಮೋರೆಯ ಕಡೆಗೆ ನೋಡಿ... " ಚಿನ್ನಪ್ಪನಿಗೆ ಮಾತನಾಡುವುದಾಗಲಿಲ್ಲ. ನೀರವನಾಗಿ ಕಣ್ಣೀರ ಸುರಿಸಲು ತೊಡಗಿದನು.

"ನೀಲಾ" ಎಂದು ಕರೆದ ಚಿನ್ನಪ್ಪನ ದನಿಯು, ಕಿವಿದೆರೆಗೆ ಬಿದ್ದಿತು. ನೀಲಮ್ಮನು ಬೆಚ್ಚಿಬಿದ್ದಳು. ಬಾಡಿದ ಕಣ್ಣುಗಳನರಳಿಸಿ ಚಿನ್ನಪ್ಪನ ಕಡೆಗೆ ನೋಡಿದಳು. ಆವೇಶ ಬಂದಂತಾಗಿ, ಚೆಕ್ಕನೆ ತಲೆಯನೆತ್ತಿ, ಚಿನ್ನಪ್ಪನ ತೊಡೆಯಮೇಲೆ ಮಡಗಿದಳು. ಆನಂದಾತಿರೇಕದಿಂದ ಮೈಮರೆತು ಹಾಗೆಯೆ ಕಣ್ಣುಮುಚ್ಚಿದಳು. ನಿಶ್ಚಲಳಾಗಿ ಮಲಗಿಬಿಟ್ಟಳು. ಚಿನ್ನಪ್ಪನಾಗ ನೀಲಮ್ಮನ ಮೋರೆಯನು ಕಣ ಬಡೆಯದೆ ನೋಡುತಲಿದ್ದ.

ಕೈಯಿಂದೆ ಮೈದಡವುತಲಿದ್ದ. ಅವಿದಿತಭಾವದಿಂದ ಕಣ್ಣೀರ ಸುರಿಸುತಲಿದ್ದ. ಆಗಿನ ಅವನ ಕಂಬನಿಗಳು ದುಃಖದುವೋ ಆನಂದದುವೋ ಎಂಬುದನ್ನು ಸರಿಯಾಗಿ ಹೇಳು ವುದು ನೀಗದ ಕೆಲಸ.

ಅಂದು ಚಿನ್ನಪ್ಪನಿಂದ ನೀಲಮ್ಮನನ್ನು ಅಗಲಿಸಿದ ಕೈಯೇ, ಇಂದು ಮರಳಿ ಅವ ರಿಬ್ಬರನೂ ಒಂದಾಗಿ ಬೆರೆಯಿಸಿ ಬಿಟ್ಟಿತು. ಅದಾವುದು ಆ ಕಾಣದ ಕೈ ? ಆ ಕೈ ಯನ್ನು ಕಂಡವರು, ಲೋಕದಲ್ಲಿ ಯಾರಾದರೂ ಇರುವರೇ? ಬರೆದು ಬರೆದು ಬೇಸತ್ತು ನೋಯುತಿರುವ ನನ್ನ ಕೈಮಾತ್ರ, ನನಗೆ ಕಾಣುತಿರುವುದು. ಸಾಕು! ಮುಗಿಸಿ ಬಿಡು ವೆನಿನ್ನು ! ಸಕಲರಿಗೂ ನಮಸ್ಕಾರ !

ಓಂ ಶಾಂತಿಃ ಶಾಂತಿಃ ಶಾಂತಿಃ

---

## ಕನ್ನಡನುಡಿ.

ಕವಿ:— ಶ್ರೀ ಕೃಷ್ಣಕಿಂಕರ

ಸಾರಂಗರಾಗ, ಆದಿತಾಳ.

ಎನಿತು ಇನಿದು ಈ ಕನ್ನಡನುಡಿಯು ॥
ಮನವನು ತಣಿಸುವ ಮೋಹನ ಸುಧೆಯು ॥ ಪಲ್ಲ ॥

ಗಾನವ ಬೆರೆಯಿಸಿ। ವೀಣೆಯ ದನಿಯೊಳು ।
ವಾಣಿಯು ನೇವುರ--। ನುಡಿಸುತೆ ಕುಣಿಯಲು ॥
ಮಾಣದೆ ಮೆರೆಯುವ । ಮಂಜುಲರವವೋ? ॥ ಎನಿತು ॥ ೧ ॥

ರಂಗನ ಮುರಲಿಯ । ಹಿಂಗದ ಸರದಲಿ ।
ಹೆಂಗಳೆಯರು ತಾವ್ । ತಿಂಗಳಿನಿರುಳಲಿ ।
ಸಂಗೀತವನೊರೆ--। ದಂಗವಿದೇನೋ? ॥ ಎನಿತು ॥ ೨ ॥

ಗಿಳಿಗಳು ಉಲಿಯುವ । ಮೆಲುಮಾತುಗಳೋ? ।
ಕಳಕಂಠಗಳಾ । ಚೆಲುವಿನ ಕುಕಿಲೋ ? ॥
ಅಳಿಗಳ ಬಳಗದ । ಬೆಳಗಿನ ಉಲಿವೊ? ॥ ಎನಿತು ॥ ೩ ॥

( ಈ ವರ್ಷದ ಶ್ರೀ ಗಣೇಶ ಮೇಳಕ್ಕಾಗಿ ಬರೆದ ಪದ್ಯ )

---

# ವಿಭೂತಿಯೆಂದರೇನು ?

ಲೇಖಕಃ—ಶ್ರೀಧರ.

" यद्यद्विभूति मत्सत्वं श्रीमदूर्जि तमेव वा ।
तत्तदेवावगच्छ त्वं मम तेजोंऽशसंभवम् ॥"

श्रीमद्भगवद्गीतासु.

ಅನಾದಿಕಾಲದಿಂದ ನಡೆದಿರುವ ಈ ಸೃಷ್ಟಿಯನ್ನು, ಸೂಕ್ಷ್ಮದೃಷ್ಟಿಯಿಂದ ನೋಡಿದರೆ, ಎಲ್ಲ ಪ್ರಾಣಿಗಳಲ್ಲಿ ಮಾನವನೇ ಶ್ರೇಷ್ಠನೆಂಬುವದು ಕಂಡು ಬರುವದು. ಜಡ ಸೃಷ್ಟಿಗಿಂತಲೂ ಜೀವಸೃಷ್ಟಿಯು ಮೇಲಾದದ್ದು. ಜೀವಸೃಷ್ಟಿಯಲ್ಲಿಯೂ ವನಸ್ಪತಿ, ಪಶು, ಪಕ್ಷಿ ಮುಂತಾದಮೆಟ್ಟಲುಗಳನ್ನೇರಿ ಪರಮಾತ್ಮನು ಮಾನವನಾಗಿರುವನು. ಮಾನವನೆಂದರೆ ಈ ಜಗದ ಜೀವಾಳ; ಸೃಷ್ಟಿಯ ತೆನೆ; ಸಕಲ ಪ್ರಾಣಿಗಳ ಕೆನೆಯಾಗಿರುವನೆಂದು ಅಖಿಲ ಜಗತ್ತಿನಲ್ಲಿಯ ಸಂಸ್ಕೃತಿಗಳೂ ಸಾರುತ್ತವೆ. ಆಧಿಭೌತಿಕ ಶಾಸ್ತ್ರಜ್ಞರ ಅಭಿಪ್ರಾಯವಾದರೂಹೀಗೆಯೇ ಇದೆ. ಈ ಮಾನವ ಕ್ಷೀರೊಧದಿಯ ನವನೀತಕ್ಕೆಯೇ ವಿಭೂತಿಯೆನ್ನುವರು. ಅವ್ಯಕ್ತನಾದ ಪರಮಾತ್ಮನು ವ್ಯಕ್ತ ಸ್ವರೂಪವನ್ನು ತನ್ನ ಆನಂದದ ಸಲುವಾಗಿ ತಾಳಿಬಾಳಿರುವನೆಂದು ಉಪನಿಷತ್ತುಗಳನ್ನು ಕಂಡ ಮಹಾತ್ಮರ ಮತವು. ಈ ವ್ಯಕ್ತ ರೂಪದಲ್ಲಿಯೂ ಯಾವದಾದರೊಂದು ವಸ್ತುವಿನಲ್ಲಿ ಮೂಲ ಪರಮಾತ್ಮನ ಸ್ವರೂಪವು ನಿಚ್ಚಳವಾಗಿ ಒಡಮೂಡಿದ್ದರೆ ಅದು ಮಾನವನಲ್ಲಿ. ಮಾನವ ಜಾತಿಯಲ್ಲಿಯೂ ಯಾವನಾದರೊಬ್ಬ ವಿಶೇಷ ಮಾನವನಲ್ಲಿ ಮೂಲ ಪರಮಾತ್ಮ ಶಕ್ತಿಯು ಪೂರ್ಣವಾಗಿಯಲ್ಲದಿದ್ದರೂ ಎಲ್ಲರಿಗಿಂತ ಹೆಚ್ಚಾಗಿ ತುಂಬಿರುವದು ವಿಭೂತಿಯ ಲಕ್ಷಣವು. ಯಾರಲ್ಲಿ ಪರಮಾತ್ಮ ಶಕ್ತಿಯು ಹೆಚ್ಚಾಗಿ ತುಂಬಿರುವದೋ ಅವನೇ ಐಶ್ವರ್ಯವಂತನಾಗುವನು. ಅವನೇ ಊರ್ಜಿತನಾಗುವನು. ಅವನಿಗೇ ವಿಭೂತಿಯೆಂದು ಸಕಲ ಜಗತ್ತೆಲ್ಲ ಕುಣಿದಾಡಿ ಕೊಂಡಾಡುವದು.

ಈ ಸೃಷ್ಟಿಯು ಅನಂತ ವಸ್ತುಗಳ ಅನಂತ ಚಲನವಲನಗಳನ್ನೂ ಏರಿಳಿತಗಳನ್ನೂ ಕೀಳು ಮೇಲುಗಳನ್ನೂ ಅವಲೋಕಿಸಿದರೆ, ಎಲ್ಲ ವಸ್ತುಗಳು ಯಾವದೋ ಒಂದು ಅಡಗಿರುವ ಶಕ್ತಿಯಿಂದ ಪ್ರೇರಣೆಯನ್ನು ಹೊಂದಿ ಯಾವಾಗಲೂ ಮುಂದಕ್ಕೆ ಸಾಗುತ್ತಿರುವವೆಂದು ಕಂಡು ಬರುವದು. ಪರಮಾತ್ಮಶಕ್ತಿಯ ಪ್ರೇರಣೆಯಿಂದಲೇ ಜಡವು ಜೀವವನ್ನು ಹೊಂದುವದು. ಸಸಿಯು ಪಶುವಿನ ರೂಪವನ್ನು ತಾಳುವದು. ಪಶುವು ಶಿಶುವಾಗುವದು. ಶಿಶುವು ಶಿವನಾಗಬೇಕೆಂದು ಹಗಲಿರುಳು ಹಂಬಲಿಸುತ್ತಿರುವದಾದರೂ ಪರಮಾತ್ಮನ ಪ್ರೇರಣೆಯಿಂದಲೇ ಅವನ ಶಕ್ತಿಯಿಂದಲೇ ಅವನ ಬಯಕೆಯಿಂ

ವಲೇ "ಅಡಿಯು ಮುಂದಿಡೆ ಸ್ವರ್ಗ, ಅಡಿಯು ಹಿಂದಿಡೆ ನರಕ" ವೆಂಬ ತತ್ವವು ಮಾನವನ ಅನಂತ ಮಾರ್ಗಕ್ರಮಣದಲ್ಲಿಯೂ ಸರಿಯಾಗುವದು. ಒಂದಡಿಯನ್ನು ಮಾನವನು ಮುಂದಿಟ್ಟರೆ ಬೆಡಗಿನ ಕಡಲಲ್ಲಿ ಮಿಂದಷ್ಟು ಆನಂದ. ಒಂದೇ ನಿಮಿಷ ತಾಳುವದು ಆ ಆನಂದ, ಮತ್ತೆ ಮಾನವನ ದೃಷ್ಟಿಯು ಮುಂದೇ ಇರುವದು. ಎಂಬತ್ತು ನಾಲ್ಕು ಲಕ್ಷ ಯೋನಿಗಳಲ್ಲಿ ತಿರುಗಿ ಈ ಮಾನವ ಜನ್ಮವು ನಮಗೆ ಪ್ರಾಪ್ತವಾಗಿರುವದೆಂದು ಹಿರಿಯರು ಹೇಳುವದುಂಟು. ನರನು ಪೂರ್ಣತೆಯನ್ನು ಹೊಂದಿ ನಾರಾಯಣನಾಗಬೇಕಾದರೆ ಇನ್ನು ಎಷ್ಟು ಕೋಟಿ ಯೋನಿಗಳಲ್ಲಿ ತಿರುಗಾಡಬೇಕಾಗುವದೋ ಆ ನಾರಾಯಣನೇ ಬಲ್ಲ. ನರನು ನಾರಾಯಣನಾಗಬಲ್ಲನು ಇಂದಿಲ್ಲ ನಾಳೆ ಆಗುವನೆಂಬ ಮಾತಿನಲ್ಲಿ ಮಾತ್ರ ಎಳ್ಳಷ್ಟೂ ಸಂಶಯವಿಲ್ಲ. ಸುಂದರವಾದ ಹಿಮಾಲಯದಲ್ಲಿ ಹುಟ್ಟಿದ ನದಿಯು ಪ್ರತಿಯೊಂದು ಕ್ಷಣದಲ್ಲಿ ಪ್ರಗತಿಯನ್ನು ಹೊಂದುತ್ತಿರುವಾಗ ಯಾರಾದರೂ "ತಂಗೀ ಎಲ್ಲಿಗೆ ಹೋಗುತ್ತೀ" ಎಂದು ಕೇಳಿದರೆ ಆಕೆಯು ಯಾವ ಉತ್ತರವನ್ನು ಕೊಡುವಳು ? ತನ್ನ ವಯಸ್ಸಿನ ಕ್ಷಣಕ್ಷಣದಲ್ಲಿ ಬೆಳೆಯುವ ಬಾಲೆಗೆ "ತಂಗೀ ನಿನ್ನ ಬೆಳವಣಿಗೆಯ ಗುರಿಯೇನು" ಎಂದು ಕೇಳಿದರೆ ಏನು ಹೇಳುವಳು ? ಇಂದಿಲ್ಲ ನಾಳೆ ನಾನು ಸಮುದ್ರರಾಜನನ್ನು ವರಿಸುವೆನೆಂದು ನದಿಯು ಹೇಳುವದು. ಇಂದಿಲ್ಲ ನಾಳೆ ಮನದಿನಿಯನಲ್ಲಿ ಕೂಡಿ ಪೂರ್ಣತ್ವವನ್ನು ಪಡೆಯುವೆನೆಂದು ಬಾಲೆಯ ಗಲ್ಲದ ಮೇಲಿನ ನಾಚಿಕೆಯ ಕೆಂಪು ನಮ್ಮೆಲ್ಲರಿಗೂ ಸೂಚಿಸುವದು. ಅದರಂತೆಯೇ ಈ ಮಾನವ ಲಕ್ಷ್ಮಿಗೆ ಯಾರಾದೂ ನೀನು ಯಾರನ್ನು ಮದುವೆಯಾಗುವೆ? ಎಂದು ಕೇಳಿದರೆ ಕ್ಷೀರೋದಧಿಯಲಲ್ಲಿ ಶೇಷಶಯನದಲ್ಲಿ ಸುಖವಾಗಿ ಒರಗಿರುವ ಆನಂದರೂಪಿಯಾದ ನಾರಾಯಣನನ್ನೇ ವರಿಸುನೆಂದು ಆಕೆಯು ಉತ್ತರವನ್ನೀಯುವದರಲ್ಲಿ ಸಂದೇಹವೇನು ?

ಈ ಪೂರ್ಣತೆಯನ್ನು ಪಡೆದ ಮನುಷ್ಯನಿಗೆ ಮಹಾತ್ಮನೆಂದೂ ವೀರನೆಂದೂ ಋಷಿಯೆಂದೂ ಅಮರನೆಂದೂ ಕರೆಯುವದುಂಟು. ಆರ್ಯಧರ್ಮದ ಗುರಿಯು ಪೂರ್ಣತೆಯನ್ನು ಪಡೆಯುವದೇ ಆಗಿರುವದು. ಇದೇ ವಿಚಾರವನ್ನು ಉಪನಿಷತ್ತುಗಳಲ್ಲಿ ಹೇಳಿದೆ. ಅಮೃತತ್ವವನ್ನು ಪಡೆದವರಿಗೇ ಆರ್ಯಸಮಾಜದಲ್ಲಿ ಬಹಳ ಗೌರವವಿತ್ತು. ಆರ್ಯರ ಕವಿಗಳು ಈ ಗುರಿಯನ್ನು ಪಡೆದ ಮನುಷ್ಯನ ಗುಣಗಳನ್ನು ಹಾಡಿದರು. ಆರ್ಯರ ಸೀಮಾಪುರುಷರು ಇದೇ ಧ್ಯೇಯವನ್ನು ಸಲುವಳಿಯಲ್ಲಿ ತಂದು ಆಚರಿಸಿ ಅಮರರಾದರು. ಅಮರರಾದವರೂ, ಅಮರರಾಗುವದಕ್ಕೆ ಸಹಾಯಮಾಡಿದವರೂ, ಆರ್ಯಧರ್ಮದ ವೀರರಾದರು. ರಾಮ, ಕೃಷ್ಣ, ,ಹರಿಶ್ಚಂದ್ರ, ಕರ್ಣ, ವಿಶ್ವಾಮಿತ್ರ, ವಶಿಷ್ಠ, ಧರ್ಮರಾಜ, ಬಲಿಚಕ್ರವರ್ತಿ, ಪ್ರಲ್ಹಾದ, ಧ್ರುವ, ಕಬೀರ, ನಾನಕ, ಚೈತನ್ಯ, ತುಕಾರಾಮ, ರಾಮದಾಸ, ಪುರಂದರದಾಸ, ವಿದ್ಯಾರಣ್ಯ, ಬಸವೇಶ್ವರ, ಶಂಕರ, ಮಧ್ವ, ರಾಮಾನುಜ, ಬುದ್ಧ, ರಾಮಕೃಷ್ಣ ಪರಮಹಂಸ, ಮಹಾತ್ಮಾ

ಗಾಂಧಿ ಮುಂತಾದ ಋಷಿಗಳು ಆರ್ಯಧರ್ಮೋಪದೇಶಕರು ಅಮರತ್ವವನ್ನು ಪಡೆದು ಮಾನವನ ಧ್ಯೇಯವಾದ ಪೂರ್ಣತೆಯನ್ನು ಪಡೆದಿದ್ದಾರೆ. ಅದರಂತೆಯೇ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಸಾಕ್ರೆಟಿಸ್, ಪ್ಲೇಟೋ, ಅರಿಸ್ಟೋಟ್‌ಲ್ ಮಹಾತ್ಮಾ ಕ್ರೈಸ್ತ, ಲೂಥರ, ಲೆನಿನ್, ಟೊಲ್‌ಸ್ಟಾಯ್ ಮುಂತಾದ ಸಂತರು ತಮ್ಮ ಆಚರಣೆಯಿಂದ ಮನುಷ್ಯನು ಅಮೃತತ್ವವನ್ನು ಪಡೆಯಬಹುದೆಂದು ತೋರಿಸಿರುವರು. ಇಂಥ ಮಹಾತ್ಮರು ಪರಮಾತ್ಮನ ಅಂಶ ಸಂಭೂತರೆಂದೆನ್ನುವದಕ್ಕೆ ಅಡ್ಡಿಯೇನು ?

ಈ ಮಹಾತ್ಮರಲ್ಲದೆ ಇನ್ನೂ ಕೆಲವರು ಈ ಜಗತ್ತಿನಲ್ಲಿದ್ದು ಪೂರ್ಣತೆಯನ್ನು ಪಡೆದಿರಬಹುದು. ಆದರೆ ಅವರ ವಿಷಯಕ್ಕೆ ಜಗತ್ತಿಗೆ ಏನೂ ಗೊತ್ತಿರುವದಿಲ್ಲವಾದ ಕಾರಣ ಅವರಿಂದ ನಮಗೆ ಏನೂ ಬೆಳಕು ಸಿಗುವದಿಲ್ಲ. ಪೂರ್ಣತೆಯೆಂದರಾದರೂ ಏನು ? ಉತ್ತಮವಾದ ಕೆತ್ತಿಗೆಯ ಕೆಲಸವನ್ನು ಮಾಡಿದವನಿಗೆ ಮಹಾತ್ಮರೆಂದೇಕೆ ಅನ್ನುವದಿಲ್ಲ? ಲಕ್ಷಾನುಧಿ ಜನರನ್ನು ಕೊಂದು ಪರರಾಷ್ಟ್ರಗಳನ್ನು ಕೈವಶ ಮಾಡಿ ಸಾಮ್ರಾಜ್ಯಗಳನ್ನು ಕಟ್ಟಿದ ಚಕ್ರವರ್ತಿಗಳ ಬಲವಲ್ಲಿ ಕುಂದೇನು? ನಿಮಿಷ ನಿಮಿಷಗಳಲ್ಲಿ ತರತರದ ವೇಷಗಳನ್ನು ಧರಿಸಿ ಇಂಪಾದ ಕಂಠದಿಂದ ಸಭಿಕರೆಲ್ಲರು ಬೆರಗಾಗುವ ಹಾಗೆ ನಟನೆಯನ್ನು ಮಾಡುವ ನಟಸಮ್ರಾಟರಿಗೆ ಸಂತರೆಂದೇಕೆ ಅನ್ನಬಾರದು ? ನವರಸಗಳಿಂದ ತುಂಬಿ ತುಳುಕುವಂಥ ಮಹಾ ಕಾವ್ಯಗಳನ್ನೂ ಕೌಶಲ್ಯದಿಂದ ಸುಂದರ ಶೈಲಿಯಲ್ಲಿ ಮಧುರವಾದ ಹಾಡುಗಳಿಂದೊಪ್ಪುವ ನಾಟಕಗಳನ್ನೂ ರಚಿಸಿದ ಕವಿಗಳು ಋಷಿಗಳಲ್ಲೇನು? ಅಲ್ಲ. ಇವರೆಲ್ಲರೂ ದೊಡ್ಡವರು ನಿಜ. ಇವರ ಯೋಗ್ಯತೆಯು ಜನಸಾಮಾನ್ಯಕ್ಕಿಂತ ಮೇಲಾಗಿರುವದೆಂದು ಯಾರಾದರೂ ಒಪ್ಪಬಹುದು. ಇವರ ಗ್ರಂಥಗಳೂ ಚಿತ್ರಗಳೂ ಕಟ್ಟಡಗಳೂ ಸಾಮ್ರಾಜ್ಯಗಳೂ ಗಹನವಾಗಿಯೂ ಆಳವಾದ ವಿಚಾರವುಳ್ಳವುಗಳಾಗಿಯೂ ಇರಬಹುದು. ಆದರೆ ಇವರ ಆತ್ಮ? ಆಚರಣೆ? ತತ್ವ! ಮಹಾತ್ಮರೆನಿಸಿಕೊಳ್ಳುವವರಿಗೆ ಮಹಾ ಆತ್ಮವಿರಬೇಕು. ಅಂದರೆ ಉದಾರವಾದ ನೀತಿಪೂರ್ವಕವಾದ ಅಧ್ಯಾತ್ಮದಿಂದ ತುಂಬಿರುವ ಆಚರಣೆಯಿರಬೇಕು. ಅವನ ಆಚರಣೆಯು ಇಡೀ ಜಗತ್ತಿನ ಜನರಿಗೆ ಆದರ್ಶವಾಗಿರಬೇಕು. ಕವಿಗಳು, ನಟರು, ಚಿತ್ರಕಾರರು, ಚಕ್ರವರ್ತಿಗಳು, ಶೀಲಹೀನರೂ ಇರಬಹುದು; ಇವರ ಕವಿತೆಯನ್ನು ಅಭಿನಯವನ್ನು, ಚಿತ್ರವನ್ನು, ಸಾಮ್ರಾಜ್ಯವನ್ನು ಎರಡನೆಯವರು ಮಾದರಿಯನ್ನಾಗಿಟ್ಟು ಕೊಳ್ಳಬಹುದು. ಆದರೆ ಇವರ ಶೀಲವನ್ನು? ಯಾರ ಶೀಲವು ಯಾರ ಜೀವನವು ಸಕಲ ಜಗತ್ತಿಗೇ ಮಾದರಿಯಾಗಿದೆಯೋ ಅಂಥವರಿಗೆಯೇ ಮಹಾತ್ಮರು ಅಥವಾ ವಿಭೂತಿಗಳೆಂದೆನ್ನಬಹುದು. ಯಾರು ಆತ್ಮತತ್ವವನ್ನು ಕಂಡುಹಿಡಿದು ಅದರ ಬೆಳಕಿನಿಂದಲೇ ನಡೆಯುವರೋ ಅವರೇ ಮಹಾತ್ಮರು. ಅವರೇ ಸಂತರು. ಅವರೇ ಮಹಂತರು. ಭರ್ತೃಹರಿಯು ಸತ್ಪುರುಷರ ಲಕ್ಷಣವನ್ನು ಮುಂದಿನ ಶ್ಲೋಕದಲ್ಲಿ ಹೇಳಿರುವನು.

" एते सत्पुरुषाः परार्थघटका स्वार्थम् परित्यज्य ये ।
सामान्यास्तु परार्थमुद्यमभृतः स्वार्थाविरोधेनये ॥
तेऽमी मानुषराक्षसाः परहितं स्वार्थाय निघ्नंतिये ।
ये नि घ्नंति निरर्थकं पराहितं ते के न जानीमहे ॥

ಸ್ವಾರ್ಥವನ್ನು ತೊರೆದು ಪರಾರ್ಥವನ್ನು ಸಾಧಿಸುವವರು ಸತ್ಪುರುಷರು. ತಮ್ಮ ಸ್ವಾರ್ಥಕ್ಕೆ ಬಾಧೆ ಬರದಂತೆ ಪರಾರ್ಥವನ್ನು ಸಾಧಿಸುವವರು ಸಾಮಾನ್ಯರು. ಸ್ವಾರ್ಥವನ್ನು ಸಾಧಿಸುವದರ ದೆಶೆಯಿಂದ ಪರಾರ್ಥವನ್ನು ಕೆಡಿಸುವವರು ರಕ್ಕಸರು. ಅವರ ರೂಪವಷ್ಟೇ ಮನುಷ್ಯರದು; ಆದರೆ ಸ್ವಾರ್ಥವಿಲ್ಲದೆಯೂ ಕೂಡ ಪರಾರ್ಥವನ್ನು ಕೆಡಿಸುವವರು ! ಅವರಿಗೆ ಹೆಸರೇ ಇಲ್ಲ! ಸರ್ವಸಾಮಾನ್ಯ ಜನರು ತಮ್ಮ ಸ್ವಾರ್ಥವನ್ನು ಸಾಧಿಸಿ ಪರರಿಗೆ ಸುಖವನ್ನುಂಟು ಮಾಡುವರು. ಸತ್ಪುರುಷರು ಮಾತ್ರ ತಮ್ಮ ಸ್ವಾರ್ಥವು ನಾಶವಾದರೂ ಸಹ ಚಿಂತಿಸದೆ ಪರೋಪಕಾರವನ್ನು ಮಾಡಲೆತ್ನಿಸುವರು. ಸ್ವಾರ್ಥವೆಂದರೆ ಅದರಲ್ಲಿ ಏನೂ ದೋಷವಿಲ್ಲ. ಸ್ವಾರ್ಥವೆಂಬ ಪ್ರೇರಣೆಯಾದರೂ ಪರಮಾತ್ಮನಿಂದಲೇ ಬಂದಿರುವದೆಂದ ಮೇಲೆ ಅದರ ಯೋಗ್ಯ ಉಪಯೋಗವನ್ನು ನಾವು ಮಾಡಿಕೊಳ್ಳಲೇ ಬೇಕು. ಸ್ವಾರ್ಥವನ್ನೇ ಸಾಧಿಸುವ ಯೋಗ್ಯತೆಯಿಲ್ಲದಿದ್ದವನು ಪರಾರ್ಥವನ್ನು ಸಾಧಿಸುವದಾದರೂ ಹೇಗೆ ? ಎರಡನೆಯವರಿಗೆ ಏನಾದರೂ ಕಲ್ಯಾಣವನ್ನು ಮಾಡಲೆಳಸುವ ಪ್ರತಿಯೊಬ್ಬ ಮನುಷ್ಯನು ತಾನು ಸ್ವತಃ ಯೋಗ್ಯತೆಯನ್ನು ಪಡಯಲೇ ಬೇಕು. ಓದು ಕಲಿಸಿ ಜಗತ್ತಿನ ಕಲ್ಯಾಣವನ್ನು ಮಾಡಲಿಚ್ಛಿಸುವವನು ಪಂಡಿತನಾಗಬೇಕು. ದೇಶವನ್ನು ಪಾರತಂತ್ರದಿಂದ ಮುಕ್ತಮಾಡಲು ಮನಸುಳ್ಳವನು ಜಟ್ಟಿಯಾಗಬೇಕು. ಬಡಬಗ್ಗರಿಗೆ ದಾನಮಾಡಿ ಅವರಿಗೆ ಹಿತವನ್ನುಂಟುಮಾಡುವ ಮಹತ್ವಾಕಾಂಕ್ಷೆಯುಳ್ಳವನು ಸ್ವತಃ ದುಡಿದು ದೈವುಳ್ಳವನಾಗಬೇಕು! ತಾನು ಕಾಣದ್ದು ಮಂದಿಗೇನು ಕೊಟ್ಟೀತು ಎಂಬದರ ಅರ್ಥವಾದರೂ ಇದೇ. ತನ್ನಲ್ಲಿಯೇ ನೀರಿಲ್ಲದವನು ಪರರಿಗೆ ನೀರೆರೆಯುವದೆಂತು ? ಸಾಮಾನ್ಯ ಜನರು ಸ್ವಾರ್ಥದ ಬೆನ್ನು ಹತ್ತಿ ಪಂಡಿತರಾಗುವರು, ದೈವುಳ್ಳವರಾಗುವರು, ಜಟ್ಟಿಯಾಗುವರು. ಮುಂದೆ ಆಶೆಯ ಬೆನ್ನು ಹತ್ತಿ ಅದರಲ್ಲಿಯೇ ಮಡಿಯುವರು. ಆದರೆ ಸತ್ಪುರುಷರು ಕೆಲವು ಹೊತ್ತು ಸ್ವಾರ್ಥದ ಬೆನ್ನುಹತ್ತಿ ಗಳಿಸುವರು. ಎರಡನೆಯ ನಿಮಿಷದಲ್ಲಿ ಅದನ್ನೆಲ್ಲ ಜನರಿಗೆ ಕೊಟ್ಟು ಬಿಡುವರು. ಇದರಿಂದ ಜಗತ್ತಿನ ಜನರಿಗೆ ಕಲ್ಯಾಣವಾಗುವದು. ಹೀಗೆ ಪರೋಪಕಾರಾರ್ಥವಾಗಿ ತಮ್ಮ ತನುಮನಧನಗಳನ್ನು ಸವಿಸುವದೇ ಸತ್ಪುರುಷರ ಆಚರಣೆ. ಈ ಆಚರಣೆಯುಳ್ಳ ಮನುಷ್ಯನಿಗೇ ಮಹಾತ್ಮನೆಂತಲೂ ಹೆಸರು.

ಪರೋಪಕಾರವನ್ನು ಮಾಡುವದೆಂದರೂ ಸಾಮಾನ್ಯ ಕೆಲಸವಲ್ಲ. ಪರರಿಗೆ ಉಪಕಾರವಾವುದೆಂಬದನ್ನು ಎಲ್ಲರೂ ಬಲ್ಲರು. ಬಡಬಗ್ಗರಿಗೆ ಅನ್ನವನ್ನು ನೀಡುವದು; ಅಜ್ಞರಿಗೆ ವಿದ್ಯೆಯನ್ನು ಕಲಿಸುವದು, ಮುಂತಾದ ಸರ್ವಸಾಮಾನ್ಯ ಪರೋಪಕಾರ

ಗಳನ್ನು ಎಲ್ಲರೂ ಅರಿಯುತ್ತಾರೆ. ಮತ್ತು ತಮ್ಮ ಶಕ್ತ್ಯನುಸಾರವಾಗಿ ಮಾಡುತ್ತಾರೆ. ಆದರೆ ಇದಕ್ಕು ವಿಸ್ತೃತವಾದ ಸಮಾಜದ ರಾಷ್ಟ್ರದ ಅಥವಾ ವಿಶ್ವದ ಕಲ್ಯಾಣವನ್ನು ಮಾಡಲಿಚ್ಛಿಸುವವನಿಗೆ ವಿಶ್ವದ ಹಿತವೆಂದರೇನೆಂಬದರ ಅರಿವು ಚನ್ನಾಗಿರಲಿಕ್ಕೆ ಬೇಕು. ಇಲ್ಲದಿದ್ದರೆ ಗಣಪತಿಯನ್ನು ಮಾಡಹೋಗಿ ಮಂಗನನ್ನು ಮಾಡಿದಂತಾಗುವದು. ಜಗತ್ತಿನ ಕಲ್ಯಾಣವನ್ನು ಮಾಡುವೆನೆಂದು ಕಂಕಣವನ್ನು ಕಟ್ಟಿ ಹೊರಟವನು ಜಗತ್ತಿನ ಕಲ್ಯಾಣವೆಂದರೇನೆಂಬುದನ್ನು ಅರಿಯಲೇ ಬೇಕು. ಆದ್ದರಿಂದ ಪ್ರತಿಯೊಬ್ಬ ಮಹಾತ್ಮನು ತತ್ವಜ್ಞಾನಿಯೇ ಇರುವನು. ಜಗತ್ತಿನ ಇತಿಹಾಸವು ಅವನಿಗೆ ಗೊತ್ತಿರಲೇ ಬೇಕೆಂದಲ್ಲ. ಯಾರು ಯಾವ ಕಲ್ಯಾಣವನ್ನು ಮಾಡಿ ಹೋಗಿರುವರೆಂಬದೂ ಅವನಿಗೆ ಗೊತ್ತಿರುವ ಕಾರಣವಿಲ್ಲ. ಸರ್ವ ಸಾಮಾನ್ಯವಾಗಿ ರಾಷ್ಟ್ರದ ಅಥವಾ ವಿಶ್ವದ ಸ್ವಭಾವವೂ ಸ್ವಧರ್ಮವೂ ಅವನಿಗೆ ಗೊತ್ತಿರಲೇ ಬೇಕಾಗುವದು. ವಿಶ್ವದ ಕಲ್ಯಾಣವೆಂದರೇನು? ಅದರೊಳಗಿರುವ ಸೃಷ್ಟಿಯ ಕಲ್ಯಾಣ. ಸೃಷ್ಟಿಯಲ್ಲಿಯೂ ಶ್ರೇಷ್ಠನಾದ ಮಾನವನನ್ನು ಪ್ರಾಧಾನ್ಯವಾಗಿ ಮುಂದಾಗಿಟ್ಟುಕೊಂಡು ಸಕಲರಲ್ಲಿಯೂ ಪ್ರೀತಿಯುಳ್ಳವನಿರುವದು ಮಹಾತ್ಮನ ಧ್ಯೇಯವಿರುವದರಿಂದ, ಈ ಜಗತ್ತಿನ ತತ್ವಜ್ಞಾನವು ಅವನಿಗೆ ಇರಲೇ ಬೇಕಾಗುವದು.

ಪರೋಪಕಾರದಲ್ಲಿಯೇ ತನ್ನ ಜೀವನವನ್ನು ಧಾರೆಯೆರೆಯುವದು ಮಹಾತ್ಮನ ಬಾಹ್ಯಲಕ್ಷಣವೇ ಆಗಿರುವದು. ಈ ಬಾಹ್ಯವೇಷವನ್ನು ದಾಟಿ ಅವನ ಅಂತರಂಗದೊಳಗೆ ನೋಡಿದರೆ ಅಲ್ಲಿಯೊಂದು 'ಹೊಸ ಪ್ರಪಂಚವೇ ಅಡಗಿರುವದೆಂದು ಕಂಡು ಬರುವದು. ಪರೋಪಕಾರವೆಂಬ ಕಲೆಯಲ್ಲಿ ಪೂರ್ಣತೆಯನ್ನು ಪಡೆಯಲಿಚ್ಛಿಸುವವನಿಗೆ ಅದರ ಮರ್ಮವೆಲ್ಲ ಗೊತ್ತಿರಬೇಕಾಗುವದು. ಇಡೀ ಮಾನವ ಜಾತಿಯು ನಾವನ್ನು ಒಂದಾದರೂ ಹೆಜ್ಜೆ ಮುಂದಕ್ಕೆ ನೂಕಬೇಕೆಂದು ಟೊಂಕ ಕಟ್ಟಿರುವಂಥ ಬಂಟನು ಹೊಳೆಯು ಆಳವೆಷ್ಟು? ಗಾಳಿಯು ಯಾವ ದಿಕ್ಕಿಗೆ ಬೀಸುತ್ತಿದೆ ? ಯಾವ ಪಟವನ್ನು ಇಳಿಬಿಟ್ಟರೆ ಯಾವ ದಿಕ್ಕಿಗೆ ನಾವು ಹೋಗುವದು ? ಇವೇ ಮೊದಲಾದ ಪ್ರಶ್ನೆಗಳನ್ನು ಬಿಡಿಸಿಕೊಂಡು ಗಟ್ಟಿಮುಟ್ಟಿಯಾಗಿಯೇ ಹೊಳೆಯಲ್ಲಿ ಇಳಿಯಬೇಕಾಗುವದು. ಈ ವಿಶ್ವವೆಲ್ಲಿಂದ ಬಂತು? ಈ ವಿಶ್ವದ ಸ್ವಭಾವವೇನು? ಸ್ವಧರ್ಮವೇನು? ಈ ವಿಶ್ವದೊಳಗಿನ ಸೃಷ್ಟಿಯ ಸ್ವಭಾವ ಸ್ವಧರ್ಮಗಳಾವವು? ಮಾನವನ ಗುರಿಯೇನು? ಸಾಧ್ಯವೇನು? ಸಾಧನವೇನು? ಮುಂತಾದ ಪ್ರಶ್ನೆಗಳ ತೊಡಕನ್ನು ಅವನು ಬಿಡಿಸಿ ಕಾರ್ಯಕ್ಕೆ ಕೈಹಚ್ಚಬೇಕಾಗುವದು. ಎಲ್ಲ ಮಹಾತ್ಮರ ಚರಿತ್ರೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಅವರೆಲ್ಲರೂ ಈ ಪ್ರಶ್ನೆಗೆ ತಕ್ಕ ಉತ್ತರಗಳನ್ನು ಕಲ್ಪಿಸಿ ಆ ಉತ್ತರಗಳ ತಿರುಳಿನ ತತ್ವಗಳನ್ನು ಮಾಡಿ ಅವುಗಳ ಪ್ರಚಾರದಿಂದ ವಿಶ್ವದ ಶ್ರೇಷ್ಠ ಸೃಷ್ಟಿಯಾದ ಮಾನವನ ಹಿತವನ್ನು ಮಾಡಿದ್ದಾರೆ. ಅನಂತ ಸೃಷ್ಟಿಯು ತನ್ನಿಂದ ತಾನೇ ನಡೆದಿರುವದಿಲ್ಲವೆಂದು ಸಾಮಾನ್ಯ ಜನರಿಗೂ ತಿಳಿಯುವದುಂಟು. ವಿಶ್ವವನ್ನು ನಡೆಯಿಸುವ ಅದ್ಭುತ ಶಕ್ತಿಯು ಯಾವದು?

ಈ ತತ್ವದ ಮೇಲೆ ಮನನ ನಿದಿಧ್ಯಾಸವನ್ನು ಮಾಡಿ. ಪರಮೇಶ್ವರನನ್ನು ಕಂಡುಕೊಂಡ ಮೇಲೆಯೇ ಮಹಾತ್ಮನು ಕಾರ್ಯ ಕ್ಷೇತ್ರದಲ್ಲಿ ಇಳಿಯುವನು. ಅದರಂತೆ ಪರಮೇಶ್ವರನ ಮೂರ್ತಿಯು ಅವನಿಗೆ ಕಾಣಿಸುವವರ ಪೂರ್ವದಲ್ಲಿಯೇ ಅವನ ಆತ್ಮದಲ್ಲಿ ಕೆಲವು ತತ್ವಗಳು—ವಿಶ್ವದ ಕಲ್ಯಾಣದ ತತ್ವಗಳು— ಒಡಮೂಡಿರುತ್ತವೆ. ಪರಮಾತ್ಮನೇ ಈ ವಿಶ್ವದಲ್ಲಿ ಎಲ್ಲೆಲ್ಲಿಯೂ, ನಮ್ಮಲ್ಲಿಯೂ, ನೆಲಿಸಿರುವನೆಂದು ಅವನಿಗೆ ಸಾಕ್ಷಾತ್ಕಾರವಾಗುತ್ತ ಹೋದ ಹಾಗೆ ಈ ತತ್ವಗಳಾದರೂ ದೃಢವಾಗುತ್ತ ನಡೆಯುತ್ತವೆ. "सर्वभूतेषु चात्मानं सर्वभूतानि चात्मानि" ತನ್ನ ಆತ್ಮವೇ ಎಲ್ಲೆಲ್ಲಿಯೂ, ಇರುವದು, ತಾನಾದರೂ, ಒಂದೇ ವಿಶ್ವವೆಂದರೂ, ಒಂದೇ. ತನ್ನ ಹಿತವೆಂದರೆ ವಿಶ್ವದ ಹಿತವು. ತನ್ನ ಪ್ರತಿಬಿಂಬವೇ ಎಲ್ಲೆಲ್ಲಿಯೂ, ಮೂಡಿದೆಯೆಂದು ಅವನಿಗೆ ತಿಳಿಯಬೇಕಾದರೆ ಅವನಲ್ಲಿ ಸಹಾನುಭೂತಿಯೆಂಬ ಗುಣವು ಮೊಳೆದೋರುವದು. ಸಹಾನುಭೂತಿಯೆಂದರೆ, ಉತ್ಕಟವಾದ ಪ್ರೇಮ. ತನ್ನಲ್ಲಿ ಸಹಜವಾಗಿ ಬಂದಿರುವಂಥ ಅಹಂಕಾರವು ಅಡಗಿಹೋಗಿ ಈ ಜಗತ್ತೆಲ್ಲ ನನ್ನದು ( ಮಮ ) ಎಂಬ ಭಾವನೆಯಿಂದ ಜಗತ್ತಿನಲ್ಲಿರುವಂಥ ಅಣು ಕಣಗಳಲ್ಲಿಯೂ ಅವನು ತನ್ನ (ಪರಮಾತ್ಮನ) ಸ್ವರೂಪವನ್ನೇ ಕಂಡು ಪ್ರೀತಿಸಹತ್ತುತ್ತಾನೆ. ಅವನಿಗೆ ಅಲ್ಲಿಂದ ತನ್ನವರು ಪರರು ಹಗೆಗಳು ಗೆಳೆಯರು, ಇವರು ಬ್ರಾಹ್ಮಣರು; ಇವರು ಶೂದ್ರರು; ಎಂಬಿವೇ ಮೊದಲಾದ ದ್ವೈತ ಭಾವನೆಗಳು ನಷ್ಟವಾಗಿ "ನೋಡಿದಲ್ಲೆಲ್ಲ ಪರಮಾತ್ಮನೇ" ईशावास्यमिदं सर्वं यत्किंच जगत्यां जगत् " ತತ್ವವು ಮೈಗೂಡಿ ಹೋಗುತ್ತದೆ. ಈ ಪ್ರಕಾರದ ಅನುಭವವನ್ನು ಪಡೆದ, ಸಾಕ್ಷಾತ್ಕಾರವನ್ನು ಪ್ರತ್ಯಕ್ಷವಾಗಿ ನೋಡಿದ ಋಷಿಯು ಈಶೋಪನಿಷತ್ತಿನಲ್ಲಿ " यास्मिन् सर्वाणि भुतानि आत्मेवाभूद्विजानतः। तत्रको मोह : कः शोकः एकत्व मनुपश्यतः' ಎಂದು ಹಾಡಿದ್ದಾನೆ. ಅಲ್ಲಿಂದಲ್ಲವೇ! ಸಮತೆಯೆಂದರೇನೆಂಬದು ತಿಳಿಯುವದು! ईक्षते योगयुक्तात्मा सर्वत्र समदर्शनः"। यो मां पश्यति सर्वत्र सर्वंच मयि पश्यति। "तस्याहं न प्रणश्यामि सचमेन प्रणश्याति" ಎಂದು ಭಗವದ್ಗೀತೆಯಲ್ಲಿ ಭಗವಂತನಾದರೂ ಹಾಡಿದ್ದಾನೆ. ಈ ಅನುಭವವು ಬಂದವನಿಗೆ ಈ ಆತ್ಮವು ಅಮರವೆಂಬದೂ ತಿಳಿಯುವದು. ಆದ್ದರಿಂದಲೇ ಅವನಿಗೆ ಸುಖದುಃಖಗಳು ಸಮವಾಗುವವು. ತನ್ನ ಸರ್ವಭೂತಹ ತತ್ವದ ಗುರಿಯು ಮುಂದೆ ಅವನಿಗೆ ಮರಣವೂ ಜೇಬಿನೊಳಗಿನದೊಂದು ಪದಾರ್ಥವಾಗಿ ಪರಿಣಮಿಸುತ್ತದೆ. ಇಂಥ ಸಾಧುಗಳಿಗೆ ಸ್ಥಿತಪ್ರಜ್ಞರೆಂತಲೂ ಮಹಾತ್ಮರೆಂತರೂ ಗೀತೆಯಲ್ಲಿ ಸಂಜ್ಞೆಯಿದೆ.

— ಮುಂದೆಸಾಗುವದು.

---

# ನಮ್ಮ ವಾಚಕರೊಂದಿಗೊಂದು ಆಪ್ತಾಲೋಚನೆ.

ಈ ಸಂಚಿಕೆಯು ವಾಚಕರ ಕೈಸೇರಿತೆಂದರೆ, ಅಯ್ದು ಸಂಚಿಕೆಗಳು ಅವರಿಗೆ ತಲುಪಿದಂತಾಗಿ, ಸುಮಾರು ಅರ್ಧವರ್ಷದ ಸೇವೆಯು ನಮ್ಮಿಂದ ಆದಂತಾಗುವದು. ಈ ಸೇವೆಯಲ್ಲಿ, ವಾಚಕರಿಗೆ ಸೇರುವಭಾಗವು ಸಾಕಷ್ಟಿತ್ತೆಂದು ವಾಚಕರೂ ಒಪ್ಪಬಹುದು. ವಿಶೇಷತಃ ನಮ್ಮ ಚಿಕ್ಕ ಕತೆಯ ಭಾಗವು ಅಂತಹದು. ಮೂರನೆ ನಾಲ್ಕನೆ ಸಂಚಿಕೆಯೊಳಗಿನ ಕಥೆಗಳನ್ನಷ್ಟೆ 'ಸ್ವಧರ್ಮ ಕಥಾಮಾಲೆ' ಎಂಬ ಹೆಸರಿನಿಂದ ಬೇರೆ ಮುದ್ರಿಸಿದ್ದಾಯಿತು. 'ಮದುವೆಯಲ್ಲ ಮಾರಿಗೆ ಬಲಿ' ಈ ಕಥೆಯನ್ನು ಒಂದೇ ಆಣೆಗೆ ಮಾರಿದ್ದರಿಂದಲೂ, ಜನರಿಗೂ ಅದು ರುಚಿಸಿದ್ದರಿಂದಲೂ, ಈಗಾಗಲೇ ಮೊದಲ ಆವೃತ್ತಿಯ ಸುಮಾರು ಸಾವಿರ ಪ್ರತಿಗಳು ತೀರಿದವು. 'ಸಂಸಾರವೆಂದರೆ ಸೂಜಿಗಲ್ಲು' ಎಂಬ ಕಥೆಯು ಪುಸ್ತಕದ ಬೆಲೆಯನ್ನು ಒಂದುವರೆ ಆಣೆಯನ್ನಿಟ್ಟಿದ್ದರೂ ನಾಲ್ಕುನೂರು ಅಯ್ದುನೂರು ಪ್ರತಿಗಳು ಈಗ ತೀರಿರುವವು. ಅಂತೂ ಏನು! 'ಸ್ವಧರ್ಮ'ದ ಕೆಲವು ಭಾಗವು ನಿಃಸಂಶಯವಾಗಿ ಜನಪ್ರಿಯವಾಗಿದೆ. ಇನ್ನು ನಮ್ಮ ಸೇವೆಯಲ್ಲಿ ಕೆಲಭಾಗವು ಇನ್ನೂ ಜನಪ್ರಿಯವಾಗಿಲ್ಲೆಂಬದನ್ನು ನಾವೂ ಒಪ್ಪಿಕೊಳ್ಳಬೇಕಾಗಿದೆ. ಸವಿಯೊಡನೆ ಕವಿತೆಯನ್ನು ಪ್ರಕಟಿಸಿದರೂ, ಒಮ್ಮೊಮ್ಮೆ ಅವೆರಡೂ ತಿಳಿಯುವದಿಲ್ಲವೆಂದೂ, ಒಮ್ಮೊಮ್ಮೆ ಕವಿತೆಯೇ ತಿಳಿಯುವದು; ಸವಿಯೇ ತಿಳಿಯುವದಿಲ್ಲವೆಂದೂ, ಜನರಾಡುವದನ್ನು ನಾವು ಕೇಳಿದ್ದೇವೆ. ಬೇರೆ ಬೇರೆ ಊರುಗಳಲ್ಲಿದ್ದ ನಮ್ಮ ಹಲಕೆಲವು ಹಿತಚಿಂತಕರು ನಮಗೆ ಈ ಮಾತನ್ನು ತಿಳಿಸಿದ್ದಾರೆ. ಆದರೆ ಇಂಥ ಕವಿತೆಗಳೂ ವಚನಪುಂಜಗಳೂ ಶಾಶ್ವತವಾಗಿ ತಿಳಿಯಲಾರದ ವಿಷಯಗಳೇನೂ ಅಲ್ಲ. ವಾಚಕರು ತಿಳಿದುಕೊಳ್ಳಲು ಸುಲಭವಾಗುವಂತೆ ನಾವು ಹೇಗೆ ವಿಷಯ ವಿವೇಚನೆಯನ್ನು ಮಾಡಲು ಹವಣಿಸುವೆವೋ ಹಾಗೆಯೆ ವಾಚಕರಾದರೂ, ರೂಪಾಯಿಗಳನ್ನು ಕೊಟ್ಟು, ಈ ಮಾಸಪತ್ರಿಕೆಯನ್ನು ಕೊಂಡ ತಪ್ಪಿಗಾಗಿ ಅನ್ನಿರಿ, ಅಥವಾ ಬರೆದವರು ಪ್ರಯತ್ನಪಟ್ಟು ಬರೆದಿದ್ದಾರೆ, ನಾವಾದರೂ ಸ್ವಲ್ಪ ಪ್ರಯತ್ನಪಟ್ಟು ಏಕೆ ತಿಳಿದುಕೊಳ್ಳಲು ಯತ್ನಿಸಬಾರದು ? ಎಂದೆನ್ನಿರಿ; ನಮ್ಮಲ್ಲಿ ಬರುವ ಲೇಖನಗಳನ್ನೆಲ್ಲ ಓದಬೇಕು.

ಇನ್ನು ನಮ್ಮ ದುಡ್ಡಿನ ಲೆಕ್ಕ. ನಾವು ೫೦೦ ಪ್ರತಿಗಳನ್ನು ಮುದ್ರಿಸುತ್ತೇವೆ. ವರ್ಗಣೀದಾರರ ಸಂಖ್ಯೆ ೨೦೧ ಮಾತ್ರ. ಬಹುತರವಾಗಿ ಇವರೆಲ್ಲರೂ ವಿಶೇಷ ಓದುವ ಅಭಿಲಾಷೆಯುಳ್ಳವರೇ. ನಮ್ಮ ವಾರ್ಷಿಕ ವೆಚ್ಚವು, ೯೬೦ ರೂಪಾಯಿ—ಅಂದರೆ—ತಿಂಗಳಿಗೆ ೮೦ ರೂಪಾಯಿ ವೆಚ್ಚಬರುವದು. ೬೫ ರೂಪಾಯಿ ಮುದ್ರಣದವೆಚ್ಚ, ೧೫ ರೂಪಾಯಿ ಮೇಲ್ವೆಚ್ಚ. ನಮ್ಮ ವ್ಹಿ. ಪೀ. ಸ್ವೀಕರಿಸದ್ದರಿಂದ ಬಂದ ೫೦—೬೦ ರೂಪಾಯಿ ನಷ್ಟವನ್ನು ಕಥೆಯ ಮಾರಾಟದ ಲಾಭದಿಂದ ತುಂಬಿಕೊಳ್ಳಬೇಕಾಗಿದೆ. ಹೀಗಿದೆ ನಮ್ಮ ಸ್ಥಿತಿ. ನಮಗಿನ್ನು ಬೇಕು ೧೨೦—೧೫೦ ಚಂದಾದಾರರು. ನಮ್ಮ ಪ್ರತಿಯೊಬ್ಬ ಚಂದಾದಾರರು. ಇನ್ನೊಬ್ಬರನ್ನು ಹೆಚ್ಚಾಗಿ ನಮಗೆ ದೊರಕಿಸಿ

ಕೊಟ್ಟರೆ ಈ ಕೆಲಸವಾಗುವಂತಿದೆ. ಹಾಗಾಗದಿದ್ದರೆ ಮಾತ್ರ ಸುಮಾರು ೩೫೦ ರೂಪಾಯಿ ನಷ್ಟ ಸಹಿಸಿ, ಈ ಕೆಲಸವನ್ನು ನಡೆಯಿಸಬೇಕಾಗುವದು. ಮತ್ತು ಹಾಗೆ ಮಾಡಲು ಗೆಳೆಯರಗುಂಪು ಸಿದ್ಧವಿದೆ. ಹೀಗೆಂದ ಮಾತ್ರಕ್ಕೆ ನಮಗೆ ದುಡ್ಡಿನ ಬಲವಿದೆಯೆಂದಲ್ಲ, ಆದರೆ ಸಾಲವನ್ನಾದರೂ ಮಾಡಿ ಕೈಕೊಂಡ ಕೆಲಸದ ಬಗ್ಗೆ ಜನರಲ್ಲಿಯ ವಿಶ್ವಾಸವನ್ನು ಕಳೆದುಕೊಳ್ಳಬಾರದೆಂದು. ಇಂಥ ಕಾಲಕ್ಕೆ ನಮ್ಮ ವಾಚಕರು ನಮಗೆ ಯಾವ ಆಪ್ತಾಲೋಚನೆಯನ್ನು ಹೇಳುವರೋ ಎಂದು ನಿರೀಕ್ಷಿಸುತ್ತಿದ್ದೇವೆ.

ಇತಿ ತಮ್ಮ,

ದ. ರಾ. ಬೇಂದ್ರೆ.

---

## ನಾವು ಭಾರತೀಯರು.

ಕವಿ:—ಶ್ರೀ ಕೃಷ್ಣಕಿಂಕರ.

ಭೈರವೀರಾಗ, ರೂಪಕತಾಳ.

ಭಾರತೀಯರು । ನಾವು । ಭಾರತೀಯರು ॥ ಪಲ್ಲ ॥

ಮಲೆತುನಿಂತ ವೈರಿಗಳನು ।
ಗೆಲಿದು ನನ್ನಿ-ನಲುಮೆಯಲಿಯೆ ॥
ಚೆಲುವಿನಿಂದೆ ಇಳೆಯನಾಳಿ ।
ಬಲುಹುಗಾರರೆಂದು ನಲಿದ । ಭಾರತೀಯರು ॥ ೧ ॥

ಭೋಗಗಳಿಗೆ ನೀರನೀಡಿ ।
ತ್ಯಾಗದಲಿಯೆ ಭೋಗನೋಡಿ ॥
ಯೋಗಿಶ್ವರನೊಡನೆ ಬೆರೆಯೆ ।
ಯೋಗಪಥವ ಕಂಡುಹಿಡಿದ ॥ ಭಾರತೀಯರು ॥ ೨ ॥

ಜಗದೊಡೆಯನ ನೆಲೆಯರಿಯದೆ ॥
ಜಗದ ಜನರ ಜಂಗುಳಿಗಳು ॥
ವಿಗಡವಾಗಿ ತೊಳಲುತಿರಲು ।
ಬಗೆಯ ಮುಗಿಲೊಳಗೆಯೆ ಕಂಡ ॥ ಭಾರತೀಯರು ॥ ೩ ॥

ಭಾವನೆಗಳ ಕೊಳಲನೂದಿ ।
ಭಾವರಾಗಗಳನೆ ಹಾಡಿ ॥
ದೇವರಾಯನೊಡನೆ ಆಡಿ ।
ಸಾವನೋವ ತುಳಿದುನಿಂತ ॥ ಭಾರತೀಯರು ॥ ೪ ॥

( ಈ ವರ್ಷದ ಶ್ರೀ ಗಣೇಶಮೇಳಕ್ಕಾಗಿ ಬರೆದ ಪದ್ಯ. )

---

ಓಂ ಸತ್

# ಸ್ವಧರ್ಮ

॥ ಜಯಂ ಭದ್ರಂ ಶುಭಂ ಮಂಗಲಮ್ ॥

ವರ್ಷ - ೩ | ಶಕೆ ೧೮೪೮ ಅಕ್ಷಯ ಸಂ॥-ಆಶ್ವೀಜ. | ತಿಂ. - ೭

## ಸಲಿಗೆಯ ಸಲ್ಲಾಪ.

ಎಲ್ಲೆಲ್ಲಿರುವಿಯೊ ಅಲ್ಲಲ್ಲೆಲ್ಲಾ ನಿನ್ನನು ಕಂಡೇನು !
ಇಲ್ಲಿಯೆ ಬಿಟ್ಟನ್ನೆಲ್ಲಿಯೊ ಹೋದರೆ ಅಲ್ಲೇನುಂಡೇನು ॥ ೧ ॥
ವನದಲ್ಲಿದ್ದವ ಮನೆಯಲ್ಲಿಲ್ಲವೆ ? ವನಚರನೇ ನೀನು ॥
ಮನೆಯಲ್ಲಿದ್ದರೆ ಮತ್ತೇತಕೆ ತಡ ಬೈಲಿಗೆ ಬಾ ನೀನು ॥ ೨ ॥
ಸಾಧನೆಯಿಂದಲೆ ಸಾಧಿಸಿಕೊಳ್ಳಲು ಬೇತಾಳನೆ ನೀನು ॥
ಹಾದರದವನಿಗೆ ಹುಟ್ಟದೆನೇನೋ? ನಿನ್ನವನೇ ನಾನು ॥ ೩ ॥
ನೀ ಹುಟ್ಟಿಸಿದರೆ ಹುಟ್ಟದೆನಲ್ಲದೆ ನನಗಿಲ್ಲಿತ್ತೇನು ॥
ನೀ ಹುಟ್ಟಿಸಿದವ ಹೊರಳಿ ನೋಡದಿರೆ ಗತಿಯೆನಗಿನ್ನೇನು ॥ ೪ ॥
ಇದ್ದದ್ದಾದರೆ ಇದ್ದದ್ದಾಗಲಿ ಸುಮ್ಮನೆ ಇನ್ನೇನು ।
ಇದ್ದರೆ ಎತ್ತಿಕೊ ಇರದಿದ್ದರೆ ಬಿಡು ಯಾತರ ಹಂಗೇನು ॥ ೫ ॥
ಇದ್ದರೆ ಬಂದೀ ಇರದಿರೆ ಬಿಟ್ಟೀ ಇದರೊಳಗುಂಟೇನು ।
ಇಷ್ಟಲ್ಲೆಲ್ಲಾ ಕಾಣಿಸಿಕೊಂಡರೆ ಹೋಗುವ ಗಂಟೇನು ॥ ೬ ॥
ಇರುವಿಯೊ ಇಲ್ಲೋ ನನಗೇನೆನಿಸದು ಇದ್ದರೆ ಹೊಣೆಯೇನು ।
ಇರುವಿಯೆಂದು ಸುಮ್ಮನೆಯೆನ್ನಲು ನಿಮ್ಮಪ್ಪನ ರಿಣವೇನು ॥ ೭ ॥
ನೋಡಿನೋಡಿ ಬೇಸರಿಸಿ ಜಗದ ಮನದಾಸೆಯೆ ಅಡಗುವದು ।
ಖೋಡಿಗುಣವ ನಿನಗಾರು ಕಲಿಸಿದರೊ!-ಕಾಣದೆ ಅಡಗುವದು ॥ ೮ ॥
ಧಾರ್ಮಿಕರೆಂಬುವ ಧರ್ಮಗೇಡಿಗಳು ಜಗದಲಿ ತುಂಬಿದರು ।
ಧರ್ಮದ ತಂದೆಯೆ ಇಂಥವನಾದರೆ ಯಾತಕೆ ನಂಬುವರು ॥ ೯ ॥
"ನಂಬದೆ ನೆಚ್ಚದೆ ಕರೆದರೆ ಬರುವನೆ" ಎಂಬರು ನಿಮ್ಮವರು ।
"ನಂಬುವುದೆಂತೋ ಆಡದೆ ನೋಡದೆ" ಎಂಬರು ನಮ್ಮವರು ॥ ೧೦ ॥

ಮಾ-ಮಾ-ಕರ್ಮವ ಮಾಡಿದ ಮನುಜಗೆ ಕಾಣೆನೆನುವಿಯೇನು ।
ನೀ ಮಾಡಿಸಿದರೆ ಮಾಡಿದೆನಲ್ಲದೆ ನನಗಿಲ್ಲಿತ್ತೇನು ?? ॥ ೧೧ ॥
ಕಂಬವನೊದ್ದರೆ ಕಿಡಿಕಿಡಿ ಬೆಂಕಿಯು ಕಾರುತೆ ಬಂದವನು ।
ನಂಬುಗೆಗೆಟ್ಟಿಂದೇಳಿಸುತಿದ್ದರು ಮಿಸುಕದನೆಂಥವನು ? ॥ ೧೨ ॥
ಹಿಂದಿನ ಕತೆಗಳು ಹೊಗಳುವವಲ್ಲೋ ನಿನ್ನಯ ಕೀರ್ತಿಯನು ।
ಇಂದಿನ ಜಗದಲಿ ಮಾಡಿ ತೋರಿಸೋ ಆ ಶತಕೀರ್ತಿಯನು ॥ ೧೩ ॥
ಬಿಟ್ಟು ಬಿಟ್ಟೆನೀ ಹೇಸಿಜನ್ಮದಾ ಬರಿಯಾಸೆಯ ನಾನು ।
ಸುಟ್ಟುಹೋಗಲೀ ಸಂಶಯದಾಗರ ಬದುಕಿನೊಳಿನ್ನೇನು ? ॥ ೧೪ ॥
ಸಾವಿಗೆ ಹೆದರುವ ಹಳೆಹೇಡಿಯೆ? ನಾ ಬೇಯುವೆ ನಿನಗಾಗಿ ।
ಗಾವಿಲರೆಲ್ಲರು ದೇವಿಲಿಯಾಗರೆ ಭಕ್ತನ 'ಬಲಿ' ಗಾಗಿ ॥ ೧೫ ॥
ಗುಣವಂತರ ಗೋಳಾಟವೆ ಗಾವಿಲರಿಗೆ ಸಾಕಾಗಿಹುದು ।
ಒಣಮಾತೇನಿದು–ನಾ ಸತ್ತರೆ ಬಲು ನಗೆಗೇಡಾಗುವದು ॥ ೧೬ ॥
ನಿನ್ನಯ ಬೆಲೆಯನು ನೀನುಳಿಸಯ್ಯಾ ನಾಹೇಳುವದೇನು ? ।
ಚನ್ನಿಗರಾಯಾ ! ಕಿವಿಮುಚ್ಚದಿರೋ !! ಬೇಡುವೆನಿನ್ನೇನು ?? ! ॥ ೧೭ ॥

—ಚೆನ್ನ

ಸವಿ :— ಪ್ರೀತಿಯಿದ್ದಲ್ಲಿ ಸಲಿಗೆಗೆ ಆಸ್ಪದವಿದೆ. ಭಕ್ತಿಯೆಂದರೆ ಅದೊಂದು ದೊಡ್ಡ ಹೊಣೆಗಾರಿಕೆಯ ಹೋರಿ–ಹೊರಲಾರದ ಹೊರೆಯೆಂದು ಕೆಲವರನ್ನುವರು. ಅದು ಹಾಗೇನಿಲ್ಲ. ಭಕ್ತಿಯೆಂದರೆ ದೇವರ ವಿಷಯವಾಗಿ ಸ್ನೇಹ. ಆದುದರಿಂದ ಆನಂದದ ಆಟ. ತಿಳಿವಳಿಕೆಯುಳ್ಳ ಕುಟುಂಬದಲ್ಲಿ ಹೆಂಡತಿಗೆ ಗಂಡನಮೇಲೆ ಸಥಿಯಿದ್ದಷ್ಟು ಸಲಿಗೆಯಿದ್ದಷ್ಟು–ಅಧಿಕಾರವಿದ್ದಷ್ಟು ಭಕ್ತನಿಗೂ ದೇವರ ಮೇಲೆ ಇದೆ. ಭಗವಂತನೇ ಗೀತೆಯಲ್ಲಿ ಶ್ರೀವಚನವನ್ನುಸುರಿದ್ದಾನೆ.

ಭಕ್ತನೆಂದರೆ ಆಶ್ರಿತ. ಸಂಸಾರದ ಸಾಗರವು ಸುತ್ತಲು ಭೋರ್ಗರೆಯುತ್ತಿರುವಾಗಲೂ, ದೇವದೇವನೆಂಬ ಸನಾತನ ಶಿಲೆಯಮೇಲೆ ಊರಿ ಕುಳಿತವ. ಅಂದ ಮೇಲಂತೂ ಆತನಿಗೆ ತನ್ನ ಆಶ್ರಯದ ಅಸ್ತಿತ್ವದ ವಿಷಯವಾಗಿ ಪ್ರತಿನಿಮಿಷವೂ ಪ್ರತೀತಿ ಬೇಕು. ಎಂದರೆ, ಅನುಭವ ಬೇಕು. ಅನುಮಾನವು ನಡೆಯದು.

ಈ ಅನುಭೂತಿಗಾಗಿ ಕಾತರನಾದ ಭಕ್ತನು ಆ ಸಥಿಯಿಂದ–ಸಲಿಗೆಯಿಂದ ಒಡೆಯನನ್ನು ಮೂದಲಿಸುತ್ತಿದಾನೆ. ಅದುದರಿಂದ ಈ ಕವಿತೆಯಲ್ಲಿ ಹಠವಿದೆ-ಕ್ರೋಧವಿದೆ- ಆಹ್ವಾನವಿದೆ- ನಿರ್ಭರ್ತ್ಸನವಿದೆ-ವಿಡಂಬನವಿದೆ–ದೈನ್ಯವಿದೆ–ಆರ್ದ್ರ ಆರ್ತತೆಯಿದೆ. ( ೧ರಿಂದ ೫ರ ವರೆಗೂ ಹಾಡಿ ನೋಡಿರಿ. )

ದೈವತದ ಪ್ರತ್ಯಯಕ್ಕಾಗಿ ಬಿಟ್ಟುಕೊಂಡವನಿಗೆ ಆತನ ಶ್ರದ್ಧಾಮಾರ್ಗದಲ್ಲಿ ಒಮ್ಮೆಲ್ಲೊಮ್ಮೆ ಘಟ್ಟಗೆ ಹಚ್ಚುವ ಹೊತ್ತು ಬಂದೇ ತೀರುವದು. 'ನಂಬಬೇಕು, ನೆಚ್ಚ

ಬೇಕು'. ಹೌದು. 'ನಂಬಿದವನಿಗೇ ಇಂಬು ದೊರೆಯಿತು.' ಸರಿ. ಆದರೆ ಇಂಬು ತೋರದೆ ನಂಬುವದಾದರೂ ಹೇಗೆ ? ಸಂಪೂರ್ಣ–ಸಾಕ್ಷಾತ್ಕಾರವೇ–ಸಂದೇಹವಿಧ್ವಂಸಿಯಾದ ದರ್ಶನವೇ ಅಲ್ಲಿ ಹಾದಿ.

" ನಂಬದೆ ನೆಚ್ಚದೆ ಕರೆದರೆ ಬರುವನೆ " ಎಂಬರು ನಿಮ್ಮವರು ।
" ನಂಬುವುದೆಂತೋ ಆಡದೆ ನೋಡದೆ " ಎಂಬರು ನಮ್ಮವರು ॥ ೧೦ ॥

ಸರ್ವವ್ಯಾಪಿತ್ವದ ಬಿರುದು ನಿಜವಾದುದೇ ಆದರೆ ದೇವರು ಬರಲೇ ಬೇಕು. ಕಾಣುವ ಕಾಣಿಸಿಕೊಳ್ಳುವ ಹೊಣೆ ಆತನ ಮೇಲೆ. 'ಇದ್ದರೆ ಬಂದೀ ಇರದಿರೆ ಬಿಟ್ಟೀ!'

' ಮಂತ್ರ ಮಾಟಮಾಡಿ ಸಾಧಿಸಿಕೊಳ್ಳಲಿಕ್ಕೆ ನೀನೇನು ಮಂಕುದೇವತೆಯಿಲ್ಲ. ವಾಚಾಮಗೋಚರನೆಂದು ಹೊಗಳಿಸಿಕೊಂಡ ಪುರುಷೋತ್ತಮ ನೀನು. ನಿನ್ನ ಕಾಣ್ಕೆಗೆ ಕ್ಲೃಪ್ತಸಾಧನೆಗಳ ಅಗತ್ಯವಿಲ್ಲ. ಕ್ಲೃಪ್ತ-ಕಲ್ಪಿತ-ಸಂಕಲ್ಪಜನ್ಯ ಸಾಧನೆಗಳನ್ನು ಬಿಟ್ಟಾಗಲೇ ನಿನ್ನ ನಿಜರೂಪಿನ ಅರಿವು ' ॥ ೩ ॥

—ಸೋಮೇಶ ಶರಣ.

---

ಓಂ.

# ಉಪನಿಷತ್ತುಗಳು.

ಉಪನಿಷತ್ತುಗಳ ಅಧ್ಯಯನದ ಕತೆಯನ್ನು ಅಕ್ಷಿಷ್ಟೆಂದು ಹೇಳುವುದು ಅಸಾಧ್ಯವು. ಇವುಗಳ ಅಧ್ಯಯನ ಅಧ್ಯಾಪನದಿಂದಲೇ ವ್ಯಕ್ತಿಯ ಹಾಗೂ ರಾಷ್ಟ್ರದ ಕಲ್ಯಾಣವಾಗತಕ್ಕದ್ದಿದೆ. ಮಾನವಕುಟುಂಬದ ಉದ್ಧಾರವಾಗುವದಿದೆ. ಇಂದಿಗೆ ಸುಮಾರು ೨೪೦೦ ವರ್ಷಗಳ ಹಿಂದೆ ಭಗವದ್ಗೀತೆಯ ಕರ್ತೃವು ಆಗ್ಗೆ ಆದಂಥ ಎಲ್ಲ ಉಪನಿಷತ್ತುಗಳ ಸಮನ್ವಯ ಮಾಡಿ, ಸಂಯೋಜಿಸಿ, ಸಾರತೆಗೆದು ಅಮೃತಮಯವಾದ ಆ ಗ್ರಂಥವನ್ನು ರಚಿಸಿದನು. ಇದರ ಉದ್ದೇಶವು ಏನಿತ್ತು ? ಜನರ ತಪ್ಪು ಧಾರ್ಮಿಕ ಕಲ್ಪನೆಗಳನ್ನು ಹೋಗಲಾಡಿಸಿ ನಿಜಸ್ವರೂಪದ ಜ್ಞಾನಮಾಡಿಕೊಡಬೇಕು, ಕರ್ಮ, ಅಕರ್ಮ, ವಿಕರ್ಮಗಳ ತಿಕ್ಕಾಟದಲ್ಲಿ ಸಿಕ್ಕು ಅವರು ಒದ್ದಾಡಬಾರದು. ನಿಜವನ್ನು ಅರಿತು, ಅನುಭವಿಸಿ, ಅನುಭಾವಿಗಳಾಗಿ ನಡೆಯಬೇಕು, ನಿಜವಾದ ಅನುಭವ ಮಾರ್ಗವನ್ನು ಅವರಿಗೆ ತೋರಬೇಕೆಂದೇ ರಚಿಸಿದ್ದಲ್ಲವೇ ? ಈ ಉಪನಿಷತ್ತೆಂಬ ಆಕಳ ಹಾಲೆಂದು ಹೇಳಲ್ಪಡುವ ಈ ಭಗವದ್ಗೀತೆಯು ಲೋಕಕ್ಕೆಲ್ಲ ಇನ್ನೂ ಶತಕಾನುಶತಕ ಅನುಭವದ ಪುಷ್ಟಿತುಷ್ಟಿಗಳನ್ನು ಕೊಟ್ಟು ಶಾಂತಿಯನ್ನುಂಟು ಮಾಡಲು ಸಮರ್ಥವಾಗಿದೆ. ಭಗವದ್ಗೀತೆಯಾದ ೧೨೦೦ ವರ್ಷಗಳ

ಉಪನಿಷತ್ತುಗಳ ಅಧ್ಯಯನದ ಮಹತ್ವವು

ಬಳಿಕ ವೇದಾಂತಮಂದಿರದ ಭವ್ಯ ಕಟ್ಟಡದ ಕೆಲಸಕ್ಕೆ ಅಣಿಯಾದ 'ಓಜರು' ತಲೆದೋರಿದರು. ಅದು ಮತ್ತೊಂದು ಧರ್ಮಕ್ರಾಂತಿಯ ಕಾಲವು. ಈ ಕಾಲವು ಕೇವಲ ಅನುಭಾವಕ್ಕಿಂತ ಹೆಚ್ಚಾಗಿ ಬುದ್ಧಿ ಪ್ರಧಾನವಾಗಿತ್ತು. ಇದೀಗ ಮತ್ತೆ ೧೨೦೦ ವರ್ಷಗಳಾದ ಬಳಿಕ ಇಪ್ಪತ್ತನೆಯ ಶತಮಾನದಲ್ಲಿ ಪ್ರಾಪ್ತವಾದ ಧರ್ಮೋಜ್ಜೀವನದ ಮೂರನೆಯ ಮಹಾ ಪ್ರಯತ್ನಕಾಲವು. ಇದು ಹಿಂದಿನ ಎರಡೂ ಕ್ರಾಂತಿಕಾಲಗಳಿಗಿಂತ ಬಹಳ ಮಹತ್ವದ್ದಾಗಿದೆ; ಅದರಂತೆ ಬಹಳ ತೊಡಕಿನದೂ ಆಗಿದೆ. ಪಶ್ಚಿಮದ ನಾಗರಿಕತೆ, ಸಂಸ್ಕೃತಿಗಳು ಬಂದು ನಮ್ಮನ್ನು ಸುತ್ತಿ ಮುತ್ತಿವೆ. ಆಧುನಿಕ ಭೌತಿಕ ಶಾಸ್ತ್ರಗಳ ಅನೇಕ ವಿಧ ಶೋಧಗಳು ಪಶ್ಚಿಮದ ವಿಚಾರ ಪದ್ಧತಿಯನ್ನೇ ಪುಷ್ಟೀಕರಿಸುವಂತೆ ತೋರುತ್ತವೆ. ಜಗತ್ತಿನೊಳಗಿನ ಧರ್ಮ ಹಾಗೂ ತತ್ವಜ್ಞಾನಗಳನ್ನೆಲ್ಲ ಒರೆಗೆ ಹಚ್ಚಿ ಒಂದಿಸಿ, ನಡಿಸಿದ ಅಭ್ಯಾಸದಿಂದ ಪಶ್ಚಿಮದ ವಿಚಾರಕ್ಕೆ ಕಳೆ ಬಂದಿದೆ. ಪ್ರಾಚೀನ ಆರ್ಯರ ಅಧ್ಯಾತ್ಮ ಜ್ಞಾನದ ಹಕ್ಕುದಾರರೆಂದು ಹೇಳುವ ನಾವು, ಇಂದಿನ ಹಿಂದುಜನರು ಬಹಳ ಗಡಚಾದ ಈ ಪ್ರಶ್ನೆಯನ್ನು ಬಿಡಿಸತಕ್ಕದ್ದಿದೆ. ಬುದ್ಧಿಗೂ ಅಧ್ಯಾತ್ಮಕ್ಕೂ ವಿರೋಧವುಂಟೆಂದು ಎಷ್ಟೋ ಪಂಡಿತರ ತಿಳುವಳಿಕೆಯಾಗಿದೆ. ಬುದ್ಧಿ ವಿಕಾಸಮಾಡಿಕೊಳ್ಳದೆ ಕುರುಡು ನಂಬಿಗೆಯಿಂದ ಹೋದರೇ ಅನುಭಾವಧೋರುವುದು, ಅಧ್ಯಾತ್ಮಜ್ಞಾನವಾಗುವುದು ಎಂದೂ, ಬೌದ್ಧಿಕ ವಿಕಾಸದಿಂದ ಮನುಷ್ಯನು ನಾಸ್ತಿಕ ಮಾರ್ಗದ ಕಡೆಗೆ ಒಲೆಯುವನೆಂದೂ ಇರುವ ತಪ್ಪುತಿಳುವಳಿಕೆಗಳನ್ನು ಇಲ್ಲದಂತೆ ಮಾಡುವ ಕಡುತರ ಕಠಿಣವಾದ ಕಾರ್ಯವನ್ನು ಮಾಡಿತೋರಿಸುವುದು ಭಾರತೀಯರ ತಲೆಯ ಮೇಲಿನ ಇಂದಿನ ಭಾರವಾಗಿದೆ. ಆತ್ಮಾನುಭಾವಿಗೆ ಬುದ್ಧಿಯನ್ನು ಕೊಂದೊಗೆಯುವ ಕಾರಣವಿಲ್ಲ. ಬುದ್ಧಿವಂತನೂ ಅನುಭಾವಿಯಾಗಬಲ್ಲನು; ಅನುಭಾವವನ್ನು ಬುದ್ಧಿಯ ಬೇಕಾದ ಒರೆಗಲ್ಲಿಗೂ ಹಚ್ಚಿ ಅದರ ಸತ್ಯನಿತ್ಯತೆಗಳನ್ನು ಮನಗಾಣಿಸಿಕೊಡಬಹುದು ಎಂಬದನ್ನು ಜಗತ್ತಿಗೆ ತೋರಿಸಿ ಕೊಡುವ ಹಿರಿಗೆಲಸವು ಹಿಂದೂ ಜನರ ಪಾಲಿಗೆ ಬಂದಿದೆ. ಪ್ರಾಚೀನ ಆರ್ಯರು ತಮ್ಮ ದಿವ್ಯದೃಷ್ಟಿಯಿಂದ ಕಂಡು, ಮೆಚ್ಚು ಹೇಳಿದ ಆತ್ಮಾನುಭವದ ಅಮೋಘವಾದ ಔಪನಿಷದಿಕ ತತ್ವಗಳನ್ನು ಆಧುನಿಕ ಶಾಸ್ತ್ರೀಯ ಶೋಧಗಳಿಗೂ, ಬೇರೆ ಬೇರೆ ದೇಶದ ಧರ್ಮ ತತ್ವಜ್ಞಾನಗಳಿಗೂ ಒಂದುಗೂಡಿಸಿ, ಸಮನ್ವಯಿಸಿ ಹೇಳಿ ಅದರಿಂದ ನಮ್ಮ ಅಧ್ಯಾತ್ಮ ದೃಷ್ಟಿಯು ಕಿರಿದಾಗದೆ ಹಿರಿದಾಗುವಂತೆ, ಹಾಗೂ ಭೌತಿಕ ಶಾಸ್ತ್ರ ಧರ್ಮ-ತತ್ವಜ್ಞಾನಗಳು ಕುಗ್ಗದೆ ಹಿಗ್ಗುವಂತೆ ಮಾಡಬೇಕಾಗಿದೆ; ಮನುಷ್ಯನಿಗಿರುವ ಬುದ್ಧಿಯು ಪರಮಾತ್ಮನ ದಿವ್ಯದರ್ಶನಕ್ಕೂ ಅವನ ಅನುಭಾವಕ್ಕೂ ಅಡ್ಡಿಮಾಡದೆ ಆಧಾರವನ್ನೇ ಕೊಡುವುದು, ಎಂಬದನ್ನು ಸಿದ್ಧಪಡಿಸಿ ಮಾನವನಿಗೂ ಮಹೇಶ್ವರನಿಗೂ ಇರುವ ಸನಾತನ ಸಂಬಂಧವನ್ನು ವ್ಯಕ್ತಬಡಿಸತಕ್ಕದ್ದಿದೆ. ಹಿಂದೂ ಜನರು ಇಂತೀ ಸನಾತನ ಧರ್ಮದ ಧ್ವಜವನ್ನೆತ್ತಿ ಅದರ ಆಶ್ರಯದಲ್ಲಿ ಮಾನವ ಕುಟುಂಬಕ್ಕೆ ಶಾಂತಿ ಪುಷ್ಟಿತುಷ್ಟಿಗಳ ಉಣಿಸು ಕೊಡುವ ಅತ್ಯಂತ ಶ್ರೇಷ್ಠ ಹಾಗೂ ಪವಿತ್ರವಾದ ಕರ್ತವ್ಯವನ್ನು ಜರ

ಗಿಸತಕ್ಕದ್ದಿದೆ. ಯಾತರ ಅಧ್ಯಯನದಿಂದ ಭಾರತೀಯರು ಮೇಲ್ಕಾಣಿಸಿದ ಉದಾತ್ತವಾದ ಮಹಾಕಾರ್ಯವನ್ನು ಮಾಡಬೇಕಾಗಿದೆಯೋ ಆ ಉಪನಿಷತ್ತುಗಳಲ್ಲಿ ಈ ಕಾರ್ಯಕ್ಕೆ ಬೇಕಾಗಿರುವ ಸಕ್ತಿ, ಉತ್ಸಾಹ, ಸ್ಫೂರ್ತಿಗಳನ್ನು ಕೊಡುವ ಅಗಾಧ ಸಾಮರ್ಥ್ಯವಿದೆ. ಉಪನಿಷತ್ತಿನ ಅಧ್ಯಯನದಿಂದುಂಟಾಗುವ ಜ್ಞಾನವು ಆತ್ಮಸಾಕ್ಷಾತ್ಕಾರದ ಸ್ವಾನುಭವದ ಪ್ರತ್ಯಕ್ಷ ಜ್ಞಾನಕ್ಕೆ ಎಳ್ಳಷ್ಟೂ ವಿರೋಧಿಯಾಗಿಲ್ಲ. ಅದೇ ಮೇರೆಗೆ ಯಾವ ಶಾಸ್ತ್ರ, ಧರ್ಮ, ತತ್ವಜ್ಞಾನದ ಒರೆಗಲ್ಲಿಗೆ ಹಚ್ಚಿದರೂ ಅದು ಹೀನವೆನಿಸಿಕೊಳ್ಳದೆ, ಚೊಕ್ಕ ಚಿನ್ನವೆಂದೇ ಅನುಭವಕ್ಕೆ ಬರುವವು; ಯಾವ ದೇಶದ ತತ್ವವಿಚಾರಗಳನ್ನು ತಕ್ಕೊಂಡರೂ ಅದರಲ್ಲಿ ಉಪನಿಷತ್ತುಗಳಲ್ಲಿ ಅಡಗಿರುವ ಜ್ಞಾನದಿಂದ ಬೇರೆ ಇಲ್ಲ; ಬೇಕಾದ ಧರ್ಮಗಳನ್ನು ನಿರೀಕ್ಷಿಸಿದರೂ ಅವುಗಳಲ್ಲಿ ತುಂಬಿಕೊಂಡಿರುವ ಸತ್ಯವು, ಇದರಿಂದ ಇನ್ನೊಂದಿಲ್ಲ. ಆದಕಾರಣ ಉಪನಿಷತ್ತುಗಳಲ್ಲಿ ಹೇಳಿದ ಸನಾತನ ಧರ್ಮವು ವಿಶ್ವ ಧರ್ಮವು; ವಿಶ್ವಕ್ಕೆ ಆನಂದ ಶಾಂತಿಗಳನ್ನು ಕೊಡಲು ಸಂಪೂರ್ಣ ಸಮರ್ಥವಾದ ಧರ್ಮವು. ಆದ್ದರಿಂದ ಈ ಉಪನಿಷದ್ಧರ್ಮವನ್ನು ಅಭ್ಯಾಸಿಸಿ, ಆಚರಿಸಿ, ಆಚರಿಸ ಹಚ್ಚಿ ಲೋಕಕಕ್ಕೆಲ್ಲ ಕಲ್ಯಾಣಮಾಡುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ.

ವೇದಗಳು, ಬ್ರಾಹ್ಮಣಗಳು, ಹಾಗೂ ಉಪನಿಷತ್ತುಗಳು ಇವುಗಳಿಗೆ ಶ್ರುತಿಗಳೆಂದು ಅತಿ ಪ್ರಾಚೀನಕಾಲದದಿಂದ ಹೇಳುವರು. ಶ್ರುತಿ ಶಬ್ದವು ಶ್ರು ಧಾತುವಿನಿಂದುಂಟಾಗಿದೆ. ಶ್ರು ಅಂದರೆ ಕೇಳು; ಶ್ರುತಿಗಳು 'ಕೇಳಿ' ತಿಳಿದಂಥವುಗಳು; ಚಿತ್ತಶುದ್ಧರಾದ ಕವಿಗಳೂ ಮನೀಷಿಗಳೂ, ಋಷಿಗಳೂ ಧ್ಯಾನಸ್ಥರಾಗಿ ಕುಳಿತಾಗ ಅವರ ಹೃದಯಾಕಾಶದಲ್ಲಿ ಒಡಮೂಡಿದ ಮಿಂಚಿನ ಬಳ್ಳಿಗಳು. ಎಲ್ಲ ಧರ್ಮದವರೂ ತಮ್ಮ ಧರ್ಮದ ಅಡಿಗಲ್ಲಂತಿರುವ ಮೊದಲ ಪುಸ್ತಕವು ಮನುಷ್ಯ ಕೃತವಾಗಿರದೆ ದೇವರಿಂದ ಬಂದದ್ದೆಂದು ಹೇಳುವರು. ವೇದೋಪನಿಷತ್ತುಗಳು, ಬೈಬಲ್ಲು. ಕುರಾಣ ಮುಂತಾದವುಗಳು ಈ ಮಾದರಿಯ ಪುಸ್ತಕಗಳು. ಮನುಷ್ಯನು ನಿಮಿತ್ತ ಮಾತ್ರನು; ಅವನಲ್ಲಿ ದೈವೀ ಶಕ್ತಿಯು ತುಂಬಿ ಅವನ ಬಾಯಿಂದ ಆಡಿಸುವುದು. "ಮಹಾ ಕಾವ್ಯಗಳಾಗಲಿ ಶ್ರೇಷ್ಠ ಗ್ರಂಥಗಳಾಗಲಿ ಬರಿಯ ಶಾಸ್ತ್ರಾಭ್ಯಾಸದಿಂದ ಬರೆಯಲ್ಪಡಲಾರವು. ಬರಹಕಾರನಲ್ಲಿ ಅವನಿಂದ ಬೇರೆಯಾದ ಆವುದೋ ಒಂದು ದಿವ್ಯ ಶಕ್ತಿಯು ಮೈತುಂಬಿ ಅವನಿಂದ ನಿತಾಂತ ರಮಣೀಯವಾದ ನುಡಿಗಳು ಉಚ್ಚಿದೀಳುತ್ತವೆ. ಇಂಥ ದೈವೀಶಕ್ತಿ ಬಡಕೊಂಡಿರುವಾಗಲೇ ಜಗತ್ತಿನಲ್ಲಿ ಮೊದಲನೆಯ ತರಗತಿಯವೆನಿಸಿದ ಶ್ರೇಷ್ಠ ಗ್ರಂಥಗಳ ರಚನೆಯಾಗಿದೆ. ಈ ದೈವೀ ಹುಚ್ಚು ಹೆಚ್ಚು ಕಡಿಮೆ ಪ್ರಮಾಣದಲ್ಲಿ ಬಡಿದುಕೊಂಡಿರುವಂತೆ ಅವರಿಂದ ಮೇಲ ಅಥವಾ ಕೆಳ ತರಗತಿಯ ಗ್ರಂಥರಚನೆಯಾಗಿದೆ. ಆದಕಾರಣ ಈ ದಿವ್ಯ ಕಾವ್ಯಗಳು ಮನುಷ್ಯನಿಂದ ಆಗಿಲ್ಲ; ಮನುಷ್ಯನಿಗೆ ದೇವರಿಂದ ಬಂದಿರುತ್ತವೆ." ಎಂದು ಪ್ಲೇಟೋ ಎಂಬ ಜಗದ್ವಿಖ್ಯಾತ ಗ್ರೀಕ ತತ್ವಜ್ಞನು ಹೇಳುತ್ತಾನೆ. "ತಾನು ಬರೆಯುತ್ತಿರದೆ ತನ್ನ ಕೈಯಿಂದ ದೇವರು

ಶ್ರುತಿ ಅಂದರೇನು?

ಬರೆಯಿಸುತ್ತಿರುವನು." ಎಂದು ಸೆಂಟ ಪಾಲನೂ ಹೇಳುತ್ತಾನೆ. ಪುರುಷ ಪ್ರಯತ್ನದ ಹೊರ್ತು ತನ್ನ ತಾನೆ ಬರುವದರಿಂದ ಇಂಥ ಮಹಾ ಗ್ರಂಥಗಳಿಗೆ ಅಪೌರುಷೇಯಗ ಳೆಂದು ವೇದಾಂತಿಗಳು ಹೇಳುವುದೂ ಮೇಲಣ ಅರ್ಥದಿಂದಲೇ. ಆದಕಾರಣ ವೇದ ಉಪನಿಷತ್ತುಗಳಿಗೆ ಶ್ರುತಿ, ಅಪೌರುಷೇಯ ಗ್ರಂಥಗಳೆಂಬುವರು. ಉಪನಿಷತ್ತುಗಳೆಂ ದರೆ, ಏನಾದರೊಂದು ಗ್ರಂಥ ರಚನೆಮಾಡಬೇಕೆಂದು ತಿಣಿ ತಿಣಿಕಿ ಬರೆದ ತಂಗಳ ನುಡಿಯಲ್ಲ; ಆತ್ಮಜ್ಞಾನವನುಂಡು ತಣಿದು ತೇಗಿದ ಆನಂದದ ಉಸಿರು.

"ನಾಲ್ಕೂ ವೇದಗಳೂ, ಇತಿಹಾಸ, ಪುರಾಣ, ಶಾಸ್ತ್ರ, ಉಪನಿಷತ್ತು, ಶ್ಲೋಕ, ಸೂತ್ರ, ಟೀಕೆಟಿಪ್ಪಣೆ ಮುಂತಾದುವೆಲ್ಲವೂ ಪರಮೇಶನ ಉಸಿರೇ ಇರುತ್ತದೆ." ಎಂದು ಬೃಹದಾರಣ್ಯಕವು ಹೇಳುತ್ತದೆ. ಈಗಿನವರು ವೇದೋಪನಿಷತ್ತುಗಳನ್ನುಳಿದು ಇತಿ ಹಾಸಾದಿ ಮಿಕ್ಕ ವಿದ್ಯೆಗಳನ್ನು ಅಪೌರುಷೇಯವೆಂದು ತಿಳಿಯಲು ಅಸಿಮಿಸಿಗೊಳ್ಳು ವರು. ಆದರೆ ಉಪನಿಷತ್ಕಾರರ ದೃಷ್ಟಿಯು ಇಷ್ಟು ಸಂಕುಚಿತವಾಗಿರದೆ "ವಿದ್ಯೆಗಳೆಲ್ಲ ಪರಮಾತ್ಮನ ಉಸಿರೇ," ಎಂದು ಸಾರುವಷ್ಟು ಉದಾರವಾಗಿದೆ. ಮನುಷ್ಯನೊಂದು ಯಂತ್ರ. ವಿದ್ಯೆಯು ಆತನ ಸೊತ್ತಲ್ಲ. ದೇವರು ತನಗೆ ತಕ್ಕುದೆಂದು ಕಂಡ ಯಂತ್ರದ ಮುಖಾಂತರವಾಗಿ ನುಡಿಸುವನು. 'ತಪಸ್ಸಿನ ಪ್ರಭಾವದಿಂದಲೂ, ದೇವರ ಪ್ರಸಾದ ದಿಂದಲೂ' ತನಗೆ ಬಂದ ವಿದ್ಯೆಯನ್ನು ಉಸಿರಿರುವೆನೆಂದು ಶ್ವೇತಾಶ್ವತರ ಮುನಿಯು ಹೇಳಿದ್ದಾನೆ.

ಉಪನಿಷತ್ತು ಅನುಭಾವಿಗಳ ವಚನಶಾಸ್ತ್ರ; ಋಗ್ವೇದವು ಭಾವಿಕರ ಭಯಭಕ್ತಿ ಯುಕ್ತ ಪ್ರಾರ್ಥನಾ ಸಂಗ್ರಹ. ಋಗ್ವೇದವು ಆರ್ಯರ ಮೊಟ್ಟಮೊದಲಿನ ಧರ್ಮಗ್ರಂ ಥವು. ಋಗ್ವೇದ ಹಾಗೂ ಉಪನಿಷತ್ತುಗಳ ನಡುವೆ ಸುಮಾರು ಸಾವಿರ ವರುಷದ ಅವಧಿಯು ಇರಬೇಕೆಂದು ಹೇಳುತ್ತಾರೆ. ಋಗ್ವೇದ ಕಾಲದಲ್ಲಿ ಜನರ ಮನಸ್ಸು ಸ್ವಾಭಾವಿಕವಾಗಿ ಬಾಹ್ಯ ಸೃಷ್ಟಿ ಶಕ್ತಿಗಳ ಕಡೆಗೇ ಪ್ರಾಮುಖ್ಯವಾಗಿ ಎಳೆಯಲ್ಪಟ್ಟಿದ್ದರೆ ಆಶ್ಚರ್ಯವಿಲ್ಲ. ಯಾಕಂದರೆ ಮನುಷ್ಯನ ಆರಂಭಸ್ಥಿತಿಯ ಲಕ್ಷಣವೇ ಇದು. ಋಗ್ವೇದದಲ್ಲಿ ಬಾಹ್ಯಶಕ್ತಿಯು ಚಿತ್ತ ವನ್ನು ಎಳೆದಿದ್ದರೆ ಉಪನಿಷತ್ತಿನಲ್ಲಿ ಆಂತರಿಕ ಶಕ್ತಿಯು ಅವನ ಮನೋಬುದ್ಧಿಗಳನ್ನು ಸೆಳೆದಿರುತ್ತದೆ. ಋಗ್ವೇದದಲ್ಲಿ ಸೃಷ್ಟಿಶಕ್ತಿಗಳಿಗೆ ದೇವದೇವಿಯರ್ಕಳ ರೂಪಕೊಟ್ಟು ಅಂಜುತ್ತ ಅಳುಕುತ್ತ ಅವುಗಳು ತಮ್ಮ ಕಲ್ಯಾಣ ಮಾಡಲೆಂದು ಬೇಡಿಕೊಂಡಿರುವುದನ್ನು ಅಡಿಗಡಿಗೆ ಕಾಣಬಹುದು. ಆದರೆ ಇದಕ್ಕೆ ವಿಪರೀತವಾಗಿ ಉಪನಿಷತ್ತುಗಳಲ್ಲಿ ಹೆದ ರಿಕೆ ಬೆದರಿಕೆಗಳ ಸೆರಗಿಲ್ಲದೆ ಎದೆಗಾರಿಕೆಯಿಂದ ಆ ಸೃಷ್ಟಿತತ್ವವನ್ನು ಅರಿದು, ಬಗೆದು, ತಿಳಿಯಲಿಕ್ಕೆ ನಡೆಸಿದ ಶಾಸ್ತ್ರೀಯ ಸಂಶೋಧನದ ಆಸಕ್ತಿಯನ್ನು ಎಲ್ಲೆಲ್ಲಿಯೂ ನೋಡ ಬಹುದು. ವೇದಕಾಲದಲ್ಲಿ ದೇವರಿಗೆ ಮೊರೆಹೊಕ್ಕು ಅಂಗಲಾಚಿ ಬೇಡಿಕೊಂಡಿದ್ದಾರೆ.

ಉಪನಿಷತ್ತೂ ಋಗ್ವೇದವೂ.

ಉಪನಿಷತ್ಕಾಲದಲ್ಲಿ ಅವನೇ ನಾನೆಂದು ಧೀರವೀರರಂತೆ ಸಾರಿದ್ದಾರೆ. ಹೊರಗಣ್ಣು ಒಳಗಣ್ಣಾಯಿತು. ದೇವರನ್ನು ಕೇಳುವುದನ್ನು ಬಿಟ್ಟು ಆತ್ಮವನ್ನು ತಿಳಿಯುವುದಕ್ಕೆ ಆರಂಭವಾಯಿತು. ಪ್ರಾರ್ಥನಾಕಾಲದಿಂದ ತತ್ವವಿಚಾರ ಕಾಲವು, ಕಾಡಿ ಬೇಡುವ ಕಾಲ ಹೋಗಿ ಬಗೆದು ಭಾವಿಸುವ ಕಾಲದ ಕಡೆಗೆ ಪ್ರಗತಿಯಾಯಿತು. ಒಂದರ ಹಲವು ರೂಪಿನ ದೇವತೆಗಳ ಆರಾಧಿಸುವದು ಹಿಂದೆ ಬಿದ್ದು, ಆತ್ಮನ ಒಂದುತನವನ ರಿತು ಅದರಲ್ಲಿ ಒಂದಿ ಅನುಭವ ಹೊಂದುವ ಹಂಬಲವು ಹೆಚ್ಚಾಯಿತು. ಇದು ವೇದ ಕಾಲದಿಂದ ಉಪನಿಷತ್ಕಾಲವವರೆಗೆ ಆದ ಪ್ರಗತಿಯು.

ಋಗ್ವೇದದಲ್ಲಿಯೇ ಈ ಪ್ರಕಾರದ ವಿಚಾರ ವಿಕಾಸಕ್ಕೆ ಆರಂಭವಾದುದನ್ನು ನಾವು ಕಾಣಬಹುದು. ಜಗದುತ್ಪತ್ತಿ ಸ್ಥಿತಿಗಳಿಗೆ ಮೂಲ ಕಾರಣವಾದ ಏನಾದರೊಂದು ಅವ್ಯಯವು 'ಉಂಟು' ? ಎಂಬ ವಿಚಾರಕ್ಕೆ ಮೋರೆ ಒಡೆದಿತ್ತು. ಸತ್, ಅಸತ್‌ಗಳ ತೊಡಕಿಗೆ ಕೈಹಾಕಿದ್ದರು. ಸತ್, ಅಸತ್ತುಗಳ ಆಚೆಯಲ್ಲಿರುವವನ ಇರುವಿನ ಬಗ್ಗೆ ಶಂಕಾಸಮಾಧಾನಗಳಿಗೆ ಮೊದಲಾಗಿತ್ತು. ಇದಕ್ಕಾಗಿ ಋಗ್ವೇದ ೧೦–೫, ೨೭ ೧೨೯ ಮಂತ್ರಗಳನ್ನು ನಿರೀಕ್ಷಿಸಬಹುದು. ಪ್ರಾಚೀನರು ಋಗ್ವೇದವು ಮುಖ್ಯವಾಗಿ ಯಜ್ಞ ಮಾರ್ಗ ಪ್ರವರ್ತಕವೆಂದೇ ಅಭಿಪ್ರಾಯವುಳ್ಳವರಿದ್ದರೆಂದು ಹೇಳಬಹುದು. "ತ್ರೈಗುಣ್ಯ ವಿಷಯಾ ವೇದಾಃ ನಿಸ್ತ್ರೈಗುಣ್ಯೋ ಭವಾರ್ಜುನ" ಎಂಬುವದರಿಂದ ಭಗವದ್ಗೀತೆಯು ಕರ್ತೃವಿನ ಅಭಿಪ್ರಾಯವಾದರೂ ಹಾಗೇ ಇತ್ತೆಂದು ಸ್ಪಷ್ಟವಿದೆ. ಆದರೆ ಶ್ರೀ ಅರವಿಂದ ಯೋಗಿಗಳಿಗೆ ಇದು ಸಮ್ಮತವಿಲ್ಲ. ಅವರು ಅನ್ನುವುದೇನಂದರೆ: —" ಯಾವ ವೇದಗಳನ್ನು ಸಾವಿರಾರು ವರ್ಷಗಳಿಂದ ದಿವ್ಯ, ಅಪೌರುಷೇಯವೆಂದು ನಂಬಿ ನಚ್ಚಿ ಆರ್ಯರು ಕಾದರೋ ಆ ವೇದಗಳಲ್ಲಿ ಯಜ್ಞಯಾಗಾದಿ ಹುರುಳಿಲ್ಲದ ಜೊಳ್ಳು ಕೆಲಸದ ವರ್ಣನೆಯನ್ನೇ ಮುಖ್ಯವಾಗಿ ಹೇಳಿದೆಯೆಂಬುವುದು ಸಮಂಜಸವಾಗಲಾರದು. ಯಜ್ಞ ಕರ್ಮದ ಗೊಡ್ಡು ಹರಟೆ ಕೊಚ್ಚಿದ ಗ್ರಂಥಕ್ಕೆ ಮಹರ್ಷಿಗಳು ಹಿಂದಕ್ಕೆ ಇಷ್ಟು ಮಹತ್ವ ಕೊಟ್ಟು ಸಂರಕ್ಷಿಸುತ್ತಲೇ ಇದ್ದಿಲ್ಲ. ಇತ್ತಲಾಗಿ ಜನರಿಗೆ ಅದರ ನಿಜವಾದ ಅರ್ಥವು ತಿಳಿಯದ್ದರಿಂದ ತಪ್ಪು ಕಲ್ಪನೆಗಳಾಗಿವೆ. ವೇದದ ಗುಟ್ಟಿನ ಅರ್ಥವು ಬೇರೆಯಿದೆ". ಹೀಗೆ ಪ್ರತಿಪಾದಿಸಿ ಶ್ರೀ ಅರವಿಂದರು ಹಲವು ಋಕ್ಕುಗಳನ್ನು ತಕ್ಕೊಂಡು ಹೊಸ ಅರ್ಥ ಹಚ್ಚಿರುವರು. ಹಾಗೂ ಇದೇ ಪ್ರಕಾರ ಋಗ್ವೇದದಲ್ಲಿ ರೂಪಕದಿಂದ ದಿವ್ಯ ಕಾವ್ಯಮಯ ಭಾಷೆಯಲ್ಲಿ ಅನುಭಾವ ಶಾಸ್ತ್ರವೇ ಹೇಳಲ್ಪಟ್ಟಿದೆಯೆಂದು ಪ್ರತಿಪಾದಿಸುತ್ತಾರೆ. ಋಗ್ವೇದದೊಳಗಿನ ಅತ್ಯಂತ ರಮ್ಯವೂ ಮನೋಹರವೂ ಕಾವ್ಯಮಯವೂ ಆದ 'ಉಷೆ'ಯ ವರ್ಣನೆಯನ್ನು ತಕ್ಕೊಂಡು ಅನುಭಾವವನ್ನೇ ಹೇಳುತ್ತದೆಂದು ತೋರಿಸಿದ್ದಾರೆ. ಅಂತು ಋಗ್ವೇದದಲ್ಲಿ ಕವಿಯ ದಿವ್ಯ ದೃಷ್ಟಿಯೂ, ಅದ್ಭುತವಾದ ಭಾವ ನಿರ್ಝರವೂ ಇದೆ. ಉಪನಿಷತ್ತಿನಲ್ಲಿ ಮನೀಷೆಯ ಅಪ್ರತಿಹತ ವಿಜ್ಞಾನ ಶಕ್ತಿಯೂ, ಅಮೋಘ ಮೇಧಾಶಕ್ತಿಯೂ ಇದೆ.

ಋಗ್ವೇದ ಹಾಗೂ ಅಥರ್ವವೇದ ಕಾಲಗಳಲ್ಲಿ ವಿಪರೀತ ಭೇದವಿದೆ. ಋಗ್ವೇದ ದಲ್ಲಿ ಪ್ರಾರ್ಥನಾ ಮಂತ್ರಗಳು, ಅಥರ್ವದಲ್ಲಿ ಮಾಟ, ಯಂತ್ರತಂತ್ರಾದಿಗಳು ! ಅಲ್ಲಿ ದೇವರಿಗೆ ಆರಾಧನೆ; ಇಲ್ಲಿ ದೆವ್ವಭೂತಗಳಿಗೆ ಬೇಡಿಕೆ.

ಉಪನಿಷತ್ತೂ ಅಥರ್ವವೇದವೂ

ಇಂದ್ರ, ವರುಣ, ಉಷಾ ಸೂರ್ಯಾ ಸಾವಿತ್ರ್ಯಾದಿ ದೇವತೆಗಳು ಅಲ್ಲಿ. ಭೂತಪ್ರೇತಪಿಶಾಚಾದಿಗಳು ಇಲ್ಲಿ. ಅಥರ್ವವೇದವು ಜಾರಣಮಾರಣಾದಿ ಮಾಟ ವಿದ್ಯೆಯ ಸಂಗ್ರಹವೇ ಆಗಿದೆ. ಆದರೆ ಇದರಲ್ಲಿ ಮಂದಿಯ ಕೇಡು, ಕೊಲೆಯ ಮಾಟ ವಿದ್ಯೆಯಿರುವಂತೆ ಕಲ್ಯಾಣ ಮಂಗಳ ಶುಭಗಳಾಗುವುದಕ್ಕೂ ಕೆಲವು ಮಂತ್ರತಂತ್ರಗಳಿರುವವರಿಂದ ಅಥರ್ವವೇದಕ್ಕೆ ಬರುವ ಕುಂದಕವು ಸ್ವಲ್ಪ ಮಟ್ಟಿಗೆ ಕಡಿಮೆ ಆಗುತ್ತದೆ. ಆದರೂ ಅಥರ್ವವೇದದೊಳಗಿನ ರುಧಿರಪ್ರಿಯ ರಾಕ್ಷಸೀಯ ತಂತ್ರಗಳು ಭಕ್ತಿ ಜ್ಞಾನಗಳ ಕೋಮಲ ಅಂಕುರಗಳನ್ನು ಕಮರಿಸಿ ಬಿಟ್ಟಿವೆ; ಮನುಷ್ಯನಿಗೆ ಜಾರಣಮಾರಣಾದಿ ಮಾಟಗಳ ಭಯಂಕರವಾದ ಮರುಭೂಮಿಯಲ್ಲಿ ಒಯ್ದು ಚಲ್ಲುತ್ತವೆ. ಹೀಗೆ ನೋಡಿದರೆ ಉಪನಿಷತ್ತುಗಳಿಗೂ ಅಥರ್ವವೇದಕ್ಕೂ ಹೋಲಿಕೆಯೇ ಇಲ್ಲ. ಒಂದು ಪೂರ್ವ, ಮತ್ತೊಂದು ಪಶ್ಚಿಮ. ಕಾಲನನ್ನು ಕುರಿತು ಇರುವ ಮಂತ್ರ (೧೯. ೫೩,೫೪). ಗಳಲ್ಲಿ ಏನೋ ಕೆಲವು ತತ್ವವಿಚಾರಗಳು ಬಂದು ಹೋಗಿವೆ. ಆದರೆ ಉಪನಿಷತ್ತುಗಳಿಗೆ ಅಥರ್ವವೇದೀಯ ಮಂತ್ರತಂತ್ರಗಳ ಗಾಳಿಯೇ ತಗಲಿಲ್ಲವೆನ್ನಲಿಕ್ಕೆ ಬರುವದಿಲ್ಲ. ಬೃಹದಾರಣ್ಯಕ ಹಾಗೂ ಕೌಶೀತಕಿ ಎಂಬೆರಡರಲ್ಲಿ ಮಾತ್ರ ಉಪನಿಷತ್ತಿನ ತತ್ವವಿಚಾರಕ್ಕೆ ಸ್ವಲ್ಪ ಕಲಂಕ ತರುವ ಕೆಲ ಮಾಟಗಳ ಉಲ್ಲೇಖವಿದೆ. ಬೃಹದಾರಣ್ಯಕದೊಳಗಿನ ಸ್ತ್ರೀ ವಶೀಕರಣ ಅಥವಾ ಮಂದಿಯ ಹೆಂಡತಿಗಾಗಿ ಅಳಿಪುವ ಬೆದೆ ಬಡಕನ ಕೊಲೆ, ಹಾಗೂ ಕೌಶೀತಕಿಯೊಳಗಿನ ಹುಗಿದಿಟ್ಟ ಬದುಕು ಹೊಂದುವ ಉಪಾಯ, ಬೇಕಾದ ಗಂಡು ಅಥವಾ ಹೆಣ್ಣಿನ್ನು ಮರಳುಗೊಳಿಸಿ ಕೈಯಲ್ಲಿ ತಕ್ಕೊಳ್ಳುವುದು, ಸುತ್ತಲಿನ ವೈರಿಸಂಹಾರ ಇವುಗಳಿಗಾಗಿ ಹೇಳಿರುವ ಮಂತ್ರತಂತ್ರಾದಿಗಳು ಔಪನಿಷದಿಕ ಶ್ರೇಷ್ಠ ತತ್ವಜ್ಞಾನ ಕಾಲಕ್ಕೆ ಶೋಭಿಸುವಂತಿಲ್ಲ. ಆದರೆ ಇವು ಮೇಲ್ಕಾಣಿಸಿದಷ್ಟೇ ಸ್ವಲ್ಪವಿದ್ದು ಅಪವಾದಗಳಂತಿವೆ. ಅಥರ್ವವೇದದಂತೆ ತುಂಬಾ ಅದೇ ವಿಷಯವಿಲ್ಲ. ಉಪನಿಷತ್ತುಗಳಲ್ಲಿ ಆತ್ಮನ ಸ್ವರೂಪ ಸ್ಥಿತಿಗತಿಗಳ ವಿವೇಚನೆಯೇ ಮುಖ್ಯ ವಿಷಯವು. ಆದುದರಿಂದ ಉಪನಿಷತ್ತಿನ ಮೇಲಿನ ಕಲಂಕವು ಚಂದ್ರನ ಕಪ್ಪು ಕಲೆಯಂತೆ ಅದಕ್ಕೆ ಒಪ್ಪವನ್ನೇ ತಂದಿದೆ; ಚಲುವನ್ನೇ ಹೆಚ್ಚಿಸಿದೆ ಎಂದು ಕಂಡುಬರುವದು

ಅಥರ್ವಣವೇದದಲ್ಲಿ ಯಂತ್ರಮಂತ್ರವೇ ಇರುವಂತೆ ಬ್ರಾಹ್ಮಣಗಳಲ್ಲಿ ಯಜ್ಞಯಾಗಾದಿಗಳ ವಿಚಾರವೇ ತುಂಬಿ ತುಳುಕುತ್ತಿದೆ. ವೇದಗಳೊಳಗಿನ ಕೆಲ ಭಾಗಗಳನ್ನು ತಕ್ಕೊಂಡು ನಡುವೆ ಸೇರಿಸಿ ಅವುಗಳನ್ನು ಯಜ್ಞ

ಉಪನಿಷತ್ತೂ ಬ್ರಾಹ್ಮಣಗಳೂ

ಯಾಗಾದಿ ನಿರರ್ಥಕ ಕರ್ಮಗಳ ಪುಷ್ಟೀಕರಣಕ್ಕೆ ಉಪಯೋಗಿಸಿದ್ದಾರೆ. ಬ್ರಾಹ್ಮಣಗಳಲ್ಲಿ ಮಧ್ಯೆ ಮಧ್ಯೆ ಕಥೆ, ವೇದಾರ್ಥ, ನಿಯಮ

ನಿರ್ಬಂಧ, ಭಾಷಾಶಾಸ್ತ್ರ ಹಾಗೂ ತತ್ತ್ವ ವಿಚಾರಗಳನ್ನು ಬೆರಿಸಿ ಅವುಗಳಿಂದ ಯಾಜಕನ ಕಾರ್ಯಕ್ಕೆ ಬ್ರಾಹ್ಮಣಗಳ ಉಪಯುಕ್ತತೆಯನ್ನು ತೋರಿಸಿದ್ದಾರೆ. ಋಕ್ಕುಗಳೊಳಗಿನ ಪವಿತ್ರ ಉದಾತ್ತವಾದ ಪ್ರಾರ್ಥನೆಯ ಶುದ್ಧಭಕ್ತಿ ಜ್ಞಾನಗಳ ಭಾವದ ಸೆಲೆಯು ಬತ್ತಿ, ಯಜ್ಞಯಾಗಾದಿ ಕರ್ಮದ ತೊಡಕಿನಲ್ಲಿ ಆ ಕಾಲದ ಆರ್ಯರ ಬುದ್ಧಿ ಶಕ್ತಿಯು ಸಿಕ್ಕು ಬಿದ್ದುದು ಆಶ್ಚರ್ಯಕಾರಕವೂ ಅದರಂತೆ ತೀರ ಕರುಣಾಸ್ಪದವೂ ಆಗಿದೆ. ಆದರೆ ಮುಂದಿನ ಮನೀಷಿಗಳಿಗೆ ಯಜ್ಞದ ಗೊಡ್ಡು ಕೆಲಸದ ಬಲೆಯಲ್ಲಿ ಸುತ್ತಾಡುತ್ತ ಬಿದ್ದುಕೊಂಡಿರುವುದು ಸರಿಬರಲಿಲ್ಲ. ಉಪನಿಷತ್ತುಗಳಲ್ಲಿ ಈ ತರದ ಪ್ರತಿಕ್ರಿಯೆಯು ಯಜ್ಞಯಾಗಾದಿಗಳ ವಿರುದ್ಧವಾಗಿ ಆದದ್ದು ಸ್ಪಷ್ಟವಾಗಿ ಕಂಡು ಬರುತ್ತದೆ. ಮುಂಡಕೋಪನಿಷತ್ತಿನಲ್ಲಿ ಯಜ್ಞದ ಅವಶ್ಯಕತೆಯನ್ನು ಹೇಳಿದ ಮುಂದಿನ ಶ್ಲೋಕಗಳಲ್ಲಿಯೇ ಯಜ್ಞಯಾಗಗಳ ನಿಷ್ಪ್ರಯೋಜಕತ್ವವನ್ನು ಹೇಳಿದೆ. "ಯಜ್ಞ ರೂಪಿಯಾದ ಹರಗೋಲು ಬಹು ಅಸ್ಥಿರವು. ಇಂಥ ಅಸ್ಥಿರ ನೌಕೆಯಲ್ಲಿ ಕುಳಿತು ಸಂಸಾರಸಾಗರವನ್ನು ದಾಟುವುದು ದುಸ್ತರವು; ಯಾಕಂದರೆ ಇದು ಯಾವಾಗ್ಗೆ ಪಾತಾಳ ಕಾಣುವುದೋ ಭರವಸೆಯಿಲ್ಲ. ಯಜ್ಞಮಾರ್ಗದಿಂದ ಮುಕ್ತಿಯಿಲ್ಲ. ಹುಟ್ಟು ಮುಪ್ಪು ಸಾವುಗಳ ಸುತ್ತಿನೊಳಗಿಂದ ಪಾರಾಗಲಾರನು. ಪುಣ್ಯವು ತೀರಿದೊಡನೆ ಸ್ವರ್ಗದಿಂದ ಉರುಳಿಬೀಳುವನು; ಮೊದಲಿಗಿಂತ ಕೀಳು ಸ್ಥಿತಿಯು ಆತನಿಗೆ ಬರುವದು." ಎಂದು ಬಣ್ಣಿಸಿದ್ದಾರೆ. ಹಲವು ಋಷಿಗಳು ಯಜ್ಞಶಬ್ದಕ್ಕೆ ಬೇರೆ ಅರ್ಥವನ್ನೇ ಹೇಳಿ, ಯಜ್ಞಕ್ರಿಯೆಯು ಅವ್ಯಾಹತವಾಗಿ ನಡೆದದ್ದೇ ಇರುವುದೆಂದು ಸಮಾಧಾನ ಹಚ್ಚಿಕೊಂಡಿದ್ದಾರೆ. ಬುದ್ಧನೇ ಯಜ್ಞ ವಿಧ್ವಂಸಕನೆಂದು ಯಾರಾದರೂ ತಿಳಿದಿದ್ದರೆ ತಪ್ಪು. ಆತನ ಮುಂಚಿತವಾಗಿಯೇ ಎಷ್ಟೋ ಶತಮಾನ ಆರ್ಯ ಋಷಿ ಮುನಿಗಳಲ್ಲಿ ಎಷ್ಟೋ ಜ್ಞಾನಿಗಳೇ ಈ ಕಾರ್ಯಕ್ಕೆ ಆರಂಭಮಾಡಿರುವರು. ಅತಿ ಪ್ರಾಚೀನವೆನಿಸುವ ಛಾಂದೋಗ್ಯದಲ್ಲಿ "ಮನುಷ್ಯ ಶರೀರಾಂತರ್ಗತ ಯಜ್ಞವು ನಡೆದೇ ಇದೆ. ಇದನ್ನರಿಯದವನು ಬೂದಿಯಲ್ಲಿ ಆಹುತಿ ಚಲ್ಲುವನು; ಈ ಆಂತರಿಕಯಾಗವನ್ನರಿತವನ ಪಾಪಗಳೆಲ್ಲ ಉರಿಗೆ ಉಣ್ಣೆಯು ಸುಡುವಂತೆ ನಾಶವಾಗುವವು" ಎಂದು ಹೇಳಿದೆ (೫. ೧೯-೨೪) ಕೌಶೀತಕಿ ಉಪನಿಷತ್ತಿನಲ್ಲಿ, ಪ್ರಾಚೀನ ಋಷಿಮುನಿಗಳು ಬಾಹ್ಯಯಾಗದ ಗಲಾಟೆಗೆ ಹೋಗುತ್ತಲೇ ಇದ್ದಿಲ್ಲವೆಂದಿದೆ. ಯಾಕಂದರೆ ಮನುಷ್ಯನೊಳಗೆ ಎಡೆಬಿಡದೆ ಯಜ್ಞವು ನಡೆದೇ ಇದೆ. ಆದಕಾರಣ ಬೇರೆ ಯಾಗವೇತಕ್ಕೆ ? ಇಂತು ಸುಸ್ಪಷ್ಟ ಶಬ್ದಗಳಲ್ಲಿ ಹೇಳಿದೆ. ಹೀಗೆ ಜ್ಞಾನಮಾರ್ಗಕ್ಕೆ ಪೋಷಕವಾಗುವಂತೆ ಯಜ್ಞ ಕ್ರಿಯೆಯ ಅರ್ಥವು ಬದಲಿಸಲ್ಪಟ್ಟಿತು. ಕರ್ಮಜಂಜಾಲದ ನಿರರ್ಥಕತೆಯನ್ನು ಮನಗಂಡು ಬ್ರಾಹ್ಮಣಗಳ ಮುಂದೆ ಉಪನಿಷತ್ತುಗಳು ಜ್ಞಾನಮಾರ್ಗ ಬೋಧಿಸುವುದಕ್ಕೆ ಹುಟ್ಟಿದುವು.

ಕ್ರಿಸ್ತಶಕದ ಪೂರ್ವದಲ್ಲಿ ಸುಮಾರು ೧೨೦೦ ರಿಂದ ಕ್ರಿ. ಶ. ಪೂ. ೬೦೦ ವರೆಗೆ ಉಪನಿಷತ್ಕಾಲವೆಂದು ಹೇಳಬಹುದು. ಈ ಅವಧಿಯಲ್ಲಿ ಉಪನಿಷತ್ತುಗಳು ಮೊದಲು

**ಉಪನಿಷತ್ತುಗಳ ಕಾಲಾನು ಕ್ರಮವನ್ನು ಅರಿಯುವ ರೀತಿಗಳು**

ಯಾವವು ಹಿಂದುಗಡೆ ಯಾವವು ಎಂಬುದನ್ನು ನಿರ್ಣಯಿಸತಕ್ಕದ್ದಿದೆ. ಹೀಗೆ ಗೊತ್ತುಪಡಿಸುವ (೧) ಮೊದಲನೆಯ ಸಾಧನವೆಂದರೆ ಭಾಷೆ, ಶೈಲಿ, ಶಬ್ದಸಂಗ್ರಹ, ವ್ಯಾಕರಣದ ಬೇರೆಬೇರೆ ರೂಪಸಿದ್ಧಿ ಇವುಗಳು. ೬೦೦ ವರ್ಷಗಳ ಅವಧಿಯಲ್ಲಿ ಮಾತಿನ ಮೋಡಿ, ವ್ಯಾಕರಣಗಳಲ್ಲಿ ಎಷ್ಟೋ ಹೆಚ್ಚು ಕಡಿಮೆಗಳೂ ಆಗಿರುತ್ತವೆ. ಉಪನಿಷತ್ತಿನ ಭಾಷೆ ಪದಸಂಯೋಜನೆಗಳಿಂದ ಹಳೆ ಹೊಸತಾವುದೆಂದು ಹೇಳಬಹುದು. ಆದರೆ ಒಮ್ಮೊಮ್ಮೆ ಹೊಸಬನು ಹಳೆಮಾತಿನಲ್ಲಿ ತನ್ನ ವಿಚಾರಗಳನ್ನು ಹೇಳುವುದೂ, ಹಳೆಯವನು ಹೊಸಬೆಡಗಿನ ನುಡಿಯಲ್ಲಿ ಬರೆದಿರುವುದೂ ಸಂಭವವಿದೆ. (೨) ಕೆಲವರನ್ನುವಂತೆ ಗದ್ಯವಿದ್ದರೆ ಹಳದು, ಪದ್ಯವಿದ್ದರೆ ಹೊಸತು ಎಂದೂ ನಿಶ್ಚಿತವಾಗಿ ಹೇಳಲಿಕ್ಕೆ ಆಗುವದಿಲ್ಲ. ( ೩ ) ಆದರೆ ಒಂದು ವಿಚಾರವನ್ನು ಬರಬರುತ್ತ ಹೆಚ್ಚೆಚ್ಚು ವಿಸ್ತರಿಸಿ ವರ್ಣಿಸುವುದರಿಂದ ಆ ಉಪನಿಷತ್ತುಗಳು ಇತ್ತೀಚಿನವೆಂದು ಹೇಳುವುದು ಹೆಚ್ಚು ನಿಶ್ಚಯಾತ್ಮಕವಾಗಿದೆ. ಆದರೂ ಇದೊಂದರ ಮೇಲಿಂದಲೇ ಸಂಪೂರ್ಣ ನಿರ್ಧರಿಸಲಿಕ್ಕಾಗುವದಿಲ್ಲ. ( ೪ ) ವಿಚಾರ ವಿಕಾಸವನ್ನು ನೋಡಿ ತಿಳಕೊಳ್ಳುವುದು ನಾಲ್ಕನೆಯ ಲಕ್ಷಣವು. ಈಗ ಎರಡು ಆತ್ಮದ ವಿಚಾರವನ್ನೇ ತಕ್ಕೊಳ್ಳುವ. ಇದು ಕಠ, ಮುಂಡಕ ಹಾಗೂ ಶ್ವೇತಾಶ್ವತರಗಳಲ್ಲಿ ಬಂದಿದೆ. ಕಠದಲ್ಲಿ, ಎರಡೂ ಆತ್ಮಗಳು ಸರಿಸಮಾನ ಯೋಗ್ಯತೆಯವು ಹಾಗೂ ಇವು (ಜೀವಾತ್ಮ ಪರಮಾತ್ಮಗಳು) ಕೂಡಿಯೇ ಕರ್ಮಫಲವನ್ನುಣ್ಣುವವು ( ಋತಂಪಿಬಂತೌ ) ಎಂದು ಹೇಳಿದೆ. ಮುಂಡಕೋಪನಿಷತ್ತಿನಲ್ಲಿ, ಒಂದೇ ಗಿಡದಲ್ಲಿ (.ಶರೀರದಲ್ಲಿ ) ಇರುವ ಅವೆರಡೂ ಪಕ್ಷಿಗಳಲ್ಲಿ ( ಜೀವ ಹಾಗೂ ಪರಮಾತ್ಮ ) ಒಂದೇ (ಜೀವವು) ಕರ್ಮಫಲವನ್ನು ಉಣುತ್ತಿರುವದೆಂದೂ ಮತ್ತೊಂದು ಫಲಭೋಗತಕ್ಕೊಳ್ಳದೆ ಕೇವಳ ಅದನ್ನು ನೋಡುತ್ತಿರುವುದೆಂದೂ ವರ್ಣಿಸಿದೆ. ಶ್ವೇತಾಶ್ವತರದಲ್ಲಿ, ಕೆಂಪು, ಕಪ್ಪು, ಬಿಳಿ, ಬಣ್ಣ(ಗುಣ) ಗಳುಳ್ಳ ಅಜಾ ಪ್ರಕೃತಿಯೊಡನೆ ಸೇರಿ ಫಲವನ್ನುಣ್ಣುತ್ತಿದ್ದಾನೆ. ಆತ್ಮನು ಹಾಗೂ ಇನ್ನೊಬ್ಬ ಆತ್ಮನು ಭುಕ್ತಭೋಗಗಳನ್ನು ತ್ಯಜಿಸಿದ್ದಾನೆ ಎಂದೂ ಬರೆದಿದೆ. ಮೇಲಿನ ಮೂರೂ ಉಪನಿಷತ್ತುಗಳಲ್ಲಿ ಕ್ರಮವಾಗಿ ಆತ್ಮ ಪರಮಾತ್ಮ ಸಂಬಂಧ ವಿಚಾರವು ವಿಕಾಸವಾಗುತ್ತ ಹೋದುದು ಸ್ಪಷ್ಟವಾಗಿದೆ. ( ೫ ) ಕೊನೆಯ ಲಕ್ಷಣವು ಕಾಲಕ್ರಮುವನ್ನು ಹೇಳುವುದರಲ್ಲಿ ಬಹಳ ಸ್ಪಷ್ಟವಾಗಿದೆ. ಅನೇಕ ಉಪನಿಷತ್ಕಾರರು ತಮ್ಮ ಹಿಂದಿನವರ ಉತ್ತಮವೆನಿಸಿದ ಸಾಲಿಗೆ ಸಾಲು, ಶ್ಲೋಕಕ್ಕೆ ಶ್ಲೋಕಗಳನ್ನೇ ಕೈಗಡತಕ್ಕೊಂಡಿರುವರು. ಹೀಗೆ ಕೈಗಡ ತಕ್ಕೊಂಡವರು ಹಿಂದುಗಡೆಯವರು ಎಂದು ನಿಚ್ಚಳಾಗಿ ತಿಳಿಯುವಂತಿದೆ.

ಈ ಎಲ್ಲ ಒರೆಗಲ್ಲಿಗೆ ಹಚ್ಚಿ ಮೊದಲಿನ ಹದಿಮೂರು ಉಪನಿಷತ್ತುಗಳನ್ನು ಕಾಲಾನು ಕ್ರಮದಲ್ಲಿ ಐದು ಗುಂಪುಮಾಡಿ ಹೀಗೆ ಹೇಳುತ್ತಾರೆ. ( ೧ ) ಛಾಂದೋಗ್ಯ ಹಾಗೂ ಬೃಹದಾರಣ್ಯಕ ( ೨ ) ಈಶ ಮತ್ತು ಕೇನ ( ೩ ) ಐತರೇಯ, ತೈತ್ತಿರೀಯ ಹಾಗೂ ಕೌಶೀತಕಿ (೪) ಕಠ, ಮುಂಡಕ ಮತ್ತು ಶ್ವೇತಾಶ್ವತರ ( ೫ ) ಪ್ರಶ್ನ, ಮೈತ್ರಿ ಮತ್ತು ಮಾಂಡೂಕ್ಯ.

—೬೦.

# ಲೀಲೆ.

—೦—

ಮಗು—"ಅವ್ವಾ! ಇದೆಲ್ಲಾ ನೋಡೇ ಎಷ್ಟು ಸೊಗಸಾಗಿದೆ! ಎಷ್ಟೆಷ್ಟು ಮೃಗ ಪಕ್ಷಿ ಜಾತಿಗಳೊ ತರುಲತಾ ಜಾತಿಗಳೊ ನಾನಾಬಗೆಯ ಚರಾಚರ ವಸ್ತುಗಳ ವಿವಿಧ ವಿಸ್ತಾರ ವೈಚಿತ್ರ್ಯವು ಕಣ್ಣಮುಂದೆ ಅಖಂಡವಾಗಿ ತೋರುತ್ತದೆ. !"

ತಾಯಿ—"ಅಪ್ಪಾ ಮಗೂ! ಇದೆಲ್ಲಾ ಸುಳ್ಳುಸಂಸಾರ. ಇದೊಂದೂ ಸತ್ಯವಲ್ಲ. ಈ ಸುಳ್ಳಿನ ಸಾಗರದಲ್ಲಿ ಬಿದ್ದು ಕೈಸೋತು ಗತಿಗಾಣದೆ ಹೋಗುತ್ತಿರುವ ಈ ಹುಲ್ಲು ಮಾನವರನ್ನು ಏನೆಂಬೆನೊ ! ಮಗೂ ನೀನು ಮಾತ್ರ ಇದನ್ನು ನೆಚ್ಚಿ ಕೆಡಬೇಡವಪ್ಪಾ! ಇಷ್ಟೇ ನಿನಗೆ ಹರಕೆ !"

ಮಗು—" ಅವ್ವಾ ! ನಿನ್ನ ಮಾತಿನ ಅರ್ಥವೇ ಇದು ? 'ಇದೆಲ್ಲ ಸುಳ್ಳು' ಅನ್ನುತ್ತೀ. ಇದೆಲ್ಲ ಅಂದರೇನು ?

ತಾಯಿ—" ಇದೆಲ್ಲ ಅಂದರೆ ಈ ದೃಶ್ಯ ಜಗತ್ತೆಲ್ಲ."

ಮಗು—" ಜಗತ್ತೆಂದರೆ ಎಷ್ಟು ? ನಮ್ಮನ್ನು ಬಿಟ್ಟು ಜಗವುಂಟೆ ? ಚರಾಚರ ಕೋಟಿಯನ್ನೆಲ್ಲ ಕೂಡಿದ್ದೇ ಜಗವಲ್ಲವೇ ? ಚರಾಚರ ಕೋಟಿಯೆಲ್ಲಾ ಸುಳ್ಳಾದರೆ ನೀನೂ ನಾನೂ ಸುಳ್ಳೇ ಸುಳ್ಳಾಗಿರಬೇಕಷ್ಟೇ ? ನೀನೂ ಸುಳ್ಳಾದರೆ ನಿನ್ನ ಮಾತೂ ಸುಳ್ಳು. ನಾನು ಸುಳ್ಳಾದರೆ ನೀನು ನನಗೆ ಹೇಳುವದೂ ವ್ಯರ್ಥ. ಸತ್ಯವೆಂದರೆ ಇದ್ದದ್ದು. ಅ-ಸತ್ಯವೆಂದರೆ ಇಲ್ಲದ್ದು. ನಾನು ಸುಳ್ಳಾದರೆ—ಏನೂ ಇಲ್ಲದಂತಾದದ್ದಾದರೆ—ಏನೂ ಇಲ್ಲದಲ್ಲಿ ಬರಿಬಯಲಲ್ಲಿ. ನೀನು ಎಷ್ಟು ಕಷ್ಟಬಟ್ಟು ಹೇಳಿದರೂ ವ್ಯರ್ಥ. ಏನೂ ಇಲ್ಲದ್ದು ಇಲ್ಲವೇ ಇಲ್ಲ. ಇಲ್ಲದ್ದು ಇರುವುದು ಶಕ್ಯವೇ ಇಲ್ಲ. ಇಲ್ಲದ್ದು ಕೆಡಲೂ ಆರದು. ಒಳ್ಳೆಯದಾಗಲೂ ಆರದು. ಇದ್ದದ್ದೇ ಕೆಟ್ಟೀತು. ಇದ್ದದ್ದೇ ಒಳ್ಳೆಯದಾದೀತು. ಇಲ್ಲದ್ದು ಇಲ್ಲೇ ಇಲ್ಲ. ಇದ್ದದ್ದೇ ಸ್ಥಿತ್ಯಂತರಗಳನ್ನು ಹೊಂದೀತು. ಆದ್ದರಿಂದ ಏನೂ ಇಲ್ಲದ ಈ ಜಗದ ಜನರು ಗತಿಗಾಣದೆ ಬಳಲುತ್ತಿರುವರೆಂದು ಚಿಂತಿಸುವದು ಯಾತಕ್ಕೆ? ಜಗವೇ ಸುಳ್ಳಾದರೆ ಅದು ಕೆಡುವುದೂ ಸುಳ್ಳು. ದಾರಿ ತಪ್ಪುವದೂ ಸುಳ್ಳು. ನೀನು ಹೇಳುವದೂ ಸುಳ್ಳು. ನಾನು ಕೇಳುವದೂ ಸುಳ್ಳು."

ತಾಯಿ—"ಮಗೂ! ನಿನಗೀ ಕನಸಿನ ಜಗವಿನ್ನು ದಿಟವಾಗಿಯೇ ತೋರುವದು. ನಿನ್ನ ತಪ್ಪಲ್ಲ. ಮಾಯಾಜಾಲ."

ಮಗು—"ಅಮ್ಮಾ ಹೀಗೆಂದರೇನು ? ಕನಸು ಸುಳ್ಳೆಂಬುದನ್ನು ಎಲ್ಲರೂ ಕಂಡದ್ದುಂಟು. ನಿನ್ನಂತೆ ಜಗ ಸುಳ್ಳೆಂದು ಕಂಡವರು ಎಷ್ಟು ಜನರೊ? ಕನಸು ಸುಳ್ಳಾಗಿ ಕಾಣಲಿಕ್ಕೆ ಇನ್ನೊಬ್ಬರ ಹೇಳಿಕೆಯು ಅಗತ್ಯವಿಲ್ಲವಷ್ಟೇ? ಜಗವು ಸುಳ್ಳಾಗಲಿಕ್ಕೆಮಾತ್ರ

ಇನ್ನೊಬ್ಬರ ಹೇಳಿಕೆಯು ಅಗತ್ಯವೇಕೆ ? ಕನಸು ಸುಳ್ಳಾಗಿರುವದನ್ನು ಮನಗಂಡಂತೆ ಜಗವು ಸುಳ್ಳಾಗಿರುವುದನ್ನು ಮನಗಾಣುವದಾದರೆ ನಾನೂ ನಿನ್ನಂತೆ ಹೇಳೇನು. ನೀನು ಹೇಳುವದೆಲ್ಲಾ ಯಾತರ ಮೇಲಿಂದ ?

ತಾಯಿ—" ಸ್ವತಃದ ಅನುಭವದ ಮೇಲಿಂದ "

ಮಗು—"ಅನುಭವವೆಂಬುದು ನಿನಗೊಬ್ಬಳಿಗೆ ಮಾತ್ರವೆ ಇದೆಯಂತಲ್ಲ. ನಿನಗಿರುವಂತೆ ನನಗೂ ಇರಬೇಕಷ್ಟೇ ? ನಿನ್ನ ಅನುಭವವು ನಿನಗೆ ಎಷ್ಟು ಸತ್ಯವೋ ನನ್ನ ಅನುಭವವು ನನಗೆ ಅಷ್ಟೇ ಸತ್ಯ. "

ತಾಯಿ—" ನನ್ನ ಅನುಭವಕ್ಕೆ ಶಾಸ್ತ್ರಗಳ ಒಪ್ಪಿಗೆ ಅದೆ. ನಿನ್ನ ಅನುಭವಕ್ಕೆ ಎಲ್ಲಿಯ ನೆಲೆ ? "

ಮಗು—" ಇದೇನೇ ಅವ್ವಾ ! ತುದಿಮೊದಲಿಲ್ಲದ ಇಂಥಾ ಅಘಾಟ ವಿಶ್ವವನ್ನೆಲ್ಲ ಸುಳ್ಳೆಂದು ಸ್ವಾನುಭವದಿಂದ ಹೇಳುವವಳು. ಶಾಸ್ತ್ರಗಳನ್ನು ಸತ್ಯವೆಂದು ಹೇಗೆ ಹೇಳುತ್ತೀಯೆ ? ನಿನ್ನ ಶಾಸ್ತ್ರಗಳನ್ನು ಹೇಳಿದವರೂ ನಮ್ಮಂಥ ಮಾನವರೇ. ಅವರು ನಮಗಿಂತ ಸಾವಿರಾರು ಮಡಿ ದೊಡ್ಡವರಿರಬಹುದಾಗಲಿ ನಿನ್ನ ಅಭಿಪ್ರಾಯದಂತೆ ಅವರೂ ಈ ಜಗದಲ್ಲಿ ಹುಟ್ಟಿ ಬೆಳೆದು ಮಿಥ್ಯಾಮಾನವರೇ ಎಂಬುದು ನಿಸ್ಸಂಶಯ ಎಲ್ಲಾ ಸುಳ್ಳೇ ಆಗಿರುವಾಗ ಅವರ ನುಡಿಗಳಷ್ಟೇ ಹೇಗೆ ಸತ್ಯವಾದವು ? ಮುಗಿಲುದ್ದ ಜಗವನ್ನು-ಇಲ್ಲೇ ಇಲ್ಲವೆಂದು-ಹೇಳುವ ಕಣ್ಣಿಗೆ ಗೇಣುದ್ದ ಗ್ರಂಥವು ಹೇಗೆ ಕಾಣಿಸಿತೆ ? "

ತಾಯಿ—" ಹೌದು ! ನಿಜವಾಗಿ ನೋಡಿದರೆ ಅವೂ ಸುಳ್ಳೇ. "

ಮಗು—" ನಿಜವಾಗಿ ನೋಡುವದೊಂದು ಬೇರೆ. ಸುಳ್ಳಾಗಿ ಸುಮ್ಮಸುಮ್ಮನೆ ನೋಡುವುದೊಂದು ಬೇರೆ. ನೀನು ನೋಡುವುದಾದರೂ ಎಷ್ಟು ಬಗೆಯಿಂದ.

ತಾಯಿ—"ತತ್ವದ ತಮ್ಮಾ! ತತ್ವದ ಮಾತು ಬಹಳಗಹನ. ನಿನ್ನ ಚಿಕ್ಕ ಬುದ್ಧಿಗೆ ಅದು ಹೇಗೆ ನಿಲುಕೀತು? "

ಮಗು—"ಅವ್ವಾ! ಹೀಗೆ ಹೇಳಿದರೇನು? ಇದು ಸರಿಯಾದ ಸಮಾಧಾನವಲ್ಲ ನೀನೇ ನೋಡು. ಎಲ್ಲಾ ಸುಳ್ಳಾದರೆ ಉಣ್ಣುವದೇಕೆ ? ತಿನ್ನುವುದೇಕೆ? ಉಸುರಾಡಿಸುವದೇಕೆ? ಗುರುವೇಕೆ ಶಿಷ್ಯನೇಕೆ ಹೇಳುವುದೇಕೆ? ಕೇಳುವದೇಕೆ? "

ತಾಯಿ—"ಇದೆಲ್ಲಾ ಶರೀರಧರ್ಮ. ಅದು ನಡೆಯಲೇಬೇಕು."

ಮಗು—"ಇದೇನವ್ವಾ! ಶರೀರವೇ ಮೊದಲು ಸುಳ್ಳು. ಅದು ಇಲ್ಲೇ ಇಲ್ಲ. ಅಂದ ಬಳಿಕ ಇಲ್ಲದ್ದಕ್ಕೆ ಧರ್ಮವೆಲ್ಲಿಯದು? ಕರ್ಮವೆಲ್ಲಿ? ಇಲ್ಲದ್ದು ಇಲ್ಲೇ ಇಲ್ಲ. ಶರೀರಕ್ಕೆ ಶರೀರಧರ್ಮವು ಅದನ್ನಗಲದ ನೆರಳಿನಂತೆ ಸರಿ. ಶರೀರವೇ ಇಲ್ಲದಿರುವಾಗ ಅದಕ್ಕೆ ನೆರಳೆಲ್ಲಿಯದು? ಇದ್ದದ್ದಕ್ಕೆ ನೆರಳಿದ್ದೀತು. ಇಲ್ಲದ್ದಕ್ಕೆ ಇರುವುದುಂಟೇ? ಇದರಲಿ

ಬಿಡು. ನೀನು ಹೇಳುವಮಾತು—ಹಿಂದೆ ಎಷ್ಟೋ ಜನರು ಹೇಳಿರಬೇಕಷ್ಟೇ! ನಿನ್ನಂತೆ ಹೇಳುವ ಶಾಸ್ತ್ರಗಳೆಷ್ಟೋ ಉಂಟೆಂದು ಹೇಳಿದೆಯಷ್ಟೇ!

ತಾಯಿ—“ಹೌದು! ಆರು ಶಾಸ್ತ್ರಗಳಲ್ಲಿ ವೇದಾಂತವೆಂಬುದೊಂದು ಶಾಸ್ತ್ರವುಂಟು. ಶಂಕರಾಚಾರ್ಯರು ಮಾಯಾವಾದವನ್ನೂ ಅದ್ವೈತ ತತ್ವವನ್ನೂ ಜಗಕ್ಕೆಲ್ಲ ತಿಳಿಪಡಿಸಿದರು. ಇದಕ್ಕಾಗಿಯೇ ಶ್ರೀ ವಿದ್ಯಾರಣ್ಯಸ್ವಾಮಿಗಳು ಪಂಚದಶೀ ಗ್ರಂಥವನ್ನು ಬರೆದರು. ನಿಜಗುಣ ಶಿವಯೋಗಿಗಳೂ ಸಪ್ಪಣ್ಣಪ್ಪನವರೂ ಕೈವಲ್ಯವನ್ನು ಹಾಡಿದರು. ಇಂಥವರೆಲ್ಲಾ ಹೀಗೆಯೇ ಹೇಳಿದ್ದಾರೆ. ಆದರೆ ನಿನಗೆ ಮಾತ್ರ ಎಷ್ಟು ಹೇಳಿದರೂ ತಿಳಿಯಲೊಲ್ಲದು!”

ಮಗು—“ತಾಯೀ! ಯಾಕೆ ಇವರೆಲ್ಲಾ ಗ್ರಂಥಾದಿಗಳನ್ನು ಬರೆದರು?”

ತಾಯಿ—“ಮಾಯಾಪ್ರಪಂಚದಲ್ಲಿ ಮುಳುಗಿ ನೆರಳುವ ಪಾಮರರ ಗೋಳನ್ನು ಕಂಡು ಮರುಗಿ ಇಂಥ ಅಜ್ಞಾನಿಗಳೆಲ್ಲ ಜ್ಞಾನವನ್ನು ಪಡೆದು ಉದ್ಧಾರವಾಗಲೆಂದೇ ಅಂಥ ಮಹಾತ್ಮರೆಲ್ಲಾ ತಮ್ಮ ದಿವ್ಯವಚನಾಮೃತವನ್ನು ಗ್ರಂಥವೆಂಬ ಪಾತ್ರೆಯಲ್ಲಿ ತುಂಬಿಬಿಟ್ಟರು. ಲೋಕೋದ್ಧಾರಕ್ಕಲ್ಲದೆ ಇನ್ಯಾತಕ್ಕದನ್ನು ಬರೆದಾರು?”

ಮಗು—“ಲೋಕವೇ ಮೊದಲು ಸುಳ್ಳು. ಸುಳ್ಳು ಲೋಕದ ಹಂಗು ಇವರಿಗೇನು? ತನ್ನತಾ ತಿಳಿದರೆ ಸಾಕೆನ್ನುವವರಿಗೆ ಇದರದೆಲ್ಲಾ ಹೊಣೆಯೇನು? ತನ್ನತಾತಿಳಿದು ತಾನೇ ಬ್ರಹ್ಮನೆಂದು “ಅಹಂಬ್ರಹ್ಮಾಸ್ಮಿಂ” ಎಂದು ಎನೆಯ ಮೇಲೆ ಕೈತಟ್ಟಿ ಹೇಳುವವನು ತನ್ನನ್ನು ಸತ್ಯವೆಂದು ತಿಳಿದಿರಲಾರನೇ? ತನ್ನನ್ನು ತಾ ಸತ್ಯವೆಂದು ತಿಳಿದಿರುವಂತೆ ಎಲ್ಲರೂ ತಮ್ಮ ಮಟ್ಟಿಗೆ ತಾವು ಸತ್ಯವಾಗಿಯೇ ಇರಬೇಕಷ್ಟೇ? ಅಂದಬಳಿಕ ತನ್ನಂತೆ ಎಲ್ಲರೂ ಸತ್ಯ. ಎಲ್ಲವೂ ಸತ್ಯ. ಅಂತೆಯೆ ವಚನಕಾರರು “ತಾ ಸತ್ಯವಾದಡೆ ಜಗವೆಲ್ಲ ಸತ್ಯ. ತಾ ಮಿಥ್ಯವಾದಡೆ ಜಗವೆಲ್ಲ ಮಿಥ್ಯ” ಎಂದರು. ಎಲ್ಲಾ ಸುಳ್ಳೇ ಆದರೆ ಪಂಚದಶೀ ಮಹಾಗ್ರಂಥವನ್ನು ಬರೆದ ಶ್ರೀ ವಿದ್ಯಾರಣ್ಯ ಸ್ವಾಮಿಗಳು ತುರುಕರಿಂದ ಹಿಂದೂ ಧರ್ಮವನ್ನು ರಕ್ಷಿಸುವದಕ್ಕಾಗಿ ಹೊಸ ರಾಜ್ಯವನ್ನು ಸ್ಥಾಪಿಸಿ ಸನ್ಯಾಸಿಗಳಾದ ತಾವು ಮಂತ್ರಿಗಳಾದದ್ದೇಕೆ? ಬೌದ್ಧ ಧರ್ಮದ ಪ್ರಾಬಲ್ಯದಿಂದ ಮುಳುಗಿ ಮಣ್ಣುಗೂಡಿ ಹೋಗಲಿಕ್ಕಿದ್ದ ವೈದಿಕ ಧರ್ಮವನ್ನು ಪುನರುಜ್ಜೀವನಗೊಳಿಸುವದಕ್ಕಾಗಿ ಶ್ರೀ ಶಂಕರಾಚಾರ್ಯರು ಅಷ್ಟೊಂದು ಚಿಕ್ಕವಯಸ್ಸಿನಲ್ಲಿ ಭರತಖಂಡವನ್ನೆಲ್ಲ ಸುತ್ತುವರಿದು ದಿಗ್ವಿಜಯವನ್ನು ಮಾಡಿದುದೇತಕ್ಕೆ? ಮಿಥ್ಯಾ ಜಗತ್ತು ಯಾವ ತಿಪ್ಪೆಯಲ್ಲಿ ಹಾಳಾದ ಭಾಗ್ಯ ಇವರಿಗೇನು?”

ತಾಯಿ—“ಅವರು ಹಾಗೆ ಮಾಡಿದರೆಂಬುದೂ ಮಾಯೆಯಿಂದ ದಿಟವಂತೆ ಕಾಣುವ ಮಾಟವೇ ಸರಿ. ನಿಜವಾಗಿಯೂ ಅವರು ಅದನ್ನೇನೂ ಮಾಡಲೇ ಇಲ್ಲ. ಎಲ್ಲಾ ಮಾಯಾಜಾಲ!”

ಮಗು—"ಇದೀಗ ಒಳ್ಳೇ ಮಾತು! ಅವರು ಮಾಡಿದ್ದೂ ಸುಳ್ಳು. ಹೇಳಿದ್ದೂ ಸುಳ್ಳು. ಇದ್ದದ್ದಾದರೂ ಸುಳ್ಳೇ ಆಗಿರಲಾರದೇಕೆ? ಎಲ್ಲಾ ಸುಳ್ಳೇ ಸುಳ್ಳಾದರೆ ಇಂಥ ಸುಳ್ಳರ ಬೆನ್ನು ಹತ್ತುವದೇಕೆ? ಎಲ್ಲಾ ಸುಳ್ಳಾದರೆ ನಾವು ಕೆಡುವುದೂ ಸುಳ್ಳು. ಇದೇನೇ ಅವ್ವಾ!

ತಾಯಿ—"ಹೌದು. ನೀನು ಕೊಡುವುದೂ ಸುಳ್ಳು."

ಮಗು—"ಹಾಗಾದರೆ, ನೀನು ನನಗೆ ಇಷ್ಟೊಂದು ಏಕೆ ಉಲಿಯುತ್ತೀ?"

ತಾಯಿ—"ಮಾಯೆಯಿಂದ ನಿನಗೆ ಹಾಗೆ ಅನಿಸುತ್ತದೆ. ನಾನು ಉಲಿಯುವದೂ ಸುಳ್ಳು.

ಮಗು—"ನಿನ್ನ ಮಾಯೆ ಮಾಯೆಯೆನ್ನುವ ಮಾತಿಗೆ ಮೆಚ್ಚಿ ನಾನು ನಿನ್ನನ್ನು ಪ್ರೀತಿಯಿಂದ ಒತ್ತಿ ಕಡಿಯುತ್ತೇನೆ. ಇಸ್ ಎನಬೇಡ ಯಾಕಂದರೆ ಅದೂ ಸುಳ್ಳು.

ತಾಯಿ—"ನಾನು ಇಸ್ ಅಂದಂತೆ ನಿನಗೆ ಮಾಯೆಯಿಂದ ·ಭಾಸವಾಗುವದು. ನಾನು ನೆರಳಿದರೂ ದಿಟವಲ್ಲ, ಕೇವಲ ಶರೀರಧರ್ಮ.

ಮಗು—"ಆ ನಿಜವಾದ ಮಾಯೆ ಇದುರಿಗೆ ಬಂದರೆ ಪಾರಾಗಬಹುದು. ಆದರೆ ನಿನ್ನ ಮಾತಿನ ಮಾಯೆ ಮಾತ್ರ ನನಗೆ ಅಗಾಧವಾಗಿದೆ!"

ತಾಯಿ—"ಅಲ್ಲೋ ನಿನಗೆನ್ನುವದೇನು!"

ಮಗು—"ನಾನೇನು ಮಾಡಲಿ! ನಿನ್ನ ಶಾಸ್ತ್ರಕಾರರೇ ಹೇಳಿದ್ದಾರೆ!"

ತಾಯಿ—ಏನು ?

ಮಗು—" ಶಂಕರಾಚಾರ್ಯ ಸ್ವಾಮಿಗಳು ಹೇಳಿದ್ದೇನಂದರೆ:—

'ಯದ್ಯತ್ಕರ್ಮಕರೋಮಿತತ್ತದಖಿಲಂ । ಶಂಭೋತವಾರಾಧನಂ ! ಇದರ ಅರ್ಥವೇನಂದರೆ—ಶಂಭೋ, ನಾನು ಮಾಡುತ್ತಿದ್ದುದೆಲ್ಲಾ ನಿನ್ನ ಸೇವೆಯೇ ಸರಿ. ಅಲ್ಲದೆ ಶ್ರೀ ವಿದ್ಯಾರಣ್ಯರವರು ತಮ್ಮ ಮಹಾ ಗ್ರಂಥವಾದ ಪಂಚದಶಿಯ ಕೊಟ್ಟ ಕೊನೆಗೆ ಹೇಳಿರುವದೇನಂದರೆ—'ಅನೇನ ಬ್ರಹ್ಮಾನಂದೇನ ಹರಿಹರಃ ಸರ್ವದಾ ಪ್ರಿಯಾತ್ ಚ ಸ್ವಾಶ್ರಿತಾನ್ ಶುದ್ಧ ಮಾನಸಾನ್ ಸರ್ವಾನ್ ಪ್ರಾಣಿನಾಂ ಪಾಯಾತ್' ಇದರ ಅರ್ಥವೇನಂದರೆ—'ಈ ಬ್ರಹ್ಮಾನಂದದಿಂದ ಹರಿಹರ( ರಾಜ )ನು ಯಾವಾಗಲೂ ಪ್ರೀತಿಯುಳ್ಳವನಾಗಿರಲಿ. ಹಾಗು ಆಶ್ರಿತರನ್ನೂ ಮಹಾತ್ಮರನ್ನೂ ಎಲ್ಲ ಪ್ರಾಣಿಗಳನ್ನೂ ಕಾಪಾಡುತ್ತಿರಲಿ."

ಜಗವೆಲ್ಲ ಸುಳ್ಳೇ ಆದರೆ. ರಾಜನು ಪ್ರಸನ್ನನಾಗಿ ಪ್ರಜೆಗಳನ್ನು ಚನ್ನಾಗಿ ಪರಿಪಾಲಿಸಿಕೊಂಡಿರಬೇಕಕ್ಕೆ? ಇಲ್ಲಿ ಹರಿಹರನೆಂದರೆ ಪರಮಾತ್ಮನೆಂದು ಒಂದು ಅರ್ಥವಾದರೂ ಸರಿ! ಪರಮಾತ್ಮನಿಗಾದರೂ ಇಷ್ಟೊಂದು ಜಗವನ್ನು ಪಾಲಿ

ಸಿಕೊಂಡಿರಬೇಕಾದ ಅಗತ್ಯವೇನೋ ? ಅಥವಾ ಈ ಮಹಾಸ್ವಾಮಿವರ್ಯ ರಿಗೆ ತಾವು ಹೇಳಿದ ಗ್ರಂಥಗಳಿಗೆ ಅರ್ಥವೇ ತಿಳಿದಿರಲಿಲ್ಲವೇ ? ”

ತಾಯಿ—ಒಂದೇ ಮಾತಿಗೆ ಎಷ್ಟೆಷ್ಟೋ ಅರ್ಥವಾಗುವದುಂಟು. ಅಂಥವರ ದಿವ್ಯ ವಾಕ್ಯಗಳಿಗೆ ನಿನಗೆಲ್ಲಾ ಅರ್ಥವಾಗಬಹುದೇ ? ನಿನಗೆ ತಿಳಿದಂತೆ ನೀನೇನೋ ಅರ್ಥ ಹೇಳುತ್ತೀ.

ಮಗು—“ಸರಿ! ನಿನ್ನ ಮಾತು ಬಹಳ ಚನ್ನಾಗಿದೆ. ನೋಡವ್ವಾ ಅಂಥಾ ಮಹಾತ್ಮರ ಮಹಾವಾಕ್ಯಗಳಿಗೆ ನನ್ನಂಥ ಪಾಮರನಿಗೆ ಸರಿಯಾಗಿ—ಅವರ ಮನಸಿನಲ್ಲಿದಂತೆ ಅರ್ಥವಾಗಲಿಕ್ಕಿಲ್ಲ. ಇದಕ್ಕೆ ನಾನೇನೋ ಒಪ್ಪುತ್ತೇನೆ. ಆದರೆ ನಿನಗಾದರೂ ಆ ಮಹಾ ವಾಕ್ಯಗಳಿಗೆ ಸರಿಯಾಗಿ ಅರ್ಥವಾಗಿರುವದಕ್ಕೆ ಪ್ರಮಾಣವೇನು ? ನನಗೂ ತಿಳಿಯದು. ಯಾರಿಗೂ ತಿಳಿಯದಂತೆ ಬರೆದು ಹೋದ ಆ ಪುಣ್ಯಾತ್ಮರುತಿರುಗಿ ನಮ್ಮ ತಂಟೆ ತೀರುವದಕ್ಕಾಗಿ ಈ ಭವಕ್ಕೆ ಬರಬೇಕಲ್ಲವೇ ಅಯ್ಯೋ ಇದೆಂಥಾ ಅನಾಹುತ ! ”

ತಾಯಿ— ಏನೋ ನಮ್ಮಪ್ಪಾ! ನೀನೇನು ಹೇಳಿದರೂ ನನಗೆ ನನ್ನದೇ ಸರಿಯಾಗಿ ತೋರುವುದು.

ಮಗು—“ ನನ್ನವ್ವಾ ! ನಿನ್ನ ತೊಡೆಯ ಮೇಲೆ ಎಷ್ಟು ಉರುಳಾಡಲೇ ! ನಿನ್ನ ಮಾತು ನನಗೆ ಜೇನು ತಿಂದಂತಾಯಿತು ನೋಡೇ ? ಏನು ಹೇಳಿದರೂ ನಿನಗೆ ನಿನ್ನದೇ ಹೇಗೆ ಸರಿದೋರುವದೋ ಹಾಗೆಯೇ ನನಗೂ ನೀನೇನು ಹೇಳಿದರೂ ನನ್ನದೇ ಸರಿದೋರುವದು. ನಿನ್ನದು ನಿನಗೆ ಸರಿ. ನನ್ನದು ನನಗೆ ಸರಿ. ಹೀಗಿದ್ದುದರಿಂದಲೇ ಈ ಲೋಕದಲ್ಲೆಲ್ಲಾ ಅನೇಕ ಪಂಥ ( ವರ್ಗ ) ಗಳುಮೈದೋರಿವೆ. ಯಾರ ಸ್ವಭಾವಕ್ಕೆ ಯಾವದೂ ಸರಿಹೋಗುವದೋ ಅದನ್ನೇ ಅವರು ನಂಬಿಕೊಂಡಿದ್ದರೆ ಮಾತ್ರಗತಿ. ಒಂದೊಂದು ಬಗೆಯು, ಹವೆ, ಅನ್ನಭೂಮಿ ಇರುವ ನಾಡುಗಳೆಲ್ಲೆಲ್ಲಾ ಅಲ್ಲಲ್ಲಿ ಬಾಳಲಿಕ್ಕೆ ತಕ್ಕವುಗಳಾದ ತನುಮನ ರಚನೆಯುಳ್ಳ ಪ್ರಾಣಿಗಳು ಹೇಗೆ ಹುಟ್ಟುತ್ತಿರುವುದುಂಟೋ ಹಾಗೆಯೇ ಒಂದೊಂದು ವಿಧದ ಸ್ವ—ಭಾವವುಳ್ಳವರುತಮಗೆ ತಕ್ಕದೊಂದು ಪಂಥದಲ್ಲಿರುವುದುಂಟು. ಅವರವರಿಗೆ ಅವರವರದೇ ಒಳಿತು. ಇನ್ನೊಂದು ಕೆಡಕಾಗಿ ಕಾಣಬಹುದು. ಆದರೆ ಅದು ತಮ್ಮ ಮಟ್ಟಿಗಲ್ಲದೆ ಆ ಇನ್ನೊಂದರಲ್ಲಿರುವವರಿಗಲ್ಲ. ಮುಂಬೈಯ ಹವೆಯು ವಿಜಾಪುರದವರಿಗೆ ಬಹಳ ಕೆಟ್ಟದಾಗಿರಬಹುದು. ಆದರೆ ಮುಂಬೈಯವರಿಗೆ ವಿಜಾಪುರದ ಹವೆಗಿಂತಲೂ ತಮ್ಮದೇ ಒಳಿತಾಗಿ ಕಾಣುವದು ಸಹಜ. ವಿಜಾಪುರದವರು ಬೈಯ್ಯುವತೆಂದ ಮಾತ್ರಕ್ಕೆ ಮುಂಬೈಯವರು ತಮ್ಮೂರ ಬಿಟ್ಟು, ವಿಜಾಪುರಕ್ಕೆ ಬಂದು ಎಷ್ಟು ಗತಿಗಾಣಬಹುದೋ? ಶ್ರೀ ಮಹಮ್ಮದ ಪೈಗಂಬರರು ಕೂಡ ತಾವು ಒಡನುಡಿದ ಕುರಾನಿನಲ್ಲಿ—“ಧರ್ಮವೆಲ್ಲಾ ಒಂದೇ ಆದರೆ, ಮತ (ಅಭಿಪ್ರಾಯ) ಭೇದದಿಂದ ಮತಗಳೆಷ್ಟೋ ಮೈದೋರಿದವು. ! ಭಗವಾನ್ ಶ್ರೀ ರಾಮಕೃಷ್ಣ ಪರಮಹಂಸರು ಜಗಕ್ಕೆ ಇದನ್ನೇ ತೋರಿಸಿಕೊಟ್ಟರಲ್ಲವೇ ?

ಅವ್ವಾ ನಿನ್ನದು ನಿನಗೇ ನನ್ನದು ನನಗೇ !!!

'ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।' ಜಗದಲ್ಲಿದ್ದು ದೆಷ್ಟೆಷ್ಟೋ ಅಷ್ಟೂ ಈಶನ ಮುಖವೆಂದು ಈಶಾವಾಸ್ಯೋಪನಿಷತ್ತಿನ ಶ್ರೀವಚನವುಂಟು. ಯತ್ಕರೋಸಿ ...... ಕೌಂತೇಯ ತತ್ಕುರುಷ್ವಮದರ್ಪಣಮ್।' (ಭಗೀ) ಮಾಡುವದ ನ್ನೆಲ್ಲಾ ನನಗೇ ನೀಡೆಂದು. ಭಗವಾನ್ ಶ್ರೀ ಶ್ರೀ ರಾಮಕೃಷ್ಣ ಪರಮಹಂಸರು ಪರಮಾ ತ್ಮಗೆಂದರು.

"ಅವ್ವಾ ! ಇದೆಲ್ಲಾ ಅಪೂರ್ವಲೀಲೆ."

—ಚೆನ್ನ.

---

## ಹಣ್ಣಿಗಾಗಿ ಹಂಬಲ.

'ಬರಲು ಬಯಸುವೆ ತಾಯೆ ! ಬನದವ್ವ ! ಬನಕೆ ।
ಹರಿಯಗೊಡೆಯೊಂದೆ ಹಣ್ಣನ್ನು ಸವಿಯಲಿಕ್ಕೆ ॥ ೧ ॥
ರಸವ ಸವಿದೊಡೆ ಹಸಿವು ಹಿಂಗುತಿರಬೇಕು ।
ಹೊಸರೂಪುಗೊಂಡೆನ್ನ ಬಗೆ ಮೆರೆಯಬೇಕು ॥ ೨ ॥
ಕಲ್ಲು-ಮುಳ್ಳುಗಳಿಂದಲಿಡಿಕಿರಿದ ಬಟ್ಟೆ ।
ಯಲ್ಲಿ ನಡೆಯಲು "ತಾಳಿಕೆಯು" ಮೊಚ್ಚೆತೊಟ್ಟೆ ॥ ೩ ॥
ಹೊರಗಣ್ಣುಗಳನರಳಿಸಲು ಕಾಣದಂತೆ ।
ತರುವಿನೆಲೆಗಳ ನಡುವೆ ಯಡಗಿರುವದಂತೆ ! ॥ ೪ ॥
ಒಳಗಣ್ಣನೊಂದನರಳಿಸಿ ನೋಳ್ಪುದನ್ನು ।
ತಿಳಿದುಕೊಂಡಿಹೆನಿಂದು ನೋಡದಿರೆನದನು ॥ ೫ ॥
ಹರಿಯಲ್ಕೆ ಹೋಗಲದು ನಿಲುಕದೆಂದರಿವೆ ।
"ಗುರು"ವಾದ ಬಿದಿರನದಕಾಗಿ ತಂದಿರುವೆ ॥ ೬ ॥
ಉಗಿದಗಿಯೆ ಹಗುರಿರದಿರಲು ಹೆದರೆನಮ್ಮಾ ! ।
ಒಗೆಯೆ ಮೇಲ್ಮೈಸುಲಿದು ಇನಿದೆನಿತದಮ್ಮಾ ! ॥ ೭ ॥
ಹೊರಗಿದ್ದು ನಿಲುಕಲಿಕೆ ಸುಲಭವಾಗಿರುವ ।
ಸರಳದೋಟೆಯ ಹಣ್ಣುಗಳನು ನಾನರಿವೆ ॥ ೮ ॥
ಒಲ್ಲೆನಂತಹ ತೋರಿಕೆಯ ಹಣ್ಣನೊಲ್ಲೆ ! ।
ಬಲ್ಲೆನದರೊಳಗೆ ಕಹಿರಸವು ತುಂಬಿಲ್ಲೇ ? ॥ ೯ ॥
ಪಿಂತೊರೆದ ತನಿವಣ್ಣ ತಿರುಳ ಸವಿದಿರುವ ।
ಸಂತನತಿ ಸಂತಸದಿ ಸಂತತದಲಿರುವ ॥ ೧೦ ॥

—ಬೆ. ದ. (ನವಲಗುಂದದ ಗೆಳೆಯರಿಂದ)

---

# ಸಮಾಜವೂ ದುಷ್ಕರ್ಮಗಳೂ.

ಬರಹಗಾರ: — "ಪ್ರಸಾದ"

ಸಮಾಜವೆಂದರೇನು? ಯಾವದು ಸಮಾಜವೆನ್ನಿಸಿಕೊಳ್ಳುತ್ತದೆ ? ನಾಲ್ಕು ಮಂದಿ ಕೂಡಿದಲ್ಲಿ ಒಂದು ಗುಂಪು. ಇಂಥ ಎಷ್ಟೋ ಗುಂಪುಗಳು ಕೂಡಿ ಒಂದು ಸಮಾಜವಾಗುತ್ತದೆ. ಒಂದೇ ಧರ್ಮವಾಗಲಿ, ಕೆಲವು ತತ್ವಗಳಾಗಲಿ, ಇಂಥ ಸಮಾಜಗಳ ಆಧಾರಸ್ತಂಭಗಳಾಗಿರುತ್ತವೆ. ಒಂದೇ ಧರ್ಮದ ಬಂಧನವೇ ಸಾಧಾರಣವಾಗಿ ಇಂಥ ಸಮಾಜಗಳ ತಳಹದಿಯಾಗಿರುತ್ತದೆ. ಹಿಂದುಸ್ಥಾನದಲ್ಲಿ ಸದ್ಯಕ್ಕೆ ಹಿಂದೂ, ಪಾರಸೀ, ಮುಸಲ್ಮಾನ, ಜೈನ, ಬೌದ್ಧ ಮುಂತಾದ ಎಷ್ಟೋ ಸಮಾಜಗಳಿರುತ್ತವೆ.

ಪ್ರತಿಯೊಂದು ಸಮಾಜವು ತಮ್ಮ ತಮ್ಮ ಸ್ವಸಂರಕ್ಷಣೆಗೋಸ್ಕರ ಹಲವು ಕಾಯಿದೆ, ಕಟ್ಟಳೆಗಳನ್ನು ಮಾಡಿರುತ್ತದೆ. ಈ ಕಟ್ಟಳೆಗಳನ್ನು ಮುರಿಯುವದೆಂದರೆ ಆಯಾ ಸಮಾಜಕ್ಕೆ ಹಾನಿತಟ್ಟಿಸಿದಂತೆ. ಅವುಗಳ ವಿರುದ್ಧವಾಗಿ ಆಚರಿಸುವದೇ ದುಷ್ಕರ್ಮವು (Crime). ಅಂತೂ ದುಷ್ಕರ್ಮದ ಸಾಧಾರಣವಾದ ವ್ಯಾಖ್ಯೆಯೆಂದರೆ ಸಮಾಜಕ್ಕೆ ವಿರುದ್ಧವಾದ ತಪ್ಪು ಆಚರಣೆಯೆಂದಾಗುತ್ತದೆ. ಇನ್ನು ಅದರ ನಿಜವಾದ ವ್ಯಾಖ್ಯೆಯನ್ನು ಮಾಡುವದು ಬಲು ಕಠಿಣ, ಯಾಕಂದರೆ ಸಮಾಜದ ಕಟ್ಟಳೆಗಳು, ನಿಯಮಗಳು ಕಾಲಾನುಸಾರವಾಗಿ ಬದಲಾವಣೆಯನ್ನು ಹೊಂದುತ್ತ ಬಂದಿರುವವು. ಹಿಂದೂ ಸಮಾಜದ ನಿಯಮಗಳು ಮುಸಲ್ಮಾನರಿಗೆ ಅಸಮ್ಮತ. ಪಾರಸೀಯರ ನಿಯಮಗಳು ಕ್ರಿಸ್ತರಿಗೆ ಅಸಮ್ಮತ. ಹೀಗಾಗಿ ಮ್ಲೇಂಛ, ಕಾಫರ, ಪೇಗನ್, ಶೂದ್ರ, ಅಸ್ಪೃಶ್ಯ, ಬ್ರಾಹ್ಮಣೇತರ ಮುಂತಾದವೆಷ್ಟೋ ಶಬ್ದಗಳು, ಮನುಷ್ಯ ಜೀವನದ ವಿಪರೀತ ಕಲ್ಪನೆಯಿಂದ ಹುಟ್ಟಿರುತ್ತವೆ. ಅದರಂತೆಯೇ ದುಷ್ಕರ್ಮದ ವ್ಯಾಖ್ಯೆಯಾದರೂ, ಬೇರೆ ಬೇರೆ ರೂಪಗಳನ್ನು ಹೊಂದಿದ್ದು ಕಂಡುಬರುತ್ತದೆ. ಒಬ್ಬರು ಒಂದಕ್ಕೆ ದುಷ್ಕರ್ಮವೆಂದರೆ, ಇನ್ನೊಬ್ಬರು ಅದಕ್ಕೇ ಸುಕರ್ಮವೆನ್ನುತ್ತಾರೆ. ಹಿಂದುಸ್ಥಾನದಲ್ಲಿ ಒಂದು ಕೃತಿಯು ತಪ್ಪಾದರೆ, ಅದೇ ಬೇರೆ ದೇಶಗಳಲ್ಲಿ ಒಪ್ಪಾಗುತ್ತದೆ. ಒಂದು ಕಾಲದಲ್ಲಿ ಒಂದಕ್ಕೆ ಸುಕೃತಿಯೆಂದರೆ ಇನ್ನೊಂದು ಕಾಲದಲ್ಲಿ ಅದಕ್ಕೇ ದುಷ್ಕೃತಿಯೆಂದೆನ್ನುತ್ತಾರೆ. ಹಿಂದೆ ವೀರರ ಲಕ್ಷಣಗಳಾದ ಮಲ್ಲಯುದ್ಧಗಳು ಈಗ್ಗೆ ಕಟಕರು ಮಾಡುವ ಹಿಂಸೆಯೆನಿಸಲ್ಪಡುತ್ತವೆ. ಹಿಂದೆ ಸತಿಯರ ಸಹಗಮನವು ಗರ್ತಿಯ ಲಕ್ಷಣವಾಗಿದ್ದರೆ, ಅದು ಈಗ್ಗೆ ಆತ್ಮಘಾತಕಿಯ ಕುರುಹಾಗಿರುತ್ತದೆ. ಬೌದ್ಧರಿಗೆ ಹಿಂಸೆಯು ಪಾಪಕರವೆನಿಸಿದರೆ ಆಂಗ್ಲರಿಗೆ ಅದೊಂದು ಕುಶಲ ಕರ್ಮವೆನಿಸುತ್ತದೆ. ಅಂತೇ ಅವರಿಗೆ Hunting is an art. ಬೇಟೆಯೊಂದು ವಿನೋದ. ಪಾಪವೆಂದೆನಿಸಿಕೊಳ್ಳಲ್ಪಟ್ಟ ಅಸ್ಪೃಶ್ಯತೆಯು ಈಗ್ಗೆ ರಾಷ್ಟ್ರದ ಏಳ್ಗೆಯ ಮೂಲ ಆಧಾರಸ್ತಂಭವಾಗಿದೆ. ಹೀಗಾಗಿ ದುಷ್ಕರ್ಮದ ನಿಜವಾದ ವ್ಯಾಖ್ಯೆಯೇ ಸಿಗದಾಗಿದೆ. ದೇಶಕಾಲ ಪರಿಸ್ಥಿತಿಗನುಸರಿಸಿದ ವ್ಯಾಖ್ಯೆಗಳು

ಹೆಚ್ಚೇ ಹೊರ್ತು ನಿಜವಾದ, ಪೂರ್ವಾಪರ ಸಂಬಂಧವಿದ್ದ ವ್ಯಾಖ್ಯೆಯಂತೂ, ಇತಿಹಾಸದಿಂದ ಕಾಣುವದು ಅಶಕ್ಯವಾಗಿದೆ.

ಸಮಾಜದ ನಡತೆಗಳನ್ನು ಬಿಡುವದು ಅಥವಾ ಮುರಿಯುವದು ದುಷ್ಕೃತಿಯೆಂದೆನ್ನಿಸಿಕೊಳ್ಳಲ್ಪಡುತ್ತದೆ. ಆದರೆ ಸಮಾಜದ ಯಾವ ನಡತೆಯನ್ನು ಎಷ್ಟು ಮುರಿದರೆ ಅದು ದುಷ್ಕೃತಿಯಲ್ಲಿ ಪರಿಣಮಿಸುವದು ? ಸಮಾಜದ ಮತ್ತು ಅದರ ಕಟ್ಟಳೆಗಳ ತಿರಸ್ಕಾರಕ್ಕೆ ತುತ್ತಾದ ಎಷ್ಟೋ ಕುಕರ್ಮಗಳು ಈ ದುಷ್ಕೃತಿಯು ಕಲೆಗಳಾದಾಗ್ಯೂ ಕೂಡ ದುಷ್ಕೃತಿಯೆಂದೆನ್ನಿಸಿಕೊಳ್ಳುವದಿಲ್ಲ. ಒಬ್ಬರ ಮನಸು ಮುರಿಯುವದು ಇನ್ನೊಬ್ಬರ ಹೃದಯ ಮರ್ಮಚ್ಛೇದ ಮಾಡುವದು, ಬೇರೊಬ್ಬರ ಮನಸು ನೋಯಿಸುವದು, ಮುಂತಾದ ಕೆಲವು ಕರ್ಮಗಳು ಅಪರಾಧಗಳಾದಾಗ್ಯೂ ಅವು ದುಷ್ಕೃತಿಗಳೆಂದೆನಿಸಲಾರವು. ಆದ್ದರಿಂದ ಅಪರಾಧವು ಯಾವ ಹದ್ದನ್ನು ಅಥವಾ ಮೇರೆಯನ್ನು ದಾಟದರೆ ದುಷ್ಕೃತಿಯಾಗುವದೆಂಬದನ್ನು ಸಾಧಾರಣವಾಗಿಯೂ, ಸರಿಯಾಗಿಯೂ ನಿರ್ಣಯಿಸುವದು ತೀರ ಅಶಕ್ಯ. ಯಾಕಂದರೆ ಮಾನವನ ಎಷ್ಟೋ ಅತಿ ಘೋರ ತಪ್ಪು ಕೆಲಸಗಳ ವಿಷಯದಲ್ಲಿಯೇ ನಾನಾ ದೇಶ, ಕಾಲ, ಬಣಗಳಲ್ಲಿ ಮತಭೇದಗಳಿರುತ್ತವೆ. ಅದೇಕೆ ಮನುಷ್ಯಜೀವನದ ಎಷ್ಟೋ ತಪ್ಪು ಕಲ್ಪನೆಗಳೇ ನಮ್ಮನ್ನು ಅಡ್ಡ ಹಾದಿಗೆ ಒಯ್ದಿರುತ್ತವೆ. ಉದಾಹರಣಾರ್ಥವಾಗಿ: —

यावजीवेत् सुखं जीवेत् । ऋणंकृत्वा घृतंपिबेत् ॥

ಎಂಬ ಜೀವನದ ತಪ್ಪು ಕಲ್ಪನೆಯು ಎಷ್ಟು ಅಪರಾಧಗಳ, ಕುಕರ್ಮಗಳ ತವರು ಮನೆಯಾಗಿಲ್ಲ ? ಒಬ್ಬರು ಪ್ರಾಣವನ್ನು ಹಿಂಸಿಸಬೇಡೆಂದು ಹೇಳಿದರೆ ಇನ್ನೊಬ್ಬರು ಪ್ರಾಣ ತೆಗೆದುಕೊಳ್ಳುವದರಲ್ಲಿಯೇ ತಮ್ಮ ಮೋಕ್ಷವಿದೆಯೆಂದು ತಿಳಿಯುತ್ತಾರೆ. ಹೀಗಾಗಿ, ದೇಶ ಮಾನಗಳ ವಿಭಾಗಗಳು, ನಿಜವಾದ ದುಷ್ಕೃತಿಯ ವಿಶ್ವ ವ್ಯಾಖ್ಯೆಯನ್ನೇ ಕಣ್ಮರೆಮಾಡಿರುತ್ತವೆ.

ಸ್ವತಂತ್ರವಾಗಿ ವಿಚಾರ ಮಾಡುವದೊಂದು ದುಷ್ಕೃತಿಯೆಂದು ಒಂದಾನೊಂದು ಕಾಲಕ್ಕೆ ತಿಳಿಯಲಾಗುತ್ತಿತ್ತು. ಸುಧಾರಣೆಯ ಶಿಖರವನ್ನು ಮುಟ್ಟಿರುವೆವೆಂದು ತಿಳಿದುಕೊಳ್ಳುವ ರಾಷ್ಟ್ರಗಳಲ್ಲಿಯಂತೂ ಇದೊಂದು ಪ್ರತಿಕಾರವಿಲ್ಲದ ಗುಡ್ಡದಂಥ ತಪ್ಪೆಂದು ಎಣಿಸಲಾಗುತ್ತಿತ್ತು. ಭೂಮಿಯು ಸೂರ್ಯನ ಸುತ್ತಲೂ ತಿರುಗುತ್ತದೆಂದು ಅಂದದ್ದಕ್ಕೆ ಗ್ಯಾಲೀಲಿಯೋನಿಗೆ ಎದೆಯೊಡಿಕೆಯಿಂದ ಸಾಯಬೇಯಿತು ಕಂಡದ್ದನ್ನು ಕಂಡಹಾಗೆ ಹೇಳಿದ ಟಿಳಕರ ಗತಿಯೇನಾಯಿತು? ಕಂಡದ್ದನ್ನು ಕಂಡ ಹಾಗೆ ಹೇಳುವದಂತಿರಲಿ ನಮಗೆ ತಿಳಿದದ್ದನ್ನು ಮಾಡುವದಾದರೂ ಒಂದು ದೊಡ್ಡ ತಪ್ಪೇ ಆಗಿದ್ದಿತು. ರಾಷ್ಟ್ರಪುರುಷನಾದ ಶಿವಾಜಿ ಮಹಾರಾಜರ ಉತ್ಸವವನ್ನು ಮಾಡುವದೊಂದು ದೊಡ್ಡ ದುಷ್ಕೃತಿಯಾಗಿತ್ತು. ನಿಮ್ಮ ಮತಗಳಿಗೆ ನಮ್ಮ ಮತಗಳು ಒಪ್ಪದಿದ್ದರೆ ಅದೊಂದು

ತಪ್ಪೇ. ಮತಮತಗಳಲ್ಲಿಯ ಭೇದಗಳು ನರಕಕ್ಕೆ ಒಯ್ಯುವ ದೂತರೆಂದು ತಿಳಿಯಲ್ಪ ಡುವ ಕಾಲವಾದರೂ ಆಗಿಹೋಯಿತು. ಪಾಖಂಡ ಮತ, ರಾಜದ್ರೋಹ, ಅಧರ್ಮ ನುಡಿ, ಬಂಡುತನ, ಮತಗಳಲ್ಲಿಯ ಮತಾಂತರ ಸ್ವತಂತ್ರವಿಚಾರ, ಮುಂತಾದವುಗಳೆಲ್ಲ ದುಷ್ಕೃತಿಗಳೆಂದೆಣಿಸಲ್ಪಡುತ್ತಿದ್ದವು. ರಾಜರ ದುಷ್ಕೃತಿಗಳನ್ನು ನಿಲ್ಲಿಸಲಿಕ್ಕೆಂದು, ಅವರ ಕೆಟ್ಟ ನಡತೆಗಳ ವಿರುದ್ಧವಾಗಿ ಆಚರಿಸಿದರೆ ಅದೊಂದು ರಾಜದ್ರೋಹವಾಗಿ ಗಲ್ಲಿಗೆ ಹೋಗಬೇಕಾಗುತ್ತಿತ್ತು. ನಮ್ಮ ಮತಗಳಲ್ಲಿಯ ಕೆಲವು ಮಾತುಗಳು ನಮಗೆ ಒಪ್ಪದಿ ದ್ದರೆ ನಾವು ಅಧರ್ಮಿಗಳಾಗುತ್ತೇವೆ. ಜೀವಿಗಳಲ್ಲಿ ಸಾತ್ವಿಕ, ರಾಜಸಿಕ, ತಾಮಸಿಕವೆಂಬ ಮೂರು ಭೇದಗಳಿಲ್ಲೆಂದು ಪ್ರತಿಪಾದಿಸುವ ವೈಷ್ಣವನು ಅಧರ್ಮಗಾಮಿಯಾಗುವನಂತೆ. ತಮ್ಮ ನಷ್ಟ ಸ್ವಾತಂತ್ರ್ಯವನ್ನು ಪುನಃ ಸ್ಥಾಪಿಸಬೇಕೆಂದು ಹೆಣಗಾಡಿದ ಸಿಪಾಯರು ಬಂಡುಖೋರರೆಂದು ಅನ್ನಿಸಿಕೊಂಡು ಸಾಯಬೇಕಾಯಿತು. ಅವರ ಆ ಪ್ರಯತ್ನವು ಶಿಪಾಯಿಗಳ ಬಂಡು (Sepoy Mutiny) ಎಂದು ಕೂಗಲ್ಪಟ್ಟಿತು. (Science) ಶಾಸ್ತ್ರೀಯ ವಿಷಯವು ಒಂದಾನೊಂದು ಕಾಲಕ್ಕೆ ಮುರಿಬಡಿಯಲ್ಪಟ್ಟಿತ್ತು. ಅದಕ್ಕೆ ಈಗಿದ್ದ ಮಾನದಷ್ಟು, ಹಿಂದಿನ ಕಾಲದಲ್ಲಿ ಅವಮಾನವಿದ್ದಿತು. ಗಿಡಕ್ಕೆ ಜೀವವಿದೆಯೆಂದು ಅನ್ನುವ ಜಗದೀಶಚಂದ್ರರವರೇ ನೂರಾರು ವರ್ಷಗಳ ಹಿಂದೆ ಹುಟ್ಟಿದ್ದರೆ, ಅವರ ಆ ತತ್ವವೂ, ಅವರೂ, ಕೂಡಿಯೇ ಹೇಳಹೆಸರಿಲ್ಲದಂತೆ ಹೋಗಬೇಕಾಗುತ್ತಿತ್ತು. ಮಾತೃ ಭೂಮಿಯ ಮೇಲೆ ಹಾಡಿದರೆ ರಾಜದ್ರೋಹಿಯ ಕಲಮಂತೆ. ಅದೇಕೆ, ಕ್ರೈಸ್ತ ಮತ ವನ್ನು ಸ್ಥಾಪಿಸಿದ ಯೇಸೂಕ್ರಿಸ್ತನಿಗೇ ಕಡೆಗೆ ಗಲ್ಲಿಗೆ ಹೋಗಬೇಕಾಯಿತು. ಇವೆ ಲ್ಲವುಗಳು ದುಷ್ಕೃತಿಗಳೋ? ಅಂತೂ ದುಷ್ಕೃತಿಯ ನಿಜವಾದ ಅರ್ಥವನ್ನು ಇತಿಹಾಸ ವೇನೂ ನಮಗೆ ಕೊಡದು. ಯಾಕಂದರೆ ಅದರ ಅರ್ಥವು ಹೊಸ ಜನರು ಬಂದಂತೆ ಹೊಸ ಹೊಸ ಅರ್ಥದ ರೂಪಗಳನ್ನು ಹೊಂದುತ್ತ ಬಂದಿರುವದು. ನಮ್ಮ ರೀತಿ, ನಡತೆ, ಮತ, ಕಾಯಿದೆಗಳ ಬದಲಾವಣೆಗಳು ದುಷ್ಕೃತಿಯ ವ್ಯಾಖ್ಯೆಯನ್ನು ಸಂಪೂ ರ್ಣವಾಗಿ ಬದಲು ಮಾಡಿರುತ್ತವೆ. ಆದ್ದರಿಂದ ದುಷ್ಕೃತಿಯ ಸರಿಯಾದ ವ್ಯಾಖ್ಯೆ ಯನ್ನು ಯಾವ ಒಗೆಗಲ್ಲುಗಳ ಮೇಲಿಂದ ಕಟ್ಟಬೇಕೆಂಬದನ್ನು ನಿರ್ಣಯಿಸುವದು ಬಹಳೇ ಕಠಿಣ

ಇನ್ನು ಜನರು ದುರ್ಮಾರ್ಗಿಗಳು ಹೇಗಾಗುತ್ತಾರೆಂಬ ಮಾತಿನ ಕಡೆಗೆ ತುಸು ಲಕ್ಷ್ಯಗೊಡುವ. ಕೆಟ್ಟ ಕೆಲಸ ಮಾಡುವದೊಂದು ಜೀವಿಗಳ ಹುಟ್ಟುಗುಣವಾಗಿರದೆ, ಅದೊಂದು ಪರಿಸ್ಥಿತಿಯ ಪರಿವಾರವೆಂಬುವದು ಪದೇಪದೇ ಸಂಸಾರವಲ್ಲಿ ನಮಗೆ ಕಂಡುಬರುತ್ತದೆ. ಕಳವು, ದರೋಡೆಗಳು ಯಾಕೆ ಆಗುತ್ತವೆ? ಯಾಕಂದರೆ ಅವರಿಗೆ ಹೊಟ್ಟೆತುಂಬ ಅನ್ನವು ರಟ್ಟೆಮುರಿದರೂ ಸಿಗುವದಿಲ್ಲವಾದ್ದರಿಂದ. ತುಡುಗು ಮಾಡು ವದು ಒಂದುವೇಳೆ ಅವರ ಹುಟ್ಟುಗುಣವಾಗಿದ್ದರೆ, ಅವರನ್ನು ಉತ್ತಮ ಸ್ಥಿತಿಯಲ್ಲಿ ಟ್ಟರೂ ಅವರ ಆ ಗುಣವು ಹೊರಬೀಳಲಿಕ್ಕೇ ಬೇಕು. ಆದರೆ ಮೈತುಂಬ ಬಟೆ

ಟ

ಹೊಟ್ಟೆತುಂಬ ಅನ್ನ, ಸಿಗುವದರಿಂದ ಎಷ್ಟೋ ಕಳ್ಳರು, ಅಥವಾ ದುಷ್ಕರ್ಮಿಗಳು (criminals) ಸಜ್ಜನರಂತೆ ವರ್ತಿಸಲು ಹತ್ತುತ್ತಾರೆ. ಇನ್ನು ಸಮಾಜದ ಕಾಯಿದೆಗಳ ವಿರುದ್ಧವಾಗಿ ಏಳುವದೊಂದು ಮಾನಸಿನ ದೌರ್ಬಲ್ಯವು. ಅದು ವ್ಯಕ್ತಿಗತವಾದದ್ದು. ಈ ವ್ಯಕ್ತಿಗತ ದೌರ್ಬಲ್ಯವೇ ಬಹಳ ಸಾರೆ, ಆಕಸ್ಮಿಕವಾಗಿ ಕಳ್ಳತನದಿಂದ ಹೊರಬೀಳುತ್ತದೆ. ಆದರೆ ಒಮ್ಮೊಮ್ಮೆ ಇದು ಬಹಳ ಬಲವುಳ್ಳದ್ದಾಗಿಯೂ, ಬುದ್ಧಿಪೂರ್ವಕವಾಗಿಯೂ ಸುಸಂಘಟಿತವಾಗಿಯೂ ಹೊರಬೀಳುತ್ತದೆ. ದರೋಡೆಖೋರರ ದಂಡುಗಳೆಂದರೇ ಇಂಥ ದಂಡುಗಳು. ಹಳ್ಳಿಗಳಲ್ಲಿ ಇಂಥ ಬಣಗಳು ಹೆಚ್ಚು. ಇನ್ನು ಒಂದು ದೇಶದವರು ಮತ್ತೊಂದು ದೇಶದ ಮೇಲೆ ದಾಳಿದೌಡುಗಳನ್ನು ಮಾಡುವದಾದರೂ ದುಷ್ಕೃತಿಯೇ! ಹಿಂದುಸ್ಥಾನದ ಮೇಲೆ ೧೭ ಸಾರೆ ದಂಡೆತ್ತಿ ಬಂದ ಮಹಮ್ಮದ ಘೋರಿಯು ಎಷ್ಟು ಬಲವುಳ್ಳವನಿದ್ದನೆಂಬುವದು ಇತಿಹಾಸ ಪ್ರಸಿದ್ಧವಾದ ಮಾತೇ ಇರುವದು. ಈ ದಾಳಿಗಳಾದರೂ ವ್ಯಕ್ತಿಗತ ದೌರ್ಬಲ್ಯದ ಸೂಚನೆಗಳೇ! ಹೇಗೆಂದರೆ ಅವು ಒಬ್ಬ ಮುಂದಾಳೆಂದೆನ್ನಿಸಿಕೊಳ್ಳುವವನ ಮನಸಿನ ಮೇಲೆ ಅವಲಂಬಿಸಿರುತ್ತವೆ. ಅಂತೇ ಅವರ ಆ ಮುಂದಾಳುವು ಸತ್ತನೆಂದರೆ ಅವು ಮುರಿದು ಹೋಗುತ್ತವೆ. ಸಿಂದೂರ ಲಕ್ಷ್ಮಣನು ಸೆರೆಸಿಕ್ಕಕೂಡಲೇ ಅವನ ಇದ್ದುಬಿದ್ದ ಅನುಯಾಯಿಗಳೂ ಆ ಕೆಲಸವನ್ನು ಬಿಟ್ಟುಬಿಟ್ಟರು.

ಆದರೂ ಇವುಗಳು ಸಂಪೂರ್ಣವಾಗಿ ವ್ಯಕ್ತಿಗತವಿರುವದಿಲ್ಲ. ಯಾಕಂದರೆ ಆ ನಾಯಕನ ಆಜ್ಞೆಯಂತೆ ನಡೆಯುವವರಾದರೂ ಬೇಕಾಗುತ್ತಾರೆ. ದಂಡು ದಾಳಿಗಳ ವಿಷಯದಲ್ಲಿಯಂತೂ ಅವು ಒಂದು ಸಮಾಜದ ಸಣ್ಣಭಾಗದ ಮತವನ್ನೇ ವ್ಯಕ್ತಗೊಳಿಸುತ್ತವೆ. ಯುದ್ಧಗಳ ವಿಷಯದಲ್ಲಂತೂ ಕೇಳಲೇ ಬೇಡ. "All the pure and noble arts of peace are founded on war." War is the foundation of all great art." ಎಂದು Ruskin ನನು ಅನ್ನುತ್ತಾನೆ. ಈ ತರದ ದಾಳಿದೌಡುಗಳಾಗಲಿ, ಯುದ್ಧಗಳಾಗಲಿ ಮಾಡುವದೆಂದರೆ ಮನುಷ್ಯಜಾತಿಯೇ ಸರ್ವಸಮ್ಮತದಿಂದ ಸ್ವಸಂರಕ್ಷಣೆಯಗೋಸ್ಕರ ನಿರ್ಮಿಸಿದ ಕಾಯಿಗಳ ಹೊರತು ಬೇರೇನು? ಈ ಕಾಯಿದೆಗಳ ಭಂಗಗಳನ್ನು ನಿಲ್ಲುಸುವದಕ್ಕೋಸ್ಕರ ಯುರೋಪದಲ್ಲಿ League of nations ವೆಂಬ ದೊಡ್ಡ ಸಭೆಯು ಸ್ಥಾಪಿತವಾಗಿದೆ. ಬಹಳ ದಿನಗಳಿಂದ ಹೊಂಚುಹಾಕಿ, ಜಪ್ಪಿಸಿ ಕೂತು ಮಾಡಿದ ಮಾನವೀ ಕಾಯಿದೆ ಬಂಗಗಳನ್ನಷ್ಟು ಬಿಟ್ಟರೆ, ಉಳಿದೆಲ್ಲ ತಪ್ಪುಗಳಲ್ಲಿ ನಮಗೆಲ್ಲ ಒಂದೇ ಒಂದು ಸೂತ್ರವು ಕಾಣುವದು ಅದೆಂದರೆ ಇಂಥ ತಪ್ಪು ಮಾಡುವ ಜನರೆಲ್ಲರೂ, ಬಲಹೀನರೂ, ಅಲ್ಪಮತಿಗಳೂ, ತಿಳುವಳಿಕೆಯಿಲ್ಲದವರೂ, ಮನೋದೌರ್ಬಲ್ಯಕ್ಕೆ ಒಳಗಾದವರೂ, ಸಮಾಜದ ನಿಜವಾದ ಬಂಧನಗಳನ್ನರಿಯುದವರೂ, ತಿಳಿದೂ ತಿಳಿದು ಸ್ವಾರ್ಥದ ಕ್ಷುಲ್ಲಕ ವೈಮನಸ್ಸನ್ನು ಪೂರ್ತಿಗೊಳಿಸಲು, ಅವನ್ನು ದುರ್ಲಕ್ಷಿಸುವವರೂ, ಭಂಗಮಾಡುವವರೂ ಆಗಿರು

ವರು. ಕೆಲವು ಮಂದಿಗೆ ಇದೊಂದು ಆಟವೆನಿಸುತ್ತದೆ. ಸಮಾಜದ ಕಾಯಿದೆಗಳನ್ನು ಆಟವೆಂದು ಮುರಿಯುವ ಜನರಲ್ಲಿ ಒಮ್ಮೊಮ್ಮೆ ಪೋಲೀಸರೂ ಬರುವರು. ಇದರ ಕಾರಣವೇನಂದರೆ ಅವರ ಅಲ್ಪಶಿಕ್ಷಣ. ಅವರ ಶಕ್ತಿ ಶಿಕ್ಷಣಗಳೇ ಮೂಲತಃ, ಅವರ ಇಂಥ ಕೃತಿಗಳ ಕೀಳತನವನ್ನು ಮನಗಾಣದಷ್ಟು ದುರ್ಬಲವೂ, ಕೀಳ್ತರದ್ದಾಗಿಯೂ ಇರುತ್ತದೆ.

ಇಂಥವರನ್ನು ಸುಧಾರಿಸುವ ಬಗೆಯಾದರೂ ಹೇಗೆ ? ಜನರಿಗೆ ಸಮಾಜದ ಕಟ್ಟಳೆಗಳ ಭಾರವನ್ನು ಸಮಾಜದಲ್ಲಿಯ ತಮ್ಮ ಕರ್ತವ್ಯವನ್ನು ತಿಳಕೊಳ್ಳಲು ಕಲಿಸುವದು ಬಹಳೇ ಸಂಭವಿದೆಯೆಂದು ಹಾವ್ಸರ್ವರ್ಥನು ಅನ್ನುತ್ತಾನೆ. ನಮ್ಮ ಮನೆಯಲ್ಲಿಯ ಚಿಕ್ಕ ಮಕ್ಕಳನ್ನು ಯಾವ ರೀತಿಯಲ್ಲಿ ಕಲಿಸಬಹುದೋ ಅದೇ ರೀತಿಯಲ್ಲಿ ದುಷ್ಕರ್ಮಿಗಳೆಂದೆನ್ನಿಸಿಕೊಳ್ಳುವ ಜನರನ್ನಾದರೂ ಸುಧಾರಿಸಬಹುದು. ಸಣ್ಣ ಹುಡುಗರ ಮನಸ್ಸೆಂದರೆ ತಿಳಿನೀರಿನ ನದಿಯಿದ್ದಂತೆ, ಸ್ವಚ್ಛವಾದ ಕನ್ನಡಿ ಇದ್ದಂತೆ. ಅದರಲ್ಲಿ ಬೇಕಾದವರು ಭೇದಭಾವವಿಲ್ಲದೆ ಪ್ರತಿಬಂಧವಿಲ್ಲದೆ ಮೋರೆ ನೋಡಬಹುದು. ಅವರಿಗೆ ನಾವು ವಸ್ತುಪಾಠಗಳಿಂದ ಕಲಿಸುವದೇ ಹೆಚ್ಚು. ಅಂದರೇ ಅವರು ತೀವ್ರವಾಗಿ ಕಲಿಯುವರು ಇದರಂತೆಯೇ ಸ್ವಾತಂತ್ರ್ಯಪ್ರಿಯರಾದ ಎಳೆಜೀವಾಳಗಳ ಎಳೆ ಮನಸ್ಸನ್ನು, ಸೃಷ್ಟಿಯ ವಸ್ತುಪಾಠಗಳಿಂದಲೂ, ಪುರಾತನದಿಂದ ನಡೆದುಬಂದ ಮನೆತನದ ನಡತೆಗಳಿಂದಲೂ, ಉತ್ತಮ ಶಿಕ್ಷಣದಿಂದಲೂ ಸುಲಭವಾಗಿ ತಯಾರಿಸಬಹುದು. ಆದಷ್ಟು, ಉಡಾಳತನ ಸೋಮಾರಿತನ, ಸ್ವಾರ್ಥತೆ, ಅನಿಯಮಿತತನ, ಸುಳ್ಳುಹೇಳುವ ಚಟ ಮುಂತಾದ ದುರ್ಗುಣಗಳಿಗೆ ಒಳಗಾಗದಂತೆ ಅವರನ್ನು ಕಾಯಬೇಕು. ಮೇಲಾಗಿ ಸಮಾಜದ ಕೆಲವು ಉತ್ತಮ ಗುಣಗಳ ಅನುಭವವನ್ನುಣಿಸಿ ಅವುಗಳ ಸದಭಿಮಾನವನ್ನು ತಾಳಲು ಕಲಿಸಬೇಕು. ಹೀಗಾಗುವದರಿಂದ ಸಮಾಜವು ತನ್ನ ಜನರ ಸ್ವಭಾವಗಳನ್ನು ಪರರಿಗೆ ಹಾನಿತಟ್ಟಸದಂಥವುಗಳನ್ನಾಗಿ ಮಾಡುತ್ತದೆ. ಒಂದು ವೇಳೆ ಅವರಿಗೆ ಈ ರೀತಿಯ ಶಿಕ್ಷಣವು ಸಿಗದಿದ್ದರೆ, ಸಿಕ್ಕೂ ಅದನ್ನು ಕೃತಿಯಲ್ಲಿ ತರುವಷ್ಟು ದಾರ್ಢ್ಯತೆಯು ಹುಟ್ಟಸದಿದ್ದರೆ, ಅವರೇ ಅಡ್ಡಹಾದಿ ಹಿಡಿದು, ಮನಬಂದಂತೆ ನಡೆದು, ಸಮಾಜದ ಕಟ್ಟಳೆಗಳನ್ನು ಮುರಿದು ಸಮಾಜದ ವಿರುದ್ಧವಾಗಿ ನಿಂತು, ಕಡೆಗೆ ದುಷ್ಕರ್ಮಿಗಳೆಂದೆನ್ನಿಸಿಕೊಳ್ಳಬೇಕಾಗುತ್ತದೆ. ತಮ್ಮ ಹುಟ್ಟಿನ ಮೂಲಕವಾಗಿಯೂ, ಮನೆತನದ ಕೆಲವು ಪರಂಪರೆಯಾಗಿ ಬಂದ ದೌರ್ಬಲ್ಯಗಳ ಮೂಲಕವಾಗಿಯೂ, ಅವರಿಗೆ ಸುತ್ತಿಕೊಂಡಿರುವ ವಾತಾವರಣದ ಮೂಲಕವಾಗಿಯೂ, ಸಮಾಜದ ಬಂಧನಗಳನ್ನು ಪಾಲಿಸದವರು ಬಹಳೇ ಸ್ವಲ್ಪ ಜನರು.

ದುಷ್ಕರ್ಮಿಗಳು ಹೇಗಾಗುತ್ತಾರೆಂಬ ಪ್ರಶ್ನೆಯನ್ನು ಇನ್ನೊಂದು ರೀತಿಯಿಂದಲೂ ಬಿಡಿಸಬಹುದು. ಪೋಲೀಸ ಸಂಖ್ಯೆಯೂ, ಜೇಲುಗಳ ಸಂಖ್ಯೆಯು ಹೆಚ್ಚಾದಂತೆ ಇವರೂ ಹೆಚ್ಚಾದರು. ಜೇಲಿನಲ್ಲಿ ಬರುವ ಕೈದಿಗಳಲ್ಲಿ ಮೂರು ತರಗಳಿರುವವು. ೧೦೦ಕ್ಕೆ ೭೫

ಮಂದಿ ಪರದ್ರವ್ಯಾಪಹಾರ ಮಾಡಿ ಸಿಕ್ಕವರು. ೧೦೦ಕ್ಕೆ ೧೫ ಮಂದಿ ಬಲಾತ್ಕಾರವನ್ನು ಮಾಡಿ ಬಂದ ಜನರು. ಮತ್ತು ೧೦೦ಕ್ಕೆ ೧೦ ಮಂದಿ ಕಾಮ ಮೋಹಗಳಿಗೊಳಗಾಗಿ ಪರನಾರಿಯರನ್ನು ಕೆಡಿಸಿ ಬಂದ ದುರ್ಭಾಗ್ಯವಂತರು. ಇವರಲ್ಲಿ ಹಳ್ಳಿಯವರಿಗಿಂತಲೂ ಪಟ್ಟಣಿಗರೇ ಹೆಚ್ಚು. ಇವರಿರುವ ಪರಿಸ್ಥಿತಿಯಾದರೂ ಬಲು ವಿಚಿತ್ರವಾದದ್ದೇ ಇರುವದು.ಮೇಲಾಗಿ ಪಟ್ಟಣಗಳಲ್ಲಿ ಮಾನವೀ ಜೀವನದ ಅವನತಿಯ ಧ್ಯಾಸವೇ ಹೆಚ್ಚು. ಒಬ್ಬನಲ್ಲಿ ದ್ರವ್ಯಸಂಚಯವು ಹೆಚ್ಚಾದರೆ ಇನ್ನೊಬ್ಬನು ಉಪವಾಸ ತಿರುಗಾಡಬೇಕಾಗುತ್ತದೆ. ಇವರೇ ಕಳವುಮಾಡಲು ಉದ್ಯುಕ್ತರಾಗುತ್ತಾರೆ. ಮುಂಬಯಿ ಮದ್ರಾಸ ಮುಂತಾದ ಪಟ್ಟಣಗಳಲ್ಲಿಯ ಇರುವಿಕೆಯಾದರೂ ಬಹಳೇ ತುಟ್ಟಿಯು. ಸಾಕಷ್ಟು ಪಗಾರ ಸಿಗದ ಮನುಷ್ಯನು ಹೊಟ್ಟೆಹೊರಕೊಳ್ಳುವ ಬಗೆಯಾದರೂ ಏನು ? ಮೇಲಾಗಿ ಕೆಲಸವಿಲ್ಲದೆ ತಿರುಗುವ ಜನರೂ ಸದ್ಯಕ್ಕೆ ಹೆಚ್ಚು. ಇಂಥ ಮೇಲ್ಮಾಣಿಸಿದ ಜನರು ಮಾಡಬೇಕಾದ ಉದ್ಯೋಗವಾದರೂ ಏನು? ಇವರೇ ಜೇಲಖಾನೆಗಳಿಗೆ ತುತ್ತಾಗಿ ಕೈದಿಗಳಾಗಬೇಕಾಗುತ್ತದೆ. ಇತ್ತಿತ್ತಲಾಗಿಯಂತೂ ಜೇಲುಗಳ ಹೆದರಿಕೆಯೆ ಹೋಗಿಬಿಟ್ಟಿದೆ. ೧೦೦ಕ್ಕೆ ೭೦ ಜನರು ನಿಧಾನ ಮೂರು ಸಾರೆಗಿಂತಲೂ ಹೆಚ್ಚಾಗಿ ಜೇಲಿನ ನೀರಿನ್ನು ಕುಡಿದವರಿರುವರು. ಇವರ ಶಿಕ್ಷಣವಾದರೂ ಅರ್ಧಮರ್ಧ. ಬುದ್ಧಿಯೂ ಹೀನ. ಬಲವೂ ಸುಮಾರು. ಆದ್ದರಿಂದ ಈ ಎಲ್ಲ ಕೊರತೆಗಳನ್ನು ಪೂರೈಸುವ ಕೆಲವು ಉಪಾಯಗಳನ್ನು ಹುಡುಕಲೇಬೇಕು. ದುಷ್ಕೃತಿಯು ವಿಶ್ವವ್ಯಾಖ್ಯೆಯನ್ನು ನಿರ್ಣಯಿಸಿದ ಹೊರತು, ಜಗತ್ತಿಗೆ ಗತ್ಯಂತರವಿಲ್ಲ. ವಿಶ್ವವೇ ಒಂದು ಕುಟುಂಬ ರಾಷ್ಟ್ರವೆಂದು ತಿಳಿದುಕೊಂಡು ಅದರ ತಳಹದಿಯ ಮೇಲೇ ದುಷ್ಕೃತಿಯ ವ್ಯಾಖ್ಯೆಯನ್ನು ರಚಿಸಬಹುದು.

---

## ‘ ಹಂಬಲದ ಹಾರೈಕೆ ’

ಸೌಂದರ್ಯ ಸೌಂದರ್ಯವೆಂದಂಡಲೆಯುತಿರುವ ।
ಸೌಂದರ್ಯವನ್ನೇನು ಅರಿಯದಲೆ ಇರುತಿರುವ ॥
ಮಂದ ಬಾಲಕ ನಾನು; ಸೌಂದರ್ಯದಾ ಜೀವ ।
ಎಂದೆಂದು ನೆಲೆಸಿರ್ದು ಹೇಗಿರುವಿ ದೇವ ॥
ಮಂದನಾದರು ನನಗೆ ಘನ ಚಲ್ವಿಕೆಯನೀವ ।
ಎಂದು ನಿನ್ನನುಕಾಂಬೆ ನನ್ನ ದೇವ ! ॥
ಚಂದಿರನು ಬೇಕಾಗಿ ಕೂಗುತಿರುವಾ ರಾಮು ।
ಚಂದಿರನು ಸಿಕ್ಕದಲೆ ಕೊರಗುತಿರೆ, ಆ ಪ್ರೇಮ ॥
ದಿಂದುವನು ಬೇಡುವದನರಿದು ಕನ್ನಡಿಯಲ್ಲಿ ।

ಚಂದಿರನ ಬಿಂಬವನು ಹಿಡಿದಿಟ್ಟರಲ್ಲಿ ॥
ಚಂದ್ರಬಿಂಬವ ತೋರಿ ರಾಮಚಂದಿರನೊಲಿದ ।
ಚಂದ್ರಬಿಂಬಕೆ ಚಂದ್ರನೆಂದು ರಾಮನು ಪೋದ; ॥
ಚಂದ್ರನನ್ನರಿಯದಿರುತಿರುವ ಮಾನವ ನಾನು ।
ಚಂದ್ರನೇನಗೆ ಮೇಣ್ ಪ್ರತಿಬಿಂಬವೇನು? ॥

—ವಿನಾಯಕ

---

# ವಿಚಾರ ಮತ್ತು ಆಚಾರ

( Theory and Practice )

ಬರಹಗಾರ:—ಭೀಮು ( ಇಂದೂರ ).

ವ್ಯಾವಹಾರಿಕ ದೃಷ್ಟಿಯಿಂದ ವಿಷಯದ ಮಹತ್ವ:—ಈಚೆಗೆ ನಮ್ಮ ವ್ಯವಹಾರದಲ್ಲಿ ವಿಚಾರದ ಪ್ರಾಧಾನ್ಯವು ತುಂಬಾ ಕಡಿಮೆಯಾಗಿರುವುದು. ಹೊಳೆಯೇರಿದಾಗ ಸೆಳವುಗಳೆಳೆದಂತೆ ಹರಿದು ಹೋಗುವ ಮುರುಕಮರಗಳಂತೆ ನಮ್ಮ ಇರುವಾಗಿದೆ. ಉಣುವೆವು, ತಿನ್ನುವೆವು; ಮುನ್ನಡಿಯಲು ಮಾತ್ರ ಒಲ್ಲೆವು. ಇಂದಿನೂಟವಾದಂದಿಂದ ನಿನ್ನೆಗಿಂತ ಒಂದಡಿ ಮುಂದೆ ನಡೆದೆವೆಂದೆನ್ನಲಾರೆವು. ಎಲ್ಲ ಮೈ ಕೈ ಕೆಲಸಗಳ ಕತೆಯೂ ಇಷ್ಟೇ. ಮೈಯನ್ನು ನೆಮ್ಮದಿಯಾಗಿರಿಸುವ ಸಾಧನೆಗಳನ್ನು ಗಳಿಸುವುದರಲ್ಲಿ ದಿನವೆಲ್ಲ ಕಳೆಯುತ್ತೇವೆ. ಇದರಿಂದ ಪ್ರಗತಿಯೆಂತಾಗುವುದು ? ಬೇವಿನ ಬೀಜದಿಂದ ಮಾವಿನ ಗಿಡವು ಹುಟ್ಟುವುದೇ ? ಅಂತೆಯೇ ಹಣಗಳಿಸಲು ಹೆಣಗುವುದು ಪ್ರಗತಿ ಸಾಧನೆಯಾಗಲಾರದು. ಈ ರೀತಿಯಲ್ಲಿ ಕಟ್ಟಳೆಯು ಕಳೆದು ಹೋದರೂ ಯೋಗ್ಯತೆಯು ಬೆಳೆಯಲಾರದು. ಹಳಬನಾದಂತೆ ಮಾನವನ ತಿಳಿವು ಬೆಳೆಯಲು ಬೇಕು. ನಮ್ಮ ಸಮಾಜದಲ್ಲಿ ಹಾಗೇನೂ ಒದಗುವುದು ಕಾಣದು. ಇದರಿಂದ ಮುದಕರನ್ನು ಮನ್ನಿಸುವದೊತ್ತಟ್ಟಿಗುಳಿದು ಒಂಮೊಮ್ಮೆ ಹಳಿಯುವುದೂ ಉಂಟು. ಹರೆಯ ಹುಡುಗರ ಉಡಾಳತನವು ಈ ತಪ್ಪಿಗೆಕೊಂಚ ಗುರಿಯಾಗಬಹುದು. ಆದರೆ ವಯಸ್ಸಿನೊಂದಿಗೆ ಯೋಗ್ಯತೆಯು ಬೆಳೆಯದಿರುವುದೇ ಅದರಕಾರಣ.

न तेन वृद्धो भवति येनास्य पलितं शिरः ।

ಸಸಿಹಸುಗಳಿಂದ ಮೊದಲುಗೊಂಡು ಮನುಷ್ಯನ ವರೆಗೆ ಎಲ್ಲರ ಜೀವನವೂ ನಿಯಮ ಬದ್ಧವಿರುವುದು. ವಿಚಾರ ಶಕ್ತಿಯಿಲ್ಲದರಿಂದ ತಿನ್ನುವುದು, ಮಲಗುವದು, ಇಷ್ಟೇ ಪಶುವಿನ ಬಾಳಿಕೆಯ ನೈಸರ್ಗಿಕ ನಿಯಮಗಳು. ಆದರೆ ನಮ್ಮಲ್ಲಿ ವಿಚಾರಶಕ್ತಿ ಇದ್ದೂ

ಅದನ್ನು ಸರಿಯಾಗಿ ಬಳಸಿ ಪ್ರಗತಿಯನ್ನು ಮಾಡಿಕೊಳ್ಳದೆ ಪಶುಗಳಂತಾದರೆ, ನಮ್ಮ ನೈಸರ್ಗಿಕ ನಿಯಮಗಳನ್ನು ಮೀರಿದುದರಿಂದ ನಾವು ಪಶುಗಳಿಗಿಂತಲೂ ಕೆಳಗಿಳಿದಂತೆ ಯೇ ಸರಿ. " To be men you must know the law whch distinguishes human nature from that of brutes, plants minerals and you must conform your actions to it." ಎಂದು ಮ್ಯಾಝಿನಿಯವರು ತಮ್ಮ ಜನರಿಗುಪದೇಶಿಸಿರುವರು. "ज्ञानं हि तेषां परमो विशेषो ज्ञानेन हीनाः पशुभिः समानाः" ಎಂದು ಭರ್ತೃಹರಿಯವರು ಮನುಷ್ಯನನ್ನೂ ಪಶುವನ್ನೂ ವಿಂಗಡಿಸಿ ತೋರಿಸಿರುವರು.

ಒಳಿತಾವುದು ಕೆಡಕಾವುದು ಎಂಬುದನ್ನು ತಿಳಿಯುವ ಹಾಗೂ ಅವೆರಡರಲ್ಲಿ ಬೇಕಾದುದನ್ನು ಆರಿಸಿಕೊಳ್ಳುವ, ಪಶುಗಳಲ್ಲಿಲ್ಲದ ಎರಡು ಶಕ್ತಿಗಳು ನಮ್ಮಲಿವೆ. ಇವು ಗಳಿಗೆ ಸದ ಸದ್ವಿವೇಕ ಮತ್ತು ಸ್ವತಂತ್ರ ಕರ್ತೃತ್ವ ( Freedom of the Will ) ಎಂದು ಎನ್ನುತ್ತಾರೆ. ಇದರಿಂದ ಹಲವು ಸಲ ಮನುಷ್ಯನು ಒಳಿತು ಕೆಡು ಕುಗಳನ್ನರಿತೂ ಕೂಡ, ಮೋಹದಿಂದ ಕೆಡಕಿಗೆ ಮರುಳಾಗಿ ಕೆಳಗೆ ಬೀಳುತ್ತಾನೆಂ ಬುದೇನೋ ನಿಜ. ಆದರೆ ಈ ಸ್ವಾತಂತ್ರ್ಯದಲ್ಲಿಯೇ ಆತನ ಪ್ರಗತಿ ಶೀಲತೆಯ ಹಾಗೂ ಶ್ರೇಷ್ಠತೆಯ ಬೀಜವಿದೆ. ಬಾಳುವೆಯಲ್ಲಿ ನಾವು ನೆರವೇರಿಸಬೇಕಾದುದೇನು ಹಾಗು ಅದು ನೆರವೇರುವುದೆಂತು ಎಂಬದನ್ನು ವಿಚಾರದಿಂದ ತೀರ್ಮಾನಿಸಿ ಅದರಂತೆ ನಡೆದು ಪರಮೇಶ್ವರನ ಬಳಿಗೂ ತಲುಪಬಹುದಾದ ಬಲವು ಮಾನವನ ಬುದ್ಧಿಯಲ್ಲಿದೆ. "सृष्ट्वा पुराणि विविधान्यजयात्म शक्त्या वृक्षान् सरीसृपपशून् खगदंश मत्स्यान् तैस्तैरतुष्टहृदयः पुरुषं निधाय ब्रह्मावलोकधिषणं मुदमाप देवः" ॥ ಎಂದು ಯದು-ಅವಧೂತ ಸಂವಾದದಲ್ಲಿ ವರ್ಣನೆಯಿದೆ. ಬಾಯ್ಬಲ್ಲಿನಲ್ಲಿಯ ಕಲ್ಪ ನೆಯೂ ಹೀಗೆಯೇ ಇದೆ. " God created man in his own image and put into his nostrils the breath of life. " ಆದರೆ ಅದರ ನಿಷಿದ್ಧವಾದ ಸದ ಸದ್ವಿವೇಕ ವೃಕ್ಷದ ಹಣ್ಣನ್ನು ಆದ್ಯಾಮ್, ಈ ವ್ಹ ಇವರು ತಿಂದುದ ರಿಂದ ಪರಮೇಶ್ವರನಿಂದ " ನಮಗಿನ್ನು ಮುಂದೆ ಮೈಮುರಿದು ದುಡಿದು ಹೊಟ್ಟೆ ಹೊ ಯಬೇಕಾಗುವುದು " ಎಂದು ಶಾಪವು ದೊರೆತು ಮನುಷ್ಯನು ಸ್ವರ್ಗವಾಸಕ್ಕೆರವಾ ದನು ಎಂಬ ಕತೆಯಿದ್ದು, ಸದಸದ್ವಿವೇಕ ಬುದ್ಧಿಯನ್ನುಪಯೋಗಿಸುವುದೇ ಪಾಪ ವೆಂಬ ಮತವು ಪ್ರತಿಪಾದಿತವಾಗಿದೆ. ಸದಸದ್ವಿವೇಕ'ಬುದ್ಧಿ ಮತ್ತು ಸ್ವತಂತ್ರ ಕರ್ತೃತ್ವ ಇವೆರಡಿಲ್ಲದಿದ್ದರೆ ಮನುಷ್ಯನು ಪಾಪದ ಕಡೆಗೆ ಪ್ರವರ್ತಿಸಲಾರನೆಂದು ಯಹೂದಿ ಧರ್ಮ ಸಂಸ್ಥಾಪಕರಿಗನಿಸಿರಬಹುದೆಂದು ತೋರುತ್ತದೆ. ಅಂದರೆ ಮನುಷ್ಯನು ಪಶು ವಿನಸ್ಥಿತಿಯಲ್ಲಿದ್ದರೆ ಚೆನ್ನಾಗಿರುತ್ತಿತ್ತು ಎಂದು ತಾನೇ ಇದರರ್ಥ ? ಮನುಷ್ಯನ ಸ್ವಭಾ ವದ ಕೆಡಕುತನವನ್ನಷ್ಟೇ ನೋಡಿದರೆ ಬುದ್ಧಿಯೇ ಪಾಪದ ಬೇರೆಂದೆನಿಸುವುದೇನೋ

ಹಿಂದಿರುವ ಹಗೆಯೀಗ ಅಂಗಾರವಾಯ್ತು ।
ಮುಂದಿರುವ ಗೆಳೆತನವ ಸಿಂಗಾರವಾಯ್ತು ॥
ಇಂದು ಮುಟ್ಟಿದ ಪತ್ರಿ ಭಂಗಾರವಾಯ್ತು ।
ಹೋಗೋಣ ಬಾ ಇನ್ನು ಸೀಮೆಯನು ದಾಟ ॥೫॥

ಒಂದೆ ತಾಯಿಯ ಮಕ್ಕಳಂತೆ ಒಂದಾಗಿ ।
ಅಂದಗೇಡನು ಕೆಡಿಸಿ ಚೆಲುವು ಚಂದಾಗಿ ॥
ಮುಂದಿರುವ ಜನರ ಸರಿಮೇಲು ಮುಂದಾಗಿ ।
ಸಾಗೋಣ ಹೋಗೋಣ ಸೀಮೆಯನು ದಾಟ ॥೬॥

ಹೋಗಲಾಡಿಸಿಕೊಂಡು ತಿರುಕತನವನ್ನು ।
ನೀಗಲಾಡಿಸುತ ಮನೆಮುರುಕತನವನ್ನು ॥
ಬೇಗದಿಂ ಕರುನಾಡ ಹರಕುತನವನ್ನು ।
ಕಳೆದು ಹಿರಿದಾಗೋಣ ಸೀಮೆಯನು ದಾಟ ॥೭॥

ಪಡುವಣದ ಶಕ್ತಿಯಲಿ ಮೂಡಣದ ಭಕ್ತಿ ।
ಬಡಗಣದ ಭುಕ್ತಿಯಲಿ ತೆಂಕಣದ ಮುಕ್ತಿ ॥
ಒಡನೊಡನೆ ನೆರೆಬೆರೆತು ಹೊಸತಾಯ್ತು ಯುಕ್ತಿ ।
ಹೀಗೆ ಇಡಿಯಾಗೋಣ ಸೀಮೆಯನು ದಾಟ ॥೮॥

ದೇವಿಯರ ನಾಡೆಂತು ಹಿಂದುಳಿಯಬಹುದು ।
ಭಾವ ಭಕ್ತಿಯವೆಂತು ಹಗೆಯಾಗಲಹುದು ॥
ಹೇವದಿಂ ಗುರಿಯಿಟ್ಟು ಮೇಳ ಹೊರಟಿಹುದು
ಏರಿಕೆಯ ಕರಿನಾಡ ಸೀಮೆಯನು ದಾಟ ॥೯॥

—ಅಂಬಿಕಾತನಯದತ್ತ.

---

## ಬರೀ ನಗೆಚಾಟಿಕೆ.

ಸಂಶೋಧಕ:—ಬೇಲೂರ ಚನ್ನ ಕೇಶವನ ಮೂರ್ತಿ ೫ ಅಡಿ ಎತ್ತರವಿದೆ.

ಇನ್ನೊಬ್ಬ:—ಅಡಿಗೆ ಬದಲು ಮೊಳ ಹೇಳಬಾರದೇ ?

× × × ×

ಗುತ್ತು—ತವ್ಮಾ ಈ ಧೊತ್ರಾ ಒಗೆ.

ಶಿಷ್ಯ:—ಅಯ್ಯೋ ತಮ್ಮ ಧೋತರವನ್ನು ಕಾಲ್ಮೇಲೆ ಹಾಕಿ ನಾನೆಂಥ ನರಕಕ್ಕೆ ಹೋದೇನು ? ನನ್ನ ಧೋತರವನ್ನೇ ತಾವು ಒಗೆದರೆ ತಮ್ಮ ಪಾದಸ್ಪರ್ಶದಿಂದ ಉದ್ಧಾರವಾದೇನು ?

ಯುರೋಪಿಯನ್ನರಿಗೆ ಕನ್ನಡದ ಮೇಲೆ ಬಲು ಅಕ್ಕರತೆ. ನಮ್ಮ ಕುಮಾರವ್ಯಾಸ ಕುಮಾರ ವಾಲ್ಮೀಕಿಗಳು ಸಂಸ್ಕೃತ ಕವಿಗಳಿಗೆ ಮಾನಕೊಟ್ಟಂತೆ ಬಾಯ್‌ರನ್ನನು ನಮ್ಮ ರನ್ನ ಕವಿಯನ್ನು ಮನ್ನಿಸಿರುವನು.

ಬಾಯ್‌ರನ್ನ=ಕುಮಾರ ರನ್ನ.

× × × ×

ಪ್ರ:—ಬಹಳ ಓದುವದರಿಂದ ಏನು ಹೆಚ್ಚಾಗುವದು.

ಉ:—ಅಶಕ್ತತೆ.

× × × ×

ಪ್ರ:—ಸತ್ತವನ ಪಾಲಿಗೇನು ಸುಖ ?

ಉ:—ಅಳಲಾರದವರೆಲ್ಲ ಅತ್ತದ್ದೇ ಸುಖ !

× × × ×

## ಬಾಲವಿವಾಹ.

ಪ್ರಶ್ನ:—( ಮದಿಮಗನಿಗೆ ) ನಿನ್ನ ಹೆಂಡತಿಯ ಹೇಸರೇನು ?

ಉ:—ಇನ್ನೂ ಹದಿಮೂರು ದೆಸೆಯಾಗಿಲ್ಲ.

× × × ×

ಹಾದಿಕಾರ:—( ಮುಂದೆನಡೆದ ಒಬ್ಬನಿಗೆ ) ಅಯ್ಯಾ !

ಇನ್ನೊಬ್ಬ:—ನಮಗೆ ಬರೋದು ಆರೇ ಮಾತು.

ಹಾದಿಕಾರ:—ಅದರಿಂದ ನಮಗೇನು ಪ್ರಯೋಜನ. ಒಂದೇ ಆಡಿದರೂ ಸಾಕು.

× × × ×

## ಪ್ರವಾಸಿಗಳಲ್ಲೇನಿರಬೇಕು.

" ತಂ—ಬಿಗಿ "

× × × ×

ಪ್ರ:—ನಿನಗೆನಿಸಿದಂತೆ ನೀನೇ ನಡಿಯದೆ ಇನ್ನೊಬ್ಬರಿಗೆ ಹೇಳುವದರಲ್ಲಿಯೇ ಹೊತ್ತನ್ನೆಲ್ಲ ಏಕೆ ಕಳೆಯುವೆ ?

ಉ: — ಸ್ವಾರ್ಥಸಾಧಕನೆಂಬ ದೋಷಕ್ಕೆ ಗುರಿಯಾಗಬಾರದೆಂದು ಹೀಗೆ ಮಾಡುವೆ ?

ರಾಮರಾಯರು:—"ಪತ್ರ ಕಂಡಕೂಡಲೆ ಮಗಳನ್ನು ಕಳುಹಿಸಬೇಕು" ಎಂದು ಬರೆದದ್ದಕ್ಕೆ ಭೀಮರಾಯರು "ಆಗ ಮನೆಯಲ್ಲಿರಲಿಲ್ಲ" ಎಂದು ಉತ್ತರಬರೆದಿರುವರು.

× × × ×

ವೈದ್ಯ:—ಹುಳೀ ಎಣ್ಣೀ ತಿನ್ನಬಾರದು.

ರೋಗಿ:—ಛೇ ಛೇ ಅಂಥಾದ್ದನ್ನು ನಾನೇಕೆ ತಿನ್ನಲಿ ಒಳ್ಳೆಣ್ಣೆಯನ್ನೇ ತಿನ್ನುವೆ.

× × × ×

ಸೆಟ್ಟರು ಶಿವರಾತ್ರಿಯದಿನ "ಇಂದು ಏಕಾದಶೀ ಮಾಡುವವನಿಗೆ ಯಾರೂ ಸರಿಯಿಲ್ಲ!"ವೆಂದರು. ಹೌದು ಇದು ಯಾರಿಂದಾದೀತು !

---

# ಪುಸ್ತಕ ಪರಿಚಯ

**ಹೊತ್ತಿಗೆಯ ಹೊರವೈಯು** ಹೊತ್ತಿಗೆಯ ಬಿರುದು **ಭಾರತೀಯ ಇತಿಹಾಸ. ( ಪ್ರಾಚೀನ )**

ಬರೆದವರು ಕನ್ನಡಿಗರ ಚಿರಪರಿಚಿತರಾದ ನಾರಾಯಣ ಶರ್ಮರು. ಪ್ರಕಾಶಕರು ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಮಿತಿಯವರು. ಅಚ್ಚುಕಟ್ಟಾದ ಅಚ್ಚಿನಿಂದಲೂ ಹೊಳೆಯುವ ಹಾಳಿಗಳಿಂದಲೂ ಸುಂದರವಾದ ಹೊಲಿಗೆಯಿಂದಲೂ ಹೊತ್ತಿಗೆಯು ಬಲು ಮುದ್ದಾಗಿದೆ. ಬೆಲೆ ೨-೮-೦.

ಈ ಹೊತ್ತಿಗೆಯು ಹನ್ನೆರಡು ಹೋಳಾಗಿ ವಿಭಾಗಿಸಲ್ಪಟ್ಟಿದೆ. ಪ್ರತಿಯೊಂದು ಭಾಗಕ್ಕೆ ಇಟ್ಟ ಹೆಸರಿನಿಂದಲೇ ಆ ಭಾಗದ ಗುರುತು ಚನ್ನಾಗಿ ಆಗುವದು (೧) ಪ್ರಾಕೃತಿಕ ಸ್ವರೂಪ, (೨) ಮಾನವ ಜನ್ಮ ಭೂಮಿಯಾವದು, (೩) ವೈದಿಕ ಆರ್ಯರ ಸೃಷ್ಟಿಯ ಉಪಾಸನೆ, (೪) ಬ್ರಾಹ್ಮಣಗಳೂ ಉಪನಿಷತ್ತುಗಳೂ, (೫) ರಾಮಾಯಣ ಕಾಲವು, (೬) ಶ್ರೀಮಹಾ ಭಾರತ, (೭) ಬೌದ್ಧಕಾಲ; (೮) ಮೌರ್ಯರ ಆಳಿಕೆ, (೯) ಅನಾರ್ಯಕರ ಕಾಲ, (೧೦) ಗುಪ್ತವಂಶಸ್ಥಾಪಕನಾದ ಚಂದ್ರ (೧೧) ಹಿಂದೂ ದೇಶದ ಸಿರಿಗಾಲ, (೧೨) ಗಂಡುಗೆಟ್ಟ ಹಿಂದೂ ದೇಶಕ್ಕೆ ಅರಬರ ದಾಳಿ, ಹೀಗೆ ಹನ್ನೆರಡು ಹೋಳಾಗಿರುವದಲ್ಲದೆ ಬರಹಗಾರರ ಮುನ್ನುಡಿಯಿಂದಲೂ ಪ್ರಕಾಶಕಾರರ ನಾಲ್ಕು ಮಾತುಗಳಿಂದಲೂ ಮನೋಹರವಾದ ಚಿತ್ರಗಳಿಂದಲೂ ಕೂಡಿ ಹೊತ್ತಿಗೆಯು ೩೩೩ ಪುಟವುಳ್ಳದ್ದಾಗಿದೆ.

**ಒಳವೈಯು:**—ಗ್ರಂಥದ ಭಾಷೆಯು ಬಲು ಮನೋರವಾಗಿಯೂ ಸರಳವಾಗಿಯೂ ಪ್ರವಾಹದಂತೆ ಹರಿದದೆ. ಚಿಕ್ಕಮಕ್ಕಳಿಗೂ ಹಿರಿಯರಿಗೂ ಮನರಂಜನೆಯಾಗುವಂತೆ ಸ್ಫೂರ್ತಿದಾಯಕವಾಗಿಯೂ ಇರುವ ವಿಷಯ ವಿವೇಚನೆಯನ್ನು ಇಲ್ಲಿ ಯಾವ

(Paradise Lost) ಎಂಬ ಕಾವ್ಯದಲ್ಲಿ "Evil! be thou my good" ಎಂಬ ಸೈತಾನನ ನುಡಿಯನ್ನು ನೋಡಿದರೆ ಆತನು ತಿಳಿದೂ ಪಾಪದ ದಾರಿಯಲ್ಲಿ ಅಡಿ ಇಡುವನೆಂದು ಕಾಣುವುದು. ಆದರೆ ಆತನ ಬೇರೆ ಮಾತುಗಳನ್ನು ಬಗೆದು ನೋಡಲು, ಆ ಪಾಪ ಮಾರ್ಗದಿಂದ ತನ್ನ ಹಿತವಿದೆಯೆಂದು ತಿಳಿದೆಯೇ ಆತನಾದಾರಿಯಲ್ಲಿ ಸೇರಿದ ನೆಂದು ತೋರುವುದು. "ಸ್ವರ್ಗದಲ್ಲಿ ಆಳಾಗುವುದಕ್ಕಿಂತ ನರಕದಲ್ಲಿ ಅರಸನಾಗು ವುದೇ ಲೇಸು" ಎಂಬ ಮಾತಿನಿಂದ ತನ್ನ ಮಾರ್ಗವು ಯೋಗ್ಯವಾದುದೆಂದು ಆತನು ತೋರಿಸುವುದು ಕಾಣುತ್ತದೆ. - ಮನಷ್ಯ (ಬುದ್ಧಿ—ಪುರಃಸರವಾಗಿ ಆಚರಿಸುವವ) ಪ್ರಾಣಿಯು ಹುಟ್ಟುಗುಣವೇ ಹೀಗಿದೆ—ಆತನು ತಿಳಿದೂ ತನ್ನ ಹಾನಿಯನೆಂದೂ ಮಾಡಿ ಕೊಳ್ಳಲಾರನು. ಯಾವದೇ ಕೆಲಸವಾಗಲಿ ಅನು ತನ್ನ ಇಷ್ಟಸಾಧನವೆಂದು ತಿಳಿದೇ ಮಾಡುವನು. ಮತ್ತು ತನ್ನ ಹಿತವು ಆತನಿಗೆ ಇಷ್ಟವೆಂಬುದರಲ್ಲಿ ಸಂಶಯವೇ ಇಲ್ಲ. (ಹಿತ ಸುಖಗಳನ್ನು ವಿಂಗಡಿಸಿ ಕೆಲವರು ಮನುಷ್ಯನು ಹಿತದ ಸಲುವಾಗಿ ಹೆಣಗುತ್ತಿ ದ್ದರೂ, ಹಿತದ ಸಲುವಾಗಿ ಯತ್ನಿಸುತ್ತಾನೆಂದೇನೂ ನಿಯಮವಿಲ್ಲ ಎನ್ನುವರು. ಬಗೆದು ನೋಡಿದರೆ ಹಿತಸುಖಗಳೆರಡೂ ಜೀವಾಳದಲ್ಲಿ ಒಂದೇ. ಯಾವುದರಿಂದ ಹೆಚ್ಚು ಅಥವಾ ತಾಳುವ ಸುಖವಾಗುವುದೋ ಅದೇ ಹಿತ. ಆದ್ದರಿಂದ ಹಿತಸುಖಗಳು ಬಿಡಿ ಬಿಡಿ ಯಾಗಿಲ್ಲ.) ಇದನ್ನು ಕುರಿತು ಹೆಸರುವಾಸಿಯಾದ ಗ್ರೀಕ ತತ್ವದರ್ಶಿ ಸಾಕ್ರೆಟಿಸನು "ಜ್ಞಾನವೇ ಸದಾಚಾರ" ವೆಂದನು. ನಮ್ಮ ಹಿತವು ಯಾವುದರಲ್ಲಿದೆ ಎಂಬುದು ತಿಳಿದ ಬಳಿಕ ಅದರ ವಿಪರೀತವಾದ ನಡತೆಯನ್ನು ನಾವು ಹಿಡಿಯೆವು. ಎದುರಿಗೆ ಬಡಿ ಸಿದ ಅನ್ನದಲ್ಲಿ ನಂಜು ಇದೆ ಎಂದೂ ತಿಳಿದೂ ಅದನ್ನು ಉಣ್ಣಲು ಬಯಸುವ ಅಣ್ಣ ನಾರು ? ಇದರಿಂದ ನಮ್ಮ ವಿಚಾರದಲ್ಲಿ ತಕ್ಕ ಮಾರ್ಪಾಟಾದಂತೆ ಆಚಾರವು ತಿದ್ದುಪಡೆ ಯನ್ನು ಪಡೆಯಲೇಬೇಕೆಂದು ಅನುಮಾನಿಸಬಹುದು.

ಇನ್ನು ನಮ್ಮ ಅನುಭವವಾದರೋ ಮೇಲಿನ ಅನುಮಾನದಿಂದ ವಿಪರೀತವಾಗಿ ತೋರುತ್ತದೆ. ಬಾರಿ ಬಾರಿಗೂ ಮಾಡಬಾರದೆಂದು ತಿಳಿದ ಕೆಲಸವನ್ನೇ ನಾವು ಮಾಡು ತ್ತಿರುತ್ತೇವೆ ಹುಸಿಯಾಡಬಾರದೆಂದು ತಿಳಿದೂ ಹುಸಿಯಾಡುವ ಹುಡುಗರು ಹಲವ ರಿರುವರು. ಲಂಚ ತಿನ್ನುವುದು ಪಾಪವೆಂದು ತಿಳಿದೂ ಲಂಚ ತಿನ್ನುವ ಕೆಲಸಗಾರರ ನೇಕರಿರುವರು. ಕಳ್ಳಕಾಕರಿಗೂ, ವ್ಯಭಿಚಾರಿಗಳಿಗೂ ತಾವು ಮಾಡುವ ಕೆಲಸವು ಕೀಳೆಂಬ ತಿಳಿವಿರುವುದು. ಹೆಂಡಗುಡುಕನಿಗೆ ತನ್ನ ಚಟದಿಂದ ಅಹಿತವಾಗುತ್ತಿದೆಯೆಂದು ಗೊತ್ತಿರುತ್ತದೆ; ಅಂತೆಯೇ ಆತನು ತನ್ನ ಮಕ್ಕಳಾದರೂ ಹೆಂಡ ಕುಡಿಯಬಾರದೆಂದು ಮನದಲ್ಲಿ ನೆನೆಸುತ್ತಾನೆ. ಇಷ್ಟೇಕೆ ? ಎಷ್ಟೋ ಜನರು ಬೀಡಿಯನ್ನು ಸೇದುವರು. ಆದರೆ ಅವರಿಗೇ ತಮ್ಮ ಮಕ್ಕಳು ಬೀಡಿಯನ್ನು ಸೇದುವುದು ಸೇರುವದಿಲ್ಲ. ಹೀಗೆ ತಿಳಿದೂ ಮಾಡಬಾರದ್ದನ್ನು ಮಾಡುವಂತೆ, ಮಾಡಬೇಕಾದ್ದನ್ನು ತಿಳಿದೂ ನಾವು ಮಾಡ ದಿರುವ ವಿಷಯದಲ್ಲಿಯೂ ಹೇರಳ ಉದಾಹರಣೆಗಳಿವೆ. ಈ ಅನುಭವವನ್ನು ನೋಡಲು.

" जानमिधर्मं न च मे प्रवृत्तिः । जानास्यधर्मं न च मे निवृत्तिः ॥
केनापि देवेन हृदि स्थितेन । यथा नियुक्तोऽस्मि तथा करोमि ॥ "

ಎಂಬ ದುರ್ಯೋಧನ ಮಾತು ದಿಟವೆಂದು ತೋರುವುದು. ಗೀತೆಯಲ್ಲಿ ಭಗವಂತನು ಸ್ವಧರ್ಮದ ಮಹತಿಯುನ್ನು ಬಣ್ಣಿಸಿದ ಬಳಿಕ ಅರ್ಜುನನು " अथ केन प्रयुक्तोऽयं पापंचरतिपूरुषः । अनिच्छन्नपि वार्ष्णेय बलादिव नियोजितः " ಎಂದು ಬೆಸಗೊಳ್ಳಲು ಶ್ರೀಕೃಷ್ಣನು "ರಜೋಗುಣದಿಂದ ಹುಟ್ಟಿದ ಕಾಮ ಕ್ರೋಧವೆಂಬ ಕಡು ಹಗೆಯು ಇಂದ್ರಿಯ ಹಾಗೂ ಬುದ್ಧಿಯಲ್ಲಿ ವಾಸಿಸುತಲಿದ್ದು, ಮನುಷ್ಯನ ಜ್ಞಾನವನ್ನು ಮುಸುಕಿಬಿಡುತ್ತದೆ. ಆದ್ದರಿಂದ ಮೊದಲು ನೀನು ಇಂದ್ರಿಯಗಳನ್ನು ಹತ್ತೊತ್ತಿ ತಿಳಿವನ್ನಳಿಸುವ ಈ ಹಗೆಯನ್ನು ಹಣಿ" ಎಂಬ ಆಶಯದ ಉತ್ತರವಿತ್ತನು. ಕಾಮ ಕ್ರೋಧಗಳು ನಮ್ಮ ಅಂತಃಕರಣದಲ್ಲಿ ಪ್ರಬಲವಾಗಿರುವವರೆಗೆ ಜ್ಞಾನದ ಮಾನವೇನು ಇಲ್ಲ. ಅದು ಇದ್ದೂ ಇಲ್ಲದಂತೆಯೇ. ಇಂದ್ರಿಯನಿಯಮನದಿಂದ ಇವುಗಳ ಅಗ್ಗಳಿಕೆಯು ತಗ್ಗಿದ ಬಳಿಕ ತಿಳಿವು ತನ್ನ ತಲೆಯೆತ್ತಬಲ್ಲುದು, ಹಾಗೂ ಆಚರಣೆಯ ಮೇಲೆ ತನ್ನ ಉಂಡಿಗೆಯನ್ನೊತ್ತಬಲ್ಲುದು. ಅದರಿಂದ ಮೊದಲು ಇಂದ್ರಿಯಗಳನ್ನು ತಾಳದಲ್ಲಿ ತರಲು ಶ್ರೀಕೃಷ್ಣನ ಉಪದೇಶವಿರುವುದು. ಆದರೆ ಇಂದ್ರಿಯಗಳನ್ನು ತಡೆಯುವದು ಹೇಗೆ ? ಬರಿಯ ಹಟದಿಂದ ಇಂದ್ರಿಯಗಳಾಟವನ್ನು ಮೆಟ್ಟುವದು ಅಳವೇ ? " इन्द्रियाणि प्रमाथीनि हरन्ति प्रसभंमनः " ಇಂದ್ರಿಯಗಳ ಕಸುವೇನು ಕಡಿಮೆಯದೇ ? ಅವು ಮನವನ್ನೂ ತಮ್ಮ ಹಿಂದೆ ಎಳೆದೊಯ್ಯುತ್ತವೆ. ಅಂದರೆ ಮನಸಿಗೆ ಬಗೆಯಲು ಬಿಡುವನ್ನೇ ಕೊಡದಂತೆ ತಟ್ಟನೆ ತಮ್ಮ ಕೆಲಸವನ್ನು ಸಾಗಿಸಿಬಿಡುವವು. ಇದಲ್ಲದೆ ! ಬರಿಯ ಇಂದ್ರಿಯ ನಿಯಮನವನ್ನು ಮಾಡಿಯೂ ಉಪಯೋಗವಿಲ್ಲೆಂದು ಗೀತೆಯೇ ಸಾರುತ್ತದೆ. " बाह्येन्द्रियाणि संयम्य य आस्ते मनसा स्मरन् । इन्द्रियार्थान्विमूढात्मा मिथ्याचारः स उच्यते॥ " ಮತ್ತು ಇಂದ್ರಿಯಗಳ ಸಂಯಮನವು ಅವುಗಳನ್ನು ಉಪವಾಸವಿಡುವದರಿಂದ ಆಗಲಾರದು. ಆದರೆ ಜ್ಞಾನವನ್ನೆಚ್ಚರದಿಂದಿರಿಸುವುದರಿಂದ ಆಗಬಹುದು. ಅಂತೂ ಕಾಮ ಕ್ರೋಧಗಳಳಿಯುವವರೆಗೆ ಜ್ಞಾನವಾಚರಣೆಯಲ್ಲಿ ಳಿಯಲಾರದು, ಜ್ಞಾನವಿಲ್ಲದೆ ಕಾಮ ಕ್ರೋಧಗಳಡಗವು; ಹೀಗೆ ಅನ್ಯೋನ್ಯಾಶ್ರಯವು ಬಂದೊದಗಿ ಇದೊಂದು ಒಗಟವೇ ಆಯಿತು. ಒಳ್ಳೆಯದು, ಪೂರ್ಣ ಜ್ಞಾನವಾಗಿ ಜೀವನ್ಮುಕ್ತರಾದವರ ನಡೆವಳಿಯಾದರೂ ತಮ್ಮ ತಿಳುವಳಿಕೆಯಂತಿರುವದೇ ? ಅವರಲ್ಲಿಯೂ ಸಿಟ್ಟು ದ್ವೇಷಗಳು ಕೆಲವು ಮಟ್ಟಿಗೆ ಕಂಡುಬರುತ್ತವೆ. ಅದರಿಂದ ಅವರ ನಡತೆಯಲ್ಲಿಯೂ ಕೊರತೆ ಇರುವದು. ಅಂತೆಯೇ ಗಳಿಸಿದ ಕರ್ಮವು ಅನುಭೋಗಿಸಿಯಲ್ಲದೆ ತಿಳುವಿನಿಂದಳಿಯಲಾರದೆಂಬ ತೀರ್ಮಾನವನ್ನು ಮಾನಿಸಬೇಕಾಗುವದು. " प्रारब्धस्य भोगादेव क्षयः " ಬೇರೆ ಬೇರೆ ಸಾಧುಗಳ ಆಚರಣೆಯು ಬಗೆ ಬಗೆ

ಯಾಗಿರುವ ಕಾರಣವೂ ಇದೇ. ಅರ್ಜುನನು " ಕಾಳಗವನ್ನು ಕೈಗೊಳ್ಳುವುದಿಲ್ಲ. " ಎಂಬ ತನ್ನ ನಿಶ್ಚಯವನ್ನು ತೋರಿಸಲು, "ಈ ನಿನ್ನ ನಿಶ್ಚಯವು ವ್ಯರ್ಥವು. ನಿನ್ನ ಕ್ಷಾತ್ರ ಪ್ರಕೃತಿಯು ( ಮುನ್ನಿನಜನ್ಮದಲ್ಲಿ ಗಳಿಸಿದುದು ) ನಿನ್ನನ್ನು ಕಾಳಗ ಮಾಡಲು ತೊಡಗಿಸುವದು." ಎಂದು ಭಗವಂತನುಸುರಿದನು. ಇದರ ಮೇಲಿಂದ ಆಚಾರವು ನಮ್ಮ ವಿಚಾರದ ಕೈಯಲ್ಲಿಲ್ಲವೆನ್ನಬೇಕಾಗಿ ಬಂತು. ಜ್ಞಾನ ಹಾಗೂ ವ್ಯವಹಾರಗಳ ಸಂಬಂಧದ ವಿಷಯವಾಗಿ ಹೀಗೆ ತಿರುವು ಮುರುವು ಅನುಮಾನಗಳು ಹೊರಡತೊಡಗುವದರಿಂದ ಇವೆರಡರ ಬಳಗವು ತಿರುಳಿನಲ್ಲಿ ಯಾವ ಬಗೆಯಾಗಿದೆಯೆಂಬುದನ್ನು ಬಗೆಯುವದೇ ಈ ಬರಹದ ಬಯಕೆ.

( ಮುಂದೆ ಸಾಗುವದು. )

---

## ಸೀಮೋಲ್ಲಂಘನ

ಹೋಗೋಣ ಬಾ ! ಇನ್ನು ಸೀಮೆಯನು ದಾಟ ॥ ಪಲ್ಲ ॥

ಪಂಗಡವ ಪಂಗಡವ ಎಂಗಡಿಸಿ ಕಟ್ಟು ।
ಸಂಗಡಿಸಿ ಕೂಡಿರುವ ಬಾಳುವೆಯ ಗುಟ್ಟು ॥
ಕಂಗೊಳಿಸೆ ಹಾಗಿರುವ ಬಿರುದನ್ನು ತೊಟ್ಟು ।
ಹೋಗೋಣ ಬಾ ಇನ್ನು ಸೀಮೆಯನು ದಾಟ ॥೧॥

ಇಲ್ಲಸಲ್ಲದ ಕಾಲು ತೊಡರುಗಳ ಕಡಿದು ।
ಬಲ್ಲವರು ತೋರಿರುವ ಹಾದಿಯನು ಹಿಡಿದು ॥
ಎಲ್ಲರೂ ಒಂದಾಗಿ ಒಂದಾಗಿ ನಡೆವು ।
ಹೋಗೋಣ ನಾವೆಲ್ಲ ಸೀಮೆನು ದಾಟ ॥೨॥

ಅಕ್ಕತಂಗೆಂದಿರಿಗೆ ವಿದ್ಯೆಯನು ಕಲಿಸಿ ।
ಚಿಕ್ಕ ಮಕ್ಕಳ ಬುದ್ಧಿ ಮುದ್ದಾಡಿ ಬಲಿಸಿ ॥
ನಕ್ಕು ನಲಿದಾಡಿ ಹಿರಿಕಿರಿಯರನು ಒಲಿಸಿ ।
ಅಡಿಗಡಿಗೆ ಹೋಗೋಣ ಸೀಮೆಯನು ದಾಟ ॥೩॥

ಮಾಡಿದರೆ ನನ್ನಿ ತಾ ಮಾಡುವರು ನನ್ನಿ ।
ನೋಡಿನೋಡಿದವರ್ಗೆ ಬನ್ನಿ ಬನ್ನೆನ್ನಿ ॥
ಕೊಡಬನ್ನಿ—ಕೊಡಬನ್ನಿ—ಕೊಡುವೆನೀ ಬನ್ನಿ ।
ಹೀಗೆಂದು ಸಾಗೋಣ ಸೀಮೆಯನು ದಾಟ ॥೪॥

## ಅಭಿಪ್ರಾಯಕ್ಕಾಗಿ ತಲ್ಪಿದ ಪುಸ್ತಕಗಳು.

**ರಂಗಭೂಮಿ:**—ಸಿಗುವ ಸ್ಥಳ;–ರಂಗಭೂಮಿ ಆಫೀಸ, ಬಸವನ ಗುಡಿ ಬೆಂಗಳೂರು. ೨ ವರ್ಷ. ೧ ಸಂಚಿಕೆ.

**ಇಂಗ್ಲೀಷ ಗೀತಗಳು:**—ಸಿಗುವ ಸ್ಥಳ—ಕರ್ನಾಟಕ ಸಂಘ ಸೆಂಟ್ರಲ್ ಕಾಲೇಜ ಬೆಂಗಳೂರು. ಶ್ರೀಯುವರ ಕವಿತೆಗಳು.

**ಮತೋದ್ಧಾರಕ:**—(ಬಸವೇಶ್ವರ ಚರಿತ್ರೆ) ಇದು ತೆಲಗು ಭಾಷೆಯಲ್ಲಿರುವದು. ಸಿಗುವ ಸ್ಥಳ—M. H. School Advani ಬೆಲೆ ೦—೧೨—೦

**ಬರಹಗಾರರು:**—ವಿದ್ವಾನ್ ಗಂಟಿ ಸೋಮಯಾಜಿ ಬಿ. ಎ, ಎಲ್. ಟಿ.

ಮುಂದಿನ ಸಂಚಿಕೆಯಲ್ಲಿ ಇವೆಲ್ಲ ಪುಸ್ತಕಗಳ ಮೇಲೆ ಅಭಿಪ್ರಾಯಗಳು ಬರುವವು.

---

# ವಿಸರ್ಜನ

### ಪ್ರಥಮಾಂಕ

### ಪ್ರಥಮದೃಶ್ಯ

### ಮಂದಿರ

---

**ಗುಣವತಿ**

ಗುಣ:— ತಾಯಿಯ ಬಳಿಯಲ್ಲಿ ಯಾವ ದೋಷ ಮಾಡಿದೆನೋ? ಹೊಟ್ಟೆಗಾಗಿ ಸಂತಾನ ವಿಕ್ರಯ ಮಾಡುವ ಭಿಕಾರಿಯ ಹೊಟ್ಟೆಯಲ್ಲಿಯೂ ಮಕ್ಕಳನ್ನು ಕೊಡುವಿ; ಲೋಕ ಲಜ್ಜೆಗಾಗಿ ಶಿಶುಹತ್ಯೆಮಾಡುವ ಪಾಪಿಷ್ಠೆಯ ಹೊಟ್ಟೆಯಲ್ಲಿಯೂ ಮಕ್ಕಳನ್ನು ಕಳಿಸುವಿ. ಅಸಹಾಯ ಜೀವ! ನಾನು ಬಂಗಾರದ ಪಲ್ಲಕ್ಕಿಯ ಮಹಾರಾಣಿ! ನೂರಾರು ದಾಸ ದಾಸಿಯರನ್ನೂ ಕೂಡಿಕೊಂಡು ಇದ್ದೇನೆ. ಆದರೆ ಒಂದು ಮಗುವಿನ ಸೊಂಕನ್ನು ಬಯಸಿ ತಪ್ತವಕ್ಷಳಾಗಿರುವೆ. ನನ್ನ ಪ್ರಾಣದಲ್ಲಿ ಪ್ರಾಣಾಧಿಕವಾದ ಇನ್ನೊಂದು ಪ್ರಾಣವನ್ನು ಅನುಭವಿಸುವದಕ್ಕಾಗಿ......? ಈ ಎದೆ, ಈ

ಬಾಹು ಈ ತೊಡೆ ಈ ನೋಟ ಇವೆಲ್ಲವುಗಳಿಂದ ನಿಬಿಡವಾದೊಂದು ಜೀವಂತ ಗೂಡನ್ನು ಕಟ್ಟುವೆನೊಂದೇ ಒಂದು ಪ್ರಾಣಕಣಕ್ಕಾಗಿ ! ಮೊಟ್ಟ ಮೊದಲ ದೃಷ್ಟಿಯಿಂದಲೂ ನನ್ನನ್ನು ತನ್ನ ಕಡೆಗೆಳೆಯುವ ಕಣ್ಣುಗಳು ! ತೊದಲಾಡಲೂ ಬರದ ಮುಖದಲ್ಲಿ ಅಕಾರಣ ಆನಂದದ ಮೊದಲನಗೆ! ಕುಮಾರನ ತಾಯಿಯಾದ ಅಮ್ಮಾ ಯಾವ ಪಾಪಕ್ಕಾಗಿ ನನ್ನನ್ನು ಮಾತೃಸ್ವರ್ಗದಿಂದ ವಂಚಿತಳನ್ನಾಗಿ ಮಾಡಿದೆ.

( ರಘುಪತಿ ಬರುವನು. )

ಗುರುವೇ! ಬಹಳ ದಿನಗಳಿಂದ ತಾಯಿಯನ್ನು ಪೂಜಿಸುತ್ತ ಬಂದೆ. ಕಂಡೂ ತಿಳಿದೂ ಯಾವಪಾಪವನ್ನೂ ಮಾಡಿಲ್ಲ. ನನ್ನ ಗಂಡನು ಪುಣ್ಯ ಶರೀರಿಯು, ಮಹಾದೇವಸಮನು! ಅಂದಮೇಲೆ ನಮ್ಮಲ್ಲಿ ಯಾವ ದೋಷವನ್ನು ಕಂಡು ಮಹಾಮಾಯೆಯು ನಿಃಸಂತಾನ ಸ್ಮಶಾನ ಚಾರಣೆಯನ್ನಾಗಿ ನನ್ನನ್ನು ಮಾಡಿದಳೊ !

ರಘು:— ತಾಯಿಯ ಆಟವನ್ನು ಯಾರು ತಿಳಿಯಬಲ್ಲರು-- ಹೇಳು? ಪಾಷಾಣ ತನಯೆಯು ಇಚ್ಛಾಮಯಿಯು! ನಮ್ಮ ಸುಖದುಃಖಗಳು ಅವಳ ಇಚ್ಛೆ! ಧೈರ್ಯವಿರಲಿ. ಈಸಲ ನಿನ್ನ ಹೆಸರಿನಿಂದ ತಾಯಿಯ ಪೂಜೆಯಾದೀತು. ಶ್ಯಾಮೆಯು ಪ್ರಸನ್ನಳಾಗುವಳು.

ಗುಣ:— ಈ ವರ್ಷ ಪೂಜೆಯ ಬಲಿಗಾಗಿ ಪಶುಗಳನ್ನು ನಾನೇ ಕೊಡುವೆ. ವ್ರತವನ್ನು ಮಾಡುವೆ. ತಾಯಿಯು ನನಗೆ ಸಂತಾನವನ್ನು ಕೊಟ್ಟರೆ ವರುವರುಷಕ್ಕೆ ನೂರು ಕೋಣಗಳನ್ನು ಮುನ್ನೂರು ಕುರಿಗಳನ್ನೂ ಕೊಡುವೆ.

ರಘು:— ಪೂಜಾಕಾಲವು ಆಯಿತು.

( ಇಬ್ಬರೂ ಹೋಗುವರು. )

( ಗೋವಿಂದ ಮಾಣಿಕ್ಯ, ಜಯಸಿಂಗನೂ ಅಪರ್ಣೆಯೂ ಬರುವರು. )

ಜಯ:— ಮಹಾರಾಜರ ಅಪ್ಪಣೆಯೇನು ?

ಗೋವಿಂದ:— ಚಿಕ್ಕದೊಂದು ಕುರಿಮರಿ! ಈ ಬಡಹುಡಿಗೆಯ ಸ್ನೇಹಪುತ್ರ! ತಾಯಿಯ ಅಡಿಯಲ್ಲಿ ಬಲಿಕೊಡಲು ಕಸಿದುಕೊಂಡು ಬಂದೆಯಲ್ಲವೇ? ಈ ದಾನವನ್ನೇನು ತಾಯಿಯು ಪ್ರಸನ್ನ ದಕ್ಷಿಣಹಸ್ತದಲ್ಲಿ ಸ್ವೀಕರಿಸುವಳೇ?

ಜಯ:— ಅದು ಹೇಗೆ ಹೇಳಲಿ? ಆಳುಗಳು ಎಲ್ಲೆಲ್ಲಿಂದ ಪಶುಗಳನ್ನು ದೇವಿಯ ಪೂಜೆಗಗಿಂ ತರುವರೋ? ಎಲಾ ನೀನೇಕೆ ಅಳುತ್ತೀ? ಯಾವುದನ್ನು ವಿಶ್ವಮಾತೆಯು ತಾನಾಗಿ ತೆಗೆದುಕೊಂಡಿರುವಳೋ ಅದಕ್ಕಾಗಿ ಅಳುವದು ಲೇಸೇ?

ಅಪರ್ಣಾ:— ಯಾರು ಆ ನಿನ್ನ ವಿಶ್ವಮಾತೆ? ನನ್ನ ಮಗುವಿಗೆ ಅವಳು ಗೊತ್ತಿಲ್ಲ ಪರದೇಶಿಯಾದ ನನ್ನ ಮರಿಗೆ ತನ್ನ ತಾಯಿಯು ಗುರುತೇ ಮೊದಲಿಲ್ಲ. ನಾನೊಂದಿಷ್ಟು

ತಡಮಾಡಿ ಬಂದರೆ ಅದು ಹುಲ್ಲುಕಡ್ಡಿಯನ್ನೇ ಕಚ್ಚುವದು. ಹಾದಿಯ ಕಡೆಗೇ ನೋಡುತ್ತ ಒದರುತ್ತ ಇರುವದು. ಅದನ್ನು ತೊಡೆಯಲ್ಲಿರಿಸಿ ಭಿಕ್ಷೆಯ ಅನ್ನವನ್ನು ಅದರೊಡನೆ ತಿನ್ನುವೆನು. ನಾನು ಅದರ ತಾಯಿ!

ಜಯ:—ಮಹಾರಾಜ! ನನ್ನ ಪ್ರಾಣದಂಶವನ್ನು ಕೊಟ್ಟು ಅದನ್ನು ಬದುಕಿಸುತ್ತಿದ್ದೆನು. ತಾಯಿಯು ಅದನ್ನು ಸ್ವೀಕರಿಸಿರುವಳು ಅದನ್ನು ತಿರುಗಿ ತರುವದು ಹೇಗೆ?

ಅಪ:—ತಾಯಿಯು ಅದನ್ನು ತಕ್ಕೊಂಡಳೇ? ಸುಳ್ಳು! ಅದನ್ನು ರಾಕ್ಷಸಿ ತೆಗೆದುಕೊಂಡಳು!

ಜಯ:— ಛಿ! ಛಿ! ಆ ಮಾತು ಆಡಬೇಡ!

ಅಪ:—ತಾಯೀ! ನೀನು ಬಡವಿಯ ಧನವನ್ನು ಅಪಹರಿಸಿದಿ. ರಾಜರು ಅಪಹರಿಸಿದರೆ, ಅಖಿಲಲೋಕದ ರಾಜನೊಬ್ಬನಿರುವನೆಂದು ಕೇಳಿಬಲ್ಲೆ. ನೀನೇ ಕೂತು ಅಪಹರಿಸಿದರೆ ನಿನ್ನ ವಿಚಾರಣೆಯನ್ನು ಯಾರು ಮಾಡಬೇಕು? ಅರಸೇ ನೀನಾದರೂ ಹೇಳು.

ಗೋವಿಂದ:— ಮಗಳೇ! ನನ್ನಬಾಯಿಕಟ್ಟಿತು. ಇಷ್ಟೇಕೆ ವ್ಯಥೆ? ಇಷ್ಟೇಕೆ ರಕ್ತ! ಇದನ್ನಾರು ನನಗೆ ಹೇಳಬಲ್ಲರು?

ಅಪರ್ಣಾ:— ಈ ಮೆಟ್ಟುಗಟ್ಟೆಗಳಗುಂಟ ರಕ್ತದ ಕಲೆಗಳಿವೆ. ಇವು ಅದರವೇ? ಅಯ್ಯೋ ನನ್ನ ಮರಿಯೇ! ಅಯ್ಯೋ ಅಯ್ಯೋ. ನನ್ನ ಕೂಗಿಕೊಂಡು ಎಷ್ಟು ಅತ್ತಿ? ನಡುನಡುಗಿ ಕಳವಳದಿಂದ ನಾಲ್ಕೂ ನಿಟ್ಟಿನಲ್ಲಿ ಕಣ್ಬಿಡುತ್ತ ನಿಟ್ಟಿಸಿ ನಿಟ್ಟಿಸಿ ಎಷ್ಟೆಷ್ಟು ನೋಡಿದೆ! ನನ್ನ ಜೀವವೆಲ್ಲಿತ್ತೋ ಅಲ್ಲಿಂದಲ್ಲೆ ಏಕೇ ಬಿಡುಗಡೆ ಹೊಂದಿಬರಲಿಲ್ಲ.

ಜಯ:—(ಮೂರ್ತಿಯನ್ನು ಕುರಿತು) ಆಜನ್ಮವಾಗಿ ನಿನ್ನನ್ನು ಪೂಜಿಸುತ್ತ ಬಂದೆ. ಆದರೂ ನಿನ್ನ ಮಾಯೆ ತಿಳಿಯಲಿಲ್ಲ. ಮನುಷ್ಯನ ಜೀವವೇನೋ ಕರುಣೆಯಿಂದಳುವದು. ಆದರೆ ವಿಶ್ವಜನನಿಯೆಂಬವಳಿಗೇನೋ ದಯೆಯೇ ಇಲ್ಲ!

ಅಪ:— ನೀನೇನು ನಿಷ್ಠುರನಲ್ಲಾ ! ನಿನ್ನ ಕಣ್ಣುಗಳಲ್ಲಿ ನನ್ನ ದುಃಖಕ್ಕಾಗಿ ನೀರು ನಿಂತಿವೆ. ಹಾಗಾದರೆ ಬಾ; ಈ ಮಂದಿರವನ್ನು ಬಿಟ್ಟು ಬಾ. ಹಾಗಾದರೆ ಕ್ಷಮಿಸುಸುಳ್ಳೇ ನಿನ್ನನ್ನು ನಾನು ಅಪರಾಧಿ ಎಂದೆಣಿಸಿದೆ.

ಜಯ:—(ಮೂರ್ತಿಯನ್ನು ಕುರಿತು) ಹೇ! ಗಿರಿನಂದನಿ! ಕರುಣಾಕಾತರ ಕಂಠಸ್ವರದಿಂದ ಇದಾವ ಹೊಸ ಸಂಗೀತವು ನಿನ್ನೀ ಮಂದಿರದಲ್ಲಿ ಇಂದು ನಿನದಿಸುತ್ತಿರುವದು. ಭಕ್ತಹೃದಯಲ್ಲಿ ಅಪೂರ್ವವಾದ ಒಂದು ಸಂವೇದನೆಯ ವ್ಯಾಕುಲತೆ ಎದ್ದಿತು. ಹೇ ಶೋಭನೇ ಈ ಮಂದಿರವನ್ನು ಬಿಟ್ಟು ಎಲ್ಲಿಗೆ ಹೋಗಲಿ ? ಎಲ್ಲಿ ಆಶ್ರಯ?

ಗೋವಿಂದ:—(ಜನಾಂತಿಕ ) ಪ್ರೇಮವಿದ್ದಲ್ಲಿ! (ಹೋಗುವನು)

ಜಯ:—ಪ್ರೇಮವೆಲ್ಲಿದೆ! ಭದ್ರೆ ನನ್ನ ಗುಡಿಸಿಲಿಗೆ ನಡೆ, ಅತಿಥಿಯನ್ನು ದೇವಿಯೆಂದು ಪೂಜಿಸುವೆನೆಂದು ನನ್ನ ಪಣ.

## ೨ನೇ ದೃಶ್ಯ

## ರಾಜಸಭೆ ಸಭಾಸದರು

### ರಾಜ, ರಘುಪತಿ, ನಕ್ಷತ್ರರಾಯ

ಪ್ರವೇಶಿಸುವರು

ಎಲ್ಲರೂ :— (ಎದ್ದು) ಜಯ ಜಯ ಮಹಾರಾಜ !

ರಘು:— ಬಲಿಯ ಪಶುಗಳ ಸಂಗ್ರಹಕ್ಕಾಗಿ ರಾಜಭಂಡಾರಕ್ಕೆ ಬಂದಿರುವೆ.

ಗೋವಿಂದ:— ಈ ವರ್ಷದಿಂದ ಮಂದಿರದಲ್ಲಿ ಬಲಿಕೊಡುವದು ನಿಷೇಧಿಸಲ್ಪಟ್ಟದೆ.

ನಯನರಾಯ:— ಬಲಿ ನಿಷೇಧವೇ?

ಮಂತ್ರಿ:— ನಿಷೇಧವೇ !

ನಕ್ಷತ್ರ:— ಅಯ್ಯೋ ! ಬಲಿನಿಷೇಧ !

ರಘು:— ಇದನ್ನೇನು ಕನಸಿನಲ್ಲಿ ಕೇಳುವೆನೋ ?

ಗೋ:— ಗುರುವೇ ! ಇದು ಸ್ವಪ್ನವಲ್ಲ. ಇಷ್ಟು ದಿನವೇ ಸ್ವಪ್ನದಲ್ಲಿದ್ದೆ, ಇಂದು ಎಚ್ಚತ್ತೆ. ಬಾಲಿಕೆಯ ರೂಪವನ್ನು ಧರಿಸಿ ತಾಯಿಯೇ ಬಂದು ನನಗೆ ಹೇಳಿದಳು. "ಜೀವರಕ್ತವನ್ನು ಸಹಿಸೆನೆ" ಎಂದು.

ರಘು:— ಇಷ್ಟು ದಿನ ಹೇಗೆ ಸಹಿಸಿದಳು ? ಸಾವಿರಾರು ವರ್ಷಗಳಿಂದ ರಕ್ತ ಕುಡಿಯುತ್ತ ಬಂದವಳಿಗೆ ಇಂದು ಅರುಚಿಯೇ ?

ಗೋವಿಂದ:— ಕುಡಿದಿಲ್ಲ. ಇಲ್ಲ. ನೀವು ರಕ್ತಪಾತ ಮಾಡುವಾಗ ಅವಳು ಮೋರೆ ತಿರುವುತ್ತಿದ್ದಳು.

ರಘು:— ಮಹಾರಾಜ ! ನೀವೇನು ಮಾಡುತ್ತಿರುವಿರೆಂಬುದನ್ನು ಚೆನ್ನಾಗಿ ಭಾವಿಸಿರಿ. ಶಾಸ್ತ್ರ ವಿಧಿಗಳು ನಿಮ್ಮ ಅಧೀನವಲ್ಲ.

ಗೋವಿಂದ:— ಎಲ್ಲ ಶಾಸ್ತ್ರಗಳನ್ನು ದೇವಿಯ ಆದೇಶವು ಮಿಕ್ಕುವದು.

ರಘು:— ಶುದ್ಧ ಭ್ರಮೆ ! ಇದೆಂಥ ಅಹಂಕಾರ! ತಿಳಿಗೇಡಿ ಮಾನವಾ, ದೇವಿಯ ಆದೇಶವನ್ನು ನೀನೇ ಕೇಳಿದೆಯೂ ? ನಾನಿಲ್ಲವೇ ?

ನಕ್ಷತ್ರ:—ಇದೇನು ಆಶ್ಚರ್ಯ ! ಮಂತ್ರಿಗಳೇ ! ಗುರುಗಳು ಕೇಳಿರಲಿಕ್ಕಿಲ್ಲವೇ!

ಗೋವಿಂದ:— ದೇವಿಯ ಅಪ್ಪಣೆಯು ನಿತ್ಯವು ಜಗದಲ್ಲಿ ನಿನದಿಸುತ್ತಾ ಇದೆ. ಆದರೆ ಆ ವಾಣಿಯನ್ನು ಕಿವುಡು ಜಗವು ಕೇಳಿಯೂ ಕೇಳದಂತಿದೆ.

ರಘು:— ಪಾಖಂಡಿಯೇ ನಾಸ್ತಿಕ ನೀನು !

ಗೋವಿಂದಃ— ಗುರುವೇ, ಹೊತ್ತಾಗುತ್ತಿದೆ. ಮಂದಿರದ ಕೆಲಸಕ್ಕಾಗಿ ಹೋಗಿರಿ. ನನ್ನ ತ್ರಿಪುರ ರಾಜ್ಯದಲ್ಲಿ ಜೀವ ಜನನಿಯ ಪೂಜೆಯ ನೆವದಿಂದ ಯಾರು ಜೀವಹತ್ಯೆಯನ್ನು ಮಾಡುವರೋ ಅವರನ್ನು ಗಡಿಪಾರು ಮಾಡಲಾದೀತೆಂದು ಹಾದಿ ಬೀದಿಗಳಲ್ಲಿಯೂ ಸಾರಿರಿ.

ರಘುः— ಇದೇ ಖಂಡಿತವೇ ?

ಗೋವಿಂದಃ— ಖಂಡಿತ.

ರಘುः— (ಎದ್ದು) ಹಾಗಾದರೆ ಹಾಳಾಗಿ ಹೋಗು !

ಚಾಂದः— (ಓಡಿಬಂದು) ಹಾ ತಡೆಯಿರಿ ತಡೆಯಿರಿ !

ಗೋವಿಂದಃ— ಚಾಂದಪಾಲನೇ, ಕುಳಿತುಕೋ ! ಗುರುಗಳು ಆಡಿಕೊಳ್ಳಲಿ. ತಮ್ಮ ಮನೋ ವ್ಯಥೆಯನ್ನು ಹಗುರು ಮಾಡಿಕೊಂಡು ಕೆಲಸಕ್ಕೆ ಹೋಗಲಿ.

ರಘುः— ನೀನೇನೆಂದು ಭಾವಿಸಿರುವೆ. ತ್ರಿಪುರೇಶ್ವರಿಯು ತ್ರಿಪುರರಾಜ್ಯದೊಳಗಿನ ಓರ್ವ ಪ್ರಜೆಯೆಂದೇ ? ಅವಳ ಮೇಲೆ ನಿನ್ನ ಕಟ್ಟಳೆಯೇ ? ಅವಳ ಬಲಿಯನ್ನು ನೀನು ನಿಲ್ಲಿಸುವೆಯಾ. ಇದೆಂದಿಗೂ ಆಗದು—ಸಾಗದು. ನಾನು ತಾಯಿಯ ಅಡಿಯಾಳಿದ್ದೇನೆ.

(ಹೋಗುವನು.)

ನಯನಃ—ಕೈಕೆಳಗಿನವನು ಕೇಳುವನು; ಕ್ಷಮಿಸಬೇಕು ಮಹಾರಾಜ. ದೇವಿಯ ಬಲಿಯನ್ನು ನಿಲ್ಲಿಸುವ ಅಧಿಕಾರವು ಯಾರಿಗೆ—

ಚಾಂದಪಾಲಃ— ಸೇನಾಪತಿಯೇ ಶಾಂತನಾಗು.

ಮಂತ್ರಿः—ಮಹಾರಾಜ ! ಒಮ್ಮೆಲೇ ನಿಶ್ಚಯವನ್ನೇ ಮಾಡಿದಿರಾ ? ಅಪ್ಪಣೆ ತಿರುಗದೇ !

ಗೋವಿಂದಃ— ಆಗಲಾರದು ! ಪಾಪವಿನಾಶನದಲ್ಲಿ ವಿಲಂಬವು ಉಚಿತವಲ್ಲ.

ಮಂತ್ರಿः— ಪಾಪವೆಂತು ಪರಮಾಯುಷಿಯಾಗಿ ಉಳಿಯುತ್ತಿತು? ಎಷ್ಟೋ ನೂರು ವರ್ಷಗಳಿಂದ ಯಾವ ಪ್ರಾಚೀನ ಆಚಾರವು ದೇವಿಯ ಚರಣದಲ್ಲಿ ಬೆಳೆದು ಬಂದಿತೋ ಅದು ಹೇಗೆ ಪಾಪ ?

ಗೋವಿಂದः— (ಉತ್ತರ ತೋಚದೆ ಚಿಂತಾಕ್ರಾಂತ.)

ನಕ್ಷತ್ರः— ಛೀ! ಪಾಪವು ಹೇಗಾದೀತು !

ಮಂತ್ರಿः— ಈ ಸನಾತನ ರೀತಿಯನ್ನು ನಮ್ಮ ಅಜ್ಜ ಮುತ್ತೆಂದಿರು ಭಕ್ತಿಪೂರ್ವಕವಾಗಿ ಯತ್ನದಿಂದಾ ಪಾಲಿಸುತ್ತಾ ಬಂದಿದ್ದಾರೆ. ಇದರ ಅಪಮಾನವೆಂದರೆ ಅವರ ಅಪಮಾನವಲ್ಲವೇ ? (ರಾಜನು ಇನ್ನೂ ಚಿಂತೆಯಲ್ಲಿ)

ನಯನः—ವಿಚಾರಿಸಿರಿ; ವಿಚಾರಿಸಿರಿ ಮಹಾರಾಜ ! ಯುಗಯುಗಾಂತರದಿಂದ ಲಕ್ಷಾವಧಿ ಭಕ್ತರಿಗೆ ಸಮ್ಮತವಾಗಿದ್ದುದನ್ನು ನಿಲ್ಲಿಸಲು ನಿಮಗೆ ಅಧಿಕಾರವಿದೆಯೇ ?

ಗೋವಿಂದ:— (ಸಿಟ್ಟುಸಿಟ್ಟು) ಸಾಕು ನಿಮ್ಮ ತರ್ಕ ! ಮಂತ್ರಿಯೇ ಹೋಗು, ಇಂದಿನಿಂದ ಬಲಿದಾನವು ನಿಲ್ಲಿಸಲ್ಪಟ್ಟಿದೆಯೆಂದು ನನ್ನೀ ಆದೇಶವನ್ನು ಸಾರು.

ಮಂತ್ರಿ:— ಆದರೆ ಮಹಾರಾಜ ! ರಾಣಿಯವರು ಬೇಡಿಕೊಂಡ ಬಲಿದಾನದ ಪಶುಗಳು ಗುಡಿಯತ್ತಣ ಹಾದಿಯನ್ನು ಹಿಡಿದಿವೆ. ಗುಡಿಯ ಸಮೀಪ ಕೂಡ ಹೋಗಿರಬಹುದು.

ಗೋವಿಂದ:— ಅವುಗಳನ್ನು ಹಿಂದಕ್ಕಟ್ಟಿರಿ (ಹೋಗುವ)

ಮಂತ್ರಿ:— ಇದೇನಾಯಿತು ?

ನಕ್ಷತ್ರ:— ಅಯ್ಯೋ! ಮಂತ್ರಿಯೇ ! ಇದೇನಾಯಿತು ? ಬುದ್ಧರ ಮಂದಿರಗಳಲ್ಲಿ ಬಲಿಯಿಲ್ಲವೆಂದು ಕೇಳುತ್ತೇವೆ. ಅಂದಮೇಲೆ ಬುದ್ಧರಲ್ಲಿಯೂ ಹಿಂದೂಗಳಲ್ಲಿಯೂ ಭೇದವೇನುಳಿಯಿತು ? ಚಾಂದಪಾಲ, ನಿನ್ನದೇನು ಮತ್ತೆ ? ನೀನೇಕೆ ಸುಮ್ಮನಿರುವಿ ?

ಚಾಂದ:— ನಾನು ಹೇಡಿ, ಕ್ಷುದ್ರ ಪ್ರಾಣಿ, ಬುದ್ಧಿಕಡಿಮೆ, ತಿಳಕೊಳ್ಳದೆ ಅರಸರ ಅಪ್ಪಣೆಯನ್ನು ಪಾಲಿಸುವೆ; ಅಷ್ಟೇ.

---

## ೩ ನೇ ದೃಶ್ಯ.

## ಮಂದಿರ.

—:o:—

**ಜಯಸಿಂಹ**

ಜಯ:— ಎಲೌ ತಾಯೆ ! ಬರಿ ನಾನೊಬ್ಬ, ನೀನೊಬ್ಬಳು ! ಈ ಮಂದಿರದಲ್ಲಿ ಇಡಿ ದಿನವೂ ಯಾರೂ ಇಲ್ಲ. ಇಡೀ ತುಂಬಾ ದಿನ ! ನಡು ನಡುವೆ ಯಾರು ನನ್ನನ್ನು ಒಡಂ ಹೋಗುವರು? ಆದರೂ ನಿನ್ನ ಹತ್ತರ ನಾನೊಬ್ಬ ಏಕಾಕಿಯೆಂದೇ ಎನಿಸುತ್ತಿದೆ.

( ಕೆರೆಯಲ್ಲಿ ಗಾನ )

ನಾನೊಬ್ಬಳೇ ನಡೆದಿರುವೆನೀ ಭವದಲ್ಲಿ
ನನಗೆ ಹಾದಿಯನ್ನು ಹೇಳಿಕೊಡುವರಾರಿಲ್ಲಿ?

ಜಯ:— ಎಲೌ ತಾಯೆ ! ಇದೇನು ಮಾಯೆ ? ದೇವತೆಗಳಿಗೆ ಮಾನವರ ಪ್ರಾಣವು ಪ್ರಾಣವನ್ನೀಯುವದು. ಇದುವರೆಗೆ ನೀನು ನಿರ್ವಾಕಳೂ ನಿಶ್ಚಲಳೂ ಆಗಿದ್ದೆ. ಇದೀಗ ನಿನ್ನ ಪಕ್ಕಳ ಕಂಠಸ್ವರದಿಂದ ಎಚ್ಚತ್ತು ಜೀವಂತಳಾಗಿ ಎದ್ದೆಯಾ ಜನನಿ !

( ಹಾಡುತ್ತ ಹಾಡುತ್ತ ಅಪರ್ಣೆಯು ಪ್ರವೇಶ )

ನಾನೊಬ್ಬಳೇ ನಡೆದಿರುವೆನೀ ಭವದಲ್ಲಿ,
ನನಗೆ ಹಾದಿಯನ್ನು ಹೇಳಿಕೊಡುವರಾರಿಲ್ಲ?

ಭಯವಿಲ್ಲ ಭಯವಿಲ್ಲ,
ನಿನ್ನ ಮನದಲ್ಲಿಯೇ ಹೋಗು,

ಏಕಾಕಿಯಾದ ಮಧುಪವು ಧ್ಯಾನಿಸಿ,
ಕೇವಲ ಪುಷ್ಪಸೌರಭಕ್ಕಾಗಿ ಹೋಗುವಂತೆ!

ಜಯ:— ಕೇವಲ ಏಕಾಕಿ! ದಕ್ಷಿಣದ ಗಾಳಿ ಕಟ್ಟಾದರೆ, ಹೂಗಳ ಗಂಧವು ಬಾರದಿದ್ದರೆ, ಹತ್ತು ದಿಕ್ಕುಗಳು ಹತ್ತು ಸಂದೇಹಗಳಿಗೆ ಸಮನಾಗಿ ಎಚ್ಚತ್ತುನಿಂತರೆ— ಆಗ ಎಲ್ಲಿ ಸುಖ, ಎಲ್ಲಿಹಾದಿ? ಯಾರಿಗೆ ಏಕಾಕಿ ಯೆನ್ನುವಿ! ಬಲ್ಲೆಯಾ?

ಅಪರ್ಣಾ:— ಬಲ್ಲೆ. ತುಂಬಿದ ಮನಸ್ಸಿನಿಂದ ಕುಳಿತಾಗ ಕೊಟ್ಟೇನೆಂದರೆ ತೆಗೆದುಕೊಳ್ಳುವವರಾರಿಲ್ಲ!

ಜಯ:— ಸೃಷ್ಟಿಯ ಪೂರ್ವದಲ್ಲಿ ದೇವತೆ ಏಕಾಕಿಯಾಗಿರುವಂತೆ! ಹಾಗೇ ಹೌದು! ಮನಸ್ಸಿನಲ್ಲೆನಿಸುತ್ತಿದೆ— ಈ ಜೀವನವು ತೀರ ಹಾಗೇ,— ಎಷ್ಟು ದೊಡ್ಡದೋ ಅಷ್ಟು ಶೂನ್ಯ, ಅಷ್ಟು ಅನವಶ್ಯಕ ಹೀನ!

ಅ:— ಜಯಸಿಂಹ! ನೀನೊಬ್ಬ ಏಕಾಕಿಯೆಂದು ಭಾವಿಸುವೆನು! ಅಂತೇ ಕಂಗಾಲರಲ್ಲಿಯೂ ಕಂಗಾಲನಂತೆ ನಿನ್ನನ್ನು ಕಾಣುವೆನು! ನಿನ್ನದನ್ನೆಲ್ಲ ತಕ್ಕೊಳ್ಳುವವರನ್ನು ನೀನು ಹುಡುಕುತ್ತಲಿರುವಿ! ದೀನದುಃಖಿಗಳೆಲ್ಲರ ಬಾಗಿಲಲ್ಲಿ ಭ್ರಮಿಸುತ್ತಲಿರುವಿ! ಇಷ್ಟು ದಿನ ಭಿಕ್ಷೆ ಬೇಡುತ್ತ ತಿರುಗುತ್ತಿರುವೆನು— ಎಷ್ಟು ಜನರನ್ನೂ ನೋಡಿದೆನು, ಎಷ್ಟು ಮುಖಗಳನ್ನೂ ಹೊರಳಿ ಹೊರಳಿ ನೋಡಿದೆನು, ಲೋಕವೆಲ್ಲಾ ಭಿಕ್ಷುಕಳೆಂದೇ ಭಾವಿಸಿದರಾಗಿ ತಿಳಿದೆನು; ಕ್ಷುದ್ರದಯಾಭರಿತರಾಗಿ ಮುಷ್ಟಿ ಭಿಕ್ಷೆ ಹಾಕಿ ದೂರಗೊಳಿಸುವರು; ಯಾವದನ್ನು ಪಡೆದರೆ ನನ್ನ ದೈನ್ಯವೇ ನನಗೆ ನೆನಪಾಗದೋ, ಅಂಥ ದಯವನ್ನು ನಾನೆಲ್ಲಿಯೂ ಕಾಣಲಿಲ್ಲ! ನಿಜವಾಗಿಯೂ ಯಾವನು ದಾತೃವೋ ಅವನು ತಾನೇ ದರಿದ್ರರಿಡೆಗೆ ದಾನರೂಪದಲ್ಲಿಳಿದು ಬರುವನು ಭೂತಲದಲ್ಲಿ. ಆಕಾಶದಿಂದ ಮೇಘವು ಮರುಭೂಮಿಗೆ ವೃಷ್ಟಿರೂಪದಿಂದ ಇಳಿದು ಬರುವಂತೆ— ದೇವಿಯು ಮಾನವಿಯಾಗಿ ಇಳಿದು ಬರುವಳು, ಯಾರನ್ನು ಪ್ರೀತಿಸುವೆನೋ ಅವರ ಸಮ್ಮುಖದಲ್ಲಿ! ದರಿದ್ರನೂ ದಾತನೂ, ದೇವನೂ ಮಾನವನೂ, ಸಮಾನರಾಗುವರು.

ಜಯ:— ಅಗೋ, ನನ್ನ ಗುರುದೇವ ಬಂದನು.

ಅ:— ಹಾಗಾದರೆ ನಾನು ಒಳಕ್ಕೆ ನಡಿದು ಹೋಗುವೆನು. ಈ ಬ್ರಾಹ್ಮಣನನ್ನು ನೋಡಿದರೆ ನನಗೆ ಬಹಳ ಭಯ. ಎಷ್ಟು ಕಠಿನ ತೀವ್ರದೃಷ್ಟಿ! ದೇವಿಯ ಮಂದಿರದ ಪಾಷಾಣ ಸೋಪಾನದಂತೆ ಲಲಾಟವೆಷ್ಟು ಕಠಿಣ!

( ಹೋಗುವಳು )

ಜಯ:— ಕಠಿನವೇ ಹೌದು! ವಿಧಾತೃವಿನಂತೆ! ಎಲ್ಲದರ ನಿಶ್ಚಲನಿರ್ಭರತೆಯು ಕಾಠಿನ್ಯವೇ!

(ರಘುಪತಿ ಬರುವನು)

ಜಯ:— ( ಕಾಲುತೊಳೆಯುವ ನೀರು ಮುಂತಾದುದನ್ನು ಸಿದ್ಧಪಡಿಸಿ ) ಗುರುದೇವಾ

ರಘು:— ನಡೆ, ನಡೆ.

ಜಯ:— ನೀರು ತಂದಿರುವೆ.

ರಘು:— ಇರಲಿ. ನೀರು ಅತ್ತ ಇಡು.

ಜ:— ವಸ್ತ್ರ—

ರ:— ಯಾರಿಗೆ ಬೇಕು!

ಜ:— ನಾನೇನು ಅಪರಾಧ ಮಾಡಿರುವೆ?

ರ:— ಮತ್ತೇ? ನಿನ್ನಪರಾಧವನ್ನೆತ್ತಿಯಾರಾಡಿದರು? ಘೋರಕಲಿಕಾಲವು ತುಂಬಿ ಬಂದಿದೆ! ರಾಹು ಸಮವಾದ ರಾಜನ ಬಾಹುಬಲವು ಬ್ರಹ್ಮತೇಜವನ್ನು ನುಂಗಬಯಸುತ್ತಿದೆ. ಯಜ್ಞವೇದಿಯ ಮುಂದೆ ಸಿಂಹಾಸನವು ಎದೆಸೆಟೆಸಿನಿಲ್ಲಲಿದೆ. ಹಾಯ್ ಹಾಯ್ ಕಲಿಕಾಲದ ಕೀಳುಕಿಗ್ಗಳ ದೇವತೆಗಳೇ! ಅರಸರ ಚಾಟುಕಾರ ಸಭಾಸದರಂತೆ ನೀವೂ ಕೂಡ ತಲೆಬಾಗಿಸಿ ರಾಜಾಜ್ಞೆಯನ್ನು ಸಿರಸಾವಹಿಸುವಿರಾ? ಚತುರ್ಭುಜನೇ ನಿನ್ನ ನಾಲ್ಕೂ ಕೈಗಳನ್ನು ಕಟ್ಟಿಕೊಂಡಿರುವಿಯಾ? ದೈತ್ಯರು ನಿನ್ನ ವೈಕುಂಠವನ್ನು ಕಸಿದುಕೊಂಡರೇ? ದೇವತೆಗಳು ಎಷ್ಟು ರಸಾತಳಕ್ಕೆ ಇಳಿದರು? ದಾನವರು ಮಾನವರು ಒಂದಾಗಿ ವಿಶ್ವದ ರಾಜ್ಯವನ್ನು ದರ್ಪದಿಂದ ಭೋಗಿಸುತ್ತಿರುವರೇ ? ದೇವತೆಗಳು ಸಮರ್ಥರಿರದಿದ್ದರೂ ಬ್ರಾಹ್ಮಣರಿದ್ದಾರೆ. ಬ್ರಾಹ್ಮಣರೋಷಯಜ್ಞದಲ್ಲಿ ರಾಜದಂಡವೂ ಸಿಂಹಾಸನವೂ ಹವಿಯೂ ಸಮಿದ್ಧೂ ಆದಾವು. (ಜಯಸಿಂಹನ ಹತ್ತರ ಸಸ್ನೇಹನಾಗಿ ಹೋಗಿ) ಕಂದಾ ಇಂದು ನಿನ್ನೊಡನೆ ರುಕ್ಷನಾಗಿ ನಡೆದುಕೊಂಡೆ. ಚಿತ್ತವು ಬಹಳೇ ಕ್ಷುಬ್ಧವಾಗಿದೆ.

ಜಯಸಿಂಹ:— ತಂದೇ, ಏನಾಗಿದೆ ?

ರಘು:— ಏನಾಗಿದೆಯೆ! ಅಪಮಾನಿತಳಾದ ತ್ರಿಪುರೇಶ್ವರಿಯನ್ನು ಕೇಳು. ಏನಾಗಿದೆಯೆಂಬುದನ್ನು ಈ ಬಾಯಿಯಿಂದ ಹೇಗೆ ಹೇಳಲಿ ?

ಜಯ:— ಅಪಮಾನವಾರು ಮಾಡಿದರು ?

ರಘು:— ಗೋವಿಂದ ಮಾಣಿಕ್ಯ

ಜಯ:— ಗೋವಿಂದ ಮಾಣಿಕ್ಯನೇ ?- ಯಾರಿಗೆ ?

ರಘು:— ಯಾರಿಗೇ? ನಿನಗೆ ನನಗೆ ಸರ್ವಶಾಸ್ತ್ರಗಳಿಗೆ ಸರ್ವದೇಶಕ್ಕೆ ಸರ್ವ ಕಾಲಕ್ಕೆ ಸರ್ವ ದೇಶಕಾಲದ ಅಧಿಷ್ಠಾತ್ರಿಯಾದ ಮಹಾಕಾಲಿಗೆ ? ಈ ಕ್ಷುದ್ರಸಿಂಹಾಸನದ ಮೇಲೆ ಕುಳಿತು ಎಲ್ಲರಿಗೂ ಅಪಮಾನ.

ಜಯ:— ಗೋವಿಂದ ಮಾಣಿಕ್ಯನೇ ?

ರಘು:— ಹೌದು ಹೌದು ನಿನ್ನ ರಾಜ್ಯಗೋವಿಂದ ಮಾಣಿಕ್ಯನೇ ! ನಿನ್ನ ಸರ್ವ ಶ್ರೇಷ್ಠ, ನಿನ್ನ ಪ್ರಾಣದ ಅಧೀಶ್ವರ, ಛೀ. ಉಪಕಾರಗೇಡಿಯೇ ! ಚಿಕ್ಕಮಗುವಾಗಿದ್ದಾಗಿನಿಂದ ನಿನ್ನನ್ನು ಇಷ್ಟು ಪಾಲಿಸಿದೆ ಪೋಷಿಸಿದೆ ಆದರೆ ನನಗಿಂತಲೂ ಆ ಗೋವಿಂದ ಮಾಣಿಕ್ಯನೇ ನಿನಗಿಂದು ಪ್ರಿಯತಮನಲ್ಲವೇ ?

ಜಯ:— ತಂದೆಯ ತೊಡೆಯ ಮೇಲೆ ಕುಳಿತ ಹಸುಗೂಸು ಪೂರ್ಣಚಂದ್ರ ಪಾನಕ್ಕಾಗಿ ಮುಗಿಲ ಕಡೆಗೆ ಕೈಯೊಡ್ಡುವದು, ಗುರುವೇ ನೀನು ನನ್ನ ತಂದೆ! ರಾಜನಾದ ಗೋವಿಂದ ಮಾಣಿಕ್ಯ ನನಗೆ ಪೂರ್ಣಚಂದ್ರ, ನಾನೇನು ಕನವರಿಸುತ್ತಿದ್ದೇನೆ. ಆದರೆ ನಾನದನ್ನೇನು ಕೇಳುತ್ತಿದ್ದೇನೆ? ರಾಜನು ತಾಯಿಯ ಬಲಿಯನ್ನು ನಿಷೇಧಿಸಿಗುವನೇ ? ಆದರೆ ಈ ಆದೇಶವನ್ನು ಮನ್ನಿಸುವರಾರು ?

ರಘು:— ಮನ್ನಿಸದಿದ್ದರೆ ದೇಶಕ್ಕೆ ಎರವು!

ಜಯ:—ಮಾತೃಪೂಜಾರಹಿತವಾದ ರಾಜ್ಯಕ್ಕೆ ಎರವಾಗುವದು ಇದೇನು ಶಿಕ್ಷೆಯಲ್ಲ. ಈ ಜೀವವಿರುವವರೆಗೆ ಜನನಿಯ ಪೂಜೆಗೆ ಕೊರತೆಬಾರದು.

(ಹೋಗುವರು)

---

## ೪ನೇ ದೃಶ್ಯ.

## ಅಂತಃಪುರ.

### ಗುಣವತಿಯೂ ಪರಿಚಾರಿಕೆಯೂ.

ಗುಣವತಿ:— ಏನಂದೀ? ಮಂದಿರದ ಬಾಗಿಲವರೆಗೆ ಹೋದ ರಾಣಿಯ ಪಶುಬಲಿಯು ತಿರುಗಿ ಅಟ್ಟಲ್ಪಟ್ಟಿತೇ? ಹೀಗೆ ಮಾಡಿದವನ ದೇಹಕ್ಕೆಷ್ಟು ರುಂಡಗಳಿವೆ? ಆ ದುರದೃಷ್ಟನಾವನು?

ಪರಿ:—ಹೇಳುವದಕ್ಕೆ ಧೈರ್ಯಸಾಲದು!

ಗುಣ:—ಹೇಳಲು ಧೈರ್ಯಸಾಲದೇ! ಈ ಮಾತನ್ನಾದರೂ ಯಾವ ಧರ್ಮದಿಂದ ನನ್ನಿದಿರು ಹೇಳಿದಿ! ನನಗಿಂತ ಹೆಚ್ಚಿನಭಯವಿನ್ನಾರದು!

ಪರಿ:—ಕ್ಷಮಿಸಬೇಕು.

ಗುಣ:—ನಿನ್ನೇ ಸಂಜೆಗೆ ರಾಣಿಯಿದ್ದೆ, ನಿನ್ನೆ ಸಂಜೆಗೇ ವಂಧಿಮಾಗಧರು ಹೊಗಳಿ ಹೋದರು; ವಿಪ್ರರು ಆಶೀರ್ವದಿಸಿ ಹೋದರು; ಭೃತ್ಯರು ಕೈಜೋಡಿಸಿ ಅಪ್ಪಣೆಪಡೆದುಕೊಂಡು ಹೋದರು. ಒಂದೇ ರಾತ್ರಿಯಲ್ಲಿ ನಿಯಮಗಳು ಬದಲಿಸಿದವೇ! ದೇವಿಯ ಪೂಜೆ ನಿಂತಿತು. ರಾಣಿಯ ಮಹಿಮೆಯು ಕುಂದಿತೇ? ತ್ರಿಪುರವು ಸ್ವಪ್ನ ರಾಜ್ಯವಾಯಿತಲ್ಲ! ತಡಮಾಡದೇ ಗುರುದೇವನನ್ನು ಕರೆದುಕೊಂಡು ಬಾ! (ಪರಿ,ಹೋಗು)

( ಗೋವಿಂದ ಮಾಣಿಕ್ಯ ಪ್ರವೇಶ )

ಗುಣ:—ಮಹಾರಾಜ! ತಾಯಿಯ ಬಾಗಿಲಬಳಿಯಿಂದೆ ಪೂಜಾಬಲಿಯು ಹಿಂದ ಕ್ಕಟ್ಟಲ್ಪಟ್ಟಿತೆಂದು ಕೇಳುತ್ತೇನೆ.

ಗೋವಿ:—ನಾನೂ ಬಲ್ಲೆನದನ್ನು?

ಗುಣ:—ನೀವು ಬಲ್ಲಿರಾ? ಆದರೆ ನಿಷೇಧಿಸಲಿಲ್ಲವೇ? ತಿಳಿದೂ ತಿಳಿದೂ ಮಹಿಷಿಯ ಅಪಮಾನವೇ?

ಗೋವಿ:—ಆ ಅಪರಾಧಿಯನ್ನು ಕ್ಷಮಿಸುವಿಯಾ ಪ್ರಿಯೆ?

ಗುಣ:—ಮಹಾರಾಜ ನೀನು ದಯಾಮೂರ್ತಿ. ಆದರೆ ಇದೇನು ದಯೆಯಲ್ಲ. ಇದು ಕೇವಲ ಕೀಳುತನ. ನೀನು ದಯಾದುರ್ಬಲನಾಗಿ ನಿನ್ನ ಕೈಯಿಂದ ಅವನನ್ನು ದಂಡಿಸಲಾರಿಯಾದರೆ ನಾನು ದಂಡಿಸುವೆ. ಹೇಳಿರಿ ಆ ಅಪರಾಧಿ ಯಾರು?

ಗೋ:— ದೇವೀ ನಾನೇ! ಅಪರಾಧವು ಮತ್ತೇನೂ ಅಲ್ಲ. ನಿನ್ನನ್ನು ನೋಯಿಸಿದೆ ಇದಿಷ್ಟೇ ಅಪರಾಧ.

ಗುಣ:—ಮಹಾರಾಜ! ಇದೇನನ್ನುವಿರಿ?

ಗೋ:—ಇಂದಿನಿಂದ ತ್ರಿಪುರರಾಜ್ಯದಲ್ಲಿ ದೇವತೆಯ ಹೆಸರಿನಲ್ಲಾಗುವ ಜೀವ ರಕ್ತಪಾತವನ್ನು ನಿಲ್ಲಿಸಿದ್ದಾಗಿದೆ.

ಗುಣ:—ಯಾರಿಂದ ನಿಷೇಧ?

ಗೋ:—ದೇವಿಯಿಂದಲೇ?

ಗುಣ:—ಅದನ್ನಾರು ಕಿವಿಯಾರೆ ಕೇಳಿದರು?

ಗೋ:—ನಾನು

ಗುಣ:—ನೀವೋ? ಇದನ್ನು ಕೇಳಿ ನಗೆಬರುತ್ತಿದೆ. ಭುವನೇಶ್ವರಿಯು ರಾಜನ ಬಾಗಿಲೆಗೆ ತನ್ನ ದೂರು ತಿಳಿಸಲಿಕ್ಕೆ ಬಂದಳಂತೆ!

ಗೋ:—ನಗಬೇಡ ದೇವಿ! ತಾಯಿಯು ತಾನೆ ಬಂದು ತನ್ನ ಮಕ್ಕಳ ಹೊಟ್ಟೆಯಲ್ಲಿ ಕರುಣೆಯನ್ನು ಹುಟ್ಟಿಸಿದಳು. ಬಾಯ್ದೆರೆದು ಬೇಡಿಕೊಳ್ಳಲು ಬರಲಿಲ್ಲ.

ಗುಣ:—ಅದಿರಲಿ. ನಿನ್ನರಾಜ್ಯ"ಗುಡಿಯ ಹೊರಗೆ. ನಿಮ್ಮ ಅಪ್ಪಣೆ ನಡೆಯದಲ್ಲಿ ಆಜ್ಞಾಪಿಸದಿರಿ.

ಗೋ:—ಅಪ್ಪಣೆ ನನ್ನದಲ್ಲ. ಅವಳದು.

ಗುಣ:—ಹೇಗೆ ತಿಳಿದುಕೊಂಡಿರಿ?

ಗೋ:—ಮಿಣಕುದೀಪದಿಂದ ಮನೆಯೊಳಗಿನ ಕತ್ತಲೆಯು ಮೂಲೆಯಲ್ಲಿ ಉಳಿದುಕೊಳ್ಳುವದು. ದೀವಿಗೆಗೆ ಎಲ್ಲವೂ ಶಕ್ಯ ಆದರೆ ತನ್ನ ಕೆಳಗಿನ ಕತ್ತಲೆಯನ್ನು ಪರಿಹರಿಸಲಾರದು. ಮಾನವನ ಬುದ್ಧಿ ದೀಪದಂತೆ, ಎಷ್ಟು ಬೆಳಕನ್ನು ಕೊಟ್ಟೀತೋ ಅಷ್ಟು ಸಂಶಯದ ನೆರಳನ್ನು ಇರಿಸುವದು. ಸ್ವರ್ಗದಿಂದ ಜ್ಞಾನವಿಳಿದಾಗ ಒಂದು ನಿಮಿಷದಲ್ಲಿ ಸಂಶಯವು ಕಡಿದುಹೋಗುವದು. ನನ್ನ ಹೃದಯದಲ್ಲಿ ಒಂದಿಷ್ಟು ಸಂಶಯವಿಲ್ಲ.

ಗುಣ:—ನಿಮ್ಮ ಪಾಪಪುಣ್ಯಗಳನ್ನು ನಿಮ್ಮ ಹತ್ತರ ಇಡಿರಿ.

ಗೋ:—ಮಹಾರಾಣಿಯೇ ಇದು ಉಚಿತವೇ ನೀಚ, ಸ್ವಾರ್ಥ ನಿಷ್ಠುರವಾದ ಅಧಿಕಾರಮದ! ಅಂಥ ಅಜ್ಞಾನ! ರಕ್ತವನ್ನೇ ಕುಡಿಕುಡಿದು ಕೊಬ್ಬಿದ ಹಿಂಸ್ರವಾದ ಹಳೆಯ ರೀತಿ ಮೊದಲಾದ ಸಹಸ್ರಾವಧಿ ಶತ್ರುಗಳೊಡನೆ ಏಕಾಂಗನಾಗಿ ರಣರಂಗದಲ್ಲಿ ಯುದ್ಧ ಮಾಡಿ ಬರುವ ವೀರನು ಮನೆಗೆ ಬಂದು ತನ್ನ ರಮಣಿಯ ಪ್ರೇಮಸುಧೆಯ ಪಾನವನ್ನಾದರೂ ಮಾಡುವನು. ಅದೂ ಕೂಡ ನನ್ನ ದೈವದಲ್ಲಿರಬಾರದೆ? ನನ್ನ ಮನೆಯಲ್ಲಿ ಪುಣ್ಯವೂ ಪ್ರೇಮವೂ ಹೊಳೆಯಾಗಿ ಹರಿಯುತ್ತಿದ್ದವು. ಅದರ ಜೊತೆಗೆ ರಕ್ತದ ಹೊಳೆಯೊಂದು ಹರಿಯಹತ್ತಿತೇ! ಇಂಥ ರಕ್ತದ ಹೊಳೆಯನ್ನು ಯಾವ ರಾಕ್ಷಸನು ಹರಿಯಬಿಟ್ಟನೋ! ಭಕ್ತಿಗೂ ಪ್ರೇಮಕ್ಕೂ ರಕ್ತವೂ ತೊಡೆಯಿತಲ್ಲ! ದಯಾಮಯಿಯಾದ ರಮಣಿಯ ಹೃದಯದಲ್ಲಿ ಕ್ರೂರಹಿಂಸೆಯೂ ತನ್ನ ಮುದ್ರೆಯನ್ನೊತ್ತಿತೇ! ಈ ರಕ್ತ ಲಾಲಸೆಯನ್ನೂ ನಾನು ವಿರೋಧಿಸಲಾಗದೇ!

ಗುಣವತಿ:—(ಮೋರೆಮುಚ್ಚಿ) ಹೋಗಿರಿ ಹೋಗಿರಿ ನೀವು.

ಗೋವಿಂದ:—ಹಾಯ ಮಹಾರಾಣಿ! ಕರ್ತವ್ಯವು ಕಠಿಣವಾಗಿದೆ. ಹೀಗೆ ಮಾಡಬೇಡ. ನಾನು ನೋಡಲಾರೆ. (ಹೋಗುವನು).

ಗುಣವತಿ:—(ಅಳುತ್ತ) ಹಾಯ! ಹಾಯ! ಅಭಾಗಿನಿಯೇ! ಇಷ್ಟು ದಿನ ಇದೇನು ಭ್ರಾಂತಿಯು ನಿನ್ನ ಮನದಲ್ಲಿತ್ತು? ಇದುವರೆಗೆ ಸಂಶಯವಿರಲಿಲ್ಲ. ಆದರೆ ಇಂದು ಮಾತ್ರ ನಿನ್ನ ಇಷ್ಟೊಂದು ಅಭಿಮಾನ ಇಷ್ಟೊಂದು ಅನುರೋಧ ಇಷ್ಟೊಂದು ಅನುನಯ ಇವೆಲ್ಲ ಹಳ್ಳಗೂಡಿ ಹೋದವು. ಧಿಃಕಾರವಿಲಿ; ಯಾವ ಹೆಮ್ಮೆಯಿಂದ ಪುತ್ರಹೀನಳು ತನ್ನ ಗಂಡನಿಗೆ ಅಭಿಮಾನವನ್ನು ತೋರಬಲ್ಲಳು? ಹಾಳಾಗಿಹೋಯ್ತು ನಿನ್ನ ಅಭಿಮಾನ.

# ಸಾಯೋ ಆಟ

(ಮುಂದೆ ಸಾಗಿದ್ದು)

## ಒಂದು ಹುಚ್ಚಾಟ.

ಗೃಹಸ್ಥ:— ಆಗಿದ್ದು ಯೋಗ್ಯವಾಯಿತು!

ದೊರೆ:— ಈಗ್ಗೇ ಹಾಗೆ ಹೇಗಾದೀತು! ಕಳ್ಳನಿಗೆ ಶಿಕ್ಷೆಯಾಗಿದ್ದು ಯೋಗ್ಯವೇ ಆದರೂ ಇವಳ ಗಂಡನ ಖೂನಿಯಾಗಿದ್ದು ಅನ್ಯಾಯವಲ್ಲವೇ? ಇವನ ಖೂನಿಗೆ ಕಾರಣರಿದ್ದವರನ್ನು ದಂಡಿಸುವದು ಯಥಾ ನ್ಯಾಯವಾಗಿದೆ.

ಗೃಹಸ್ಥ:—ದೊರೆಗಳೇ ಅಪ್ಪಣೆಯೇನು?

ದೊರೆ:—ಇನ್ನಾದರೂ ವಿವೇಕದಿಂದ ಮರಣದ ಶಿಕ್ಷೆಗೆ ಸಿದ್ಧನಾಗು.

ಗೃ:— ನಾನೇ ?

ದೋ:— ನೀನೇ ನೀನೇ! ಎಂಥ ಮರುಳನಿವನು. ನಿನ್ನ ತಪ್ಪಿಗೆ ನಾನು ಅಥವಾ ನಮ್ಮ ದಿವಾಣರು ಸಾಯಬೇಕೇ ?

ಗೃ:—ಛೀ ಛೀ! ನಾನು ಹಾಗೆ ಹೇಗಂದೇನು ? ಆಗುವದು ಆಗಲಿ. ಮಹಾ ಧುರಂಧರ ಪರಮ ಪ್ರತಾಪಿ ಚ್ಯಾಹು ಮಹಾರಾಜರ ಆಳಿಕೆಯನ್ನು 'ನ ಭೂತೋ ನ ಭವಿಷ್ಯತಿ' ಎಂದು ಹೊಗಳುತ್ತಿರುವಾಗ, ಹಿಂದೂ ಮುಸಲ್ಮಾನರೆಲ್ಲರೂ 'ದಿವಾಣಾ ಅನ್ನಬೇಕು ಈ ದಿವಾಣರಿಗೆ' ಎಂದು ತಮ್ಮ ಮಂತ್ರಿಗಳನ್ನು ಸ್ತುತಿಸುತ್ತಿರಲಾಗಿ ನಾನು ಹಾಗೆ ಹೇಗನ್ನಲಿ.

ದೊರೆ:—ಹಾಗಾದರೆ ಹೇಳು, ಒಳ್ಳೆ ಮಾತಿನಿಂದ ಹೇಳು. ಈ ಬಡಪ್ರಾಣಿಯನ್ನು (ಕಳ್ಳನ ಹೆಂಡತಿಯ ಕಡೆಗೆ ಬೊಟ್ಟು ಮಾಡಿ) ಮದುವೆಯಾಗುವೆಯಾ?

ಗೃ:—ಈ ಪ್ರಾಣಿಯನ್ನು ಮದುವೆಯಾಗಲು ನಾನೇನು ಪಶುವೇ ?

ದಿ:—ಅದೇನೋ ನೀನೇ ಬಲ್ಲೆ. ದೊರೆಗಳಿಗೆ ಪ್ರಶ್ನೆಮಾಡಬೇಡ. ಲಗ್ನದ ಇಚ್ಛೆಯಿಲ್ಲದಿದ್ದರೆ ಸಾಯಲು ಸಿದ್ಧನಾಗು.

ಗೃ:—ಇವಳನ್ನು ಲಗ್ನವಾಗುವದಕ್ಕಿಂತ ಸಾಯುವದೇನೋ ಲೇಸು-ಸರಿ, ಆದರೆ ಗೋಡೆಯು ಇವನ ಮರಣಕ್ಕೆ ಕಾರಣವಾಗಿರಲು ನನಗೇಕೆ ಶಿಕ್ಷೆ, ಅಪ್ಪಣೆಯಾಗಬೇಕು.

ದೊರೆ:—ದಿವಾಣರೇ ಈಗ ಮಾತ್ರ ಬಿಗಿಬಂತು. ವ್ಯರ್ಥವಾಗಿ ಬ್ರಹ್ಮಹತ್ಯೆಯಾ ಗುತ್ತಿತ್ತು. ನಿಜವಾಗಿ ಈ ಗೋಡೆಗೇ ಶಿಕ್ಷೆಯಾಗಲು ಬೇಕು.

ದಿವಾಣ:—ಇದೇ ಸಮಂಜಸವಾಗಿ ತೋರುವದು.

ಕಳ್ಳಿ:—ಧರ್ಮರಾಜರು ಹೀಗೆ ಅನ್ಯಾಯ ಮಾಡಬಾರದು. ದೇಹವೇ ಸತ್ತು ಜೀವವೇ ಉಳಿದಿದ್ದರೆ, ಮಣ್ಣು-ದೇಹದ ಕೊಲೆಗಾಗಿ ಮಣ್ಣು-ಗೋಡೆಗೆ ಶಿಕ್ಷೆಮಾಡ ಬಹುದಾಗಿತ್ತು; ದೇಹವು ಉಳಿದಿದೆ. ಪ್ರಾಣಮಾತ್ರ ಹೋಗಿದೆ. ಆದಕಾರಣ ಆ ಪ್ರಾಣ ಕ್ಕಾಗಿ ಒಂದು ಪ್ರಾಣವು ಹೋಗುವಂತೆ ದಯಾಳುಗಳಾದ ದೊರೆಗಳು ಅಪ್ಪಣೆಮಾ ಡಬೇಕು.

ದಿವಾಣ:— ದೊರೆಗಳೇ ಇದೇ ಸಮಂಜಸವಾಗಿ ತೋರುವದು. ಇದೇ ನ್ಯಾಯ.

ದೊರೆ:— ದಿವಾಣರೇ ಬಹಳ ಹೊತ್ತು ವಿಚಾರಮಾಡಿದಂತೆ ಯಾವುದು ನ್ಯಾಯ ವೋ ಯಾವುದು ಅನ್ಯಾಯವೋ ತಿಳಿಯದಂತಾಗುತ್ತದೆ. ಹೇಗಾದರೂ ಒಮ್ಮೆ ನ್ಯಾಯ ತೀರಿಸಿದ ಮೇಲೆ ಅದು ಅನ್ಯಾಯವು ಹೇಗಾದೀತು. ಕ್ಷುಲ್ಲಕವಾದ ಒಂದು ಜೀವ ಕ್ಕಾಗಿ ನಾವು ಇಷ್ಟೊತ್ತು ವಿಚಾರಣೆ ಮಾಡಿ ಕಾಲಕಳೆದರೆ ನಮ್ಮ ರಾಜ್ಯದೊಳಗಿನ ಅಸಂಖ್ಯ ಪ್ರಜೆಗಳ ಗತಿಯೇನು ?

ಗೃ:—(ಸ್ವಗತ) ಚರಮಗತಿ !

ದೊರೆ:—ಏನನ್ನುವಿ ?

ಗೃ:—ತಾನಾಗಿ ಗೋಡೆಯನ್ನು ಮೈಮೇಲಿ ಕೆಡವಿಕೊಂಡರೆ ಅದಕ್ಕೆ ನಾನೇನು ಮಾಡಬೇಕು ?

ದೊರೆ:—ಸಾಯಲು ಸಿದ್ಧನಾಗಬೇಕು ! ಅಂಥ ಗೋಡೆಯನ್ನೇಕೆ ಕಟ್ಟಿಸಿದಿ ?

ದಿವಾಣ:— ಮತ್ತೂ ಮನೆಯಲ್ಲಿ ದುಡ್ಡನ್ನೇಕೆ ಜೇನನಂತೆ ಕೂಡಿಸಿಟ್ಟಿ? ನಮ್ಮ ದೊರೆಗಳನ್ನು ನೋಡಬಾರದೇ! ದುಂದುಗಾರರು ಎಂದು ಜನರಾಡಿಕೊಳ್ಳಲಿ—ಆದರೆ ಅರಮನೆಯಲ್ಲಿ ಕಳವು ಮಾಡಲೆಂದು ಕಳ್ಳನು ಬಂದರೆ—ಅವನಿಗೇನಾದರೂ ಸಿಗುವದೊ ತ್ತಟ್ಟಿಗಿರಲಿ—ಅವನು ಸಿಕ್ಕದೇ ಭಾಗ್ಯವೆಂದು ಕಳ್ಳನನ್ನೇ ಜೀತದಾಳೆಂದು ಎಲ್ಲಿಯಾದರೂ ಅಡವಿಟ್ಟು ದುಡ್ಡು ತಂದು ದೊರೆಗಳು ದುಂದುಮಾಡುವರು. "ಕೊಟ್ಟದ್ದು ತನಗೆ ಬಚ್ಚಿ ಟ್ಟದ್ದು ಪರರಿಗೆ" ಎಂಬದೇನೂ ಸುಳ್ಳಲ್ಲ. ಮನೆಯಲ್ಲಿ ದುಡ್ಡಿತ್ತೆಂದು ಈ ಬಡವನಿಗೆ ಅದನ್ನೊಯ್ಯುವ ಬುದ್ಧಿಯಾಯಿತು.

ಕಳ್ಳಿ:—ಅಹುದು ಮಹಾರಾಯಾ? ದುಡ್ಡಿಲ್ಲದಲ್ಲಿ ನಾವೇಕೆ ಹೋದೇವು.

ದೊರೆ:—ನಾನಂತೂ ಹೀಗನ್ನುತ್ತೇನೆ—ಯಾರಾದರೂ ಕನ್ನವನ್ನು ಹಾಕಿ ಬಂದರೆ ಗೋಡೆಬಿದ್ದು ಅವರು ಸಾಯಬೇಕೆಂದೇ ನೀನಿಂಥ ಹೇಡಿಮಣ್ಣಿನ ಗೋಡೆಯನ್ನು ಕಟ್ಟಿ ಸಿರುವೆ.

ಗೃ:—(ಸ್ವಗತ) ಎತ್ತ ತಪ್ಪಿಸಿಹೋದರೂ ಸಾವು ಕೊರಳಿಗೆ ಅಪ್ಪಬರುತ್ತಿದೆ. ಇನ್ನು ಹೀಗೆ ಮಾಡುವೆ. ಈ ಬೀಡಾಡಿಯ ಬಿಟ್ಟೀರಾಜ್ಯದಲ್ಲಿ ಅಡ್ಡಹಾದಿ ಹಿಡಿಯದ ಹೊರ್ತು ಬಿಡುಗಡೆ ಹೊಂದುವ ಹಾದಿಯೇ ಇಲ್ಲ. (ಪ್ರಕಟ) (ದಿವಾಣರಿಗೆ ಸಂಜ್ಞೆ ಮಾಡಿ) ಮಹಾಸ್ವಾಮೀ! ಕಟ್ಟಿಸಿದವನು ನಾನಾದರೂ ಕಟ್ಟಿದವನು ಬೇರೆ. ನಿಜವಾಗಿ ಆ ಉಪ್ಪಾರನಿಗೆ ಶಿಕ್ಷೆಯಾಗಲು ಬೇಕು. ಅನ್ಯಾಯವಾಗಬಾರದೆಂಬು ನನ್ನ ಬಿನ್ನಹ.

ದಿವಾಣ:—ಆಹುದು ದೊರೆಗಳೇ! ಇವನನ್ನುವದರಲ್ಲಿ ಅರ್ಥವಿದೆ.

ದಿವಾಣ:— ಅಹುದು ದೊರೆಗಳೇ! ಇವನನ್ನುವದರಲ್ಲಿ ಅರ್ಥವಿದೆ.

ದೊರೆ:—ಅರ್ಥವಿದೆಯೋ! ಹಾಗಾದರೆ ಇವನನ್ನು ಬಿಡಿರಿ. ಆ ಉಪ್ಪಾರನನ್ನೇ ಕರೆತರಲು ಹೇಳಿರಿ. ಇವನೇ ಸಾಯಬೇಕೆಂದು ನಮ್ಮ ಆಗ್ರಹವೇನೂ ಇಲ್ಲ. ಯಾರಾದರೂ ಸತ್ತರಾಯಿತು. ಅದೇ ನ್ಯಾಯ.

ಕಳ್ಳ:—ದೊರೆಗಳೇ! ಇವನೇ ಸಾಯ—

ದೊರೆ:—ಕಳ್ಳಮುಂಡೇ! ಸುಮ್ಮನಿರು. ಯಾರು ಸತ್ತ ಭಾಗ್ಯ ನಿನಗೇನು. ನ್ಯಾಯ ಸಿಕ್ಕರಾಯಿತು. ನಮ್ಮ ಜೀವ ತಿನ್ನಬೇಡ. ಉಪ್ಪಾರನು ಬರಲಿ.

ದಿವಾಣ:—(ಕೊತವಾಲನಿಗೆ) ಹೋಗು. ಕರೆದುಕೊಂಡು ಬಾ.

ಕೊತ:—ಸ್ವಾಮೀ, ಆವನ ಹೆಸರೇನು ?

ದಿವಾಣ:—ಅದರ ಹೆಸರು ತೆಗೆಯಬೇಡ. ಸುಮ್ಮನೆ ಹೋಗು. ಯಾರನ್ನೂ ಹಿಡಿದುಕೊಂಡು ಬಾ. ಅವನು ಉಪ್ಪಾರನಿದ್ದರೆ ಸಾಕು. ( ಕೊತವಾಲನು ಹೋಗುವನು.)

## ಟಾಲಸ್ಟಾಯನು ಒಬ್ಬ ಪ್ರಖ್ಯಾತ ಚಿತ್ರಕಲಾ-ನಿಪುಣನಿಗೆ ಹೇಳಿದ ಚಿಕ್ಕ ಕಥೆಯು.

ಒಂದು ದಿನ ಒಬ್ಬ ಹೆಂಗಸು ಚಿಂತೆಯಿಂದ ಮೋರೆಯನ್ನು ಗಂಟಿಕ್ಕಿಕೊಂಡು ಒಬ್ಬ ಕುಶಲನಾದ ಹಿರಿಯನ ಕಡೆಗೆ ಬಂದಳು. ತಾನು ಮಾಡಿದ ಒಂದು ದೊಡ್ಡ ತಪ್ಪಿತಗಾಗಿ ಪ್ರಾಯಶ್ಚಿತ್ತವೇನೆಂದು ಆಶಾಕುಲ ದೃಷ್ಟಿಯಿಂದ ಅವಳು ಕೇಳಿದಳು. ಹಾಗಾದರೆ ಹಳ್ಳಿಯನ್ನು ಸುತ್ತಾಡಿ ತನಗೆ ದೊರೆಯಬಲ್ಲ ಎಲ್ಲಕ್ಕೂ ಹಿರಿದಾದ ಕಲ್ಲನ್ನು ಎತ್ತಿಕೊಂಡು ಬಾ ಎಂದು ಆ ಹಿರಿಯನು ಬಗೆಯನ್ನು ಹೇಳಿದನು. ಬೇರೊಬ್ಬ ಹೆಂಗಸು ನಗುತ್ತ ಕೆಲೆಯುತ್ತ ನಿಶ್ಚಿಂತ ಮುದ್ರೆಯಿಂದ ಹಿರಿಯನನ್ನು ಕಂಡು ಕೇಳಿದಳು. “ಹಿರಿಯಣ್ಣ, ನಾನು ಯಾವ ಅಪರಾಧವನ್ನು ಮಾಡಿಲ್ಲ. ನಾನು ದಾರಿಯನ್ನು ಹಿಡಿದೇ ವರ್ತಿಸಿರುವೆನು. ಯಾವಾಗಲೊಮ್ಮೊಮ್ಮೆ ಸಣ್ಣ ಪುಟ್ಟ ಮಾತುಗ

ಳನ್ನು ನಿಷ್ಠುರಳಾಗಿ ಆಡಿದ್ದೇನೆ. ನಾನು ಮಾಡಿದ್ದು ಸಣ್ಣ ತಪ್ಪು. ಬೇರೆ ಏನೂ ಪ್ರಮಾದವಾಗಿಲ್ಲ. ಅಂದಮೇಲೆ ಪ್ರಾಯಶ್ಚಿತ್ತವು ನನಗೂ ಬೇಕೇನು?" "ಹೌದು." ಎಂದು ಹಿರಿಯನು ಹಳ್ಳಿಯಲ್ಲಿ ಸಿಕ್ಕ ಸಣ್ಣ ಹರಳುಗಳನ್ನು ಆರಿಸಿಕೊಂಡು ಬರುವ ಆಜ್ಞೆ ಮಾಡಿದನು. ಮೊದಲಿನ ಹೆಂಗಸು ಹೇಳಿದಂತೆ ನಡೆದು ಶಾಂತ ಮುದ್ರೆಯಿಂದ ತಿರುಗಿ ಬಂದಳು. ಆದರೆ ಹಿರಿಯನು ಮತ್ತೆ ಹೇಳಿದನು "ನಿನ್ನ ಪಾಪದ ಪೂರ್ಣ ಪರಿಮಾರ್ಜನವಾಗಬೇಕಾದರೆ ಆ ಕಲ್ಲನ್ನು ನೀನು ತಂದ ಸ್ಥಳದಲ್ಲಿ ಮರುಳಿ ಇಟ್ಟು ಬರಲೇಬೇಕು" ಎಂಬುದನ್ನು ಕೇಳಿ ಆಯಾಸವು ಹೆಚ್ಚಾಗಿದ್ದರೂ ಆ ಹೆಂಗಸು ವಿಶ್ವಾಸದಿಂದ ಹಿಂದಿರುಗಿ ಹೊರಟಳು. ಆ ಹೊತ್ತಿಗೇ ಎರಡನೆಯ ಹೆಂಗಸು ಮುಂಚಿದ್ದ ಮುದದ ಮೊಗವನ್ನು ಧರಿಸಿಯೇ ಬಂದು ಹೇಳಿದಳು. "ಅದರಲ್ಲಿ ಏನಿದೆ! ನನಗೆಲ್ಲ ಹರಳುಗಳು ದೊರೆತವು. ಅವೇನು ಒಲವಿಲ್ಲ. ನಾನು ಸಹಜವಾಗಿ ತಂದುಬಿಟ್ಟೆ." ಆದರೆ ಆ ಕುಶಲನು ಪ್ರತಿಯಾಗಿ ಹೇಳಿದನು. "ಇಷ್ಟಕ್ಕೇ ಮುಗಿಯಲಿಲ್ಲಮ್ಮಾ, ಹೋಗಿ ಆ ಹರಳುಗಳನ್ನು ಮೊದಲಿದ್ದ ಮೆಟ್ಟನಲ್ಲಿ ಇಟ್ಟು ಬಾ" ಎನ್ನಲು ಅದಕ್ಕೂ ಹಿಗ್ಗಿದಂತಾಗಿ ಅವಳು ಉಬ್ಬಿನಿಂದ ಹೊರಟಳು. ಆಗ ಮೊದಲಿನ ಹೆಂಗಸು ಹೇಳಿದಂತೆ ಮಾಡಿ ಹಿರಿಯನ ಕಾಲಿಗೆರಗಿ ಮೆತ್ತಗಾದ ಮೋರೆಯಿಂದಲೂ ಮಿನುಗುವ ಕಳೆಯಿಂದಲೂ ಹರಿಕೆಯನ್ನು ಕೇಳಲಿಕ್ಕೆ ಕುಳಿತಳು. ಎರಡನೆಯವಳು ಸ್ವಲ್ಪದರಲ್ಲಿ ತಿರುಗಿದಳು. ಮೊದಲಿನ ನಗೆಯು ಹೋಗಿ ಮೋರೆಯು ರಂಗಿಗೆದ್ದು ಉಬ್ಬಿದ್ದಿತು. ಚಿಂತೆಯು ಮೊದಲನೆಯ ಚಿಹ್ನವು ಕಾಲೂರಿತ್ತು. ವ್ಯಾಕುಲಳಾಗಿ ಅವಳು ಹೇಳಿದಳು. "ಹಿರಿಯಣ್ಣ, ನೀನು ಹೇಳಿದಂತೆ ಹೇಗೆ ಮಾಡುವದು ಶಕ್ಯವಯ್ಯಾ? ಎಲ್ಲಿಯು ಹರಳುಗಳೋ, ಎಲ್ಲಿಯು ಮೆಟ್ಟೋ! ನನ್ನಿಂದಂತೂ ಸಾಧ್ಯವಾಗಲಿಲ್ಲ." ಆಗ ಹಿರಿಯನಂದನು "ಹೌದಮ್ಮಾ, ಸಣ್ಣ ಹರಳುಗಳಿಗೆ ತಿರುಗಿ ಎಡೆಯಿಲ್ಲ, ಸಣ್ಣ ತಪ್ಪುಗಳಿಗೆ ತಿರುಗಿ ತಡೆಯಿಲ್ಲ."

---

# ವಿಭೂತಿಯೆಂದರೇನು?

ಲೇಖಕ:— ಶ್ರೀಧರ.

(೫ ನೇಯ ಸಂಚಿಕೆಯಿಂದ ಮುಂದೆ ಸಾಗಿದ್ದು.)

"वासुदेवः सर्वमितिस महात्मा सुदुर्लभः ಎಂಬ ಮಹಾತ್ಮನ ಸ್ಥಿತಿಗೆ ಹೋಲಿಸುವದಕ್ಕೆ ಇನ್ನೇನೂ ಇಲ್ಲ. 'नाहं कर्ता हरि कर्ता । तत्पूजा कर्मचा' खिलम् ॥ ನಾನು ಮಾಡುವವನಲ್ಲ. ಮಾಡಿ ಮಾಡಿಸುವಂಥ ಕರ್ತೃವು ಬೇರೆ. ನಾನು

ಮಾಡುವದೆಲ್ಲ ಆತನ ಪ್ರೇರಣೆಯಿಂದಲೇ. ಅದರಲ್ಲಿ ಒಳಿತಿಲ್ಲ. ಕೆಡಕಿಲ್ಲ; ನನ್ನ ಕರ್ಮಗಳೆಲ್ಲ ದೇವನ ಪೂಜೆಯೇ. "शरीरं गृहं । पूजाते विषयो पभोगरचना निद्रा समाधिस्थितिः संचारः पदयोः प्रदाक्षिणविधिः ಮುಂತಾದ-ಭಕ್ತರ ಅನುಭವಗಳೆಲ್ಲವೂ ಅವನಿಗೆ ಬರುತ್ತವೆ. ಆದ್ದರಿಂದಲೇ ಅವನಲ್ಲಿ ಇಂದ್ರಿಯನಿಗ್ರಹ, ನಿರ್ಭಯತ್ವ, ಅಹಿಂಸಾ, ಸತ್ಯ, ಪ್ರೀತಿ, ದಯೆ, ಉದಾರತೆ, ಪರೋಪಕಾರ ಮುಂತಾದ ಸದ್ಗುಣಗಳು ಅನಂತವಾಗಿ ವಾಸವಾಗುತ್ತವೆ.

"स्तोत्राणि सर्वागिराः । यद्यत्कर्म करोमि तत्तदखिलं शंभो तवाराधनम्."

ಗಡಿಯಾರದೊಳಗಿನ ಸಣ್ಣ ಸಣ್ಣ ಯಂತ್ರಗಳ ಚಲನವಲನಗಳು ನಮ್ಮೆಲ್ಲರಿಗೂ ತಿಳಿಯುವದಿಲ್ಲ. ಅದೇ ಮೇರೆಗೆ ಮಹಾತ್ಮರ ಅಂತಃಸ್ಥಿತಿಯು ಎಲ್ಲರಿಗೂ ನಿಚ್ಚಳವಾಗಿ ತಿಳಿಯುವದಿಲ್ಲ. ಮಹಾತ್ಮನಲ್ಲಿ ಎರಡು ಭಾಗಗಳಿರುತ್ತವೆ. ಒಂದು ಸಾಮಾನ್ಯ ಮನುಷ್ಯ; ಎರಡನೆಯದು ಅಸಾಮಾನ್ಯ ಮನುಷ್ಯ. ಮಹಾತ್ಮನಾದರೂ ನಮ್ಮಂತೆಯೇ ಹುಟ್ಟಿ ನಮ್ಮಂತೆಯೇ ಬೆಳೆದಿರುತ್ತಾನೆ. ಅವನು ಊಟಮಾಡುವದೂ ಸಾರು-ಅನ್ನ ನಾವಾದರೂ ಅದನ್ನೇ ಊಟಮಾಡುವೆವು. ನಾವೂ ಪುಸ್ತಕಗಳನ್ನು ಓದುತ್ತೇವೆ. ಅವನಾದರೂ ಗ್ರಂಥಗಳನ್ನು ಓದುತ್ತಾನೆ. ಮಹಾತ್ಮರೆಂದರೆ ಹೊಲದಲ್ಲಿ ಬೆಳೆದ ಎತ್ತರವಾದ ಬೆಳೆಗಳ ತೆನೆಯಿದ್ದಂತೆ. ಕಸುವುಳ್ಳ ಕಾಳು ಹುಲಸಾದ ಹೊಲದಲ್ಲಿ ತಕ್ಕ ಹೊತ್ತಿನಲ್ಲಿ ಬಿತ್ತಲ್ಪಟ್ಟಿತೆಂದರೆ ಅದು ಎಲ್ಲ ದಂಟುಗಳಿಗಿಂತಲೂ ಎತ್ತರವಾಗಿ ಬೆಳೆದು ಸುಂದರವಾದ ಬೀಜಗಳನ್ನು ಕೊಡುತ್ತದೆ. ವ್ಯಾಯಾಮದಿಂದ ಆರೋಗ್ಯವನ್ನು ಪಡೆದಂಥ ಮನುಷ್ಯನ ಹೊಟ್ಟೆಯಲ್ಲಿ ಬಿದ್ದ ಪೌಷ್ಟಿಕವಾದ ಆಹಾರವು ರಕ್ತವಾಗಿ, ಮಾಂಸವಾಗಿ, ವೀರ್ಯವಾಗಿ ಓಜಸ್ಸಾಗಿ ಹೇಗೆ ವಂಶದ ಏಳ್ಗೆಗೆ ಕಾರಣವಾಗುವದೋ ಅದರಂತೆಯೇ ಮಹಾತ್ಮನು ಈ ಜಗತ್ತಿನೊಳಗೆ ಬಂದ ಕೂಡಲೇ ದಿವ್ಯದೃಷ್ಟಿಯನ್ನು ಹೊಂದಿ ತನಗೆ ಬೇಕಾದ ಸಾಮುಗ್ರಿಗಳನ್ನು ದೊರಕಿಸಿಕೊಂಡು ಅವುಗಳನ್ನು ಜೀರ್ಣಿಸಿ ವೀರ್ಯವನ್ನು ಪಡೆದು ತನ್ನ ಪರಿಶ್ರಮದ ಪ್ರಭಾವದಿಂದ ಸಾವಿರಾರು ಜನರಿಗೆ ಬೆಳಕನ್ನು ನೀಡುವನು. ಕಾವ್ಯಗಳನ್ನು ಓದಿದ ಪಂಡಿತರು ಎಷ್ಟು ಮಂದಿ ಆಗಿ ಹೋಗಿರುವರೋ ಎಣಿಕೆಯಿಲ್ಲ. ಆದರೆ ಕವಿಗಳೆಷ್ಟು ಮಂದಿ? ಕೋಟ್ಯಾವಧಿ ಜನರ ರಾಷ್ಟ್ರದಲ್ಲಿ ಸಾವಿರಾರು ವರ್ಷಗಳಿಗೊಬ್ಬ ಹೆಸರಾದ ಕವಿ. ಹೀಗೇಕೆ? ಏಕೋ ಏನೋ ಪರಮಾತ್ಮನೇ ಬಲ್ಲ. ಪೂರ್ಣಾವತಾರಗಳು ಎಷ್ಟು? ಕೃಷ್ಣ, ಬುದ್ಧ...? ಸಾವಿರಾರು ವರ್ಷಗಳಲ್ಲಿ ಮಾತ್ರ ಒಬ್ಬ ಮನುಷ್ಯನಲ್ಲಿ ಇಡೀ ವಿಶ್ವವನ್ನೇ ಹೊಯ್ದಾಡಿಸುವಂಥ ಬಲವನ್ನು ದೇವರು ಕೊಡುತ್ತಾನೆ. ಅಂಥ ಮನುಷ್ಯನಿಗೇ ಪರಮಾತ್ಮನ ಪೂರ್ಣಾವತಾರವೆಂದೆನ್ನುತ್ತಾರೆ.

(ಸಶೇಷ)

---

ಓಂ ನಲ್

# ಸ್ವಧರ್ಮ

॥ ಜಯಂ ಭದ್ರಂ ಶುಭಂ ಮಂಗಲಮ್ ॥

ವರ್ಷ - ೩ | ಶಕ ೧೮೪೮ ಅಕ್ಷಯ ಸಂ॥-ಭಾದ್ರಪದ. | ತಿಂ. - ೬

## ಕುರುಡ

ಒಂದು ಸಲವೇ ನಿನ್ನ, ಒಂದೆ ನಿಮಿಷದ ವರೆಗೆ ।
ಅಂದ ಮೂರುತಿತೋರು; ಕಣ್ತುಂಬ ನೋಡುವೆನು ।
ಹಿಂದುಗಡೆ ನನ್ನೆರಡು ಕಣ್ಣುಗಳ ಕಳೆದು ಬಿಡು, ಕುರುಡನನ್ನಾಗಿ ಮಾಡು ! ॥೧॥

ಇನಿತು ದಿನಗಳ ವರೆಗೆ ಎನ್ನ ಹೃದಯದ ಮೇಲೆ ।
ಮನೆಮಾಡಿಕೊಂಡಿರುವ ನೆನಪುಗಳನಳಿಸಿಬಿಡು ।
ಮನಮೋಹಿಸುವ ತೆರದಿ ಮಿನುಗುತಿಹ ಕನಡಿಯೊಲು ತೊಳೆತೊಳೆದು ಹೊಳಪ
ನೀಡು ! ॥೨॥

ಸಡಗರದ ಕರದಲ್ಲಿ ಪಿಡಿದು ನೋಡಿದೊಡೆ ತವ ।
ಪೊಡವಿಯನೆ ಮೋಹಿಸುವ ಮಿಡಿನಗೆಯ ನುಣ್ಮೊಗದ ।
ಪಡಿನೆಳಲದಲ್ಲದಲೆ ಕಡುಮೆರೆವ ಮತ್ತಾವ ಮೂರುತಿಯು ಕಂಗೊಳಿಪುದು? ॥೩॥

ನಿನ್ನ ಕನಸೇ ಕನಸು, ನಿನ್ನ ನನಸೇ ನನಸು ।
ನಿನ್ನ ಧ್ಯಾನವೆ ಧ್ಯಾನ, ನಿನ್ನ ಗಾನವೆ ಗಾನ ।
ನಿನ್ನ ಕಾಮವೆ ಕಾಮ, ನಿನ್ನ ಪೇಮವೆ ಪ್ರೇಮ-ನಿನ್ನದೆಲ್ಲವು ಎನ್ನದು ! ॥೪॥

ಕಂಗಳಿಲ್ಲದಲೆ ನಿನ್ನಂಗವನು ನೋಡುವೆನು ।
ಅಂಗವಿಲ್ಲದೆ ನಿನ್ನ ಸಂಗವನು ಕೋರುವೆನು ।
ಇಂಗಿತಿಲ್ಲದೆ ನಿನ್ನ ಮಂಗಲತೆಯನು ನುಡಿವ ಸಂಗೀತವನ್ನುಲಿವೆನು ! ॥೫॥

ಅಂತವಿರುವೆದೆಯಲ್ಲಿ ಗರ್ಭಗುಡಿಯನು ಕಟ್ಟಿ ।
ಅಂತವಿಲ್ಲದ ನಿನ್ನ ಮೂರ್ತಿಯನು ನೆಲೆಗೊಳಿಸಿ ।
ಅಂತರಂಗದ ಕಾಂತ, ನಾಲಿಗಿಲ್ಲದೆ ನುಡಿವ ಸಂಗೀತವನ್ನುಲಿವೆನು ! ॥೬॥

—ರಾಮಚಂದ್ರ.

**ಸವಿ:**—ಹೊರಗಿನ ಪ್ರಪಂಚದಲ್ಲಿ ಅಲೆದಾಡುತ್ತಿರುವದೇ ನಮ್ಮ ಎರಡೂ ಕಣ್ಣುಗಳ ಹುಟ್ಟುಗೆಲಸವಾಗಿದೆ. ಆದರೆ ಒಳಗಿದ್ದ ಒಂದು ಕಣ್ಣು ಆ ದೇವನನ್ನು ಕಾಣಲು ಎವೆಯಿಕ್ಕದೆ ಕಾದುಕೊಂಡಿರುವದು. ಆ ಕಣ್ಣು ಕಾಣಬೇಕಾದುದನ್ನು ಕಂಡಮೇಲೆ ಈ ಎರಡೂ ಕಣ್ಣು ಕಳೆದುಕೊಳ್ಳುವದೇ ಹಿತವು. ಎಲ್ಲಕ್ಕೂ ಮಿಗಿಲಾದುದನ್ನು ಕಂಡಮೇಲೆ ಮಿಕ್ಕದ್ದನ್ನು ನೋಡುವದಾದರೂ ಏಕೆ ? ಈ ಕಣ್ಣಿದ್ದರೆ ನೋಡಬೇಕೆಂಬಾಸೆಯು ತಲೆದೋರಲೂ ಬಹುದು. ಆದಕಾರಣ ಹೇ ದೇವನೇ ! ಒಳಗಿನ ಅನಿಮಿಷದೃಷ್ಟಿಗೆ ದರ್ಶನಕೊಟ್ಟು ಹೊರಗಿನ ಎರಡೂ ಕಣ್ಣುಗಳನ್ನು ಕಳೆದುಬಿಡು. ಅಂಥಿಂಥ ಮಾತುಗಳ ನೆನಪಿನಿಂದ ಮಲಿನವಾದ ಈ ಮನದ ಕನ್ನಡಿಯನ್ನು ತೊಳೆದು ಲಕಲಕನೆ ಹೊಳೆಯುವಂತೆ ಮಾಡು. ಅಂದರೆ ಆ ಮೇಲೆ ಹೇ ದೇವನೇ! ನಿನ್ನ ನಗೆಮೊಗವಲ್ಲದೆ ಮತ್ತೇನು ಅದರಲ್ಲಿ ಮೂಡೀತು ? ಆಗ್ಗೆ ನನ್ನ ಕನಸುಮನಸೆಲ್ಲ ನೀನೇ ಆಗುವಿ. ನನ್ನದೆಂಬುದು ಬೇರೆ ಏನೂ ಉಳಿಯದು. ನಿನ್ನದೇ ನನ್ನದು ! ಮೂರು ಲೋಕಗಳನ್ನೂ ಮಿಕ್ಕಿರುವ ಅನಂತನೇ ನನ್ನ ಎದೆಯಲ್ಲಿ ನಿನ್ನನ್ನು ಹಿಡಿದುಬಿಡುವೆ; ಅಲ್ಲಿಯೇ ನಿನ್ನ ಗುಡಿಯನ್ನು ಕಟ್ಟಿ ನಿನ್ನನ್ನು ಕಣ್ಣಿಲ್ಲದೆ ನೋಡುವೆ; ಪೈಯಿಲ್ಲದೇ ಕೂಡುವೆ, ಮಾತಿಲ್ಲದೆ ಹಾಡುವೆ. ತನ್ಮಯನಾದವನು ಹೀಗೆಯೆ ಇರುವನು.

---

# ಉಪನಿಷತ್ಕಾಲದ ಮಹರ್ಷಿಗಳು.

ಲೇಖಕರು:— ಜೋಶಿ ಶಂಕರರಾಯರು.

ಹುಟ್ಟಿದ ಕೂಡಲೇ ಮರವು ಹೂ, ಹೀಚು, ಮಿಡಿ, ಕಾಯಿ, ಹಣ್ಣುಗಳಿಂದ ಎಂದಾದರೂ ತುಂಬಿದ್ದುಂಟೇ ? ಸಸ್ಯಾದಿಗಳಿಗೆ ಹೇಗೆ ಬೆಳೆಗೆ ಇದೆಯೋ ಹಾಗೆ ಶಾಸ್ತ್ರವಿಸ್ತಾರಕ್ಕೂ ಉಂಟು. ಹುಟ್ಟಿದೊಡನೆ ಯಾವ ಶಾಸ್ತ್ರವೂ ಪರಿಪೂರ್ಣಪರಿಣತಾವಸ್ಥೆಗೆ ಬಂದಿಲ್ಲ. ಈ ನಿತ್ಯನಿಯಮಕ್ಕೆ ಉಪನಿಷತ್ತುಗಳಾದರೂ ಹೊರತಾಗಿಲ್ಲ. ಆರ್ಯಋಷಿಗಳಿಗೆ ಈ ಜಗತ್ತಿನಲ್ಲಿ ಅತ್ಯಂತ ನಿಯಮಬದ್ಧವಾಗಿ ಅವ್ಯಾಹತವಾಗಿ ನಡೆದ ಸೃಷ್ಟಿಯ ವ್ಯಾಪಾರಗಳನ್ನು ನೋಡಿ ಮೊಟ್ಟಮೊದಲು ಕೌತುಕಾಶ್ಚರ್ಯಗಳುಂಟಾದವು. ಮೊದಮೊದಲು ಈ ಸೃಷ್ಟಿಶಕ್ತಿಗಳ ಬಗ್ಗೆ ಭಯಭಕ್ತಿಯುಂಟಾಗಿ ಅವುಗಳಿಗೆ ಶರಣುಹೋಗಿ ತಮ್ಮ ಹಿತವನ್ನು ಮಾಡಲಿಕ್ಕೂ, ಕಲ್ಯಾಣಮಾಡಲಿಕ್ಕೂ ಬೇಡಿಕೊಂಡರು. ಆದರೆ ಉಪನಿಷತ್ಕಾಲದಲ್ಲಿ ಹೀಗೆ ಬೇಡಿಕೊಂಬುದು

ಉಪನಿಷತ್ಕಾರರು ಕೊನೆಯ ಸಿದ್ಧಾಂತದವರೆಗೆ ಮುಟ್ಟಿದ ಕ್ರಮವು.

ಕಡಿಮೆಯಾಯಿತು. ಈ ಸೃಷ್ಟಿವ್ಯಾಪಾರದ ಗುಟ್ಟನ್ನು ಅರಿಯಲಿಕ್ಕೆ ಹಂಬಲಿಸಿದರು. “ಏನನ್ನು ತಿಳಿದರೆ ಇದೆಲ್ಲ ತಿಳಿಯುವದು ?” ಎಂಬುದೇ ಅವರ ಮುಖ್ಯ ಪ್ರಶ್ನೆಯಾಗಿತ್ತು. ಇದೆಲ್ಲದರ ಮೂಲವನ್ನು ಬೇರನ್ನು ಹುಡುಕಬೇಕೆಂದು ಹವಣಿಕೆ ನಡಿಸಿದರು. ಅವರ ಆ ಪ್ರಯತ್ನದ ಫಲವೇ ಉಪನಿಷತ್ತುಗಳು.

ಈ ಜಗತ್ತು ಯಾತರಿಂದ ಹುಟ್ಟಿರಬೇಕೆಂದು ಸತ್ಯಸಂಶೋಧನವನ್ನು ನಡಿಸಿದಾಗ ಮೊದಲಲ್ಲಿ ನೀರೋ, ಬೆಂಕಿಯೋ ಹೀಗೆ ಕೆಲವು ಮೂಲತತ್ವಗಳೆಂದು ಕಂಡು ಹಿಡಿದರು. ಆದರೆ ಅದರಿಂದ ಸಮಾಧಾನವೆನಿಸಲಿಲ್ಲ. ಜಡದಿಂದ ಚೈತನ್ಯವು ಹೇಗೆ ಹುಟ್ಟೀತು ? ಬೇರೆ ದಿಕ್ಕಿನಲ್ಲಿ ಪ್ರಯತ್ನಗಳು ನಡೆದವು. ಮಾನಸ ಶಾಸ್ತ್ರದಲ್ಲಿ ಹೊಕ್ಕರು. ಮನಸ್ಸನ್ನು ನಿರೀಕ್ಷಿಸಿ, ವಿಮರ್ಶಿಸಿ, ಪರೀಕ್ಷಿಸಿ ಎಷ್ಟೋ ಸಿದ್ಧಾಂತಗಳನ್ನು ಕಟ್ಟಿದರು. ನಿದ್ದೆಯಲ್ಲಿ ಯಾವದು ನಾನಾ ವ್ಯಾಪಾರಗಳನ್ನು ನಡಿಸುವದು ? ಸತ್ತ ಬಳಿಕ ಸಹ ಸಾಯದೆ ಬೀಯದೆ ಯಾವದು ಉಳಿಯುವುದು? ಕಾಳ ಪುರುಷನು ಬಾಳ್ವೆಯ ಮರವನ್ನು ಮತ್ತೆ ಮತ್ತೆ ಕಡಿದರೂ ಕಂದದೆ ಕುಂದದೆ ಕುದುರಿ, ಕೊನರಿ ಚಲ್ಲುವರಿದು ಹಬ್ಬುವುದು ಇದೇತರಿಂದ ? ಎಂದು ಬಗೆದು ಭಾವಿಸಹತ್ತಿದರು. ಪುನರ್ಜನ್ಮವಿಚಾರವು ಮೊಳಕೆಗೊಂಡಿತು. ಆದರೂ ಸಮಾಧಾನಕರವಾದ ಉತ್ತರವು ಸಿಕ್ಕಿತೆಂದೆನಿಸಲಿಲ್ಲ. ಈ ಜಗತ್ತಿನೊಳಗಿನ ಸತ್ಯ—ನಿತ್ಯ—ಶಾಶ್ವತವಾದದ್ದು ಯಾವದು ? ಎಂಬುದಕ್ಕೆ ಮನತಣಿವಂಥ ಉತ್ತರವು ಅಧ್ಯಾತ್ಮದಲ್ಲಿ ಸೇರಿದಾಗಲೆ ದೊರೆಯಿತು. ಬೌದ್ಧಿಕರೀತಿಯಿಂದ ಅದರ ಸ್ಥಿತಿಗತಿಗಳ ವಿಚಾರವೂ ವಿವರವೂ ಗೊತ್ತಾಯಿತು. ಬಳಿಕ ಆ ತತ್ವವನ್ನು ತಿಳಿದು ತೀರಲಿಲ್ಲ. ಅರಿತದ್ದನ್ನು ಆಚರಿಸಿ ಮೈಯುಣಿಸಿಕೊಳ್ಳಬೇಕೆಂಬ ಹಂಬಲವುಂಟಾಗುವುದು ಸಹಜ. ಆತ್ಮಸಾಕ್ಷಾತ್ಕಾರ, ಆತ್ಮಾನುಭೂತಿ, ಆತ್ಮಯೋಗವಾಗಬೇಕಾದರೆ ಯಾವ ನಿಯಮಗಳನ್ನು ಪಾಲಿಸಬೇಕು ? ಎಂಬ ವಿಚಾರವು ಹೊರಟು ನೀತಿನಿಯಮಾದಿಗಳ ಶಾಸ್ತ್ರವೇ ಉಂಟಾಯಿತು. ಆದರೆ ಬರೆ ಹೊರಗಿನ ಜೊಳ್ಳು ನಿಯಮಗಳನ್ನಾಚರಿಸುವುದೂ ಡೊಂಬರ ವಿದ್ಯೆಯೆಂದೆನಿಸಹತ್ತಿ ಬ್ರಹ್ಮಾತ್ಮೈಕ್ಯಸ್ಥಿತಿ, ಅನುಭಾವಸ್ಥಿತಿಗೇ ಕೊನೆಗೆ ಪ್ರಾಮುಖ್ಯವು ಬಂದು ಉಪನಿಷತ್ತುಗಳು ಅನುಭವದೋರಿ ಮೌನತಾಳುತ್ತವೆ. ಈ ಅನುಭದ ಇನಿವಣ್ಣು, ತನಿವಣ್ಣುಗಳನ್ನು ಕೊನೆಯಲ್ಲಿ ಧರಿಸಿರುವುದರಿಂದಲೇ ಉಪನಿಷತ್ತುಗಳು ಲೋಕಕ್ಕೆಲ್ಲ ಪ್ರಿಯವಾಗಿರುವವು. ಈ ಇನಿವಣ್ಣು ಹಾಗೂ ತನಿವಣ್ಣುಗಳನ್ನು ಸವಿದು ಮೆಯ್ದವರೆಲ್ಲ ಹಸಿವು ನೀರಡಿಕೆ, ನೋವು ಬಳಲಿಕೆಗನ್ನೆಲ್ಲ ನೀಗಿ, ಇಲ್ಲಿ ಅಲ್ಲಿ ಕೂಡಿಯೆ ಅಳಿಯದೆ ಉಳಿದಿರುವರು. ಆದರೆ ಈ ತನಿವಣ್ಣು! ಇನಿವಣ್ಣುಗಳನು ಉಂಡು ಅರಗಿಸಬೇಕಾದರೆ ಅದಕ್ಕೆ ತಕ್ಕ ಯೋಗ್ಯತೆಯು ಬೇಕು. ಉಪನಿಷತ್ತಿನೊಳಗಿನ ಸೃಷ್ಟಿ ಉತ್ಪತ್ತಿವಿಚಾರ, ಮಾನಸಶಾಸ್ತ್ರ, ಅಧ್ಯಾತ್ಮಶಾಸ್ತ್ರ, ಹಾಗೂ ನೀತಿಶಾಸ್ತ್ರಗಳನ್ನರಿಯದವರಿಗೆ ಅದರೊಳಗಿನ ಅನುಭಾವಮಾರ್ಗವೂ ತಿಳಿಯದು.

ನಮ್ಮ ದೇಶದಲ್ಲಿ ಪ್ರಾಚೀನ ಕಾಲದೊಳಗೆ ತಾವು ಮಾಡಿದ್ದನ್ನು ಹೇಳಿಕೊಳ್ಳು ವುದು ಅಷ್ಟು ಪ್ರಶಸ್ತವೆಂದು ತಿಳಿದಿದ್ದಿಲ್ಲ. ಮಾಡಿ ಮಾಡಿಸುವವನು ಆ ಸರ್ವೇಶ್ವರನು; ನಿಮಿತ್ತಮಾತ್ರನಾದ ಮನುಷ್ಯನು 'ಇದನ್ನು ತಾನು ಮಾಡಿದೆ' ಎಂದು ಅಭಿಮಾನಬಟ್ಟು ಹೇಳುವುದಕ್ಕೆ ಬಹುತರ ಸಿದ್ಧರಿರುತ್ತಿದ್ದಿಲ್ಲ. ಅದರಿಂದ ಎಷ್ಟೋ ಹಿರಿಗೆಲಸಗಳನ್ನು ಮಾಡಿದಂಥ ಹಲವು ಮಹಾ ಪುರುಷರ ಹೆಸರುಗಳು ನಮಗೆ ಗೊತ್ತಿಲ್ಲದೆ ಕಾಲಪುರುಷನ ಹೊಟ್ಟೆಯಲ್ಲಿ ಅಡಗಿ ಹೋಗಿವೆ. ಉಪನಿಷತ್ತಿನೊಳಗಿನ ಪ್ರತಿಯೊಂದು ತತ್ವವನ್ನೂ ಇಂಥಿಂಥವನೇ ಬರೆದ ನೆಂದು ಹೇಳಲಿಕ್ಕಾಗುವದಿಲ್ಲ. ಎಷ್ಟೋ ಮಹರ್ಷಿಗಳು ಅಮೃತಮಯ ಮಂತ್ರಗಳನ್ನು ಉಸುರಿ, ತಮ್ಮ ಹೆಸರುದೆಸೆ ಏನೂ ಹೇಳದೆ ಅನಂತದಲ್ಲಿ ಒಂದಾಗಿರುವರು. ಅವರೊ ಕೆಲವರು ಇಂಥಿಂಥ ತತ್ವಗಳ ಉತ್ಪಾದಕರೆಂದು ನಿಶ್ಚಯಿಸುವಂತಿದೆ. ಉಪನಿಷತ್ತುಗಳಲ್ಲಿ ಅನೇಕ ವ್ಯಕ್ತಿಗಳ ಹೆಸರುಗಳು ಬಂದಿವೆ. ಆದರೆ ಅವೆಲ್ಲ ಐತಿಹಾಸಿಕವ್ಯಕ್ತಿಗಳೇ ಎಂದು ತಿಳಿಯಲಾಗದು. ಇಲ್ಲಿ ಐತಿಹಾಸಿಕವೆಂದು ನಿಶ್ಚಿತವಾಗಿ ಗೊತ್ತಾಗುವ ವ್ಯಕ್ತಿಗಳಲ್ಲಿ ಹಲವರ ವಿಚಾರವನ್ನಷ್ಟೇ ಮಾಡಿದೆ.

ಕೆಲವು ಋಷಿಗಳ ವಿಚಾರವು

ಛಾಂದೋಗ್ಯದಲ್ಲಿ (೫. ೧೧) ಉದ್ದಾಲಕನು ಮಣ್ಣಿನಿಂದ (ಪೃಥ್ವಿ) ಇದೆಲ್ಲ ವಿಶ್ವವು ಆಗಿರುವುದೆಂದೂ, ಪ್ರಾಚೀನಶಾಲನು ದಿವ್ಯಲೋಕವೇ ಇದೆಲ್ಲಕ್ಕೂ ಮೂಲ ಕಾರಣವೆಂದೂ, ಬುಡಿಲನೆಂಬಾತನು ನೀರಿನಿಂದಲೇ ಇದೆಲ್ಲ ಉಂಟಾಗಿದೆಯೆಂದೂ, ಶಾರ್ಕರಾಕ್ಷ್ಯ ಎಂಬವನು ಆಕಾಶ ದಿಂದ ಇದೆಲ್ಲ ಹುಟ್ಟಿತೆಂದೂ, ಇಂದ್ರದ್ಯುಮ್ನನು ವಾಯುವೇ ಇವೆಲ್ಲವುಗಳ ಮೂಲ ತತ್ವವೆಂದೂ, ಸತ್ಯಯಜ್ಞನು ವಿಶ್ವರೂಪ (ಸೂರ್ಯ) ದಿಂದ ಇದೆಲ್ಲ ಹೊರಟಿತೆಂದೂ ನಂಬಿದ್ದಾಗಿ ಹೇಳಿದೆ. ಇದೇ ಉಪನಿಷತ್ತಿನಲ್ಲಿ (೪೩) ರೈಕ್ವ ನೆಂಬಾತನೂ ಇಂದ್ರದ್ಯು ಮ್ನನಂತೆ ವಾಯುವೇ ಇದೆಲ್ಲ ವಿಶ್ವದ ಮೂಲತತ್ವವೆಂದೂ ವಾಯುವಿನಿಂದ ಹುಟ್ಟಿ ವಾಯುವಿನಲ್ಲಿ ಜಗತ್ತು ಸೇರುವುದೆಂದೂ ಹೇಳಿದ್ದಾನೆ. ಆದರೆ ಅಶ್ವಪತಿಕೈಕೇಯ ಎಂಬಾತನು ಇವೆಲ್ಲ ಬೇರೆಬೇರೆ ವಿಚಾರಗಳನ್ನು ಸಮನ್ವಯಮಾಡಿ ವಿಶ್ವಾತ್ಮ-ವೈಶ್ವಾ ನರ ಆತ್ಮನೆಂಬ ಹೊಸ ತತ್ವವನ್ನು ಕಂಡು ಹಿಡಿದಿರುವುದನ್ನು ಛಾಂದೋಗ್ಯದಲ್ಲಿ (೫. ೧೧) ನೋಡಬಹುದು. ದಿವ್ಯಲೋಕವೇ ಈ ವೈಶ್ವಾನರ ಆತ್ಮ-ವಿಶ್ವಾತ್ಮನ ತಲೆಯು; ಸೂ ರ್ಯನು ಆತನ ಕಣ್ಣು; ವಾಯುವು ಆತನ ಉಸುರು; ಆಕಾಶವು ಆತನ ಮೈಯ್; ನೀರು ಆತನ ಬಸ್ತಿ; ಭೂಮಿಯೇ ಆತನ ಕಾಲು (ಛಾ. ೫. ೧೮) ಎಂದು ಸಂಯೋ ಜಕ ಪದ್ಧತಿಯಿಂದ ಒಂದಿಸಿಹೊಂದಿಸಿ ಒಂದಿಸಿದ್ದಾನೆ.

ಜಗದುತ್ಪತ್ತಿಶಾಸ್ತ್ರಜ್ಞರು

ಸತ್ಯಕಾಮಜಾಬಾಲನು ಉಪಕೋಸಲ ಕಾಮಲಾಯನನಿಗೆ ಆತ್ಮನು ಹೊರಗಿರದೆ, ಮನುಷ್ಯನ ಕಣ್ಣಲ್ಲಿ ಕಾಣುವವನವನೇ ಎಂದು ಹೇಳಿದ್ದಾನೆ. ಗಾರ್ಗ್ಯನು ಸೂರ್ಯ

ಶಾರೀರ ಹಾಗೂ ಮಾನಸ ಶಾಸ್ತ್ರಜ್ಞರು

ಚಂದ್ರ, ವಿದ್ಯುತ್ತು, ಆಕಾಶ, ವಾಯು ಈ ಮೊದಲಾದವುಗಳೂ ಕಣ್ಣು ಮೊದಲಾದ ಶಾರೀರಿಕಪದಾರ್ಥಗಳೂ ಆತ್ಮವೆಂದು ತಿಳಿದು ಕಾಶಿಯ ಅಜಾತಶತ್ರುರಾಜನಲ್ಲಿ ಹೋಗಿದ್ದಾನೆ. (ಬೃ. ೨. ೧) ಆದರೆ ಅಜಾತಶತ್ರುವು ಆತನಿಗೆ ಆತ್ಮನನ್ನು ತೋರಿಸಿ ತಿಳಿಸುವುದಕ್ಕಾಗಿ ಅವನನ್ನು ಒಬ್ಬ ನಿದ್ದೆಹೋದವನ ಹತ್ತರ ತಂದು ಈ ಗಾಢನಿದ್ರೆಯಲ್ಲಿರುವಾತನೇ ಆತ್ಮನು ಎಂದು ಹೇಳಿದ್ದಾನೆ. ಉಪನಿಷತ್ತಿನೊಳಗೆ ನಿತ್ಯಸತ್ಯಸಂಶೋಧಕ ಋಷಿಗಳು ಸೃಷ್ಟಿ ಉತ್ಪತ್ತಿ ವಿಚಾರಕ್ಕಿಂತ ಮಾನಶಾಸ್ತ್ರದ ವಿಚಾರವನ್ನು ಬಹಳ ಆಳವಾಗಿ ಮಾಡಿದ್ದಾರೆ. ಪ್ರಶ್ನ ಉಪನಿಷತ್ತಿನಲ್ಲಿ ಪಿಪ್ಪಲಾದರಲ್ಲಿ ಕಲಿಯಲಿಕ್ಕೆ ಬಂದವರಲ್ಲಿ ಕಬಂಧಿಕಾತ್ಯಾಯನನ ಹೊರ್ತು ಉಳಿದವರು ಒಂದಿಲ್ಲೊಂದು ಬಗೆಯ ಮಾನಸಶಾಸ್ತ್ರಸಂಬಂಧದ ಪ್ರಶ್ನೆಗಳನ್ನೇ ಕೇಳಿದ್ದಾರೆ. ಕಬಂಧಿಯು ಮಾತ್ರ "ಯಾವ ಮೂಲವಸ್ತುವಿನಿಂದ ಈ ವಿಶ್ವವೆಲ್ಲ ಉಂಟಾಯಿತು?" ಎಂದು ಕೇಳಿದ್ದಾನೆ. ಉಳಿದವರಲ್ಲಿ ವೈದರ್ಭಿಭಾರ್ಗವನು "ಯಾವ ಇಂದ್ರಿಯವು ಎಲ್ಲಕ್ಕೂ ಒಡೆಯ?" ಎಂದು ಕೇಳಿದ್ದಾನೆ. ಕೌಸಲ್ಯ ಆಶ್ವಲಾಯನನು "ಇಂದ್ರಿಯಗಳ ಒಡೆಯ ಪ್ರಾಣವು ಯಾತರಿಂದ ಹುಟ್ಟಿತು?" ಎಂದು ಪ್ರಶ್ನೆ ಮಾಡಿದ್ದಾನೆ. ಸೌರ್ಯಾಯಣಿ ಗಾರ್ಗ್ಯನು "ಈ ಮನುಷ್ಯನಲ್ಲಿ ಮಲಗುವವರಾರು? ಎಚ್ಚರಿರುವರಾರು? ಕನಸು ಕಾಣುವವರಾರು? ಸುಖವು ಯಾರಿಗೆ ಆಗುತ್ತದೆ?" ಎಂದುದಕ್ಕೆ ಉತ್ತರ ಕೇಳಿದ್ದಾನೆ. ಸುಕೇಶಾ ಭಾರದ್ವಾಜನು ಹದಿನಾರು ಕಲೆಗಳುಳ್ಳ ಪುರುಷನ ಸ್ವರೂಪವನ್ನು ಕೇಳಿದ್ದಾನೆ. ಇವರೆಲ್ಲರಿಗೆ ಕೊಟ್ಟ ಉತ್ತರಗಳನ್ನೊಟ್ಟುಗೂಡಿಸಿದರೆ ಪಿಪ್ಪಲಾದ ಮುನಿಯ ತತ್ವಗಳು ಸಿಕ್ಕುವವು. ಪಿಪ್ಪಲಾದನು ಪ್ರಾಚೀನ ಕಾಲದ ಶ್ರೇಷ್ಠ ಮಾನಸ ಆಧ್ಯಾತ್ಮ ಶಾಸ್ತ್ರಿಯು. ರಯಿ ಹಾಗೂ ಪ್ರಾಣ ಅಂದರೆ ಜಡ ಮತ್ತು ಜೀವತತ್ವದ ಪ್ರಚಾರಕನು. ಉಸಿರು (ಪ್ರಾಣವು) ಇಂದ್ರಿಯಗಳಿಗಿಂತ ಶ್ರೇಷ್ಠವಾದದ್ದೆಂದೂ ಪ್ರಾಣವು ಆತ್ಮನಿಂದಲೇ ಮೊದಲು ಹೊರಟಿತೆಂದೂ ಪ್ರತಿಪಾದಿಸಿದ್ದಾನೆ. ಕನಸಿನಲ್ಲಿ ಮಾನವನ ಮನಸ್ಸಿಗೆ ಅನಿರ್ಬಂಧ ಸ್ವಾತಂತ್ರ್ಯವು ಸಿಗುತ್ತಿದ್ದು ಅದು ಕಂಡ ಅಥವಾ ಕಾಣದ ಕೇಳಿದ ಅಥವಾ ಕೇಳದ ಬೇಕಾದ ರೂಪಗಳನ್ನು ಧರಿಸಬಲ್ಲುದೆಂದೂ ಕನಸಿಲ್ಲದ ಗಾಢನಿದ್ರೆಯೆಂದರೆ ಆಗ ಆತ್ಮತೇಜಸ್ಸಿನಿಂದ ಮನುಷ್ಯನು ತುಂಬಿ ಒಂದಾಗುವನು; ಆದರಿಂದ ಆಗ ಅವನು ಕನಸುಗಳನ್ನು ಕಾಣದೆ ಆ ಸುಖವನ್ನು ಅನುಭವಿಸುವನು; ಎಂದೂ ಹೇಳುತ್ತಾನೆ. ದೇಹಾಂತದವರೆಗೆ ಮನುಷ್ಯನು ಓಂಕಾರಧ್ಯಾನಮಾಡಿದರೆ ಬ್ರಹ್ಮಲೋಕವನ್ನು ಹೊಂದುವನೆಂದೂ ಅಲ್ಲಿ ಸರ್ವವ್ಯಾಪಿ ಪರಮಾತ್ಮನನ್ನು ನೋಡುವನೆಂದೂ ಹೇಳಿದ್ದಾನೆ. ಹದಿನಾರು ಕಲೆಗಳ ಪುರುಷನ ವರ್ಣನೆ ಹೇಳಿ ಮುಂದಿನ ಸಾಂಖ್ಯ ಹಾಗೂ ವೇದಾಂತಗಳಿಗೆ ತಮ್ಮ ಲಿಂಗಶರೀರದ ಸಿದ್ಧಾಂತವನ್ನು ಸಜ್ಜುಗೊಳಿಸಲಿಕ್ಕೆ ಇಂಬುಮಾಡಿಕೊಟ್ಟಿದ್ದಾನೆ. ಬೃಹದಾರಣ್ಯ

ಕದಲ್ಲಿ ಬಂದ ಭಿಜ್ಯು ಹಾಗೂ ಉದ್ದಾಲಕರು ಮಾನಸಶಾಸ್ತ್ರ ಸಂಶೋಧಕರೇ ಆಗಿದ್ದು ಭೂತವೇತಾಳವಿದ್ಯೆಯನ್ನು ತಿಳಿಯುವ ಕಡೆಗೆ ಒಲವುಳ್ಳವರಿದ್ದಾರೆ. ಋಗ್ವೇದ (೪೨೬, ೨೭) ಉಲ್ಲೇಖಿತ ವಾಮದೇವನೆಂಬ ವಿಲಕ್ಷಣಪುರುಷನು ಬೃಹದಾರಣ್ಯಕದಲ್ಲಿಯೂ (೧-೪-೧೦) ಬಂದಿರುವನು. ಇವನು ಪುನರ್ಜನ್ಮವಾದದಲ್ಲಿ ಬಹಳ ಉತ್ಸಾಹಶಾಲಿ, 'ನಾನಿನ್ನೂ ಬಸುರಿನಲ್ಲಿರುವಾಗಲೇ ದೇವರ ಎಲ್ಲ ಜನ್ಮಗಳನ್ನು ಅರಿತುಕೊಳ್ಳಲು ಯತ್ನಿಸಿದೆನು' ಎಂದು ಹೇಳುತ್ತಾನೆ. ಮನುಷ್ಯನಿಗೆ ಮೂರು ಜನ್ಮಗಳೆಂದು ಇವನ ಅಭಿಪ್ರಾಯವು. ರೇತಸ್ಸು ಗರ್ಭಾಶಯ ಸೇರಿದೊಡನೆ ಮೊದಲನೆಯ ಜನ್ಮ, ಮನುಷ್ಯನಿಗೆ ಒಂದು ಮಗು ಹುಟ್ಟುತ್ತಲೆ ಎರಡನೆಯ ಜನ್ಮ ; ಸತ್ತಮೇಲೆ ಮರಳಿ ಹುಟ್ಟುತ್ತಲೆ ಮೂರನೆಯ ಜನ್ಮವು. ತೈತ್ತಿರೀಯದಲ್ಲಿ ಉಲ್ಲೇಖಿತ ಭೃಗುಮುನಿಯು ಶ್ರೇಷ್ಠನಾದ ಆಧ್ಯಾತ್ಮಮಾನಸ ಶಾಸ್ತ್ರಿಯು. ಅನ್ನ, ಪ್ರಾಣ, ಮನ, ವಿಜ್ಞಾನ, ಹಾಗೂ ಆನಂದಗಳು ಏರಿಕೆಯ ಕ್ರಮದಲ್ಲಿ ಆತ್ಮಸ್ವರೂಪಗಳೇ ಎಂದು ಈತನು ವಿವರಿಸಿದ್ದಾನೆ. ಬೃಹದಾರಣ್ಯಕ ೪ನೆಯ ಅಧ್ಯಾಯದಲ್ಲಿ ಮಾನಸ ಅಧ್ಯಾತ್ಮಶಾಸ್ತ್ರಿಗಳು ಕೆಲವರು ಬಂದಿರುವರು. ಜಿತ್ವನ್ ಶೈಲಿನಿಯು ವಾಣಿ (ಮಾತು) ಇದೇ ಆತ್ಯಂತಿಕ ಸತ್ಯವೆಂದೂ, ಉದಂಕ ಶೌಲ್ಬಾಯನನು ಪ್ರಾಣವೇ ಬ್ರಹ್ಮವೆಂದೂ, ಬರ್ಕುವಾರ್ಷ್ಣನು ಕಣ್ಣು, ಗರ್ದಭೀವಿಪೀತ ಭಾರದ್ವಾಜನು ಕಿವಿ, ಸತ್ಯಕಾಮಜಾಬಾಲನು ಮನಸ್ಸು, ಹಾಗೂ ವಿದಗ್ಧಶಾಕಲ್ಯನು ಹೃದಯ ಇವುಗಳು ಬ್ರಹ್ಮವೆಂದೂ ಹೇಳಿದ್ದಾರೆ. ಆದರೆ ಯಾಜ್ಞವಲ್ಕ್ಯ ಮಹರ್ಷಿಯು ಇವೆಲ್ಲವುಗಳ ಸಮನ್ವಯ ಮಾಡಿ, ಹೊಂದಿಸಿ ಒಂದಿಸಿ ಸಿದ್ಧಪಡಿಸಿದ ತನ್ನ ತತ್ವಜ್ಞಾನದಲ್ಲಿ ಮೇಲಿನ ಪ್ರತಿಯೊಂದಕ್ಕೂ ಒಂದೊಂದು ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದಾನೆ.

ಇವರಲ್ಲಿ ಶಾಂಡಿಲ್ಯ, ದಧ್ಯಾಚ, ಸನತ್ಕುಮಾರ, ಅರುಣಿ ಹಾಗೂ ಯಾಜ್ಞವಲ್ಕ್ಯರು ಪ್ರಮುಖರು. ಯಾಜ್ಞವಲ್ಕ್ಯನು ಇವರೆಲ್ಲರಲ್ಲಿ ಹಿರಿಗಲಾದವನು. ಶಾಂಡಿಲ್ಯನ

**ಅಧ್ಯಾತ್ಮ ಶಾಸ್ತ್ರಜ್ಞರು**

ವಿಚಾರಗಳೆಲ್ಲ ಛಾಂದೋಗ್ಯ (೩. ೧೪) ದಲ್ಲಿ ಸ್ವಲ್ಪದರೊಳಗೆ ಸಂಗ್ರಹಿಸಲ್ಪಟ್ಟವೆ. "ತಜ್ಜಲಾನ್" ಎಂಬ ಒಡಪದಿಂದ ಯಾತರಿಂದ ಇವೆಲ್ಲ ಉಂಟಾಗುವದೋ ಮತ್ತೆ ಯಾತಕ್ಕೆ ಹೋಗಿ ಸೇರುವುದೋ ಹಾಗೂ ಯಾತರಲ್ಲಿ ಇದೆಲ್ಲ ಬಾಳುವುದೋ ಆ ಬ್ರಹ್ಮವನ್ನು ಹೇಳುತ್ತಾನೆ. ಮನುಷ್ಯನು ಈ ಲೋಕದಲ್ಲಿ ಎಂಥ ಕ್ರತು (ಕರ್ಮ ಅಥವಾ ಸಂಕಲ್ಪ) ಮಾಡುವನೋ ಆ ಪ್ರಕಾರದ ಗತಿಯನ್ನು ಪರಲೋಕದಲ್ಲಿ ಹೊಂದುತ್ತಾನೆ. ಆದಕಾರಣ ಇದನ್ನರಿತು ಕ್ರತು ಮಾಡಬೇಕೆಂದು ಹೇಳುತ್ತಾನೆ. ಈತನು ಹೇಳುವ ಆತ್ಮಸ್ವರೂಪದ ವರ್ಣನೆಯು ಯಾಜ್ಞವಲ್ಕ್ಯಾದಿಗಳ ನಿರ್ಲಿಪ್ತ, ಅತೀತಸ್ವರೂಪವರ್ಣನಕ್ಕಿಂತ ತೀರವಿಪರೀತವಾಗಿದೆ. ಆತ್ಮನು ಹಿರಿದಕ್ಕಿಂತ ಹಿರಿದು-ಕಿರಿದಕ್ಕಿಂತ ಕಿರಿದು ಆಗಿದ್ದಾನೆಂದು ಹೇಳಿದ್ದಾನೆ. ಇಲ್ಲಿ ದೇಹ ಬಿಟ್ಟ ಬಳಿಕ ತಾನು ನಿಜವಾಗಿಯೂ ಆತನಲ್ಲಿ ಒಂದುವೆನೆಂದು ಯಾರಿಗೆ ಹಿರಿ

ದಾದ ನೆಚ್ಚಿಕೆಯಿದೆಯೋ ಎಳ್ಳಷ್ಟೂ ಸಂಶಯವಿಲ್ಲವೋ ಅವರಿಗೆ ಸತ್ಯವಾಗಿಯೂ ಆ ಗತಿಯೂಗುವದೆಂದು ಸಾರುತ್ತಾನೆ.

ದಧ್ಯಙ್ ಆಥರ್ವಣನು ವಾಮದೇವನಂತೆ ಋಗ್ವೇದದಲ್ಲಿ (೧. ೧೧೬–೧೨) ಉಲ್ಲೇಖಿತ ಋಷಿಯು. ಬೃಹದಾರಣ್ಯದ ೨ನೆಯ ಅಧ್ಯಾಯದ ೫ನೆಯ ಬ್ರಾಹ್ಮಣವೆಲ್ಲ ಈತನ ತತ್ವವಿಚಾರಗಳಿಂದಲೇ ತುಂಬಿದೆ. "ಈತನು ಮಧುವಿದ್ಯಾರಹಸ್ಯವನ್ನು ಬಲ್ಲ ವನು, ಇದನ್ನು ಬೇರೆ ಯಾರಿಗೂ ಹೇಳಲಾಗದೆಂದೂ ಹೇಳಿದರೆ ತಲೆದಂಡವೆಂದೂ ಇಂದ್ರನು ವಿಧಿಸಿದ್ದನಂತೆ. ಆದರೆ ಅಶ್ವಿನಿದೇವತೆಗಳಿಗೆ ಇವನ್ನು ಕಲಿಯಬೇಕಾಗಿತ್ತು. ಇಂದ್ರನು ತನ್ನ ಪಣವನ್ನು ತೀರಿಸದೆ ಬಿಡನೆಂದು ನಿಶ್ಚಯವಾಗಿ ಗೊತ್ತಿದ್ದುದರಿಂದ ಅಶ್ವಿನಿದೇವತೆಗಳು "ದಧ್ಯಙ" ನ ಚಂಡು ಹಾರಿಸಿ ಕುದುರೆಯ ತಲೆಯನ್ನು ಹಚ್ಚಿದರು. ಹಾಗೂ ಅವನಿಂದ ಅಶ್ವಿನಿಗಳು ಮಧುವಿದ್ಯೆ ಕಲಿತರು. ಮಧುವಿದ್ಯೆಯು ಗುಟ್ಟು ಹೊರಬಿತ್ತೆಂದು ಇಂದ್ರನ ಸಿಟ್ಟುತಲೆಗೇರಿತು. ದಧ್ಯಙ್‌ನ ತಲೆ ಹಾರಿಸಿದನು. ಆ ಕೂಡಲೆ ಅಶ್ವಿನಿಗಳು ಅವನ ಮೊದಲಿನ ತಲೆಯನ್ನೇ ಹಚ್ಚಿದರು. ದಧ್ಯಙ್‌ನು ಮೊದಲಿನಂತಾದನು! ಎಂದು ಋಗ್ವೇದದಲ್ಲಿ ಈತನ ಕಥೆಯಿದೆ.

ಆತ್ಮನಿಂದಲೇ ವಸ್ತುಮಾತ್ರಗಳೆಲ್ಲ ಉಂಟಾಗಿರುವದರಿಂದ ಇವು ಒಂದಕ್ಕೊಂದು ಅಭೇದ್ಯವಾಗಿ ಸಂಬಂಧಪಟ್ಟಿವೆ. ವಸ್ತುಜಾತಗಳೆಲ್ಲ ಒಂದಕ್ಕೊಂದು ಕಟ್ಟಲ್ಪಟ್ಟಿವೆ. ಆದ ಕಾರಣ ಅವು ಪರಸ್ಪರಾವಲಂಬಿಯಾಗಿವೆ, ಎಂದು ದಧ್ಯಙ್‌ನು ಹೇಳುತ್ತಾನೆ. ಈತನು ಮತ್ತೆ ಹೇಳುವುದೇನಂದರೆ ಪೃಥ್ವಿಯು ಎಲ್ಲ ವಸ್ತುಜಾತಗಳ ಜೇನು; ಎಲ್ಲ ವಸ್ತುಜಾತಗಳು ಪೃಥ್ವಿಯ ಜೇನು; ಯಾಕಂದರೆ ತೇಜೋಮಯವೂ, ಅಮೃತಮಯವೂ ಆದ ಆತ್ಮವು ಇವೆರಡರಲ್ಲಿಯೂ ಇರುತ್ತದೆ. ಬೆಂಕಿಯು ಎಲ್ಲ ಭೂತಮಾತ್ರಗಳ ತಿರುಳು, ಎಲ್ಲ ಭೂತಮಾತ್ರಗಳು ಬೆಂಕಿಯ ತಿರುಳು, ಯಾಕಂದರೆ ತೇಜೋಮಯವೂ ಅಮೃತಮಯವೂ ಆದ ಆತ್ಮವು ಇವೆರಡರಲ್ಲಿಯೂ ಇದೆ. ಇದೇ ಮೇರೆಗೆ ವಾಯು, ಸೂರ್ಯ, ದಿಕ್ಕು, ಚಂದ್ರ, ವಿದ್ಯುತ್, ಗುಡುಗು, ಆಕಾಶ, ಧರ್ಮ, ಸತ್ಯ, ಮನುಷ್ಯತ್ವ ಇವೆಲ್ಲವು ಅದರ ಜೇನು ಆಗಿರುತ್ತದೆ. ಇವೆಲ್ಲವುಗಳಿಗೆ ಒಂದೇ ನಿಯಮ, ಒಂದೇ ಮೂಲತತ್ವವಿದ್ದು ಇವೆಲ್ಲವುಗಳು ಉಚ್ಚಿ ಬಿಚ್ಚಿ ಹೋಗದಂತೆ ಅಭೇದ್ಯವಾಗಿ, ಅಖಂಡವಾಗಿ ಅದೇ ಕಟ್ಟಳೆಯಿಂದ ಕಟ್ಟಬಿಟ್ಟಿರುತ್ತದೆ. ಕೊನೆಗೆ ವ್ಯಕ್ತಿಯಲ್ಲಿರುವ ಆತ್ಮವು ಎಲ್ಲ ವಸ್ತುಮಾತ್ರಗಳ ಸಾರವೆಂದೂ, ಎಲ್ಲ ವಸ್ತುಮಾತ್ರಗಳು ವ್ಯಕ್ತಿಯ ಆತ್ಮನ ಸಾರವೆಂದೂ ಇವೆರಡನ್ನೂ ಅಧ್ಯಾತ್ಮವು ಭಿನ್ನವಾಗಿ ಬೇರ್ಪಟ್ಟು ಹೋಗದಂತೆ ಕಟ್ಟಿಬಿಟ್ಟಿರುವನೆಂದೂ ದಧ್ಯಙ್‌ನು ಹೇಳುತ್ತಾನೆ. ಈ ಅಧ್ಯಾತ್ಮನೇ ಎಲ್ಲ ಭೂತಮಾತ್ರರ ಒಡೆಯನು; ಎಲ್ಲ ಭೂತಮಾತ್ರರ ಅರಸು. ಗಾಲಿಯ ಗಡ್ಡೆಯಲ್ಲಿ ಅದರ ಹಲ್ಲುಗಳೆಲ್ಲ ಹೇಗೆ ಹೋಗಿ ಸಿಲುಕಿರುವವೋ ಹಾಗೆ ಈ ಅಧ್ಯಾತ್ಮನಲ್ಲಿ ಎಲ್ಲವೂ ತೊಡಕಿಕೊಂಡಿರುವವು. ಈ ಅಧ್ಯಾತ್ಮನಿಂದಲೇ ಚರಾಚರವಿಶ್ವವೆಲ್ಲ ಸುಸಂಬದ್ಧವಾಗಿ ಸಾಗಿರುವುದು. ಅಧ್ಯಾತ್ಮನೆಂಬ ಶಾಸ್ತ್ರ

ತವಾದ ಅಡಿಗಲ್ಲಮೇಲೆಯೇ ಎಲ್ಲ ಭೂತಗಳು, ಎಲ್ಲ ದೇವರು, ಎಲ್ಲ ಜನರು ಎಲ್ಲ ಪ್ರಾಣಗಳು ಈ ಮುಂತಾದ್ದೆಲ್ಲವೂ ನಿಂತಿವೆ. ಇವನಿಂದ ಆವರಿಸಲ್ಪಡದಿದ್ದುದು ಆವುದೂ ಇಲ್ಲ. ಅವನೇ ಎಲ್ಲ ರೂಪುಗೊಳ್ಳುತ್ತಾನೆ. ಇದೆಲ್ಲವೂ ಅವನ ಅಂಶಮಾತ್ರವೂ. ಅವನು ತನ್ನ ಈಶಶಕ್ತಿಯಿಂದ ಹಲವಾಗಿತೋರುವವನು. ಹೀಗೆ ಬ್ರಹ್ಮನು ಅಪೂರ್ವನೂ, ಅನ ಪರನೂ, ಅನಂತರನೂ ಅಬಾಹ್ಯನೂ ಇರುವನು. ಒಂದಿದ್ದು ಹಲವಾಗಿ ತೋರುವವನು ಎಂದು ದಧ್ಯಙ್‌ನು ವಿವರಿಸುತ್ತಾನೆ.

ಸನತ್ಕುಮಾರನು ನಾರದನ ಗುರುವು. ನಾರದರು ನಾಲ್ಕುವೇದ, ಇತಿಹಾಸ, ಪುರಾಣ ಮಂತ್ರ ವಿದ್ಯೆ, ನಕ್ಷತ್ರ ವಿದ್ಯೆ, ಭೂತವಿದ್ಯೆ, ಗಾಯನಾದಿ ಲಲಿತಕಲೆಗಳೆಲ್ಲವನ್ನು ಕಲಿತರು. ಆದರೂ ತಮಗೆ ಶೋಕ, ದುಃಖಗಳ ಆಚೆಗೆ ಒಯ್ಯುವ ವಿದ್ಯೆ ಗೊತ್ತಿಲ್ಲ ಅದನ್ನು ಕಲಿಸಿ ನನಗೆ ಶೋಕವು ಅಂದರೆ ತಗ್ಗು, ಕುಗ್ಗು, ಮಿಡುಕು, ನಿರಾಶೆ, ನಿರುತ್ಸಾಹ ದುಃಖವು ಎಂದೆಂದಿಗೂ ಆಗದಂತೆ ಮಾಡುವುದಕ್ಕೆ ಅವಶ್ಯವಾದ ವಿದ್ಯೆಯನ್ನು ಹೇಳಿರಿ, ಎಂದನು. ಆಗ ಈಗ ಕಲಿತುದೆಲ್ಲ ಹೆಸರಿಗೆ ಮಾತ್ರ ವಿದ್ಯೆ; ನಾನು ನಿನಗೆ .ನಿಜವಿದ್ಯೆ ಹೇಳುವೆನು, ಎಂದು ಸನತ್ಕುಮಾರನು ತನ್ನ ತತ್ವಜ್ಞಾನ ವನ್ನು ನಾರದನಿಗೆ ಹೇಳಿದ್ದಾನೆ. ನಾರದನಿಗೆ ಕ್ರಮುವಾದ ಮೆಟ್ಟಿಗಳಿಂದ ಆತ್ಮಸ್ವರೂಪ ಜ್ಞಾನವಮಾಡಿಕೊಡುವುದಕ್ಕೆ ಅನೇಕ ತರಗತಿಗಳನ್ನು ಕಲ್ಪಿಸಿರುವನು. ಹೆಸರು, ಮಾತು, ಮನಸು, ಸಂಕಲ್ಪ, ಚಿತ್ತ, ಧ್ಯಾನ, ವಿಜ್ಞಾನ ಇವುಗಳನ್ನು ಅನುಕ್ರಮುವಾಗಿ ಬ್ರಹ್ಮ ವೆಂದು ತಿಳಿದು ಒಂದೊಂದೇ ಉಪಾಸನೆ ಮಾಡಲಿಕ್ಕೆ ಹಚ್ಚಿದ್ದಾನೆ. ಅದೇ ಮೇರೆಗೆ ಬಲ (ಶ.), ಅನ್ನ ತೇಜ, ಆಶೆ, ಪ್ರಾಣ, ಮೊದಲಾದವುಗಳನ್ನು ಬ್ರಹ್ಮಸ್ವರೂಪವೆಂದು ಹೇಳಿದ್ದಾನೆ. ಸನತ್ಕುಮಾರನು ಗೊಡ್ಡು ವೈರಾಗ್ಯವಾದಿಯಲ್ಲ; (ಆಧ್ಯಾತ್ಮ) ಸುಖ ವಾದಿಯಾಗಿದ್ದಾನೆ. ಶಕ್ತಿ (ಕಸವು) ಬ್ರಹ್ಮವು; ಕಸುವು ವಿಜ್ಞಾನಕ್ಕಿಂತಲೂ ಮಿಗಿಲಾ ದದ್ದೆಂದು ಹೇಳುತ್ತಾನೆ. (ಉಚ್ಚತರಗತಿಯ) ಆಶೆಯು ಕೆಡಕೆಂದು ಹೇಳಿಲ್ಲ; ಆಶೆಯು ಬ್ರಹ್ಮವೆಂದು ಆರಾಧಿಸಲಿಕ್ಕೆ ಉಪದೇಶಿಸುತ್ತಾನೆ. ಬಯಸದಿದ್ದರೆ ಏನೂ ಬಾರದು. ಬಯಕೆಯೇ ಬ್ರಹ್ಮವು. ಬಯಸಿದ್ದೇ ಬರುವುದು ಎಂದು ಪ್ರತಿಪಾದಿಸುತ್ತಾನೆ. ಸುಖ ವನ್ನು ತಿರಸ್ಕರಿಸಿ ಹೀಯಾಳಿಸಿಲ್ಲ. ಮನುಷ್ಯನ ಕಾರ್ಯಶಕ್ತಿಯ ಉಗಮವು ಸುಖಾಪೇಕ್ಷೆ ಯಲ್ಲಿದೆಯೆಂದು ಕಂಡುಹಿಡಿದಿದ್ದಾನೆ. 'ಸುಖಂ ಲಭತೇಽಥ ಕರೋತಿ.' ಕೆಲಸದಿಂದಲೇ ವಿಶ್ವಾಸ, ನಚ್ಚು, ನಂಬುಗೆಗಳು ಹುಟ್ಟುವವು. ಕೃತಿಯಿಂದಲೇ ವಿಶ್ವಾಸವೂ, ವಿಶ್ವಾಸ ದಿಂದ ನಿಷ್ಠೆಯೂ ಉಂಟಾಗುತ್ತವೆ. ವಿಶ್ವಾಸದಿಂದ ವಿಚಾರವೂ, ವಿಚಾರದಿಂದ ಜ್ಞಾನವೂ, ಜ್ಞಾನದಿಂದ ಸತ್ಯವೂ ಸಿಗುತ್ತದೆ. ಇಂತು ಸುಖ, ಕೃತಿ, ನಿಷ್ಠೆ, ಶ್ರದ್ಧೆ, ಮತಿ, ವಿಜ್ಞಾನ ಹಾಗೂಸತ್ಯ ಇದು ಸನತ್ಕುಮಾರನು ಹೇಳಿದ ಆತ್ಮಸಾಕ್ಷಾತ್ಕಾರದ ನಿಚ್ಚಣಿ ಕೆಯು. 'ಭೂಮಾ' ತತ್ವದ ಪ್ರತಿಪಾದಕನು ಇವನು. ಮನುಷ್ಯನು ಆತ್ಮಸಾಕ್ಷಾತ್ಕಾರ ಹೊಂದಿದ ಬಳಿಕ ಸುತ್ತಮುತ್ತಲೆಲ್ಲ ಆತನ ಹೊರ್ತು ಮತ್ತಾವುದೂ ಕಾಣುವುದು,

ಕೇಳುವುದಿಲ್ಲ. ಆಗ ಅಳವಿಗಳಿಂದ ಆನಂದವುಂಟಾಗುತ್ತದೆ. ಅದಕ್ಕೇ 'ಭೂಮಾ' ಎಂದು ಈತನು ಹೇಳುವುದು. 'ಭೂಮಾ' ಇದೆ ಅಮೃತವು. ಇದರ ಮುಂದೆ ಉಳಿದುದೆಲ್ಲವೂ ಕಸ. ಆಕಳು, ಕುದುರೆ, ಆನೆ, ಬಂಗಾರ, ಆಳು, ಹೆಂಡತಿ, ಹೊಲ, ಮನೆ ಮೊದಲಾದವುಗಳೆಲ್ಲವೂ 'ಭೂಮಾ'ಕ್ಕೆ ಸ್ವಲ್ಪವೂ ಸರಿಗಟ್ಟಲಾರವು. (ಛಾ ೭–೩೩–೨೪) 'ಅವನೇ ನಾನು' 'ಸೋಹಮಾತ್ಮನ'ನ ಅನುಭವವು ಬಂದು ಎತ್ತೆತ್ತಲೂ ತಾನೆ, 'ತಾನೆ ತಾನಾದೊಡೆ' ಭೂಮಾನದ ಅನುಭವವು ಸಿಗುವದು. ಆತ್ಮನೇ ಎಲ್ಲ ಚರಾಚರ ವಸ್ತುಜಾತಗಳ ಮೂಲಸೆಲೆಯು. ಆತ್ಮನಿಂದಲೆ ಜೀವವು; ಆತ್ಮನಿಂದಲೆ ಆಶೆಯು; ಆತ್ಮನಿಂದಲೇ ನೆನಪು; ಆತ್ಮನಿಂದಲೇ ಆಕಾಶ, ಬೆಳಕು, ನೀರು ಮೊದಲಾದುದೆಲ್ಲ. ಇಂತಿವೆಲ್ಲ ಆತ್ಮನಿಂದಲೆ ಹೊರಟು ಆತ್ಮನಲ್ಲಿ ಐಕ್ಯವಾಗುತ್ತವೆ. ಎಲ್ಲ ಬಲ, ಜ್ಞಾನ, ಆನಂದಾದಿಗಳ ಉಗಮವು ಆತ್ಮನಲ್ಲಿಯೇ. (ಛಾಂ.–೭–೨೬)

ಆರುಣಿಯು ಯಾಜ್ಞವಲ್ಕ್ಯನನ್ನು ಬಿಟ್ಟರೆ ಉಪನಿಷತ್ಕಾಲದ ತತ್ವಜ್ಞರಲ್ಲಿ ಎಲ್ಲರಿಗೂ ಮೇಲಾದವನೆಂದು ಹೇಳಬಹುದು. ಆರುಣಿಯು ಯಾಜ್ಞವಲ್ಕ್ಯನ ಗುರುವೆಂದು ಗ್ರಹಿಕೆಯಿದೆ. ನಿದ್ದೆ, ಕನಸುಗಳ ವಿಚಾರದಲ್ಲಿಯೂ, ಅದ್ವೈತ ಹಾಗೂ ಮಾಯಾವಾದಗಳ ವಿಚಾರದಲ್ಲಿಯೂ ಇವರಿಬ್ಬರಲ್ಲಿರುವ ಹೋಲಿಕೆಯನ್ನು ನೋಡಿದರೆ ಆ ಗ್ರಹಿಕೆಯು ನಿಜವಿರಬಹುದೆಂದು ಹೇಳಬಹುದು. ಇವನು ಶ್ರೇಷ್ಠ ಮಾನಸ ಆಧ್ಯಾತ್ಮಶಾಸ್ತ್ರಿಯು. ನಿದ್ದೆಗೆ ದಣಿವು ಕಾರಣವೆಂದು ಹೇಳಿರುವದನ್ನು ನೆನಪಿಡುವಂತಿದೆ (ಛಾಂ, ೬–೮–೨) ನಿದ್ದೆಯಂದರೆ ನಿಜದಲ್ಲಿ ಸೇರುವುದು, ಒಂದುಗೂಡುವುದು (ಛಾಂ. ೬–೮–೧) ಎಂದು ಅಭಿಪ್ರಾಯಬಡುತ್ತಾನೆ. ಈತನ ಈ ವಿಚಾರಗಳನ್ನೇ ಮುಂದಿನ ಋಷಿಗಳು ಕೈಗಡತಕ್ಕೊಂಡು ಬಳಿಸಿದ್ದಾರೆ. ಮನುಷ್ಯನು ಸಾಯುವಾಗಿನ ಸಂಗತಿಗಳನ್ನು ಪರಿವಿಡಿಯಿಂದ ಹೀಗೆ ಹೇಳಿದ್ದಾನೆ. ಮೊಟ್ಟ ಮೊದಲು ಮಾತುಗಳು ಮನಸ್ಸಿನಲ್ಲಿ ಅಡಗುವವು; ಮನವು ಉಸಿರಿನಲ್ಲಿ (ಪ್ರಾಣದಲ್ಲಿ) ಕೂಡುವುದು; ಪ್ರಾಣವು ತೇಜಸ್ಸಿನಲ್ಲಿ ಒಂದುತ್ತದೆ, ಹಾಗೂ ಕೊನೆಗೆ ತೇಜವು ಹೆಚ್ಚಿನ ದೇವತೆಯಲ್ಲಿ ಬೆರೆಯುವುದು. (ಛಾಂ. ೬–೧೫) ಯಾಜ್ಞವಲ್ಕ್ಯನ ವಿಚಾರದಲ್ಲಿಯೂ ಇದರ ತಿದ್ದಿ ಬೆಳಿಸಿದ ಆವೃತ್ತಿಯನ್ನು ನೋಡಲಿಕ್ಕೆ ಸಿಗುತ್ತದೆ. ಜಗನ್ನಿರ್ಮಾಣ ವಿಚಾರದಿಂದ ಆರುಣಿಯು ಮೂಲ ತತ್ವದ ಕಡೆಗೆ ಹೀಗೆ ನೊಡುತ್ತಾನೆ. ಮಣ್ಣಿನ ಪಾತ್ರೆಗಳಿಗೆ ಮಣ್ಣು ಹೇಗೆ ಮೂಲ ಕಾರಣವೋ, ಬಂಗಾರದ ವಸ್ತ ಒಡವೆಗಳಿಗೆ ಬಂಗಾರವೇ ಹೇಗೆ ಮೂಲ ಕಾರಣವೋ ಹಾಗೆ ವಿಶ್ವದುತ್ಪತ್ತಿಗೂ ಒಂದು ಮೂಲ ಕಾರಣವಿರುತ್ತದೆಂದು ಹೇಳಿದ್ದಾನೆ. ವಿಶ್ವದುತ್ಪತ್ತಿಗೆ ಮುಖ್ಯಕಾರಣವಾದ ಒಳಗಿನ ಆ ಮೂಲ ಕಾರಣವೊಂದೇ ನಿತ್ಯವೆಂದೂ ಉಳಿದುದೆಲ್ಲ ಅನಿತ್ಯವೆಂದೂ ಹುಸಿಯೆಂದೂ ಹೇಳಿದ್ದಾನೆ. ಈ ಮೂಲ ಕಾರಣವಾದ ಬ್ರಹ್ಮವು ಬಯಲಿನೊಳಗಿಂದ ಉಂಟಾಯಿತೆಂದು ತಿಳಿಯಲಾಗದು; ಇಲ್ಲದರೊಳಗಿಂದ ಇರುವು ಹೇಗೆ ಹುಟ್ಟೀತು ? 'ಅಸತ್ತಿ'ನೊಳಗಿಂದ

ಆರುಣಿಯ.

'ಸತ್ತು' ಹುಟ್ಟಲಾರದು, ಆದಕಾರಣ ಎಲ್ಲಕ್ಕೂ ಮೊದಲು 'ಉಂಟು'. (ಛಾಂ. ೬. ೨-೧-೨). ಆ 'ಉಂಟ' ನಿಂದಲೇ ಬೆಂಕಿ (ಶಕ್ತಿ), ನೀರು (ಪ್ರವಾಹಿತತ್ವ), ಅನ್ನ (ಘನ ತತ್ವ)ಗಳುಂಟಾದವು. (ಛಾಂ. ೨. ೩-೪) ಲೋಕದೊಳಗಿನ ಸಜೀವ ನಿರ್ಜೀವ ಸತ್ವ ಗಳೆಲ್ಲ ಈ ಮೂರು ತತ್ವಗಳ ಮುಪ್ಪುರಿಯಿಂದ (ತ್ರಿವೃತ್ಕರಣ) ಆಗಿವೆಯೆಂದು ಆರು ಣಿಯು ಮೊಟ್ಟ ಮೊದಲು ಈ ಸಿದ್ಧಾಂತವನ್ನು ಪ್ರತಿಪಾದಿಸುತ್ತಾನೆ. ವಸ್ತುಗಳು ಅನಿತ್ಯ; ಮೂಲ ತತ್ವಗಳೇ ನಿತ್ಯ; ಆದರೆ ಮೂಲತತ್ವಕ್ಕಿಂತಲೂ ಎಲ್ಲದರ ಮೂಲಕಾ ರಣವಾದ ಸತ್ ( ಉಂಟು ) ಎಂಬುದೇ ಎಲ್ಲಕ್ಕೂ ನಿತ್ಯವಾದದ್ದು ಶಾಶ್ವತವಾದದ್ದು; ಉಳಿದುದೆಲ್ಲ ವಿಕಾರವು. (ಛಾಂ. ೬-೩-೪) ವಿಶ್ವದೊಳಗೆ ಏನು 'ಉಂಟೋ' (ಸತ್) ಅದೇ ಮನುಷ್ಯನಲ್ಲಿ 'ಉಂಟು.' ಅದೇ ನೀನು, 'ತತ್ವಮಸಿ' ಎಂದು ಆರುಣಿಯು ಶ್ವೇತ ಕೇತುವೆಂಬ ತನ್ನ ಮಗನಿಗೆ ಅನೇಕ ಉದಾಹರಣೆಗಳನ್ನು ಕೊಡುತ್ತ ಹೆಜ್ಜೆಜ್ಜೆಗೆ ಹೇಳಿ ದ್ದಾನೆ. ವಿಶ್ವವು ಆತ್ಮದಂಥ ಅತಿಸೂಕ್ಷ್ಮವಾದ ತತ್ವದಿಂದ ಉಂಟಾಯಿತೆಂದು ಶ್ರದ್ಧೆ ಯಿಂದಲೂ ಆಚಾರ್ಯರ ಸಹಾಯದಿಂದ ಸಮರ್ಪಕ ದೃಷ್ಟಾಂತಗಳಿಂದಲೂ ಅರಿಯ ಬೇಕು. ಅರುಣಿಯು ಜೀವಶಾಸ್ತ್ರ ದೃಷ್ಟಿಯಿಂದ ಹೇಳಿದ್ದು ಹೀಗೆ:—ಚಿತ್ ಶಕ್ತಿಯು ವಿಶ್ವಕ್ಕೆ ಚೈತನ್ಯವನ್ನು' ಕೊಟ್ಟದೆ. ಮರದಲ್ಲೆಲ್ಲ ಜೀವವು ತುಂಬಿಕೊಂಡಿರುವಾಗ ಅದರ ಯಾವ ಟೊಂಗೆಗಳನ್ನು ಕಡಿವರೂ ಟೊಂಗೆಗಳು ಒಣಗಬಹುದು; ಆದರೆ ಮರವು ಒಣಗಲಾರದು. ಮರವೇ ಒಣಗಿದರೆ ಟೊಂಗೆಗಳೂ ಒಣಗುವವು. ಇದೇ ಮೇರೆಗೆ (ವಸ್ತುಜಾತ) ಇದರೊಳಗಿಂದ ಜೀವವು ಹೋದರೆ ಇದು ಸಾಯುಬೀಯುವುದೇ ಹೊರ್ತು ಜೀವವು ನಾಶವಾಗದು. ಅದರಂತೆ ಆತ್ಯಂತ ಸೂಕ್ಷ್ಮವಾದ ಉಂಟು (ಆತ್ಮ) ಇದರಿಂದ ಆದ ಇದೆಲ್ಲವೂ ನಾಶವಾಗುವದಿಲ್ಲ. ಯಾಕಂದರೆ 'ಉಂಟು' ಇದು ಅವ್ಯ ಯವು. ಎಂದೂ ಯಾವ ಕಾಲದಲ್ಲಿಯೂ ಹೆಚ್ಚು ಕಡಿಮೆಯಾಗುವದಿಲ್ಲ. ಉಂಟು ಸತ್ಯವು; ಸತ್ಯವು ಉಂಟು (ಛಾಂ. ೬-೧೧) ಮುಕ್ತ ಸ್ಥಿತಿಯ ಬಗ್ಗೆ ಮಾನಸ ಶಾಸ್ತ್ರದೃ ಷ್ಟಿಯಿಂದ ಅರುಣಿಯು ಹೇಳುವುದೇನಂದರೆ:—ಜೇನ್ನೊಣಗಳು ಮರದಿಂದ ಮರಕ್ಕೆ ಹೋಗಿ ಮಕರಂದವನ್ನು ತಂದು ಕೂಡಿಸುತ್ತವೆ. ಆ ಮಕರಂದವು ತಾನು ಇಂಥ ಮರದ್ದು, ತಾನು ಇಂಥ ಮರದ್ದು ಎಂಬ ವಿವೇಕವನ್ನು ಮಾಡದೆ ಎಲ್ಲ ಒಂದಿ ಒಂದಾ ಗುತ್ತದೆ. ಹಾಗೆ ಮನುಷ್ಯನ ಮುಕ್ತ ಸ್ಥಿತಿಯಲ್ಲಿ ವ್ಯಕ್ತಿವೈಶಿಷ್ಟ್ಯವೇನೂ ಉಳಿಯುವ ದಿಲ್ಲ. (ಛಾಂ.೬`೯) ಹೊಳೆಗಳು ಕಡಲಿಗೆ ಕೂಡಿದಾಗ ಅವು ತಮ್ಮ ಬೇರೆ ತನವನ್ನು ಕಳಕೊಳ್ಳುವದಿಲ್ಲವೇ (ಛಾಂ. ೬-೧೦)? ನೈತಿಕ ದೃಷ್ಟಿಯಿಂದ ಆತ್ಮನೇ 'ಸತ್ಯ;' ಸತ್ಯಕ್ಕೆ ಸಾವಿಲ್ಲ. ಸತ್ಯವೂ ಆತ್ಮನೂ ಸಂಗಡಿಗರು; ಸತ್ಯವೂ ಅತ್ಮನೂ ನಿತ್ಯ (ಛಾ. ೬-೧೬) ಎಂದು ಪ್ರತಿಪಾದಿಸುತ್ತಾನೆ. ಅಧ್ಯಾತ್ಮ ಶಾಸ್ತ್ರದ ದೃಷ್ಟಿಯಿಂದ ಆತ್ಮ ತತ್ವವು ಸರ್ವ ವ್ಯಾಪಿ. ನೀರಲ್ಲಿ ಚಲ್ಲಿದ ಉಪ್ಪು ನೀರಿನ ಅಂಗಾಂಗಗಳಲ್ಲಿ ಬಿಡುವಂತೆ ಆತ್ಮವು ಎಲ್ಲೆ ಲ್ಲಿಯೂ ತುಂಬಿಕೊಂಡಿದೆ. ಆತ್ಮದಾಚೆಗೆ ಇರುವುದಾವುದೂ ಇಲ್ಲ (ಛಾಂ. ೬-೧೩)

ಎಂದು ಹಿಂಜಿ ಹೇಳುತ್ತಾನೆ. ಅರುಣಿಯು ತನ್ನ ಶುದ್ಧಬುದ್ಧಿಗೆ ಹೊಳೆದ ತತ್ವಗಳನ್ನು ಬಹು ಧೀರ ವೀರತನದಿಂದ ಯಾವ ಅಂಜಿಕೆ ಅಳುಕಿಲ್ಲದೆ ಅಂತ್ಯಂತ ಸುಸ್ಪಷ್ಟ ಶಬ್ದಗಳಲ್ಲಿ ಸಂಪೂರ್ಣ ಶುದ್ಧಾದ್ವೈತದ ತತ್ವಗಳನ್ನು ವಿವರಿಸಿ ಹೇಳಿದ್ದಾನೆ.

ತನ್ನ ಆಚಾರ್ಯ ಅರುಣಿಯಂತೆ ಬಹಳ ಶ್ರೇಷ್ಠನಾದ ಮಾನಸ ಅಧ್ಯಾತ್ಮ ಶಾಸ್ತ್ರಿಯು. ಯಾಜ್ಞವಲ್ಕ್ಯನು. ಈತನು ತನ್ನ ಹೆಂಡತಿಯಾದ ಮೈತ್ರೇಯಿಯ ಪ್ರಶ್ನೆಗಳಿಗೆ ಕೊಟ್ಟ ಉತ್ತರಗಳಲ್ಲಿಯೂ, ಜನಕರಾಜನ ಸಭೆಯಲ್ಲಿ ಕೂಡಿದ

ಯಾಜ್ಞವಲ್ಕ್ಯನು

ಪಂಡಿತರ ಪ್ರಶ್ನೆಗಳ ವಿವರಣದಲ್ಲಿಯೂ, ಸ್ವಂತ ಜನಕರಾಜನ ಅಪೇಕ್ಷೆಯಂತೆ ಆತನಿಗೆ ಮಾಡಿದ ಜ್ಞಾನೋಪದೇಶದೊಳಗೂ ತನ್ನ ಎಲ್ಲ ತತ್ವಜ್ಞಾನವನ್ನು ಅರಳಿಸಿದ್ದಾನೆ. ಅದೆಲ್ಲವೂ ಮುಂದಿನ ಅಧ್ಯಾಯಗಳಲ್ಲಿ ವಿಶೇಷವಾಗಿ ಬರತಕ್ಕುದಿದೆ. ಇಲ್ಲಿ ಅದರ ಹೊಳವನ್ನಷ್ಟು ಹೇಳಿಬಿಡುವುದು ಯುಕ್ತವಾಗಿದೆ. ಜನಕರಾಜನ ಪರಿಷತ್ತಿಗೆ ಬಂದಂಥ ಯಾಜ್ಞವಲ್ಕ್ಯನ ಪ್ರತಿವಾದಿಗಳ ಸ್ವಲ್ಪ ಪರಿಚಯವನ್ನು ಮಾಡಿಕೊಂಡರೆ ಅವರ ಚರ್ಚೆಯಲ್ಲಿ ಬಂದ ಹಲವು ವಿಷಯಗಳ ಸ್ಥೂಲ ಕಲ್ಪನೆಯು ಬರುವಂತಿದೆ. ಜನಕನ ಯಜ್ಞದಲ್ಲಿ ಹೋತೃವಾಗಿದ್ದ ಅಶ್ವಲನೆಂಬವನು ಸ್ವಾಭಾವಿಕವಾಗಿ ತನ್ನ ಉದ್ಯೋಗದ ವಿಷಯದಲ್ಲಿ ಅಂದರೆ ಯಜ್ಞಯಾಗಾದಿ ಕರ್ಮಕಾಂಡದಲ್ಲಿ ಆಸಕ್ತಿಯುಳ್ಳವನು; ಶಾಕಲ್ಯನು ದೇವತಾ ವಿಚಾರದಲ್ಲಿ ಲವಲವಿಕೆ ಇದ್ದವನು; ಜರತ್ಕಾರವನು ಮರಣಾನಂತರ ಸ್ಥಿತಿ ವಿಚಾರದಲ್ಲಿ ಜಿಜ್ಞಾಸೆಯವನು; ಭಿಜ್ಯುವು ವೇತಾಳ ವಿದ್ಯೆಯ ಹಸಿವುಳ್ಳವನು, ಉಷಸ್ತ ಚಾಕ್ರಾಯಣನು ಆತ್ಮಸ್ವರೂಪವನ್ನು ಅರಿಯಲು ಬಯಸುವವನು, ಕಹೋಳನು ಬ್ರಹ್ಮಸಾಧನದ ಹಾದಿಯನ್ನು ಹುಡುಕುವವನು; ವಚಕ್ನುವಿನ ಮಗಳಾದ ಗಾರ್ಗಿಯು ಗತ್ಯಾತ್ಮನನ್ನು ಅಂದರೆ ಓತ ಪ್ರೋತವಾಗಿರುವ ಬಹಿರ್ಯಾಮಿಯನ್ನು ತಿಳಿಯಲು ಹಾತೊರೆವವಳು; ಉದ್ದಾಲಕನು ಸ್ಥಿತ್ಯಾತ್ಮನನ್ನು ಅಂದರೆ ಅಂತರ್ಯಾಮಿ ಅರಿತುಕೊಳ್ಳಲಿಕ್ಕೆ ತವಕವುಳ್ಳವನು, ಇವರೆಲ್ಲರು ತಮ ತಮಗೆ ಬಯಕೆಯಿದ್ದ ಮಾತುಗಳನ್ನೇ ಯಾಜ್ಞವಲ್ಕ್ಯನಿಗೆ ಕೇಳಲು ಆತನು ಅವರ ಮನತಣಿವಂತೆ ಅವರವರ ವಿಷಯುಗಳ ಉತ್ತರಗಳನ್ನು ಕೊಟ್ಟಿದ್ದಾನೆ.

ಎಲ್ಲ ನೀರಿಗೆ ಹೇಗೆ ಸಾಗರವೋ, ಮುಟ್ಟು(ಸ್ಪರ್ಶ)ಗೆ ಮೈಯೋ(ತ್ವಕ್); ಮೂಸು (ಗಂಧ)ಗೆ ಮೂಗೋ, ಸವಿಗೆ ನಾಲಗೆಯೋ, ಕಾಣ್ಕೆಗೆ ಕಣ್ಣೋ, ಕೇಳ್ಕೆಗೆ ಕಿವಿಯೋ, ಸಂಕಲ್ಪಗಳಿಗೆ ಮನಸೋ ಹಾಗೆ ಎಲ್ಲ ವಸ್ತುಜಾತಗಳಿಗೆ ಆತ್ಮವೇ ಮೂಲಸ್ಥಾನವು. ಆತ್ಮನು ಸರ್ವವ್ಯಾಪಿ. ಯಾಜ್ಞವಲ್ಕ್ಯನೂ ಆತ್ಮನ ಸರ್ವಾಂತರ್ಯಾಮಿತ್ವವನ್ನುಹೇಳಲು ನೀರೊಳಗೊಂದಾದ ಉಪ್ಪಿನ ಉದಾಹರಣ ಕೊಡುತ್ತಾನೆ. ಇದನ್ನು ಬಹುತರ ಗುರು ಅರುಣಿಯಿಂದ ಕೈಗಡ ತಕ್ಕೊಂಡಿರಬೇಕು. ಆತ್ಮಕ್ಕೋಸುಗ ಇವೆಲ್ಲ ಉಂಟು; ಹೀಗೆ ಇವನ್ನೆಣಿಸದಿದ್ದರೆ ಇವು ನಮ್ಮ ಪಾಲಿಲ್ಲದಾಗುವವು. ಆತ್ಮಕ್ಕಾಗಿಯೇ ನಮಗಿದೆಲ್ಲ ಪ್ರಿಯಕರವಾಗಿದೆ. ಯಾಕಂದರೆ ಇದೆಲ್ಲವೂ ಆತ್ಮಮಯವಾಗಿರುವದರಿಂದ ಆತ್ಮನು

ಆತ್ಮದೊಂದಿಗೆ ಕರೆಯಲು ಕೇಳಲು, ಕೂಡಲು, ಒಂದಲು ಬಯಸುತ್ತನೆ. ಆದಕಾರಣ ಈ ಆತ್ಮಸ್ವರೂಪ ಸ್ಥಿತಿಗತಿಗಳನ್ನು ಕಂಡು ಕೇಳಿ, ಬಗೆದು, ಭಾವಿಸಿ, ನೆನೆದು ಅರಿಯ ಬೇಕು, ತಿಳಿಯಬೇಕು. ಇದೇ ಮಾನವನ ಹಿರಿಗುರಿ. ಆತ್ಮವೊಂದೇ ಅಕ್ಷರವು, ಅವಿನಾಶಿ. ಉಳಿದುದೆಲ್ಲ ಹುಸಿ; ಕ್ಷಣಿಕರೂಪು 'ಆರ್ತವಸ್' ಆತ್ಮನು ಉದ್ದಿಲ್ಲ; ಗಿಡ್ಡನೂ ಇಲ್ಲ. ಹಿರಿದಿಲ್ಲ; ಕಿರಿದೂ ಇಲ್ಲ. ಒಳಹೊರಗಿಲ್ಲ. ಇಂದ್ರಿಯಗಳಿಲ್ಲ. ಯಾವದನ್ನು ತಿನ್ನುವದಿಲ್ಲ; ಯಾರತಿನಸೂ ಅಲ್ಲ. ಆತ್ಮವು ಇದೆಲ್ಲವನ್ನೂ ಆಳುತ್ತದೆ. ಇದರ ಪ್ರಶಾಸನದಿಂದ ಹಗಲಿರುಳುಗಳಾಗುತ್ತವೆ, ಋತುಗಳೂ ವರ್ಷಗಳೂ ಆಗುತ್ತವೆ. ಆಗುಹೋಗುಗಳೆಲ್ಲ ಇದರ ಪ್ರಶಾಸನ ಮೂಲಕವಾಗಿಯೇ. ಆತ್ಮವು ಎಲ್ಲೆಲ್ಲೂ ಓತಪ್ರೋತವಾಗಿ ತುಂಬಿಬಿಟ್ಟದೆ. ಅದೇ ಜಗಚ್ಚಾಲಕ. ಉಳಿದುದೆಲ್ಲ ಅದರ ಕೈಗೊಂಬೆ; ಸೂತ್ರವನ್ನೆಳೆದು ಕುಣಿಸಿದಂತೆ ಇದೆಲ್ಲ ಕುಣಿಯುವುದು. ಅದು ತನ್ನ ಬಯಕೆಯಂತೆ ಎಲ್ಲವನ್ನು ಆಡಿಸುತ್ತಿದೆ. ಆತ್ಮವು ಸ್ವಯಂಜ್ಯೋತಿಸ್ವರೂಪ. ಅದರ ಬೆಳಕೇ ಬೆಳಕು; ಅದರ ಹೊಳಪೇ ಹೊಳಪು. ಉಳಿದ ಬೆಳಕೆಲ್ಲ ತೋರಿಕೆ ಬೆಳಕು; ಹೊರಗಿನ ಹೊಳಪು. ತನ್ನ ಈ ಒಳಬೆಳಕನ್ನು ಕಂಡವನು ವಿಜ್ಞಾನಮಯನಾಗುವನು. ತನ್ನ ತಾನರಿಯುವನು. ಕೇಳುವನು ಕಾಣುವನ, ಬಗೆವವ ಅವನೊರ್ವ. ಅವನಿಂದ ಬೇರೆ ಮತ್ತಾರೂ ಇಲ್ಲ. ಆತ್ಮವು ತನ್ನ ತಾನೆ ನೋಡುವುದು. ತನ್ನಿಂದ ಬೇರೊಂದಿದ್ದಾಗ ಮಾತ್ರ ಮತ್ತೊಂದನ್ನು ನೋಡಬಹುದು ತಾನೆ ತಾನಾದಾಗ ಕಾಣುವುದು, ಕೇಳುವುದೆಲ್ಲ ತಾನೆತಾನು. ಆಗ ನಾ ನೀ ಎಂಬ ಭಿನ್ನಭಾವವಿಲ್ಲ. ಎಡರುತನವಿಲ್ಲ. ಎಲ್ಲವದೊಂದೇ. ಆದರೆ ಈ ಅವಸ್ಥೆಯಲ್ಲಾದರೂ ಆತನ ಕೇಳ್ಕೆ, ಕಾಣ್ಕೆ, ಬಗೆತ ಮುಂತಾದ ಇಂದ್ರಿಯ ಶಕ್ತಿಯೇನೂ ನಾಶವಾಗುವದಿಲ್ಲವೆಂದು ಯಾಜ್ಞವಲ್ಕ್ಯನ ಪ್ರತಿಪಾದಿಸಿದ್ದಾನೆ. ಇದು ಯಾಜ್ಞವಲ್ಕ್ಯನ ತತ್ವಜ್ಞಾನವಿಚಾರಸಾರವು.

ಮಾನಸ ಶಾಸ್ತ್ರವಿಚಾರದಲ್ಲಿ ಉಳಿದ ಔಪನಿಷದಿಕ ತತ್ವವಿದರಂತೆ ಕನಸಿನ ಬಗ್ಗೆ ಹೇಳುತ್ತಾನೆ. ಕನಸಿನಲ್ಲಿ ಆತ್ಮವು ಸ್ವಯಂಜ್ಯೋತಿಯ ಪ್ರಕಾಶವನ್ನು ಹೊರಗೆಡವಿರುತ್ತದೆ. ಮತ್ತು ಆಗ ಉಸುರಿನಿಂದ ತನ್ನ ಗೂಡನ್ನು (ದೇಹವನ್ನು) ಕಾಯುತ್ತ ಹೊರಗೆ ಹಾರಾಡುತ್ತದೆ. ಆದರೆ ಇದೆಲ್ಲ ಹಾರಾಟ; ಹೋಗಾಟವು ತೋರಿಕೆ, ಕನಸು; ನನಸಲ್ಲ ಹುಸಿ; ಹುರುಳಿಲ್ಲ. ಮನುಷ್ಯನು ಕನಸಿನಲ್ಲಿದ್ದಾಗ ಅವನನ್ನು ಫಕ್ಕನೆ ಎಬ್ಬಿಸಲಾಗದೆಂದೂ, ಎಬ್ಬಿಸಿದರೆ ಹೆದರಿ ಆತ್ಮವು ದೇಹಬಿಟ್ಟು ಹೋದೀತೆಂದೂ ಯಾಜ್ಞವಲ್ಕ್ಯರ ಕಲ್ಪನೆಯಿದೆ. ಆದಕಾರಣ ನಿದ್ದೆಯಲ್ಲಿದ್ದವನನ್ನು ಒಮ್ಮೆಲೆ ಎಬ್ಬಿಸದಿರಲಿಕ್ಕೆ ಹೇಳುತ್ತಾನೆ! ಈತನೂ ಅರುಣಿಯಂತೆ ನಿದ್ದೆಗೆ ದಣಿವೇ ಕಾರಣವೆನ್ನುತ್ತಾನೆ. ಮನುಷ್ಯನಿಗೆ ಈ ಲೋಕ ಹಾಗೂ ಪರಲೋಕಗಳಿರುವ ಅವನ ಸ್ಥಾನಗಳಲ್ಲಿ ಕನಸು ಇವೆರಡರ ನಡುವಿದೆ; ಸಂಧಿಸ್ಥಾನದಲ್ಲಿದೆ. ಕನಸಿನಲ್ಲಿ ಇಲ್ಲಿಯ ಅಥವಾ ಪರಲೋಕದ ಫಲಗಳನ್ನು ತನ್ನ ಕರ್ಮಾನುಸಾರವಾಗಿ ಒಳ್ಳೇ ಇಲ್ಲವೇ ಕಾಡು ಅನುಭವಿಸುತ್ತಿರುತ್ತಾನೆ.

ಮರಣಸ್ಥಿತಿಯನ್ನು ಬಹು ಸೂಕ್ಷ್ಮ ನಿರೀಕ್ಷಣದಿಂದ ವಿವರಿಸಿದ್ದಾನೆ. ಸಾಯುವ ಮುಂಚೆ ಶರೀರ ಆತ್ಮನು ಪ್ರಾಜ್ಞಾತ್ಮನ ಮೇಲೆ ಏರುವನು; ಮಿತಿಮೀರಿ ತುಂಬಿದ ಬಂಡಿಯು ಗೊರಗುಡುತ್ತ ಹೊರಡುವಂತೆ ದೇಹದಿಂದ ಶಬ್ದಮಾಡುತ್ತ ಹೊರಡುವನು. ಆಗ ಊರ್ಧ್ವೋಚ್ಛ್ವಸನವು (ಮೇಲುಸಿರು) ಆರಂಭವಾಗುತ್ತದೆ. ಚಾಕ್ಷುಷ ಪುರುಷನು (ಕಣ್ಣೊಳಗಿನ ಗೊಂಬೆಯು) ಮರಳುತ್ತಾನೆ. ಆತನ ಹೃದಯಾಗ್ರವು ಹೊತ್ತುವುದು. ಈ ಹೊತ್ತಿದ ತುದಿಎದೆಯ ಬೆಳಕಿನಿಂದಲೇ ಕಣ್ಣು, ನೆತ್ತಿ ಅಥವಾ ಬೇರೆ ಅವಯುವಗಳಿಂದ ಹೊರಬೀಳುವನು. ಆಗ ಜೀವಾತ್ಮನೊಡನೆ ಆತನು ಕಲಿತ ಜ್ಞಾನವೂ, ಮಾಡಿದ ಕರ್ಮವೂ ಬೆನ್ನು ಹತ್ತುವುದು. ಹಾಗೂ ಕರ್ಮವೇ ಅವನ ಒಳಿತು ಕೇಡುಗಳಿಗೆ ಕಾರಣವು. ಮತ್ತೊಂದು ದೇಹವನ್ನು ಸಿದ್ಧಮಾಡಿಟ್ಟುಕೊಂಡೇ ಈ ದೇಹವನ್ನು ಬಿಡುವದಾಗಿ ಯಾಜ್ಞವಲ್ಕ್ಯನ ಅಭಿಪ್ರಾಯವಿದೆ. ಯಾಕಂದರೆ ಒಂದು ಹುಲ್ಲುಕಡ್ಡಿಯಮೇಲೆ ಇರುವ ಕೀಡಿಯು ಆ ಹುಲ್ಲಿನ ಕೊನೆಗೆ ಹೋಗಿ ಮತ್ತೊಂದನ್ನು ಆಶ್ರಯಿಸಿದ ಮೇಲೆ ಮೊದಲಿನದನ್ನು ಬಿಡುವುದು. ಬರಬರುತ್ತ ಉತ್ತಮೋತ್ತಮ ಅವಸ್ಥೆಯೇ ಬರುವುದೆಂದೂ ಯಾಜ್ಞವಲ್ಕ್ಯರು ಪ್ರತಿಪಾದಿಸುತ್ತಾರೆ. ಸೊನ್ನಗಾರನು ಹಳೆ ಬಂಗಾರದಿಂದ ಮೊದಲಿಗಿಂತಲೂ ಸುಂದರವಾದ ಸೊಗಸಾದ ಒಡವೆಯನ್ನು ಸಿದ್ಧಪಡಿಸುವದಿಲ್ಲವೇ! ಹಾಗೆ ಆತ್ಮನು ಉತ್ತರೋತ್ತರ ಹೊಸಹೊಸ ಹಾಗೂ ಕಲ್ಯಾಣಕರವಾದ ರೂಪಗಳನ್ನೇ ತಾಳುತ್ತಾನೆ. ಆತ್ಮ ಜೀವಾತ್ಮನ ಆಶೆಗಳೇನಾದರೂ ಉಳಿದಿದ್ದರೆ ಅವನು ಮರಳಿ ಈ ಲೋಕಕ್ಕೆ ಬರುತ್ತಾನೆ. ಆದರೆ ಆಶೆಗಳೆಲ್ಲ ತೀರಿ ಅಕಾಮನು, ನಿಷ್ಕಾಮನು, ಆಪ್ತಕಾಮನು (ಅಪೇಕ್ಷೆಗಳೆಲ್ಲ ಸಫಲವಾಗಿ ಆಶೆಯುಳಿದವನು) ಆತ್ಮೇಚ್ಛುವು ಆಗಿದ್ದರೆ ಅವನು ಬ್ರಹ್ಮನಾಗಿ ಬ್ರಹ್ಮನೊಡನೆ ಒಂದುವನು. ಆಗ ಅವನಿಗೆ ಸ್ವತಂತ್ರ ಸಂಜ್ಞೆಯು (Con-sciors ness) ಉಳಿಯುವದಿಲ್ಲ. ಭೌತಿಕ ತತ್ವಗಳಿಂದಾದ ದೇಹದಲ್ಲಿ ಸೇರಿಕೊಂಡಾಗ ಜೀವಾತ್ಮನಿಗೆ ಸ್ವತಂತ್ರವಾದ 'ಸಂಜ್ಞಾ' (Conscious ness) ಶಕ್ತಿಯುಂಟಾಗಿರುತ್ತದೆ. ಆದರೆ ಅದು ತಾತ್ಪೂರ್ತಿಕವು ಮಾತ್ರ. ಆದರೆ ತಾನೆ ತಾನಾದಾಗ ಯಾರು ಯಾರೊಡನೆ ಆಡುವುದು ? ಯಾರು ಯಾರನ್ನು ಕೇಳುವುದು! ಕಾಣುವುದು ! ಆದಕಾರಣ ತಾನೆ ತಾನಾದಾಗ ದ್ವೈತವು ಅದ್ವೈತವಾಗುವದು.

ಅನುಭಾವಿಗಳೂ, ಸಾಧು ಸತ್ಪುರುಷರೂ

ಅನುಭಾವಿಗಳಲ್ಲಿ ತ್ರಿಶಂಕು ಎಂಬಾತನು ಒಳ್ಳೇ ನಿಚ್ಚಳಾದ ಒಳಗಣ್ಣಿನವನಿದ್ದಾನೆ. ತೈತ್ತಿರೀಯ ಉಪನಿಷತ್ತಿನಲ್ಲಿ, ಬರಿ ನಾಲ್ಕು ಸಾಲಿನಲ್ಲಿ ಜಡಿದು ತುಂಬಿ ಹೇಳಿದ ಹಿರಿಯರ್ಥದ ಸಣ್ಣ ವಾಕ್ಯಗಳಿಂದಲೆ ಅವನು ಎಷ್ಟು ಹೆಚ್ಚಿನ ಯೋಗ್ಯತೆಯವನಿದ್ದನೆಂಬದು ಒಡೆದು ಕಾಣುವಂತಿವೆ. ಇದೇ ಮೇರೆಗೆ ಮೈತ್ರಿ ಋಷಿಯೂ ಒಳ್ಳೇ ಅನುಭಾವಿಯೆಂದು ಆತನು ಮಾಡಿದ ಆತ್ಮಸಾಕ್ಷಾತ್ಕಾರ ಸ್ಥಿತಿಯ ವರ್ಣನದಿಂದ ಕಂಡುಬಾರದೆ ಇರದು. ಸತ್ಯವಚನಿ ರಾಥೀತರನೂ, ತಪೋನಿಷ್ಠನಾದ ಪೌರುಶಿಷ್ಟೇಯೂ, ಸ್ವಾಧ್ಯಾಯ ಪ್ರವಚನನಿರತನಾದ ನಾಕೇ ಮೌದಲ್ಯನೂ ಅನುಕ್ರಮವಾಗಿ ಸತ್ಯ, ತಪ,

ಹಾಗೂ (ವೇದ) ಅಧ್ಯಯನ ಅಧ್ಯಾಪನಗಳೇ ಸರ್ವಶ್ರೇಷ್ಠವಾದವುಗಳೆಂದು ನಚ್ಚಿ ಹಾಗೇ ತಾವು ನಡೆದು ತಮ್ಮ ಆಯಾ ಶ್ರೇಷ್ಠಸದಾಚಾರಗಳಿಂದ ಜಗತ್ತಿಗೆ ಪಾಠಹಾಕಿ ಕೊಟ್ಟಿದ್ದಾರೆ. ಇವರು ಶೀಲವಂತರು; ಸಾಧುಸತ್ಪುರುಷರು.

ಐತರೇಯ ಮಹೀದಾಸನು ಸುಪ್ರಜಾನಿರ್ಮಾಣ ಶಾಸ್ತ್ರದಲ್ಲಿ ಬಹಳ ಅಭಿರುಚಿಯು ಇದ್ದವನಾಗಿ ತೋರುತ್ತದೆ. ಯಜ್ಞಯಾಗಾದಿಗಳ ಸಹಾಯದಿಂದಾದರೂ ಅಡ್ಡಿಯಿಲ್ಲ. ಮನುಷ್ಯನ ಆಯುಷ್ಯವು ಹೆಚ್ಚು ಮಾಡುವ

ಉಳಿದ ಕೆಲರು

ಯುಕ್ತಿಗಳನ್ನು ಕಂಡು ಹಿಡಿಯಲೆತ್ನಿಸಿದ್ದಾನೆ. ಆರುಣಿಯ ಕಾಲಕ್ಕೆ ಉಪವಾಸವ್ರತವು ವಿಶೇಷವಿರಬೇಕೆಂಬುವುದಕ್ಕೆ ಇಂಬಿದೆ. ಕೌಶೀತಕಿಯು "ಪ್ರಾಣಬ್ರಹ್ಮ"ದ ಸಂಶೋಧಕನಾಗಿರಬೇಕು. ಅಂದರೆ "ಪ್ರಾಣವು ಬ್ರಹ್ಮ" ಎಂದು ಹೇಳಿದವನು ಇವನೆ ಮೊದಲಾಗಿರಬೇಕು. ಇವನು ಒಬ್ಬ ಪ್ರಾಚೀನ ಕಾಲದ "ಸತ್ಯಾಗ್ರಹಿಯೆಂದು" ಹೇಳಬಹುದು, ಕೆಲ ಬಯಕೆಗಳು ಕೈಗೂಡುವುದಕ್ಕಾಗಿ ಈತನು ಸೂರ್ಯ, ಪೌರ್ಣಿಮಾಚಂದ್ರ ಹಾಗೂ ಪ್ರತಿಪದಾ ಚಂದ್ರರ ಉಪಾಸನೆಮಾಡುವ ವಿಧಿಯ ಉತ್ಪಾದಕನು ಈತನೇ. ಸರ್ವೇಂದ್ರಿಯಗಳಲ್ಲಿ ಪ್ರಾಣವೇ ಶ್ರೇಷ್ಠವೆಂದು ಹೇಳುವ ಪೈಂಗ್ಯನು ಕೌಶೀತಕಿಯ ಹಿಂಬಾಲಿಗನು. ಪ್ರಾತರ್ದನನೆಂಬ ಋಷಿಯು ಸ್ವತಂತ್ರವಿಚಾರದ ನಿರ್ಭಯವೃತ್ತಿಯ ತತ್ವಜಿಜ್ಞಾಸುವು. ಯಜ್ಞಯಾಗಾದಿ ಬಾಹ್ಯಕರ್ಮಗಳು ನಿರರ್ಥಕವಾದವುಗಳೆಂದು ಸಾರಿದ್ದಾನೆ. ಅಂತರ್ಗತದೇಹದಲ್ಲಿ ಸತತವಾಗಿ ಯಜ್ಞವೇ ನಡೆದಿದೆಯೆಂದು ಪ್ರತಿಪಾದಿಸುತ್ತಾನೆ. ಜೀವ–ಮಾನಸ–ಆಧ್ಯಾತ್ಮಿಕ 'ಪ್ರಜ್ಞಾತ್ಮ"ತತ್ವಪ್ರಚಾರಕ್ಕೆ ನೆರವಾದವನೆಂದು ಅನ್ನಬಹುದು. ಸಾಮವನ್ನೋದಿದವನು ಸನ್ಮಾನಿಸಲ್ಪಡುವನು ಎಂಬೀ ತೆರದಿಂದ ಶುಷ್ಕ ಭೃಂಗಾರಕನು ಶಬ್ದವ್ಯುತ್ಪತ್ತಿ ಶಾಸ್ತ್ರದೃಷ್ಟಿಯಿಂದ ಪದಚ್ಛೇದಿಸಿ ಅದರಿಂದ ತತ್ವಗಳನ್ನು ತೆಗೆಯಲೆತ್ನಿಸಿದವರಲ್ಲಿ ಒಬ್ಬನು. ನಡೆದಿರುವುದೆಲ್ಲವೂ ಯಜ್ಞಸ್ವರೂಪವೆಂಬುವವನು ಜೈವಲಿಯು. ಅಡಿಗಡಿಗೂ ಯಜ್ಞವೇ ನಡೆದಿದೆ. ಹಗಲಿರುಗಳಾಗುವುದು, ಮಳೆ ಬೀಳುವುದು, ಬೆಳೆಬರುವುದು ಇವೆಲ್ಲ ಯಜ್ಞಗಳೇ. ಮನುಷ್ಯ ಮಾಡುವ ಊಟ-ಉಡಿಗೆಗಳೂ ಯಜ್ಞ. ಕೊನೆಗೆ ಪ್ರಜೋತ್ಪಾದನವೂ ಯಜ್ಞವೆಂದು ಹೇಳಿರುವನು. ಹೀಗೆ ಚಂದ್ರ, ಮಳೆ, ಅನ್ನ, ಬೀಜ, ಮನುಷ್ಯನು ಈ ಐದು ಆಹುತಿಗಳನ್ನು ಪಂಚಾಗ್ನಿಯ ತತ್ವವನ್ನು ಜೈವಲಿಯು ಹೇಳಿದ್ದಾನೆ. ಮನುಷ್ಯನು ಯಾವ ಅಗ್ನಿಯಿಂದ ಈ ಲೋಕಕ್ಕೆ ಬಂದಿದ್ದನೋ, ಯಾವ ಅಗ್ನಿಯಿಂದ (ಪಂಚಾಹುತಿಗಳಿಂದ) ಉಂಟಾಗಿದ್ದನೋ, ಮಡಿಯುತ್ತಲೆ ಅಲ್ಲಿಗೆ ಮರಳಿ ಹೋಗುವನು ಹಾಗೂ ಆ ದೇಹದಿಂದ ಹೊರಟ ಜ್ಯೋತಿರೂಪ ಪುರುಷನು ತನ್ನ ಕರ್ಮಕ್ಕನುಸರಿಸಿ ದೇವಲೋಕ ಅಥವಾ ಪಿತೃಲೋಕಕ್ಕೆ ಹೋಗುವನು. ಎಂದು ಜೈವಲಿಯು ಪ್ರತಿಪಾದಿಸುತ್ತಾನೆ.*

---

* ಇದನ್ನು ಶ್ರೀ ರಾನಡೆಯುವರ ಗ್ರಂಥವನ್ನವಲಂಬಿಸಿ ಬರೆದಿದೆ.

# ವಿಚಾರ ಮತ್ತು ಆಚಾರ.

( ಲೇ:—ರಾಧಾಕೃಷ್ಣ )

ಮನುಷ್ಯನು ಯಾವದಾದರೊಂದು ಕೃತಿಯನ್ನು ಮಾಡುವ ಪೂರ್ವದಲ್ಲಿ ತನ್ನ ಮನಸ್ಸಿನಿಂದ ಅದನ್ನು ಮೊದಲೇ ಮಾಡಿಬಿಟ್ಟಿರುತ್ತಾನೆ. ತಿರುಗಾಡುವದಕ್ಕೆ ಹೋಗುವ ಪೂರ್ವದಲ್ಲಿ ನಮ್ಮ ಮನಸ್ಸು ಎಲ್ಲಿ ಹೋಗಬೇಕೆಂದು ಗೊತ್ತು ಮಾಡುತ್ತದೆ ಅಲ್ಲಿಂದ ನಾವು ಸಂಕಲ್ಪವನ್ನು ಮಾಡಿ ಹೊರಗೆ ಹೊರಡುತ್ತೇವೆ. ವಿಚಾರಮಾಡಿದ್ದೆಲ್ಲವೂ ಪ್ರತಿಯೊಬ್ಬನ ಆಚಾರದಲ್ಲಿ ಕಂಡು ಬರುತ್ತದೆ. ಕಳವು ಮಾಡ ಬಂದವನ ಹೆಜ್ಜೆಯ ಲ್ಲಿಯೂ ಕೂಡ ಕಳವು ಹರಿದಾಡಹತ್ತಿರುತ್ತದೆಂಬದನ್ನೆಲ್ಲರೂ ಬಲ್ಲರು. ಆದ್ದರಿಂದ ಜಾಣ ರಿದ್ದವರು ಯಾರನ್ನಾದರೂ ಸುಧಾರಿಸಲೆತ್ನಿಸಿದರೆ ಜನರಲ್ಲಿ ಉತ್ತಮೋತ್ತಮವಾದ ವಿಚಾರಗಳನ್ನು ತುಂಬುತ್ತಾರೆ. ಸ್ಫೂರ್ತಿದಾಯಕವಾದ ವಿಚಾರಗಳು ಸಮಾಜದಲ್ಲಿ ಹರಡಹತ್ತಿದವೆಂದರೆ ಸ್ಫೂರ್ತಿದಾಯಕವಾಕವಾದ ಕಾರ್ಯಗಳು ಸಮಾಜದಲ್ಲಿ ಒದಗಿ ಸಮಾಜವು ಉನ್ನತಿಯ ಶಿಖರಕ್ಕೇರುತ್ತದೆಂಬದರಲ್ಲಿ ಏನೂ ಆಶ್ಚರ್ಯವಿಲ್ಲ.

ಸಮಾಜಕ್ಕೆ ಹಿತಕರವಾದ ಕಾರ್ಯಗಳಾಗಬೇಕಾದರೆ ವಿಚಾರಗಳನ್ನು ತಲೆ ಯಲ್ಲಿ ತುಂಬಿಕೊಂಡವರು ಸಮಾಜದ ಧುರೀಣರಾಗಿರಬೇಕೆಂದು ಹೇಳಿದ್ದಾಯಿತು. ಆದರೆ ಬರೇ ವಿಚಾರವಂತರಿಂದ ಏನೂ ಕಾರ್ಯವಾಗುವದಿಲ್ಲ. ವಿಚಾರವಂತರು ವಿಚಾ ರಿಗಳಾಗಿ–ನಿಶ್ಚಯಿಗಳಾಗಿ–ತಮ್ಮ ವಿಚಾರಗಳ ಪ್ರತಿನಿಧಿಗಳಾದ ಕೃತಿಗಳನ್ನು ಮಾಡ ಹತ್ತಿದರೆಂದರೇನೋ ಸಮಾಜವು ಕಣ್ದೆರೆಯುವದು. ವಿಚಾರದಂತೆ ಉಚ್ಚಾರವೂ, ಉಚ್ಚಾರದಂತೆ ಆಚಾರವೂ ಇರುವಂಥ ಒಬ್ಬ ಧುರೀಣನಿದ್ದರೂ ಅವನು ತನ್ನ ಸಮಾ ಜವನ್ನು ಉದ್ಧರಿಸುವ ಪ್ರಯತ್ನವನ್ನು ಮಾಡಿ ಯಶಸ್ವಿಯಾಗಬಹುದು. ಇಲ್ಲದಿದ್ದರೆ ಸರ್ವಜ್ಞನೆನ್ನುವಂತೆ:—

ವಚನದೊಳಗೆಲ್ಲರೂ ಶುಚಿವೀರ ಸಾಧುಗಳು ।
ಕುಚ ಹೇಮಶಸ್ತ್ರ ಸೋಂಕಲು ಲೋಕದೊಳ ।
ಗಚಲದವರಾರು ? ಸರ್ವಜ್ಞ ।

ನುಡಿಯೊಳಗೆ ಪಡಿಯಿಂದ ಅಳೆಯಲಿಕ್ಕೆಲ್ಲರೂ ವೀರರೇ ಇರುವರು. ಹೊತ್ತು ಬಂದಾಗ ತನ್ನ ವಿಚಾರಗಳ ಪಾತಿವ್ರತ್ಯವನ್ನು ಕಾಯುವವರು ಒಬ್ಬರೋ ಇಬ್ಬರೋ? ವಿಚಾರವು ನಿಶ್ಚಯವಾಗಿ ಆಚಾರದಲ್ಲಿಳಿದರೆ ಅದು ಸಕಲರಿಗೂ ಜೀವನಪ್ರದವಾಗು ವದು. ರಕ್ತದಿಂದ ಮಾಂಸವಾಗಿ, ಮಾಂಸದಿಂದ ವೀರ್ಯವಾಗುವದು. ಶುದ್ಧ ವೀರ್ಯ ವುಳ್ಳವನು ಜೀವನವನ್ನು ಹುಟ್ಟಿಸುವದಕ್ಕೆ ಸಮರ್ಥನಾಗುವಂತೆ ಸಾವಿರಾರು ಗ್ರಂಥ

ಗಳಲ್ಲಿಯು ವಿಚಾರಗಳನ್ನೋದಿ ಅವುಗಳನ್ನು ಜೀರ್ಣಿಸಿ ತಾನು ವೀರ್ಯವಂತನಾದನೆಂದರೆ ಆ ವೀರನು ತನ್ನಂಥ ಸಾವಿರಾರು ವೀರರನ್ನು ಸಜ್ಜುಗೊಳಿಸಲು ಸಮರ್ಥನಾಗುವನು. ಪಾಂಡವರೈದು ಮಂದಿ ಗುರುಗಳಲ್ಲಿ ಕಲಿಯುತ್ತಿದ್ದಾಗ ಗುರುಗಳು ಮೊದಲನೆಯ ದಿವಸ "सत्यंवद" ವೆಂಬ ಮೊದಲನೆಯ ಪಾಠವನ್ನು ಎಲ್ಲರಿಗೂ ಪಾಠ ಮಾಡಿಕೊಂಡು ಬರಲಿಕ್ಕೆ ಹೇಳಿದರು. ಎರಡನೆಯ ದಿವಸ ಧರ್ಮರಾಯನನ್ನುಳಿದು ಎಲ್ಲರೂ ಅಂದು ತೋರಿಸಿದರು. ಎಲ್ಲರೂ ಕೇಳಿದಕೂಡಲೇ ತಿಳಿಯಿತೆಂದರು. ಆದರೆ ಧರ್ಮರಾಯನು ಮಾತ್ರ ತನಗಿನ್ನೂ ತಿಳಿದಿಲ್ಲವೆಂದು ಗುರುಗಳಿಗೆ ತಿಳಿಸಿದನು. ಧರ್ಮರಾಯನ ಯೋಗ್ಯತೆಯು ಗುರುಗಳಿಗೆ ಗೊತ್ತಿದ್ದುದರಿಂದ ಅವರು ಅದನ್ನೇ ವಿಶದವಾಗಿ ಹೇಳಿದರು. ಧರ್ಮರಾಯನು ತಾನು ಮುನ್ನಾದಿನ ಮಾಡಿದ ಎಲ್ಲ ಕೃತಿಗಳನ್ನೂ ಅದರಲ್ಲಿ ತನ್ನ ಅಶಕ್ತತೆಯಿಂದಲೂ ಮನೋದೌರ್ಬಲ್ಯದಿಂದಲೂ ಕಂಡು ಬಂದ ದೋಷಗಳನ್ನೂ ವಿವರಿಸಿ, ತನ್ನ ಪ್ರತಿಯೊಂದು ವಿಚಾರದಲ್ಲಿಯೂ ಕೃತಿಯಲ್ಲಿಯೂ ಸತ್ಯವೆಂದು ತುಂಬಿ ತುಳುಕುವದೋ ಆದಿನವವೇ ಆ ಪಾಠವು ಸಂಪೂರ್ಣವಾಗುವದೆಂದು ಹೇಳಿದನು. ಗುರುಗಳಿಗೆ ಹಿಡಿಸಲಾರದಷ್ಟು ಆನಂದವಾಯಿತು. ಧರ್ಮರಾಯನಾದರೋ ತನ್ನ ಜೀವನದಲ್ಲಿ ಸತ್ಯವೊಂದನ್ನೇ ಧ್ಯೇಯವಾಗಿಟ್ಟುಕೊಂಡು ನಡೆದದ್ದರಿಂದ ಅವನ ಹೆಸರು ಸೂರ್ಯ ಚಂದ್ರರಿರುವತನಕ ಅಚ್ಚಳಿಯದೆ ಉಳಿಯುವದು.

ಬರೇ ವಿಚಾರವಂತರು ಎಷ್ಟು ಅಹಿತಕಾರಿಗಳೋ ಅಷ್ಟೇ ಬರೇ ಆಚಾರವಂತರೂ ಆಗಿರುವರು. ಅಧ್ಯಾತ್ಮವು ನೀತಿಶಾಸ್ತ್ರದ ಶಾಸ್ತ್ರವಾಗಿರುವಂತೆ, ವಿಚಾರವು ಆಚಾರದ ಶಾಸ್ತ್ರವಾಗಿರುವದು. ಅಂಥಾನು ಕರಣದಿಂದ ಎಷ್ಟೋ ಜನರಿಗೆ ಬಡಿಗೆಗಳನ್ನು ಗರಗರವಾಗಿ ತಿರುಗಿಸಲಿಕ್ಕೆ ಬರುತ್ತದೆ. ಆದರೆ ಇಂಥ ವೇಳೆಗೆ ಇಂಥ ಬಡಿಗೆಯನ್ನು ಇದೇ ಪ್ರಕಾರವಾಗಿ ಹೀಗೇಯೇ ತಲೆಯ ಮೇಲಿಂದಲೇ ಏಕೆ ತಿರುಗಿಸಬೇಕೆಂದರೆ ಅವರ ಮೋರೆಯು ನಾಚಿ ನಿಸ್ತೇಜಸಾಗುವದು. ವಿಚಾರದ ಅಭಾವ; ಬರೇ ಆಚಾರದಲ್ಲಿ ಆನಂದವುಂಟಾಗುವದು. ವಿಚಾರಯುಕ್ತವಾದ ಆಚಾರದಿಂದ ಆನಂದದ ಝರಿಯು ಮನಸ್ಸಿನಲ್ಲಿ ಯಾವಾಗಲೂ ಹರಿಯಹತ್ತುವದು. ಮೂಗು ಹಿಡಿದು 'प्राणायामे विनियोगः' ಅಂದು ಬಿಡುವರು ಲಕ್ಷಾವಧಿ ಜನರು, ಅವರ ಅಭಿಪ್ರಾಯವು 'प्राणायामे विनियोगः' ಎಂದ ಕೂಡಲೇ ಪ್ರಾಣಾಯಾಮವು ತನ್ನಿಂದ ತಾನೇ ಮಂತ್ರಸಾಮರ್ಥ್ಯದಿಂದ ಆಗಿ ಹೋಗುವದೆಂದು. ಪಾಪ ! ಅವರ ಶ್ರದ್ಧೆ ಆದ್ದರಿಂದ ಈ ಮೂಢಶ್ರದ್ಧೆಯಿಂದ ಪ್ರಾಣಾಯಾಮದಿಂದಾಗುವ ಪರಿಣಾಮದ ಲಕ್ಷಣಗಳು ಅವರ ಮೋರೆಯ ಮೇಲೆ ಒಡಮೂಡುವದಿಲ್ಲ. ಶ್ರದ್ಧೆಯು ಅಂಥವಿದ್ದರೂ ದೇವರು ಅಂಥನಲ್ಲದ ಕಾರಣ ಅಂಥ ಶ್ರದ್ಧೆಯವರಿಗೆ ಅಂಥ ಪರಿಣಾಮವೇ ಹಾದೀ ನೋಡುತ್ತಿರುವದು. ಆಚಾರಪ್ರಧಾನ ಬುದ್ಧಿಯಿಂದ ಮಾಡಿದ ಕಾರ್ಯಗಳ ಕೊನೆಯು ಮೂರ್ಖತನದಲ್ಲಿಯೇ ಆಗುವದು. ಇವತ್ತು ಗಾಂಧಿಯವರು ಖಾದಿಯನ್ನು ಧರಿಸಿರೆಂದು ಹೇಳುತ್ತಾರೆ– ಹಾಕಿರಿ

ಖಾದಿ. ನಾಳೆ ಕೇಳಕರರು ಖಾದಿಯನ್ನು ಸುಡಿರೆಂದು ಅನ್ನುತ್ತಾರೆ–ಸುಟ್ಟುಬಿಡಿರಿ. ತಿಳಿ ಯದೆ ಖಾದಿ ಧರಿಸುವವರಿಗೆ ಖಾದಿ ಹುಟ್ಟಿದ್ದರ ವೃದ್ಧಿಯಿಲ್ಲ; ಖಾದಿಯು ಸತ್ತದ್ದರ ಸೂತಕವಿಲ್ಲ. ಇದರಂತೆಯೇ ಎಲ್ಲ ಕೃತಿಗಳೂ ಆನಂದರಹಿತವಾಗುವವು.

ನಮ್ಮ ಸಮಾಜವು ಅವನತಿಯನ್ನು ಹೊಂದುವದಕ್ಕೆ, ಆಚಾರರಹಿತವಾದ ವಿಚಾರವೂ ವಿಚಾರರಹಿತವಾದ ಆಚಾರಗಳೂ ಕಾರಣವಾಗಿರುತ್ತವೆ. ಒಬ್ಬ ಗ್ರಂಥಕಾರನಂತೆ "We talk like philosophers and act like fools " "ನಾವು ವೇದಾಂತಿಗಳಂತೆ ಮಾತಾಡುತ್ತೇವೆ; ಮೂರ್ಖರಂತೆ ನಡೆಯುತ್ತೇವೆ "ಬುದೇ ನಿಜ. ನಮ್ಮ ವರ್ತಮಾನ ಪತ್ರಕಾರರು, ಸಮಾಜಸೇವಕರು, ರಾಷ್ಟ್ರಧುರೀಣರು, ಧರ್ಮದ ಅಧಿದೇವತೆಗಳು–ಎಲ್ಲರೂ ದಂಭಾಚಾರಗಳಿಂದ ತುಂಬಿರುವದರಿಂದಲೇ ಈ ನಮ್ಮ ಗತಿಯಾಗಿದೆ. ವಿಶ್ವಾಸದಿಂದೊಂದು ಆಭರಣವನ್ನು ತೂಕಕ್ಕೆ ಸರಿಯಾಗಿ–ಪ್ರಾಮಾಣಿಕತನದಿಂದ–ಮಾಡಿಕೊಡುವ ಒಬ್ಬ ಅಕ್ಕಸಾಲಿಗನನ್ನು ನಮ್ಮ ಸಮಾಜದಲ್ಲಿ ತೋರಿಸಬಹುದೇ ? ಅಕ್ಕನ ಬಂಗಾರವಾದರೂ ಅಕ್ಕಸಾಲಿಗ ಬಿಡನಂತೆ ! ಸೊಂಪಾಗಿ ಹೊಲಿಗೆಯ ರೊಕ್ಕ ಸಿಕ್ಕರೂ ಶಿಂಪಿಗನು ಅರಿವೆಯನ್ನು ಕದಿಯದಿರುವನೇ ? ನಮ್ಮ ಅಂಗಡಿಕಾರರೋ ಮೋರೆಯನ್ನು ನೋಡಿ ಮಣಿಹಾಕುವವರೇ ಎಲ್ಲರೂ! ನಮ್ಮ ಧುರೀಣರು ಖಾದಿಯನ್ನೇ ಹಾಕಿರೆಂದು ಸಭೆಯಲ್ಲಿ ಗಂಟಲು ಹರಿದುಕೊಂಡು ತಮ್ಮ ಹೆಂಡತಿಗೆ ಮೈಸೂರು ಪತ್ತಲವನ್ನು ಮನೆಗೆ ಹೋಗು ಹೋಗುತ್ತ ಕೊಂಡುಕೊಳ್ಳಲಿಕ್ಕೆ ಸಿದ್ಧರೇ ! ಸತ್ಯ, ನೀತಿ, ದಾನ, ಧರ್ಮ, ಬ್ರಹ್ಮಚರ್ಯ, ಆರ್ಯಸಂಸ್ಕೃತಿ—ಮುಂತಾದವುಗಳ ಮೇಲೆ ಕೀರ್ತನಗಳನ್ನೂ ಪ್ರವಚನಗಳನ್ನೂ ಕೊಡುವಂಥ ದಾಂಭಿಕರ ಮನೆಯಲ್ಲಿಯೂ ಅವರ ಸ್ವಂತ ಕೃತಿಗಳಲ್ಲಿಯೂ ಇವುಗಳ ಚಂಡಿನ ಮೇಲೆ ಕೈ ! ಸಮಾಜದ ಹಿತಚಿಂತಕರಿಗೆ ಸಮಾಜದಲ್ಲಿ–ಹೆಸರಿಗೆ ತಕ್ಕಂಥ ಸಮಾಜದಲ್ಲಿ–ಮಾನವಿರಬೇಕಾದದ್ದು ವಿಹಿತವು. ಆದರೆ ಇಲ್ಲಿಯೂ ದಂಭಾಚಾರವೇ ಉರಿದೆದ್ದು ಹೋಗಿದೆ. ಸರಕಾರದಿಂದ ದೊಡ್ಡ ಪಗಾರವು ಸಿಗುತ್ತಿರುವಂಥ ರಾವಸಾಹೇಬ ರಾವಬಹಾದ್ದೂರನಿಗೆ ವಾಙ್ಮಯ ಮಂಡಲದ ಸೂತ್ರಗಳನ್ನೇಕೆ ಒಪ್ಪಿಸಬೇಕು ? ಸಾಹಿತ್ಯ ಸಭೆಗಳಲ್ಲಿಯೂ ಕೂಡ ವಕೀಲರಿಗೂ ದುಡ್ಡುಳ್ಳವರಿಗೂ ಮೊದಲನೆಯ ಖುರ್ಚಿ. ಗ್ರಂಥಕಾರನು ಎಲ್ಲಿಯೋ ಮೂಲೆಯಲ್ಲಿ !

ಸಾರಾಂಶ, ಉತ್ತಮವಾದ ವಿಚಾರಗಳನ್ನು ಆಚರಣೆಯಲ್ಲಿ ತರುವಂಥ ತರುಣ ಸಮಾಜಸೇವಕರಿರದ್ದರಿಂದ ನಮ್ಮ ಸ್ಥಿತಿಯು ಅತಿ ಹೀನತೆಯನ್ನು ಹೊಂದಿದೆ. ಪ್ರವಚನಗಳು ಸಾಕಾದವು. ಆಚರಣೆಯು ಬೇಕಿದೆ. ವಾಙ್ಮಯದ ರುಚಿಯು ನಿಮಗಿದೆಯೆ? ನೀವು ಯಾವ ಪುಸ್ತಕಗಳನ್ನು ಕೊಂಡುಕೊಂಡಿರುವಿರಿ? ನಿಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಏನು ವಿಚಾರಮಾಡಿರುವಿರಿ ? ದೇಶಕ್ಕೆ ಸ್ವಾತಂತ್ರ್ಯಬೇಕು ? ದೇಶದ ಸ್ವಾತಂತ್ರ್ಯಕ್ಕಾಗಿ ಹೆಣಗುವ ವ್ಯಕ್ತಿಗಾಗಲೀ ಸಂಸ್ಥೆಗಳಿಗಾಗಲೀ ಯಾವ ರೀತಿಯಿಂದ ಸಹಾಯ ಮಾಡಿ

ರುವಿರಿ ? ಕನ್ನಡ ಸಂಗೀತದಲ್ಲಿ ನಿಮಗೆ ರುಚಿಯುಂಟೇ ? ಕನ್ನಡ ನಾಟಕಕಲಾಭಿವೃದ್ಧಿಯು ಆಗಬೇಕೆಂದು ನಿಮ್ಮ ಮನೀಷೆಯೇ ? ಗುಬ್ಬಿ, ಶಿರಹಟ್ಟಿ, ಗರೂಡ ಮಂಡಳಿಗಳ ನಾಟಕಗಳಿಗೆ ಎಷ್ಟು ರೂಪಾಯಿಗಳನ್ನು ಕೊಟ್ಟಿರುವಿರಿ ? " ರಂಗಭೂಮಿ " ಯ ಚಂದಾದಾರರ ಯಾದಿಯಲ್ಲಿ ನಿಮ್ಮ ಹೆಸರಿರುವದೇ ? ಇದೇ ಮಾತು ಧರ್ಮದ್ದು. ಇದೇ ಮಾತು ಎಲ್ಲರದು. ಯಾವದೋ ಒಂದು ಸಣ್ಣ ಶ್ರದ್ಧೆಯನ್ನು ಮನಸ್ಸಿನಲ್ಲಿ ದೃಢಪಡಿಸಿ ಅದಕ್ಕಾಗಿ ಏನಾದರೊಂದು ಪ್ರತ್ಯಕ್ಷ ಕಾರ್ಯವನ್ನು ಮಾಡುವದೇ ನಮ್ಮ ಕರ್ತವ್ಯವಾಗಿಲ್ಲವೇ ?

"ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ ।
ಹಿಡಿದಿದ್ದ ಧರ್ಮ ಹೊಡಮರಳಿ ಕಚ್ಚುವ ।
ಹೆಡೆನಾಗ ನೋಡ! ಸರ್ವಜ್ಞ "

ಎನ್ನುವ ಸರ್ವಜ್ಞನ ಹೊನ್ನುಡಿಯನ್ನು ನಾವೆಂದು ನೆನೆಯುವೆವು ?

---

# "ಬಾಲಕನ ಬಯಕೆ"

( ರಾಧಾಕೃಷ್ಣ )

॥ ಚೌಪದಿ ॥

ಹಚ್ಚನ್ನ ಕರ್ನಾಟಕದ ಒಡಲಿನೊಳಗೆ ।
ಪೊಚ್ಚ ಪೊಸತರದ ಮಾವಿನ ತೋಪಿನೊಳಗೆ ॥
ಸ್ವಚ್ಛಸರದಲಿ ಒಂದು ಕಮಲವಿರಬೇಕು ।
ಕಮಲದಲಿ ಕುಳಿತು ನಾ ಕೆಲೆಯುತಿರಬೇಕು ॥೧॥

ಕರ್ನಾಟಕದ ಚೆಲ್ವ ಪೂದೋಟದೊಳಗೆ ।
ಸ್ವರ್ಣಕುವರಿಯು ಪಾಡುತಿರುವ ಸ್ಥಳದೊಳಗೆ ॥
ಕರ್ಣಗಳ ತಣಿಸುತಿಹ ವೀಣೆಯಿರಬೇಕು ।
ತಂತಿಯೊಳು ಕುಳಿತು ನಾ ಕುಣಿಯುತಿರಬೇಕು ॥೨॥

ಮುಂಜಾವಿನಲಿ ಜನಿಸಿ ಕರ್ನಾಟದೊಳಗೆ ।
ಬಂಜೆತನವನು ತೊಲಗಿ ಅರೆನಿಮಿಷದೊಳಗೆ ॥
ಸಂಜೆಯಲಿ ಹೊರಹೊರಟು ಹಾಡುತಿರಬೇಕು ।
ಗಗನದಲಿ ನಸುನಗುತ ಮಿನುಗುತಿರಬೇಕು ॥೩॥

ಕನ್ನಡದ ನಾಡಿನಲಿ ಹೆತ್ತು ರಕ್ಷಿಸುವ ।
ರನ್ನ ದೊಡವೆಗಳಿಂದ ಜಗವ ಮೋಹಿಸುವ ॥
ಕನ್ನೆಯಲಿ ಜನಿಸಿ ನಾನಾಡುತಿರಬೇಕು ।
ಮುಗಿಲ ಚಿಕ್ಕೆಯ ಕಂಡು ನಗುತಲಿರಬೇಕು ॥ ೪ ॥
ಸೃಷ್ಟಿಯಲ್ಲಿಯ ಸೊಬಗನುಂಡು ಕುಣಿದಾಡಿ ।
ಕಷ್ಟವಿಲ್ಲದೆ ಪದವ ಕಟ್ಟಿ ನಗೆಗೂಡಿ ॥
ಶಿಷ್ಟರನು ರಂಜಿಸುವ ಕವಿಗಳಿರಬೇಕು ।
ಕನ್ನಡದ ಕವಿಯ ತುಟಿಯೊಳಗೊರಗಬೇಕು ॥ ೫ ॥
ಕನ್ನಡದ ನಾಡಿನಲಿ ತೇಜದಿಂ ಮೆರೆವ ।
ಕನ್ನಡದ ಸೇವೆಯಲಿ ಸವೆಸವೆದು ಮಡಿವ ॥
ಕನ್ನಡವ ಸಾರುತಿಹ ವೀರರಿರಬೇಕು ।
ವೀರರಂಘ್ರಿಯ ನಾನು ನುತಿಸುತಿರಬೇಕು ॥ ೬ ॥

---

## ಕಬೀರದಾಸನ ವಚನಗಳು.

ತೊರೆಯೂ ತೆರೆಯೂ ಒಂದೇ ಲಹರಿಯು, ತೊರೆತೆರೆಗಳ ಭೇದವೆಲ್ಲಿ? ತೆರೆಯೆದ್ದರೂ ನೀರೆ; ಇಳಿದರೂ ನೀರೆ. ಭೇದವೆಂತೆಂಬವನ್ನು ಹೇಳಬಲ್ಲೆಯಾ? ತೆರೆಯೆಂದು ಕರೆದ ಮಾತ್ರಕ್ಕೆ ಅದು ನೀರಾಗಲಾರದೇ?

ಪರಮಾತ್ಮನಲ್ಲಿ ಎಲ್ಲ ಲೋಕಗಳು ಅಕ್ಷಮಣಿಯಂತೆ ಪೋಣಿಸಲ್ಪಟ್ಟಿರುವವು. ಆ ಅಕ್ಷಮಾಲೆಯಲ್ಲಿ ಜ್ಞಾನದೃಷ್ಟಿಯಿಂದೀಕ್ಷಿಸು.

* * *

ನೀರಿನಲ್ಲಿಯ ಮೀನವು, ನೀರಡಿಸಿದೆ ಎಂಬುದನ್ನು ಕೇಳಲು, ನಗೆಬರುವದು ಸತ್ಯವು. ನಿನ್ನಲ್ಲಿಯೇ ಇರುವದೆಂಬುದನ್ನು ತಿಳಿಯದೆ, ಗುಡ್ಡಬೆಟ್ಟಗಳನ್ನು ವಿಚಾರಹೀನನಾಗಿ ತಿರುಗುವಿ.

ಸತ್ಯವು ಇಲ್ಲಿಯೇ ಇರುವದು; ಕಾಶಿಗೆ, ಮಧುರೆಗೆ, ಬೇಕಾದಲ್ಲಿ ಹೋಗು; ನೀನು ನಿನ್ನಾತ್ಮನನ್ನು ಕಾಣದಿದ್ದರೆ ವಿಶ್ವವೆಲ್ಲ ನಿನಗೆ ಸುಳ್ಳೇಸುಳ್ಳು.

* * *

ಪ್ರೇಮಪಥವು ಸೂಕ್ಷ್ಮವಾದುದು, ಅಲ್ಲಿ ಪ್ರಶ್ನಕೇಳುವದೂ ಇಲ್ಲ, ಕೇಳಬಾರದು ಹೀಗೂ ಇಲ್ಲ.

ಆತನ ಅಡಿದಾವರೆಗಳಲ್ಲಿ ಮನುಷ್ಯನು ಮೈಮರೆವನು. ಅಲ್ಲಿ ಆತನು, ದರ್ಶನಾನಂದದಲ್ಲಿ ಲೀನನಾಗಿಹನು. ಆತನು ಮೀನಿನಂತೆ ಪ್ರೇಮಸಾಗರದಲ್ಲಿ ಮುಳುಗಿರುವನು. ಪ್ರಭುವಿನ ಸೇವೆಗಾಗಿ, ಆತನು ತನ್ನ ಪ್ರಾಣವನ್ನರ್ಪಿಸಲು, ಹಿಂದು ಮುಂದು ನೋಡುವದಿಲ್ಲ. ಕಬೀರನು ಇಂಥ ಪ್ರೇಮರಹಸ್ಯವನ್ನು ಪ್ರಕಟ ಮಾಡುವನು.

—ಸೋಮಾನುಜ

---

### ಸಾಂಗ್ರ ಸಂಗೀತ.

# ಸಾಯೋ ಆಟ.

ಒಂದು ಹುಚ್ಚಾಟ

ನಾಂದೀ

(ಸೂತ್ರಧಾರನು ಪ್ರವೇಶಿಸಿ)

ದ್ವಿಪದಿ.

ಸತ್ತವರು ಕಡೆತನಕ ಸುಖವಾಗಿ ಇರಲಿ. ।
ಸುಖವಾಗಿ ಸತ್ತವರು ಕಡೆತನಕ ಇರಲಿ ॥
ಕಡೆತನಕ ಸತ್ತವರು ಇರಲಿ ಸುಖವಾಗಿ ।
ಸತ್ತವರು ಸತ್ತವರು ಇರಲಿ ಸುಖವಾಗಿ ॥
ಸತ್ತವರು ಎಂದಿಗೂ ಸಾಯದಿರಲಿ ।
ಯಮನೇ ರುದ್ರನೇ ಸಾಯದಿರಲಿ ।
ಸತ್ತವರು ಸಾಯದಿರಲಿ ॥ ೧ ॥

ಮೃತ್ಯುದೇವತೆಯ ಪ್ರಾರ್ಥನೆಯು ಇಷ್ಟೇ ಸಾಕು. ಇಷ್ಟೇ ಪ್ರಾರ್ಥನೆಯಿಂದ ದೇವರು ಪ್ರತ್ಯಕ್ಷನೇ ಆದರೆ ಎಂಥೆಂಥ ಮರ್ತ್ಯರೂ ಕೂಡ ಸಾಯಲಾರರು. ಅಂದ ಮೇಲೆ ನಾಟಕದೊಳಗೆ ಸಾಯುವವರ ಪಾಡೇನು! ನಿರ್ಭಯವಾಗಿ ಈ ಆಟವನ್ನು ಆಡಲು ಏನೇನೂ ಅಡ್ಡಿ ತೋರುವದಿಲ್ಲ. ಸಭಿಕರೇ, ನಾನು ನಮ್ಮ ಆಟದಾರಂಭದಲ್ಲಿ ನಿಮಗೆ ಎರಡೂ ಕೈಜೋಡಿಸಿ ಹೇಳಿಕೊಳ್ಳುವದೇನಂದರೆ:—ನಮ್ಮ ಆಟ ಸಾಯೋ ಸಾಗ್ರ ಸಂಗೀತ, ಆಟ. ಇದರ ಹೆಸರೇ ಸಾಯೋಆಟ. ನಿಮ್ಮಂಥ ಕಲಿತ ಪಂಡಿತರು ಇಂಗ್ರೇಜಿಯೊಳಗೆ ಯಾತಕ್ಕ Tragedy Tragedy ಅಂತಂತೀರೊ ಅದೇ ಇದು, ಸಾಯೋಆಟ. ನಾಟಕದ ಅಂತ ನಾಯಕನ ಅಂತ ಅಂತೂ ಇಂತೂ ಅಂತಕ್ಕ ಅಂತ ಕೂಡಿ ನಿಮ್ಮಂತವರಿಗೆ ಆನಂದಾದರ ಸಾಕು. ಈ ಮೊದಲೇ ಪ್ರಸಿದ್ಧಪಡಿಸಿದಂತೆ ಈ ನಾಟಕದಲ್ಲಿ ಮೂರು ಹೆಣಾ ಬೀಳತಾವ. ಅಷ್ಟರಲ್ಲೇ ತಾವೆಲ್ಲರೂ ಸಂತೋಷಪಡ ಬೇಕು. ಇಷ್ಟೇ ನಮ್ಮ ಬಿನ್ನಹ. ಈ ಟ್ರಾಜ್ಯಡೀ ಮುಂದ ಶೆಕ್ಸಪಿಯರನ ಟ್ರಾಜ್ಯಡೀ ಕೂಡ ಝುಕ್ಕಿಸಿ ಹೋತು. ನಾವು ನಮ್ಮ ಆಟ ನಾವೇ ಹೊಗಳಿಕೊಂಬೋದು ಯೋಗ್ಯ ಅಲ್ಲ. ಪೂರ್ವದ ಸೂತ್ರದಾರರ ಪದ್ಧತಿಗೆ ಅನುಸರಿಸಿ ಹೊಗಳಿಕೊಂಡೇವೇ ಹೊರ್ತು ಹೊಸದಾಗಿ ಏನೂ ಮಾಡಿಲ್ಲ. ತಪ್ಪೂ ದೋಷ ಏನಾದರೂ ಇದ್ದರೆ ನಮ್ಮ ಪ್ರಾಚೀ ನರ ತಲೆಯು ಮೇಲೆ ಹೊರಿಸಬೇಕು. ನಾವು ಅರ್ವಾಚೀನರು; ಆ ಮಯಾರ್ದೆಗೆ ತಕ್ಕ ವರಲ್ಲ ಎಂದು ನಾವೇ ಒಪ್ಪಿಕೊಳ್ಳುತ್ತೇವೆ.

ಮಿತ್ರ:— ಏನಪ್ಪಾ; ಸೂತ್ರಧಾರಾ ಎಂದು ಸಡಿಲುಬಿಟ್ಟರೆ, ಉದ್ದುದ್ದ ಮಾತಾಡುತ್ತ ಇಲ್ಲಿಯೇ ನಿಂತುಬಿಟ್ಟೆಯಲ್ಲ. ಸಾಯಲಾಗಿರುವ ಕಳ್ಳನ ಪಾತ್ರವಹಿಸಿದವನು ಒಂದುಪದಾ ಹೇಳಿ ಪ್ರಾಣಾಬಿಡಬೇಕು ಎಂಡು ಬಿದ್ದುಕೊಂಡಿದ್ದಾನೆ. ಒಳಗೆ ಬಾ! ಆಟ ಆರಂಭವಾಗಲಿ.

ಸೂ:— ನಾಟಕದಲ್ಲಿ ಸಾಯುವವರಿಗೂ ಎಷ್ಟು ಆಶೆ ನೋಡಿರಿ! ಪದಾಹೇಳಿ ಸಾಯಬೇಕೆನ್ನುವನು. ಇದ್ದ ಪ್ರಾಣ ಕೂಡ ಪದಾ ಹೇಳುವ ಆಯಾಸದಿಂದ ಹೋಗಿಬಿಡಬಹುದು. ಮಿತ್ರಾ; ಸೂತ್ರಧಾರರು ಹೀಗೆ ಹೇಳಿದ್ದಾರೆ ಎಂದು ತಿಳಿಸು. ಸಾಯುವ ಕಾಲಕ್ಕೆ ಸುಮ್ಮನೇ ಪ್ರಾಣ ಬಿಡಬೇಕಲ್ಲದೇ, ಪ್ರಾಣಸಂಕಟದಲ್ಲಿ ಹಾಡಿ ಪ್ರೇಕ್ಷಕರಿಗೆ ತ್ರಾಸ ಕೊಡುವದು ಕಳ್ಳರಷ್ಟು ಸಜ್ಜನರಿಗೂ ಯೋಗ್ಯವಲ್ಲ. ಇಷ್ಟೇ ಅಲ್ಲದೆ, ಈ ನಾಟಕದ ಹೆಸರಿಗೆ ತಕ್ಕಂತೆ ಅಗ್ರದಲ್ಲಿಯೇ ಒಂದು ಹಾಡನ್ನು ಹಾಡಿ ಬಿಟ್ಟಿರುವೆನು. ಈಗಾಗಲೇ ಸಾಗ್ರಸಂಗೀತವಾಗಿ ಬಿಟ್ಟಿದೆ. 'ಸಾಯೋ ಆಟ' ಆಡುವದಷ್ಟೇ ಉಳಿದಿದೆ.

ಗೆಳೆಯ:—ಅಪ್ಪಾ ಸೂತ್ರಧಾರ! ಕಳ್ಳನ ಹೆಂಡತಿಯು ತಾನು ಯಾವಾಗ್ಗೆ ಅಳಬೇಕು ಎಂದು ಕೇಳುತ್ತಾಳೆ.

ಸೂತ್ರ: —ನೋಡಿದಿರಾ ಸಭಿಕರೇ; ಇಂಥ ಪಾತ್ರಗಳನ್ನು ಕಟ್ಟಿಕೊಂಡು ನಾವೇನು ಅಳಬೇಕು? ಗೆಳೆಯಾ; ಆ ಕಳ್ಳನ ಹೆಂಡತಿಗೆ ಕೇಳು—ನೋಡುವವರಿಲ್ಲದಾಗ ಪರದೆಯ ಹಿಂದೆ ಅತ್ತರೆ ಫಲವೇನು? ಮತ್ತೂ ಆ ಕಳ್ಳನಿಗೆ ಕೇಳು ಹೀಗೆ ಕಳ್ಳತನದಿಂದ ಸತ್ತರೂ ಫಲವೇನು? ಎಂದು. ನಾಲ್ಕು ಜನರಿದುರಿಗೆ ಸತ್ತರೂ ಚಂದ ಅತ್ತರೂ ಚಂದ.

ಮಿತ್ರ:—ಅಯ್ಯೋ ಇರಲಿ ನಡಿಯಪ್ಪಾ! ಸೂತ್ರಧಾರನೇ ಇಷ್ಟೊತ್ತು ಮಾತಾಡಿದರೆ ಪಾತ್ರದವರು ಎಲ್ಲಿಯಾದರೂ ಸಾಯೋ ಆಟ!

ಗೆಳೆ:—ಅದನ್ನೇ ನಾವು ಆಡಿ ತೋರಿಸಬೇಕಾಗಿದೆಯಲ್ಲವೇ!

ಸೂತ್ರ:—ಹಾಗಲ್ಲ, ನಾವು ಮಾಡಿ ತೋರಿಸಬೇಕಾಗಿದೆ. ಆಡಿ ತೋರಿಸಬೇಕಾಗಿಲ್ಲ.

ಆಡದೇ ಮಾಡುವನು ರೂಢಿಯೊಳಗುತ್ತಮನು ।
ಆಡಿ ಮಾಡುವನು ಮಧ್ಯಮನು ತಾ— ।
ನಾಡಿ ಮಾಡಿದವ ಸರ್ವಜ್ಞ ॥
ಲಾಡಿ ಮಾಡಿದವ ನಾಡಿ ಮಾಡಿದವ
ಸೂತ್ರ ಮಾಡಿದವ ಧಾರ ಮಾಡಿದವ ಸರ್ವಜ್ಞಾ ॥

ಅಂತೆಯೇ ಮಿತ್ರಾ—ಗೆಳೆಯಾ! ನೀವು ಸೂತ್ರಧಾರನು ಆಡಿದಂತೆ ಮಾಡಲಿಕ್ಕೇಬೇಕು. ಯಾಕಂದರೆ ಅವನೇ ಸರ್ವಜ್ಞನು. ಅಂತೆಯೇ ನೀವು ಮುಂದೆ ಹೋಗಿ ಆ ಕಳ್ಳನಿಗೆ ಸುಮ್ಮನೆ ಸಾಯಲು ಹೇಳಿರಿ—ಆ ರಂಡೆಮುಂಡಿಗೆ ಮುಂದೆ ನೋಡಿ ಅಳಲು ಹೇಳಿರಿ ಇಲ್ಲದಿದ್ದರೆ ಗತಿಯು ಒಳ್ಳೇದಾಗಲಿಕ್ಕಿಲ್ಲ, ಹೋಗಿರಿ ನಡಿಯಿರಿ.

ಮಿ—ಗೆ :—ಅಪ್ಪಣೆ.

( ಅಳುವಧ್ವನಿ )

ಸೂ :—ಅಹಹಾ ಎಂತಹ ಚಿತ್ತಾಕರ್ಷಕವಾದ ಶೋಕವಿದು. ಅದನ್ನು ಕೇಳಿ ನನ್ನ ಸ್ಥಿತಿ ಹೀಗಾಯಿತು, ಅಂದ ಮೇಲೆ ನೋಡಿದ ಮೇಲಂತೂ ನಿಮ್ಮ ಸ್ಥಿತಿ ಏನಾಗ ಬಹುದು. ಕಣ್ಣಿಂದ ಸುರಿಯುವ ಶೋಕರಸದ ರುಚಿಗಿಂತ ರುಚಿಕಟ್ಟಾದದ್ದು ಬೇರೆ ಏನಾದರೂ ಉಂಟೇ? ಅದನ್ನು ಕುಡಿದವರೆ ಬಲ್ಲರು ಆದರೂ ಪಂಡಿತರಾದ ಪ್ರೇಕ್ಷಕರೇ-ಅಲ್ಲ, ಪ್ರೇಕ್ಷಕರಾದ ಪಂಡಿತರೇ—

ಹೆರವರ ದುಃಖವನ್ನು ಕಂಡು ನಗಬೇಡಿರಿ ನೀವ್ ॥

ನಾಂದೀ ಸಮಾಪ್ತ.

( ಕಳ್ಳನು ಸತ್ತುಬಿದ್ದಿದ್ದಾನೆ ಅವನ ಹೆಂಡತಿ ಅಳುತ್ತಿದ್ದಾಳೆ.)

ಹೆಂ: —ಅಯ್ಯೋ ಮಹಾರಾಯಾ ಎಂಥ ತಂಪು ಹೊತ್ತಿನಲ್ಲಿ ತಣ್ಣಗಾದ್ಧಿ! ನೀನು ಸತ್ತರೂ ಯಾರೂ ಬರಲೊಲ್ಲರು. ನಾನು ಅತ್ತರೂ ಯಾರೂ ಬರಲೊಲ್ಲರು. ಈ ಮನೆಯೊಳಗಿನವರೂ ಸತ್ತಿರುವರೇ ! ನನ್ನ ಪಾಲಿಗೆ ಜಗತ್ತೆಲ್ಲಾ ಸತ್ತಂತೇ ಸೈ. ಅಡವಿ ಯಲ್ಲಿ ಅಳುವದು ವ್ಯರ್ಥವೆಂದು ಹಿರಿಯರು ಹೇಳುವದೇನೂ ಸುಳ್ಳಲ್ಲ. ಜನವಿಲ್ಲದ ಮೇಲೆ ಇದೂ ಅಡವಿಯೇ. ನಾಲ್ಕು ಜನರು ಕೇಳುವವರಿದ್ದರೆ ಅಳುವವರಿಗೂ ಹುರುಪು ಬರುವದು. ಹುರುಪು ಇಲ್ಲದೇ ನನ್ನಂಥಾ ಬಲವಿಲ್ಲದ ಹೆಣ್ಣು ಮಗಳು ಎಷ್ಟೊತ್ತು ಅಳಬಹುದು. ಅಯ್ಯೋ, ಸಾವೆಂದರೆ ಅದೊಂದು ನಿದ್ರೆಯೆಂದೇ ಹೇಳುವರಲ್ಲಾ. ನೀನು ನಿಜವಾಗಿ ನಿದ್ರೆಯನ್ನೇ ಮಾಡುತ್ತಿರಬಹುದೇ ! ಮಹಾರಾಯಾ ಬೆಳಗಾಗುವ ಪೂರ್ವದ ಲ್ಲಿ ನನ್ನೊಬ್ಬಳನ್ನೇ ಬಿಟ್ಟು ಸತ್ತುಹೋದೆಯಾ ! ಇನ್ನೊಂದೆರಡು ಗಳಿಗೆ ತಡ ಮಾಡಿ ಸತ್ತಿದ್ದರೆ ನಿನ್ನದೇನು ಪ್ರಾಣಹೋಗುತ್ತಿತ್ತೇ ?—ಅಯ್ಯೋ ಸತ್ತವರ ಮುಂದೆ ಅತ್ತರಾ ದರೂ ಆಗುವದೇನು ? ಇನ್ನು ಯಾರದಾದರೂ ಸುಳಿವು ಹತ್ತುವವರೆಗೆ ಸುಮ್ಮನಿರು ವದೇ ಲೇಸು—(ಅತ್ತಿತ್ತ ನೋಡಿ) ಇಗೋ ಈ ಮನೆಯುವರು ಯಾರೋ ಪುಣ್ಯವಂತರು ಹೊರಗೆ ಬರುತ್ತಿದ್ದಾರೆ. ಅವರ ಕಿವಿಗೆ ನಮ್ಮ ಶೋಕವಷ್ಟು ಬೀಳಲಿ ( ಧ್ವನಿ ತೆಗೆದು ಅಳುತ್ತಾಳೆ ).

ಗೃಹಸ್ಥ: —ಇದೇನು ಹೊತ್ತಿಗೆ ಬಂದೆನಪ್ಪಾ ಮುಂಜಾನೆ ! ಅಪಶಕುನ ಮಾಡ ಲಿಕ್ಕೇ ಅಳುತ್ತಿರುವಳೋ ಏನೋ ?

ಹೆಂ :—ಅಯ್ಯೋ ನನ್ನ ಗಂಡನನ್ನು ಕಳಕೊಂಡೆನಲ್ಲಾ ! ತಂದೇ ತಿರುಗಿ ತಂದು ಕೊಡುವಿರಾ.

ಗೃ: —ಏನವ್ವಾ ! ಅವನೆಲ್ಲಿ ಹೋಗಿರುವನು?

ಹೆಂ:—ಅಪ್ಪಾ! ಅದೇನೂ ನನಗೆ ತಿಳಿಯದು. ಈ ಜಗತ್ತನ್ನು ಬಿಟ್ಟು ಹೋದರು. ಸ್ವರ್ಗಕ್ಕೆ ಹೋದನೋ ನರಕಕ್ಕೆ ಹೋದನೋ ಗೊತ್ತಿಲ್ಲ. ಮುತ್ತಿನಂಥ ಗಂಡನು ಸತ್ತುಹೋದನಲ್ಲಾ !

ಗೃಹಸ್ಥ:— ಅಯ್ಯೋ ಹೀಗೋ?- ಮುತ್ತು ಹೋದರೆ ಸಿಗಬಹುದು ಸತ್ತು ಹೋದರೆ ಹೇಗೆ ಸಿಗಬಹದು ? ಎಷ್ಟು ದಿವಸವಾಯಿತು?

ಹೆಂ:— ನಮ್ಮಪ್ಪಾ ದಿವಸವಿಲ್ಲಾ ತಾಸಿಲ್ಲಾ. ಪ್ರಾಣಬಿಟ್ಟು ಒಂದೆರಡು ಗಳಿಗೆಯಾಯಿತು. ಇಗೋ ಈ ಮಣ್ಣಿನ ರಾಶಿಯು ಕೆಳಗೆ ಸತ್ತು ಬಿದ್ದಿರುವನು.

ಗೃಹಸ್ಥ:— ಹೀಗೆ ಹೇಗಾಯಿತು?

ಹೆಂ:— ಒಂದು ಮಾಡಲಿಕ್ಕೆ ಹೋಗಿ ಇನ್ನೊಂದು ಆಯಿತು; ತನ್ನ ಕುತ್ತಿಗೆ ಒಳಗೆ ಹೋಗುವಷ್ಟು ಗೋಡೆತೋಡಹೋಗಿ ಇಡೀಗೋಡೆಯೇ ಕೊರಳಿಗೆ ಬಿತ್ತು. ಅಕಸ್ಮಾತ್ ಬಂದ ಈ ಭಾರ ತಡೆಯಲಾರದೆ ಪ್ರಾಣಬಿಟ್ಟನು.

ಗೃಹಸ್ಥ:— ಅಂದರೇನು ಕಳವು ಮಾಡಲಿಕ್ಕೆ ಬಂದಿದ್ದನೆ. ?

ಹೆಂ:— ಹೌದು ಅದೇ ತನ್ನ ಉದ್ಯೋಗಕ್ಕೆ ಬಂದಿದ್ದನು.

ಗೃಹಸ್ಥ:— ಹಾಗಾದರೆ ತಡೆ , ಕೊತವಾಲನಿಗೇ ತಿಳಿಸುತ್ತೇನೆ. ಪಾರಪತ್ಯ ಮಾಡಿಸುತ್ತೇನೆ. (ಹೋಗುತ್ತಾನೆ.)

ಹೆಂ:— ಅಷ್ಟುಮಾಡಿ ಪುಣ್ಯ ಕಟ್ಟಿಕೊಳ್ಳಪ್ಪಾ. ಅಯ್ಯೋ ಮಹಾರಾಯನೇ ನಿನ್ನ ಕಾರ್ಯದಲ್ಲಿಯೇ ದೇಹವಿಟ್ಟ ನೀನೇ ಧನ್ಯ ನೀನೇ ಧನ್ಯ (ಕೊತವಾಲನೂ ಕೈ ಕಟ್ಟಿಕೊಂಡ ಗೃಹಸ್ಥನೂ ಬರುತ್ತಾರೆ. )

ಗೃಹಸ್ಥ:— ನೋಡಿದಿರಾ ನ್ಯಾಯ? ಮಾಡಿದವನ ಪಾಪ ಆಡಿದವನ ಬಾಯಲ್ಲಿ ಅನ್ನುವರಲ್ಲಾ! ಹಾಂಗಾಯಿತು. ಹೇಳ ಹೋದರೆ ನನ್ನನ್ನೇ ಕಟ್ಟಿ ಬಿಟ್ಟಿರುವರು.

ಕೊತವಾಲ:— ತಿಳಿಯಿರಿ ಈ ಹೆಣ್ಣು ಮಗಳು ನಾವು ಇಲ್ಲಿ ಬರುವದರೊಳಗೆ ಓಡಿಹೋಗಿದ್ದಳೆಂದು. ಆ ಮೇಲೆ ನಾವಾರನ್ನು ಕಟ್ಟಿಹಾಕುವದು? ಯಾರವ್ವಾ ನೀನು?

ಹೆಂ:— ಅಪ್ಪಾ ಅನ್ಯಾಯವಾದ ಅನಾಥ ಹೆಂಗಸು.

ಕೊತವಾಲ:— ಏನಾಗಿದೆ ಅನ್ಯಾಯ ?

ಹೆಂ:— ಇಗೋ ಗಂಡನಿಲ್ಲಿ ಸತ್ತಿರುವನು!

ಕೊತವಾಲ:— ಅದು ಹೇಗೆ?

ಹೆಂ:— ಹೊಟ್ಟೆಯ ಹೊರೆಗಾಗಿ ದುಡಿಯುವಾಗ ಈ ಹಾಳು ಗೋಡೆಯೇ ಮೇಲೆ ಬಂತು.

ಕೊತವಾಲ:— ಅದೇನು ಹೊಟ್ಟೆಯ ಹೋರಿ!

ಹೆ:— ದುಡ್ಡುಳ್ಳವರು ಯಾತಕ್ಕೆ ಕಳವೆನ್ನುವರೋ ಅದು.

ಕೊತವಾಲ:— ಹೀಗೋ ? ಈಗೇನು ನಿನ್ನ ಅಂಬೋಣ. ?

ಹೆಂ:— ಗಂಡನಂತೂ ಕೈಬಿಟ್ಟು ಹೋದನು. ಇನ್ನು ನನಗೆ ನ್ಯಾಯಬೇಕು ನ್ಯಾಯ.

ಗೃಹಸ್ಥ:— ಹೌದಲೆ ಕಳ್ಳೀ ಇದೆಂಥ ನ್ಯಾಯ; ಅನ್ಯಾಯ !

ಕೊತವಾಲ:— ಯಾವಬಗೆಯ ನ್ಯಾಯ.?

ಹೆಂ:— ಈ ಮನೆಯವರಾರಾದರೂ ನನ್ನನ್ನು ಮದುವೆಮಾಡಿಕೊಳ್ಳಬೇಕು. ಇಲ್ಲವೇ– " ಪ್ರಾಣಕ್ಕೆ ಪ್ರಾಣ "ವೆನ್ನುವ ಕಟ್ಟಳೆಯಂತೆ ಈ ಮನೆಯ ಯಜಮಾನನ ಪ್ರಾಣ ತೆಗೆದುಕೊಳ್ಳಬೇಕು.

ಕೊತವಾಲ:— ಆಹಾ ನಿಜವಾಗಿ ವಿಚಾರಣೀಯವಾದಮಾತು ? ಹಾಗಾದರೆ ಏನು ಮಾಡಲಿ! ಓಹೋ ಸುದೈವ ! ರಾತ್ರಿಯಲ್ಲಿ ಗುಪ್ತ ವೇಷದಿಂದ ನಗರ ಸಂಚಾರ ತೀರಿಸಿ ಸಂಸ್ಥಾನಿಕರೂ ದಿವಾಣರೂ ಇತ್ತೇ ಬರುತ್ತಿರುವರು.

( ಸಂಸ್ಥಾ– ದಿವಾ ಬರುವರು.)

ಕೊತವಾಲ:— ( ನಮಸ್ಕರಿಸಿ ) ದೊರೆಗಳೇ! ಈ ಅನಾಥೆಯಾಗಿರುವವಳ ಗಂಡನು ತನ್ನ ಕಳವಿನ ಉದ್ಯೋಗದಲ್ಲಿ ತೊಡಗಿರುವಾಗ ಈ ಮನೆಯವರ ಗೋಡೆಯು ಅವನ ಮೈಮೇಲೆ ಬಿದ್ದು ಪ್ರಾಣಬಿಟ್ಟಿದ್ದಾನೆ. ಇನ್ನು ಈ ಹೆಣ್ಣುಮಗಳ ಅರಿಕೆ ಏನಂದರೆ– ಈ ಮನೆಯಲ್ಲಿ ತನಗೆ ಇನ್ನೊಬ್ಬ ಪ್ರಾಣಪತಿಯಾದರೂ ದೊರೆಯಬೇಕು; ಇಲ್ಲವೇ ಪ್ರಾಣವಾದರೂ ದೊರೆಯಬೇಕು.

ದಿವಾಣ:— ಬಹಳೇ ವಿವೇಕಿಯಾಗಿ ತೋರುತ್ತಾಳೆ. ಆಕೆ ಕೇಳಿದಂತೆ ಮಾಡದಿದ್ದರೆ ರಾಜ್ಯದಲ್ಲಿ ನ್ಯಾಯವೇ ಇಲ್ಲವೆಂದಾದೀತು. ದೊರೆಗಳು ಹಾಗೆ ಅಪ್ಪಣೆ ದಯಪಾಲಿಸಬೇಕು.

ದೊರೆ:— ಹಾಗೆ ಆಗಲಿಕ್ಕೇ ಬೇಕು. ಏನಪ್ಪಾ ನೀನೇನನ್ನುವಿ ?

ಗೃಹಸ್ಥ:–(ಸ್ವಗತ) ಕಳ್ಳರಿಗೆ ತಕ್ಕ ಕೊತವಾಲ, ಕೊತವಾಲನಿಗೆ ತಕ್ಕ ದಿವಾಣ. ದಿವಾಣಗೆ ತಕ್ಕ ದೊರೆ. ದೇವರೂ,–ಕಳವು ಮಾಡಲಿಕ್ಕೆ ಬಂದದಕ್ಕಾಗಿ ಅವರಿಗೇನೂ ಶಿಕ್ಷೆಯೇ ಇಲ್ಲವೇನು?

ದೊರೆ:— ಎಂಥ ಹುಚ್ಚ ನೀನು, ಕಳ್ಳನಿಗಂತೂ ದೇಹಾಂತ ಶಿಕ್ಷೆಯಾಗಿದೆ. ಆಕೆಯಂತೂ ಅನಾಥಳಾಗಿರುವಳು.

ಮುಂದೆ ಸಾಗುವದು.

# ಸಾಧನೆಯ ಬಗೆಯಲ್ಲಿ ಕಂಡುಂಡದ್ದು.

( ಓರ್ವ ಬೀವೂರಿನ ಸಾಧಕನಿಂದ )

ಸಾಧನದೊಳಗ ಕೂಡೋ । ಬ್ರಹ್ಮನ ನೋಡೋ ।
ಜ್ಯೋತೀ ಒಳಗ ಕೂಡೋ ॥ ಪ ॥

ಸುಷುಮ್ನಾತಕೇ ಕೂತೀ । ಕೂತೀ ಒಣಚಿಂತೀ । ಬಿಡುಭ್ರಾಂತೀ ।
ಏನಂತೀ । ಮುತ್ತೀನ ಗುಂತಿ ॥ ಅ. ಪ. ॥

ಹೊನ್ನು–ಹೆಣ್ಣು–ಮಣ್ಣು । ಇವು ಮೂರೂ ।
ಭವರೋಗದ ಹುಣ್ಣು । ಮಾಯೂ ಎಂಬುದೆ ಹೆಣ್ಣು ।
ಆಶಾಕ ಬಿದ್ದು ನೋಡಬ್ಯಾಡ ತೆರೆದೂ ಕಣ್ಣು ।
॥ ಏರು ॥ ಆರೂ ಮಂದೀನ ತುಳಿದು। ಮೈತೊಳೆದು ನೀ ತಿಳಿದು ।
ಜ್ಯೋತಿ ಹೊಳೆದು । ಸುತ್ತಿ ಸುತ್ತಿ ಬರುವದು ಮುಂದು ॥ ೧ ॥

ಹಸರು–ಹಳದಿ–ಬಿಳಿದು ಬಣ್ಣ । ಒಂದರ ಬೆನ್ಹಿಂದೆ ।
ಒಂದೊಂದು ತೋರ್ಯಾವ ನೋಡಣ್ಣಾ ।
ಝುಗಿಝುಗಿಸುವದು ವರಣ ।
ನಾದ ತುಂಬಿ ಒದರೂದು ಕೇಳೀತೊ ಕರಣ ।
॥ ಏರು ॥ ಸುತ್ತ ಮುತ್ತ ಬೆಳೆದಿಂಗಳ ನೋಡಿ । ನೋಡಿ । ಓಡ್ಯಾಡಿ ।
ಹುಡಕ್ಯಾಡಿ । ತಿಳಿ ಖೋಡೀ । ಮನಶಾಂತಮಾಡೀ ॥ ೨ ॥

ಸೂರ್ಯ–ಚಂದ್ರರು ಜೋಡೀ । ಭರರರ
ಬರುವರು ನಕ್ಷತ್ರದೊಳಗ ಕೂಡೀ । ರತ್ನಧರಳ ನಾನು ನೋಡೀ ।
ಥಳಥಳ ಹೊಳೆವುದು ನೋಡಿದೆ ಕನ್ನಡಿ ।
ರಾಜಯೋಗದ ಮಾರ್ಗವ ಕೂಡಿ । ಯಾದವಪತಿ ಓಡೀ
ಬಂದನು ಲಗೂ ಮಾಡಿ ।
॥ ಏರು ॥ ಚಿದಂಬರ ಗುರು ಮಹಿಮವ ಕಂಡೆ । ಕಂಡೆ । ನೋಡಿಕೊಂಡೆ ।
ತಿಳಕೊಂಡೆ । ಮಾಡುಂಡೆ । ಸ್ವಸ್ಥ ಕೂತುಕೊಂಡೆ ॥ ೩ ॥

—ಶ್ರೀ ಚಿದಂಬರಭಕುತ.

# ಪೂರ್ಣಯೋಗ

( ಹಿಂದಿನ ಸಂಚಿಕೆಯಿಂದ ಮುಂದುವರಿದದ್ದು. )

ನಾವು ಶರಣರಾಗಬೇಕು. ಅದು ಅನನ್ಯರಾಗಿಯೇ ಆಗಲುಬೇಕು. ಯಾವ ಇಚ್ಛೆಯಾಗಲಿ, ಶರ್ತಾಗಲಿ, ಅಭಿಪ್ರಾಯವಾಗಲಿ, ವಿಚಾರವಾಗಲಿ, ಭಾವವಾಗಲಿ ನಮ್ಮ ಶರಣ್ಯತೆಗೆ ಸೀಮೆಯನ್ನು ಹಾಕಬಾರದು; ಅದನ್ನು ಕಟ್ಟಬಾರದು. ಹೀಗಿರಬೇಕು, ಹಾಗಿರಬೇಕು; ಹೇಗಿರಬಾರದು, ಹಾಗಿರಬಾರದು–ಎಂಬ ಈ ಬೇಕು–ಬೇಡುಗಳ ಒಡ್ಡಿನಿಂದ ನಮ್ಮ ಅನನ್ಯ ಶರಣತೆಯ ಪ್ರವಾಹವನ್ನು ಕಟ್ಟಲಾಗದು. ಅಂತಃಕರಣದಲ್ಲಿ ಇಚ್ಛಾಮಲವು ಇರಲಾರದು. ಬುದ್ಧಿಯಲ್ಲಿ ಅಹಂಕಾರವಿರಲಾಗದು. ಶೀತೋಷ್ಣಾದಿ ದ್ವಂದ್ವಗಳಿಗೆ ಬೆದರಲಾಗದು; ಅದರಲಾಗದು. ಕಾಣುವ, ಕಾಣದ ಈ ವಿಶ್ವವೆಲ್ಲ ಅಂತರ್ಗತವಾದ ಒಂದೇ ಒಂದು ಸಚ್ಚಿದಾನಂದದ ಪರಿಪೂರ್ಣ ಪ್ರತಿಮೆಯೆಂದು ಅರಿಯಲುಬೇಕು. ಯಾಂತ್ರಿಕನ ಕೈಯಲ್ಲಿ ಯಂತ್ರವಿರುವಂತೆ ಸೂತ್ರಧಾರನ ಕೈಯಲ್ಲಿಯ ಬೊಂಬೆಯಂತೆ ನಮ್ಮಿ ಸಮಗ್ರ ಜೀವಿತವನ್ನೇ ಪ್ರೇಮಮಯನಾದ, ಶಕ್ತಿಮಯನಾದ, ಜ್ಞಾನಮಯನಾದ ಪರಮೇಶ್ವರನ ಕೈಯಲ್ಲಿ ಅವನ ಲೀಲೆ ಕೊನೆಗಾಣಲೆಂದು, ನೆರವೇರಲೆಂದು ಅರ್ಪಿಸಲು ಬೇಕು. ಅಹಂಕಾರವು ತಟುಕಾದರೂ ಉಳಿಯ ಕೂಡದು. ಯಾಕಂದರೆ ಕೇವಲ ದೇವನ ಲೀಲೆಗೆ ಸಂಪೂರ್ಣ ಅವಕಾಶವು ದೊರಕಿ ಪೂರ್ಣಾನಂದವೂ, ಪೂರ್ಣಶಾಂತಿಯೂ, ಪೂರ್ಣ ಜ್ಞಾನವೂ ನೆಲೆಗೊಳ್ಳಬೇಕಾಗಿದೆ. ಈ ಬಗೆಯ ಅನನ್ಯ ಶರಣವೃತ್ತಿಯು ಅಲ್ಪಾಂಶದಿಂದ ಕೂಡ ನೆಲೆಗೊಳಿಸಿದರೆ ಬೇರೆ ಯೋಗಕ್ರಿಯೆಯು ಅಗತ್ಯವೇ ಇಲ್ಲ ! ಯಾಕಂದರೆ ಆ ಮೇಲೆ ದೇವನೇ ನಮ್ಮೊಳಗಿನ ಸಾಧಕನಾಗುವನು. ಆ ಸಿದ್ಧನ ಸಿದ್ಧಿಗಳೇ ನಮಗಾಗಿ ದುಡಿಯಹತ್ತುವವು. ಆ ಮೇಲೆ ನಮ್ಮ ಹರಕು-ಮುರುಕು ಸಾಧನದ ಪ್ರಯೋಜನವೇ ಇಲ್ಲ. ಅವನದೇ ಕೆಲಸ. ಅವನೇ ಮಾಡುವವನು. ಅವನೋ ? ಅವನಿಗೆ ತಿಳಿಯದ್ದಿಲ್ಲ, ಕೈಗೂಡದ್ದಿಲ್ಲ, ದೊರಕದ್ದಿಲ್ಲ. ಇಂಥ ಈ ಯೋಗದ ಮುಂದೆ ಅತಿಬಲಿಷ್ಠವಾದ ರಾಜಯೋಗದ ಪಾಡೇನು ! ಆ ಸಂಯಮ, ಆ ಪ್ರಾಣಾಯಾಮ, ಆ ಧ್ಯಾನ, ಆ ಧಾರಣೆ, ಆ ಸಮಾಧಿ–ಅವುಗಳ ಯೋಗ್ಯತೆಯಾದರೂ ಎಷ್ಟು ! ಅತ್ಯಂತ ನಿಷ್ಕಾಮವಾದ ಭಕ್ತಿಯು ಈ ಪೂರ್ಣಯೋಗದ ಮುಂದೆ ಮಂದತೇಜವಾಗುವದು. ಭಕ್ತಿಯೋಗ, ರಾಜಯೋಗಗಳೆರಡೂ ತಮ್ಮ ತಮ್ಮ ಪರಿಯಿಂದ ಅತಿ ಫಲಕಾರಿಗಳಾದರೂ ಪೂರ್ಣಯೋಗವನ್ನು ಅವು ಸರಿಗಟ್ಟಲಾರವು. ಯಾಕಂದರೆ ಎಷ್ಟೆಂದರೂ ರಾಜಯೋಗಭಕ್ತಿಯೋಗಗಳಲ್ಲಿ ಜೀವನ ಯೋಗ್ಯತೆಯಷ್ಟು ಸಾಧನವೂ, ಸಾಧನದ ಪ್ರಮಾಣದಿಂದ ಫಲವೂ ಆಗುವದು. ಅದನ್ನು ಮೀರಿ ಆಗಲಾರದು. ಆದರೆ ಅದೇ ಪೂರ್ಣಯೋಗದಲ್ಲಿ ದೇವನೇ ಸಾಧಕನಾದುದರಿಂದ ಮಾರ್ಗವು

ನಿರಾತಂಕವೂ, ಫಲವು ಕಟ್ಟಿಟ್ಟದ್ದೂ ಇರುವದು. ಪೂರ್ಣಯೋಗದಲ್ಲಿ ದೇವನು ತನ್ನ ಸಂಕಲ್ಪಾನುಸಾರವಾಗಿ ನಮ್ಮ ಹಿತವೂ ಜಗದ ಹಿತವೂ ವಿಶ್ವಹಿತವೂ ಇದ್ದುದನ್ನೇ ನಮ್ಮಿಂದ ಸಾಧಿಸುವನು, ಮಾಡಿಸುವನು.

ಇನ್ನು ಪೂರ್ಣಯೋಗದೊಳಗಿನ ಪ್ರಥಮ ವಿಧಿಯೆಂದರೆ ಆತ್ಮಸಮರ್ಪಣದ ಸಂಕಲ್ಪಮಾಡುವದು. ನೀವು, ನಿಮ್ಮ ಬಯಕೆಗಳು, ನಿಮ್ಮ ಸಾಮರ್ಥ್ಯ, ಈ ಸರ್ವಸ್ವವನ್ನೂ ದೇವನ ಕೈಯಲ್ಲಿ ಒಪ್ಪಿಸಿ ಬಿಡಿರಿ. ಶರ್ತು-ಕರಾರುಗಳನ್ನು ಹಾಕಬೇಡಿರಿ. ಏನನ್ನೂ ಬೇಡುವ ಬಯಕೆ ಮನದಲ್ಲಿರದಿರಲಿ. ಯೋಗವು ಸಿದ್ಧಿಸಲೆಂದೂ ಬೇಡಬೇಡಿರಿ.'ನಿನ್ನ ಸಂಕಲ್ಪಾನುಸಾರ ನನ್ನಿಂದ ಮಾಡಿ ಮಾಡಿಸು.' ಇದರ ಹೊರತು ಏನೂ ಅನ್ನಬೇಡಿರಿ. ದೇವರು ಬೇಡಿದವರಿಗೆ ಬೇಡಿದ್ದನ್ನೇ ಮಾತ್ರ ಕೊಡುವನು. ಆದರೆ ಆತ್ಮಸಮರ್ಪಣೆ ಮಾಡಿ ಏನೂ ಬೇಡದಿದ್ದವನಿಗೆ ಅವನಿಗೆ ಬೇಕಾಗಿದ್ದುದನೆಲ್ಲ ಬೇಕಾಗಬಹುದಾದದ್ದನ್ನೆಲ್ಲ ಒದಗಿಸಿ ಕೊಡುವನಷ್ಟೇ ಅಲ್ಲದೆ ತನ್ನನ್ನೂ ಕೊಟ್ಟುಕೊಂಡು, ತನ್ನ ಕೃಪೆಯ ಫಲಗಳನ್ನೂ ಭೋಗಿಸಗೊಡುವನು.

ಇನ್ನು ಎರಡನೆಯ ವಿಧಿಯೆಂದರೆ ದೇವರು ನಮ್ಮಲ್ಲಿ ನಿಂತು ಏನು ಮಾಡುವನು, ಬಿಡುವನು ಎಂಬುದನ್ನು ಪ್ರೇಕ್ಷಕರಂತೆ ಕೇವಲ ಸಾಕ್ಷಿಯಾಗಿ ನಿಂತು ನೋಡುವದು. ಈ ಸಾಧನದ ಕಾಲಕ್ಕೆ ನಮ್ಮಲ್ಲಿ ಒಮ್ಮೊಮ್ಮೆ ಇಲ್ಲದ ಅಸಮಾಧಾನವೂ, ಕ್ಷೋಭವೂ ಕಂಡು ಬರುವದುಂಟು. ಇಲ್ಲಿ ಶ್ರದ್ಧೆಯು ಅತ್ಯಗತ್ಯವಾಗಿದೆ. ಪರಿಶುದ್ಧವಾದ ಶ್ರದ್ಧೆಯು ಒಮ್ಮಿಗಿಲೇ ಯಾವಾಗಲೂ ಸಾಧಿಸುವಷ್ಟು ಸುಲಭವಾದದ್ದಲ್ಲ. ಮತ್ತೂ ಇದೇ ಕಾಲಕ್ಕೆ ನಮ್ಮಲ್ಲಿ ಇದ್ದಬಿದ್ದ ದೋಷಗಳೆಲ್ಲ ತೆರೆತೆರೆಯಾಗಿ, ನೆರೆನೆರೆಯಾಗಿ ಬರುವದುಂಟು. ಅವುಗಳ ಉಕ್ಕು ನಿಃಶೇಷವಾಗಿ ಇಳಿಯುವವರೆಗೆ ಹೀಗೆ ಮೇಲಿಂದ ಮೇಲೆ ಆಗುತ್ತದೆ. ಸಂಶಯುಗಳಿಗಂತೂ ತೆರಪೇ ಇಲ್ಲ. ಈ ಕಲಿಕಾಲದಲ್ಲಂತೂ ಸಂಶಯದಿಂದ ದೂಷಿತನಾಗದ ಮನುಷ್ಯನೇ ಇಲ್ಲ. ನೀವು ಸಂಶಯಗಳಿಂದ ಸುತ್ತಲ್ಪಟ್ಟಾಗ್ಗೆ ಸತ್ಸಂಗದಿಂದ ಅವುಗಳನ್ನು ಕಳೆದುಕೊಳ್ಳಲು ಪ್ರಯತ್ನಿಸಬಹುದು. ಆದರೂ ಸತ್ಸಂಗವು ದೊರೆಯದಿದ್ದ ಪಕ್ಷದಲ್ಲಿ ಕಂಗೆಡುವ ಕಾರಣವಿಲ್ಲ. ಯಾಕಂದರೆ ಪೂರ್ಣಯೋಗದ ತಳಹದಿಯ ತತ್ವವಾದ ಅನನ್ಯಶರಣತೆಯೇ ನಮ್ಮನ್ನೇತರಿಂದಲೂ ಬಿಡುಗಡೆಗೊಳಿಸಲು ಸದೈವ ಸನ್ನದ್ಧವಿದೆ. ಅಂತರಂಗಲ್ಲಿಯೇ ಇರಲಿ, ಬಹಿರಂಗಲ್ಲಿಯೇ ಇರಲಿ ಸಂಕಟಪೀಡಿತರಾದಾಗ ಗೀತೆಯೊಳಗಿನ ಭಗವದುಕ್ತಿಯನ್ನು ನೆನೆಯಿರಿ " ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ ತರಿಷ್ಯಸಿ " ನೀನು ನನ್ನ ಮನದವನಾಗು ಅಂದರೆ ನನ್ನ ಕೃಪೆಯಿಂದಲೇ ನೀನೆಲ್ಲ ಸಂಕಟಗಳನ್ನು ದಾಟುವಿ. " ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜ; ಅಹಂತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ "ಎಲ್ಲ ಧರ್ಮಗಳನ್ನು ಅಂದರೆ ವಿಧಿ, ನಿಷೇಧ, ನಿಯಮ, ಕಟ್ಟಳೆ, ಕುಲಾಚಾರ, ಚಟ, ಇವೆಲ್ಲವುಗಳನ್ನೂ ಬಿಡು. ಅವಕ್ಕೆ ಒಳಗಾಗಬೇಡ. ನನಗೆ ಒಳಗಾಗು. ನಾನು ನಿನ್ನನ್ನು ಎಲ್ಲ

ಪಾಪಗಳಿಂದ ಬಿಡಿಸುವೆನು. ಅಳುಕದಿರು—" ಅಹಂ ಮೋಕ್ಷಯಿಷ್ಯಾಮಿ " ನಾನು ನಿನ್ನನ್ನು ಬಿಡಿಸುವೆನು. ನೀವು ತೊಳಲುವದು ಬೇಡ, ಬಳಲುವದು ಬೇಡ, ಪಾಪದಿಂದ ಮುಕ್ತರಾಗುವ ಹೊಣೆಯು ನಿಮ್ಮದಲ್ಲ. ನಿಮ್ಮ ಪ್ರಯತ್ನಕ್ಕೆ ಫಲವೆಂದು ತಿಳಿಯದಿರಿ. ನಿಮ್ಮನ್ನು ಬಿಡುಗಡೆಗೊಳಿಸುವ ಹೊಣೆಯನ್ನು ಸರ್ವಶಕ್ತಿಮಂತನಾದವನು ಹೊತ್ತಿದ್ದಾನೆ. ಆಧಿಗಳು ಬರಲಿ, ವ್ಯಾಧಿಗಳು ಬರಲಿ, ಪಾಪವು ಮುತ್ತಲಿ, ದೋಷವು ಸುತ್ತಲಿ, ನೀವು ಹೆದರುವ ಕಾರಣವಿಲ್ಲ. ಅವನನ್ನು ಬಿಗಿದಪ್ಪಿ ಶರಣರಾಗಿರಿ.

"ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ." ಆದರೆ ಈ ಬಿಡುಗಡೆಯೇನು ಅಕಸ್ಮಾತ್ತಾಗಿ ಅದ್ಭುತ ಪವಾಡದಂತೆ ಆಗತಕ್ಕದ್ದಲ್ಲ. ಕ್ರಮವಾಗಿ ಪೂರ್ಣ ಶುದ್ಧಿಯಾದನಂತರ ಈ ಬಿಡುಗಡೆಯಾಗತಕ್ಕದ್ದು. ಪೂರ್ಣಶುದ್ಧಿಯು ಮುಕ್ತಿಯ ಪೂರ್ವ ಚಿನ್ಹವು. ಬಹಳ ದಿವಸ ಕಸಹೊಡಿಯದಿದ್ದ ಕೋಣೆಯಲ್ಲಿ ಉಡುಗ ಹತ್ತಿದೊಡನೆ ಧೂಳಿಯ ಮೋಡಗಳು ಹೇಗೆ ಎದ್ದು ಮುಸುಕುವವೋ ಹಾಗೆ ಪರಿಶುದ್ಧವಾಗುತ್ತಿರುವವನನ್ನು ಪಾಪಗಳು ಮುಸುಕುವವು. ಆ ಧೂಳಿಯಂತೆ ಈ ಪಾಪದ ಧೂಳಿಯೂ ನಿಮ್ಮ ಕಣ್ಣು ಮೂಗುಗಳಲ್ಲಿ ಸೇರಿ ನಿಮ್ಮನ್ನು ಕಂಗೆಡಿಸಬಹುದು, ಉಸುರುಗೆಡಿಸಬಹುದು; ಆದರೆ ನೀವು ಅಳುಕದಿರಿ.

( ಮುಂದೆಸಾಗುವದು )

# ಮಿಂಚಿದ ಮಾತು.

ಸಾಯಂಕಾಲದ ಸಮಯವು. ನಿಯಮದಂತೆ ಅನೇಕ ಯುವಕ–ಯುವತಿಯರು ಹವೆಗಾಗಿ ಅತ್ತಿಂದಿತ್ತ ಅಲೆದಾಡುತ್ತಿದ್ದರು. ವಾಙ್ಮಯಾಕಾಶದಲ್ಲಿ ಅದೇ ಮೂಡುತ್ತಿರುವ ಬಾಲ–ಕವಿಗಳೀರ್ವರು ಜನಸಂದಣಿತವಾದ ಬೀದಿಯನ್ನು ಬಿಟ್ಟು, ಗುಡ್ಡದ ಓಣಿಗುಂಟ ನಡೆದಿದ್ದರು. ಮೋರೆಯ ಮೇಲಿಂದ ನೋಡಿದರೆ ಅವರೇನೋ ಗಹನ ಯೋಚನೆಯಲ್ಲಿ ತೊಡಗಿದಂತೆ ಕಾಣುತ್ತಿತ್ತು. ವೇದಾಂತವೇ ಅವರ ಮಾತಿನ ವಿಷಯವಾಗಿತ್ತು. ಜಗತ್ತಿನ ಎಲ್ಲ ತತ್ವಜ್ಞಾನಿಗಳು ತಲೆ ಹಾಕಿ ತಲೆ ಕೆಳಗೆ ಮಾಡಿದ ಮಹತ್ವದ ವಿಷಯವದು. ಅಂದ ಮೇಲೆ ಕೇಳುವದೇನು ?

ಮನುಷ್ಯ ಹಾಗೂ ಈಶ್ವರರಲ್ಲಿಯ ಸಂಬಂಧವೇನು? ಎಂತಹದು?—ಇದೇ ಅವರ ಮಾತಿನ ಮುಖ್ಯ ವಿಷಯವಾಗಿತ್ತು.

ವಿವೇಚನೆಯು ಒಳ್ಳೇ ಭರದಿಂದ ಸಾಗಿತ್ತು. ಬರಬರುತ್ತ ದೇವರಿರುವನೋ–ಇಲ್ಲವೋ–ಎನ್ನುವವರೆಗೆ ಮಾತು ಬಂದು ನಿಂತಿತು. ಇಲ್ಲವೆನ್ನಬೇಕೆ ? ದಿನಾಲು ಒದಗುವ ಹುಟ್ಟು ಸಾವುಗಳೂ, ಕಣ್ಮುಟ್ಟ ನೋಡುವ ಪ್ರಕೃತಿಯಲ್ಲಿಯ ಅನೇಕ ಸೋಜಿ

ಗವಾದ ಸಂಗತಿಗಳೂ ಆತನ ಇರುವಿಕೆಯನ್ನು ನಿಶ್ಚಿತವಾಗಿ ಸೂಚಿಸುವದಿಲ್ಲವೆ? ಹಾಗಾದರೆ ಹೇಗಿರುವನು? ಎಲ್ಲಿರುವನು? ತೋರಿಸಿರೆಂದು ಕೇಳಿದರೆ ಮನಸ್ಸು ಮಂಕಾಗುವದು, ಬುದ್ಧಿ ಬೆರಗಾಗುವದು; ಕಡೆಗೆ ನಿರುತ್ತರನಾಗಬೇಕಾಗುವದು. ವಿಚಾರದ ಈ ಬಗೆಯ ಸುಳಿಯಲ್ಲಿ ಸಿಲುಕಿ ತೊಳಲುವ ಜನರೇ ಬಹಳವಲ್ಲವೆ?

"ಮೂಢ ಮಾನವನೆ! ನಿನ್ನನ್ನು ಹುಟ್ಟಿಸಿದ ನಿನ್ನೊಡೆಯನನ್ನು ನಿನ್ನಾರಡಿದೇಹವೂ ಮೂರು ಕಾಸಿನ ಬುದ್ಧಿಯೂ ಅಳೆಯಲಾಪವೆ? ತೂಗಿ ನೋಡು. ತಿಳಿದು ನೋಡು. ನೀನು ದಿನಾಲು ಬಳಸುವ ಒಡವೆಗಳ ಪೂರ್ಣ ಜ್ಞಾನವಾದರೂ ನಿನಗೆ ನಿಶ್ಚಿತವಾಗಿರುವದೂ? ಘನವೂ ಜಡವೂ ಎಂದು ತಿಳಿದುಕೊಂಡಿದ್ದ ಕಲ್ಲು-ಕಟ್ಟಿಗೆಗಳಲ್ಲಿಯ ಅಣುಗಳು ಒಂದೇಸವನೆ ಅಲೆದಾಡುತ್ತಿರುವದೆಂಬುದು ಮೊನ್ನೆಮೊನ್ನೆ 'ಕ್ಷ'ಕಿರಣ X rays ಗಳ ಸಹಾಯದಿಂದ ಗೊತ್ತಾಗಲಿಲ್ಲವೆ? ಸೂರ್ಯನು ಸರಿಯುವನೆಂದು ನಂಬಿದ ನಮ್ಮ ಹಿರಿಯರನ್ನು ಮೂಢ ಭಾವಿಕರೆಂದು ನಾವು ಹಳಿಯಲಿಲ್ಲವೆ? ದೂರದೇಶದ ಜಾಣನೆನಿಸಿಕೊಳ್ಳುವನೊಬ್ಬನು ನಮ್ಮ ಹಿರಿಯರ ಮಾತನ್ನೇ ಎತ್ತಿಹಿಡಿಯಲು, ಮೊದಲಿನ ನಮ್ಮ ನಂಬುಗೆಯು ಹಾರಿ ಹೋಯಿತು. ಹೀಗೆ ಇನ್ನೂ ಯಷ್ಟೋ ಸಂಗತಿಗಳನ್ನು ಉದಹರಿಸಬಹುದು. ಇದೇನು ವಿಚಾರಕ್ರಾಂತಿಯೊ? ವಿಚಾರ ಹಾನಿಯೋ ತಿಳಿಯದು.

ಇನ್ನೂ ಏನಿರುವದೋ?–ಯಾರಿಗೆ ಗೊತ್ತು? ಒಡವೆಗಳ ಎಲ್ಲ ಗುಣಧರ್ಮಗಳು ನಮಗೆ ತಿಳಿದಿರುವವೆಂದು ಜಂಭ ಬಡಿಯುವದು ಮೂರ್ಖತನವಲ್ಲವೆ? ಹಿಡಿದು ನೋಡಲು ಬರುವ ಒಡವೆಗಳ ಹಾಡೇ ಹೀಗಾದಮೇಲೆ, ಅರಿವಿನ ಗಡಿಯನ್ನು ಮೀರಿದ ಆ ಅಗೋಚರ ವಸ್ತುವಿನ ಅಳತೆ ಮಾಡಲೆಳಸುವದಕ್ಕೆ ಏನೆನ್ನಬೇಕು?"

ಈ ಬಗೆಯಾಗಿ ಅವರಿಬ್ಬರ ವಿಚಾರವು ಈ ತುದಿಯನ್ನು ಮುಟ್ಟಿರಲು–ಒಂದು ದಿನ್ನೆಯಮೇಲೆ ಹೋಗಿ ಕುಳಿತುಕೊಂಡರು. ಅವರ ಸಂಗಡ ಬಂದಿದ್ದ ನಾಯಿಯು ತನ್ನೊಡೆಯನೊಡನೆ ಚಿನ್ನಾಟವಾಡಬೇಕೆಂದು ಕಂಟಿಗಳಲ್ಲಿ ಅಲೆದಾಡುವದನ್ನು ಬಿಟ್ಟು ಹತ್ತಿರದಲ್ಲಿ ಅವರ ಕಡೆಗೆ ನೋಡುತ್ತ ಕುಳಿತುಕೊಂಡಿತು. ಇಷ್ಟು ಹೊತ್ತಿನವರೆಗೆ ಈ ಗಹನ ವಿಚಾರದಲ್ಲಿ ತಾವು ಮುಳುಗಿದ್ದರೆಂಬ ಅರಿವು, ಪಾಪ! ಆ ಮೂಢ ಪ್ರಾಣಿಗೇನಾದರೂ ಇತ್ತೊ? ಮೊಲಗಳ ಸಲುವಾಗಿ ಮೂಲೆ ಮೂಲೆಗಳಲ್ಲಿ ಮೂಸಿನೋಡುತ್ತ ಅದು ನಡೆದಿತ್ತು. ಅಕೊ! ಅದರ ಮೂಕ ಕಣ್ಣುಗಳು ಅವರ ಈ ಬಿಗಿಯಾದ ಪ್ರಶ್ನೆಗೆ ಸರಿಯಾದ ಉತ್ತರವನ್ನು, ಹೇಳಿದವು.

ತನ್ನೊಡೆಯನ ಬಗ್ಗೆ ಎಲ್ಲವೂ ಆ ಪ್ರಾಣಿಗೆ ಗೊತ್ತಾಗಬಲ್ಲದೆ? ಆತನ ಸ್ವಭಾವದ ಹೆಚ್ಚು ಭಾಗವು ಆ ಅಜ್ಞಾನ ಪಶುವಿನ ಬುದ್ಧಿಗೆ ನಿಲುಕದಂತಾಗಿರುತ್ತದೆ. ಆದರೂ ಆತನ ಸಿಟ್ಟು-ಪ್ರೀತಿ ಮೊದಲಾದ ತನಗೆ ಬೇಕಾಗುವ ಕೆಲವೊಂದು ಸಂಗತಿಗಳನ್ನಾದರೂ ಅದಕ್ಕೆ ತಿಳಿದುಕೊಳ್ಳಲು ಸಾಧ್ಯವದೆ. ಹೀಗಿರದಿದ್ದರೆ ಅದು ಮನುಷ್ಯನಿಗೆ ಒಲಿದು, ನಂಬಿ, ಅವನ ಮಾತು ಕೇಳಬಹುದಾಗಿತ್ತೇ?

ದೇವರ ನೆಲೆಯನ್ನು ತೆಗೆಯಲು ಹವಣಿಸುವ ಮನುಷ್ಯನ ಹಾಡಾದರೂ ಇದೇ ಪ್ರಕಾರವಿರುತ್ತದೆ. ಆತನ ಅನಂತ ಗುಣಗಳು ನಮ್ಮ ಬುದ್ಧಿ-ಶಕ್ತಿಗಳನ್ನು ಮೀರಿರುವವು. ಆದರೂ ಆ ಮೂಕ ಪ್ರಾಣಿಯು ಕಂಡುಹಿಡಿದಂತೆ ಕೆಲವು ಸಂಗತಿಗಳಾದರೂ ನಮಗೆ ತಿಳಿದುಬರುತ್ತವೆ. ತನ್ನೊಡೆಯನನ್ನು ಅದು ಮೆಚ್ಚಿಸಲುಯತ್ನಿಸುವಂತೆ-ನಾವಾದರೂ ನಮ್ಮೊಡೆಯನನ್ನು ನ್ಯಾಯಾನ್ಯಾಯ, ಸಟೆ-ದಿಟ, ಒಳಿತು-ಕೆಡಕು ಮೊದಲಾದ ವಿವೇಕದ ಮಾರ್ಗದಿಂದ ಮೆಚ್ಚುವಂತೆ ಮಾಡಲು ಬರುವದು. ಈ ಅನುಗ್ರಹವೇ ನಮ್ಮ ಮುಂದಣ ಮಾರ್ಗದಲ್ಲಿ ನಮಗೆ ಸಹಾಯಕಾರಿಯಾಗುವದು.

ಮಬ್ಬುಗತ್ತಲಾಗುತ್ತ ಬಂದಿತು. ಅವರಿಬ್ಬರು ತಮ್ಮ ಮನೆಯ ಕಡೆಗೆ ಹೊರಟರು. ನಾಯಿಯಾದರೋ ತನ್ನ ಚಟಪಂತೆ ಕಂಟಿಗಳಲ್ಲಿ ಮೊಲಗಳ ಸಲುವಾಗಿ ಮೂಸಿ ನೋಡುತ್ತ ಅವರನ್ನು ಹಿಂಬಾಲಿಸಿತು. ಪಾಪ! ತನ್ನೊಡೆಯರ ವಿಚಾರದಲ್ಲಿ ತಾನೆಂಥ ಬಲವಾದ ಕ್ರಾಂತಿಯನ್ನು ಮಾಡಿದನೆಂಬದರ ಅರಿವು ಆ ಮೂಕ ಪ್ರಾಣಿಯ ಕನಸು ಮನಸ್ಸಿನಲ್ಲಾದರೂ ಇತ್ತೆ ?

—ಶ್ಯಾಮ

---

# ವೇದಾಂತವೂ ಸುಧಾರಣೆಯೂ.

(ಸ್ವಾಮೀ ವಿವೇಕಾನಂದರ "Vedant as a factor in civilization" ಎಂಬದರ ಅನುವಾದವು. ಅನುವಾದಕ:—ಗೋ)

ಬರೀ ಸ್ಥೂಲದೃಷ್ಟಿಯಿಂದ ನೋಡುವವರಿಗೆ ಭಾರತವೆಂದರೆ ಅದೊಂದು ಜಿತ ದುಃಖ, ಕನಸಿಗ ಮತ್ತು ತತ್ವಜ್ಞರ ರಾಷ್ಟ್ರವೆಂದು ತೋರುತ್ತದೆ. ಆದರೆ ಭಾರತವು ದೈವೀಶಕ್ತಿಯಲ್ಲಿ ಇಡೀ ಜಗತ್ತನ್ನೇ ಮೀರಿರುವದೆಂಬುದನ್ನು ಅವರು ತಿಳಿಯಲಾರರು. ಭಾರತೀಯರ ಚಿಂತನಶೀಲ ಹಾಗೂ ಅಂತರ್ಮುಖ ಸ್ವಭಾವದೊಡನೆ ಪಾಶ್ಚಾತ್ಯರ ಅತಿ ಚಪಲ ಸ್ವಭಾವವು ಕೂಡಿದರೆ ಎಷ್ಟೋ ಲಾಭವಾಗುವದು. ಅದರಂತೆ ಪಾಶ್ಚಾತ್ಯರ ಚಪಲತೆ ಉತ್ಸಾಹಗಳು ಪೌರ್ವಾತ್ಯರಲ್ಲಿ ನೆಲೆಗೊಂಡರೆ ಅದರಿಂದಲೂ ಬಹಳ ಲಾಭವುಂಟು. ಅದರಲ್ಲಿ ( ಸಕಲ ಧರ್ಮಗಳ ಉಗಮಸ್ಥಾನಗಳಾದ ) ಹಿಂದೂ ಮತ್ತು ಯಹುದೀ ಜನಾಂಗಗಳು, ಉಳಿದವು ನಾಶವಾಗುತ್ತಿರಲು ಇನ್ನೂ ಜೀವಿಸುತ್ತಿದ್ದುದರ ಕಾರಣವೇನೆಂಬುದು ವಿಚಾರಾರ್ಹವಾಗಿದೆ. ಅವರಲ್ಲಿರುವ ದೈವೀ ಶಕ್ತಿಯೇ ಕಾರಣ. ಹಿಂದೂ ಜನರು ಸ್ತಬ್ಧರಿರುವರಾದರೂ ಜೀವಿಸುತ್ತಿರುವರು. ಯಹುದೀ ಜನರ ಸಂಖ್ಯೆಯಾದರೋ ಮೊದಲಿಗಿಂತ ಬೆಳೆದಿದೆ, ಭಾರತೀಯ ತತ್ವಜ್ಞಾನವು ಸುಧಾರಿಸಿದ ಜಗತ್ತಿನ ಮೇಲೆಲ್ಲ ಸಾವಕಾಶವಾಗಿ ಹಬ್ಬುತ್ತಿದೆ. ಪೂರ್ವಕಾಲದಲ್ಲಿ ಭಾರತೀಯರು ವ್ಯಾಪಾರ

ದಲ್ಲಿ ಸಹ ಮುಂದುವರಿದಿದ್ದರು. ಯುರೋಪದ ಶೋಧವಾಗುವ ಮೊದಲೇ ಆಫ್ರಿಕದ ದಂಡೆಗುಂಟ ಅವರು ವ್ಯಾಪಾರ ಮಾಡುತ್ತಿದ್ದರು. ಹಿಂದೂ ಜನರು ಪರದೇಶಗಮನ ಮಾಡಿಯೇ ಇಲ್ಲೆಂದೆನ್ನುವ ಜನರು ಈ ಕಡೆಗೆ ಕಣ್ತೆರೆದು ನೋಡಲಿ. ಹಿಂದುಸ್ತಾನವನ್ನು ಗೆದ್ದು ಪರಕೀಯರು ರಾಜ್ಯವನ್ನೂ ಐಶ್ವರ್ಯವನ್ನೂ ಹೊಂದಿದರು. ಅದರಿಂದ ಅವರ ಉತ್ಕರ್ಷವಾಯಿತು. ಹಿಂದೂ ಜನರಿಂದ ಅವರು ದೈವೀಭಾವನೆಯನ್ನರಿತದ್ದು ಲಕ್ಷ್ಯ ದಲ್ಲಿಡತಕ್ಕದ್ದಾಗಿದೆ.

ಪಾಶ್ಚಾತ್ಯರು ಬರಿ ಗಳಿಕೆಯು ಹಾಗೂ ಅದರಿಂದ ಸುಖಹೊಂದುವ ವಿಚಾರವನ್ನು ಮಾಡಿದರೆ ಪೌರ್ವಾತ್ಯರು ಅದಕ್ಕೆ ವಿರುದ್ಧವಾಗಿ ಈ ಭೌತಿಕ ಸುಖವನ್ನು ಆದಷ್ಟು ಕಡಿಮೆ ಎಷ್ಟು ಉಪಭೋಗಿಸಬೇಕೆಂಬುದರ ವಿಚಾರ ಮಾಡುವರು. ವೇದಗಳಲ್ಲಿ ಪೂರ್ವಿಕರು ದೇವರನ್ನು ತಿಳಿಯಲು ಪ್ರಯತ್ನ ಮಾಡಿದ್ದು ಕಂಡು ಬರುವದು. ಒಂದೊಂದು ಅವಸ್ಥೆಯನ್ನು ದಾಟುತ್ತಾ ಎಂದರೆ ಪಿತೃ ಪೂಜೆಯಿಂದ ಮೊದಲು ಮಾಡಿ ಆ ಮೇಲೆ ಇಂದ್ರಾಗ್ನಿಗಳ ನಂತರ ದೇವದೇವನಾದ ವರುಣನ ಪೂಜೆಮಾಡಹತ್ತಿದರು. ಸಕಲ ಧರ್ಮಗಳಲ್ಲಿ ಅನೇಕ ದೇವರ ಕಲ್ಪನೆಯು ಸಾಗುತ್ತ ಸಾಗುತ್ತ ಒಬ್ಬ ದೇವರ ಮೆಟ್ಟಿಗೆ ಬಂದು ಮುಟ್ಟಿದ್ದು ಕಂಡುಬರುವದು. ಆ ದೇವನೆಂದರೆ ಸರ್ವಜಾತೀಯರ ಅಧಿನಾಯಕನು, ಜಗನ್ನಿರ್ಮಾಣಕರ್ತನು, ಜಗತ್ಸ್ವಾಮಿಯು, ಸರ್ವವ್ಯಾಪಿಯು. ಅಂತೂ ಅವರು ಅನೇಕೇಶ್ವರೀಕಲ್ಪನಾವಸ್ಥೆಯನ್ನು ದಾಟಿ ಏಕೇಶ್ವರೀಕಲ್ಪನೆಗೆ ಬಂದರು. ಆದರೆ ಈ ಮಾನುಷೀಕಲ್ಪನೆಯು ನಮ್ಮ ಆರ್ಯರ ಮನಸ್ಸಿಗೆ ಬರಲಿಲ್ಲ. ದೇವರನ್ನು ಹುಡುಕುತ್ತಿರುವವರಿಗೆ ಎಷ್ಟಾದರೂ ಮಾನುಷವಾದ ಈ ಕಲ್ಪನೆಯು ಹೇಗೆ ರುಚಿಸೀತು ? ಕಡೆಗೆ ಅವರು ಬಹಿರ್ಮುಖರಾಗಿರುವದನ್ನು ಬಿಟ್ಟು ಅಂತರ್ಮುಖರಾಗಿ ಅಂತರ್ಲೋಕದಲ್ಲಿ ದೇವರನ್ನು ಶೋಧಿಸಹತ್ತಿದರು. ಆ ಅಂತರ್ಲೋಕವೆಂದರೆ ಆತ್ಮ. ತನಗೆ ಗೊತ್ತಿರುವದೆಂದರೆ ಅದೊಂದೆ. 'ತನ್ನ ತಾನರಿಬಡೆ' ತಾನೆಲ್ಲವನ್ನು ತಿಳಿಯುವನು. ಇಲ್ಲದಿದ್ದರೆ ಇಲ್ಲವೇ ಇಲ್ಲ.

ಋಗ್ವೇದದಲ್ಲಿ ಇದೇ ಪೃಚ್ಛೆಯು ಮತ್ತೊಂದು ತೆರನಾಗಿರುವದು. ಪ್ರಾರಂಭದಿಂದ ಯಾದು ಅಥವಾ ಯಾವದಿರುವದು ? ಈ ಪ್ರಶ್ನೆಯು ವೇದಾಂತದಲ್ಲಿ ಮೂಲದಲ್ಲಿಯೇ ಬಿಡಿಸಲ್ಪಟ್ಟಿತು. ಅದಕ್ಕೆ ಉತ್ತರವೆಂದರೆ ಆತ್ಮ. ಈ ಆತ್ಮವಿಚಾರವೇ ನೀತಿಶಾಸ್ತ್ರದ ತಳಹದಿಯಾಗಿ ಪರಿಣಮಿಸಿತು. ಎಲ್ಲ ಧರ್ಮಗಳಲ್ಲಿ 'ಹಿಂಸೆ ಮಾಡಬೇಡ ಪೀಡಿಸಬೇಡ. ನಿನ್ನ ನೆರೆಯವರನ್ನು ಪ್ರೀತಿಸು' ಎಂದು ಹೇಳಿರುವದು. ಆದರೆ ನನ್ನ ನೆರೆಯವರನ್ನೇಕೆ ಪ್ರೀತಿಸಬೇಕು ! ಪೀಡಿಸಬಾರದೇಕೆ ? ಎಂದು ಕೇಳಿದರೆ ಅದಕ್ಕೆ ಸಮರ್ಪಕವಾದ ಉತ್ತರವು ದೊರೆಯಲಾರದು. ಆದರೆ ಹಿಂದೂ ಜನರು ಬರೀ ಶ್ರದ್ಧಾವಾಕ್ಯಗಳಲ್ಲಿ ನಂಬಿಗೆ ಇಡದೆ ಮಾನಸಶಾಸ್ತ್ರದೃಷ್ಟಿಯಿಂದ ವಿಚಾರಮಾಡಿ ಅದರ ಉತ್ತರವನ್ನು ಹೇಳುವರು. ಆತ್ಮನು ಸರ್ವವ್ಯಾಪಿ ಅನಿಯಂತ್ರಿತ ಅನಂತ ಎಂದು ಹಿಂದುಗಳ ನಂಬಿಗೆಯುದೆ. ಪ್ರತಿಯೊಂದು ಆತ್ಮವು ಆ ಅನಂತ ಆತ್ಮದ ಅಂಶವಾಗಿರುವದು. ಅದರಿಂದ ಎರಡನೆಯವರಿಗೆ ಗಾಯ

ಮಾಡಿದರೆ ತನಗೇ ಅಪಾಯ ಮಾಡಿಕೊಂಡಂತಾಗುವದು. ಈ ಸತ್ಯವೇ ಇಲ್ಲಿ ನೀತಿಗಳ ಬುಡವಾಗಿದೆ.

ಅನೇಕರು ಮನುಷ್ಯನು ಅಸತ್ಯದಿಂದ ಸತ್ಯದ ಕಡೆಗೆ ಹೋಗುತ್ತಿರುವನೆಂದೆನ್ನುವರು. ಒಂದು ವಿಚಾರದಿಂದ ಮತ್ತೊಂದು ವಿಚಾರದ ಕಡೆಗೆ ಹೋಗುವದೆಂದರೆ ಅವನು ಮೊದಲನೆಯದನ್ನು ಅಲಕ್ಷಿಸಬೇಕಾಗುವದು. ಆದರೆ ಅಸತ್ಯವು ಸತ್ಯದ ದಾರಿಯನ್ನು ತೋರಿಸಲಾರದು. ಪ್ರತಿಯೊಂದು ಅವಸ್ಥೆಯನ್ನು ದಾಟುವದೆಂದರೆ ಸತ್ಯದಿಂದ ಸತ್ಯಕ್ಕೇ ಹೋಗುವದು'–ಕೆಳಗಿನ ಸತ್ಯದಿಂದ ಮೇಲಿನ ಸತ್ಯಕ್ಕೆ ಏರುವದು– ಇದಕ್ಕೊಂದು ಉದಾಹರಣೆ–ಒಬ್ಬ ಮನುಷ್ಯನು ಸೂರ್ಯನ ಕಡೆಗೆ ಪ್ರಯಾಣಮಾಡುತ್ತಿರುವನೆಂದೂ ಅವನನ್ನು ಪ್ರತಿ ಹೆಜ್ಜೆಗೆ ಅವನ ಚಿತ್ರ (Photo)ವನ್ನು ತೆಗೆದುಕೊಳ್ಳುತ್ತಿರುವನೆಂದೂ ತಿಳಿಯುವ. ಮೊದಲನೆಯ ಚಿತ್ರವು ಎರಡನೆಯ ಚಿತ್ರದಿಂದ ಬೇರೆಯಾಗಿರುವದು. ಮೂರನೆಯದು ಅದಕ್ಕಿಂತ ಬೇರೆ ಕಡೆಗೆ, ಸೂರ್ಯನನ್ನು ಮುಟ್ಟಿದ ಮೇಲೆ ಹೊಡ ಚಿತ್ರವು ಎಲ್ಲ ಚಿತ್ರಗಳಿಗಿಂತ ಬೇರೆಯಾಗಿರುವದು. ಹೀಗೆ ಕಾಲಪರಿಸ್ಥಿತಿಗಳ ಮೂಲಕವಾಗಿ ಆ ಚಿತ್ರಗಳಲ್ಲಿ ವೈವಿಧ್ಯವು ಕಂಡುಬಂದರೂ ಎಲ್ಲ ಚಿತ್ರಗಳೂ ನಿಜವಾಗಿವೆ. ಹಿಂದುಗಳು ಈ ಪ್ರಕಾರವಾಗಿ ಸತ್ಯವನ್ನು ಕಂಡು ಹಿಡಿದದ್ದರಿಂದ ಅವರು ನೀಚದಿಂದ ಉಚ್ಚದವರೆಗೆ ಎಲ್ಲ ಧರ್ಮಗಳು ನಿಜವೆಂದು ತಿಳಿಯುತ್ತಾರೆ. ಇದರಿಂದಲೇ ಹಿಂದುಗಳಿಗೆ ಧಾರ್ಮಿಕ ಪೀಡನೆಯುಂಟಾಗಲಿಲ್ಲ. ಯಾವನಾದರೊಬ್ಬ ಮಹಮ್ಮದಿಯ ಸಾಧುವಿನ ಪೂಜೆಯನ್ನು ಮಾಡಲು ಅನ್ಯರು ಮರೆತಿದ್ದರೆ ಅದನ್ನು ಹಿಂದುಗಳು ಮಾಡುವರು. ಇಂಥ ಉದಾಹರಣೆಗಳೆಷ್ಟೋ ಇರುವವು.

ಸಕಲ ಮಾನವ ಜಾತಿಯ ಗುರಿಯಾದ "ಐಕ್ಯವನ್ನು" ತಿಳಿಯುವವರೆಗೆ ಪೌರ್ವಾತ್ಯರು ವಿಶ್ರಮಿಸಲಿಲ್ಲ. ಪಾಶ್ಚಾತ್ಯ ಶಾಸ್ತ್ರಜ್ಞರು ಪರಮಾಣುಗಳಲ್ಲಿ ಐಕ್ಯವನ್ನು ಹುಡುಕುತ್ತಿರುವರು. ಆ ಐಕ್ಯವನ್ನು ಒಮ್ಮೆ ಕಂಡು ಹಿಡಿದೆವೆಂದರೆ ಅಲ್ಲಿಗೆ ಮುಗಿಯಿತು. ಅದರಂತೆ ನಾವು ಆತ್ಮನ ಐಕ್ಯವನ್ನು ಕಂಡುಹಿಡಿಯುವದೆಂದರೆ ಅದರಾಚೆಗೆ ಹೋಗಲಾರೆವು. ಜಗತ್ತಿನಲ್ಲಿ ಪ್ರತಿಯೊಂದು ವಸ್ತುವು ಆ ಪರವಸ್ತುವಿನ ಆವಿಷ್ಕರಣವಾಗಿರುವದೆಂಬುದನ್ನು ಇದರಿಂದ ಸ್ಪಷ್ಟವಾಗಿ ತಿಳಿಯಬೇಕು.

ಶಾಸ್ತ್ರಜ್ಞನ ಅಣುಗಳಿಗೆ ಅಗಲುದ್ದಗಳಿಲ್ಲ. ಆದರೆ ಅವುಗಳ ಮಿಲನವಾದರೆ ವಿಸ್ತಾರ ಉದ್ದಗಲುಗಳು ಸಂಭವಿಸುವವೆನ್ನುವದಾದರೆ ಆಧ್ಯಾತ್ಮ ವಿದ್ಯೆಯ ಕಡೆಗೆ ಹೊರಳಬೇಕಾಗುವದು. ಒಂದು ಅಣುವಿನ ಪರಿಣಾಮವು ಮತ್ತೊಂದರ ಮೇಲಾಗುವದಾದರೆ ಅಲ್ಲಿ ಮಧ್ಯವರ್ತಿ ವಸ್ತುವೊಂದು ಇರಬೇಕಾಗುವದು. ಆ ಮಧ್ಯವರ್ತಿ ವಸ್ತುವೆಂದರೆ ಮೂರನೆಯದೊಂದು ಕಣ ಆ ಮೂರನೇ ಅಣುವಿನ ಮೇಲೆ ಉಳಿದೆರಡು ಕಣಗಳ ಪರಿಣಾಮವು ಹೇಗಾಗುವದು ? ಹೀಗಾದರೆ ಪ್ರಶ್ನೆಯ ಉತ್ತರವು ಹಾಗೆಯೇ ಉಳಿಯುವದು. ಪದಾರ್ಥ ವಿಜ್ಞಾನಶಾಸ್ತ್ರಕ್ಕವಶ್ಯವಿರುವ ಗೃಹೀತ ಸಿದ್ಧಾಂತಗಳಲ್ಲಿಯೂ

ದಲ್ಲಿಯೂ ಈ ಪ್ರಕಾರವಾಗಿ ವಿರೋಧಭಾಸವು ಕಾಣುವದು. ಬಿಂದುವೆಂದರೆ ಅದನ್ನು ಭಾಗಿಸಲು ಬಾರದು. ಅದಕ್ಕೆ ಪರಿಮಿತಿಯಿಲ್ಲ. ರೇಖೆಯೆಂದರೆ ಅದಕ್ಕೆ ವಿಸ್ತಾರವಿಲ್ಲ ಆದರೆ ಬರೀ ದೀರ್ಘವಾಗಿದೆ. ಇದೇನು ನಮಗೆ ಕಾಣಿಸುವದೇ ? ಅದು ಹೇಗೆ? ಅವು ಬಹಿರ್ದೃಷ್ಟಿಯಿಂದ ಕಾಣಲಾರವು. ಆ ಮಾನಸಿಕ ಕಲ್ಪನೆಗಳು ಕಡೆಗೆ ನಮ್ಮ ಇಂದ್ರಿಯಗಳಿಗೆ ಗೋಚರವಾಗುವ ವಸ್ತುಗಳ ಆಕಾರವು ಮನೋಮೂಲಕವಾಗಿ ಎಂದು ಕಂಡುಬರುವದು. ನಾನೊಂದು ದೀಪವನ್ನು ನೋಡಿದರೆ ಅದು ಬರೀ ಹೊರಗೆ ಕಾಣುವ ದೀಪವಲ್ಲ. ಹೊರಗಿನದೊಂದು ವಸ್ತುವು ಮನಸ್ಸಿನ ಮೂಲಕ ಆಕಾರ ಹೊಂದಿ ಹಾಗೆ ಕಾಣುವದು.

ಸಾರಾಂಶಃ—ಅಂತ್ಯದಲ್ಲಿ ವಿಜ್ಞಾನ ಶಾಸ್ತ್ರಜ್ಞರು ಆಧ್ಯಾತ್ಮ ಶಾಸ್ತ್ರದ ಕಡೆಗೆ ತಿರುಗಲೇ ಬೇಕಾಗುವದು. ಮಮಾತ್ಮಾ ಸರ್ವ ಭೂತಾತ್ಮಾ.

—ಚಿಕ್ಕಮಕ್ಕಳ ಗುಂಪಿನಿಂದ

---

# ಬರೀ ನಗೆಚಾಟಿಕೆ.

## ಪರಿಹಾರ, ಪ್ರಾಯಶ್ಚಿತ್ತ.

ಆಕೆ:—ಅಯ್ಯೋ ಹುಡುಗ ಮಸೀ ಕುಡಿದನಲ್ಲ!

ಆತ:—(ಪುಸ್ತಕ ತೆರೆದು ನೋಡಿ) ಹೀಗೆಯೇ? ಅಯ್ಯೋ ಸ್ವಲ್ಪ ಒತ್ತುಕರಡ ವನ್ನಾದರೂ ತಿನ್ನಲಿಕ್ಕೆ ಕೊಡು.

ಮುಂಜಾವಿನಲ್ಲಿ ಈತೆರ ಆಡಿದ ಮಾತನ್ನು ಎಂಟುವರ್ಷದ ಮಗ—ಗುಂಡನು— ಕೇಳಿದ್ದನು.

ಆಕೆ:—ಹುಡುಗಾ ಎಂಜಲ ತಿಂದು ಬಿಟ್ಟ.

ಗುಂಡ:—(ಕೂಡಲೆ) ಹಾಗಾದರೆ ಸ್ವಲ್ಪು ಗೋಮಾ ತಿನ್ನಲಿ!

## ಮಾಳಪಕ್ಷ.

ರಾಯರು:—ಏನು ಭಟ್ಟರೇ, ಹೇಳಿ ಬಿಡಿರಿ, ತಮಗೆ ಬೇಕಾದ ಪಕ್ಷನಾವುದು? ಸಹಕಾರವೋ ಅಸಹಕಾರವೋ?

ಭಟ್ಟರು:—ಇವಾವುವೂ ಬೇಡ ಮಹಾರಾಯಾ; ನಮಗೆ ಬೇಕಾದುದು ಭಾದ್ರ ಪದ ವದ್ಯ ಪಕ್ಷವೇ!

### ತೃತೀಯ ಪಂಥ.

ರಾಮೂ:—ಏನೋ ಗೋವಿಂದಾ, ನೀವು ಬೆಲ್ಲ ಹಿಟ್ಟಿನವರೋ ಮಜ್ಜಿಗಿ ಹಿಟ್ಟಿನವರೋ?

ಗೋ:—ಎರಡೂ ಅಲ್ಲ, ಚಹಾ-ಉಪ್ಪಿಟ್ಟಿನವರು!

—ಚಿಕ್ಕ ಮಕ್ಕಳ ಗುಂಪಿನಿಂದ.

### ಧರ್ಮಶಾಲಿ!

ದಾರಿಕಾರ:—ಆ ಮನೆಯುವರು ಹೇಗೆ ಸ್ವಾಮೀ?

ಊರವ:—ಒಳ್ಳೇ ಧರ್ಮಶಾಲಿ!

ದಾ:—ಧರ್ಮಶಾಲಿಯೇ! ಚೆನ್ನಾಯಿತು. ಬೇಕಾದವರು ಇಳಿದುಕೊಳ್ಳಬಹುದು.

ಲಕ್ಷ್ಮಣ.

### ಕವಿತೆ.

ತಾಯಿ:—ಏನು ಮಗೂ? ಅಳುತ್ತಿದ್ದೆಯೇಕೆ? ಅವರು ಬಡದರೂ?

ಮಗೂ:—ಇಲ್ಲ. ಅಪ್ಪಾ ಕವಿತೆ ಹೇಳು ಅಂದಾ. ಹೇಳತಿದ್ದೆ.

### ಒಂದೇ ಜಾತಿ.

ಖಂಡೇರಾಯರು:—ಏನ್ರಿ, ಹಿಂಡುಗಟ್ಟೆ ಎಲ್ಲಿ ಹೊರಟರೀ?

ಹಿಂಡಿನ ಹಿರಿಯ:—ಹೂಂ. ನೀವು ಒಂಟಿಯಾಗಿ ಹೊರಟರಿ.

---

# ಬಾಲವಿಧವೆ.

ಬಾಲೆಯು ತವರೂರಲ್ಲಿ ಶ್ರೀಪತಿಯ ಒಂದು ಗುಡಿ. ಮೂರ್ತಿಯ ಹೊರತು ಗುಡಿಯಲ್ಲಿ ಮೂಸಿ ನೋಡೆನೆಂದರೆ ಮತ್ತಾರು ಇರಲಿಲ್ಲ. ಬಾಲೆಯೇ ಮೊನ್ನೆ ಮೊನ್ನಿನಿಂದ ನಿತ್ಯ ಪೂಜೆಯನ್ನು ಏಕಾಂತ ಸೇವೆಯನ್ನೂ ಆರಂಭಿಸಿದ್ದಳು. ಶ್ರೀಪತಿಯು ತನಗಿನ್ನು ಗತಿಯೆಂದು ಮನೆಯನ್ನು ಮರೆತಾದರೂ ಅವಳು ಒಮ್ಮೊಮ್ಮೆ ಹಾಡುತ್ತ ಕುಳಿತು ಬಿಡುವಳು. ಹಾಡುವ ಆನಂದ- ಛತ್ರದ ಕೆಳಗೆ ಯಾವ ದುಃಖದ ಗಾಳಿ ಮಳೆಯೂ ಅವಳಿಗೆ ತಾಕುತ್ತಿರಲಿಲ್ಲ. ಇದೇ ಸುಖವು ಬಾಳಲಿ ಎಂದು ಅವಳು ಬೇಡಿಕೊಳ್ಳುತ್ತಿದ್ದಳು. ಒಂದು ದಿನ ಇಳಿಹೊತ್ತು. ರವಿರಾಯನು ಆಕಾಶದ ಅಟ್ಟದ ಮೆಟ್ಟಲುಗಳನ್ನು ಇಳಿಯಹತ್ತಿದ್ದನು. ಬಾಲೆಯು ದಿನದಂತೆ ಬಂದು ನೀಲಾಂಜನ ದೀಪವನ್ನು ದೇವರ ಮುಂದೆ ಹಚ್ಚಿ ಕೈಗಳನ್ನು ಮುಚ್ಚಿ ಮುಗಿದು ಧ್ಯಾನಿಸುತ್ತ ನಿಂತಿದ್ದಳು. ಗುಡಿಯ ಹೊರಗಿನ ಆವಾರದಲ್ಲಿ ಒಬ್ಬ ಹೆಂಗಸಿನ ಹಾಡುವ ಸುಳುವು ಕೇಳಬಂತು. ಅವಳು ಮೈಬಾಗಿಸಿ ನೋಡಹೋದಳು. ಯಾರೂ ಕಾಣಲಿಲ್ಲ. ಹಾಗೆಯೇ ನಿಂತಿರು

ವಲ್ಲಿ ವಾದ್ಯಮೇಳದೊಡನೆ ಬಂದು ನಿಬ್ಬಣದ ಜನರೇ ಹಿಂಡು ಹಿಂಡಾಗಿ ಬಂದರು ಬಾಲೆಯು ಮೂಲೆಯಲ್ಲಿ ಸ್ತಬ್ಧಳಾಗಿ ಕುಳಿತಳು. ಆ ಜನರು ವಧೂವರರನ್ನು ಕರೆದು ಕೊಂಡು ತಮ್ಮ ಕುಲದೇವತೆಯ ಹರಿಕೆಗಾಗಿ ದೂರದಿಂದ ಬಂದಿಳಿದರು. ದೇವರಿಗೆ ಮಂಗಳಾರತಿಯಾಯಿತು. ಅಳುಕದೆ ನಿಂತಿದ್ದ ಗಂಟೆಯ ನಾಲಿಗೆಗಳು ಥಣ ಥಣಿಸಿ ದವು. ಹುಡುಗ ಹಿರಿಯರೆಲ್ಲರೂ ಸಣ ದನಿಯಲ್ಲಿ ತಿಳಿಯದಂತೆ ಏನೇನೊ ಶ್ರೀಪತಿಗೆ ಪ್ರಾರ್ಥಿಸಿ ಕೇಳಿದರು. ಬಾಲೆಯ ಕಿವಿಗೆ ಅಷ್ಟು ಸಣ್ಣ ಸಪ್ಪಳವಾದರೂ ವೊಟ್ಟೆ ಯಾಗಿ ಬಂದು ಬಡಿಯುತ್ತಿತ್ತು. ವೊದಲು ಗಾಳಿಯು ತೆಪ್ಪನಾಗಿದ್ದ ಆ ಸ್ಥಳದಲ್ಲಿ ಈಗ ಗಾಳಿಯಕಿಂತ ಮೇಲಾದ ಅಬ್ಬರವು ಉಂಟಾಯಿತು. ವಧೂವರರು ತಮ್ಮ ಲಗ್ನ-ವೇಷ ದಲ್ಲಿಯೇ ಬಂದು ಈರ್ವರೂ ಕೂಡಿಯೇ ಶ್ರೀಪತಿಗೆ ವಂದಿಸಿ, ಎಲ್ಲ ಹಿರಿಯರಿಗೂ ಎರ ಗಿದರು. ಬಿಟ್ಟು ಬಿಡದೆ ಕೈಗಳನ್ನು ಹಿಡಿದುಕೊಂಡು ಒಬ್ಬರನ್ನೊಬ್ಬರು ಮುಚ್ಚುಮ ರೆಯಿಂದ ನೊಡುತ್ತ ನಡೆದರು. ಕತ್ತಲೆಯಲ್ಲಿ ಕುಳಿತಿದ್ದ ಬಾಲೆಗೆ ಅವರ ಸೆಲ್ಲೆಯ ಅಂಚು ತಾಕಿ ಸೆಳೆಯಿತು. ಅವಳು ಕಣ್ಣುತೆರೆದಳು. ಅವರೆಲ್ಲರೂ ಬಾಗಿಲವನ್ನು ದಾಟಿ ದರು. ಏಕಾಕಿನಿಯಾದ ಬಾಲೆಯು ಇನ್ನೂ ಮೂಲೆಯಲ್ಲಿ ಕುಳಿತಿದ್ದಳು. ಅಳುವಿನ ಸೆಲೆಯು ಒಮ್ಮೆಲೆ ಬಂದು ಬಿಟ್ಟಿತು. ಕಾರಣವಿಲ್ಲದೆ ಅಲ್ಲ; ಅದರ ತೆರೆಗಳು ಪೌಳಿ ಯಲ್ಲಿ ಉಳುಕೊಂಡ ಆ ಹಾಡುವ ಹೆಂಗಸಿಗೆ ಮುಟ್ಟಿದವು. ತಾನು ಜಗತ್ತನ್ನು ಬಿಟ್ಟಿ ರುವ ಜೋಗಿತಿಯಾದರೂ ಅವಳು ದಯಾಮಾಯೆಯನ್ನು ಬಿಟ್ಟಿರಲಿಲ್ಲ. ಓಡುತ್ತ ಬಂದು ಬಾಲೆಯ ಮರೆಯಾದ ಮೋರೆಯನ್ನು ಮೇಲಕ್ಕೆತ್ತಿ 'ತಂಗೀ' ನೀನ್ಯಾರು ? ನಿನ್ನ ಹೆಸರೇನು ? " ಎಂದು ಭಯಾತುರಳಾಗಿ ಕೇಳಿದಳು.

ಬಾಲೆಯು ಅಳುಸರದಲ್ಲಿ " ಏನು ನನ್ನ ಹೆಸರೇ ! ಬಾಲ-ವಿಧವೆ ಎನ್ನುತ್ತಾರೆ "

ಹಾಗಂದರೇನಕ್ಕಾ ! ಒಬ್ಬಳೇ ಕುಳಿತು ಅಳುವಿಯಾಕೆ !

" ಒಬ್ಬಳೇ ಆಗಿರುವೆ, ತಾಯೀ ದುಃವಾಗಬೇಕು, ದುಃಖದ ನೆನಪಾಗಬಾರದು"

ಬೆಳೆಯುವ ಹುಡುಗಿಗೆ ಆದ ವಿಪರೀತವನ್ನು ಜೋಗಿತಿಯು ಆಗ ಕಂಡುಕೊಂ ಡಳು. ತಾನೂ ಸನ್ಯಾಸಿನಿಯಾದರೂ ಸಂಸಾರವನ್ನು ಮುಗಿಸಿ ಒಲ್ಲೆಂದೆನಿಸಿ ಆಗಿದ್ದಳು. ಆದರೆ ಸಂಸಾರವಿಲ್ಲದೆ ವೊದಲೇ ಸನ್ಯಾಸವನ್ನು ಕೈಕೊಂಡ ಬಾಲೆಯ ದೈವವು ಅವ ಳಲ್ಲಿ ಮತ್ತಿಷ್ಟು ದಯೆಯ ದ್ರವವನ್ನು ಹುಟ್ಟಿಸಲನುವಾಯಿತು. ಅವಳಂದಳು- "ಬಾಲೇ, ನೀನನ್ನುವದು ಸುಳ್ಳಲ್ಲ; ಆದರೆ ನೆನಪಾದ ದುಃಖವನ್ನು ತಡೆಯಬಾರದು. ಹೆರವರಿಗೆ ಹೇಳಿ ಭಾರವಾದ ಜೀವವನ್ನು ಹಗುರಿಸಬೇಕು. ನಾನೂ ನಿನ್ನಂತೆ ದುಃಖಭಾಗಿನಿಯು. ನನ್ನೆದುರಿಗೆ ಹೇಳು. ನೀನೊಬ್ಬಳೇ ಹೇಗಾದೆ ?."

ಸಂಜೆಯ ಮುಚ್ಚಳವು ಬಿದ್ದಿತು; ಸುತ್ತಲೂ ಕತ್ತಲೆ. ಬಾಲೆ-ಜೋಗಿತಿಯರ ಮುಖವು ಕಾಣುವಷ್ಟು ದೇವರ ಮನೆಯೊಳಗಣ ನಿತ್ಯ ದೀಪವು ಉರಿಯುತ್ತಿತ್ತು. ಎಷ್ಟೋ ರಾತ್ರಿಗಳಲ್ಲಿ ಶ್ರೀಪತಿಯ ಭಜನೆಯಲ್ಲಿಯೇ ಕಾಲಕಳೆದ ಬಾಳೆಗೆ ಮನೆಯ

ಎಚ್ಚರವಿಲ್ಲ ನೆನಪೂ ಇಲ್ಲ. ಅವಳಿಗೆ ಆಗಿದ್ದದ್ದು ತನ್ನ ಹಾಳಾದ ಬಾಳುವೆಯ ನೆನಪು. ಅದನ್ನು ನೆನೆದು ನೆನೆದು ಒಮ್ಮೆ ನಡಗುತ್ತಿದ್ದಳು; ಒಮ್ಮೆ ನಗುತ್ತಿದ್ದಳು. ಜೋಗಿತಿಯು ತಾಸೆರಡು ತಾಸಿನವರೆಗೆ ಬಹಳೇ ಆರ್ಜವದಿಂದಲೂ ಅಂತಃಕರಣದಿಂದಲೂ ಮಗಳಂತೆ ಬಗೆದು ಕೇಳಹತ್ತಲು. ಬಾಲೆಗೆ ಸುಮ್ಮನೆ ಕುದಿಯುವದಾಗಲಿಲ್ಲ. ಶ್ರೀಪತಿಗೆ ಕೈಮು ಗಿದು ಉಕ್ಕುಬಂದಂತೆ ಹೇಳಹತ್ತಿದಳು. " ಅವ್ವಾ ನನ್ನ ಕಥೆಯು ನನ್ನ ಪತಿದೇವನ ಪುರಾಣವು. ಅದನ್ನೆಷ್ಟು ಬಿಚ್ಚಿ ಹೇಳಿದರೂ ನನಗೆ ಸಾಲದು. ಹತ್ತು ದಿನಗಳಾದ ಮೇಲೆ ಗಟ್ಟಿ ಧೈರ್ಯದಿಂದ ಪತಿಯನ್ನು ಮರೆತವಳು ಇಂದಿನವರೆಗೂ ನಾನು ಶ್ರೀಪತಿಯ ಸೇವೆಯಲ್ಲಿದ್ದೆ. ಈ ಹೊತ್ತೇ ಆ ಸುಟ್ಟು ನಿಬ್ಬಣದ ಜನರೇಕೆ ?......ಅಯ್ಯೋ ಅವ ರಿಗೇಕೆ ಅನ್ನುವದು. ನಾನೇ ಸುಟ್ಟ......"ಎಂದು ಅಳುತ್ತೆಯೇ ನುಡಿಯುವಾಗ ಜೋಗಿ ತಿಗೆ ತಿಳಿಯಲಿಲ್ಲಿ.

" ಅದೇನು ? ಯಾವ ಜನರು ? " ಎಂದು ನಡುವೇ ವಿಚಾರಿಸುತ್ತ ಅವಳ ಜಾತಿ ನೀತಿಯನ್ನು ನೋಡದೆ ಹತ್ತರಕ್ಕೆ ಹೋಗಿ ಮುಟ್ಟಿ ಕೇಳಿದಳು. ನಾಲ್ಕೈದು ನಿಮಿಷಗಳ ವರೆಗೆ ಯಾರೂ ಕದಲಲಿಲ್ಲ.

"ಅತ್ತು ಬರುವದೇನು? ಜೋಗಿತಿಯ ಮುಂದೆ ಆಡಿದರೆ ಹೋದ ಆನಂದವಾ ದರೂ ಮತ್ತೆ ಬರುವದಿಲ್ಲವೇ? ಪತಿಯ ಸಂದರ್ಶನವು ಸ್ವಲ್ಪು ಹೊತ್ತಾದರೂ ಲಭಿಸುವ ದಿಲ್ಲವೆ?" ಎಂದು ನಾಲ್ಕೈದು ನಿಮಿಷಗಳ ಬಿಡುವಿನಲ್ಲಿ ಯೋಚಿಸಿ, ಬಾಲೆಯು ದನಿ ಯನ್ನೇ ಮಾರ್ಪಡಿಸಿ, ಸಂಪೂರ್ಣ-ಸಂತೋಷದ ಬೇರೆ ನಾಲಿಗೆಯನ್ನೇ ತೊಟ್ಟವಳಂತೆ ಜೋಗಿತಿಗೆ ಹೇಳತೊಡಗಿದಳು.

"ಅವ್ವಾ, ಶ್ರೀಪತಿಯ ದರ್ಶನಕ್ಕೆ ಇದೇ ಈಗ ಕೆಲವು ನಿಬ್ಬಣದವರು ಬಂದು ಅಲ್ಪಕಾಲದಲ್ಲಿ ಅತ್ಯಂತಮಹೋತ್ಸವವನ್ನು ಮಾಡಿಹೋದರು. ಅವರ ಜತೆಯಲ್ಲಿ ಬಂದ ಮದುಮಕ್ಕಳು ನಲುಮೆಯಿಂದ ದೇವರಿಗೆ ಕೈಮುಗಿದು, ಹಿರಿಯರಿಗೆ ಬಾಗಿ ತಮ್ಮ ಸಂಸಾರಭವನದ ಹೊಸತಿಲವನ್ನು ಹತ್ತಲಿಕ್ಕೆ ಹೊರಟುಹೋದರು. ಅವ್ವಾ, ಅವರನ್ನು ನೋಡಿ ನನ್ನ ಪತಿಯ ಪೂರ್ವ—ವೈಭವವು ನನಗೆ ನೆನಪಾಯಿತು. ಅದೆಷ್ಟೇ ಸಣ್ಣ ಸಂಸಾರವಾಗಿ ಹೋದರೂ, ಅದರ ಸುಖ-ಸಂತೋಷಗಳೇನು ಸಣ್ಣವಲ್ಲ. ಈಗಲಾ ದರೂ ನಾನು ನನ್ನ ಪತಿಯನ್ನು ಕಾಣಬಲ್ಲೆನು. ಅವರೆಷ್ಟು ಸುಂದರರು ? ಎಷ್ಟು ಸಾತ್ವಿಕರು ! ಅವ್ವಾ ಕೇಳಿರಿ. ಅವರ ಮನೆತನದ ಇತಿಹಾಸವು ವಿಚಿತ್ರವಾಗಿದೆ. ನಾನು ಮದುವೆ ಮಾಡಿಕೊಂಡು ಅತ್ತೆಯ ಮನೆಯನ್ನು ಮೊದಲನೆಯ ಸಲ ಸೇರಿದೆ. ಅವರ ಮನೆತನದ ಸುದ್ದಿಯೇನೂ ನನಗೆ ಗೊತ್ತಿರಲಿಲ್ಲ. ಲಗ್ನವಾದ ಮರುದಿನವೇ ನನ್ನನ್ನು ಕರೆತಂದಿದ್ದರಿಂದ ಲಗ್ನದ ಬಂಧುಬಳಗವು ಮನೆಯನ್ನು ತುಂಬಿತ್ತು. ಹಳೆ ಮಾದರಿಯ ಹಿರಿ ಮನೆಯನ್ನೂ ಛಟ್ಟಿದ ದನಕರುಗಳನ್ನೂ ನೋಡಿ ನನಗೆ ಭಾಗ್ಯದ ಪತಿಯು ಸಿಕ್ಕನೆಂದು ನಾನು ಹಿಗ್ಗಿದೆನು. ಮುಂದೆ ಹದಿನೈದು ದಿನಗಳಲ್ಲಿ ಅಪ್ಪರ

ಸಂಖ್ಯೆಯು ಕರಗಿ ಹೋಯಿತು. ನಾನೂ ನನ್ನ ಪತಿಯೂ, ಪತಿಯ ತಮ್ಮಂದಿರೂ, ಪತಿಯ ಕಕ್ಕನ ಕುಟುಂಬವು ಇಷ್ಟು ಉಳಿದೆವು. ಹೀಗೇಕೆ ದೊಡ್ಡ ಮನೆಯು ತೆರವಾಗಿ ಭಣಭಣವೆನ್ನುವದೋ, ಮೊದಲು ದೊಡ್ಡ ಕುಟುಂಬವಿರಬೇಕಲ್ಲವೆ ? ಎಂದು ನಾನು ಆಶ್ಚರ್ಯದಿಂದ ಅತ್ತೆಯವರನ್ನು ಕೇಳಿದೆನು. ಅವರು ಕಕ್ಕುಲತೆಯಿಂದ ಬಳಿಯಲ್ಲಿ ಕುಳ್ಳಿರಿಸಿಗೊಂಡು ನನಗೆಲ್ಲವೆನ್ನೂ ಚಿತ್ರಿಸಿ ಹೇಳಿದರು. ಈ ಮನೆಯಲ್ಲಿ ಐದಿಪ್ಪತ್ತು ಜನರಂತೆ, ಕಾಳುಕಡಿಗಳ ಚೀಲಗಳನ್ನು ಹಗೆ ಸಾಲದೆ ಹೊರಗೆ ಒಟ್ಟಿದ್ದರಂತೆ. ಎಮ್ಮೆ ಆಕಳುಗಳ ಹಾಲನ್ನಂತೂ ಬೇಕಾದಾಗ ಹಿಂಡಿ ತರಿಸುತ್ತಿದ್ದರು. ಹುಡುಗರು ಅಳಹತ್ತಿದರೆ ಆಕಳದ ಮೊಲೆಗೇ ಶ್ರೀಮಂತ ಸೊಸೆಯರು ಕರೆದೊಯ್ದು ಹಚ್ಚುತ್ತಿದ್ದರಂತೆ. ಮನೆಯಲ್ಲಿ ಸ್ನೇಹವೆಷ್ಟು! ಹೊಂದಿಕೆಯುಷ್ಟು ? ಅವರ ಅಜ್ಜಿಯೇ ಎಲ್ಲರಿಗೂ ಹಿರಿಯಳಾಗಿ ಓರಣದಿಂದಲೂ ಸಹನದಿಂದಲೂ ಪ್ರಪಂಚವನ್ನು ನಡೆಯಿಸುತ್ತಿದ್ದರಂತೆ. ಅಂಥ ಮನೆತನಕ್ಕೆ ಏನೂ ಕಾರಣವಿಲ್ಲದೆ, ಗಿಡದಿಂದ ಪಟಪಟನೆ ಹನಿಗಳು ಉದುರುವಂತೆ, ಮನೆಯ ಮುಖ್ಯಸ್ಥರು ನೆಗೆದು ಹೋದರು. ಈ ಕಾಲನ ಕೈಯಲ್ಲಿಯೇ ಸಿಕ್ಕು ನನ್ನ ನಿಜವಾದ ಅತ್ತೆ ಮಾವಂದಿರೂ ಇಲ್ಲದಾದರು. ಆಗ ನನ್ನ ಪತಿಯು ಸಣ್ಣ ವಯಸ್ಸಿನವರಿದ್ದರು. ಮೈಯೂ ಬೆಳಿಗೆಯದಲ್ಲವಂತೆ ಸಣ್ಣವರಾಗಿ ಶಾಲೆಯಲ್ಲಿಯೇ ಕಲಿಯುತ್ತಿದ್ದರು. ಎರಡು ಮೂರು ವರುಷಗಳವರೆಗೆ ನನ್ನ ಈಗಿನ ಮಾವಂದಿರು ತಾವೇ ಅಣ್ಣನ ಮಕ್ಕಳನ್ನು ಸಾಕಿ ಸಲುಹಬೇಕೆಂದು ನಿಸ್ಪೃಹ ಮನಸ್ಸಿನಿಂದ ಅವರ ಹೊಲಗಳನ್ನು ಸಾಗುಮಾಡಿ ಬಂದ ಉತ್ಪನ್ನದಲ್ಲಿ ಅವರ ಹೊಟ್ಟೆ ಬಟ್ಟೆಗೆ ಕೊಟ್ಟು ಉಳಿತಾಯವನ್ನು ಕಾದಿಡುತ್ತಿದ್ದರು. ಆದರೂ ಜನರ ಬಾಯಿಯನ್ನು ಹೊಲಿಯುವರಾರು?! ಅದರಲ್ಲಿ ಇಂಥ ಬಿರುಕುಗಳಿದ್ದರೆ ಆಯಿತು, ಮತ್ತಿಷ್ಟು ತಿವಿದು ತಿವಿದು ಸಜ್ಜನರ ಹೃದಯವನ್ನು ಪೊಳ್ಳುಮಾಡಿಕೊಡುವರು. ಹುಡುಗರ ಹಣವನ್ನು ಮಾಯುಮಾಡುವರೆಂದು ಅಪವಾದದ ಸಂಶಯವು ಮಾವಂದಿರಿಗೆ ಬರಹತ್ತಿತು. ಆಗ ಹಿರಿಮಕ್ಕಳಾದ ನಮ್ಮವರ ಲಗ್ನವನ್ನು ಮಾಡಿ ಅವರನ್ನು ಹಾದಿಗೆ ಹಚ್ಚಿ ದೂರಾಗುವದೇ ಸರಿಯೆಂದು ಚಿಂತಿಸಿ ಅವರು ಅತ್ತಿತ್ತ ಹುಡುಕಿದರು. ಇವರು ತಿರುಗಿ ಕಾಲೇಜಿನಲ್ಲಿ ಕಲಿಯಲಾರಂಭಿಸಿದ್ದರು. ಆದರೂ ತಕ್ಕ ವಧುವೇ ದೊರೆಯಲಿಲ್ಲವಂತೆ. ನಾನು ಕಡೆಗೆ ಮದುವೆ ಯಾದೆ. ಮುಂದಿನ ಸುಖ-ಸಂಗತಿಗಳೆಲ್ಲ ನನಗೆ ಗೊತ್ತು. ನಮ್ಮ ಸಂಸಾರವನ್ನು ಬೇರೆ ಮಾಡದಿದ್ದರೂ, ದುಃಖದ ಬೇನೆಯಿಂದೆದ್ದ ಅತ್ತೆಂದಿರು ನನಗೆ ಸಾಕಷ್ಟು ಹಿರಿಯತನವನ್ನು ಕೊಟ್ಟಿದ್ದರು. ಇಷ್ಟುದಿನ ಸಂತ್ರೋದ್ಧಾರವಾಗಿ ಶೋಕದಲ್ಲಿಯೇ ತೋಯಿಸಿಕೊಂಡ ಮಾವಂದಿರು ನಾನು ಬರುತ್ತಲೇ ಹರ್ಷವನ್ನು ಹೊಂದಿದರು. ಮನೆಯಲ್ಲಿ ಮತ್ತೆ ನಗೆ—ನೋಟಗಳ ಬಿಸಿಲು ಬೀಳಹತ್ತಿತು. ನನಗೆ ಮೊದಲಿನಿಂದಲೂ ಕೆಲಸಬೊಗೆಸೆಯಲ್ಲಿಯೂ ಸೇವೆ—ಶುಶ್ರೂಷೆಯಲ್ಲಿಯೂ ಅಪೇಕ್ಷೆ. ನಾನು ಉಸ್ಸೆನ್ನದೆ ಪತಿರಾಯನನ್ನು ಅವರ ತಮ್ಮಂದಿರನ್ನು ಹೆಚ್ಚಾಗಿ ಸೇವೆ ಮಾಡುತ್ತಿದ್ದೆನು.

...ನಾನು ಹೇಳಿದೆನಲ್ಲವೆ? ಪತಿರಾಯರು ಎಷ್ಟು ಸುಂದರರು? ಎಷ್ಟು ಸಾತ್ವಿಕರು ಎಂದು. ಆದರೆ, ತಾಯೀ, ಅವರ ಜತೆಗೆ ಎಷ್ಟು ಮುಗ್ಧರು ಎನ್ನುವಿ? ಯಾವಾಗಲೂ ಏನೋ ಆಳವಾದ ವಿಚಾರದಲ್ಲಿರುತ್ತಿದ ರು. ಜನರ ಸಂಗತಿ-ಸಹವಾಸವು ಕಡಿಮೆ ಯಾದಷ್ಟು ಅವರಿಗೆ ಸಮಾಧಾನ. ಅವರ ಕೂಡ ಮಾತುಗಳೆಂದರೆ ಬೆಲೆಕೊಟ್ಟು ಕೊಂಡಂತೆಯೆ. ನನ್ನಂತಹಳ ಮೇಲೆ ಎಷ್ಟು ಪ್ರೀತಿಯ ದೃಷ್ಟಿಯನ್ನು ಚೆಲ್ಲುತ್ತಿದ್ದರೂ ಹೃದ್ಗತವಾದ ಮಾತುಗಳನ್ನು ಹೇಳುತ್ತಿದ್ದಿಲ್ಲ. ಒಂದು ಆಹ್ನಿಕ ಪುಸ್ತಕವನ್ನು-ಮಾಡಿ ಅದ ರಲ್ಲಿ ಮಾತ್ರ ಕೈನೋಯುವತನಕ ಬರೆದೇ ಬರೆಯುತ್ತಿದ್ದರು. ಅದರಲ್ಲಿ ದೊಡ್ಡ ದೊಡ್ಡ ಕವಿತೆಗಳೂ, ಹಾಡುಗಳೂ ಲೇಖಗಳೂ ಇರುತ್ತಿದ್ದವು. ಲಗ್ನದ ಮೇಲೆಯೂ ಪ್ರಶ್ನಾ ರ್ಥಕ ಚಿಹ್ನವನ್ನು ಹಾಕಿ 'ಲಗ್ನವೇ?' ಎಂದು ಬರೆದ ಬರೆಹವನ್ನು ನಾನೊಮ್ಮೆ ಓದಿದೆ. ನನಗೇನೂ ಎನಿಸಲಿಲ್ಲ. ಹಸಿವೆ-ನೀರಡಿಕೆಗಳನ್ನೂ ದಣಿಕೆ-ದಣಿವುಗಳನ್ನೂ ಹೊಟ್ಟೆ ಯಲ್ಲಿಯೇ ಕಾಯುತ್ತಿದ್ದರು. ತಲೆನೋವಾದ್ದನ್ನು ಹೇಳಕೂಡದೇ ? ತಾಯ್ತಂದೆಗಳಿ ದ್ದಾಗ ಕೂಡ ಇದೇ ಕಟ್ಟಿನ ಸ್ವಭಾವ. 'ಹೀಗಾದರೆ ನೀವು ಲೌಕಿಕದಲ್ಲಿ ನಾಡೆರೆಯರ ನಿಮ್ಮ ಮನೆತನವನ್ನು ಮುಂದಕ್ಕೆ ತರುವಿರೇನು ? ಅದಕ್ಕೆಷ್ಟು ಹರಟೆ ಬೇಕು, ಬಾಯಿ ಯೆಷ್ಟು ಸದಾ ದುಡಿಯುತ್ತಿರಬೇಕು.' ಎಂದು ನಾನು ವಿನೋದದ ದನಿಯಲ್ಲಿ ಕೆಣಕು ತ್ತಿದ್ದೆ. 'ನಾನೆಲ್ಲ ಮಾಡುವೆನು' ಎಂದವರು ವಿರಳವಾದ ಕಿರಿ ನಗೆಯನ್ನು ನಗುತ್ತಿದ್ದರು. ಸಾಕಷ್ಟು ವಯಸ್ಸಾದ ಮೇಲೆ ಕಾಲೇಜನ್ನು ತೊರೆದು ಅವರು ಮನೆಯನ್ನೇ ಹಿಡಿದಿ ದ್ದರು. ಅದರಿಂದೇನು ಅಪಾಯವಿದ್ದಿಲ್ಲ. ಕಕ್ಕಂದಿರಿಗೆ ಬೇಕಾದ ಕಾಯಕವನ್ನೇ ಅವರು ಸಂತೋಷದಿಂದ ತಕ್ಕೊಂಡಿದ್ದರು. ಮನೆಯಲ್ಲಿಯೇ ಇದ್ದು ಕಕ್ಕಂದಿರ ಉಪದೇಶದಿಂದ ವ್ಯವಹಾರ ಚತುರರಾಗಿ ಹಿಂದಿದ್ದ ಏಳ್ಗೆಯನ್ನು ಇಂದಿನದಾಗಿ ಮಾಡಬೇಕೆಂದು ಹಂಬ ಲಿಸಿದ್ದರು. ಈ ಮಾತನ್ನು ಅವರಿಂದ ಅರಿತುಕೊಳ್ಳಬೇಕಾದರೆ ಚಂದ್ರಹಾರವನ್ನು ಕಸಿ ದುಕೊಂಡಷ್ಟು ಶ್ರಮವಾಯಿತು. ಆದರೂ ಅರಿತಮೇಲೆ ನನ್ನ ಕೇತವರೂರನ್ನು ಮರೆತು ಉಬ್ಬಿನಿಂದ ನಾನು ಪತಿಗೃಹದ ಹಿತಕ್ಕಾಗಿ ಹೆಣಗಲೆಂದು ಹೆಚ್ಚೆಚ್ಚು ಮನಸ್ಸು ಮಾಡಿ ದೆನು. ಆನಂದವೇ ಆನಂದವಾಗಿತ್ತು. ಎಂದು ಮುಂದಿನ ಕಥೆಯನ್ನು ಹೇಳುವದಕ್ಕೆ ಏನೋ ಮನಸ್ಸಿನಲ್ಲಿದ್ದ ಭೂತವು ಬಾಯಿಯನ್ನು ಹಿಡಿದಿತು. ಮೋರೆಯ ಮೇಲಿನ ಹಿಗ್ಗು ತೆಗ್ಗು ತೆವರುಗಳಿಂದ ಸಣ್ಣದಾಯಿತು. ಇದನ್ನು ನಿಟ್ಟಿಸಿ ಜೋಗಿತಿಯು ಕಣ್ಣು ಗಳನ್ನು ಚಾಚಿ ಕೇಳಿದಳು "ಏನೇ ಬಾಲೇ? ನಿಂತೆಯೇಕೆ? ಇಂಥ ನಿನ್ನ ಹೆಚ್ಚಿನ ಬಾಳು ವೆಯ ಬೆಳದಿಂಗಳನ್ನು ಯಾವ ರಾಹುವು ನುಂಗಿದನೇ ? ಯಾವ ಕೇತುವು ತುಡುಕಿ ದನೇ? " ಎನ್ನುವದಕ್ಕೆ ಆನಂದದ ಬೆಣೆಯು ಒತ್ತಿಕ್ಕಿದ್ದ ನೆನಪಿನ ನಲ್ಲಿಯು ಹೊರ ಚಿಮ್ಮಿತು. ಮತ್ತೆ ನಾಲ್ಕೈದು ನಿಮಿಷಗಳವರೆಗೆ ಯಾರೂ ಕದಲಲಿಲ್ಲ.

( ೩ )

ಬಾಲೆಯು ಎಚ್ಚತ್ತಳು. “ ಜೋಗಿತೀ, ನೀನು ಹೊತ್ತಿಸುವ ಮಾತುಗಳನ್ನಾಡಿ ನನ್ನನ್ನು ಬೇಡಾದ ಬೆಂಕಿಯ ಮನೆಗೆ ಒಯ್ಯಬೇಡ. ನಾನೇ ಒಂದೊಂದು ಹೇಳುತ್ತೇನೆ ಕೇಳು ” ಎಂದು ನಿಂತಿದ್ದ ನಾಲಿಗೆಯ ಪ್ರವಾಹವನ್ನು ಮತ್ತೆ ಹರಿಬಿಟ್ಟಳು.

“ ಒಮ್ಮೆ ಹೀಗಾಯಿತು. ಮಾತಿಲ್ಲದೆ, ಕಥೆಯಿಲ್ಲದೆ, ಯತಿಯಂತೆ ಆಚರಿಸುವ ಪತಿರಾಯನು ಊಟವನ್ನೇ ತುಸುತುಸು ಮಾಡಹತ್ತಿದನು. ಮಧ್ಯಾಹ್ನದ ಒಂದೂಟ ವನ್ನು ಜಗಿದು ಜಗಿದು ಮಾಡುತ್ತಿದ್ದನು. ರಾತ್ರಿಯಲ್ಲಿ ಊಟವೇ ಇಲ್ಲ. ಇಲ್ಲವೆ ಹಾಲು, ಇಲ್ಲವೆ ಹಣ್ಣು-ಇವುಗಳೂ ಕೂಡ ಒಮ್ಮೊಮ್ಮೆ ಬೇಡ—ಹೀಗೆ ಇರಹತ್ತಿದನು. ಯಾಕೆಂ ದು ಕಕ್ಕನೂ ಕಕ್ಕಿಯೂ ಕೇಳಿದರೆ ‘ ರಾತ್ರಿಯ ಊಟವನ್ನು ಮಾಡಬಾರದು, ಪಚ ನಕ್ಕೆ ಜಡವಾಗುತ್ತದೆ. ಉಂಡರೆ ಒಮ್ಮೆ ಸವಿಯಾಗಿ ಉಣ್ಣಬೇಕು ’ ಎಂದು ತತ್ವ ವನ್ನು ಅತ್ಯಾಸ್ಥೆಯಿಂದ ಹೇಳಿ ಬಾಯ್ಮುಡಿಯನ್ನು ಹಾಕುವನು, ಎಂದೂ ಬಾಯಿ ಬಿಚ್ಚಿ ಆಡದ ಪ್ರಾಣಿಯು ಇಂದು ಆಡಿದ್ದಕ್ಕೆ ಹಿರಿಯರು ಮನ್ನಣೆಯಿಂದ ನಂಬುತ್ತಿದ್ದರು. ಅಂತರಂಗದಲ್ಲಿ ಕರೆದು ನಾನು ಕೇಳಿದರೂ ಯಾವದೋ ಆರೋಗ್ಯದಿಗ್ದರ್ಶನ ಪುಸ್ತಕ ವನ್ನು ತೋರಿಸಿ ಊಟವನ್ನು ಕಡಿಮೆ ಮಾಡಿದಷ್ಟು ಹೆಚ್ಚು ಆರೋಗ್ಯವೆಂದು ಹೇಳಿ ಮುಗಿಸಿದರು. ಓದಿದ್ದು ಮನಸ್ಸಿಗೆ ಸರಿದೋರಿದರೆ ತೀವ್ರವೇ ಮಾಡಿ ನೋಡುವದ ರಲ್ಲಿ ಅವರಂಥ ದಕ್ಷರನ್ನು ನಾನು ಕಾಣಲಿಲ್ಲ. ಮಿತಾಹಾರಿಯಾಗಬೇಕೆಂದು ಗೀತೆಯಲ್ಲಿ ಬಂದಿದೆ. ಅದು ಒಪ್ಪಿತೇ. ಆದರೆ ಅಂಜಿ ಅಂಜಿ ಯಾರೂ ಕೇಳದೆ ಹಾಗೇ ಬಿಡಲು, ಹೊಟ್ಟೆಯುಕಟ್ಟಿ, ಬಾಯಿಯ ರುಚಿಯು ಬಾಡಿ ದೇಹವೇ ಕೊರಗಹತ್ತಿತು. ಮೋರೆಯ ಮೇಲೆ ಶಾಂತವಾದ ಕಳೆಯಿತ್ತು. ಮುಖಚರ್ಯೆಯು ಒಣಗಲಿಲ್ಲಮಾತ್ರ. ರೋಗವಿ ಲ್ಲದಿದ್ದರೂ ಆರೋಗ್ಯವಿರಲಿಲ್ಲ. ಓದುಬರಿಹಕ್ಕೆ ಮಾತ್ರ ಪ್ರಕೃತಿಯು ಸಿದ್ಧವೆ. ಗೀತೆ ಯನ್ನೆಲ್ಲ ಪೂರ್ಣವಾಗಿ ಮುಖಪಾಠ ಮಾಡಿದರು. ವೇದೋಪನಿಷತ್ತುಗಳನ್ನು ಓದಿ ಮನಸ್ಸಿನಲ್ಲಿ ಮೂಡಿಸಿದರು. ಕಾಗದಗಳನ್ನು ಗಡ್ಡಿಗಟ್ಟಲೆಯಾಗಿ ಬರೆದಿಟ್ಟರು. ಆದರೆ ಅದೇ ಬೇನೆಗೆ ಮುಳುವಾದೀತೆಂದು ನಾನು ಚಿಂತಿಸುತಲಿದ್ದೆ. ಚಿಂತೆಯಲ್ಲಿ ಹದಿನೈದು ವರುಷದವಳಾದರೂ ನನಗೆ ಬೇರೆ ಸುಖದ ಆಶೆಯಿಲ್ಲ. ಆದರೂ ಕೇಳುತ್ತದೆಲ್ಲಿ? ಬಹಳ ದಿನದಮೇಲೆ ತವರುಮನೆಗೆ ಹೋದವಳು ಅಲ್ಲಿಯೇ ವೈನೆರತೆ. ನಮ್ಮ ಬಾಂಧವ್ಯಕ್ಕೆ ಉತ್ಸವವೇ ಆಯಿತು. ಅವರು ನಮ್ಮಲ್ಲಿಗೆ ತಿಳಿಸಿ, ನನ್ನೊಡನೆ ದಾಂಪತ್ಯ—ಸುಖದ ಮಾತುಗಳನ್ನು ಚೇಷ್ಟೆಯಿಂದ ವೆಗ್ಗಳವಾಗಿ ಆಡುತ್ತಿದ್ದರು. ನನಗೇಕೋ ಸೇರಲಿಲ್ಲ. ‘ನನ್ನ ಪೋಲಿಗೂಸು ನಡೆಯಹತ್ತುವದರೊಳಗೆ ನೀನು ಮಗನನ್ನು ಹಡೆದು ಬರಬೇಕು ನೋಡು’ ಎಂದು ನಮ್ಮಕ್ಕನು ಬಯಕೆಯನ್ನು ತೋರಿಸಿ ಆಡಿದಳು. ನಾನು ಆ ಕಲ್ಪ ನೆಗೇ ನಕ್ಕೆನು. ಸ್ವಲ್ಪುದಿವಸಗಳಿಂದ ಅತ್ತಕಡೆಯಿಂದ ಎಂದಿಲ್ಲದೆ ಮನೆಗೊಂದು ಕಾಗ

ದವು ಬಂದಿತು. ನಾನೇ ಒಡೆದೆ. ಪತಿರಾಜರ ಒಂದು ಗುಟ್ಟನ್ನೇ ಒಡೆದಂತಾಯಿತು. 'ನಾನು ಕ್ಷೇಮ, ತಾವೆಲ್ಲರೂ ಹೇಗೆ? ' ಎಂದಿಷ್ಟು ವಾಕ್ಯವು ನನಗೆ ರುಚಿಸಿತು. ಹೃದಯಕ್ಕೆ ಹೂಸಿ ಎರೆದಷ್ಟು ಆಹ್ಲಾದವಾಯಿತು. ನಾನು ಹಣೆಗೆ ಹಚ್ಚಿಕೊಂಡು ಮುದ್ದಾಡಿದೆ. ನನ್ನ ಕುಂಕುಮದ ಅರ್ಧಾಂಗವನ್ನು ಅದಕ್ಕೆ ಕೊಟ್ಟೆ. ಮುಂದೆ ಅನುಕ್ರಮವಾಗಿ ಸಮಾಜದ ನಿಯಮಗಳೆಲ್ಲ ಆಗಬೇಕಲ್ಲವೆ ? ಫಲಶೋಭನಕ್ಕಾಗಿ ನನ್ನ ತಾಯಿಯವರು ಹಾರೈಸಿದರು. ನಮ್ಮ ಹತ್ತುಗಡೆಯವರು ಅನುಮೋದಿಸಿದರು. ಆಗಂತೂ ತಂದೆಯವರು ಪುಷ್ಟೀಕರಿಸಿ ಸರ್ವಾನುಮತದಂತೆ ಮಾಡಲಿಕ್ಕೆ ಸಿದ್ಧರಾದರು. ನಮ್ಮ ಮಾವಂದಿರಿಗೆ ಪತ್ರಬರೆದರು. ಅವರೂ ಆದರದಿಂದ ಹೂಂ ಎಂದು ಉತ್ತರವನ್ನು ಬರೆದು, ಪತಿರಾಯನಿಗೆ ಹೇಳಿದರಂತೆ, ಕೇಳಲಿಲ್ಲ. ಅವರು ಮೊದಲು ಮರೋ ಒಲ್ಲೆಂದರು. ಆದರೆ ಬೇಡವೆನ್ನುವ ಹೊರತು ಬೇರೆ ಕಾರಣವೇ ಇಲ್ಲ. ಮೊದಲೇ ಬಿಚ್ಚಿಹೇಳುವ ಜಾತಿಯು ಅದಲ್ಲ. ಅದರಲ್ಲಿ ಇಂಥ ಸೂಕ್ಷ್ಮ ಕೂಟದ ಮಾತು. ಸಮರ್ಥನೆಗೆ ಧೈರ್ಯದಿಂದ ನಿಂತರೆ, ಕೇಳುವ ಹಿರಿಯರೂ ವಿರುದ್ಧ ಪಕ್ಷದ ವಕೀಲರಂತೆ ಸವಾಲು ಹಾಕುತ್ತಿರುತ್ತಾರೆ. ಇದನ್ನು ನನ್ನ ತಾತಯ್ಯನ ವಕೀಲಿಯ ವರ್ತನದಿಂದಲೇ ನಾನು ಕಲಿತುಕೊಂಡೆನು. ತತ್ವಗಳನ್ನು ಹೇಳಿದರೆ ಧಿಕ್ಕರಿಸುವರಂತೆ. ಅಂತೂ ಕಕ್ಕನ ಮಾತಿಗೆ ಮಾನವನ್ನು ಕೊಡಲಿಕ್ಕೆ ಪತಿರಾಯನು ಒಪ್ಪಿದನು. ತಾಯಿಯು ಮನೆಯಲ್ಲಿದ್ದಾಗ ಇದೆಲ್ಲ ಆಗುವದೆಂದು ನನಗೆ ಗೊತ್ತಿದ್ದರೂ 'ಕ್ಷೇಮವಾಗಿದ್ದಾರಲ್ಲ; ಏನು ಚಿಂತೆ' ಎಂದು ನಾನು ಕೊರತೆಪಡಲಿಲ್ಲ. ಇದಾದಮೇಲೆ ಮತ್ತೆ ಮಾತಾಡಿಸಿದ್ದೆಂದರೆ ಪ್ರಸ್ಥದ ದಿನವೇ. 'ಇನ್ನೂ ಮುಖವು ಕಂದಿದಂತಿದೆಯಲ್ಲ' ಎಂದು ರಹಸ್ಯದಲ್ಲಿ ಕೇಳಿದೆ. 'ಅದೇನಿಲ್ಲ; ದಿನಗಳೇ ಹಾಗಿವೆ' ಎಂದು ಹಿಂದುಮುಂದೆ ನೋಡಿ ಆಡಿದರು. ನನಗೆ ನಸು ತಿಳಿಯಿತು. ಆದರೆ, ತಾಯೀ, ನಾನೂ ಹುಚ್ಚಿಯು, ಪತಿಯು ಹಿತೈಷಿಣಿಯಲ್ಲ. ನಾಲ್ಕೈದು ತಿಂಗಳಾಗುತ್ತಲೆ ಮಿತಾಹಾರದಿಂದ ಅಂಕುರಿಸಿದ ಅಸ್ವಾಸ್ಥ್ಯವು ನನ್ನ ಪಾಪದೊಡನೆ ಬೆರೆತು ಬೆಳೆಯುತ್ತ ಸಾಗಿತು. ಆದರೆ ಅವರು ತೋರಗೊಡಲಿಲ್ಲ. ಇದೇ ಕೆಟ್ಟ ಹಣೆಬರಹ ತಾಯೀ. ಅಡ್ಡಾಡಲಿಕ್ಕೆ ಮೂರುನಾಲ್ಕು ತಾಸು ಹೋಗಬೇಕು; ಬೆಳಸಿಯನ್ನು ತಿಂದು ಬಂದೆನೆಂದೆನ್ನಬೇಕು. ಆದರೆ ಅದೆಲ್ಲ ಸುಳ್ಳು. ಅಷ್ಟು ಅವಧಿಯಲ್ಲಿ ಒಂದು ಮೈಲು ನಡೆಯಬೇಕಾದರೆ 'ರಾಮಕೃಷ್ಣ' ವಾಗುತ್ತಿತ್ತು. ಭಾವಂದಿರ ನಗೆ ಮಾತಿನಿಂದಲೇ ನನಗೆ ತಿಳಿಯುತ್ತಿತ್ತು. ಆದರೆ ನಗೆಮಾತಿಗೆ ನಾನು ನಗೆಚಾಟಕೆಯೆಂದು ಬಗೆದೆ. ಒಬ್ಬ ಗುರುತಿನ ವೈದ್ಯರಿಗೆ ಫಲಾಹಾರಕ್ಕೆ ಬನ್ನಿರೆಂದು ಕರೆದು ಒಮ್ಮೆ ಗುಪ್ತವಾಗಿ ಕೈಯನ್ನು ತೋರಿಸಿದರು. ನಾನು ತಿನ್ನುವದನ್ನು ಒಳಗೆ ತರುತ್ತಿದ್ದೆ. ಆಗ ವೈದ್ಯರು ಕೈನೋಡಿ ಕಂಗೆಟ್ಟು 'ರಾಯರೇ ಲಕ್ಷಣಗಳು ನೆಟ್ಟಗಿಲ್ಲ. ಕ್ಷಯ'ವೆನ್ನುವಷ್ಟರಲ್ಲಿ ಕಕ್ಕಂದಿರು ಹೊರಗಿನಿಂದ, ಚಿಕ್ಕಿಯು ಕೋಣೆಯಿಂದ ಇವರು ಕೂತಲ್ಲಿಗೆ ಬಂದರು. " ಹೆಚ್ಚೇನು ಬೇಕು ? " " ಏನು ! ಏನು ತಂಗಿ

ಕ್ಷಯವೇ” ಎಂದು ಮುಂಜರಿದು ಜೋಗಿತಿಯು ಬಾಲೆಯ ಬಾಯಿಯನ್ನು ಮುಚ್ಚಿತೆಗೆದಳು. ನಾಲ್ಕೈದು ನಿಮಿಷಗಳವರೆಗೆ ಯಾರೂ ಕದಲಲಿಲ್ಲ......

( ೪ )

“ಅಮ್ಮಾ, ಅಭದ್ರವಾದುದನ್ನು ಹೇಳು ಎನ್ನುವಿ. ಅಭದ್ರವಾಡುವದಕ್ಕೆ ಏನು ಕಾರಣ ತಡೆಯುವಿ? ನನಗೂ ಆ ಶಬ್ದವು ಕಿವಿಯನ್ನು ಹೊಕ್ಕ ಕೂಡಲೇ ಮೈಯನ್ನು ತಿಂದು ಒಣಗಿಸುವ ಹುಳವೇ ಹೊಕ್ಕಂತಾಗುವದು. ಆದರೆ ಮಾಡಲೇನು? ನನ್ನ ತಂದೆಯವರಿಗೆ ಪತ್ರಬರೆಯಿಸಿ, ಅವರಿದ್ದಲ್ಲಿ ಚಿಕಿತ್ಸಕರು ಚೆನ್ನಾಗಿರುವರೆಂದು ಕೇಳಿ ಪತಿದೇವನನ್ನು ಕರೆದುಕೊಂಡು ಹೋದೆನು. ‘ನಾನೇನು ಅಪಥ್ಯ ಮಾಡಿಲ್ಲ. ನನಗೆ ಜಡ್ಡಿಲ್ಲ ಮನೆಯನ್ನು ಬಿಟ್ಟು ನಾನು ಬರಲಾರೆ’ ಎಂದು ಅವರ ಹಟ. ಆದರೆ ನಾನೇ ಅಪಥ ಮಾಡಿರುವೆನೆಂದು ಮನಸ್ಸಿನಲ್ಲಿ ಮಿಡುಕುತ್ತ ‘ ಅತ್ತೆಯ ಮನೆಗೆ ಒಮ್ಮೆಯಾದರೂ ಬರ ಕೂಡದೇನು? ’ ಎಂಬ ಆಗ್ರಹವನ್ನು ಹಚ್ಚಿ ಎಷ್ಟು ದೂರವಾದರೂ ಕರಕೊಂಡು ಹೋದೆ. ಹವೆಯು ಹೊಸದಾಯಿತು. ಔಷಧವೂ ಮೇಲೆ ನೇಮವಾಗಿ ಬಿದ್ದಿತು. ಓದುವ ಅಭ್ಯಾಸವನ್ನು ಬಿಡಿರೆಂದು ಬಿಡಿಸಿದೆ. ಅಂತೆಯೆ ಬೇಸಿಗೆಯ ಋತುವೆಲ್ಲ ಪ್ರಕೃತಿಯು ಗುಣವಾಗುತ್ತ ನಡೆಯಿತು. ನಾನು ಮಿಗಿಲಾದ ಹರುಷದಿಂದ ಅತ್ತೆಮಾವಂದಿರಿಗೆ ಈ ಸಮಾಚಾರವು ತಲಪುವಂತೆ ಮಾಡಿದೆನು. ಆದರೆ ಅಯ್ಯೋ, ಮತ್ತೆ ಮಳೆಗಾಲವು ಬಂದಿತು. ತಾಯೀ, ಅಳಿಗಾಲವೂ ಬಂದಿತು. ವಿಷಯ ಸುಖದ ಮನೀಷೆಯಿಂದಲೂ ಮನೆಯವರ ಕಾಟದಿಂದಲೂ ನಾನೂ ಹಿಂದಿನ ಪಾಪಕ್ಕೆ ಮತ್ತೊಂದು ದಿನದ ಪಾಪವನ್ನು ಕೂಡಿಸಿದೆ. ಪತಿಯನ್ನು ಹಿಂಸಿಸುವದಕ್ಕೆ ವಿಷದ ಪೇಯವನ್ನು ಅಂಚುಮಟವಾಗಿ ತುಂಬಿದಂತಾಯಿತು. ಅವರೂ ಮುಗ್ಧರು. ‘ ನನ್ನ ದುಃಖಕ್ಕೆ ಅನ್ಯರಿಗೆ ಆಯಾಸವೇದನೆಗಳೇಕೆ ?’ ಎಂದು ಏನೋ ಆದ ಸಂಗತಿಯನ್ನು ಬಲ್ಲ ಹಿರಿಯರಿಗೆ ಹೇಳಲಿಲ್ಲ. ಮನೆಗೂ ಬರೆಯಲಿಲ್ಲ. ಬರಲೂ ಇಲ್ಲ. ಮಾವಂದಿರು ಎಲ್ಲಿ ಬೇರೆ ಬಗೆಯುವರೋ ಎಂದು ಮನೋಭಯ. ಜಡ್ಡು ಹೇಗದೆ ಎಂದು ಕೇಳಿದರೆ ‘ನೆಟ್ಟಗದೆ’ ಎಂಬ ಮಂತ್ರವನ್ನು ಬಿಡಲೊಲ್ಲರು. ಆದರೆ ದೇಹವೇನು ಮಾಡಿಟ್ಟ ಯಂತ್ರ. ಹತ್ತಿದ ಕ್ಷಯವು ಚಂದಿರನ ಕ್ಷಯದಂತೆ ತಪ್ಪದೆ ಹೆಚ್ಚಾಗಹತ್ತಿತು. ಎಲುಬಿನ ಸಂದಿನಲ್ಲಿಯೇ ಅಡಗಿ ನವೆಸುವ ಕ್ಷಯವದು. ಹೊರಗೆ ತೋರಿಸಲಿಲ್ಲ. ಅದೂ ಮುಗ್ಧವಿರಬೇಕೇ ಜೋಗಿತಿ? ಒಮ್ಮೆಲೆ ಉಗ್ರವಾಯಿತು. ಅಮ್ಮಾ, ನಾನೇನು ಹೇಳುತ್ತಿದ್ದೇನೆ ಕರಾಣೆಯಿಲ್ಲದೆ? ಯಾರದೋ ಕಥೆಯೇ ಇದು ? ಜೋಗತೀ, ನನ್ನ ಅಮಾವಾಸ್ಯೆಯು ಬಂದಿತು. ನನ್ನ ಬೆಳದಿಂಗಳು ಮುಳುಗಿತು; ಮುಸಣಿಸಿತು–ತನ್ನ ಹುಟ್ಟು ಮನೆಗೆ ಕೂಡ ಹೋಗಲಿಲ್ಲ’.

“ಸಾಕು ಬಿಡಕ್ಕಾ, ಈ ಕತ್ತಲೆಯಲ್ಲಿ ಅತ್ತರೆ ಗಿಡಗಂಟಿಗಳಿಗೆ ಕೂಡ ಕರುಣೆ ಬರದು. ಆದರೆ ಇದಕ್ಕೆಲ್ಲ ಏನು ಮುಳುವಕ್ಕಾ ? ಯಾವ ರಾಹುಕೇತುಗಳು?......” ಎಂದು ಜೋಗಿತಿಯು ತಂಬೂರಿಯನ್ನು ಎತ್ತಿಹಿಡಿದಳು.

"ನನಗೂ ತಿಳಿಯಲೊಲ್ಲದು. ಮುಗ್ಧರಾದ ಅವರೋ ? ಮುಗ್ಧಳಾದ ನಾನೋ! ಅಲ್ಲ, ಅಲ್ಲ. ತಿಳಿಯಿತು. ತಾಯೀ, ಇಬ್ಬರನ್ನು ತಮ್ಮ ಅಂಕಿತದಲ್ಲಿ ಮುಗ್ಧಮಾಡಿದ ಎರಡು ಮನೆತನಗಳು ನಮ್ಮಿಬ್ಬರ ಬಗೆಯನ್ನು ಕೇಳದೆ, ಅರಿಯದೆ, ಕೂಡಿಸಿ ಕೆಡಿಸಿದ ರಾಹು-ಕೇತುಗಳು ! ಜೋಗಿತೀ, ಸಮಾಜದಲ್ಲಿ ಶೋಭನವೇ ಇದು ? ಇನ್ನಾದರೂ ನೀನೀ ಅಪಕ್ರಿಯೆಯನ್ನು ಹಾಡುತ್ತ ಕತೆಕಟ್ಟಿ ಹೇಳುತ್ತ ಹೋಗು. ಬಾಲವಿಧವೆಯ ಗೋಳನ್ನು ಎಲ್ಲರೂ ಕೇಳಲಿ, ನನಗೆ ಬಂದ ಬುದ್ಧಿಯು ಉಳಿದವರಿಗೆ ಫಲ-ಶೋಭನ ವಾಗಲಿ ! ಎಂದು ಉಳಿದ ರಾತ್ರಿಯನ್ನು ಶ್ರೀಪತಿಯ ರಂಜನೆಯಲ್ಲಿ ಕಳೆದು ಬಾಲೆಯು ಜೋಗಿತಿಯ ಜತೆಯನ್ನು ಬಿಟ್ಟು ಬೆಳಗಿನಲ್ಲಿ ಮನೆಗೆ ಮರುಳಿದಳು.........

## ಭಕ್ತಿಮಾರ್ಗವೂ ಭಾವಗೀತೆಯೂ.

.......... ..........

ಸದ್ಯದ ಯುಗವು, ಕನ್ನಡನಾಡಿನ ಸಂಸ್ಕೃತಿಯ ಸರ್ವಾಂಗವಾದ ಪುನರುಜ್ಜೀವನದ ಆರಂಭಕಾಲವೆಂದರೆ ತಪ್ಪಾಗಲಿಕ್ಕಿಲ್ಲ. ಅರುಣನ ಹೊಂಬೆಳಗಿನಲ್ಲಿ ಕತ್ತಲೆಯ ಕಂಬಳಿಯ ಮುಸುಕಿನಿಂದ ತಲೆಯನ್ನು ಮೇಲಕ್ಕೆತ್ತಿ ನೋಡುವ ನಿಸರ್ಗಸುಂದರಿಯಂತೆ, ಕನ್ನಡದ ನುಡಿವೆಣ್ಣು ತನ್ನ ಪರಿವಾರದೊಂದಿಗೆ ಮರೆಯ ಮುಸುಕನ್ನು ಬಿಸುಟು, ನಿಸರ್ಗಸಿದ್ಧವಾದ ಸೊಬಗನ್ನು ಹರಡುತ್ತಿರುವಳು. ಮರೆವಿನ ಮಡುವಿನಲ್ಲಿ ಮುಳಗಿದ ಮಣಿಗಳನ್ನು ಅನೇಕ "ಆಯ್ಕೆಗಾರ"ರು ಆರಿಸಿ ತೆಗೆಯಹತ್ತಿರುವರು. ಹಳೆಯದೆಲ್ಲವೂ ಹೊಲಸೆಂಬ ಹೊಯ್ಮಾರಿತನವೂ ಅಡಗತೊಡಗಿದೆ. ಹೊಸದೆಲ್ಲವನ್ನೂ "ಹಸಾದ"ವೆಂದು ತಲೆಯಲ್ಲಿ ಧರಿಸುವ ತಲೆತಿರುಕತನವೂ ತಲೆಯತ್ತದಂತಾಗಿದೆ. ಈ ಬಗೆಯ ತೂಗಾಟದ ತುದಿಗಳಲ್ಲಿ ಹೊಯ್ದಾಡದೆ, ಜನರ ವಿಚಾರಸರಣಿಯು ಸಮತೋಲವಾದ ವಿವೇಕದ ಮಾರ್ಗವನ್ನು ಹಿಡಿದದೆ. ಇದಕ್ಕೆ ಕವಿಭೂಷಣರ ಭಾವಗೀತೆಯಂಥ ಹೊತ್ತಿಗೆಗಳೂ, ಅವುಗಳಿಗೆ ದೊರೆಯುತ್ತಿರುವ ಮನ್ನಣೆಯೂ ಸಾಕ್ಷಿಯಾಗಿರುವವು.

ಭಕ್ತಿಮಾರ್ಗವು ಬಹು ಪ್ರಾಚೀನವಾದದ್ದು. ಮಾನವ ಜಾತಿಯ ಬರೆದಿದ್ದ ಇತಿಹಾಸದ ಮಂಜಿನಲ್ಲಿಯೂ ಕೂಡ ಇದರ ಛಾಯೆ ಮೂಡಿದ್ದು ಕಂಡುಬರುವದು. ಮನುಷ್ಯ ಪ್ರಾಣಿಯ ಬೆಳವಣಿಗೆಯಲ್ಲಿ ಕಾಲಾನುಸಾರವಾಗಿ ಬಾಹ್ಯಾಂತರಿಕ ಬದಲಾವಣೆಗಳಾದಂತೆ, ಭಕ್ತಿಮಾರ್ಗದಲ್ಲಿಯೂ ಕೂಡ-ಮೂಲದಲ್ಲಿ ಅಲ್ಲ, ರೂಪದಲ್ಲಿ-ಬದಲಾವಣೆಗಳಾದದ್ದು ಕಂಡುಬರುವದು. ಕಾಡುಮನುಷ್ಯನನ್ನು ಕಲ್ಲು-ಕಟ್ಟಿಗೆಗಳ ಮೂರ್ತಿಗಳ ಮುಂದೆ ಕುಣಿಸಿದ ಶಕ್ತಿಯು ಯಾವದು? ಸ್ವತ್ವವನ್ನು ಮರೆಯಿಸಿ ಪರ

ಮಾತ್ರನಲ್ಲಿಯೇ ಸಂಪೂರ್ಣವಾಗಿ ಲೀನರನ್ನಾಗಿ ಮಾಡಿಸಿದ ಉಪನಿಷತ್ಕಾಲದ ಋಷಿ ಗಳಲ್ಲಿಯ ಶಕ್ತಿಯು ಯಾವದು? ಸುಖದ ಸಾಧನಗಳೆಲ್ಲವೂ ಹಸ್ತಗತವಾದಾಗ್ಯೂ ಸಮಾಧಾನವಿಲ್ಲದೆ, ಆಧುನಿಕರ ಹೃದಯದ ಕೋಣೆಯೊಳಗಿಂದ "ಇಕೊ ! ಇಲ್ಲಿ ನಾನು ಕೊರಗುತ್ತಿದ್ದೇನೆ." ಎಂದು ಕೂಗಿಡುವ ಧ್ವನಿಯು ಯಾರದು? ಎಲ್ಲವೂ ಅದೇ ಭಕ್ತಿ ದೇವತೆಯ ಪ್ರಭಾವ. ರೂಪಸಂಸ್ಕಾರಗಳು ಮಾತ್ರ ಭಿನ್ನವಾಗಿರುವವು.

ಭಕ್ತಿಯು ಏನಿರುವದೆಂಬುದನ್ನು ತಿಳುಹಲು ಸುಲಭವಲ್ಲ; ಎನಿಸಲು ಬಲು ಸುಲಭ. ಇದು ಸಹಜವಾದದ್ದು ; ಕೃತ್ರಿಮವಲ್ಲ; ಇದನ್ನು ನಮಗೆ ಯಾರೂ ಕೊಡ ಬೇಕಾಗಿಲ್ಲ; ನಮ್ಮ ಸಂಗಡವೇ ಬಂದಿರುವದು. ಕಲಿಸತಕ್ಕ ವಿಷಯವಲ್ಲ; ಎನಿಸತಕ್ಕ ವಿಷಯವು. ಹಡೆದವರನ್ನು ಕಂಡು ಹಿರಿಹಿರಿ ಹಿಗ್ಗುವದನ್ನು ಹಸುಳನಿಗೆ ಯಾರು ಶಾಲೆಗೆ ಹಾಕಿ ಕಲಿಸಿದರು! ಅದು ಸ್ವಾರ್ಥ ಮೂಲವೆಂದು ಪ್ರಶ್ನೆಸುವಿರೋ. ಅಹುದು.

ಭಕ್ತಿಯಾದರೂ ಸ್ವಾರ್ಥಪಂಕದಲ್ಲಿ ಬೆಳೆದು ಬೆಳಗುವ ಕಮಲಿನಿಯು. ಜಗದೇಕ ಪ್ರಭುವು ತಾನೊಡ್ಡಿದ ಭಕ್ತಿ–ಬಲೆಯಲ್ಲಿ ನಾವು ಬೀಳಬೇಕೆಂದು, ಮೊದಲು ಈ ಸ್ವಾರ್ಥ–ಭಕ್ಷವನ್ನೆಸೆಯಬೇಕಾಗುವದು. ಸುಖಸೌಕರ್ಯಗಳೇ ಭಕ್ತಿಯ ಧ್ಯೇಯ ವಲ್ಲ; ಸಾಧನವು ಮಾತ್ರ ಔಷಧದ ಮೇಲಿನ ಸಕ್ಕರೆಯ ಹೊದಿಕೆಯ ಹಾಗೆ. ಸುಖ ಸೌಂದರ್ಯಗಳಲ್ಲಿಯೇ ಮುಳುಗಿ ಮುಂದಣಮಾರ್ಗವನ್ನು ದುರ್ಲಕ್ಷಿಸಬಹುದೇ? ಸಕ್ಕರೆಯನ್ನಷ್ಟೇ ತಿಂದು ಔಷಧವನ್ನುಗುಳಿದರೆ ರೋಗ ಹಾನಿಯಾಗಬಹುದೇ? ಹಾಗೆ ಯೇ ಭವರೋಗ. ಭಕ್ತಿಯಾದರೂ ಪರವಸ್ತುವಿನೊಡನೆ ಸಂಬಂಧಬೆಳೆಯಿಸಲೊಂದು ಸಾಧನವಲ್ಲವೇ?

ಈ "ಭಕ್ತಿ" ಯೆಂದು ಕರೆಯಲ್ಪಡುವ ಈ ಶಕ್ತಿಯು ಸಾಮಾನ್ಯವಾದದ್ದಲ್ಲ. ಈ ಭಕ್ತಿಮಾರ್ಗವು ಕನ್ನಡನಾಡಿನ–ಅದೇಕೆ? ಭಾರತವರ್ಷದ ಜೀವಾಳವಾಗಿರುವದು. ನಮ್ಮ ಆಧ್ಯಾತ್ಮಿಕ ತತ್ವಗಳ ತಳಹದಿಯು. ಭಾವಭಾವನೆಗಳನ್ನು ಬೆಳಗುವ ಬೆಳಕು. ಬಯಲು ಬಯಕೆಗಳಲ್ಲಿ ಬಳಲುವ ಆತ್ಮನಿಗೆ ಸುಧೆಯ ಸೂರೆಯು. ಭವದ ಭವಣಿಗ ಳನ್ನು ಬತ್ತಿಸುವ ಬಿಸಿಲು. 'ರತಿ'ಯನ್ನು 'ವಿರತಿ'ಯಾಗಿ ಪರಿಣಮಿಸುವ ಮಾಟಗಾ ರಿಕೆ. 'ಭೋಗ'ವನ್ನು 'ಯೋಗ'ವನ್ನಾಗಿ ಮಾಡುವ ಶಕ್ತಿಯು. 'ಆತ್ಮರತಿ'ಯನ್ನೇ ಕಡೆಯ ಮೆಟ್ಟಲಾದ 'ಆತ್ಮನಿಯೋಗ'ವನ್ನಾಗಿ ಮಾಡುವ ಗುಟ್ಟು. 'ಶ್ರೇಯ' 'ಪ್ರೇಯ' ಗಳನ್ನೊಂದೆಡೆಯಲ್ಲಿಯೇ ಕಟ್ಟುವ ಬಲ್ಗಣ್ಣಿಯು. ಅನಂತನ ಅದ್ಭುತ ಗುಣಗಳನ್ನು ಲೌಕಿಕ ವ್ಯವಹಾರಗಳಲ್ಲಿಯೇ ತೋರಿಸುವ ತಿಳಿಗನ್ನಡಿಯು. ಜೀವನ ಪಟದಲ್ಲಿ ಜೋಡಿ ಸಿದ ಜರದ ಎಳೆಯು. ಇಲ್ಲಿ ಜಾತಿಗಳ ಜಗಳವಿಲ್ಲ. ಮತಗಳ ಮರ್ಯಾದೆಯಿಲ್ಲ. ದೇಶಕಾಲಗಳ ನಿರ್ಬಂಧವಿಲ್ಲ. ಸಾಧನದ ಆಡಂಬರವು ಬೇಕಾಗಿಲ್ಲ. ಉಚ್ಚನೀಚವೆಂಬ ಭೇದಭಾವಗಳಿಲ್ಲ. ಮುಡ್ಡರೂ ಮೇಧಾವಿಗಳೂ ಒಂದೇ ರಂಗದಲ್ಲಿ ಕೂಡಿ ಕುಣಿಯು

ಬಹುದು. ಹೆಚ್ಚಿಗೆ ಹೇಳುವದೇನು! ಭಕ್ತಿಯೊಂದಿದ್ದರೆ ಉಳಿದ ಎಲ್ಲ ಧರ್ಮಸಾಧನಗಳ ಸಾರ್ಥಕತೆ; ಇಲ್ಲದಿದ್ದರೆ–ಇಲ್ಲದಿದ್ದರೇನು? ಎಲ್ಲವೂ ಇದ್ದೂ ಇಲ್ಲದ ಹಾಗೆ.

ಈ ಭಕ್ತಿತತ್ವದ ಮಹಿಮೆಯನ್ನು ಎಲ್ಲ ಭಾಷೆಗಳಲ್ಲಿಯೂ ಅದರ ಉಪಾಸಕರು ವರ್ಣಿಸಿದ್ದಾರೆ. ಕನ್ನಡ ವಾಙ್ಮಯದಲ್ಲಿಯೂ ಕೂಡ ಅನೇಕ ವೈಷ್ಣವದಾಸರು, ಶಿವಶರಣರು ತಮ್ಮ ಪ್ರಾಸಾದಿಕ ವಾಣಿಯಿಂದ ರಚಿಸಿದ ಗೀತರತ್ನಗಳು ಹೇರಳವಾಗಿರುತ್ತವೆ. ನಮ್ಮ ದಾಸ ಶಿವಶರಣರೇ ಮರಾಟಿಗರ ಇತ್ತೀಚೆಯ ಸಂತದಾಸರಿಗೆ ಆದರ್ಶಭೂತರೂ ಅನುಕರಣೀಯರೂ ಆಗಿದ್ದರೆಂದು ತಿಳಿಯಬರುತ್ತದೆ. ಅದೇಕೆ? ಕನ್ನಡನಾಡಿನಲ್ಲಿ ಹುಟ್ಟಿದ ಈ ಭಕ್ತಿ ಬಳ್ಳಿಯು, ಬಂಗಾಲದವರೆಗೆ ಹಬ್ಬಿ, ನವೀನ ಭಾರತೀಯರಲ್ಲಿ ಪ್ರಮುಖರಾದ ರವೀಂದ್ರರ 'ಗೀತಾಂಜಲಿ'ಗೆ ಹೂಗಳನ್ನೊದಗಿಸಿತೆಂಬದು ನಿಶ್ಚಯವಾದ ಮಾತಲ್ಲವೇ? ಆದರೆ ನಾವಾದರೋ–ಗೌಳಿಗನ ಮಕ್ಕಳು. ಹಾಲಿನ ರುಚಿಯನ್ನು ಕಾಣದಂತೆ ಈ ಮಹಾನುಭಾವರ ಸರ್ವಮಾನ್ಯವಾದ ಗೀತೆಗಳನ್ನು ಮರೆಯುತ್ತ ನಡೆದಿರುವೆವು. ಮರಳಿ ಅವುಗಳ ಅರಿವನ್ನುಂಟು ಮಾಡಿಕೊಡಬೇಕೆಂದು ಕವಿಭೂಷಣರು–ಈ ಬಗೆಯ ಕೆಲವು ಗೀತೆಗಳನ್ನಾರಿಸಿ, ವಿಂಗಡಿಸಿ 'ಭಾವಗೀತೆ'ಯೆಂಬ ಹೆಸರಿನಿಂದ ಸೇಖರಿಸುವರು. ಕನ್ನಡದಲ್ಲಿ ಈ ಮಾದರಿಯ ಪ್ರಯತ್ನವು ಇದೇ ಮೊದಲನೆಯದು. ಹದಗೆಟ್ಟ ಭಾಷೆ ಭಾವಗಳನ್ನು ಸರಿಗೊಳಿಸಿ, ರಾಗಗಳನ್ನು ವಿವರಿಸಿ ಗೀತೆಗಳನ್ನು ನಾಲ್ಕುಭಾಗವಾಗಿ ವಿಂಗಡಿಸಿರುವರು. "ಭಕ್ತನು ಒಂದೊಂದೇ ಅಡಿ ಇಟ್ಟು, ಕೊನೆಗೆ ಆತ್ಮನಿವೇದನದ ಮೇಲಿನ ಮೆಟ್ಟಲನ್ನೇರಿ, ಸಾಯುಜ್ಯವನ್ನು ಸಂಪಾದಿಸುವ" ಮಾತಿಗನುಸಾರವಾಗಿ ಈ ಪದ್ಧತಿಗಳ ವಿಂಗಡಣೆಯಾಗಿರುವದೆಂದು ಆಯ್ಕೆಗಾರರು ತಾವೇ ಬರೆದಿರುವರು. ಈ ಮಾತಿಗೂ, ಕನ್ನಡದಲ್ಲಿ ಹೆಸರಾದ ಸಾಹಿತ್ಯಸೇವಕರಲ್ಲೊಬ್ಬರಾದ "ಶ್ರೀನಿವಾಸ" (ಎಂ. ವೆಂಕಟೇಶಯ್ಯಂಗಾರ ಎಂ. ಏ.) ರು ನಮ್ಮ ದಾಸರ ವಿಷಯಕ್ಕೆ ತೆಗೆದ ಉದ್ಗಾರಗಳಿಗೂ ವ್ಯತ್ಯಾಸ ಬರುವದು. ಕರ್ನಾಟಕಸಾಹಿತ್ಯಪರಿಷತ್ ಪತ್ರಿಕೆ (ಎಪ್ರಿಲ ೧೯೩೪) ಯಲ್ಲಿ ಶ್ರೀ. ರವೀಂದ್ರರ "ಗೀತಾಂಜಲಿ"ಯ ವಿಮರ್ಶೆಯ ಕೊನೆಯ ಭಾಗದಲ್ಲಿ ಅವರು ಹೀಗೆ ಬರೆದಿರುವರು.– "ಪುರಂದರದಾಸರಿಗೆ ದೈವಸಾನ್ನಿಧ್ಯವು ಪ್ರಾಪ್ತವಾದ ದಾರಿಯು ಅವರ ಗೀತೆಗಳಿಂದ ಹೊರಪಡುವದಿಲ್ಲ. ಅವರ ಪ್ರಪನ್ನ ಜೀವನದ ಉತ್ತರಾವಸ್ಥೆಯು ಮಾತ್ರ ಅವರ ಗೀತೆಗಳಲ್ಲಿ ಕಾಣಬರುವದು......ಅವರ (ದಾಸರ) ಯಾತ್ರೆಯು ಅವಧಿಯು ಅವರ ಗೀತೆಗಳಲ್ಲಿ ತೋರಿಬರುವದೇ ಹೊರತು ಅವರು ಯಾತ್ರೆಯಲ್ಲಿ ಇಟ್ಟ ಅಡಿಗಳ ಗುರುತು ನಮಗೆ ಕಾಣುವದಿಲ್ಲ..." ಇತ್ಯಾದಿ ಇದಕ್ಕೆ ವಿರುದ್ಧವಾಗಿ "ಗೀತಾಂಜಲಿಯಲ್ಲಿಯಾದರೂ ಕವಿಯು ಪರವಸ್ತುವನ್ನು ಸಮೀಪಿಸುವವರಲ್ಲಿ ಇಟ್ಟ ಹೆಜ್ಜೆಗಳೂ ಕಂಡುಬರುವವು." ಆದರೆ ಸ್ವಲ್ಪ ಪರಾಮರ್ಶಿಸಿ ನೋಡಿದರೆ ನಮಗೆ ಈ ವಿಧಾನವು ಅಷ್ಟು ಸತ್ಯವೆಂದು ತೋರುವದಿಲ್ಲ. ಜೀವರಝುರಿಯಲ್ಲಿ ಸಾಮಾನ್ಯರೊಂದಿಗೆ ಸಿಲುಕಿ ಅವರನ್ನಾದರೂ ತಮ್ಮ ಜೊತೆಯಲ್ಲಿ

ತಾವು ನಡೆದ ಹಾದಿಯಿಂದಲೇ ಹಿಡಿದೊಯ್ಯಲು ಅವರು (ದಾಸರು) ಯತ್ನಿಸುವರೆಂಬುದು ಕಂಡು ಬರುವಂತಿದೆ. ಆತ್ಮಸಂಸ್ಕಾರದ ಮಾರ್ಗದಲ್ಲಿ ಅನರಿಗೆದುರಾದ ಎಡರುಗಳೂ ಅವರು ಕೈಕೊಂಡ ಉಪಾಯುಗಳೂ ಅವರ ಗೀತೆ ಗಳಲ್ಲಿ ಸ್ಪಷ್ಟವಾಗಿ ತಲೆದೋರುತ್ತವೆ. ಈ ಮಾರ್ಗದಲ್ಲಿಯ ಅನೇಕ ತಗ್ಗುಗತವರುಗಳಲ್ಲಿ-ಬೀಳೋಣ ಅನುತಾಪ-ಏಳುವಸಾಹಸ, ಮೊದಲಾದವುಗಳನ್ನು ಸೂಚಿಸುವ ಪದಗಳನ್ನು ಅದೇ ಮಾರ್ಗಗಾಮಿಯಾದ ಯಾವ ಸಾಮಾನ್ಯನನ್ನು ಹುರಿದುಂಬಿಸಲಿಕ್ಕಿಲ್ಲ ! ಆತ್ಮಸಂಸ್ಕಾರದ ಅವಸ್ಥಾ ವಿಶೇಷಗಳನ್ನು ಸೂಚಿಸುವ ದಾಸರ ಪದಗಳನ್ನಿಲ್ಲಿ ಉದಹರಿಸಲಶಕ್ಯವಾದುದರಿಂದ, ' ಭಾವಗೀತೆ ' ಯನ್ನೇ ಬಗೆಗೊಟ್ಟು ಓದಿರೆಂದು ' ಶ್ರೀನಿವಾಸ 'ರಿಗೂ ಅವರ ಮತದವರಿಗೂ ನಮ್ಮ ಬಿನ್ನಹವು.

ದಾಸ-ಶಿವಶರಣರ ಪದಗಳ ಸಂಗ್ರಹವಾದ ಈ ಹೊತ್ತಿಗೆಯಲ್ಲಿ ಆಕ್ಷೇಪಕ್ಕೆಡೆ ಯುಳ್ಳಿಯದು ? ಆದರೂ ಆಕಾಂಕ್ಷೆಗಳಿಗೆ ಮಾತ್ರ ಅಡ್ಡಿ ಇಲ್ಲವಷ್ಟೇ ? ದಾಸ ಮಾರ್ಗದ ಇತಿಹಾಸವನ್ನು, ಭಾವಗೀತೆಗಳ ಸಾಮಾನ್ಯ ವಿವೇಚನೆಯನ್ನು, ಗ್ರಂಥದಲ್ಲಿ ಬಂದಿರುವ ದಾಸರ ಚರಿತ್ರೆಯನ್ನೂ-ಅತ್ಯಲ್ಪವಾಗಿಯೇ ಆಗಲೊಲ್ಲದೇಕೆ ?—ಮುನ್ನುಡಿಯಲ್ಲಿಯಾ ಗಲೀ, ಪರಿಶಿಷ್ಟರೂಪವಾಗಿಯಾಗಲೀ ಸೇರಿಸಿದ್ದರೆ ಹೆಚ್ಚು ಉಪಯುಕ್ತವಾಗುತ್ತಿತ್ತೆಂದು ನಮ್ಮ ತಿಳುವಳಿಕೆ. ಹೆಣ್ಣು ಮಕ್ಕಳಿಗೂ ಹುಡುಗರಿಗೂ ಸುಲಭವಾಗುವ ಹಾಡುಗಳನ್ನು ಇದಕ್ಕೂ ಹೆಚ್ಚಾಗಿ ಹಾಕಿದರೆ ನೆಟ್ಟಗಾಗಬಹುದು. ಸ್ಥಳ ಸಂಕೋಚ ಮುಂತಾದ ಕಾರಣಗಳಿಂದ ಶ್ರೀ. ಮಂತ್ರಾಲಯ ಸ್ವಾಮಿಗಳಿಂದ ರಚಿತವಾದ– " ಇಂದು ಎನಗೆ ಗೋವಿಂದ ನಿನ್ನಯ ಪಾದಾರವಿಂದವನೆ" ಎಂಬ ಭಕ್ತ್ಯುದ್ರೇಕದಿಂದ ತುಂಬಿ ತುಳುಕು ತ್ತಿರುವ ಪದವೂ ; 'ಪ್ರಸನ್ನವೆಂಕಟ'ರಿಂದ ರಚಿತವಾದ "ರಂಗ, ಕೊಳಲನೂದಲಾಗಿ" ಎಂಬ ಹೆಚ್ಚಿನ ತರಗತಿಯ ಭಾವಗೀತೆಯೂ; ಹಾಗೆಯೇ ಹೊರಗೆ ಉಳದಿರುತ್ತವೆ. ಮುಂದಿನ ಮುದ್ರಣದಲ್ಲಿ ಅವುಗಳಿಗೆ ಮನ್ನಣೆ ದೊರೆಯುವದೆಂದು ಆಶಿಸುವೆವು.

ದಾಸ ಶಿವಶರಣರ ಉಪಕಾರವಂತೂ ಹೇಳಲಾರದಷ್ಟಾಗಿರುವದು. ಆದರೆ ಅವು ಗಳನ್ನು ಕಣ್ಮರೆಯನ್ನಾಗಿ ಮಾಡಿಕೊಂಡ ನಮ್ಮ ಕಣ್ಣುಗಳಿಗೆ, ಚೆನ್ನಾಗಿ ಅಂಜನವ ನ್ನಿತ್ತ ಕವಿಭೂಷಣರಿಗೆ ಕನ್ನಡಿಗರೆಲ್ಲರೂ ಕೃತಜ್ಞರಾಗಿರುವದು ಕರ್ತವ್ಯವಲ್ಲವೇ ? ಕನ್ನಡ ವಾಙ್ಮಯವನ್ನು ಕಮನೀಯವಾದ ತನ್ನ ಕಥೆ ಕಾವ್ಯಗಳಿಂದ ಬೆಳಗುತ್ತಿರುವ ಈ ಬಾಲಕವಿಯ ಉದಯವು ಹೊಸಯುಗವನ್ನು ಸೂಚಿಸುವದಲ್ಲದೇ ಮತ್ತೇನು?

ಬಾಗಲಕೋಟೆಯ ಗೆಳೆಯರಿಂದ

---

# ಪುಸ್ತಕ ಪರಿಚಯ

**ಸಚಿತ್ರ ಪಶುಪಕ್ಷಿಗಳ ವರ್ಣನೆ :—** ಈ ಪುಸ್ತಕವು ಪುಣೆಯ ಚಿತ್ರಶಾಳಾ ಮುದ್ರಣಾಲಯದವರ ಕಡೆಯಿಂದ ವಿರ್ಮಶೆಗಾಗಿ ಬಂದಿವೆ. ಆದರದಿಂದ ಕೈಕೊಳ್ಳುವೆವು.

ಬೇರೆ ಬೇರೆ ಬಣ್ಣಗಳಿಂದ ಅಂದವಾಗಿ ತೆಗೆದ ಪ್ರಾಣಿಗಳ ಚಿತ್ರಗಳು ಪ್ರತಿ ಪುಟಕ್ಕೊಂದರಂತೆ ಕೊಡಲಾಗಿವೆ. ಒಟ್ಟು ಚಿತ್ರಗಳ ಸಂಖ್ಯೆ ೪೮, ಅರ್ಥಾತ್ ಪುಸ್ತಕದ ಪುಟಗಳಾದರೂ ೪೮ ಇರುತ್ತವೆ. ಪುಸ್ತಕದಲ್ಲಿ ಪುಟ ಸಂಖ್ಯೆಯಿಲ್ಲ. ಅಚ್ಚಾದುದೆಲ್ಲಿ! ಎಂಬುದು ತಿಳಿಯುವಂತಿಲ್ಲ. ಪ್ರಕಾಶಕರು ಯಾರೆಂಬುದು ಗೊತ್ತಾಗುವುದಿಲ್ಲ. ಚಿಕ್ಕ ಮಕ್ಕಳಿಗಾಗಿ ಇರುವ ಪುಸ್ತಕದಲ್ಲಿ ಇದೆಲ್ಲ ಗೊಂದಲವೇಕೆಂದು ಬಿಟ್ಟಿರುವರೋ ಏನೋ

ಪ್ರತಿಯೊಂದು ಚಿತ್ರದ ಕೆಳಗೆ ಆ ಚಿತ್ರದಲ್ಲಿಯ ಪ್ರಾಣಿಯ ಹೆಸರನ್ನೂ ಪರಿಚಯವನ್ನೂ ಕೊಡಲಾಗಿದೆ. ಈ ಪರಿಚಯದ ಕನ್ನಡಭಾಷೆಯು ಸಾತಾರಜಿಲ್ಲೆಯ ತಾಸಗಾಂವಿ ತಾಲೂಕಿನೊಳಗಿನದೆಂದು ಕಾಣುವುದು. ನಮ್ಮ ಎಳೆಮಕ್ಕಳು ಇವರ ಭಾಷೆಯನ್ನು ತಿಳಿದುಕೊಳ್ಳುವುದು ಕಷ್ಟದ ಕೆಲಸ, ಅಲ್ಲದೆ ಇಂತಹ ಭಾಷೆಯಿರುವುದರಿಂದ ಈ ಪುಸ್ತಕದ ಉಪಯೋಗವು ಆಗಬೇಕಷ್ಟು ಆಗಲಾರದೆಂದು ನಮ್ಮ ಅಭಿಪ್ರಾಯ.

ಚಿತ್ರಶಾಳಾ ಪ್ರೆಸ್ಸಿನವರು ಈ ಪುಸ್ತಕವನ್ನು ಪ್ರಕಟಿಸಿ ಕನ್ನಡಿಗರ ಮೇಲೊಂದು ಉಪಕಾರ ಮಾಡಿರುವರು. ಆದರೆ ಕನ್ನಡ ನುಡಿಯ ಅಜ್ಞಾನದ ಮೂಲಕ ಈ ಉಪಕಾರವು ಪೂರ್ಣತೆಯನ್ನು ಪಡೆದಿಲ್ಲ. ಕನ್ನಡಿಗರೆಲ್ಲರೂ ಕೈ ಮುಚ್ಚಿಕೊಂಡು ಕುಳಿತಿರುವಾಗ ಮರಾಟಿಗರಾದ ಚಿತ್ರಶಾಳಾ ಪ್ರೆಸ್ಸಿನವರು ಇಂತಹ ಪುಸ್ತಕವನ್ನೊಂದನ್ನು ಮುದ್ರಿಸಿ ಪ್ರಕಟಿಸಿದುದಕ್ಕಾಗಿ ಅವರನ್ನು ನಾವು ಅಭಿನಂದಿಸುತ್ತೇವೆ.

ಪುಸ್ತಕದ ಬೆಲೆಯು ದಪ್ಪಕಾಗದದ ಪ್ರತಿಗೆ ೧ ರೂಪಾಯಿ. ತೆಳುವುಕಾಗದದ ಪ್ರತಿಗೆ ೧೨ ಆಣೆಗಳು.

**ಶಕ್ತಿ :—**(ಮಾಸಪತ್ರಿಕೆ) ಸಂಪಾದಕರು ಶ್ರೀ. ಎಮ್. ಗೋವರ್ಧನರಾಯರು ಕಾರ್ಕಳದ ಮಾರುತಿ ಮುದ್ರಣಾಲಯದ ಒಡೆಯರಾದ ಶ್ರೀ. ಕೇ. ಪಿ. ಕಾಮತ ಅವರು ಪ್ರಕಾಶಕರು. ಜಯಕರ್ಣಾಟಕದಳತೆಯ ೪೦ ಪುಟಗಳು ವಾರ್ಷಿಕವರ್ಗಣಿ ೩ ರೂಪಾಯಿಗಳು.

ಈ ಪತ್ರಿಕೆಯ ಒಂದನೆಯ ಸಂಚಿಕೆಯು ನಮ್ಮ ನೋಟಕ್ಕಾಗಿ ಬಂದಿದೆ. ಆನಂದದಿಂದಲೂ ಆದರದಿಂದಲೂ ಸ್ವೀಕರಿಸುತ್ತೇವೆ. ಅಚ್ಚುಕಟ್ಟಾದ ಅಚ್ಚಿನಿಂದಲೂ ಹೊಳೆಯುವ ಹಾಳೆಗಳಿಂದಲೂ ಮೇಲೋಲೆಯು ರಾಮಕೃಷ್ಣ ಪರಮಹಂಸರ ಶಕ್ತಿ ಸಾಕ್ಷಾತ್

ಕಾರದ ಚಿತ್ರದಿಂದಲೂ ಪತ್ರಿಕೆಯ ಹೊರಮೈಯ್ಯು ಹೃದಯಾಕರ್ಷಕವಾಗಿದೆ. ಮೇಲೆ ತಳತಳ ಒಳಗೆ ಕಳಕಳವಾಗಿಯೂ ಇರಬಾರದಷ್ಟೇ ?

"ಶಕ್ತಿಯು ವಿಶ್ವಭಾರತದ ಸರ್ವಾಂಗೀಣ ಪ್ರಗತಿಗೆ ಅವಶ್ಯಕವಾದ ವಿಷಯಗಳನ್ನು ಪ್ರಕಟಿಸುವುದು. ಶಕ್ತಿಗೆ ಏಕದೃಷ್ಟಿಯಲ್ಲ, ಅನೇಕ ದೃಷ್ಟಿ. ಈ ಅನೇಕ ದೃಷ್ಟಿಯಲ್ಲಿಯೂ ಮತ್ತೆ ಐಕ್ಯದ ದೃಷ್ಟಿ. ಇವಳು ಹಾಡಿದುದನ್ನೆ ಹಾಡುವ ಕಿಸುಬಾಯ ದಾಸನಂತಹಳಲ್ಲ. ನಿಮಿಷನಿಮಿಷಕ್ಕೂ ಹಲವು ರಾಗಗಳ ವರ್ಣ-ಸಾಹಿತ್ಯ-ಸಂಗತಿಗಳನ್ನು ನುಡಿಯಲು ಯತ್ನಿಸುವವಳು. ಶಕ್ತಿಯು ಹೆಣ್ಣುಮಕ್ಕಳ ಹಿತವನ್ನು ಮಾಡಲೂ ಹೆಣಗುವವಳು. ಮಗುವಿನೊಡನೆ ನಗೆಮಾತನಾಡುತ್ತ ಬಗೆಗಾರನನ್ನಾಗಿ ಮಾಡಲೂ ಮುಂದರಿಯುವವಳು". ಇತ್ಯಾದಿ ಈ ಅಭಿಪ್ರಾಯವನೊಳಗೊಂಡ ಮಾತನ್ನು ಸಂಪಾದಕರು ತಮ್ಮ ಆತ್ಮನಿವೇದನದಲ್ಲಿ ಹೇಳಿರುವರು. ಭಕ್ತನು ಯೋಗ್ಯನಿದ್ದರೆ ಶಕ್ತಿಯು ಏನು ಮಾಡಲರಿಯಳು. ಎಲ್ಲವನ್ನೂ ಮಾಡಲಾಪಳು. ಕೇವಲ ಭುಕ್ತಿಗಾಗಿ ಬಾಯಿ ಮಾತಿನಲ್ಲಿಯೇ ಭಕ್ತನಾಗಿದ್ದರೆ ಶಕ್ತಿಯು ಕಲ್ಲಿಗಿಂತ ಕಲ್ಲು. ಇದು ಎಲ್ಲರೂ ಬಲ್ಲ ಸಂಗತಿಯು. ಸಂಪಾದಕರೂ ತಿಳಿಯದಿರಲಾರರು.

ಶಕ್ತಿಯ ಪೂಜಾರಿಯು (ಸಂಪಾದಕರು) ತನ್ನ ಭಕ್ತಿಯ ಪ್ರಭಾವದಿಂದ ಪಡೆದ ಮೊದಲನೆಯ ಈ ಫಲದಿಂದ ಜನರ ಕಲ್ಯಾಣವನೇನೇನು ಸಾಧಿಸಿರುವನೆಂಬುದನ್ನು ಪರೀಕ್ಷಿಸಿ ನೋಡಿದರೆ ಎಲ್ಲರೂ ಕಂಡುಹಿಡಿಯಬಹುದು.

ಈ ಪತ್ರಿಕೆಯಲ್ಲಿ ಅದೆಷ್ಟೊ ಬರೆಹಗಳು ಎಷ್ಟೋ ಚೆನ್ನಾಗಿವೆ. ಮಾತಿನ ಕಟ್ಟು ಬಿಗಿಯಾಗಿದ್ದು ಅಂದವಾದುದು. ಬರೆಯುವ ಬಗೆಯು ಎದೆಯನೆಳೆಯುವಂತಹದು. ಆದರೆ ಎಷ್ಟೋ ಭಾಗದಲ್ಲಿ ವಿಚಾರಗಳ ತೊಡಕಿನಿಂದಲೋ ಏನೋ ಸಾಮಾನ್ಯರಿಗೆ ವಿಷಯವು ತಿಳಿಯದಂತಾಗಿದೆ. "ಕರ್ಮಕೌಶಲ್ಯ" "ಬರಬರುತ್ತ ಕೆಡುಗಾಲ ಬರುವುದೇ!" "ಜೈನಮತ" ಮೊದಲಾದ ಬರೆಹಗಳು ಸುಸಂಗತವಾಗಿವೆ. ಮಗುವಿನ ಜಗವು ಇನ್ನೂ ಸರಳವಾದರೂ ಬೇಕಾಗಿದೆ. ಭಾಷೆಯು ಉತ್ತರ ಕರ್ಣಾಟಕದವರಿಗೂ ಸುಲಭವಾಗಿ ತಿಳಿಯುವಂತಹದು. ಪರಭಾಷೆಯ ಶಬ್ದಗಳು ಹೆಚ್ಚಾಗಿ ಸೇರದಂತೆ ಎಚ್ಚರಪಡುವುದು ಬರೆಹಗಾರರದೂ ಸಂಪಾದಕರದೂ ಕರ್ತವ್ಯವೆಂದು ಬೇರೆ ಹೇಳಬೇಕಾಗಿಯೇ ಇಲ್ಲ.

ಶಕ್ತಿಯು ಕನ್ನಡ ನಾಡಿನಲ್ಲೆಲ್ಲ ಹರಿದಾಡಿ ನವೀನ ಚೈತನ್ಯವನ್ನು ತುಂಬಲೆಂದು ಎಲ್ಲರೂ ಹಾರೈಸುವುದು ಸ್ವಾಭಾವಿಕ.

—ಕುಂಜವಿಹಾರಿ.

## ಅಹಿಂಸೆ.

ಈಶಾವಾಸ್ಯದಲ್ಲಿ ಅದ್ವೈತಾನುಭವದ ಅವಸ್ಥೆಯನ್ನು ಮುಟ್ಟಲಿಕ್ಕೆ ಎರಡು ಸ್ಥಲಗಳನ್ನು ಹೇಳುವರು. ಯಸ್ತು ಸರ್ವಾಣಿ ಭೂತಾನಿ ಆತ್ಮನ್ಯೇವಾನುಪಶ್ಯತಿ । (ಯಾವನು ತನ್ನಲ್ಲಿ ಅನ್ಯರನ್ನೂ ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ॥ (ಅನ್ಯರಲ್ಲಿ ತನ್ನನ್ನೂ ಕಾಣುವನೋ, ಆತನಿಗೆ ಹೆದರಿಕೆಯಿಲ್ಲ.) ಇದು ಮೊದಲನೆಯ ಮೆಟ್ಟಲು. ಇದರ ಮುಂದೇ ಎರಡನೆಯದನ್ನು ಹೇಳಿದೆ. ಯಸ್ಮಿನ್ ಸರ್ವಾಣಿ ಭೂತಾನಿ ಆತ್ಮಾ ಏವ ಅಭೂತ್ ವಿಜಾನತಃ । (ಯಾವನು ತನ್ನಲ್ಲಿಯೂ ಅನ್ಯರಲ್ಲಿಯೂ ಅದ್ವೈತವನ್ನು ಅನುಭವಿಸಿರುವನೋ ಆತನಿಗೆ ಯಾವ ಅಳುಕು?)

ಅಹಿಂಸೆಯೆಂಬುದು ಮೊದಲನೆಯ ಸ್ಥಲವಾಗಿದೆ. ಏಕಮೇವಾದ್ವಿತೀಯದ ಸಾಕ್ಷಾತ್ಕಾರದ ಹಾದಿಯಲ್ಲಿ ಅಪರಿಹಾರ್ಯವಾದ ಸ್ಥಾನವಿಶೇಷವಾಗಿದೆ.

ಮೂಲಕ್ರಿಮಿ ( Amoeba ) ಗಳ ತಿರ್ಯಗ್ಯೋನಿಯಿಂದ ಮನುವಿನ ಪ್ರೀತಿಯ ಪುತ್ರನಾದ ಮಾನವನ ಬುದ್ಧಿವಿಶಿಷ್ಟ ಜಾತಿಯವರೆಗೂ ಇರುವ ಜೀವಜಂತುಗಳ ಅಂತರಾಳದ ನೋವನ್ನು ಸಹಾನುಭೂತಿಯಿಂದ ಬೆರೆತು ಅರಿಯುವ ತನಕ ಈಶ್ವರಾಭಿಮುಖನಾದ ಜೀವನಿಗೆ ಹೆಚ್ಚಿನ ಸಾಕ್ಷಾತ್ಕಾರವು ಆಗದು. ಅಹಿಂಸೆಯೆಂದರೆ ಇಷ್ಟೇ. ವಿಶ್ವದ ನೋವನ್ನೆಲ್ಲ ತನ್ನದನ್ನಾಗಿ ಮಾಡುವದು.'ಈ ನೋವು ಎಂದು ಹೋದೀತು! ವಿಶ್ವಂಭರವಾದ ದೇವವಿಭೂತಿಯನ್ನು ಕಂಡು ಉಂಡೆಂದು.

—ರಾಮಚಂದ್ರ.

## ತ ರ್ಪ ಣ.

ಮೊನ್ನೆ ಮೊನ್ನೆ ಗೆಳೆಯರ ಗುಂಪಿನಲ್ಲೋರ್ವರಾದ ಕೊಣ್ಣೂರ ಹಣಮಂತರಾಯರ ಇಬ್ಬರು ಚಿಕ್ಕ ಮಕ್ಕಳು ತೀರಿಕೊಂಡರು. ಒಂದೇ ದಿನದಲ್ಲಿ ಇರ್ವರು ಮಕ್ಕಳನ್ನು ಕಳೆದುಕೊಂಡವರ ತಾಪವನ್ನು ಊಹಿಸಿ ತಿಳಿಯದು. ಹದ್ದು ಎರಗಿ ಬೆಣ್ಣೆಯ ಮುದ್ದೆಗಳನ್ನು ಒಯ್ಯುವಂತೆ ತೀರ ಒಮ್ಮಿಂದೊಮ್ಮಿಗಿಲೆ ಸಂಭವಿಸಿದ ಈ ಕರಳುಗಳ ಕಳವು ತಂದೆಗೆ ಬರಿಮುಗಿಲೊಳಗಿಂದ ಬರಸಿಡಿಲು ಬಡಿದಂತೆ ಆಸಿಸಿರುವದು ಸೋಜಿಗವಲ್ಲ. ಆವರೊಡನೆ ಸಹಾನುಭೂತಿಯುಳ್ಳ ಗೆಳೆಯರೆಲ್ಲರಿಗೂ ಹಾಗನಿಸಿದ್ದೂ ಸಹಜವಾಗಿದೆ. ಇದರಂತೆಯೇ ಕೊಪ್ಪಳದ (ಸುಬ್ರಹ್ಮಣ್ಯ ಶಾಸ್ತ್ರಿ ಕಂಪಲಿ) ಗೆ॥ ಸುಬ್ಬಣ್ಣನ ಸಾವಿನ ಸುದ್ದಿಯೂ ಗೆಳೆಯರೆಲ್ಲರಿಗೂ ಶೋಕದಾಯಕವಾಗಿದೆ. ಚಿಕ್ಕ ವಯಸ್ಸು; ಮುಂಗೆಟ್ಟ ಚಿಕ್ಕ ಹೆಂಡತಿ; ಕಂಗೆಟ್ಟ ಅನಾಥ ತಾಯಿ! ಅಯ್ಯೋ ಅದೊಂದು ದುಃಖದ ಮೊಟ್ಟೆ! ಕರುಳಿತ್ತು; ಕಾವ್ಯಶಕ್ತಿಯಿತ್ತು; ಅದು ಫಲಿಸಬೇಕೆಂಬ ಹಣೆಬರಹ ವೊಂದಿರಲಿಲ್ಲ. ಇಂದಿಲ್ಲ ನಾಳೆ ಫಲಿಸಬಹುದೆಂದು ಗೆಳೆಯರಿಗೆ ಅನಿಸಿತ್ತು. ಆದರೆ ಸದ್ದು ಸುಳಿವಿಲ್ಲದೆ ಬೆಂಬದಿಗೆ ನಿಂತ ಮೃತ್ಯುವನ್ನು ಕಂಡವರಾರು? ಮೊಗ್ಗೆ-ಕಾಯಿಗಳನ್ನು ಕೊಯ್ದುಕೊಂಡ ದೇವ! ಕಣ್ಣೀರ್ಸುರಿಸಿ ಕೃಷ್ಣಾರ್ಪಣವೆನ್ನದೆ ಗತಿಯಿಲ್ಲ ನಮಗೆ. ಮಮತೆಯ ಉಪ್ಪು ನೀರು: ಇಂದು ಸೋರಬಹುದು, ನಾಳೆ ಆರಬಹುದು. ಆದರೆ ಮುತ್ತಾದ ಅಂತಃಕರಣಕ್ಕೆ ಮರಣವಿಲ್ಲ.

ಓಂ ಶಾಂತಿಃ ಶಾಂತಿಃ ಶಾಂತಿಃ

ಓಂ ನಲ್

# ಸ್ವಧರ್ಮ

॥ ಜಯಂ ಭದ್ರಂ ಶುಭಂ ಮಂಗಲಮ್ ॥

ವರ್ಷ-೩ | ಶಕೆ ೧೮೪೮ ಅಕ್ಷಯ ಸಂ॥-ಕಾರ್ತಿಕ. | ತಿಂ.-೮.

## ಕೂಗು-ಹುಡುಕು.

ಬಂದೆನೌ ! ಮನೆಗೆ 'ಅಮ್ಮಾ' ಎಂದು ಕೂಗುತಲಿ
"ಕಂದ ! ನಾನಿಲ್ಲಿ ಕುಳಿತಿಹೆನು ಬಾ" ಎನ್ನುತಲಿ
ನೀನು ಮೆಲುಮಾತಿನೊಳು ನುಡಿದ ದನಿಗೇಳಿ
ನಾನು ಬಂದೆನು ಒಳಗೆ ಓಡುತೋಡುತಲಿ
ಓಡುತೋಡುತಲಿ ಆತುರದಿ ಬಂದೆನು ಇಲ್ಲಿ
ನೋಡಿದೆನು ನೀ ಕಾಣಲೊಲ್ಲೆ ! ಇರುತಿಹೆ ಎಲ್ಲಿ ?
ಕುರುಳಸರಿಮಾಡಿಕೊಳ್ಳುವ ಹಣಿಗೆಯಿಲ್ಲಿಹುದು
ಮಿರುಗುಮೊಗ ನೋಡಿಕೊಳ್ಳುವ ಕನ್ನಡಿಯು ಇಹುದು
ತುರುಬಿನಲಿ ಮುಡಿದ ಅರಳುಗಳು ಸುರಿದಿಹವು
ಕೊರಳಸರ ಬೆರಳುಂಗರಗಳು ಬಿದ್ದಿಹವು
ಅರಿಸಿಣದ ಕುಂಕುಮದ ಕರಡಿಗೆಗಳಿಹವಿಲ್ಲಿ
ಅರಿಯೆನೇ ! ಎಲ್ಲವೂ ನಿನ್ನವಿವು ನೀನೆಲ್ಲಿ ?
ಅಡಿಗುರುಹು ಮೂಡಿಹುದು ಇಲ್ಲಿ ಎಡೆಯಾಡಿದೊಲು
ಹುಡುಗಾಟ ಮಾಡಬೇಕೆಂದು ನೀ ನಾ ಬರಲು
ಅಡಗಿರುವೆಯೆಲ್ಲಿಯೋ ! ಎಂದು ಕಾಣುವುದು
ಹುಡುಕದೆಯೆ ಬಿಡುವೆನೇ ನಿನ್ನ ನಾನಿಂದು ?
ಎಲ್ಲಿಯಡಗಿದ್ದರೂ ಹುಡುಕಿ ನಾ ಹಿಡಿಯುವೆನು
ಬಲ್ಲೆನೌ ಚೆನ್ನಾಗಿ ಕಣ್ಣುಮುಚ್ಚಾಟವನು
ಇನ್ನೊಮ್ಮೆ ಮುನ್ನಿನೊಲು ನನ್ನ ಕರೆ ನೀನು
ನಿನ್ನ ದನಿ ಬರುವ ದೆಸೆಯಲ್ಲಿ ಹುಡುಕುವೆನು

—ಕೃ. ಶ್ರೀ. ಬೆಟಗೇರಿ, 'ಕವಿಭೂಷಣ'

**ಗುಟ್ಟು:**—ಕವಿಭೂಷಣರ 'ಮುದ್ದನಮಾತು'ಗಳ ಒಂದು ವೈಲಕ್ಷಣ್ಯವೆಂದರೆ ಭಾವದ ಮುದ್ದುತನ ಮತ್ತು ಮಾತಿನ ಚಾತುರಿಯಷ್ಟೆ ಅವುಗಳಲ್ಲಿ ಅರ್ಥದ ಪ್ರಸಾದ ಗುಣವಿದೆ. ಚದುರ ಮಾತಿನೊಳಗಿಂದ ಕಡೆದಂತೆ ಒಡೆದೊಡೆದು ತೇಲಿ ಮೇಲೆ ಬಾಯಿಗೆ ಬರುವ ಬೆಣ್ಣೆಯ ಮುದ್ದೆಯಂತೆ, ನುಣ್ಣನ್ನ ಅರ್ಥವೂ ಮುದ್ದಾದ ಭಾವವೂ ಒಂದ ನ್ನೊಂದು ಅಪ್ಪಿಕೊಂಡು ಮನದ ಮನೆಯನ್ನು ಸೇರುವವು.

ಲೌಕಿಕನವರಸಗಳನ್ನು ಬಿಟ್ಟರೆ ದೈವಿಕವಾದ ಬೇರೆ ನಾಲ್ಕು ರಸಗಳಿವೆಯೆಂದು ಚೈತನ್ಯಪಂಥದ ವೈಷವಲಾಕ್ಷಣಿಕರು ವರ್ಣಿಸಿರುವರು. ಆ ನಾಲ್ಕರಲ್ಲಿ ವಾತ್ಸಲ್ಯವು ಒಂದಾಗಿದೆ. ಈ ಕವಿತೆಯಲ್ಲಿ ವಾತ್ಸಲ್ಯವು ಸ್ಥಾಯಿಯಾಗಿದೆ. ಹೊರಗಣ್ಣಿಗೆ-ವಾಚ ವಾಗಿ, ಮಗುವು ಮಾತೆಗೆ ಆಡಿದ ಮಾತೆಂದು ತೋರಿದರೂ ಆ ಅರ್ಥದಿಂದ ಕೂಡ ಭಾವವು ರಮ್ಯವಾಗಿದ್ದರೂ ಈ ಕವಿತೆಯೆಂದರೆ ಭಗವಂತನಿಗೆ ಭಕ್ತನು ತಾಯಿ-ಮಕ್ಕಳ ಆಟದಲ್ಲಿ ತನ್ನ ಭಕ್ತಿಲೀಲಾನಂದವನ್ನು ಸೂಸುತ್ತಿರುವದು ಸೂಚ್ಯವಾಗುವಂತಿದೆ ಮತ್ತೂ ಈ ಭಾವವು ರಮ್ಯತರವಾಗಿದೆ.

ಜೀವಪುರುಷೋತ್ತಮರ ಅಗಲಿಕೆಯು ಆಡುವಿಕೆಗೆ ಅವಲಂಬನ, ಅವರ ಪರಸ್ಪರಾ ಕರ್ಷಣವು ಕೂಡುವಿಕೆಗೆ ಉದ್ದೀಪನ; ಆ ಕೂಗು, ಆ ಹಣಿಗೆ ಆ ಕನ್ನಡಿ ಆ ಹೂವು ಆ ಉಂಗುರ ಆ ಅರಿಷಿಣ ಆ ಕುಂಕುಮ ಇವೆಲ್ಲವುಗಳು 'ಇದ್ದಾಳೆ— ಇಲ್ಲಿಯೇ ಅಡಗಿ ದ್ದಾಳೆ; ಹುಡುಕು—ಸಿಗುವಳು ಹುಡುಕು' ಎಂದು ಪ್ರಚೋದಿಸುವ ಕುರುಹುಗಳು. ಹುಡುಗನು ಈ ಕಾಣದ(?)ಕಾಟವನ್ನೂ ಹುಡುಕುವ ಆಟವೆಂದು ತಿಳಿದದ್ದರಲ್ಲಿ ಆನಂದದ ವಿಲಾಸವಿದೆ.

ಇಂಥ ಕವಿತೆಗಳನ್ನು ಮನವನ್ನೆಲ್ಲ ಮೌನವನ್ನಾಗಿಸಿ, ಜೀವವನ್ನೆಲ್ಲ ಕಿವಿಯಾ ಗಿಸಿ ಆಡಿಕೊಳ್ಳಬೇಕು ಹಾಡಿಕೊಳ್ಳಬೇಕು; ಅಂದರೆ ಗಾಢನಿದ್ರೆಯಿಂದೆದ್ದಮೇಲೆ ಶಾಂ ತಿಯ ಸ್ಮರಣೆಯೂ ಆನಂದದ ಅನುಭವವೂ ಆಗುವಂತೆ ಇವುಗಳ ಏಕಾಗ್ರಶ್ರವಣದಿಂದ ಯಾವದೋ ಒಂದು ನೆನಪಾಗಿ ಏನೋ ಒಂದು ಆನಂದವಾಗುವದು.

---

# ವಿಚಾರ ಮತ್ತು ಆಚಾರ.

( ೭ನೆಯ ಸಂಚಿಕೆಯಿಂದ ಮುಂದೆಸಾಗಿದ್ದು. )

---

**ಆಚಾರದ ಹುಟ್ಟು:**—ನಮ್ಮ ಕೈಯಿಂದ ಕ್ರಿಯೆಯು ಹೇಗೆ ಸಂಭವಿಸುವದು? ಉಣುವೆವು. ಉಂಣುವ ಕ್ರಿಯೆಯೆಂದರೆ ಕೈಯಿಂದ ತುತ್ತನ್ನೆತ್ತಿ ಬಾಯಿಯಲ್ಲಿ ಹಾಕಿ, ಅಗಿದಾಗಲೀ ಇಲ್ಲವೇ ಹಾಗೆಯೇ ಅವನ್ನು ನುಂಗುವದು. ಈ ಕರ್ಮವು ಶರೀರದಿಂ

ದಾಗುವ ಮೊದಲು, ಹಾಗೆ ಮಾಡಲು ಮನಸಿನ ನಿಶ್ಚಯವಾಗಲಿ, ಪ್ರಯತ್ನವಾಗಲಿ ಬೇಕು. ಹೀಗೆ ಮಾನಸಿಕಯತ್ನವಾಗುವಮೊದಲು ಅನ್ನ ಉಣ್ಣುವ ಇಚ್ಛೆಯುತ್ಪನ್ನವಾಗಲು ಬೇಕು, ಮತ್ತು ಇಚ್ಛೆಯ ಮೊದಲು ಉಣ್ಣುವದರಿಂದ ಹಸಿವೆಯಡಗುವದು ಅಥವಾ ಶರೀರದಾರ್ಢ್ಯಕೆಯಾಗುವ್ವದು ಎಂಬ ವಿಚಾರವು ಮನಸಿನಲ್ಲಿ ಬರಬೇಕು. ಮೊದಲು ವಿಚಾರ, ವಿಚಾರದಿಂದ ಇಚ್ಛೆ ಮತ್ತು ಇಚ್ಛೆಯಿಂದ ಪ್ರಯತ್ನ; ಹೀಗೆ ಇದು ಸಾರ್ವತ್ರಿಕ ಕ್ರಮವಿರುವದು. ಕೆಲವು ಕ್ರಿಯೆಗಳು ಬಲು ಜೇಗ ಆಗಿಹೋಗುತ್ತವೆ. ಅವುಗಳನ್ನು ನಸುಲೆಕ್ಕಿಸಬೇಕಾಗುವದು. ಗೆಳೆಯನೋರ್ವನೊಡನೆ ಮಾತನಾಡುತ್ತ ನಿಂತಿರುವಾಗ ಅಂಗಿಗೆ ಹುಡಿಯು ತಗುಲಿದುದನ್ನು ಕಂಡೊಡನೆಯೇ ನಾವದನ್ನು ಕೊಡುಹುತ್ತೇವೆ, ಹಾಗೂ ಕ್ರಿಯೆಯು ನಡೆದಾಗ ನಮ್ಮ ಲಕ್ಷ್ಯವು ಮಾತಿನಲ್ಲಿರುತ್ತದೆ. ಆದರೂ ಸರಿಯಾಗಿ ಬಗೆದುನೋಡಲು ಈ ಸಂದರ್ಭದಲ್ಲಿಯೂ ಧೂಳಿಯು ಅಯೋಗ್ಯ ಸ್ಥಳದಲ್ಲಿ ಹತ್ತಿಕೊಂಡಿರುವದು, ಮತ್ತು ಕೊಡಹುವದರಿಂದ ಅದು ಹಾರಿಹೋಗುವದೆಂಬ ಜ್ಞಾನ, ಹಾಗೆ ಮಾಡುವ ಇಚ್ಛೆ, ಮತ್ತು ಪ್ರಯತ್ನ ಇವು ಮೂರೂ ಸಂಗತಿಗಳು ನಡೆದಿರುವುದು ತಿಳಿಯುವದು. ಹಲವುಸಲ ಹೆರವರ ಒಲುಮೆಯಿಂದ ನಾವು ಇಚ್ಛೆಯಿಲ್ಲದೆ ಹೆಚ್ಚು ಉಂಡೆವೆನ್ನುವೆವು. ಇದರರ್ಥವಿಷ್ಟೆ. ಹಸಿವೆಯಡಗಲು ಇಷ್ಟು ಉಣ್ಣುವ ಅಗತ್ಯವಿರಲಿಲ್ಲ; ಅಷ್ಟೇಕೆ ? ಆದರಿಂದ ಶರೀರವು ತೊಂದರೆ ಹೊಂದುವುದು, ಎಂದು ತಿಳಿದಿದ್ದರೂ, ಹೆರವರ ಮನಮುರಿಯುವುದರಕಿಂತ, ಶರೀರವು ಕೊಂಚ ಕಷ್ಟಪಟ್ಟರೂ ಚಿಂತೆಯಿಲ್ಲ, ಎಂಬ ವಿಚಾರದಿಂದಲೇ ನಾವು ಉಂಡೆವು. ಅಂದರೆ ಇಲ್ಲಿಯೂ ಪರರ ಮನಮುರಿಯುವದು ಸರಿಯಲ್ಲವೆಂಬ ಜ್ಞಾನ, ಅವರ ಮನಸನ್ನು ಪ್ರಸನ್ನವಾಗಿರಿಸುವ ಇಚ್ಛೆ, ಹಾಗೂ ಅದರಂತೆ ಕೃತಿ, ಇವುಗಳು ಕಾಣುತ್ತವೆ. ಇದರ ವಿಪರೀತವಾಗಿ ಆಗ್ರಹವನ್ನು ಲೆಕ್ಕಿಸದ ಜನರಲ್ಲಿ, ಎರಡನೆಯವರ ಮನಸನ್ನು ಕೊಂಚ ಹೊತ್ತಿನ ಮಟ್ಟಿಗೆ ಮೆಚ್ಚಿಸುವುದರಿಂದುಂಟಾಗವ ಲಾಭದಕಿಂತಲೂ, ಸ್ವಶರೀರಕ್ಕೆ ಆಗಬಹುದಾದ ನೋವು ಹೆಚ್ಚಿನದು, ಎಂಬ ವಿಚಾರ, ಆ ನೋವನ್ನು ತಪ್ಪಿಸುವ ಇಚ್ಛೆ, ಹಾಗು ಅದರಂತೆ ಹೆಚ್ಚು ಉಣ್ಣದ ನಿಶ್ಚಯ, ಇವೆಲ್ಲ ಒಡೆದು ಕಾಣುತ್ತವೆ. ಜ್ಞಾನ, ಇಚ್ಛೆ ಪ್ರಯತ್ನ ಇವುಗಳ ಬಿಡದಂಥ ನೆಂಟತನವಿದೆ. ಒಂದು ಇರುವಲ್ಲಿ ಉಳಿದವೆರಡು ಇದ್ದೇ ಇರುತ್ತವೆ. ಹಲವರಿಗೆ ಈ ವಿಧಾನವು ಮೊದಲು ತಲೆಹಿಡಿಯಲಾರದು. ಅವರನ್ನುವರು "ನಮ್ಮ ಹಾಡು ಪಾಡಾಗಬೇಕೆಂದು ಎಷ್ಟೋ ಕಲ್ಪನೆಗಳು ನಮ್ಮ ಮನಸಿನಲ್ಲಿವೆ. ಕಲ್ಪನೆಗಳಿಗೇನು ! ಸುಗ್ಗಿ ! ಆದರೆ ಕೃತಿಯ ಹೆಸರಿನಿಂದ ಮಾತ್ರ ಬಂಡಿಗಾಲಿಯಂಥ ಸೊನ್ನೆ" ಈ ಮಾತು ನಿಜ. ಆದರೆ ಇದರಿಂದ ವಿಚಾರದ ಮಹತ್ವವೇನೂ ಕಡಿಮೆಯಾಗಲಾರದು. ಒಂದೇ ವಿಚಾರವು ಮನಸಿನಲ್ಲಿದ್ದರೆ ಅದರಂತೆ ಕೆಲಸವಾಗದೇ ಇರದು. ಆಗ ಹಿಗ್ಗಾಮುಗ್ಗಾ ಎಳೆಯಲ್ಪಡುವ ಹಗ್ಗದಂತೆ ಮನಸಿನ ಸ್ಥಿತಿಯಾಗುವದು. ಈ ಸ್ಥಿತಿಯನ್ನು Hamlet (ಹ್ಯಾಮ್ಲೆಟ್) ದಲ್ಲಿ ಶೇಕ್ಸಪಿಯರನು ಚೆನ್ನಾಗಿ ಚಿತ್ರಿಸಿರುವನು.

ಪಿಶಾಚರೂಪದಲ್ಲಿ ಬಂದು ತನ್ನ ತಂದೆಯು ಅಪ್ಪಣೆಯಿತ್ತಂತೆ, ಹ್ಯಾಮ್ಲೆಟನಿಗೆ ತನ್ನ ತಂದೆಯ ಕೊಲೆಗಾರನಾದ ಚಿಗಪ್ಪನ ಸೇಡು ತೀರಿಸಿಕೊಳ್ಳುವದಿದೆ. ಆದರೆ ಚಿಗಪ್ಪನನ್ನು ಕೊಲ್ಲುವ ಸಂಧಿ ಬಂದಾಗಲೆಲ್ಲ ಏನಾದರೂ ಹ್ಯಾಮ್ಲೆಟನ ಮನಸ್ಸಿನಲ್ಲಿ ವಿರುದ್ಧ ವಿಚಾರಗಳ ಕಚೇರಿಯು ನೆರೆದು ಆ ಕೆಲಸವು ಹಾಗೆಯೇ ಉಳಿದುಹೋಗಬೇಕು. ಹೀಗೇ ಆಗಿ ಕೊನೆಗೊಂಮೆ ದ್ವಂದ್ವಯುದ್ಧದ ಗಲಾಟೆಯಲ್ಲಿ, ವಿರುದ್ಧ ವಿಚಾರಗಳಿಗೆ ಅನುವು ದೊರೆಯದೆ ಆತನ ಕೈಯಿಂದ ಆ ಕೆಲಸವು ಜರುಗಿಹೋಯಿತು. ಹಾಗೆಯೇ ಜ್ಯೂಲಿಯಸ್ ಸೀಝರದಲ್ಲಿ ಕೃಷ್ಣಕಾರಸ್ಥಾನದ ವಿಷಯವಾಗಿ ಮಾತನಾಡುವಾಗ ಈ ಪರಸ್ಪರ ವಿರೋಧಿ ವಿಚಾರಗಳಿಂದ ಉಂಟಾಗುವ ಮನಸ್ಸಿನ ಸ್ಥಿತಿಯು ಪ್ರಕಟವಾಗಿದೆ.

" Between the acting of a dreadful thing
And the first motion, all the interim
Like phantasma, or a hideous dream;
The genius, and the moral instruments,
Are then in council and the state of man,
Like to a little kingdom, suffers then
The nature of an insurrection.

ನಮ್ಮ ಇರುವನ್ನು ಕುರಿತು ಸರಿಯಾಗಿ ವಿಚಾರಮಾಡಿ ಇಂಥ ಮಾರ್ಗವು ನಮಗೆ ಹೆಚ್ಚು ಲಾಭಕರವೆಂದು ಗಟ್ಟಿಯಾದ ನಿಶ್ಚಯವಾಯಿತೆಂದರೆ, ವಿರುದ್ಧ ಕಲ್ಪನೆಗಳು ತೊಲಗಿ ಹೋಗಿ ಮನದಲ್ಲಿ ಉಳಿಯುವ ಕಲ್ಪನೆಗಳು ಕಾರ್ಯಕ್ಷಮವಾಗಬಲ್ಲವು. ಆದರೆ ಅನೇಕಪ್ರಸಂಗಗಳಲ್ಲಿ ನಮ್ಮ ನಿಶ್ಚಯದಂತೆಯೂ ಕೆಲಸವಾಗುವುದಿಲ್ಲವಲ್ಲ! ವ್ಯಸನಿಮನುಷ್ಯನೊಬ್ಬನು ತನ್ನ ವ್ಯಸನದಿಂದುಂಟಾಗುವ ಹಾನಿಯನ್ನರಿತು ಅದರಿಂದ ದೂರಾಗಲು ನಿಶ್ಚಯಿಸುತ್ತಾನೆ. ಆದರೆ ಪ್ರಸಂಗದಲ್ಲಿ ಈ ನಿಶ್ಚಯವು ಸಡಿಲಾಗಿ ಆತನಿಗೆ ನಿಷಿದ್ಧಕರ್ಮದಿಂದ ಪರಾವೃತ್ತನಾಗುವುದು ಅಶಕ್ಯವಾಗುವುದು. ಇದರ ಕಾರಣವೇನು? ನಾವೆಲ್ಲರೂ ವ್ಯಸನಿಗಳಲ್ಲದಿದ್ದರೂ ಕೆಲವು ಪ್ರಸಂಗಗಳಲ್ಲಿ ನಮ್ಮ ತತ್ವವಿರುದ್ಧವಾಗಿ ನಡೆದುಕೊಳ್ಳುವಂತೆ ಮೋಹದ ಬಲೆಗೆ ಹೇಗೆ ಬೀಳುವೆವೆಂಬುದರ ಅನುಭವವೆಲ್ಲರಿಗೂ ಇದೆ. ಈ ಅನುಭವದ ಸೂಕ್ಷ್ಮ ನಿರೀಕ್ಷಣೆಯನ್ನು ಮಾಡಲು, ಮೋಹದ ಸಮಯದಲ್ಲಿ ತತ್ವಜ್ಞಾನವು ಎಚ್ಚರಿರದೆ ಆದರ ವಿರುದ್ಧವಾದ ಮಿಥ್ಯಾ ಜ್ಞಾನವು ಅಪರೆಡೆಯಲ್ಲಿರುತ್ತದೆ, ಎಂದು ತಿಳಿಯುವದು. ಎಷ್ಟೋಸಾರೆ ನಿಜವಾದ ಜ್ಞಾನದ ನೆನಪು ಕೂಡ ಉಳಿಯುವದಿಲ್ಲ; ಹಾಗೂ ನೆನಪಿದ್ದ ಸಮಯದಲ್ಲಿ ಅದು ಇದ್ದರೂ ನಿಶ್ಚಯ ರೂಪದಿಂದ ಇರುವದಿಲ್ಲ. ಅಂದರೆ ಇಲ್ಲಿಯೂ ಸಟಿಯಾದ ಜ್ಞಾನದಿಂದಲೂ ಕೂಡ ಕೆಟ್ಟ ಇಚ್ಛೆ ಹಾಗೂ ಕೃತಿ ಉಂಟಾಗುವವೆಂದು ನಮ್ಮ ಪ್ರತ್ಯಯಕ್ಕೆ ಬರುವುದು. ವೇದಾಂತ ಪರಿಭಾಷೆಯಲ್ಲಿ ಇದನ್ನೇ ಅವಿದ್ಯಾ ಕಾಮ–ಕರ್ಮ ಎಂಬ ಕ್ರಮದಲ್ಲಿ ತೋರಿಸಿರುವರು

ಈ ವಿವೇಚನೆಯ ಮೇಲಿಂದ ಮನಸಿನ ವಿಶ್ವಾಸವಿದ್ದಂತೆ ಕೆಲಸವಾಗುವುದು, ಎಂಬ ಸಿದ್ಧಾಂತವು ಅಬಾಧಿತವಿದೆಯೆನ್ನಲು ತಡೆಯಿಲ್ಲ.

ಇಲ್ಲಿಗೆ ಬಂದು ತಲುಪಲು ಇನ್ನೊಂದು ಪ್ರಶ್ನೆಯು ಸಿದ್ಧವಾಗಿರುವದು. ಒಮ್ಮೆ ನಿಶ್ಚಯವಾದ ಮೇಲೆ ಮೋಹದ ಸಮಯದಲ್ಲಿಯಾದರೂ ತದ್ವಿರುದ್ಧವಾದ ಪ್ರತ್ಯಯವು ಹೇಗೆ ಹುಟ್ಟುವದು ? ಇದನ್ನುತ್ತರಿಸುವ ಮೊದಲು, ಮನೋವ್ಯಾಪಾರದ ವಿಷಯವಾಗಿ ಕೊಂಚ ಹೆಚ್ಚು ವಿಚಾರಮಾಡೋಣ. ಮನಸಿನಲ್ಲಿ ಒಂದು ವೃತ್ತಿಯು ಮೊಳೆದು ಅಳಿದುಹೋದರೂ ಅದರ ಸಂಸ್ಕಾರವು ಮನದೊಳಗೆ ಉಳಿಯುವದು. ಮಾದರಿಗಾಗಿ, ನಾವಿಂದು ಕಂಡ ಗೃಹಸ್ಥನನ್ನು ಒಂದುವರ್ಷದ ಮೇಲೆ ( ನಡುವೆ ಆ ಗೃಹಸ್ಥನ ನೆನಪು ಕೂಡ ಇಲ್ಲದಿರುವಾಗ) ಮರಳಿ ನೋಡುವೆವು. ಎರಡನೆಯ ಸಲ ನೋಡುವಾಗ, ಆತನನ್ನು ಮೊದಲು ನೋಡಿದ ಗೃಹಸ್ಥನೀತನೆಂದು ನಾವು ಗುರುತಿಸುವೆವು. ಅಂದರೆ ನಮ್ಮ ಆತನ ಸಮಾಗಮವಾಗಿ ಒಂದು ವರ್ಷವಾಗಿ ಹೋಗಿದ್ದರೂ, ಅದರ ಸಂಸ್ಕಾರಗಳು ಮನಸಿನಲ್ಲಿ ಉಳಿದಿರಲೇಬೇಕು. ಈ ಸಂಸ್ಕಾರಗಳನ್ನು ನಾವು ಪ್ರತ್ಯಕ್ಷ ಅನುಭವಿಸಲಾರೆವು. ಆದರೆ ಅವಿಲ್ಲದಿದ್ದರೆ, ಮೊದಲನೆಯ ಭೆಟ್ಟಿ, ಎರಡನೆಯ ಭೆಟ್ಟಿ ಇವುಗಳ ಅನುಭವಗಳಲ್ಲಿ ಯಾವ ವ್ಯತ್ಯಾಸವೂ ಕಾಣಲಾರದು. ಆದರೆ ಎರಡನೆಯ ಸಲನಾವಾತನನ್ನು ಗುರುತಿಸುವೆವು. ಅಂದರೆ ಮೊದಲನೆ ಭೆಟ್ಟಿಯ ಪರಿಣಾಮವು ಸಂಸ್ಕಾರರೂಪದಿಂದ ಮನದಲ್ಲಿ ಉಳಿದಿರಲೇಬೇಕೆಂದಾಯಿತು. ಅಂತೆಯೇ ಎರಡನೆಯ ಸಲ ಈ ಪ್ರತ್ಯಭಿಜ್ಞಾವೃತ್ತಿಯು ಉತ್ಪನ್ನವಾಯಿತು ಎಂದು ಒಪ್ಪದ ಹೊರತು ಗತ್ಯಂತರವಿಲ್ಲ. ಈ ಸಂಸ್ಕಾರಗಳು ಕಾಣುವುದಿಲ್ಲ. ಅವುಗಳ ಮಹತ್ವವನ್ನು ವರ್ಣಿಸಿದಷ್ಟು ಕಡಿಮೆಯೇ. ಯಾವುದೇ ಒಳಿತು ಇಲ್ಲವೇ ಕೆಡುಕು ವಿಚಾರವು ಮನಸಿನಲ್ಲಿ ಮೊಳೆದೋರಲು ಅದರ ಸಂಸ್ಕಾರಗಳು ಉಳಿದು ಮರಳಿ ಅಂಥ ವಿಚಾರಗಳೇ ಮನಸಿನಲ್ಲಿ ಬರಲು ನೆರವಾಗಿರುವವು. ಮೊದಲೊಮ್ಮೆ ಹುಸಿಯಾಡುವುದು ಕಠಿನವೆನಿಸುವದು. ಆದರೆ ಒಮ್ಮೆ ಸುರುವಾಯಿತೆಂದರೆ ಅದು ಮೈಯುಂಡು ಹೋಗಿ ಮುಂದೆ ಎಳ್ಳು ಕಾಳಿನಷ್ಟು ಲಾಭವಿಲ್ಲದಿರುವಾಗಲೂ ನಾವು ಸುಮ್ಮನೆ ಸಟೆಯಾಡುವೆವು. ಅದೇ ನಾವು ಸಟೆಯಾಡುವುದರಿಂದ ಆಗಿನಮಟ್ಟಿಗೆ ಕೊಂಚ ಲಾಭವಿದ್ದರೂ ಅದನ್ನು ಲೆಕ್ಕಿಸದೆ ದಿಟವಾಡಿದರೆ, ಮುಂದಿನ ಸಾರೆ ಮೊದಲಿನಷ್ಟು ಕಷ್ಟವೆನಿಸದೆ ಮುಂದೆ ಮೆಲ್ಲ ಮೆಲ್ಲನೆ ಸತ್ಯ ನುಡಿಯುವುದು ನಮ್ಮ ಸ್ವಭಾವವಾಗಿರುವುದು. ಮನುಷ್ಯನ ಒಳ್ಳೆಯ ಅಥವಾ ಕೆಟ್ಟ ಶೀಲವು ಯಾವಾಗಲೂ ಸಂಸ್ಕಾರರೂಪದಿಂದಲೇ ಇರುವದು. ಅದು ಯೋಗ್ಯ ಪ್ರಸಂಗದಲ್ಲಿ ಆತನ ಮನಸಿನಲ್ಲಿ ಸ್ಥೂಲವೃತ್ತಿಯನ್ನು ಹುಟ್ಟಿಸಿ ಅದರಂತೆ ಕೃತಿಯನ್ನು ಮಾಡಿಸುವದು. ಪ್ರಾಮಾಣಿಕ ಮನುಷ್ಯನೊಬ್ಬನು ಮಲಗಿರುವಾಗಲೂ ಆತನು ಪ್ರಾಮಾಣಿಕನಿರುವನೆಂದು ನಾವನ್ನುವೆವು. ಯೋಗ್ಯಪ್ರಸಂಗವು ಬಂದಾಗ ಆತನ ಕೈಯಿಂದ ಪ್ರತ್ಯಕ್ಷಕೃತಿಯಾಗುವುದೆಂದಲ್ಲವೇ ? ಈ ಕೃತಿಯು ಯಾವಾಗ

ಸಂಸಾರ ರೂಪದಿಂದಿರುವ ಪ್ರಾಮಾಣಿಕತೆಯ ಪರಿಣಾಮವಿದ್ದು, ಪ್ರತ್ಯಕ್ಷವಾಗಿ ಕಾಣ
ಸದಿರುವ ಸಂಸ್ಕಾರವನ್ನು ಊಹಿಸಲು ಸಾಧನವಾಗಿದೆ. ವೃತ್ತಿಸಂಸ್ಕಾರಗಳಲ್ಲಿ ಸಂಸ್ಕಾ
ರದಿಂದ ವೃತ್ತಿ ಹಾಗು ವೃತ್ತಿಯಿಂದ ಸಂಸ್ಕಾರ, ಈ ಬಗೆಯ ಅನ್ಯೋನ್ಯ ಕಾರ್ಯ
ಕಾರಣಭಾವಸಂಬಂಧವಿದೆ. ಇದರಿಂದಲೇ ಎಲ್ಲ ಪ್ರಾಣಿಗಳ ಮನಸಿನ ವಿಕಾಸವಾಗಿ,
ಅವುಗಳ ಪ್ರಗತಿಯಾಗಬಲ್ಲದು. ವೃತ್ತಿಸಂಸ್ಕಾರಗಳ ಈ ಬಗೆಯ ಬಳಗವಿಲ್ಲದಿದ್ದರೆ,
ಏನು ಹಾಡಾಗಬಹುದಾಗಿತ್ತೆಂಬುದನ್ನು ಬಗೆಯುವದೂ ಕಷ್ಟ. ನಮ್ಮ ನೆನಪಿನ ಬಲ
ವೆಲ್ಲವೂ ಇದರ ಮೇಲೆಯೇ ಅವಲಂಬಿಸಿದೆ. ಇಷ್ಟೇ ಅಲ್ಲ, ಪೊಡವಿಯೊಳಗಿನ ಬೇಕಾದ
ಒಡವೆಯನ್ನು ಅನುಭವಿಸುವ ಬಲವು ನಮ್ಮಲ್ಲಿರಲು ಇದೇ ಕಾರಣವು. ಉದಾಹರಣೆ
ಗಾಗಿ, ಒಂದು ಹಣ್ಣಿನ ಜ್ಞಾನಮಾಡಿಕೊಳ್ಳಲು, ಮೊದಲು ನಾವದನ್ನು ಕಣ್ಣಿನಿಂದ
ನೋಡುತ್ತೇವೆ, ಕೈಯಿಂದ ಮುಟ್ಟುತ್ತೇವೆ. ಮೂಗಿನಿಂದ ಮೂಸುತ್ತೇವೆ. ಹಾಗೂ ನಾಲಿ
ಗೆಯಿಂದ ಅದರ ರಸವನ್ನು ಸವಿಯುತ್ತೇವೆ. ಹೀಗೆ ಬೇರೆಬೇರೆ ಇಂದ್ರಿಯಗಳಿಂದ ಅದರ
ಅನುಭವವನ್ನು ತೆಗೆದುಕೊಳ್ಳುತ್ತೇವೆ. ಆದರೆ ಮೂಗಿನಿಂದ ಅದರ ವಾಸನೆಯನ್ನು ತೆಗೆ
ದುಕೊಂಡಬಳಿಕ, ಆ ವಾಸನೆಯ ಪರಿಣಾಮವು ಮನಸಿನ ಮೇಲೆ ಮೂಡದೆಹೋದರೆ ಆ
ವಾಸನೆಯ ಅನುಭವದ ಸಂಬಂಧವು ಬೇರೇಬಗೆಯ ಅನುಭವಗಳೊಡನೆ ಹೊಂದಲಾರದು,
ಹಾಗೂ ಬೇರೆಬೇರೆ ಬಹಳ ಧರ್ಮಗಳನ್ನುಳ್ಳ ಇದು ಒಂದೇ ವಸ್ತುವೆಂದು ಅದರ ಜ್ಞಾನ
ವೂ ನಮಗಾಗಲಾರದು. ಹೊಸದಾಗಿ ಹುಟ್ಟಿದ ಹುಡುಗನ ಮನಸಿನಲ್ಲಿಯೂ
ಈ ಸಂಸ್ಕಾರಗಳಿರುವವೆಂಬದನ್ನು ಆ ಹುಡುಗನ ಕೃತಿಯನ್ನು ತಿಳಿದು ನೋಡಿದರೆ
ಒಪ್ಪಬೇಕಾಗುವದು. ಹಾಗೂ ಸಂಸ್ಕಾರಗಳು ವೃತ್ತಿಯಿಂದ ಹುಟ್ಟುವವೆಂದು ನಮಗೆ
ಅನುಭವದಿಂದ ತಿಳಿದಿರುವದರಿಂದ ಹುಡುಗನ ಮನಸಿನೊಳಗಿನ ಸಂಸ್ಕಾರಗಳು
ಪೂರ್ವಜನ್ಮದವೆಂದು ಒಡಂಬಡಲೇ ಬೇಕು. ಸಂಸ್ಕಾರಗಳ ಹುಟ್ಟು, ಹಾಗೂ ಮುಂದೆ
ವೃತ್ತಿಯ ಮೇಲೆ ಆಗುವ ಅವುಗಳ ಪರಿಣಾಮ, ಇವುಗಳನ್ನು ನೋಡಿದರೆ, ಒಳ್ಳೆಯ
ಕೆಲಸದಿಂದ ಪುಣ್ಯವೆಂತು ದೊರಕುವದು? ಮತ್ತು ಕೆಟ್ಟ ಕರ್ಮದಿಂದ ಪಾಪವು ಹೇಗೆ
ಬರುವದು? ಎಂಬದನ್ನು ತಿಳಿದು ನಮ್ಮಲ್ಲಿಯ ಚಿತ್ರಗುಪ್ತರ ಕಲ್ಪನೆಯ ಯಾಥಾರ್ಥ್ಯ
ಮನಗಾಣಬಹುದು.

ಈಗ ನಾವು ಮೋಹದ ಸಮಯದಲ್ಲಿ ಸ್ಥಿತಿಯು ಹೇಗಾಗುವುದೆಂಬದನ್ನು
ಹೇಳಬಲ್ಲೆವು. ಮೋಹಕ್ಕೆ ಮರುಳಾಗಬಾರದೆಂಬ ನಮ್ಮ ಗಟ್ಟಿ ನಿಶ್ಚಯವಿದ್ದಾಗ್ಯೂ,
ಹೊತ್ತಿನಲ್ಲಿ ನಮ್ಮ ಮೊದಲಿನ ವಿಚಾರಗಳ ಮತ್ತು ನಡತೆಯ ಸಂಸ್ಕಾರಗಳು
ಎಚ್ಚತ್ತು, ಅದರಂತೆ ವೃತ್ತಿಯಾಗಿ ಹಾಗೆಯೇ ಕೃತಿಯೂ ಆಗಿಹೋಗುವದು.
ಬಲು ವರ್ಷಗಳಿಂದ ಭಂಗನ್ನು ಸೇವಿಸಿದ ಮನುಷ್ಯನೊಬ್ಬನು ಅದರಿಂದಾಗುವ
ಅನಿಷ್ಟ ಪರಿಣಾಮವನ್ನರಿತು ಅದನ್ನು ಕುಡಿಯುವುದು ಬಿಡಬೇಕೆಂದು ಮನಃಪೂರ್ವಕ
ಶ್ಚಯಮಾಡಿದಾಗ್ಯೂ ಭಂಗ ಕುಡಿಯುವ ಜನರಲ್ಲಿ ಆತನು ಹೋದಾಗ ಅವನೆ

ದುರಿಗೆ ಭಂಗ ತುಂಬಿದ ಬಟ್ಟಲನ್ನು ಚಾಚಲು ಆಗ ಮೊದಲಿನ ಭಂಗ ಕುಡಿಯಲು ಅನುಕೂಲವಾದ ಪ್ರಬಲ ಸಂಸ್ಕಾರಗಳು ಉದ್ಬುದ್ಧವಾಗಿ ತನ್ನ ಕುಡಿಯಬಾರದೆಂಬ ನಿಶ್ಚಯವನ್ನಾತನು ಸಂಪೂರ್ಣವಾಗಿ ಮರೆತು ಹೋಗುವನು. ಆಗ ಭಂಗ ಕುಡಿಯುವದರಿಂದುಂಟಾಗುವ ಆನಂದವೆಂದೇ ಬುದ್ಧಿಯ ವಿಷಯವಾಗಿ ಬಟ್ಟಲನ್ನು ಬಾಯಿಗೆ ಹಚ್ಚುವನು. ಮದವಿಳಿದ ಬಳಿಕ ತನ್ನ ಮೊದಲಿನ ನಿಶ್ಚಯದ ನೆನಪಾಗಿ ಚಡಪಡಿಸುವನು. ಭಂಗ ಕುಡಿಯುವದರಿಂದ ಸುಖವಾಗುವದೆಂಬ ಪ್ರತ್ಯಯದ ಸಂಸ್ಕಾರವು ಮನಸಿನಲ್ಲಿರುವವರೆಗೂ ಕುಡಿಯಬಾರದೆಂಬ ನಿಶ್ಚಯವನ್ನು ಸಲುವಳಿಯಲ್ಲಿ ಬರಗೊಡುವುದಿಲ್ಲ. ಅಂತೆಯೇ ಇಂಥ ಸಂದರ್ಭದಲ್ಲಿಯೂ ಜ್ಞಾನದ ವಿರುದ್ಧ ನಡತೆಯಾಗದೆ ಆ ಹೊತ್ತಿನಲ್ಲಿರುವ ಮನಸಿನ ಪ್ರತ್ಯಯ (ದಿಟ ಇಲ್ಲವೆ ಸಟೆಯಾದ ಜ್ಞಾನ) ದಂತೆಯೇ ಆಗುತ್ತದೆ ಎನ್ನುವದು. ಹಲವು ಪ್ರಸಂಗಗಳಲ್ಲಿ ಅಭ್ಯಾಸಬಲದಿಂದ ಕೃತಿಗಳು ಇಷ್ಟು ತಟ್ಟನೆ ಆಗಿ ಹೋಗುತ್ತವೆಯಲ್ಲ. ಆ ಹೊತ್ತಿನಲ್ಲಿ ಮಿಥ್ಯಾಜ್ಞಾನದ ಸಂಸ್ಕಾರಗಳು ಸ್ಥೂಲವೃತ್ತಿಯನ್ನು ಹುಟ್ಟಿಸದಲೇ ಕೃತಿಯನ್ನು ಮಾಡಿರುತ್ತವೆ. ಇದರಿಂದ ಅಭ್ಯಾಸದ ಪರಿಣಾಮವೆಂದು ನಾವೇನು ಅನ್ನುವೆವೋ, ಅದೂ ಕೂಡ ಮಿಥ್ಯಾ ಜ್ಞಾನದ ಪರಿಣಾಮವೇ ಎಂದು ಸಿದ್ಧವಾಗಿ, ಬಹಳ ವರ್ಷಗಳಿಂದ ಮೈಯುಂಡ ವ್ಯಸನಗಳನ್ನೂ ವಿಚಾರದಿಂದ ಕಳೆಯಬಲ್ಲೆವು ಎನ್ನಬಹುದು. ವ್ಯಸನಿ ಮನುಷ್ಯನು ವ್ಯಸನವನ್ನು ಬಿಡುವ ನಿಶ್ಚಯ ಮಾಡಿದ ಮೇಲೆಯೂ ಮೊದಲಿನ ಪ್ರಬಲ ಸಂಸ್ಕಾರದಿಂದ, ಆತನ ನಿಶ್ಚಯವು ಸಲುವಳಿಯಲ್ಲಿ ಬರುವದಿಲ್ಲವಾದರೂ, ಆ ಸ್ಥಿತಿಯಲ್ಲಾದ ಆತನ ಪಶ್ಚಾತ್ತಾಪದಿಂದ ಆತನ ನಿಶ್ಚಯಕ್ಕೆ ತುಸು ಕಸುವು ಬರುವದು. ಹೀಗೆಯೇ ಆತನು ಪ್ರಯತ್ನವನ್ನು ಎಡೆಬಿಡದೆ ಸಾಗಿಸಿದರೆ, ಒಮ್ಮಿಲ್ಲೊಮ್ಮೆ ಆತನು ವ್ಯಸನದಿಂದ ಬಿಡುಗಡೆ ಹೊಂದುವನು. ಪಶ್ಚಾತ್ತಾಪದಿಂದಲೂ ಮತ್ತು ಮರಳಿ ಮರಳಿ ನಿಶ್ಚಯ ಮಾಡುವದರಿಂದಲೂ ಮೊದಲಿನ ಅವಿವೇಕದ ಸಂಸ್ಕಾರಗಳು ಮೆತ್ತಗಾಗಿ, ಕೊನೆಗೆ ಅವುಗಳ ಏನೂ ಪರಿಣಾಮವಾಗಲಾರದು; ಅಂದರೆ ಅವು ಇಲ್ಲದಾಗುವವು. ಇದರ ಒಳದಿರುಳಿಷ್ಟೇ, ವಿವೇಕದ ಸಂಸ್ಕಾರಗಳನ್ನು ಹೆಚ್ಚು ಹೆಚ್ಚು ಬಲಪಡಿಸುವಿಕೆ ಅವಿವೇಕದ ಸಂಸ್ಕಾರಗಳನ್ನು ಮೆತ್ತಗೆ ಮಾಡೋಣ, ಇವುಗಳ ಮೇಲೆಯೇ ದುರಭ್ಯಾಸವನ್ನು ತೊರೆದು ಒಳ್ಳೆಯ ಅಭ್ಯಾಸಕ್ಕೆ ಹತ್ತುವದು ಅವಲಂಬಿಸಿದೆ. ಎಲ್ಲವೂ ಜ್ಞಾನಾಜ್ಞಾನಗಳ ಸಂಸ್ಕಾರಗಳ ಬಡಿದಾಟವೇ !

ಇನ್ನು ಇದರ ಮೇಲೆ ಹೀಗೆ ಶಂಕಿಸಬಹುದು. ಮಿಥ್ಯಾಜ್ಞಾನದ ಸಂಸ್ಕಾರಗಳು ಇಂದಿನವರೆಗೆ ಇಷ್ಟು ವರ್ಷಗಳವರೆಗೆ (ಪೂರ್ವ ಜನ್ಮವನ್ನು ಹಿಡಿದರೆ ಅಷ್ಟು ವರ್ಷಗಳಲ್ಲಿಯೂ) ಮನಸಿನಲ್ಲಿರುವದರಿಂದ ಪ್ರಬಲವಾಗಿದ್ದು, ಕೆಲವು ವರ್ಷಗಳ ಜ್ಞಾನದ ಸಂಸ್ಕಾರಗಳಿಂದ ಹೇಗೆ ನಷ್ಟವಾಗುವವು ? ಮತ್ತು ಅವು ಜ್ಞಾನವನ್ನು ನಿಲ್ಲಗೊಡುವವೇ? ಇದರ ಉತ್ತರವು ಹೀಗಿದೆ. ನಮ್ಮ ಬುದ್ಧಿಗೆ ಯಾವಾಗಲೂ ನಿಜವಾದ ಜ್ಞಾನ

ಸೇರುತಲಿದ್ದು, ಒಮ್ಮೆ ಅದು ಸಿಗಲು ಬುದ್ಧಿಯು ಅದನ್ನು ಬಿಡಲಾರದು. ನಣಾಣಿ ಘಾತೋಹಿಷಿಯಾಂ ಸ್ವಭಾವಃ ಬುದ್ಧಿಗೆ ಸಟೆಯಾದ ತಿಳುವಳಿಕೆಯಿಂದ ಯಾವಾಗಲೂ ಸಮಾಧಾನವಾಗದೆ, ಅದಕ್ಕೊಮ್ಮೆ ನಿಜತತ್ವವು ಸಿಗಲು ಅದರ ಸಮಾಧಾನವಾಗಿ ಅದನ್ನೇ ಹೊಂದಿಕೊಂಡಿರಲು ಹವಣಿಸುತ್ತದೆ. ಹೀಗೆ ಬುದ್ಧಿಯು ಜ್ಞಾನದ ಅಥವಾ ಸತ್ಯದ ಕಡೆಗಿರುವದರಿಂದ ಕೊನೆಗೆ ಜ್ಞಾನದ ಅಂದರೆ ಸತ್ಯದ ಜಯವಾಗುವದು.

ಇದುವರೆಗಿನ ವಿವೇಚನೆಯಿಂದ, ಜ್ಞಾನ ಹಾಗೂ ಸದಾಚರಣ, ಮತ್ತು ಅಜ್ಞಾನ ಹಾಗೂ ದುರಾಚರಣ ಇವುಗಳ ನಿಕಟಸಂಬಂಧವಿರುವುದೆಂದು ತೋರದಿರದು. ಜ್ಞಾನ ಆಚಾರಗಳ ನಡುವೆ ತೋರುವ ವಿಸಂಗತತೆಯು ನಿಜವಾಗಿರದೆ ಅದು ಅಜ್ಞಾನವಿನ್ನೂ ನಾಶವಾಗದರ ಪರಿಣಾಮವೇ ಇರುವದು. ಅಂತೆಯೇ ಸತ್ ಜ್ಞಾನದ ಅಭ್ಯಾಸದಿಂದ ಕೆಟ್ಟ ಚಟಗಳು ದೂರ ತೊಲಗುವವು. ಕೆಟ್ಟ ಚಟಗಳು ಅಜ್ಞಾನಮೂಲಕವಿರದಿದ್ದರೆ ಅವುಗಳ ಮೇಲೆ ಜ್ಞಾನದ ಪರಿಣಾಮವೇನೂ ಆಗಲಾರದು. ಅಲ್ಲದೆ ಜ್ಞಾನದಿಂದ ದುರಾಚರಣದ ಚಟಗಳು ತೊಲಗಿ ಹೋಗಿ ಒಳ್ಳೇ ಅಭ್ಯಾಸಗಳು ಬರುವದಿದ್ದಲ್ಲಿ, ದುರಾಚರಣವು ಅಜ್ಞಾನಮೂಲಕವೆಂಬುದು ಸ್ಪಷ್ಟವೇ. ತಾತ್ಪರ್ಯವಿಷ್ಟೇ, ಮನುಷ್ಯನ ಜ್ಞಾನ ಹಾಗು ವ್ಯವಹಾರಗಳ ನಡುವೆ ಯಾವ ಬಗೆಯದಾಗಲೀ ವ್ಯತ್ಯಾಸವಿರದು. ಇಷ್ಟೇ ಅಲ್ಲ, ಒಳಿತು ಕೆಡುಕು ನಡತೆಗಳೇ ಮನಸಿನಲ್ಲಿಯ ಜ್ಞಾನ ಅಜ್ಞಾನಗಳ ನಿದರ್ಶಕವಾಗಿವೆ.

[ಅಪೂರ್ಣ]

—ಭಿ ಮೂ (ಇಂದೂರ.)

---

# ಪಾಶ್ಚಾತ್ಯರ ಪ್ರಗತಿಯ ಕಲ್ಪನೆಗಳು.

F. S. Marvin ಎಂಬವರು History and Progress [ ಇತಿಹಾಸವೂ ಪ್ರಗತಿಯೂ ] ಎಂಬ ಅಭ್ಯಾಸಾರ್ಹವಾದ ಪುಸ್ತಕವನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಪ್ರಗತಿಯ ಕಲ್ಪನೆಗಳು ಹೇಗೆ ಕಾಲಾನುಕಾಲದಿಂದ ವೃದ್ಧಿಯಾಗುತ್ತ ಬಂದವೆಂಬ ವಿಷಯವನ್ನು ಅನೇಕ ನಿಬಂಧಗಳ ರೂಪವಾಗಿ ಪಾಶ್ಚಾತ್ಯರಾಷ್ಟ್ರಗಳನ್ನಷ್ಟೇ ಕುರಿತು ಪ್ರತಿಪಾದಿಸಿಯದೆ.

ಜಗತ್ತಿನ ಆಯುಷ್ಯದಲ್ಲಿ ನಾಲ್ಕು ಯುಗಗಳಿದ್ದು ಕಾಲವು ಸವೆದಂತೆ ಧರ್ಮವೂ ಸವೆಯುವದೆಂದೂ ಈಗ ಕಲಿಯುಗವಿದ್ದು ಧರ್ಮಧೇನುವಿನ ಚತುಷ್ಪಾದಗಳಲ್ಲೊಂದೆ ಬಡಕಾಗಿ ಉಳಿದಿರುವದೆಂದೂ ನಮ್ಮ ಪುರಾಣ-ಪುಣ್ಯಕಥೆಗಳ ಆಖ್ಯಾನ. ಅಂದರೆ ಬರಬರುತ್ತ ಜಗತ್ತು ಉನ್ನತಿಯಿಂದ ಅವನತಿಗೆ ಜಾರುವದೆಂದು ಅವುಗಳ ಸಿದ್ಧಾಂತ.

ಜಗತ್ತಿನಲ್ಲಿ ಪ್ರಗತಿಯಿರದೆ ಅಧೋಗತಿಯೇ ಉಂಟಾಗುವದೆಂದು ಅವುಗಳ ಭವಿಷ್ಯ. ಇದನ್ನು ನಂಬಲೇಬೇಕೆಂದು ಈಗಿನ ಸಮಾಜದ ತಮ್ಮ ವ್ಯಾಪಾರಗಳನ್ನು ನೋಡಿ ಅನೇಕ ಶ್ರದ್ಧಾಳುಗಳು ಅನ್ನುವದುಂಟು. ಆದರೆ ಪಾಶ್ಚಾತ್ಯರು ಈ ಭವಿಷ್ಯದ ವಿರುದ್ಧವಾಗಿ ಪ್ರಗತಿಯ ಭವಿಷ್ಯವನ್ನು ಹೂಡಿದ್ದಾರೆ. ದಿನದಿನಕ್ಕೆ ತಿದ್ದುಪಡೆ ಹೊಂದುತ್ತ ಅಪೂರ್ಣವಾದ ಈ ಜಗತ್ತು ಪೂರ್ಣವಾಗುವದೆಂದು ಅವರ ಸಿದ್ಧಾಂತ. ಅದಕ್ಕೆ ಅವರಿಗೆ ಪ್ರಬಲ-ಕಾರಣಗಳೂ ಇವೆ. ನೂರಾರು ವರ್ಷಗಳ ಸಾಹಸದಿಂದ ಪಾಶ್ಚಾತ್ಯಯುಗದ ಮನುಷ್ಯಶಕ್ತಿಯು ಅಜ್ಞಾನವನ್ನೂ ಅಲ್ಪಶಕ್ತಿಯನ್ನೂ ದೂಡಿ ನಾನಾತರದ ಶೋಧಗಳನ್ನೂ ಸೃಷ್ಟಿಯ ಸೊಬಗುಗಳನ್ನೂ ಕಂಡು ಹಿಡಿದು ಭೂಮಿ-ಜಲ-ವಾಯುವಾಹನಗಳಲ್ಲಿಯೂ ಬೇರೆ ಸಣ್ಣ ದೊಡ್ಡ ಸೌಕರ್ಯಗಳಲ್ಲಿಯೂ ತುಂಬಿಕೊಂಡಿದೆ. ಇಂಥ ಪೌರುಷ ಯುಗದಲ್ಲಿ ಪ್ರಗತಿಯನ್ನು ನಂಬಬೇಡೆಂದರೆ ಹೇಗೆ? ಇದಕ್ಕೆ ಹೆಮ್ಮೆಯೆಂದೂ ಹೆಸರಿಡಲಿಕ್ಕೆ ಅನುವಿದೆ. ಆದರೆ ಲೇಶವಾದರೂ ಹೆಮ್ಮೆಯಿಲ್ಲದೆ ಪ್ರಗತಿಯನ್ನು ನಂಬಿ ಜೀವಿಸುವ ಮಹಾತ್ಮರು ಅವರಲ್ಲಿ ಇದ್ದಾರೆ. ವಿಶ್ವವೆಂಬ ದೇವರ ಗುಡಿಯಲ್ಲಿ ಪ್ರಗತಿಯ ಪ್ರಾಪ್ತಿಯೆಂದರೆ ದೇವರ ಪೂಜೆಯೆಂದೇ ಸದ್ಭಾವದಿಂದ ಮನ್ನಿಸುವ ವಿಭೂತಿಗಳೂ ಶಾಸ್ತ್ರೀಯ ಚಿಕಿತ್ಸಕರಲ್ಲಿ ಇದ್ದಾರೆ. ಅವರಲ್ಲಿ ಪ್ರಗತಿಯ ಪ್ರವರ್ತಕರಾದ Marvin ಎಂಬವರೊಬ್ಬರು. ತಮ್ಮ ಪುಸ್ತಕದಲ್ಲಿ ಅವರು ಶಾಸ್ತ್ರೀಯ ರಾಜಕೀಯ ಔದ್ಯೋಗಿಕ ಮುಂತಾದ ಜೀವನಶಾಖೆಗಳಲ್ಲಿ ಪ್ರಗತಿಯನ್ನು ಹೇಳಿದ್ದಲ್ಲದೆ, ನೀತಿ-ಧರ್ಮ-ತತ್ವಜ್ಞಾನಗಳ ಪ್ರಗತಿಯ ರೇಷೆಗಳನ್ನೂ ಗುರುತು ಹಚ್ಚಿದ್ದಾರೆ. ಹಿಂದುಸ್ಥಾನದ ಸ್ಥಿತಿಗತಿಯನ್ನು ನೋಡಲಿಕ್ಕೆ ಒಂದು ವರ್ಷದೊಳಗೆ ಈಗೊಮ್ಮೆ ಅವರು ಬೆಂದುಹೋಗಿದ್ದಾರೆ. ಇದರ ಮೇಲಿಂದ ಅವರ ವ್ಯಾಪಕ-ಸಹಾನುಭೂತಿಯನ್ನು ಅರಿತುಕೊಳ್ಳುವಂತಿದೆ.

ಇನ್ನು ಜ್ಞಾನಶಕ್ತಿಗಳೊಡನೆ ಇನ್ನೊಂದು ಧ್ಯೇಯವು ಪ್ರಗತಿಯ ಮಾರ್ಗದಲ್ಲಿ ಉಚ್ಚವಾಗಿ ನಿಂತಿದೆ. ಅದೆಂದರೆ, ಮಾನವ್ಯ ಪ್ರೀತಿ ಅಥವಾ ಭೂತದಯೆ, (Humanity) ಮನುಷ್ಯನ ವರ್ಣಗುಣಗಳನ್ನು ನೋಡದೆ ಮನುಷ್ಯನೆಂಬದೊಂದು ತತ್ವದ ಮೇಲೆ ಎಲ್ಲ ರಾಷ್ಟ್ರಗಳಲ್ಲಿ ಸಹಾನುಭೂತಿಯ ಕಿರಣಗಳು ಹೋಗಿ ಬರಹತ್ತಿದವೆಂದರೆ ಪ್ರಗತಿಸೂರ್ಯನು ಬೆಳಗತೊಡಗಿದಂತಾಗುವದು. ಆಫ್ರಿಕಾದೇಶದಲ್ಲಿಯೂ ತಮ್ಮ ಸಾಮ್ರಾಜ್ಯದ ಬೇರೆ ಭಾಗಗಳಲ್ಲಿಯೂ ಇದೇ ಆಂಗ್ಲಜನರು ಈ ತತ್ವವನ್ನು ದ್ರವ್ಯಾಶೆಯಿಂದಲೂ ದರ್ಪದಿಂದಲೂ ಹಿಮ್ಮೆಟ್ಟಿಸುತ್ತಿದ್ದರೂ, ಪಾಶ್ಚಾತ್ಯ-ವಿಚಾರಿಗಳಲ್ಲಿ ಇದಕ್ಕೆ ಪ್ರಾಶಸ್ತ್ಯವು ದೊರೆಯಹತ್ತಿದೆ. ಇದೇ ಪಾಶ್ಚಾತ್ಯ ಪ್ರಗತಿಯ ಸುಚಿಹ್ನ, ಕೇವಲ ಜ್ಞಾನಶಕ್ತಿಗಳು ಅಖಂಡವಾಗಿ ಬೆಳೆದು ಗ್ರೀಕರೋಮನ್ ರಾಷ್ಟ್ರಗಳು ಗತಿಸಿಹೋದವು. ಆದರೆ ಭೂತದಯೆಯು ಪ್ರಾಮುಖ್ಯವಾಗಿ ಬೆಳೆದರೆ ಈ ಪ್ರಗತಿಯು ಗತಿಸುವದಿಲ್ಲ. ಆರ್ಯರು ಅನಾದಿಕಾಲದಿಂದ ಕಿವಿಮಾತೆಂದು ಹೇಳುತ್ತ ಬಂದಿರುವ ವಿಶ್ವವ್ಯಾಪಿಯಾದ ಮಹತ್ತತ್ವದ ಅನುಭವವು ಪಾಶ್ಚಾತ್ಯರಿಗೆ ತಾನೇ ಆಗತೊಡಗುವದು. ಇಂಥ ವಿಕಾಸ

ಹೊಂದಿದ ಪ್ರಗತಿಯ ಲಕ್ಷಣವನ್ನು ಮಾರ್ವಿನ್ನರು ಸೂಚಿಸಿದ ಶಬ್ದಗಳಲ್ಲಿ ಇಡುವದೆಂದರೆ:—

Progress is the increase of Knowledge and Power on the lines of increasei n our appreciation of the Humanity of others.

ಜನರೊಳಗಿನ ಜನಾರ್ದನನ ಅನುಭೂತಿಯು ಹೆಚ್ಚೆಚ್ಚಾದಂತೆ ತನ್ಮೂಲಕ ನಮ್ಮ ಜ್ಞಾನಶಕ್ತಿಯೂ ಪ್ರಭುಶಕ್ತಿಯೂ ಬೆಳೆಯುವದೇ ಪ್ರಗತಿ.

—ರಂಗ.

# ಗುರುಪೂಜೆ.

ಪೂಜೆಯೆಂದರೆ ವಾತ್ಸಲ್ಯ—ಮಮತೆಗಳ ಆಲಿಂಗನ. ಪೂಜ್ಯನಲ್ಲಿ ವಾತ್ಸಲ್ಯ, ಪೂಜಾರಿಯಲ್ಲಿ "ಮಮತೆ". ಹೀರುವುದು ವಾತ್ಸಲ್ಯದ ಸ್ವಭಾವ. ಹರಿಯುವುದು ಮಮತೆಯ ಸ್ವಭಾವ. ಅದು ಹೀರಿದತ್ತ ಇದು ಹರಿದೀತು; ಇದು ಹರಿದು ಬಂದರೆ ಅದು ಹೀರೀತು. ಮಮತೆಗೆ ಮಹಾಪೂರ ಬಂದು, ಅದು ವಿಶ್ವವನ್ನೆಲ್ಲ ತುಂಬಿ ತುಳುಕಬಹುದು. ಆಗ ವಾತ್ಸಲ್ಯವು ಅದನ್ನೆಲ್ಲ ಹಿಗ್ಗಿ ಹೀರಬಹುದು. ಹೀಗೊಮ್ಮೆ ವಾತ್ಸಲ್ಯ ಮಮತೆಗಳಲ್ಲಿ ಐಕ್ಯವು ಒಡಮೂಡುವುದು. ಆಗ ಎಲ್ಲೆಲ್ಲಿಯೂ ವಾತ್ಸಲ್ಯ !!!

ಇಂಥ ವಾತ್ಸಲ್ಯದಿಂದ ತುಂಬಿರುವುದಾ ಭಕ್ತವತ್ಸಲನ ಅಂತರಂಗವು. ಇವನು ಗುರುವಿನ ಗುರುವು; ಎಂದರೆ ಅನಂತನು. ಗುರುವೆಂಬ ಬಿರುದು ಈ ಅನಂತನಿಗಲ್ಲದೆ ಇನ್ನಾರಿಗೆ ತಾನೆ ಸಲ್ಲಬಲ್ಲದು? ಈ ವತ್ಸಲನೊಡನೆ ವತ್ಸನಾಡುವ ಆಟವೇ ಪೂಜೆ.

ಈ ಪೂಜಾತತ್ವದಲ್ಲಿ ಕಂಡುಬರುವ ಒಂದು ವಿಶೇಷವೇನೆಂದರೆ "ಮೀಸಲು." ಇದನ್ನು ಕಷ್ಟಪಟ್ಟು ಕಲಿಯಬೇಕಾಗುದೇನೂ ಇಲ್ಲ. ಮಮತೆಯು ಇದನ್ನು ತಾನಾಗಿಯೇ ಮಾಡಿಸುವದು. ಮಲ್ಲಿಗೆಯು ಮಕರಂದವನ್ನು ಮೂಸದೆ ಮೀಸಲಿಡುವವನು, ಮೈಮನಗಳನ್ನು ಮೀಸಲಿಡುವುದಕ್ಕೆ ಹವಣಿಸುವನು. ಮಡಿಯು ಮೀಸಲಿನ ಒಂದಂಗ, ಮುಟ್ಟಿ ಮಾಸಬಾರದೆಂಬುದೇ ಇದರ ಗುಟ್ಟು. ಇಂಥ ಪಾವಿತ್ರ್ಯಪೂತ ಪ್ರೇಮವಿಲ್ಲದುದು ಸಮರ್ಪಣೆಗೆ ಸಲ್ಲುವದೇ ?

ಗುರೂಪಾಸನೆಯಲ್ಲಿ ಸಾಗುವ ಗುರುಪೂಜೆಯಿಂದ ಅವನ ಸಲಿಗೆಗೆ ಇವನು ಸಲ್ಲುವನು. ಸಂದೊಡನೆಯೇ ಸಂದು ಹೊಂದುವುದು; ಎಂದರೆ ಎಲ್ಲವೂ ಒಂದಾಗುವುದು. ಮುಗಿಲಲ್ಲಿ ಮೊಳಗಿದ ದನಿಯು ಮುಗಿಲಲ್ಲಿಯೇ ಮುಳುಗಿದಂತೆ, ಜಲದಲ್ಲಿ ಜನಿಸಿದ ಅಲೆಯು ಜಲದಲ್ಲಿಯೆ ಕಲೆಯುವಂತೆ ನೋಡೀ ದೇವಜೀವರ ಭಾವಸಾಮರಸ್ಯವು !!

—ಚೆನ್ನಮಲ್ಲ.

# ಪುಸ್ತಕಪರಿಚಯ.

೧. **ರಂಗಭೂಮಿ:**—೨ನೇ ವರ್ಷ ೧ನೇ ಸಂಚಿಕೆ ಸಂ॥ ದ. ಕೃ. ಭಾರದ್ವಾಜರು. ವಾರ್ಷಿಕಚಂದಾ ೩—೦—೦ ವಿಳಾಸ:—ವ್ಯವಸ್ಥಾಪಕ 'ರಂಗ ಭೂಮಿ' ಕಾರ್ಯಾಲಯ ಬಸವನಗುಡಿ, ಬೆಂಗಳೂರು. ಈ ವರ್ಷದ ಮೊದಲ ಸಂಚಿಕೆಯಲ್ಲಿ ಹೋದ ವರ್ಷದ ಸಂಚಿಕೆಗಳ ಗುಣಾಂಶಗಳೆಲ್ಲ ಇದ್ದು, ಮೂರು ಬಣ್ಣದ ಮುಖ ಚಿತ್ರವೊಂದು ಹೆಚ್ಚಿನ ಗುಣವಾಗಿದೆ. ಆದರೆ—ಮೈಸೂರಿನ ಮ। ರಾ। ವೆಂಕಟಪ್ಪನವರು ಬರೆದದ್ದಾಗಲಿ ಬೆಂಗಳೂರಿನ ಮ। ರಾ। ಪಾವಂಜೆಯವರದಾಗಲಿ, ವಿಜಾಪುರದ ಮ। ರಾ। ಮಿಣಚಿಗಿಯವರದಾಗಲಿ ಸೊಲ್ಲಾಪುರದ ಮ। ರಾ। ಕುಂಬಾರವರದಾಗಲಿ ಚಿತ್ರವಿದ್ದರೆ ಹೆಚ್ಚು ಒಪ್ಪಾಗುತ್ತಿತ್ತೆಂದು ನಾವೇನು' ಹೇಳಬೇಕೇ? ಮೋಡಣ್ಣನ ತಮ್ಮ ಎಂಬ ಮಕ್ಕಳ ನಾಟಕವೂ ಶ್ರೀಮತಿ ಸೌ। 'ಭಾರತಿ 'ಯವರ ನಾಟಕವೂ ತಮ್ಮ ತಮ್ಮ ಪರಿಯಿಂದ ವಾಚನೀಯಗಳಾಗಿವೆ ನಟ—ನಾಟಕ—ನಾಟ್ಯ—ನಾಟ್ಯಶಾಸ್ತ್ರಗಳನ್ನು ಪ್ರೀತಿಸುವವರೆಲ್ಲರೂ ಈ ಪತ್ರಿಕೆಗೆ ಪ್ರೋತ್ಸಾಹವನ್ನೀಯದಿರಲಾರರೆಂದು ನಮ್ಮ ಭರವಸೆ. ನಾಟಕ ಕಂಪನಿಯವರು ಇದಕ್ಕೆ ಆಶ್ರಯವನ್ನು ಕೊಡುವದು ಆನುಷಂಗಿಕ ಕರ್ತವ್ಯ.

೨. **ಮಕ್ಕಳ ಪುಸ್ತಕ:**—೧ನೇ ವರ್ಷ ೧ನೇ ಸಂಚಿಕೆ ಸಂ॥ ದ. ಕೃ. ಭಾರದ್ವಾಜ. ವಾರ್ಷಿಕಚಂದಾ ರೂ ೩-೦-೦ ವಿಳಾಸ:—ಕೃಷ್ಣ ಮತ್ತು ಕಂಪನಿ, ಪ್ರಕಾಶಕರು. ಬಳೇ ಪೇಟೆ, ಬೆಂಗಳೂರು. ಶ್ರೀಯುತ ದ. ಕೃ. ಭಾರದ್ವಾಜರ ಸಂಪಾದಕತ್ವವೆಂದ ಕೂಡಲೆ ಚಿತ್ರ ವೈಚಿತ್ರ್ಯ, ಅಚ್ಚುಕಟ್ಟುತನದ ಸಾಕ್ಷಿಯೆಂದು ತಿಳಿಯಬೇಕು. ಈ ಪತ್ರಿಕೆಯೂ ಹಾಗಿದೆ. ಬರೆಹಗಾರರೆಂದರೆ, ಬಡವರು ಎಂಬುದು ನಾಡಿಗೆ ಗೊತ್ತಿದ್ದ ಮಾತು. ಶ್ರೀ ಭಾರದ್ವಾಜರೂ ಈ ನಿಯಮಕ್ಕೆ ಅಪವಾದದಂತಿಲ್ಲ. ಅಂತೆಯೇ ಇದೆಷ್ಟು ದಿನ ಬಾಳೀತೋ ಎಂಬ ಚಿಂತೆಗೆ ಅನುವಿರಬಹುದಾಗಿತ್ತು. ಆದರೆ ಕೃಷ್ಣ ಮತ್ತು ಕಂಪನಿಯವರು ಪತ್ರಿಕಾನಿರ್ವಹಣದ ಹೊರೆಯನ್ನು ಹೊತ್ತಿರುವದದಿಂದ ಆ ಚಿಂತೆಗೆ ಆಸ್ಪದವಿಲ್ಲೆನ್ನಬಹುದು. ಎಲ್ಲರಿಗೂ ಬೇಕಾದ ಆದರೆ ಸದ್ಯಕ್ಕೆ ಯಾರೂ ಕೈಹಾಕದೆ ಇದ್ದ ಈ ಕೆಲಸವನ್ನು ಕೈಕೊಂಡ ಸೇವೆಗಾಗಿ ಕಂಪನಿಯವರು ಕನ್ನಡಿಗರ ಆದರಕ್ಕೂ ಆಶ್ರಯಕ್ಕೂ ಪಾತ್ರರಾಗಿದ್ದಾರೆ. 'ಪಟ್ಟಣ ಪರಿಚಯ'ವು ಭೂಮಂಡಲ ಬೋಧಿನಿಯ ಹಾದಿಯನ್ನು ಹಿಡಿದಿದೆ. 'ಅದೇಕೆ ಹಾಗಾಗಬೇಕು' ಎಂಬ ಲೇಖನವು ಕುತೂಹಲ ವಿಸ್ಮಯೋದ್ದೀಪಕವಾಗುವಷ್ಟು ವರ್ಣನಾಸರಣಿಯುಳ್ಳದ್ದಾಗಿಲ್ಲ. ಅಜ್ಜಿಯ ಕಥೆಯೂ 'ಮೋಡಣ್ಣನ ತಮ್ಮ' ಎಂಬ ಕವಿತೆಯೂ ಸರಸವಾಗಿವೆ. ೪ನೇ ಪುಟದ ಮೇಲಿನ ಚಿತ್ರಕ್ಕೊಂದು ಟಿಪ್ಪಣಿ ಬೇಕಾಗಿತ್ತು. 'ಪ್ರಾರ್ಥನೆ' ಮತ್ತು 'ಅಂಣನ ಮಾತು' ಇವುಗಳ ತಲೆದೆಸೆಗಿರುವ ಚಿತ್ರಗಳಲ್ಲಿ 'ಬಂಗಾಲೀ' ಧರತಿಯ ಮಕ್ಕಳೇಕೆ

ಚಿತ್ರಿಸಲ್ಪಟ್ಟಿರುವರೋ ಅದು ತಿಳಿಯಬೇಕಾದ ವಿಷಯು ! ಅಂತೂ ಏನು, ವಿಷಯು ಗಳು ಇನ್ನೂ ಹೆಚ್ಚು ಕುತೂಹಲಕಾರಿಗಳೂ ವಿಸ್ಮಯೋದ್ದೀಪಕಗಳೂ, ಲೇಖನ ಶೈಲಿಯು ಹೆಚ್ಚು ಲಲಿತವೂ ವರ್ಣನಾಕ್ಷಮವೂ, ಚಿತ್ರಗಳು ಹೆಚ್ಚು ಉಚಿತವಾದವು ಗಳೂ ಬೇಕು. ಮತ್ತೊಂದೆ ಮಾತು:—ಮಕ್ಕಳಿಗಾಗಿ ಹೊರಡುವ ಪುಸ್ತಕಕ್ಕೆ ಮೂರು ರೂಪಾಯಿ ಎಂದ ಕೂಡಲೇ ಮೋರೆದಿರುವಬಹುದು. ನಮ್ಮ ಉದಾಸೀನ ಜನರು, ಒಂದಿಷ್ಟು ಹೆಚ್ಚೂ ಇದೆ ಬೆಲೆ. ಇದಕ್ಕೆ ಪ್ರಕಾಶಕರ ಹಂಚಿಕೆಯೇನು ? ಅದಿರಲಿ, ಮಕ್ಕಳ ಹಿತಬಯಸುವವರು ಈ ಪತ್ರಿಕೆಯು ಉಪಯೋಗವನ್ನು ಮಾಡಿಕೊಳ್ಳಬೇಕು.

೩. **ಶಿವಾನುಭವ:**—೧ನೇ ವರ್ಷದ ನಾಲ್ಕು ಸಂಚಿಕೆಗಳು. ಸಂ॥ ರಾವಸಾಹೇಬ ಫ. ಗು. ಹಳಕಟ್ಟಿ ಬಿ. ಏ. ಎಲ್‌ಎಲ್, ಬಿ. ವಿಜಾಪೂರ ವಾರ್ಷಿಕ ಚಂದಾ ೩-೮-೦ ಪೋಷಕರಿಗೆ ೧೦-೮-೦ ಆಶ್ರಯದಾತರಿಗೆ ೫-೮-೦ ಇದೊಂದು ತ್ರೈಮಾಸಿಕ. ವೀರಶೈವಮತಗ್ರಂಥಗಳನ್ನೂ ಪ್ರಸಿದ್ಧಪಡಿಸುವದೂ ವೀರಶೈವರ ಧಾರ್ಮಿಕ ರಾಜಕೀಯ, ಸಾಮಾಜಿಕ ಇತಿಹಾಸವನ್ನು ಶೋಧಿಸಿ ಪ್ರಕಟಿಸುವದೂ, ವೀರಶೈವರ ಧರ್ಮದ ಮರ್ಮಗಳ ಬಗ್ಗೆ ಸುಲಭಭಾಷೆಯಲ್ಲಿ ಲೇಖನಗಳನ್ನು ಬರೆಯಿಸುವದೂ ಈ ಪತ್ರಿಕೆಯ ಉದ್ದೇಶವಾಗಿದೆ.

ಮೊದಲ ವರ್ಷದಲ್ಲಿ ೧೧ ಗ್ರಂಥಗಳು ಪ್ರಕಟವಾಗಿದ್ದು ಅವುಗಳಲ್ಲಿ ಶ್ರೀ ಬಸವೇಶ್ವರ ಮಹಾದೇವಿಯಕ್ಕ ಮೊದಲಾದವರ ವಚನಗಳು ಬಹಳೇ ಮಹತ್ವವುಳ್ಳವುಗಳಾಗಿವೆ. **ವೀರಶೈವರಂತೂ ಈ ಪತ್ರಿಕೆಗೆ ಪ್ರೋತ್ಸಾಹನ ಕೊಡಲೇಬೇಕು,** ಆದರೆ ವೀರಶೈವರಂತೂ ಈ ಪತ್ರಿಕೆಯು ಉಪಯೋಗವನ್ನು ಮಾಡಿಕೊಳ್ಳಲು ತಪ್ಪಬಾರದು. ವೀರಶೈವರಾದರೂ ಕನ್ನಡಿಗರಷ್ಟೆ. ಅವರ ಭಕ್ತಿ, ಅವರ ಬುದ್ಧಿ, ಅವರ ಶೀಲ, ಅವರ ಚಾರಿತ್ರ್ಯ ಇವೆಲ್ಲ ಕನ್ನಡಿಗರ ಜಾತಿಯ ಜ್ಯೋತಿ. ಭಕ್ತಿ ಭೇದವನ್ನೆಣಿಸಿ ಜ್ಯೋತಿಗೆ ಎರವಾಗಬಹುದೇ ? ಜಾತಿಭೇದವನ್ನೆಣಿಸಿ ನೀತಿಗೆ ನೆರವಾಗದಿರರೇ ? ವೀರಶೈವ ಧರ್ಮವು ಕರ್ನಾಟಕವನ್ನು ಮಿಕ್ಕಿರಬಹುದು. ಆದರೆ ಕರ್ನಾಟಕವನ್ನು ಹೊಕ್ಕು ಹೊರತು 'ವಚನ' ಸುಧೆಯು ದೊರೆಯದು. ಈ ವಚನಗಂಗೆಯು ಕನ್ನಡಿಗರ ಜಡಿಮುಡಿಯಲ್ಲಿದೆ. ಅದರಲ್ಲಿ ಮಿಂದು ಮಡಿಯಾಗಲಾಗಲೆಣಿಸಿಸದವರಾರು ? ವೀರಶೈವೇತರರು ವೀರಶೈವ ಧರ್ಮದ ಮರ್ಮವನ್ನು ಅರಿತುಕೊಂಡರೆ ಬ್ರಾಹ್ಮಣ ಬ್ರಾಹ್ಮಣೇತರ' ಎಂಬ ತರದ ಒಡಕುಗಳನ್ನು ಕಳೆದು ಹಾಕಲು ಸಾಧನವಾಗಲೂಬಹುದು.

ಸಂಪಾದಕರು ಸಾರಾಸಾರ ವಿಮರ್ಶೆಯುಳ್ಳವರಾಗಿರುವದರಿಂದಲೂ ಕೈಕೊಂಡ ವಿಷಯದಲ್ಲಿ ದುಡಿದವರಿರುವದರಿಂದಲೂ ಹೊಸದಾಗಿ ಸೂಚಿಸುವಂತೆ ವಿಶೇಷವೇನೂ ಇರದಿದ್ದರೂ (೧) ತುಲನಾತ್ಮಕ ಪದ್ಧತಿಯಿಂದ ತಮ್ಮ ಧರ್ಮತತ್ವಗಳನ್ನಿಡುವದೊಂದು ಉದ್ದೇಶವೆಂದಿಟ್ಟುಕೊಂಡರೆ ಒಳಿತಾಗುವದೆಂದೂ (೨) ಭಾಷೆಯು ಶುದ್ಧತೆಯು ಕಡೆಗೆ

ಇನ್ನೊಂದಿಷ್ಟು ಹೆಚ್ಚು ಗಮನ ಕೊಡಬೇಕೆಂದೂ (೩) ಶ್ರೀ ಮಿಣಜಿಗಿಯವರಂಥ ಚಿತ್ರಕಾರರಿಗೆ ಇದೇ ಪ್ರಕಾರ ಆಶ್ರಯ ಕೊಡುತ್ತಿರಬೇಕೆಂದೂ ಸೂಚಿಸುತ್ತೇವೆ.

೪. ವಿಶ್ವಬಂಧು (ಶ್ರೀ. ಎಮ್, ಎಲ್, ವರ್ಧಮಾನಯ್ಯನವರ ಸ್ಮಾರಕಸಂಚಿಕೆ ) :—ಕೊಡಗೈಯ ಕೊಂಡಾಟಕ್ಕೆ ಕಡಮೆಯಿಲ್ಲ. ಅದು ತೀರಿದರೆ ತೀರಿತು; ಅಳುವಿಗೂ ಅಳತೆಯಿಲ್ಲ. ಆಗೀಗ ಒಬ್ಬ ಗುಣಿಯು ಉದಿಸಿದರೆ ಅವರ ಗುಣ ಗುಂಫನ ಮಾಡುವ ಗುಣಿರಸಿಕರೂ ಇರುವರು. ಆದರೆ—ಆದರೆ, ವರ್ಧಮಾನಯ್ಯನ ವರ ಚರಿತ್ರದರ್ಶನದಿಂದಾಗಲೀ ಗುಣಶ್ರವಣದಿಂದಾಗಲೀ ಈ ದಾನಬುದ್ಧಿಯೂ ಈ ಸೇವಾತತ್ಪರತೆಯೂ ಈ ಹೃದಯ ವೈಶಾಲ್ಯವೂ ಉಂಟಾದರೆ ಕರ್ನಾಟಕದ ದುರ್ದಿನ ಗಳು ತೀರಿದ ಕುರುಹೆಂದು ತಿಳಿಯಬಹುದು; ಆದರೆ—ಉಂಟಾದರೆ......

ದಿವಂಗತರಾದ ವೀಣೆಯ ಶೇಷಣ್ಣನವರೂ, ವರದಾಚಾರ್ಯರೂ ಕೀರ್ತಿಶೇಷ ರಾದರೆಂದು ಏನೋ ಸಮಾಧಾನ ಹಚ್ಚಿಕೊಳ್ಳಬಹುದು. ಯಾಕಂದರೆ ಅವರಿಗೆ ವಯ ಸ್ಸಾಗಿತ್ತು. ಆದರೆ, ಪೌರ್ಣಿಮೋನ್ಮುಖನಾದ ವರ್ಧಮಾನಚಂದ್ರನನ್ನು ಅರ್ಧ ಹಾದಿ ಯಲ್ಲಿಯೇ ನುಂಗಿದ ರಾಹುಮುಖನಾದ ಅಕಾಲಮೃತ್ಯುವನ್ನು ಯಾವ ತಾತ್ವಿಕವಿಚಾ ರದಿಂದಲಾದರೂ ಸಾಧುವೆಂದು ಸಮಾಧಾನ ಹಚ್ಚಿಕೊಳ್ಳಲಾಗುವದೇ ?

ಇಂಥ ಮರಣಗಳ ಮರೆವಾಗುವದು ಸುಲಭವಲ್ಲ; ಶಕ್ಯವೂ ಅಲ್ಲ. ಇಂಥವರ ಕೀರ್ತಿ 'ಖಂಡಿತ' ವೆಂಬುದೇನೂ ಸುಳ್ಳಲ್ಲ.

'ವರ್ಧಮಾನ' ಮತ್ತು 'ಸ್ಮಾರಕ' ಈ ಎರಡು ಶಬ್ದಗಳಲ್ಲಿ ಏನೋ ವಿರೋಧ ವಿದೆ. ಸ್ಥಾವರಸ್ಮಾರಕಗಳಲ್ಲಿ ಸ್ಥಿರತೆಯ ಭಾಸವಿದೆ. ಆದರೆ ಸದ್ಗುಣ ಸದಾಚಾರ ಸದ್ಬುದ್ಧಿಯ ಅಂಗೀಕಾರದಿಂದ ನಿಜವಾಗಿ ವರ್ಧಮಾನವಾದ ಸ್ಮಾರಕವಾಗುವದು. ಇಂಥ ವರ್ಧಮಾನಸ್ಮಾರಕವನ್ನು ಕನ್ನಡಿಗರು ಅಂಗೀಕರಿಸುವರೇ ?

ಈ ಸಂಚಿಕೆಯಲ್ಲಿ ಶ್ರೀಮಾನ್ ಆರ್. ನರಸಿಂಹಾಚಾರ್ಯರ ಕವಿತೆ ಮತ್ತು ಶ್ರೀಮಾನ ಡಿ. ವ್ಹಿ. ಗುಂಡಪ್ಪನವರ ಲೇಖನ ಮೊದಲಾದವುಗಳು ಓದಲರ್ಹವಾಗಿವೆ. ಬೇರೆ ಬರೆದಿಲ್ಲ. ಸಂಚಿಕೆಯು ಶೋಕದಿಂದ ಹೃದಯಭೇದಕವೂ ಚಿತ್ರಗಳಿಂದ ಚಿತ್ತ ವೇಧಕವೂ ಆಗಿದೆ.

# ಬರೇ ನಗೆಚಾಟಿಕೆ.

## ಬಂದವರು ಯಾರು ?

**ವಕೀಲರ ಗೆಳೆಯ:**—ರಾಯರೇ ಹೊರಗೆ ಯಾರು? ನಿಮ್ಮ ಪಕ್ಷಕಾರರು ಬಂದಿರುವರೇನು?

**ವಕೀಲ:**—ಬಂದವರು ನಮ್ಮ ಪಕ್ಷಕಾರರಲ್ಲ; ನಮ್ಮ ಶ್ರಾದ್ಧಕಾರರು (ದೇಶಾವರೀ ಬ್ರಾಹ್ಮಣರು)

---

## ಬನ್ನಿ—ಬಂಗಾರ.

ಪ್ರ:—ಹಿಂದುಸ್ಥಾನದಲ್ಲಿ ಮೊದಲು ಹೊನ್ನಿನ ಹೊಗೆ ಹೊರಡುತ್ತಿತ್ತೆಂದು ಏಕೆ ಅನ್ನುವರು ?

ಉ:—ಆಗ ಬನ್ನಿಯು ಕಟ್ಟಿಗೆಯನ್ನು ಬಹಳವಾಗಿ ಉರಿಹಚ್ಚುತ್ತಿದ್ದರೆಂದು.

---

## ಹೊತ್ತಿಗೆ.

ಬೆರ್ಕಿ:—ನಿನಗೆ ಹೊತ್ತಿಗೆ ಓದಲಿಕ್ಕೆ ಬರುವದೋ ? (ಪುಸ್ತಕ ತೋರಿಸಿ)
ಭೋಳ್ಯಾ:—ಓಹೋ! ಬರದೇನು ಮಾಡೀತು? ಅದಾವ ಹೊತ್ತಿಗೆ ?
ಬೆರ್ಕಿ:—ಬಾಯಿ ಹೋದ ಹೊತ್ತಿಗೆ........

---

# ಪೂರ್ಣಯೋಗ.

(೬ನೆಯ ಸಂಚಿಕೆಯಿಂದ ಮುಂದೆ ಸಾಗಿದ್ದು.)

ಈ ಮೇರೆಗೆ ಅಕ್ಷುಬ್ಧರಾಗಿ ತಟಸ್ಥರಂತೆ ನೀವು ನಿಲ್ಲಬೇಕಾದ ಪಕ್ಷದಲ್ಲಿ ನೀವು ಕೇವಲ ಸಾಕ್ಷಿಗಳೆಂದೂ ದೇವನು ಮಾಡುವ ಕಾರ್ಯಕ್ಕೆ "ಅಹುದು" ಎನ್ನುವದಿಷ್ಟೇ ನಿಮ್ಮ ಕಾರ್ಯವೆಂದೂ, ಅವನ ಲೀಲೆಗೆ ನಿಮ್ಮ ಜೀವನವೊಂದು ರಂಗಭೂಮಿಯೆಂದೂ ಅವನು ನೀಡುವ ಸುಖದುಃಖಗಳನ್ನು ಪ್ರಸಾದವೆಂದೂ ಭೋಗಿಸಬೇಕಾದವರು ಮಾತ್ರ ನೀವು ಎಂದೂ, ನಿಮಗೆ ಅರಿವಾಗಲಿಕ್ಕೆ ಬೇಕು. ಕರ್ಮವೊ ? ಅದನ್ನು ದೇವನೇ ಶಕ್ತಿಸ್ವರೂಪನಾಗಿ ಮಾಡುವನು. ಮುಂದೆ ಆ ಶಕ್ತಿಯೇ ಆ ಕರ್ಮವನ್ನು ಪುರುಷೋತ್ತಮನಿಗೆ ಯಜ್ಞವೆಂದು ಅರ್ಪಿಸುವಳು. ನೀವು ಈ ಯಜ್ಞದಲ್ಲಿ ಕೇವಲ ಯಜಮಾನರು. ಸಾಗಿದ ಯಜ್ಞವನ್ನು ಸಾಕ್ಷಿಯಾಗಿ ನೋಡತಕ್ಕವರು. ಅದರ ಫಲವನ್ನು ಮಾತ್ರ ಭೋಗಿಸುವವರು ನೀವು. ಈ ರೀತಿಯಾಗಿ ಮಾಡುವವಳು ಬೇರೆ, ಮಾಡಿಸುವವನು ಬೇರೆ. ನೀವು ಕೇವಲ ಸಾಕ್ಷಿ. ಇಂತು "ಅಹಂ ಕರ್ತಾ" ಎಂಬ ಬುದ್ಧಿಯ ತ್ಯಾಗವಾಗಬೇಕಾದರೆ "ಆಧಾರ" ಜ್ಞಾನವು ಅಗತ್ಯವು. "ಯೋಗಸಾಧನ" ವೆಂಬ ಪುಸ್ತಕದಲ್ಲಿ ಆಧಾರದ ಅಂಗಗಳನ್ನು ಸಂಕ್ಷಿಪ್ತವಾಗಿ ವರ್ಣಿಸಿದ್ದಾಗಿದೆ. ಆದರೆ ಅದರಲ್ಲಿ ಜಾಗ್ರದಾವಸ್ಥೆಗೆ ಸಂಬಂಧಿಸಿದ ಅಂಗಗಳನ್ನಷ್ಟೇ ವಿಶದವಾಗಿ ವಿವೇಚಿಸಿತ್ತು; ಅಂದರೆ

ಸ್ಥೂಲದೇಹ, ಪ್ರಾಣ ಮತ್ತು ಚಿತ್ತ, ಬುದ್ಧಿ, ಮನ, ಅಹಂಕಾರ ಎಂಬ ಅಂತಃಕರಣ ಚತುಷ್ಟಯವಷ್ಟೇ. ಇನ್ನು ಇಲ್ಲಿ ಹೇಳಬೇಕಾದ ಮಾತೇನಂದರೆ ಅಂತಃಕರಣ ಚತುಷ್ಟಯದಲ್ಲಿ ಬುದ್ಧಿಯು ಹೆಚ್ಚಿನದು; ಯಾಕಂದರೆ ಅದು ನಿಶ್ಚಯಾತ್ಮಕವಾದದ್ದು. ಆದರೆ ಈ ಬುದ್ಧಿಗಿಂತ ಹೆಚ್ಚಿನದೊಂದು ಬುದ್ಧಿವಿಶೇಷವಿದೆ. ಅದರ ಹೆಸರು ವಿಜ್ಞಾನ. ಈ ವಿಜ್ಞಾನವು ಸತ್ಯಧರ್ಮದ ನೆಲೆಯು. ಇಚ್ಛಾ, ಜ್ಞಾನ, ಕ್ರಿಯೆಗಳ ಸತ್ಯದ ಆಸನವು. ಇಲ್ಲಿ ಈ ವಿಜ್ಞಾನದಮೇಲೆ ಆನಂದಕೋಶವಿದೆ. ಅಲ್ಲಿ ನಿಮ್ಮ ದಿವ್ಯಸ್ವರೂಪವಿದೆ. ಮಹಾತ್ಮನಾದ ಕ್ರಿಸ್ತನು ದೇವನಸ್ವರ್ಗಸಾಮ್ರಾಜ್ಯವು ನಿಮ್ಮ ಅಂತರಂಗದಲ್ಲಿದೆ ಎಂದು ಹೇಳಿದುದು ಈ ವಿಜ್ಞಾನ ಆನಂದಗಳನ್ನುದ್ದೇಶಿಸಿ. ನಾವೆಲ್ಲರು ಅನ್ನ, ಪ್ರಾಣ, ಮನ ಈ ಮೂರು ಕೋಶಗಳಮಟ್ಟಿಗೆ ಎಚ್ಚತ್ತಿರುವೆವು. ವಿಜ್ಞಾನ ಆನಂದಗಳ ಮಟ್ಟಿಗೆ ಗಾಢನಿದ್ರೆಯಲ್ಲಿರುವೆವು. ನಾವು ವಿಜ್ಞಾನ, ಆನಂದಗಳಲ್ಲಿ ಎಚ್ಚತ್ತವರಾಗಬೇಕು. ವಿಜ್ಞಾನ, ಆನಂದಗಳು ನಮ್ಮಲ್ಲಿ ಕಣ್ತೆರೆದು ತಮ್ಮ ಶಕ್ತಿಗಳನ್ನು ಸುಳಿಯಿಸಬೇಕು, ಸೂಸಿಸಬೇಕು. ಅದೇ ಯೋಗದ ಸಿದ್ಧಿ. ಯಾಕಂದರೆ ಅದು ಕೈಗೂಡಿದಂದಿನಿಂದ ದೇವಜೀವನಕ್ಕಾರಂಭವಾಗುವದು. "ನಿವಸಿಷ್ಯಸಿ ಮಯಿ ಏವ" ಎಂದು ಭಗವಂತನು ಗೀತೆಯಲ್ಲಿ ಹೇಳಿದುದು ಈ ಸ್ಥಿತಿಯನ್ನನುಲಕ್ಷಿಸಿ ಈ ಸ್ಥಿತಿಯಲ್ಲಿ ಭುಕ್ತಿ, ಮುಕ್ತಿಗಳೆರಡೂ ಯಾವಾಗಲೂ ನಮ್ಮನ್ನು ಕೂಡಿರುವವು.

ಇನ್ನು ಈ ಪೂರ್ಣಯೋಗದೊಳಗಿನ ಮೂರನೇ ವಿಧಿಯುಂದರೆ ಎಲ್ಲವೂ ದೇವನೆಂದು ಅನ್ನುವದು. ಮೊದಲು ಮೊದಲು ಎಲ್ಲಕಡೆಯಲ್ಲಿಯೂ ದಿಕ್ಕಾಲವನ್ನೆಲ್ಲ ತುಂಬಿದ ಶಾಂತವೂ, ಅಲಕ್ಷಣವೂ ಆದ ಸದಾತ್ಮವೊಂದಿರುವದಾಗಿ ಅನುಭವ ಬರುವದುಂಟು. ಈ ಅನುಭೂತಿಯಲ್ಲಿ ನಾಮರೂಪಗಳಿಗೆ ತೀರ ಕಡಿಮೆ ಮಹತ್ವವುಂಟಾಗುವದು. ಈ ಕಾಲಕ್ಕೆ ಏಕವಾದ ಬ್ರಹ್ಮವಸ್ತುವೊಂದು ದಿಟ, ಅನೇಕ ರೂಪವಾದ ಜಗತ್ತೆಲ್ಲ ಸಟಿ, ಎಂದು ಅನಿಸುವದುಂಟು. ಈ ಸಟಿಯಾದ ಮಾಯೆಯು ಹೇಗೆ ಬಂತು ಏಕೆ ಬಂತು ಎಂಬುದು ಮಾತ್ರ ತಿಳಿಯುದಿಲ್ಲ. ಆದರೆ ಇಲ್ಲಿಯೆ ನಿಲ್ಲದೇ ಅನುಭವ ಮಾರ್ಗದಲ್ಲಿ ಮುಂದೆ ಸಾಗಿದವನಿಗೆ ಈ ನಿರಾಕಾರದ ಅನುಭವವಷ್ಟೇ ಪೂರ್ಣ ಸತ್ಯವಲ್ಲೆಂದು ಈ ನಾಮರೂಪವು ಕೂಡ ಬ್ರಹ್ಮವಲ್ಲದೆ ಬೇರೆಯಲ್ಲವೆಂದೂ, ಆ ಬ್ರಹ್ಮವೇ ಎಲ್ಲ ಭೂತಜಾತಗಳಲ್ಲಿ ಲೀಲಾವತಾರಿಯಾಗಿರುವದೆಂದೂ ಅನುಭವ ಬರುವದುಂಟು. ಈ ಅನುಭವ ಬಂದಂದಿನಿಂದ ಗೀತೆಯಲ್ಲಿಯೂ, ಉಪನಿಷತ್ತುಗಳಲ್ಲಿಯೂ "ಆತ್ಮಾನಂ ಸರ್ವಭೂತೇಷು ಸರ್ವಭೂತಾನಿ ಚಾತ್ಮನಿ" ಎಲ್ಲದರಲ್ಲಿ ತಾನು, ತನ್ನಲ್ಲಿ ಎಲ್ಲರು ಎಂದು ಹೇಳಿದ ಪ್ರಕಾರ "ಸರ್ವಂ ಖಲ್ವಿದಂ ಬ್ರಹ್ಮ" ಇದೆಲ್ಲವೂ ಬ್ರಹ್ಮ ಎಂದು ಹೇಳಿದ ಪ್ರಕಾರ ನಮಗೆ ಅರಿವಾಗಿ ಆ ಪ್ರಕಾರ ಜೀವನವೂ ಸಾಗುವದು. ಆದರೆ ಈ ಪೂರ್ಣಯೋಗದೊಳಗಿನ ಮೌಲಿಕವಾದ ಅನುಭೂತಿಯು ಇದಲ್ಲ. ವಿಶ್ವರೂಪನಾದ ಪುರುಷೋತ್ತಮನೇ ಈ ಜಗತ್ತಿನಲ್ಲೆಲ್ಲ ಕಡೆಯಲ್ಲಿಯೂ ತಾನೆ ತಾನಾಗಿ ನಟಿ

ಸುತ್ತಿರುವನು. ಎಂಬ ಜ್ಞಾನವೂ, ಅನುಭೂತಿಯೂ ಎಲ್ಲಕ್ಕೂ ಹೆಚ್ಚಿನದು. ಈ ಪುರುಷೊತ್ತಮನು ವ್ಯಕ್ತನಾದ ಸದಾತ್ಮನೂ ಅಹುದು. ಅವ್ಯಕ್ತವಾದ ಅಸತ್ತೂ ಅಹುದು. ಆದರೆ ಅಷ್ಟೇ ಮಾತ್ರವಲ್ಲ. ಇವೆರಡನ್ನೂ ತುಂಬಿ ಮಿಕ್ಕಿ ಮೀರಿ ಮತ್ತೆ ಉಳಿದವನು. ಬುದ್ಧರು ಶೂನ್ಯವೆಂದು ಗುರುತಿಸಿದ ಅಸತ್ತಿನಾಚೆಗೆ "ಪುರುಷೋ ವರೇಣ್ಯೋ ಆದಿತ್ಯ ವರ್ಣಃ ತಮಸಃ ಪರಸ್ತಾತ್" ಎಂದು ಶ್ರುತಿಗಳು ಸಾರುವ ಪರಾತ್ಪರ ಪುರುಷನಿರುವನು. ಈ ವಿಶ್ವವನ್ನು ತನ್ನಿಂದಲೇ ರೂಪಗೊಳಿಸಿ ತಾನೇ ಅದರಲ್ಲಿ ಸೇರಿ ಸಾಂತನೂ, ಅನಂತನೂ ಆದ ಈಶ್ವರನಾಗಿ ಅದನ್ನು ಸಾಕಿ-ಸಲುಹಿ ಲೀಲಾಮಯನಾದ ಶ್ರೀಕೃಷ್ಣನಾಗಿ ನಮ್ಮೆಲ್ಲರನ್ನು ತನ್ನ ಪ್ರೇಮದಿಂದ ತನ್ನ ಕಡೆಗೆ ಆಕರ್ಷಿಸಿಕೊಂಡು ತನ್ನ ಪ್ರಬಲವಾದ, ರಮ್ಯವಾದ, ಆನಂದಕರವಾದ ಲೀಲೆಯಲ್ಲಿ ಎಲ್ಲರನ್ನು ತೊಡಗಿಸಿಬಿಡುವನು.

ಈ ಜಗತ್ತು ಆ ಸಚ್ಚಿದಾನಂದನ ಲೀಲೆ. ಅನ್ನವೆಂದೂ, ಅಚಿತ್ತೆಂದೂ ಇಂದು ನಾವು ಬಗೆಯುವ ವಸ್ತು ಜಾತಗಳು ಚೈತನ್ಯದ ಒಂದು ಅವಸ್ಥಾಮಾತ್ರವೆಂದೂ ಅವು ಅಚಿತ್ತೆಂದು ತೋರುವದು ಹೆಚ್ಚಾಗಿ ನಮ್ಮ ಇಂದ್ರಿಯಗಳ ಗುಣವೆಂದೂ ಒಂದಿಲ್ಲೊಂದು ದಿನ ನಮ್ಮ ಅನುಭವಕ್ಕೆ ಬರದೇ ಹೋಗದು. ಜಡತ್ವವೆಂಬುದಾದರೂ ಏನು. ಸಂಹತಿ, ಧೃತಿ ಎಂಬೆರಡು ಗುಣಗಳ ಸಮವಾಯವಲ್ಲದೇ ಬೇರೆಯಲ್ಲ. ಅನ್ನವೇ ಆಗಲಿ, ಪ್ರಾಣವೇ ಆಗಲಿ, ಮನವೇ ಆಗಲಿ ಅಥವಾ ಇವುಗಳನ್ನು ಮಿಕ್ಕಿದ್ದೇ ಆಗಲಿ, ಇದೆಲ್ಲ ಅನಂತಗುಣ ಬ್ರಹ್ಮನಾದ ಶ್ರೀ ಕೃಷ್ಣನ ಸಚ್ಚಿದಾನಂದಮಯ ಲೀಲೆಯಲ್ಲದೆ ಬೇರೆ ಏನು! ಈ ಅನುಭವವು ನಮ್ಮಲ್ಲಿ ನೆಲೆಯೂರಿನಿಂತಮೇಲೆ ಅದು ದುಃಖ, ಶೋಕ, ಪಾಪ, ಭಯ, ಮೋಹಗಳನ್ನು ಒಂದಿನಿಸು ಉಳಿಯದಂತೆ ತಳ್ಳಿಬಿಡುವದು. "ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ" ಬ್ರಹ್ಮದ ಆನಂದವನ್ನು ಬಲ್ಲವನಿಗೆ ಏತರ ಭಯವೂ ಇಲ್ಲ. "ಯಸ್ಮಿಂಸ್ತು ಸರ್ವ ಭೂತಾನಿ ಆತ್ಮೈವಾ ಭೂತ್ ವಿಜಾನತಃ ತಸ್ಯ ಕೋ ಮೋಹಃ, ಕಃ ಶೋಕಃ ಏಕತ್ವಂ ಅನುಪಶ್ಯತಃ" ಭೂತ ಜಾತಗಳೆಲ್ಲ ತನ್ನಾತ್ಮನೊಡನೆ ಒಂದಾಗಿ ಒಂದೇ ಒಂದು ಆತ್ಮವು ಎಲ್ಲೆಡೆಯಲ್ಲಿಯೂ ಆಡುತ್ತಿರುವದೆಂದು ಕಂಡವನಿಗೆ ಎಲ್ಲಿಯ ಮೋಹ, ಎಲ್ಲಿಯಶೋಕ ಎಂದು ಈಶೋಪನಿಷತ್ತಿನಲ್ಲಿ ಹೇಳಿದ ಅನುಭವವು ಆಗ್ಗೆ ನಮಗೆ ಬರುವದು. ಆಗ್ಗೆ ಇಡೀ ಜಗತ್ತಿನ ರೂಪವೇ ಬದಲಾಗುವದು, ಬಣ್ಣವೇ ಬೇರೆಯಾಗುವದು. ಸೌಂದರ್ಯದ, ಮಾಂಗಲ್ಯದ, ಜ್ಯೋತಿಯ, ಆನಂದದ, ತೆರೆ ತೆರೆಗಳು ತೊಂಗಲು ತೊಂಗಲಾಗಿ ಏರೇರಿ ಬರುವ ಶಾಂತಿ ಶಕ್ತಿಗಳ ಸಾಗರದಂತೆ ಜಗವು ತೋರುವದು. ಎಲ್ಲ ಭೂತಗಳ ಆತ್ಮಯೋಗವನ್ನು ಹೊಂದಿ ನಾವು ಒಂದು ಬ್ರಹ್ಮಸ್ಥಿತಿಯನ್ನು ಬೀರುವ ಪುಣ್ಯ ಕ್ಷೇತ್ರದಂತೆ ಆಗುವೆವು.

ಸಚೇತನ ವಸ್ತುಗಳಲ್ಲಷ್ಟೇ ಅಲ್ಲ. ನಾವು ಅಚೇತನವೆಂದು ತಿಳಿಯುವ ವಸ್ತುಗಳಲ್ಲಿಯೂ ನಾರಾಯಣನನ್ನು ಕಾಣಲು ಬೇಕು. ಶಿವನನ್ನು ಅನುಭವಿಸಲು ಬೇಕು. ಶಕ್ತಿಮಾತೆಯನ್ನಪ್ಪಲುಬೇಕು. (ಅಪೂರ್ಣ.)

## ಸಾಗ್ರ ಸಂಗೀತ.

# ಸಾಯೋ ಆಟ.

( ಮುಂದೆ ಸಾಗಿದ್ದು. )

### ಒಂದು ಹುಚ್ಚಾಟ.

( ಕೊತವಾಲನು ಒಬ್ಬ ಕೂಲಿಕಾರನೊಡನೆ ಬರುವನು. )

( ಕೂಲಿಕಾರನು ಮೂರ್ಛೆಹೋಗುವನು. )

ಗೃ:—ಇವನಾವ ದುರ್ದೈವಿಯು ಕೈಯಲ್ಲಿ ಸಿಕ್ಕನೋ!

ದಿವಾಣ:— ನೋಡಿದಿರಾ ಒಂದೊಂದು ಸೋಗು ! ಜನರಿಗನಿಸಿರಬೇಕು: "ಅಯ್ಯೋ ಪಾಪ! ಒಳ್ಳೆಯ ಮನುಷ್ಯ. ಇಲ್ಲದ ಆರೋಪ ಮೈಮೇಲೆ ಹೊರಿಸಿದರೆ ಮಾನಗೇಡು ಆಗುವದಕ್ಕಿಂತ ಮರಣ ಬಂದದ್ದು ಲೇಸು, ಎಂದು ಸತ್ತನು" ಎಂದು. ಕೊತವಾಲನೇ! ನೋಡುತ್ತೇನು ನಿಂತಿ, ಪೆದ್ದನಂತೆ! ಮೈಹುಳಿಯೆ ಜಡಿ, ಅಂದರೆ ಎಚ್ಚರಾಗುತ್ತಾನೆ. ಇಂಥ ಸೋಗಿಗೆ ಅದೇ ಮದ್ದು.

ಕೊತ:—ದೇವರು! ಜಡಿಯುವ ಕಾರಣವೇ ಇಲ್ಲ. ದೇವರು ತಾನೇ ಪ್ರಾಯ ಶ್ಚಿತ್ತ ಕೊಟ್ಟನು. ತಾನು ಎದ್ದರೆ ತನಗೆ ಸಾವು ಬಂತೆಂಬ ಎಚ್ಚರ ಇವನಿಗಿದ್ದರೆ, ಇವ ನಿಗೆ ಸಾಯಬೀಳ ಹೊಡೆದರೂ ಇವನೇಕೆ ಎಚ್ಚರಿಯುತ್ತಾನೆ ? ಇವನು ಸಾಯು ವದೇ ಸೈ.

ದೊರೆ:—ಛೀ! ಹೀಗೆ ಅ-ನ್ಯಾಯದಿಂದ ಇವನಿಗೆ ಮರಣ ಬರಕೂಡದು.

ದಿ:—ಹಾಗಾದರೆ ದೊರೆಗಳ ಅಪ್ಪಣೆಯೇನು?

ದೊರೆ—ಮೊದಲು ಇವನನ್ನು ಯಾವುದೇ ಉಪಾಯದಿಂದ ಎಚ್ಚರಿಸಿರಿ. ಆ ಮೇಲೆ, ಈ ಮುಂಡೆಯ ಗಂಡನಾಗಲು ಇವನು ಒಪ್ಪುವನೋ ಕೇಳೋಣ.

ಕಳ್ಳಿ:—(ಸ್ವಗತ) ಇವನು ಒಪ್ಪಿದರೆ ನನ್ನ ಮರಣ!

ದೊರೆ:—ಒಪ್ಪದಿದ್ದರೆ ಇವನಿಗೆ ಆ ಮೇಲೆ ನ್ಯಾಯದಿಂದ ಮರಣ ಬರಲಿ. ಸತ್ತರೂ ಅನ್ಯಾಯಬೇಡ!

ದಿ:—ದೊರೆಗಳನ್ನುವದೂ ನ್ಯಾಯವೇ! (ಕೊತವಾಲನಿಗೆ) ಎಬ್ಬಿಸವನನ್ನು!

( ಅಷ್ಟರಲ್ಲಿ ಕೂಲಿಕಾರನಿಗೆ ಎಚ್ಚರವಾಗುವದು. )

ಕೊತ:—ಲಗ್ನದ ಕರಾರು ಕೇಳಿ ಎಚ್ಚರಾದಂತೆ ತೋರುತ್ತದೆ. ಹೆಣ್ಣು ಎಂದರೆ ಹೆಣಕೂಡ ಕಣ್ಣು ತೆರೆಯುವದು. (ಕೂಲಿಕಾರನಿಗೆ) ಎಲೋ ರಾವಣನಂತೇನು ಬಿದ್ದಿ! ದೊರೆಗಳಿಗೆ ಹಾಗೆ ಹೊರಳಿ ಸಾಷ್ಟಾಂಗ ನಮಸ್ಕಾರ ಮಾಡು. (ಕೂಲಿಕಾರನು ಹಾಗೆ ಮಾಡಿ ನಡುಗುತ್ತ ಎದ್ದು ನಿಲ್ಲುತ್ತಾನೆ. )

ದೊರೆ:—ದಿವಾಣರೇ ಕೇಳಿರಿ ಲಗ್ನಕ್ಕೆ ಸಿದ್ಧನಿರುವನೇನು?

ದಿ:—ಎಂಥದಿದ್ದರೂ ಅದು ಹೆಣ್ಣು! ಒಲ್ಲೇಕಂದಾನು! ದಿಂಡುರುಳಿಕೆ ಹಾಕು ತ್ತಾನೆ-ದಿಂಡುರುಳಿಕೆ. ಎಲೋ ಈಕೆಯನ್ನು ಮದುವೆಯಾಗುವೆಯಾ?

ಕೂಲಿ:—(ಆ ಕಳ್ಳಿಯನ್ನು ನೋಡಿ ಹೆದರಿ) ನಾನು ಅಂಥದೇನು ಅಪರಾಧ ಮಾಡಿರುವೆನು? (ಮತ್ತೆ ಮೂರ್ಛೆಬಂದು ಬೀಳುತ್ತಾನೆ).

ಗೃ:—ಹಾಕಿದನು ನೋಡಿರಿ ದಿಂಡುರುಳಿಕೆ!

ಕಳ್ಳಿ:—ಅಯ್ಯೋ ಮಾತುಮಾತಿಗೆ ಮೂರ್ಛೆಹೋಗುವ ಈ ಮಲರೋಗಿಯ ನ್ನೇಕೆ ನನ್ನ ಕೊರಳಿಗೆ ಕಟ್ಟುವಿರಿ?

ದಿ:—ಅದರ ಗೊಡವೆ ನಿನಗೇಕೆ? ಶಾಸ್ತ್ರಕ್ಕೊಬ್ಬ ಗಂಡನು ನಿನಗೆ ಸಿಕ್ಕಿದರಾಯಿತು.

ದೊರೆ:—ಏನಯ್ಯಾ ದಿವಾಣರೇ! ಇವನು ಬಿದ್ದುಕೊಂಡು ಇಷ್ಟೊತ್ತೇನು ವಿಚಾರ ಮಾಡುತ್ತಾನೆ?

ದಿ:—ಎಲ್ಲಿಯ ವಿಚಾರ! ವಿಚಾರವಿದ್ದರೆ ಇವನಗತಿ ಹೀಗೇಕಾಗುತ್ತಿತ್ತು. ವಿಚಾರ ಹರಿಯದೆ ಮೂರ್ಛೆಬಂದು ಬಿದ್ದಿದ್ದಾನೆ. ಮಲರೋಗಿಯಿರಬಹುದು!

ದೊರೆ:—ಎಲ್ಲವೂ ವಿಚಿತ್ರ! ಕರೆದು ಹೆಣ್ಣುಕೊಟ್ಟರೆ ಇವನಿಗೆ ಮಲರೋಗಬಂತೇ! ಇನ್ನು ಸಾವೋಪಾಯ ಸಾಕು. ಇಂಥವರಿಗೆ ದಂಡವೇ ಬೇಕು. ದಿವಾಣರೇ! ನೋಡು ತ್ತೀರೇನು?

ದಿ:—ಕೊತವಾಲ! ನೋಡುತ್ತೀಯೇನು?

ಕೊತ:—(ಬೆಚ್ಚಿ) ಏನೂ ಇಲ್ಲ ದೇವರು! ಸಾಯುವನೋ ಬದುಕುವನೋ ನೋಡುತ್ತೇನೆ.

ದಿ:—ಸಾಯಲಿಕ್ಕೆ ಅವನಿಗೇನಾಗಿದೆ?

ದೊರೆ:—ಮತ್ತು ರಾಜಾಜ್ಞೆಯಿಲ್ಲದೆ ಯಮನಾಜ್ಞೆಯಾದರೂ ಅವನಿಗೆ ಹೇಗೆ ಆದೀತು. ಪ್ರಜೆಗಳಿಗೆ ರಾಜನೇ ಯಮನು!

ಗೃ:—ಹೌದು ಪ್ರಭುಗಳೇ! ತಮ್ಮ ಈ ರಾಜ್ಯದಲ್ಲಿ ತಾವೇ ನಮಗೆ ಯಮ. ತಾವೇ ನಮಗೆ ಮೃತ್ಯು. ತಾವೇ ನಮಗೆ ಸಾವು. ಸರ್ವವೂ ತಾವೇ!

(ಕೂಲಿಕಾರನಿಗೆ ಎಚ್ಚರವಾಗುತ್ತದೆ.)

ದಿ:—ಎಲೋ ಉಪ್ಪಾರನೇ! (ಉತ್ತರವಿಲ್ಲ) ಮೈಯೊಳಗಿನ ಸೊಕ್ಕೇನು! ಉತ್ತ ರಕೊಡುವದಿಲ್ಲೇನು?

ಕೂಲಿ:—ದೇವರು! ನನಗೆ ಕರಿದಿರಾ? (ಎದ್ದು ನಿಲ್ಲುತ್ತಾನೆ.)

ದಿ:—ನಿನಗೇ! ಈ ಕೆಟ್ಟ ಮನೆಯನ್ನು ಕಟ್ಟಿ, ನೀನು ಈ ಬಡಮನುಷ್ಯನ ಮರ ಣಕ್ಕೆ ಕಾರಣನಾದೆ. ನೀನು ಇವಳನ್ನು ಮದುವೆಯಾಗಲು ಒಪ್ಪಲೊಲ್ಲೆ. ಆದಕಾ ರಣ ಎಲೋ ಉಪ್ಪಾರನೇ ನೀನು ದೇಹಾಂತ ಪ್ರಾಯಶ್ಚಿತ್ತಕ್ಕೆ ಸಿದ್ಧನಾಗು.

ಕೂಲಿ:—(ಸ್ವಲ್ಪ ಧೈರ್ಯದಿಂದ) ದೇವರು! ನಾನು ಉಪ್ಪಾರನಲ್ಲ ಒಬ್ಬ ಬಡ ಕೂಲಿಕಾರ!

ದಿ:—ಉಪ್ಪಾರನಿರದಿದ್ದರೆ ಇಲ್ಲೇಕೆಬಂದಿ?

ಕೂಲಿ:—ಕೊತವಾಲಸಾಹೇಬರು ಜಗ್ಗಿಕೊಂಡು ಬಂದರು.

ದಿ:—ಅವನು ಬೇಕಾದ್ದು ಮಾಡುತ್ತಾನೆ ನೀನು ಬಂದೇಕೆ?

ಕೂಲಿ:—ನಾನು ಕೂಲಿ ಎಲ್ಲಿ ದೊರಕಬಹುದು, ಎಷ್ಟು ದೊರಕಬಹುದು, ಎಂದು ವಿಚಾರಮಾಡುತ್ತ, ದಿನದಂತೆ ನನ್ನ ಹಾದಿಯು ಹಿಡಿದು ನನ್ನ ಚಿಂತೆಯಲ್ಲಿ ನಾನು ಹೋಗುತ್ತಿದ್ದೆ, ಅಷ್ಟರಲ್ಲಿ ಈ ಸಾಹೇಬರು ತಪ್ಪಿಲ್ಲದ ನನ್ನನ್ನು ಹಿಡದು ಜಗ್ಗಿಕೊಂಡು ಇಲ್ಲಿ ತಂದರು. ನಾನು ಕೂಲಿಕಾರ! ಉಪ್ಪಾರನಲ್ಲ.

ಕೊತ:—ದೇವರು! ಉಪ್ಪುಕಾರಹಚ್ಚಿ ಇವನು ಹೇಳುವದನ್ನು ನೋಡಿದಿರಾ?

ದೊರೆ:—ಇದರ ಮೇಲಿಂದಲೇ ಇವನು ಉಪ್ಪಾರನೆಂಬುದು ಸಿದ್ಧವಾಗುತ್ತದೆ.

ಗೃ:—(ಸ್ವಗತ) ಕೂಲಿಕಾರನೆಂದೇಕಲ್ಲವೋ?

ಕೂಲಿ:—ದೇವರೂ! ನನ್ನ ತಂದೇ! ಎಲ್ಲಿಯ ಉಪ್ಪು ಎಲ್ಲಿಯ ಉಪ್ಪಾರ! ಕೂಲಿಯವನಿಗೆ ಖೂನಿಯವನೆನ್ನುವಿರಲ್ಲಾ.

ದಿ:—ಕೂಲಿಕಾರಾ-ಉಪ್ಪಾರಾ! ಹೊಲೆಹದಿನೆಂಟು ಜಾತಿಯು ಹೆಸರುಗಳನ್ನೆಲ್ಲ ನಾವು ನೆನಪಿಡೋಣವೇ? ಶೂಲಕ್ಕೇರಿಸಬೇಕಾದರೆ ಕೂಲಿಕಾರನೇನು! ಉಪ್ಪಾರನೇನು? ಕೂಲಿಕಾರನೆಂದರೆ ಉಪ್ಪಾರನ ಸಹಾಯಕ; ಖೂನಿಯವನಿದ್ದಂತೆಯೇ!

(ಕೂಲಿಕಾರನು ಏನೂ ತೋಚದೆ ನಿಲ್ಲುವನು.)

ದೊರೆ:—ಎಲೇ ನ್ಯಾಯದೇವತೆಯೇ ಇದೇನು ಅನ್ಯಾಯ! ನಾವು ರಾಜಧರ್ಮವನ್ನೆಣಿಸಿ ಶಿಕ್ಷೆಮಾಡಲು ಸಿದ್ಧರಿದ್ದೂ, ಸಾಯಲು ಯಾರೂ ಸಿದ್ಧರಾಗಬಾರದೇ! ಸಾಯಲು ನಾ ಮುಂದೆ ನೀ ಮುಂದೆ ಎಂದು ತಾವಾಗಿ ಬರುವದೊತ್ತಟ್ಟಿಗೆ ಉಳಿಯಲಿ, ಎಲ್ಲರೂ ಕೊರಳು ತಪ್ಪಿಸಿಕೊಳ್ಳುವ ಜೀವಗಳ್ಳರಾಗಬೇಕೆ? ಹೀಗೆ ನಮ್ಮ ರಾಜ್ಯದಲ್ಲಿ ಅಧರ್ಮವಾದಮೇಲೆ ರಾಜ್ಯವುಳಿಯುವ ಆಶೆಯೇ ಇಲ್ಲ.

ಗೃ:—(ಸ್ವಗತ) ಅದು ನಿಜ.

ದೊರೆ:—ದಿವಾಣರೇ ಕೊಂದು ಬಿಡಿರಿ ಆ ಎಬಡನನ್ನು. ಅಂದರೆ ಮುಂಜಾವಿನಿಂದ ನಡೆದ ಕೆಲಸವು ಮುಗಿದು ನಿರಂಬಳವಾದೀತು. ಈ ಹೆಂಗಸು ಚಿಕ್ಕ ಪ್ರಾಯದವಳೇ ಇದ್ದಾಳೆ. ಇವಳಿಗೆ ಹೊಟ್ಟೆಗೆ ಹಾಕುವವರಾರಾದರೂ ದೊರೆಯುವವರೆಗೆ, ಕೊತವಾಲರ ವಶದಲ್ಲಿರಲಿ. ಈಕೆಗೆ ಜಗತ್ತಿನ ಅನುಭವವಿಲ್ಲ.

ಕಳ್ಳಿ:—(ಸ್ವಗತ)ಕಂಡವರ ಮನೆಗಟ್ಟಲಿಕ್ಕೆ, ನಾನೇನೆಂದು ತಿಳಿದಿರುವರೋ ಇವರು?

ದಿ:—(ಗೃಹಸ್ಥನಿಗೆ), ನೀವಾದರೂ ಈ ವಿಚಾರಗೇಡಿಗೆ ತಿಳಿಹೇಳಿರಿ. ಸುಮ್ಮನೆ ವಿಚಾರಣೆಯಿಲ್ಲದೆ ಸಾಯಬೇಡೆಂದು ಹೇಳಿರಿ.

ಗೃ:—(ಕೂಲಿಕಾರನ ಕಿವಿಯಲ್ಲಿ ಏನೋ ಹೇಳಿ) ಹುಚ್ಚಾ! ಅಷ್ಟುಮಾಡು.

ಕೂಲಿ:—ದೇವರು! ನಿಮ್ಮ ಕೈಮೇಲೆ ಕೈಹಾಕಿ ಆಣೆಮಾಡಿ ಹೇಳುತ್ತೇನೆ. ನಾನು ಈಕೆಲಸ ಮಾಡಿದವನಲ್ಲ.

ದಿ:—(ಲಕ್ಷಣ ತಿಳಿದುಕೊಂಡು) ಹಾಕು ಕೈಮೇಲೆ ಕೈ! (ಕೈ ಮುಂದೆ ಮಾಡು ತ್ತಾನೆ.)

ಕೂಲಿ—(ಬಂಗಾರದಿಂದ ಕೈ ಬೆಚ್ಚಗೆ ಮಾಡುತ್ತ) ಇಕೊಳ್ಳಿರಿ!

ದಿ:—ದೊರೆಗಳೇ! ಇವನ ಕೈ ಬೆಚ್ಚಗಿದೆ. ಇವನು ತಪ್ಪುಮಾಡಿದ್ದರೆ ಇವನು ಹೆದರಿರುತ್ತಿದ್ದಿಲ್ಲವೇ? ಮತ್ತು ಹೆದರಿದ್ದರೆ ಇವನ ಕೈ ಹೇಗೆ ಬೆಚ್ಚಗಿರುತ್ತಿತ್ತು.

ದೊರೆ:-ಇವನ ಕೈ ಬೆಚ್ಚಗಿದೆಯೋ? ಹಾಗಾದರೆ ತಣ್ಣಗಾಯಿತು. ಇವನು ಅಪ ರಾಧಿಯಲ್ಲವೆಂದಂತಾಯಿತು.

ಕೊತ:—ಇವನನ್ನು ಬಿಡಲಿಯಾ ದೇವರು?

(ದಿವಾಣರು ದೊರೆಗಳ ಮೋರೆ ನೋಡುವರು.)

ದೊರೆ:-ಛೀ! ಹಾಗೆ ಬಿಡಲು ಬರದು. ಬೇರೆ ಅಪರಾಧಿಯು ಸಿಗುವವರೆಗಂತೂ ಇವನನ್ನು ಬಿಡಲೇ ಬರುವುದಿಲ್ಲ. ಬೇರೆ ಅಪರಾಧಿಯು ಸಿಗದಿದ್ದರೆ, ಇವನನ್ನು ಬಿಡು ವದು ಹೇಗೆ?

ಕೂಲಿ:-ಯಮುನವರ ಪಾಶವು ಸಡಿಲಾದರೂ ಬಿಚ್ಚಿಕೊಂಡು ಹೋಗಲೊಲ್ಲದು. ಏನುಮಾಡಲಿ ನನ್ನತಂದೆ !

ದಿ:—ಆಗೋ ಅಲ್ಲಿ ನೋಡುತ್ತ ನಿಂತ ಜನರಲ್ಲಿ ಯಾರಾದರೂ ಮಾಡಿರಬಹು ದೆಂದೆನಿಸುವದೋ?

ಕೂಲಿ:—(ಸ್ವಲ್ಪ ಜೀವ ಬಂದಂತಾಗಿ ಒಬ್ಬ ವೇಶ್ಯೆಯನ್ನು ನೋಡಿ-) ದೇವರು! ಆ ಸೂಳಿಯು ಇವನನ್ನು ಕೊಂದಿರಬೇಕು.

ಗೃ:—(ಸ್ವಗತ) ಆಕೆಗೂ ಈ ಕಳ್ಳನ ಮರಣಕ್ಕೂ ಯಾವ ಬಾದರಾಯಣ ಸಂಬಂಧವನ್ನು ಜೋಡಿಸುವನೋ ಈ ಅರಣ್ಯಪಂಡಿತನು! ಕಳ್ಳರಿಗೂ ಸೂಳೆಯರಿಗೂ ರಾತ್ರಿಗೂ ಮರಣಕ್ಕೂ ಸಂಬಂಧವಿರುವದೇನೋ ನಿಜ.

ದಿ:— ಕೊತವಾಲ! ಹಿಡಿದುಕೊಂಡು ಬಾ ಆ ಸೂಳೆಯನ್ನು!

ಕೊತ:—ಈ ಕೈಯು ಇಂದು ಯಾರಾರನ್ನು ಮುಟ್ಟಿ ಪವಿತ್ರವಾಗುವದೋ?

(ಹೋಗುವನು.)

ದೊರೆ:—ದಿವಾಣರೇ! ಹೊತ್ತಾಗುತ್ತ ಬಂತು. ಅವಳನ್ನು ಅರಮನೆಗೇ ತರಲು ಹೇಳಿರಿ. ನಮ್ಮ ಮಧ್ಯಾಹ್ನದ ಊಟವಾಗಿ, ವಾಮಕುಕ್ಷಿಯಾಗಿ ಎದ್ದಮೇಲೆ ಅವಳ ನ್ಯಾಯವಿಚಾರಣೆಯಾಗಲಿ, ಅವಳು ವೇಶ್ಯೆಯಿದ್ದರೂ ಕುಲವಂತರಕೂಡ ಅವಳ ಸಂಬಂಧ ಬರುವದರಿಂದ, ಅವಳು ಕುಲೀನಳೆಂದೇ ತಿಳಿಯಬೇಕು. ಏನಾದರೂ ಹೆಂಗಸೆ! ನಾಲ್ಕು ಜನರು ಕೂಡಿದಲ್ಲಿ ಅವಳ ನ್ಯಾಯವಿಚಾರಣೆ ಬೇಡ.

ಕಳ್ಳಿ:—(ಸ್ವಗತ) ಇನ್ನೇನು ಏಕಾಂತದಲ್ಲಿ ಇವಳ ನ್ಯಾಯವಿಚಾರಣೆಯಾಗುವದೇನು! ಒಳ್ಳೆಯ ನ್ಯಾಯ! ಒಳ್ಳೆಯ ವಿಚಾರಣೆ!

ದಿ:—ಈ ಊರಬಸವಿಗೇಕೆ ಇಷ್ಟುಮಾನ!

ದೊರೆ:-ವೇಶ್ಯೆಯರು, ಕುಲೀನರು, ಎಂದು ಭೇದ ಮಾಡಲಿಕ್ಕೆ ನಮ್ಮ ನ್ಯಾಯವೇನು ನಾಟಕವೇ? ಸ್ತ್ರೀಯರಲ್ಲಿ ಭೇದವನ್ನೆಣಿಸಕೂಡದು. ಎಲ್ಲ ಹೆಂಗಸರೂ ನಮಗೆ ಅಷ್ಟೇ!

ಗೃ:— (ಸ್ವಗತ) ವಿಶ್ವಕುಟುಂಬಿಯೆನ್ನಬೇಕು, ಇಂಥ್ಥವನಮ್ಮ ಮಹಾರಾಯರಿಗೇ!

ದೊರೆ:-ನಾನು ಹೇಳಿದ ಹಾಗೆ ಮಾಡಲು ಕೊತವಾಲನಿಗೆ ಹೇಳಿರಿ. ನಡಿಯಿರಿ.

(ಎಲ್ಲರೂ ಹೋಗುವರು).

### ೧ನೇ ಪ್ರವೇಶ ಸಮಾಪ್ತ.

---

# ಕರ್ಮಾಕರ್ಮ.

ಪ್ರತಿಯೊಬ್ಬ ಮನುಷ್ಯನು ಒಂದಿಲ್ಲೊಂದು ದಿನ ಕರ್ಮಾಕರ್ಮಗಳ ವಿಚಾರದ ಮರ್ಮವನ್ನು ತಿಳುಕೊಳ್ಳಲೇಬೇಕು. ಇಲ್ಲವಾದರೆ ತಾನು ಮಾಡುವದು ಯೋಗ್ಯವೋ ಅಯೋಗ್ಯವೋ ಎಂಬುವುದು ಅವನಿಗೆ ಸ್ಪಷ್ಟವಾಗಿ ತಿಳಿಯದೆ, ಅವನು ಏನು ಮಾಡಿದರೂ ಹೇಗೆ ಮಾಡಿದರೂ ಮನಸಿನ ಸಂಶಯವು ಅಳಿಯದೆ, ಅವನ ಜೀವನವು ಅಸಹ್ಯವಾಗುವದು. ಶಾಂತಿ ಸುಖ ಸಂತೋಷಗಳನ್ನೀಯುವ ಸಹಜಾನಂದ ವೃತ್ತಿಯ ಬದಲು, ದುಃಖ, ಮಾನಸಿಕತಾಪ, ಆಲಸ್ಯಗಳ ತವರುಮನೆಯಾದ ಸಂದೇಹ ವೃತ್ತಿಯು ಬರುವದು. ಮನೋದುರ್ಬಲನಾದವನು ಇಂಥ ಪರಿಸ್ಥಿತಿಯಲ್ಲಿ ಪ್ರಾಯಃ ಅಡ್ಡಹಾದಿಯನ್ನು ಹಿಡಿದು ಧರ್ಮಲಂಡನಾಗುವನು. ಇಂಥ ದುರಾಚಾರಿಗಳೇ ಸಮಾಜದಲ್ಲಿ ಹೆಚ್ಚಾಗಿ ಕಂಡುಬರುವರು.

ಸತ್ಯವನ್ನೇ ನುಡಿಯಬೇಕು. ಯಾರಮನಸ್ಸು ನೋಯುವಹಾಗೆ ಮೈಮಾತು ಮನಗಳಿಂದ ನಡೆಯಬಾರದು. ಪರರ ಸಂಪತ್ತಿಯನ್ನು ಎಂದಿಗೂ ಹರಣಮಾಡಬಾರದು. ಇವೇ ಮೊದಲಾದ, ಎಲ್ಲರಿಗೂ ಸಮ್ಮತವಾದ ನಿಯಮಗಳನ್ನು ಪಾಲಿಸುವಾಗ ಯಾವತರದ ಯುಕ್ತಾಯುಕ್ತತೆಯ ಪ್ರಶ್ನೆಯೂ ಬರುವದಿಲ್ಲ. ಆದರೆ ಈ ಪ್ರಪಂಚದಲ್ಲಿ ನಡೆಯುವದು ಇಷ್ಟು ಸುಲಭವಿಲ್ಲ. ಒಂದೇ ಕಾಲಕ್ಕೆ ಇಂಥ ಎರಡು ನಿಯಮಗಳಲ್ಲಿ, ಒಂದನ್ನು ಆರಿಸಿ ನಡೆಯಬೇಕಾಗುವ ಪ್ರಸಂಗಗಳೇ ಬಹಳ. ಒಂದು ಪಾಲಿಸುವದಾದರೆ ಎರಡನೆಯದನ್ನು ಮುರಿಯಲೇ ಬೇಕಾಗುವ ಪ್ರಸಂಗಗಳಲ್ಲಿ ನಡೆಯುವದು ಬಲುಬಿಗಿ. ಯಾವದನ್ನು ಹಿಡಿದು ಯಾವದನ್ನು ಬಿಡಬೇಕೆಂಬ ನಿರ್ಣಯವನ್ನು ಮಾಡುವಾಗಲೇ ತೊಂದರೆಯುಂಟಾಗುವದು, ಇಂಥ ಪ್ರಸಂಗಗಳಲ್ಲಿ ಹೀಗೆಯೇ ನಡೆಯೆಂದು ತಿಳಿಯಾಗಿ ಯಾವ ಧರ್ಮಸಿಂಧುವೂ, ಪುರಾಣಗಳೂ ಸ್ಮೃತಿಗಳೂ ಸ್ಪಷ್ಟ

ರೀತಿಯಿಂದ ಹೇಳುವದಿಲ್ಲ. ಅದು ಯಾರಿಗೂ ಹೇಳುವದು ಅಶಕ್ಯವು. **ಮಹಾಜನೋ ಯೇನ ಗತಃ ಸ ಪಂಥಾ** ಎಂದು ಕೆಲವರು ಇತಿಹಾಸಪುರಾಣಗಳ ಕಡೆಗೆ ಕೈತೋರಿಸುವರು. ಎಲ್ಲ ನಿಯಮಗಳ ಮರ್ಮಗಳನ್ನು ಹೇಳಿ ಪ್ರತಿಯೊಬ್ಬನು ತಮ್ಮ ತಮ್ಮ ಸಾರಾಸಾರ ವಿಚಾರಗಳ ಪ್ರಕಾರ ಯೋಗ್ಯ ಕಂಡಹಾಗೆ ನಡೆಯಬೇಕೆಂದು ಕೆಲವರ ಹೇಳಿಕೆ. ಅಂತೂ ಸಂದುಕಟ್ಟಿನ ಹೊತ್ತಿನಲ್ಲಿ ಹೀಗೆಯೇ ನಡೆಯೆಂದು ಯಾರೂ ಹೇಳಿರದುದರಿಂದಲೂ ಆಗಿಹೋದ ವಿಭೂತಿಗಳ ಆಚಾರದಲ್ಲಿ ಸಾಮ್ಯವಿರದುದರಿಂದಲೂ ಇವನ ಹೊಣೆಗಾರಿಕೆಯು ಏನೂ ತಪ್ಪುವದಿಲ್ಲ. ಅರ್ಜುನನಂಥವನಿಗೂ ಕೂಡ ಯುದ್ಧರಂಗದಲ್ಲಿ ತನ್ನ ಕೃತಿಯ ಯುಕ್ತಾಯುಕ್ತತೆಯ ದಿಗಿಲುಬಿದ್ದು, ಏನೂ ತೋಚದೆ, ಅನನ್ಯಭಾವದಿಂದ ಭಗವಂತನಿಗೆ ಶರಣುಹೋಗಬೇಕಾಯಿತು. ಇಂಥ ಪ್ರಸಂಗದಲ್ಲಿ ಅರ್ಜುನನಿಗೆ ನಿಷ್ಕಾಮ ಕರ್ಮಕ್ಕೆ ಹುರಿದುಂಬಿಸಿದ ಭಗವದ್ಗೀತೆಯ ಅರ್ಥವನ್ನು ಬೇರೆ ಬೇರೆ ಆಚಾರ್ಯರು ಭಿನ್ನಭಿನ್ನವಾಗಿ ಹೇಳುವರು. ಯುದ್ಧವು ಮುಗಿದಮೇಲೆ ಧರ್ಮರಾಜನಿಗೆ ತನ್ನ ಕರ್ಮದ ಯುಕ್ತಾಯುಕ್ತತೆಯ ಮೋಹವುಂಟಾಗಿ ಮನಸ್ತಾಪವಾಗಲು, ಭೀಷ್ಮಾಚಾರ್ಯರ ಕಡೆಗೆ ಹೋಗಿ, ಶಾಂತಿಯನ್ನು ಹೊಂದಬೇಕಾಯಿತು. ಸಾಕ್ಷಾತ್ ಭಗವಂತನ ಅವತಾರಿಯಾದ ಶ್ರೀರಾಮಚಂದ್ರನಿಗೆ ಹೆಸರಿಡುವವರೂ ಇರುವರು. ಈ ಕರ್ಮಾಕರ್ಮದ ಗಂಟು ಬಲು ಸೂಕ್ಷ್ಮವಾಗಿರುವದು.

ಪ್ರತಿಯೊಬ್ಬನಿಗೆ ತನ್ನ ದೇಶದ-ಸಮಾಜದ-ಮತ್ತು ಆತ್ಮದ-ಹಿತವನ್ನು ನೋಡಿ ತನ್ನ ಕರ್ತವ್ಯವನ್ನು ಪಾಲಿಸಬೇಕಾಗುವದು. ಅವುಗಳ ಪರಿಸ್ಥಿತಿ, ಶಕ್ತಿಗಳಿಗನುಸರಿಸಿ ಕಾಲಕಾಲಕ್ಕೆ ಕರ್ತವ್ಯವನ್ನು ತಿಳಿದುಕೊಳ್ಳಬೇಕಾಗುವದರಿಂದಲೇ ಬೇರೆ ಬೇರೆ ಮಹಾತ್ಮರು ಬೇರೆ ಬೇರೆ ತತ್ವಗಳನ್ನುಪದೇಶಿಸಿ, ದೇಶೋದ್ಧಾರ ಆತ್ಮೋದ್ಧಾರಗಳನ್ನು ಮಾಡಿರುವರು. ಸಮಾಜದಲ್ಲಿ ಯಜ್ಞಯಾಗಾದಿ ಕಾಮ್ಯಕರ್ಮಗಳು ಹೆಚ್ಚಾಗಿ ಹಿಂಸೆಯೇ ಧರ್ಮವೆಂಬ ಮೋಹವಾಗುವಷ್ಟು ವಿಪರೀತಸ್ಥಿತಿಯಲ್ಲಿ ಮಹಾತ್ಮನಾದ ಬುದ್ಧನಿಗೆ ಅಹಿಂಸಾಧರ್ಮವನ್ನು ಎತ್ತಿಹಿಡಿದು, ಸಮಾಜದ ಸುಧಾರಣೆಯನ್ನು ಮಾಡಬೇಕಾಯಿತು. ಈ ಕಾಲಕ್ಕೆ ತಾರಕವಾದ **ಅಹಿಂಸಾ ಪರಮೋ ಧರ್ಮಃ** ಮಂತ್ರದ ಪಾಲನದಲ್ಲಿ ಮುಂದೆ ಅತಿರೇಕವಾಗಿ, ಮಾನವನ ಜೀವನಕ್ಕೆ ಸಮಾಜದ ಸ್ಥೈರ್ಯ, ಸಂರಕ್ಷಣೆ, ಬೆಳವಣಿಗೆಗಳಿಗೆ ಅವಶ್ಯವಾಗಿ ಯೋಗ್ಯವಿದ್ದಷ್ಟು ಹಿಂಸೆಯನ್ನು ಕೂಡ ಜನರು ಬಿಡಲು, ಹಿಂಸೆಯ ಅತಿರೇಕದಿಂದುಂಟಾದ ಸಮಾಜದ ನಾಶವು ಅಹಿಂಸಾವ್ರತದ ಪಾಲನದಿಂದ ಬಂದೊದಗಿ, ಶ್ರೀ ಶಂಕರಾಚಾರ್ಯರಿಗೆ ಹಿಂಸಾಹಿಂಸೆಯ ಯೋಗ್ಯಮೀಮಾಂಸೆಯನ್ನು ಮಾಡಿ, ಎರಡೂ ತಪಗಳ ಯೋಗ್ಯಪಾಲನವನ್ನು ಹೇಳುವ ಬ್ರಾಹ್ಮಣಧರ್ಮವನ್ನು ಸ್ಥಾಪಿಸಬೇಕಾಯಿತು. ರೋಗಕ್ಕೆ ತಕ್ಕ ಚಿಕಿತ್ಸೆಯಾದರಾಯಿತು ! ಬುದ್ಧನ ಕಾಲಕ್ಕೆ ಅವನು ಮಾಡಿದ್ದೇ ಯೋಗ್ಯ; ಶಂಕರಾಚಾರ್ಯರ ಕಾಲಕ್ಕನುಸರಿಸಿ ಅವರು ಮಾಡಿದ್ದೇ ಯುಕ್ತ. ಆ ಆ ಕಾಲಕ್ಕೆ ಸಮಾಜದ ಪರಿಸ್ಥಿತಿ, ಶಕ್ತಿ, ಯುಕ್ತಿಗಳನ್ನು ತೂಗಿ ನಿರ್ಣಯಿಸಿದ

ನಿಯಮಗಳು ಆ ಆ ಕಾಲಕ್ಕೆ ಯೋಗ್ಯವೇ. ಬರಿಯ ಹಿಂಸೆ ಯೋಗ್ಯವೋ? ಅಹಿಂಸೆ ಯೋಗ್ಯವೋ ? ಬಾಲವಿವಾಹವು ಯುಕ್ತವೋ? ಪ್ರೌಢವಿವಾಹವು ಯುಕ್ತವೋ ? ಎಂಬುವ ದನ್ನು ಹೇಳುವದು ಯಾರಿಗೂ ಶಕ್ಯವಿಲ್ಲ. ಅವರವರಿಗೆ ಸಂಬಂಧಿಸಿದ ಪರಿಸ್ಥಿತಿ ಶಕ್ತಿಗಳನ್ನು ವಿಚಾರಿಸಿದರೇ ಏನಾದರೂ ಹೇಳುವದು ಶಕ್ಯವಿದೆ.

ಅದೇ ಪ್ರಕಾರ ನಿರ್ಗುಣಪೂಜೆ, ಸಗುಣಪೂಜೆ, ನಿಷ್ಕಾಮಕರ್ಮ, ಕಾಮ್ಯಕರ್ಮ; ಗೃಹಸ್ಥಾಶ್ರಮ, ಸನ್ಯಾಸ ಇವೇ ಮೊದಲಾದ ವ್ಯಕ್ತಿಯ ಪರಿಸ್ಥಿತಿ, ಶಕ್ತಿ, ಮನಸಿನ ಒಲವುಗಳ ಮೇಲೆ ಅವಲಂಬಿಸಿರುವ, ಒಂದಕ್ಕೊಂದು ವಿರುದ್ಧವಾದ, ಹಾದಿಯನ್ನು ಹೇಳುವ ವಿಷಯಗಳಲ್ಲಿ ಎಲ್ಲರಿಗೂ ಯಾವಾಗಲೂ ಪಾಲಿಸಲಿಕ್ಕೆ ಯೋಗ್ಯವಾಗುವ, ಒಂದೇ ಹಾದಿಯನ್ನು ತೋರಿಸಲು ಹೋಗುವದೆಂದರೆ ಪೃಥ್ವಿಯ ಮೇಲಿನ ಎಲ್ಲ ಜನರು ಎಲ್ಲ ಋತುಗಳಲ್ಲಿ ತೊಟ್ಟುಕೊಳ್ಳಲಿಕ್ಕೆ ಯೋಗ್ಯವಾಗಬಹುದಾದ ಒಂದೇ ತರಹದ ಉಡುಪನ್ನು ನಿರ್ಣಯಿಸಲು, ಪ್ರಯತ್ನಿಸುವ ಹಾಗೆಯೇ ಸರಿ.

ಪ್ರತಿಯೊಬ್ಬನು ತನ್ನ ಕರ್ಮಕ್ಕೆ ತಾನೇ ಹೊಣೆಗಾರನು. ಈ ಹೊಣೆಗಾರಿಕೆಯ ಕೂಡ ದೇವರು ಅವನಿಗೆ ಸಾರಾಸಾರ ವಿಚಾರಶಕ್ತಿಯನ್ನೂ, ಆತ್ಮಿಕಶಕ್ತಿಯನ್ನೂ ಕೊಟ್ಟಿರುವನು. ಆದುದರಿಂದ ಪ್ರತಿಯೊಬ್ಬನು ತನ್ನ ಜ್ಞಾನವನ್ನು ಬೆಳೆಸಿ, ಸ್ವತಂತ್ರ ಮತ್ತು ಯೋಗ್ಯವಿಚಾರ ಮಾಡಲು ಕಲಿತು, ತನ್ನ ವಿವೇಕದ ಕೈಯಲ್ಲಿ ಜೀವನದ ಸೂತ್ರಗಳನ್ನು ಕೊಡುವದು ಯೋಗ್ಯ. ಇಲ್ಲವಾದರೆ ತನತನಗೆ ಯೋಗ್ಯವಾಗಿ ಕಂಡ ಸತ್ಪುರುಷನ ಸಹಾಯದಿಂದ ತನ್ನ ವಿಚಾರಗಳ ಯುಕ್ತಾಯುಕ್ತತೆಯನ್ನು ತಿಳುಕೊಂಡು, ಆ ಪ್ರಕಾರ ನಡೆಯುವದು ಸುಲಭವಾದ ಹಾದಿ.

ವಿವೇಕದಿಂದ ನಿರ್ಣಯಿಸಿದ್ದು ಯಾವಾಗಲೂ ಸತ್ಕರ್ಮವೇ ಆಗಲಾರದು. ಒಮ್ಮೊಮ್ಮೆ ತಪ್ಪು ವಿಚಾರಸರಣಿಯಿಂದ ವಿಪರೀತ ತಿಳುವಳಿಕೆಯಾಗಿ ತಪ್ಪು ಕೃತಿಯಾದದ್ದು, ದೊಡ್ಡ ದೊಡ್ಡ ವಿಚಾರಿಗಳ ಚರಿತ್ರಗಳಲ್ಲಿಯೂ ಕಂಡುಬರುವದು. ಅಂದಬಳಿಕ ಪಾಪಕರ್ಮಗಳಿಂದ ಬಿಡುಗಡೆಯಾಗುವ ಬಗೆ ಹೇಗೆ? ಪ್ರಾಮಾಣಿಕತನದಿಂದ ತನಗೆ ಯೋಗ್ಯಕಂಡದ್ದನ್ನೇ ಮಾಡಿ, ಭಗವಂತನು ಗೀತೆಯಲ್ಲಿ ಅರ್ಜುನನಿಗೆ ಹೇಳಿದ ಪ್ರಕಾರ ಮಾಡಿದ್ದು ಮುಟ್ಟಿದ್ದು, ಉಂಡದ್ದು, ಉಟ್ಟದ್ದು, ಬಿಟ್ಟದ್ದು, ಕೊಟ್ಟದ್ದು, ನೆನೆಸಿದ್ದು ಅನಿಸಿದ್ದು, ಎಲ್ಲವನ್ನೂ ಆತನಿಗೆ ನಿವೇದನ ಮಾಡಬೇಕು.

> यत्करोषि यदश्नासि यज्जुहोषि ददासि यत् ।
> यत्तपस्यसि कौंतेय तत्कुरुष्व मदर्पणं ॥ ೯ ಅ. ೨೭ಶ್ಲೋ.

ಅದನ್ನು ಭಗವಂತನಿಗೆ ಅರ್ಪಿಸಿದರೆ:—

> शुभाशुभफलैरेवं मोक्ष्यसे कर्मबंधनैः ।
> संन्यासयोगयुक्तात्मा विमुक्तो मामुपैष्यसि ॥ २८ ॥

ಕರ್ಮದ ಫಲಗಳಾದ ಶುಭ ಅಶುಭಗಳೇ ಅವನನ್ನು ಕಟ್ಟಲಾರವು; ಮುಟ್ಟಲಾರವು. ಇಂಥ ನಿರ್ಲೇಪನಾದವನು ಭಗವಂತನನ್ನು ಕೂಡಿಕೊಳ್ಳುವನು.

—ಅಭಯ.

# ಗುರುಪೂಜೆ.

( ಪೂಜೆಯೆಂದರೆ ವಾತ್ಸಲ್ಯ—ಮಮತೆಗಳ ಆಲಿಂಗನ. ಪೂಜ್ಯನಲ್ಲಿ ವಾತ್ಸಲ್ಯ; ಪೂಜಾರಿಯಲ್ಲಿ ಮಮತೆ. ಹೀರುವುದು ವಾತ್ಸಲ್ಯದ ಸ್ವಭಾವ; ಹರಿಯುವುದು 'ಮಮತೆ'ಯ ಸ್ವಭಾವ. ಮಮತೆಯು ತುಂಬಿ ತುಳುಕಿದರೆ ವಾತ್ಸಲ್ಯವು ಹಿಗ್ಗಿ ಹೀರುವುದು. ಇದುವೆ ಅವೆರಡರ ಸಾಮರಸ್ಯ; ಆಲಿಂಗನ !! ವಾತ್ಸಲ್ಯಪೂರ್ಣನಾದ ಅನಂತನೊಡನೆ—ಗುರುವಿನೊಡನೆ ವತ್ಸನಾಡುವ ಆಟವೇ ಪೂಜೆ !! —ಗುರು-ಪೂಜೆ !!! )

ಹೃದಯುದ ಹುಡಿಯಣ ಹೆಜ್ಜೆಗಳ । ಸದಯುನ ನೆನಹಿನ ಪಾದಗಳ
ಭಾವದ ಗುಡಿಯುಲಿ ಕಾಣುವೆನು । ದೇವನ ನೆನೆಯುತ ಪೂಜಿಪೆನು ॥ಪ॥

ಮನಸಿನ ಮುಚ್ಚಳ ಸರಿಸಿ ತನುವಿನ ತಂಬಿಗೆಯೊಲಿಸಿ
ಹಣ್ಣಿದ ಜೀವನ ಬರಿಸಿ ಕಣ್ಣಿನ ಕುಣಿಕೆಯು ತೆರಿಸಿ
ಮಮತೆಯ ಮಡಿಜಲ ಸುರಿಸಿ ಎಮೆಯಿಂದಡಿಗಳನೊರಿಸಿ
ಹೃದಯುದ ಹುಡಿಯಣ ಹೆಜ್ಜೆಗಳ । ಸದಯುನ ನೆನಹಿನ ಪಾದಗಳ
ಭಾವದ ಗುಡಿಯುಲಿ ಕಾಣುವೆನು । ದೇವನ ನೆನೆಯುತೆ ಪೂಜಿಪೆನು ॥೧॥

ನಚ್ಚಿನ ಸಾಣೆಯನಿರಿಸಿ ಇಚ್ಛೆಯ ಜಲ ಸಿಂಪಡಿಸಿ
ಮೋಹದ ಚಂದನ ಸವಿಸಿ ಸ್ನೇಹಸುಗಂಧವನುಳಿಸಿ
ಅಂದದಿನಡಿಗಳ ತೊಳೆದು ಗಂಧವನಂಗಕೆ ತೊಡೆದು
ಹೃದಯುದ ಹುಡಿಯಣ ಹೆಜ್ಜೆಗಳ । ಸದಯುನ ನೆನಹಿನ ಪಾದಗಳ
ಭಾವದ ಗುಡಿಯುಲಿ ಕಾಣುವೆನು । ದೇವನ ನೆನೆಯುತ ಪೂಜಿಪೆನು ॥೨॥

ಹುರುಪಿನ ಹೂಗಳ ಹರಿದು ನಿರಾಶೆಯ ದೇಂಟನೆ ಮುರಿದು
ಆಶೆಯ ಕಾ(.ವನೆ ಕಾದು ಸಂಪ್ರೀತಿಯ ಸೂತ್ರದೆ ಕೋದು
ಕುರುಹಿನ ಸರಸರಿಪಡಿಸಿ ಕೊರಳಿಗೆ ಅದನಳವಡಿಸಿ
ಹೃದಯುದ ಹುಡಿಯುಣ ಹೆಜ್ಜೆಗಳ । ಸದಯುನ ನೆನಹಿನ ಪಾದಗಳ
ಭಾವದ ಗುಡಿಯುಲಿ ಕಾಣುವೆನು । ದೇವನ ನೆನೆಯುತ ಪೂಜಿಪೆನು ॥೩॥

(ಚೆನ್ನನನೋಡುತೆ ಮನದಿ) ನನ್ನಿಯ ನೀರಾಜನದಿ
ನೇಹದ ನೆಯ್ಯನು ಸುರಿದು ದೇಹದ ಬತ್ತಿಯನುರಿದು
ಪಂಚಪ್ರಾಣವ ತೊಳಗಿ ಪಂಚಾರತಿಯನು ಬೆಳಗಿ
ಶಕ್ತಿಯ ಹಡದಿಯು ಹಾಸಿ ಮುಕ್ತಿಯ ಚವರಿಯ ಬೀಸಿ
ಭಕ್ತಿಯ ಎಲೆಯುಲಿ ಬಡಿಸಿ ವ್ಯಕ್ತಿತ್ವವನುಣಬಡಿಸಿ
ಹೃದಯುದ ಹುಡಿಯುಣ ಹೆಜ್ಜೆಗಳ—ಸದಯುನ ನೆನಹಿನ ಪಾದಗಳ
ಭಾವದ ಗುಡಿಯುಲಿ ಕಾಣುವೆನು ! ದೇವನ ನೆನೆಯುತ ಪೂಜಿಪೆನು !! ॥೪॥

—ಚೆನ್ನ

# ಅನಾಥಬಂಧು.

## ಒಂದು ಚಿಕ್ಕ ಕತೆಯು.

ಬರೆದವನು: — ಆನಂದಕಂದ.

೧

ಶಾಮಲೆಯ ತಂದೆ ರಾಮರಾಯರು, ವಿಜಯಪುರದ ಜಿಲ್ಹೆಯ ಆಫೀಸಿನಲ್ಲಿ ಗುಮಾಸ್ತೆಯಾಗಿದ್ದರು. ಹಿರಿಯರಿಂದ ಬಂದ ಹೊಲನೆಲ, ಆಸ್ತಿವೃತ್ತಿಗಳೇನೂ ರಾಮರಾಯರಿಗಿರಲಿಲ್ಲ. ಸಂಬಳವು ತಿಂಗಳೊಂದಕ್ಕೆ ಎಪ್ಪತ್ತು ರೂಪಾಯಿ. ಹೆಚ್ಚಿನ ಪ್ರಾಪ್ತಿಗಾಗಿ ರಾಮರಾಯರು ಆಶೆಪಡುತಿರಲಿಲ್ಲ. ಸಂಸಾರಕ್ಕೆ ಸಂಬಂಧಿಸಿದ ವೆಚ್ಚವೆಲ್ಲವೂ ಸಂಬಳದ ಹಣದಿಂದಲೇ ಸಾಗಬೇಕು. ಮನೆಯಲ್ಲಿಯ ಜನರೆಂದರೆ ರಾಮರಾಯರು, ಹೆಂಡತಿ ಸೀತಮ್ಮ, ಎಳೆಮಗುವಾದ ಶಾಮಲೆ, ಸೀತಮ್ಮನ ವಿಧವೆಯಾದ ತಾಯಿಯೊಬ್ಬಳು, ನಾಲ್ಕು ಜನರು. ಶಾಮಲೆಯ ಬೆನ್ನ ಮೇಲೆ, ಸೀತಮ್ಮ ಒಂದು ಗಂಡು ಮಗುವನ್ನು ಹೆತ್ತಿದ್ದರು. ಅದು ಬಹಳ ದಿವಸ ಬಾಳಲಿಲ್ಲ. ಹುಟ್ಟಿದ ಹತ್ತು ದಿನಗಳಲ್ಲಿಯೇ ಸತ್ತು ಹೋಯಿತು.

ರಾಮರಾಯರು ಧನದಿಂದ ಬಡವರಿದ್ದರೂ, ಮನದಿಂದ ಬಲ್ಲಿದರು. ಒಳ್ಳೇ ಉದಾರ ಹೃದಯದವರು. ಎಳೆಯತನದಿಂದಲೂ ಅವರಿಗೆ ಬಡತನದ ಪರಿಚಯವಿದ್ದಿತಾದುದರಿಂದ, ಬಡವರು ಪಡುವ ಭವಣೆಯನ್ನು ಬಲ್ಲವರಾಗಿದ್ದರು. ಎಂತಲೇ ಬಾಗಿಲಿಗೆ ಬಂದ ಬಡ ಬೇಡುಗರನ್ನು, ರಾಮರಾಯರು ಬರಿಗೈಯಿಂದ ಎಂದೆಂದೂ ಮರಳಿಸುತಿರಲಿಲ್ಲ. ಗತಿಯಿಲ್ಲದ ವಿದ್ಯಾರ್ಥಿಗಳಿಗೆ ಜೀವವನ್ನು ಒತ್ತೆಯಿಟ್ಟಾದರೂ ನೆರವಾಗುವರು. ಆದುದರಿಂದ ಈ ತಿಂಗಳಿನ ಸಂಬಳದ ಹಣವು ಮುಂದಿನ ತಿಂಗಳ ಮೊದಲನೆಯ ದಿನವನ್ನು ಕಾಣುವುದೆಂದರೆ, ರಾಮರಾಯರ ಸಂದರ್ಭದಲ್ಲಿ ಹಸುವು ಕೋಣಗರುವನೀದಂತಹ ಅಸಂಭವನೀಯ ಸಂಗತಿಯು. ಮಿತವ್ಯಯದ ಮಾತು, ಮೊದಲಿನ ಜನ್ಮದಲ್ಲಿಯಾದರೂ ರಾಮರಾಯರ ಮನದಲ್ಲಿ ಬಂದಿದ್ದಿತೇನೋ! ಎಂಬುದು ಸಂಶಯ. ಎಂದ ಮೇಲೆ ಅವರ ಬಳಿಯಲ್ಲಿ ಹಣವು ಉಳಿಯುವ ಬಗೆಯೆಂತು ?

ಲಚ್ಚಪ್ಪನೆಂಬುವವನು ರಾಮರಾಯರ ಆಫೀಸಿನಲ್ಲಿಯ ಒಬ್ಬ ಜವಾನ. ಕುರುಬ ಜಾತಿಯ ಪಂಗಡಕ್ಕೆ ಸೇರಿದವನು. ತೀರ ಬಡವ. ರಾಮರಾಯರಲ್ಲಿ ಆತನದೊಳ್ಳೇ ಶ್ರದ್ಧೆ, ವಿಶ್ವಾಸ. ರಾಮರಾಯರಾದರೂ ಲಚ್ಚಪ್ಪನನ್ನು ಒಳ್ಳೇ ನಂಬುಗೆಯಿಂದ ಕಾಣುತಿದ್ದರು. ಕಾರಣವನ್ನು ಮಾತ್ರ ಕೇಳಕೂಡದು. ಲಚ್ಚಪ್ಪನ ಮಗ ಗೋವಿಂದನು.

ರಾಮರಾಯರ ಮನೆಯಲ್ಲಿಯೇ ಇರುತ್ತಿದ್ದನು. ಅವನಿಗಾಗ ಹದಿನಾರು ವರ್ಷಗಳು. ಒಳ್ಳೆಯ ಹುಡುಗ. ಕುದುರುವ ಬುದ್ಧಿಯುವ. ರಾಮರಾಯರ ಮನೆಯಲ್ಲಿ ಶರು ಬರುವ ಸಣ್ಣ ದೊಡ್ಡ ಕೆಲಸಗಳನೆಲ್ಲ ಅವನೇ ಮಾಡುತಿದ್ದನು. ಮನೆಯವರ ನಂಬುಗೆಯನ್ನು ಪೂರ್ಣವಾಗಿ ಸಂಪಾದಿಸಿದ್ದನು. ರಾಮರಾಯರಿಗೆ "ಚಿಕ್ಕಪ್ಪ" ಎಂತಲೂ ಸೀತಮ್ಮನಿಗೆ "ಚಿಕ್ಕಮ್ಮ" ಎಂತಲೂ ಕರೆಯುವನು. ಅವರೂ ಗೋವಿಂದನೊಡನೆ ಮನೆಯ ಮಗನೆಂಬ ಭಾವನೆಯಿಂದಲೇ ನಡೆಯುತಿದ್ದರು.

ಶಾಮಲೆಯಲ್ಲಿ ಗೋವಿಂದನದು ಹೇಳಲಾರದಷ್ಟು ಮಮತೆ. ಒಡಹುಟ್ಟಿದ ತಂಗಿಯಿಂದಲೂ ಹೆಚ್ಚಾಗಿ ಪ್ರೀತಿಸುವನು. ಶಾಮಲೆಯು ಎಲ್ಲಿ ಕುಳಿತಿದ್ದರೂ, ಗೋವಿಂದನು ಕರೆದರೆ ಎಡವುತ್ತ ಮುಗ್ಗುತ್ತ ಓಡಿ ಬರುವಳು. ತೊಡೆಯ ಮೇಲೆ ಪ್ರೇಮದಿಂದ ಕೂಡುವಳು. ಮುದ್ದುಮುದ್ದಾಗಿ ಮಾತನಾಡುವಳು. ಮೈಮೇಲೆ ಬೀಳುವಳು. ಗುದ್ದುವಳು. ಚಿವುಟುವಳು, ಇನ್ನೇನನಾದರೂ ಹುಡುಗಾಟ ಮಾಡುವಳು. ಅವಳು ಮಾಡುವುದೆಲ್ಲ ಗೋವಿಂದನಿಗೆ ಅಂದವಾಗಿಯೇ ಕಾಣುವುದು. ಶಾಮಲೆಯು ಹಟ ಮಾಡಿ ಅಳುತಿದ್ದರೆ, ಕರೆದು ರಂಬಿಸಿ ಆಡಿಸುವವನು ಗೋವಿಂದನೇ. ಗೋವಿಂದನು ರಾಮರಾಯರ ಮನೆಯವರೆಲ್ಲರೊಡನೆ ಬೆರೆತು ಹೋಗಿದ್ದನು.

ಗೋವಿಂದನಾಗ ಓದುತಿದ್ದುದು, ಇಂಗ್ಲೀಷು ಆರನೆಯ ತರಗತಿಯಲ್ಲಿ. ಲಚ್ಚಪ್ಪನು ಬಡವ. ಸಂಬಳದ ಹದಿನೈದು ರೂಪಾಯಿಗಳಿಂದ ತನ್ನ ಬಾಳುವೆ ಸಾಗಿಸಿಕೊಂಡು ಹೋಗುವುದೇ ಕಠಿನವಾಗಿದ್ದಿತು. ಗೋವಿಂದನನ್ನು ಓದಲು ಕಳಿಸುವುದು ಅವನಿಗೆ ಸಾಧ್ಯವಾಗಿರಲಿಲ್ಲ. ಗೋವಿಂದನ ಬುದ್ಧಿ ಚುರುಕಾಗಿರುವುದನ್ನು ರಾಮರಾಯರು ಕಂಡರು. ಅವನ ಶಿಕ್ಷಣದ ಹೊರೆಯನ್ನು, ನಸುವೂ ಹಿಂದೆ ಮುಂದೆ ನೋಡದೆ ತಾವೇ ಹೊತ್ತರು. ಗೋವಿಂದನ ಹೊಟ್ಟೆಬಟ್ಟೆಯ ವೆಚ್ಚ, ವಿದ್ಯಾಭ್ಯಾಸದ ವೆಚ್ಚ ಎಲ್ಲವನ್ನೂ ಕೇವಲ ನಿಷ್ಕಾಮಬುದ್ಧಿಯಿಂದ ತಾವೇ ಕೊಡುತಲಿದ್ದರು.

ಜಗತ್ತಿನಲ್ಲಿ ಸುಸೂತ್ರವಾಗಿ ಯಾವ ಕೆಲಸವು ಸಾಗುವುದು ? ಸಂಗೀತಗಾರನು ವೀಣೆಯನ್ನು ಬಾರಿಸುತ್ತ, ವಿವಿಧ ಸ್ವರಗಳ ಆಲಾಪಗಳನು ತೋರಿಸುತ್ತ, ಕುಳಿತಿರುವನು. ನೆರೆದ ಜನರೆಲ್ಲರು ಹೊರಗಿನ ಜಗತ್ತನ್ನೇ ಮರೆದು, ಆ ವೀಣೆಯ ಸ್ವರದೊಡನೆ ಸಮರಸರಾಗಿ ಹೋಗಿರುವರು. ತನ್ನ ಕಲಾಚಾತುರ್ಯದಿಂದ ಹೊಸ ಹೊಸ ರಾಗಗಳನ್ನು ಹೊರಡಿಸಿ, ಕುಳಿತವರ ಕಿವಿಮನಗಳನ್ನು ಇನ್ನಿಷ್ಟು ಎಳೆದುಕೊಳ್ಳಬೇಕೆಂದು ಸಂಗೀತಗಾರನ ಬಯಕೆ. ಜನರಿಗೂ ಕೇಳಬೇಕೆಂದು ಲವಲವಿಕೆ. ಆದರೆ ಇಷ್ಟುಹೊತ್ತಿನವರೆಗೆ ಏಕಪ್ರಕಾರವಾಗಿ ಸಂಗೀತ ಸುಧೆಯನು ಸುರಿಸಿದ ವೀಣೆಯ ತಂತಿಯು, ಆದಾವಕಾರಣದಿಂದಲೋ ಚಟ್ಟನೆ ಹರಿದು ಹೋಗುವುದು. ಎಲ್ಲರಿಗೂ ನಿರಾಶೆಯನುಂಟು ಮಾಡುವುದು. ಸಂಸಾರಸುಖವಾದರೂ ಈ ವೀಣೆಯ ತಂತಿಯ ಸಂಗೀತದಂತೆಯೆ.

ರಾಮರಾಯರ ಸಂಸಾರವು ಇದುವರೆಗೂ ಸುಖದ ದಾರಿಯಿಂದಲೇ ಸಾಗಿದ್ದಿತು. ಅದೆಂತಹ ಸುಖದ ದಾರಿ? ಅನಂತ ಕಾಲದವರೆಗೂ ಅಗಲದಿರುವ ಅಕ್ಷಯಸುಖದ ದಾರಿಯಲ್ಲ. ಮುಗಿಲಲ್ಲಿ ಮಿಂಚು ಮೂಡಿ ಅಡಗಿವಂತಹ ಕ್ಷಣಿಕಸುಖದ ದಾರಿ. ವಿಜಯಪುರದಲ್ಲಿ ವಿಷಮಜ್ವರವ ಪಿಡುಗು ಹಬ್ಬಿತು. ರಾಮರಾಯರು ಒಮ್ಮೆಲೆ ಈ ಪಿಡುಗಿನ ಬಾಯಿಗೆ ಬಲಿಯಾದರು. ಹೆಂಡರು ಮಕ್ಕಳನ್ನು ಗೋಳಿಗೆ ಗುರಿಮಾಡಿ ಪರಲೋಕಕ್ಕೆ ತೆರಳಿದರು. ರಾಮರಾಯರ ಕುಟುಂಬದ ಮೇಲೆ, ಒಮ್ಮಿಂದೊಮ್ಮೆ ಬರಸಿಡಿಲಿನ ಬಲವಾದ ಆಘಾತವಾದಂತಾಯಿತು. ಲಚ್ಚಪ್ಪನ ಮನೆಯವರಿಗೂ ಹೆಚ್ಚಾಗಿ ವ್ಯಸನವೆನಿಸಿತು. ಗೋವಿಂದನಿಗಂತೂ ಮೈಮೇಲೆ ಮುಗಿಲು ಹರಿದು ಬಿದ್ದಂತಾಯಿತು. ದಿಕ್ಕು ತಪ್ಪಿದಂತಾಯಿತು. ಏನೆಲ್ಲವೂ ಆಯಿತು. ಮಾಡುವುದೇನಿದೆ?

ತಂದೆ ತೀರಿದಾಗ ಶಾಮಲೆಗೆ ಇನ್ನೂ ಏಳುವರ್ಷ ವಯಸ್ಸು. ಹುಟ್ಟಿದಂದಿನಿಂದಲೂ ಮುದ್ದಿನಲ್ಲಿಯೇ ಬಳೆದ ಮಗು. ದುಃಖದ ಗಾಳಿ ಕೂಡ ಸೋಂಕಿರಲಿಲ್ಲ. ಆದರೆ ರಾಮರಾಯರು ಸಾಯುತ್ತಲೆ, ಸೀತಮ್ಮ ಶಾಮಲೆಯನ್ನು ಕೊರಳಿಗೆ ಕಟ್ಟಿಕೊಂಡು, ಅಪಾರವಾದ ಅಳಲಕಡಲಿನಲ್ಲಿಯೆ ದುಮುಕಿದರು. ಸೀತಮ್ಮನಿಗಾಗ ನೋಡಿದತ್ತೆಲ್ಲ ಕಗ್ಗತ್ತಲೆಯೇ ಕವಿದು ಬಿಟ್ಟಿದ್ದಿತು. "ಗದ್ದೆಗೆ ತೆವರು ಗಟ್ಟಿಯಿರಬೇಕು. ಹೆಣ್ಣಿಗೆ ತವರು ಗಟ್ಟಿಯಿರಬೇಕು" ಎಂಬುದೊಂದು ಅನುಭವದ ಮಾತು. ಸೀತಮ್ಮನಿಗೆ ತವರ ಮನೆಯ ಬೆಂಬಲವೂ ಇರಲಿಲ್ಲ. ಮುದುಕೆಯಾದ ತಾಯಿಯೊಬ್ಬಳು ಸೀತಮ್ಮನ ಕೊರಳಿಗೆಯೇ ಬಿದ್ದಿದ್ದಳು. ಸೀತಮ್ಮನಿಗೇನೂ ತೋಚದಾಯಿತು. ಎಷ್ಟೋ ಬಗೆದು ನೋಡಿದರು. "ಮನೆಗೆ ಬಾಡಿಗೆಕೊಟ್ಟು ವಿಜಯಪುರದಲ್ಲಿ ಇನ್ನು ತಾವೇತಕ್ಕೆ ಇರಬೇಕು!" ಎಂದು ಅವರು ಯೋಚಿಸಿದರು.

ಗದುಗು ಸೀತಮ್ಮನ ತವರೂರು. ಅಲ್ಲಿ ಮತ್ತೇನಿಲ್ಲದಿದ್ದರೂ ಅವರ ತಾಯಿಯ ಸ್ವಂತದ ಮನೆಯೊಂದಿದ್ದಿತು. ಮನೆ ಸಾಧಾರಣ ದೊಡ್ಡದಾಗಿಯೇ ಇದ್ದಿತು. ಬಾಡಿಗೆಗೆ ಕೊಟ್ಟರೆ ತಿಂಗಳಿಗೆ ೧೫-೨೦ ರೂಪಾಯಿಗಳು ದೊರೆಯುತಿದ್ದುವು. ಸೀತಮ್ಮ ಏನೇನನೋ ಯೋಚಿಸಿದರು. ತಾವಿರುವ ಊರನ್ನು ಬಿಟ್ಟು, ಗದುಗಿಗೆ ಹೋಗಿ ಇರುಬೇಕೆಂದು ಗಟ್ಟಿಮಾಡಿದರು. ಇವರೆಲ್ಲ ಅಗಲಿ ಹೋಗುವುರೆಂಬುದನ್ನು ಕಂಡು, ಲಚ್ಚಪ್ಪನ ಮನೆಯವರಿಗೆ ಅದೆಷ್ಟೋ ದುಃಖವೆನಿಸಿತು. ಎನಿಸಿ ಮಾಡುವುದೇನು? ಕಣ್ಣೀರು ಸುರಿಸುವುದರ ಹೊರತು, ಅವರ ಕೈಯಲ್ಲಿ ಇನ್ನೇನೂ ಇರಲಿಲ್ಲ. ಗೋವಿಂದನಿಗಂತೂ ಎಂದೂ ಆಗದಷ್ಟು ವ್ಯಥೆಯಾಯಿತು.

ತಾಯಿ-ಶಾಮಲೆಯರನ್ನು ಕರೆದುಕೊಂಡು, ಸೀತಮ್ಮ ಗದುಗಿಗೆ ಬಂದರು. ತಮಗೆ ಇರಲಿಕ್ಕೆಂದು ಮನೆಯಲ್ಲಿ ಕೊಂಚ ಭಾಗವನಿಟ್ಟುಕೊಂಡು, ಉಳಿದುದನೆಲ್ಲ ಹದಿನೈದು ರೂಪಾಯಿ ಬಾಡಿಗೆಗೆ ಗೊತ್ತುಮಾಡಿ ಕೊಟ್ಟರು. ಈ ಬಾಡಿಗೆಯ ಹಣದಿಂದಲೆ,

ಅವರ ಬಾಳುವೆಯ ಯಾವುದೆಲ್ಲ ವೆಚ್ಚವು ನಡೆಯಬೇಕು. ಸೀತಮ್ಮ ಸಹಿಸುತ್ತಲಿದ್ದ ಕಷ್ಟದ ಕಥೆಯನೆಲ್ಲ ವಿವರಿಸುತ್ತ ಕುಳಿತರೆ, ಅದೊಂದು ರಾಮಾಯಣವೇ ಆಗಬಹುದು. ಬರಗಾಲದಲ್ಲಿ ಅಧಿಕಮಾಸವೆಂಬಂತೆ, ಸೀತಮ್ಮನ ತಾಯಿ ಅಂತಹ ಕಷ್ಟದ ಕಾಲದಲ್ಲಿಯೇ ತೀರಿದಳು. ಗಾಯದ ಮೇಲೆ ಬರೆಯನೆಳೆದಂತಾಯಿತು. ಸೀತಮ್ಮನ ಪಡುಪಾಟಕ್ಕೆ ಇನ್ನಿಷ್ಟು ಮಿರುಗು ಹಾಕಿದಂತಾಯಿತು. ಒದಗಿದ ದುಃಖಗಳನೆಲ್ಲ ನುಂಗಿಕೊಂಡು, ಶಾಮಲೆಯ ಸೌಖ್ಯವನ್ನು ಹಗಲಿರುಳು ಚಿಂತಿಸುತ್ತ, ಕ್ಷಣವನ್ನು ದಿನವಾಗೆಣಿಸಿ, ಸೀತಮ್ಮ ಕಷ್ಟದಿಂದ ಕಾಲಹರಣ ಮಾಡುತಿದ್ದರು.

೨

ಕೃಷ್ಣನಾಯಕರು ಗದುಗಿನ ಸಿರಿವಂತರ ಎಣಿಕೆಯಲ್ಲಿ ಬರುವವರು. ಅವರಿಗೆ ಭೂಮಿ ಸೀಮೆ ಬೇಕಾದಷ್ಟಿದೆ. ಮನೆಯಲ್ಲಿ ಕೊರತೆಯೇತರದೂ ಇಲ್ಲ. ಚಿನ್ನ ಬೆಳ್ಳಿಯ ವ್ಯವಹಾರದ ದೊಡ್ಡ ಅಂಗಡಿಯುಂಟು. ಕೃಷ್ಣನಾಯಕರ ಹಿರಿಯ ಮಗನ ಹೆಸರು ಶಶಿಧರ. ಅವನಿಗೀಗ ಇಪ್ಪತ್ತು ವರ್ಷದ ಪ್ರಾಯ. ಚೆಲುವಾದ ತುಂಬುಮೋರೆ, ಕಳೆಯುಳ್ಳ ಕಣ್ಣು, ಹೊಳೆಯುವ ಮೈಬಣ್ಣ, ಪುಷ್ಟವಾದ ದೇಹ, ಮೊದಲಾದುವುಗಳಿಂದ ಶಶಿಧರನ ಚಲುವಿಕೆಯು ನೋಟಕರ ಎದೆಯನೆಳೆಯದಿರದು. ಶಶಿಧರನು ರಸಿಕನೂ ಅಹುದು. ಮನಸ್ಸು ದೊಡ್ಡದು. ಹೃದಯವು ಹೂವಿನಂತಹದು. ಒಳ್ಳೇ ವಿನಯಶಾಲಿ. ಮಾತನಾಡಿದರೆ ಸಕ್ಕರೆಯ ಮಳೆ ಸುರಿವಂತೆ. ಪ್ರವೇಶಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಎರಡು ವರ್ಷವಾಗಿದ್ದಿತು. ವ್ಯಾಪಾರದಲ್ಲಿ ಸೇರಬೇಕೆಂದು ಮನವಿದ್ದುದರಿಂದ, ಆತನು ಮುಂದೆ ಕಲಿಯಲು ಹೋಗಿರಲಿಲ್ಲ. ಮನೆಯಲ್ಲಿಯೇ ಇರುತಿದ್ದನು.

ಶಾಮಲೆಗೆ ೧೩ ವರ್ಷ ತುಂಬಿದುವು. ಇನ್ನೂ ಪಾಠಶಾಲೆಗೆ ಹೋಗುವಳು. ಅವಳು ಈಗ ಓದುತಿದ್ದುದು, ಇಂಗ್ಲೀಷು ಮೂರನೆಯ ವರ್ಗದಲ್ಲಿ. ತಮಗೆಷ್ಟು ಬಡತನವಿದ್ದರೂ, ಶಾಮಲೆಯ ಸುಖದ ಕಡೆಗೆ ಸೀತಮ್ಮ ಹೆಚ್ಚಾಗಿ ನೋಡುವರು. ತಾವು ಉಪವಾಸವಿದ್ದಾದರೂ ಶಾಮಲೆಯ ಬಯಕೆ ಸಲ್ಲಿಸುವರು. ಶಕ್ಯವಿದ್ದಷ್ಟು ಹೆಣಗಿ, ಅವಳ ಕೊರತೆಯನ್ನು ಪರಿಹರಿಸುವರು. ಶಾಮಲೆಯು ನಗುತಲಿದ್ದರೆ, ಸೀತಮ್ಮನಿಗೆ ದುಃಖದಲ್ಲಿಯೆ ಕೊಂಚ ಸುಖ. ಕರಿಗತ್ತಲೆಯಲ್ಲಿ ಕಿರುತಾರಗೆಯ ಕಂಡಂತಾಗುವುದು. ಅವಳು ಸಣ್ಣ ಮೋರೆಮಾಡಿದುದು ಕಂಡರೆ, ಸೀತಮ್ಮನೆದೆಗೆ ಸಿಡಿಲು ಬಡಿದಂತಾಗುವುದು. ಲೋಭಿಯು ತನ್ನ ದ್ರವ್ಯವನ್ನು ಮರಳಿ ಮರಳಿ ನೋಡುತಿರುವಂತೆ, ಶಾಮಲೆಯನೆಷ್ಟು ಸಲ ನೋಡಿದರೂ ಸೀತಮ್ಮನಿಗೆ ಸಾಕೆನಿಸದು. ಎಷ್ಟು ಓರಣವಾಗಿರಿಸಿದರೂ ಮನಸ್ಸು ದಣಿಯದು. ತಾಯಿಯ ಕರುಳು, ಸಿರಿವಂತರದು ಬೇರೆ, ಬಡವರದು ಬೇರೆ ಆಗಿರುವುದೇನು? ಅದು ಎಲ್ಲರಲ್ಲಿಯೂ ಒಂದೇ ರೀತಿಯಾಗಿರುವುದು.

ಸೀತಮ್ಮನ ಮನೆಗೆ ಸಮೀಪವಾಗಿಯೇ ನಾಯಕರಮನೆ. ನಾಯಕರಿಗೂ ಸೀತಮ್ಮನ ತವರಮನೆಯವರಿಗೂ ಎಲ್ಲಿಯದೊ ಬಾದರಾಯಣಸಂಬಂಧವಿದ್ದಿತಂತೆ;

ಎಂತಲೇ ಶಶಿಧರನು, ಸೀತಮ್ಮನ ಮನೆಗೆ ಮೊದಲಿನಿಂದಲೂ ಬರುತ ಹೋಗುತಲಿ ದ್ದನು. ಸೀತಮ್ಮ ಬಡವೆಯೆಂದು ಅವನಿಗೆ ಕೊಂಚವೂ ತಿರಸ್ಕಾರವಿರಲಿಲ್ಲ. ಮನದ ಲ್ಲಿಯೇ ಕನಿಕರ ಪಡುತಲಿದ್ದನು. ಶಾಮಲೆಯಲ್ಲಿ ಶಶಿಧರನದು ನಿಷ್ಕಾಮಪ್ರೇಮ. ಅವಳ ಸುಗುಣಗಳಿಗಾಗಿ, ಶಶಿಧರನೊಳ್ಳೆ ಸಂತೋಷಪಡುವನು. ಅವಳ ನಿಷ್ಕಪಟಭಾವ ವನ್ನು ಕಂಡು ಮೆಚ್ಚುವನು. ಶಾಮಲೆಗೆ ಆಗಾಗ ಪಾಠ ಹೇಳಿಕೊಡುತಿದ್ದನು. ಸೀತಮ್ಮ ಶಾಮಲೆ, ಶಶಿಧರ, ಮೂವರೂ ಕೂಡಿ ಕುಳಿತು ಏನನಾದರೂ ಮಾತನಾಡುವರು; ನಗು ವರು. ಅಭಿಮಾನಿನಿಯಾದ ಸೀತಮ್ಮನು, ಶಶಿಧರನೆದುರಿನಲ್ಲಿ ತಮ್ಮ ಹೀನಸ್ಥಿತಿಯ ನೆಂದೂ ತೋರಗೊಡುತಿರಲಿಲ್ಲ. ಮುಂದಿಯ ನೆರವನೂ ಬಯುಸುತಿರಲಿಲ್ಲ. ಯಾರ ಮನೆಗೂ ಹೋಗಕೂಡದೆಂದು ಶಾಮಲೆಗೆ ಹೇಳುತಿದ್ದರು. ತಾವೂ ಹೊರಗೆ ಹೆಚ್ಚಾಗಿ ಹೋಗುತಿರಲಿಲ್ಲ. ಆದರೆ ಸೂಕ್ಷ್ಮಬುದ್ಧಿಯ ಶಶಿಧರನಿಗೆ, ಸೀತಮ್ಮನ ಮನೆಯಸ್ಥಿತಿ ಯನ್ನು ಕಂಡುಕೊಳ್ಳಲು ಬಹಳ ದಿವಸ ಬೇಕಾಗಲಿಲ್ಲ.

ಶಾಮಲೆಯು ದಿನದಿನಕ್ಕೂ ಬಳೆಯಲು ತೊಡಗಿದಳು. ಬುದ್ಧಿ ಬಲಿತ ಹಾಗೆಲ್ಲಾ ಅವಳು ತಾಯಿಯ ದುಃಖದಲ್ಲಿ ಸಹ ಭಾಗಿನಿಯಾಗುತಲಿದ್ದಳು. ತನ್ನ ಮನೆಯ ರೀತಿಯ ನ್ನೆಲ್ಲ ಕಂಡು, ಮನನೊಂದುಕೊಳ್ಳುವಳು. ಮನೆಯಲ್ಲಿ ಯಾವಾಗಲೂ ಉದಾಸೀನಳಾ ಗಿಯೆ ಇರುವಳು. ಶಶಿಧರನು ಮನೆಗೆ ಬಂದಾಗ ಮಾತ್ರ ಅವನೊಡನೆ, ನಗುತ್ತ ಕಲೆ ಯುತ್ತ ವೇಳೆಗಳೆಯುವಳು. ಶಾಮಲೆಗೆ ಶಶಿಧರನು ಪಾಠಹೇಳಿಕೊಡುತಿರುವಾಗಲೂ, ಇಬ್ಬರೂ ಕೂಡಿ ಕುಳಿತು ಮಾತನಾಡುತಿರುವಾಗಲೂ, ಸೀತಮ್ಮ ನಿಂತುಕೊಂಡು, ಕಣ್ಣು ಕದಲಿಸದೆ, ನೋಡಿಯೇ ನೋಡುವರು. ಏನೇನನೋ ಯೋಚಿಸುವರು. ಮೋರೆಯ ನರಳಿಸುವರು. ಮರಳಿ ನಸುವೇಳೆಯಲ್ಲಿಯೆ ಬಾಡಿದ ಮೋರೆಯುಳ್ಳವರಾಗಿ, ನಿರಾಶೆಯ ನಿಟ್ಟುಸಿರು ಬಿಡುವರು. ಚಾಣಾಕ್ಷನಾದ ಶಶಿಧರನು ಇದನ್ನು ಎಷ್ಟೋಸಲ ಕಂಡುಹಿಡಿ ದಿದ್ದನು.

ಚಿಕ್ಕವಳಿದ್ದ ಶಾಮಲೆಯು ಈಗ ಬಳೆದು ತನ್ನಷ್ಟಾಗಿರುವುದನ್ನು ಕಂಡು, ಸೀತಮ್ಮ ಹಿರಿ ಹಿರಿ ಹಿಗ್ಗುವರು. ನಗೆಗಣ್ಣಿಂದೆ ಮಗಳನ್ನು ನೋಡಿಯೇ ನೋಡುವರು. ಅವಳ ಮದುವೆಯ ಮಾತು ಮುಂದೆ ಬಂದು ನಿಲ್ಲುತ್ತಲೆ, ಜೋಲುಮೋರೆ ಮಾಡುವರು. ಕಣ್ಣೀರ ಸುರಿಸುವರು. " ಶಾಮಾ ! ನೀನು ಒಳ್ಳೆಯ ಗಂಡನನ್ನು ಕೂಡಿಕೊಂಡು, ಸುಖವಾಗಿ ಸಂಸಾರ ಮಾಡಿದುದನ್ನು, ಈ ನನ್ನ ಕಂಗಾಲ ಕಣ್ಣುಗಳು ಕಾಣುವು ವೇನೇ ? " ಎಂದು ಆಗಾಗ ನುಡಿಯುವರು. ತಾಯಿಯ ಮಾತನ್ನು ಕೇಳಿ ಶಾಮಲೆಯು ನಾಚಿಕೊಳ್ಳುವಳು. ಮುಖತಗ್ಗಿಸಿ ನಿಂತುಕೊಳ್ಳುವಳು. ಏನೇನನೋ ಯೋಚಿಸುವಳು.

" ಶಾಮಲೆಯು ದೊಡ್ಡವಳಾದಳಲ್ಲ ! ಮದುವೆಯನೆಂದು ಮಾಡುವಿರಿ? " ಎಂದು ನೆರೆ ಹೊರೆಯ ಜನರು ಕೇಳಿದಾಗಲೆಲ್ಲ, ಸೀತಮ್ಮನ ಹೃದಯಕ್ಕೆ ಚೇಳು ಕುಟುಕಿದಂ ತಾಗುವುದು. ಆದರೆ ಅದನ್ನು ಹೊರಗೆ ತೋರಗೊಡುತಿರಲಿಲ್ಲ. " ಮದುವೆಯನ್ನು

ನಾವೇನು ಮಾಡಬಲ್ಲೆವು ? ಎಲ್ಲ ಮಾಡಿಸುವವನು ಪರಮಾತ್ಮನಿದ್ದಾನೆ” ಎಂದು ಸಮಾಧಾನದ ಸೋಗಿನಿಂದ, ಸೀತಮ್ಮ ನುಡಿದು ಬಿಡುವರು.

೩

“ ಶಾಮಾ! ದೇವರು ನಮ್ಮಂತಹ ಹತಭಾಗಿಗಳನು ಜಗತ್ತಿನಲ್ಲಿ ಏತಕ್ಕೆ ಹುಟ್ಟಿಸುತಿರುವನೋ! ಏನೋ ? ನಾವು ಕಷ್ಟದಿಂದ ಕೊರಗುತಿರುವುದನ್ನು ಕಂಡು, ಆತನು ನಕ್ಕು ನಲಿದು ವಿನೋದಿಸುತಿರಬಹುದೇನು ? ಛಿ! ಎಂತಹದು ನನ್ನ ಹುಚ್ಚು ತಿಳುವಳಿಕೆ! ನಮ್ಮೊಡನೆ ಆತನದೇನು ಹಗೆತನವೇ ? ಪರಮಾತ್ಮನು ದಯಾಮಯ, ಅನಾಥನಾಥ, ದೀನಜನೋದ್ಧಾರ, ನಮ್ಮ ದುಃಖದಿಂದ ಅವನಿಗೇಕೆ ವಿನೋದವಾಗಬೇಕು ! ನಮ್ಮ ನಮ್ಮ ಕರ್ಮದ ಫಲಗಳನ್ನು ನಾವು ಅನುಭವಿಸುತಿರುವಾಗ, ಕಾರಣವಿಲ್ಲದೆ ಆ ಕರುಣಸಾಗರನನ್ನು ದೂರುವೆವು. ದೂಷಿಸುವೆವು. ಮಗು ! ನಮ್ಮ ದುಷ್ಕರ್ಮವು ತೊಲಗಿ ಹೋಗಿ, ನಾವಿನ್ನು ಸುಖದ ದಿನಗಳನು ಎಂದಾದರೂ ಕಾಣುವೆವೇನಮ್ಮಾ!” ಕಂಬನಿಗರೆಯುತ್ತ, ಬಿಗಿದ ಕಂಠದಿಂದ, ಸೀತಮ್ಮ ನುಡಿದರು.

“ ಅಮ್ಮಾ, ದೇವರು ಕಣ್ಣುತೆರೆದು ನೋಡಿದರೆ, ಯಾವುದು ತಾನೇ ಅಸಾಧ್ಯ ! ಕತ್ತಲೆಯನ್ನು ಮಾಡಿದ ಆ ಮಾಟಗಾರನೇ, ಅದರ ಮುಂದೆ ಬೆಳಕನುಂಟುಮಾಡುತಿರುವನಲ್ಲವೇ! ” ಶಾಮಲೆಯು ಬಾಯಿಂದಲೇನೊ ಸಂತವಿಡುವ ಮಾತನಾಡಿದಳು. ಕಣ್ಣಲ್ಲಿ ನೀರು ತುಂಬಿ ತುಳುಕುತಿದ್ದಿತು.

“ ಏನು ಕತ್ತಲೆಯೋ ಏನು ಬೆಳಕೋ ! ಎಂದೂ ಬೆಳಗಾಗದ ಕತ್ತಲೆಯಲ್ಲಿ ನನ್ನ ಕಾಲು ಕಟ್ಟಿ ಕೆಡುವುವಂತಹ ಪಾಪವನ್ನು, ನಾನೇನು ಮಾಡಿರಬಹುದಮ್ಮಾ ! ಶಾಮಾ! ಜಗತ್ತನೆಲ್ಲ ಕಣ್ದೆರೆದು ನೋಡುತಿರುವ ಪರಮಾತ್ಮನು, ನನ್ನೊಬ್ಬಳನ್ನೇ ಮಾತ್ರ ನೋಡದಿರುವುದಕ್ಕೆ ಕಾರಣವೇನು ? ಎಡವಿದ ಬಟ್ಟು ಮರಳಿ ಮರಳಿ ಎಡವಿದಂತೆ, ಒಂದರ ಹಿಂದೊಂದು ದುಃಖದ ಪರ್ವತಗಳನ್ನು, ನನ್ನನೆದುರಿಸಲು ದೇವ ದೇವನು ಅದೇಕೆ ಕಳುಹಿಸುತಿರಬಹುದು? ಶಾಮಲೇ ! ವಿಧಿಯ ಆಟವನ್ನು ನೋಡಿದೆಯಾ ? ಎಲ್ಲಿಯೂ ಇಲ್ಲದೆ ನಮ್ಮ ಮನೆಯಲ್ಲಿಯೆ ಇಲಿಗಳು ಬೀಳಬೇಕೇ? ಬಂದಷ್ಟು ಬಾಡಿಗೆಯ ಹಣದಲ್ಲಿ ಗಂಜಿಯನಾದರೂ ಕುಡಿದು ಬದುಕಿಕೊಂಡಿರಬೇಕೆಂದರೆ, ಖೋಡಿ ದೈವಕ್ಕೆ ಅದೂ ಸಹನವಾಗಲಿಲ್ಲ. ದುರ್ದೈವಾ! ಇಷ್ಟು ನನ್ನನ್ನು ಕೊರಗಿಸುವುದಕಿಂತಲೂ ಒಮ್ಮೆಲೆ ನನ್ನನೇ ನುಂಗಿ ಬಿಡಬಾರದೇ ? ನೀನು ನುಂಗುವುದಕ್ಕೆ ಮೊದಲು ನಾನೇ ನಿನ್ನ ಬಾಯಿಗೆ ಬಲಿಯಾಗಬೇಕೆಂದರೆ, ಈ ಸುಟ್ಟ ತಾಯಿಯಕರುಳು ತೊಳಲಾಡುತಿರುವುದು...” ಸೀತಮ್ಮ ಮಕ್ಕಳಂತೆ ಗಟ್ಟಿಯಾಗಿ ಅಳಲು ತೊಡಗಿದರು. ಸೆರಗಿನಿಂದ ಮೋರೆ ಮುಚ್ಚಿಕೊಂಡರು. ಅಳುವ ದನಿಯನ್ನು ಮಂದಿ ಕೇಳಿದರೆ ನಗೆಗೇಡೆಂದು ಮರಳಿ ದುಃಖವನು ನುಂಗಿಕೊಂಡರು. ಶಾಮಲೆಯ ಮುಖವೀಗ, ಕಂದಿ ಕುಂದಿ ಹೋಗಿದ್ದಿತು. ಕಣ್ಣೀರು ಹಳ್ಳವಾಗಿ ಹರಿಯುತಲಿದ್ದಿತು.

“ ಅಮ್ಮಾ ! ಇಲಿಬಿದ್ದು ನಾಲ್ಕು ತಿಂಗಳಾಗಿ ಹೋಯಿತಲ್ಲವೇ ? ಬಾಡಿಗೆಯು ವರು ಯಾರೂ ಇನ್ನೂ ಏಕೆ ಬರಲೊಲ್ಲರು ? ” ಶಾಮಲೆಯು ಕಂಪಿಸುವ ದನಿಯಿಂದೆ ಕೇಳಿದಳು.

“ ಏಕೆ ಬರಲೊಲ್ಲರೇ? ನಮ್ಮ ಪಾತಕವು ನಮ್ಮ ನೆರವಿಗೆ ಯಾರನೂ ಬರಗೊಡ ಲೊಲ್ಲದು. ಕಂದ! ನಮ್ಮ ಮನೆಯಲೇನೋ ಭೂತವಿದೆಯೆಂದು, ಅದಾರೋ ದುಷ್ಟರು ಹುಯಿಲನ್ನು ಎಬ್ಬಿಸಿರುವರು. ಎಂತಲೇ ಹೆದರಿ ಜನರಾರೂ ಮನೆಯಲಿರಲು ಬರಲೊ ಲ್ಲರು. ಮಗು! ನನ್ನ ಮೈಮೇಲಿದ್ದ ನಾಲ್ಕಾರು ಚೂರುಚಾರು ಒಡವೆಗಳು, ತಾಯಿಯ ಉತ್ತರ ಕ್ರಿಯೆಗಾಗಿ ಹೋಗಿಬಿಟ್ಟುವು. ಈಗ ಬಾಡಿಗೆ ಬರುವುದು ಕಟ್ಟಾಯಿತು. ಮಧ್ಯಾ ಹ್ನದ ನುಚ್ಚಿಗೆ ತೊಂದರೆ ಬಂದು ಕುಳಿತಿತು. ಶಾಮೂ! ನೀನೀಗ ಬಳೆದುನಿಂತೆ. ಮದುವೆಯು ಹೊರೆಯೊಂದು ಬೆಟ್ಟದಷ್ಟು ಭಾರವಾಗಿ ಮೈಮೇಲೆ ಬಿದ್ದಿದೆ. “ ಮಗಳು ಮೈನೆರೆಯ ಲಿಕ್ಕಾದಳು. ಇನ್ನೂ ಮದುವೆಯ ಸುದ್ದಿಯೇ ಇಲ್ಲ ” ಎಂದು ಜನರಾಡುವ ಕೊಂಕು ನುಡಿಗಳು, ಶೂಲದಂತೆ ಹೃದಯವನ್ನು ಭೇದಿಸತೊಡಗಿವೆ. ನಿನ್ನ ಭಾವೀ ಜೀವನದ ಬಗೆಯನ್ನು ನೆನೆದರೆ, ಎದೆಯಲ್ಲಿ ಕಾದಸೀಸದ ರಸವನ್ನು ಸುರಿದಂತಾಗುವುದು. ತಾಯೀ! ಬರಬಾರದಮ್ಮಾ ಬರಬಾರದು. ನನ್ನಂತಹ ಸಂಕಟದ ವೇಳೆಯು, ನನ್ನನು ಕೊಂದ ವೈರಿಗೆ ಕೂಡ ಬರಬಾರದು...” ಸೀತಮ್ಮ ಎರಡೂ ಕೈಗಳಿಂದ ಮೋರೆ ಮುಚ್ಚಿ ಕೊಂಡು, ಬಿಕ್ಕಿ ಬಿಕ್ಕಿ ಅಳಲು ತೊಡಗಿದರು. ಶಾಮಲೆಯು ಈಗ ತೀರ ಅಧೀರೆಯಾ ದಳು. ಬೊಗಸೆ ಗಣ್ಣುಗಳಿಂದ ಕಂಬನಿಯ ಕಾಲುವೆ ಹರಿಸುತ್ತ, ಏನನೂ ಮಾತನಾ ಡದೆ, ತಾಯಿಯ ಕಡೆಗೆ ನೋಡುತ್ತ ಕುಳಿತಳು. ಕೆಲವೇಳೆಯವರೆಗೆ ಪರಸ್ಪರರ ಕಂಬನಿ ಬೆರೆತ ಕಣ್ಣುಗಳೇ ಶಬ್ದವಿಲ್ಲದ ಮಾತನಾಡಿದುವು. ಶಾಮಲೆಯು ನಿಡಿದಾಗಿ ಉಸುರು ಹಾಕಿದಳು.

“ಅಮ್ಮಾ ! ನಾನು ಹುಟ್ಟದಿದ್ದರೆ ನಿನಗಿಷ್ಟು ತೊಂದರೆಯಾಗುತಿರಲಿಲ್ಲ ನೋಡು! ನೀನು ಇಷ್ಟು ಕಷ್ಟಪಡುತಿರುವುದು, ನನಗಾಗಿಯೇ ಅಲ್ಲವೇ ? ಅಮ್ಮಾ ! ನಿಜವಾಗಿ ಹೇಳು! ನಾನೀಗ ಸತ್ತರೆ ನಿನಗ ಹೆಚ್ಚು ದುಃಖವೋ? ಜೀವಿಸಿದ್ದರೆ ಹೆಚ್ಚು ದುಃಖವೋ?” ಶಾಮಲೆಯು ತುಟಿಯುಲುಗಿಸುತ್ತ, ಬಿಗಿವ ಕಂಠದಿಂದ, ಕೇಳಿದಳು.

“ ಒಳಿತನ್ನು ಕಂದಾ ! ಹೀಗೆಲ್ಲ ಹುಚ್ಚುಚಚ್ಚು ಮಾತುಗಳನಾಡಬಾರದಮ್ಮಾ ! ಮಗೂ, ನಿನ್ನ ಕೋಮಲಜೀವದ ಮುಂದೆ, ನನ್ನ ಬಾಳಿನ ಬೆಲೆಯೇನು ! ನಿನ್ನ ಸೌಖ್ಯ ಕ್ಕಾಗಿ ನಾನು ಅಳುತಿರುವೆನಲ್ಲದೆ, ನನಗೇನು ಬೇನೆಯಮ್ಮಾ! ಅಯ್ಯೋ! ನಾನು ಹುಚ್ಚಿ. ಏನೇನನೊ ಹೇಳಿ ಅತ್ತು ಕರೆದು, ಬೆಳೆಯುವ ಕಂದಮ್ಮನನ್ನು ಬೆದರಿಸಿ ಬಿಡುತಿರುವೆನು. ನನಗೇನೂ ತಿಳಿಯದು, ” ಸೀತಮ್ಮ ಅಳುವನ್ನು ತಡೆದು, ಸೋಗಿನ ಸಮಾಧಾನದಿಂದ ನುಡಿದರು.

“ ಅಮ್ಮಾ! ನಾನಿನ್ನೂ ಮೊಲೆಯುಣ್ಣುವ ಎಳೆಗೂಸೇ ? ನನಗೇನೂ ತಿಳಿಯುವುದಿಲ್ಲವೇ ? ಮನೆಯಲ್ಲಿ ಒಂದರ ಹಿಂದೊಂದು ಒದಗುತಿರುವ ಕಷ್ಟಗಳು ನನ್ನ ಕಣ್ಣಿಗೆ ಕಾಣುವುದಿಲ್ಲವೆ ? ನೀನು ಪಡುವ ಸಂಕಟವನ್ನು, ಕಂಡೂ ಕಾಣದವಳಂತೆ ಕಣ್ಣು ಮುಚ್ಚಿಕೊಂಡಿರುವುದು ನನ್ನಿಂದಾದೀತೆ ? ನಿನ್ನ ಎದೆಯುರಿಯನ್ನು ಎಷ್ಟೆಂದು ನೋಡಲಮ್ಮಾ ... ... ” ಅಳುವು ಉಕ್ಕೇರಿ ಬಂದುದರಿಂದ ಶಾಮಲೆಗೆ ಮುಂದೆ ಮಾತನಾಡುವುದಾಗಲಿಲ್ಲ.

“ ನನ್ನ ಕಷ್ಟಗಳು ನನ್ನ ಕೂಡ ಮುಗಿದು ಹೋಗಲಿ ತಾಯೀ ! ನೀನಾದರೂ ಸೌಖ್ಯವಾಗಿರು. ” ಸೀತಮ್ಮ ಕಸಿಕರದ ದನಿಯಿಂದ ನುಡಿದರು.

“ಅಮ್ಮಾ, ನಿನ್ನ ಪಡೆಪಾಟವನ್ನು ಕಂಡು, ಇನ್ನು ನನ್ನಿಂದ ಸೈರಿಸುವುದಾಗದು. ನನ್ನ ಊಟದ ಚಿಂತೆ ನಿನಗೆ, ನನ್ನ ಉಡಿಗೆಯ ಚಿಂತೆ ನಿನಗೆ, ನನ್ನ ಮದುವೆಯ ಚಿಂತೆ ನಿನಗೆ, ನನ್ನ ಮುಂದಿನ ಬಾಳುವೆಯ ಚಿಂತೆ ನಿನಗೆ, ನನಗಾಗಿ ಎಷ್ಟು ಸಂತಾಪವಮ್ಮಾ! ನಾನು ಮಗಳಲ್ಲ. ಹೊಟ್ಟೆಯಿಂದ ಹುಟ್ಟಬಂದ ವೈರಿ. ನಾನು ನಿನ್ನ ಸುಖಕ್ಕಾಗಿ ಹುಟ್ಟಿ ಬಂದಿಲ್ಲ. ಅಳಲ ಹೊಳೆಯಲ್ಲಿ ಅದ್ದಿ ಅದ್ದಿ ತೆಗೆಯುಲಿಕ್ಕೆ. ತಾಯೀ! ಯಾವ ಸುಖಕ್ಕಾಗಿ ನನ್ನನ್ನು ಹಡೆದೆ? ” ಶಾಮಲೆಯು ಗಟ್ಟಿಯಾಗಿ ಅಳಲು ತೊಡಗಿದಳು.

“ ಅಳು ! ಕಂದಮ್ಮ! ಅಳು !! ನನ್ನ ಅಳುವ ಸರತಿ ಮುಗಿಯಿತು. ಈಗ ನಿನ್ನದು ಬಂದಿತು. ಬದುಕಿರುವವರೆಗೂ ಹೀಗೆಯೆ ಎದುರು ಬದುರಾಗಿ ಕುಳಿತು, ಸರತಿಯಂತೆ ನಾವಿಬ್ಬರೂ ಅಳೋಣ. ಇದೇನು ಸಾಮಾನ್ಯ ಸುಖವೇ ? ಈ ಸುಖಕ್ಕಾಗಿಯೇ ನಿನ್ನನ್ನು ಹೆತ್ತೆ. ಶಾಮೂ ! ನಿನ್ನ ಜನ್ಮವೂ ನನ್ನಂತೆಯೇ ಅಳುವಿನಲ್ಲಿಯೇ ಬೆಳಗಾಗುವುದೇನೇ ? ಇಲ್ಲ ! ಇಲ್ಲ ! ಹೀಗೆಂದಿಗೂ ಆಗದು. ಅಳುವುದಕ್ಕಾಗಿಯೇ ಈ ಜಗತ್ತಿನಲ್ಲಿ ಹುಟ್ಟಿ ಬಂದಿರುವ, ಪಾಪಿನಿಯಾದ ನನ್ನ ಮಗಳಲ್ಲ ನೀನು. ಆಜನ್ಮವೂ ನಗುತಲಿದ್ದು, ಒಡನಾಡಿಗಳೆಲ್ಲರನೂ ನಗಿಸಿ, ಸತ್ತು ಸ್ವರ್ಗವಾಸಿಯಾಗಿ, ಅಗೋ ನೋಡು ! ಅಲ್ಲಿ ಮುಗಿಲಲ್ಲಿ ನಕ್ಷತ್ರವಾಗಿ ನಿಂತು, ಒಂದೇ ಸವನೆ ನಗುತಲಿರುವನಲ್ಲ ! ಆ ನಗೆಗಾರನ ಮಗಳು. ನೀನೇಕೆ ಅಳುವೆ ? ಎಲ್ಲರ ಪಾಲಿನದೂ ನನಗೇ ಇರಲಮ್ಮಾ ನನಗೇ ಇರಲಿ ! ” ಸೀತಮ್ಮ ಬಿಸಿಯಾಗಿ ಸುಯ್ಯುತ್ತ, ಕಣ್ಣೊರಸುತ್ತ, ನುಡಿದರು. ಶಾಮಲೆಯು ಅಳುವನ್ನು ತಡೆ ಹಿಡಿದಳು.

“ ಅಮ್ಮಾ ನಾನೊಂದು ಮಾತನ್ನು ಹೇಳಬೇಕೆನ್ನುವೆನು. ದಯವಿಟ್ಟು ಅದನ್ನು ಕೇಳುವೆಯಾ ” ದೈನ್ಯ ಮುದ್ರೆಯಿಂದ ಕೇಳಿದಳು.

“ ಅದಾವ ಮಾತು ಮಗೂ ! ” ಸೀತಮ್ಮ ಆತುರದಿಂದ ಕೇಳಿದರು.

" ನೋಡು, ಸದ್ಯಕ್ಕೆ ನಾವು ಬದುಕಿಕೊಂಡಿರುವುದಕ್ಕೆ ಬಾರದಂತಹ ತೊಂದರೆಯಲಿರುವೆವು. ಅದರಲ್ಲಿಯೂ ನನ್ನ ಮದುವೆಯ ಹೊರೆಯೊಂದು, ನಿನ್ನ ತಲೆಯ ಮೇಲೆ ಬೆಟ್ಟವನಿಟ್ಟಂತಾಗಿದೆ. ಗುಂಡಾಭಟ್ಟರು ನಿನಗೆ ಹೇಗೂ ಹೇಳುತಿರುವರಲ್ಲ! "ದೇಸಾಯಿ ವೇಂಕಟರಾಯರಿಗೆ ಶಾಮಲೆಯನ್ನು ಕೊಟ್ಟರೆ, ನಿಮಗೆ ಸಾವಿರ ರೂಪಾಯಿ ಕೊಡಿಸುವೆನು " ಎಂದು. ಅವರ ಮಾತಿನಂತೆ ನನ್ನನ್ನು ವೆಂಕಟರಾಯರಿಗೆ ಮದುವೆ ಮಾಡಿ ಕೊಟ್ಟು ಬಿಡು. ಎಂದರೆ ಎರಡೂ ತೊಡಕಿನಿಂದ ನಿನ್ನನು ಪಾರುಮಾಡಿದ ಶ್ರೇಯಸ್ಸು ನನಗೆ ಸಿಕ್ಕುವುದು. ಮಗಳಾಗಿ ಹುಟ್ಟಿ ಬಂದುದಕ್ಕ, ನೀನು ಹೊಟ್ಟೆ ತುಂಬ ಉಂಡು ತಿಂದುದನ್ನು, ಒಮ್ಮೆಯಾದರೂ ಈ ಕಣ್ಣಿನಿಂದ ನೋಡಬೇಕೆನ್ನುವೆನು. ಅಮ್ಮಾ ! ನಿನ್ನ ಕಾಲು ಬಿದ್ದು ಬೇಡಿಕೊಳ್ಳುವೆನು. ನನ್ನದಿದೊಂದು ಮಾತನ್ನು ಕೇಳು. ವೆಂಕಟರಾಯರಿಗೆ ನನ್ನನ್ನು ಕೊಟ್ಟು ಬಿಡು. " ಈ ಮಾತನ್ನು ಆಡುತಿರುವಾಗಿನ ಶಾಮಲೆಯ ದೀನತೆಯನ್ನು ಬಣ್ಣಿಸಿ ಹೇಳುವುದು ಅಸಾಧ್ಯ.

ಸೀತಮ್ಮ ಮಗಳ ಮಾತನ್ನು ಕೇಳಿದರು. ದುಃಖವು ಉಕ್ಕೇರಿ ಬಂದಿತು. "ಚಾಂಡಾಲಿನೀ ಶಾಮಲೇ ! ನೀನು ಇಷ್ಟು ದಿನ ಚಿಕ್ಕವಳಿದ್ದೆ. ಚೆನ್ನಾಗಿತ್ತು ನೋಡು. ನೀನು ಏತಕ್ಕೆ ದೊಡ್ಡವಳಾದೆಯೇ ? ನಾನೇನು ರಕ್ಕಸಿಯೆಂದು ತಿಳಿದಿರುವಿಯೇನೇ? ಹೋದ ಜನ್ಮದಲ್ಲಿ ಮಾಡಿದ ದುಷ್ಕರ್ಮದ ಪರಿಪೂರ್ತಿಯಾಗಿಲ್ಲವೇನೇ ? ಹಡೆವಮ್ಮಾ! ಎಂತಹ ಮಾತನಾಡಿದೆಯೇ ? ಆ ಅರುವತ್ತು ವರ್ಷದ ಮುದಿಹದಿಗೆ ನಿನ್ನನ್ನುಕೊಟ್ಟು, ನಾನು ಸಾವಿರ ರೂಪಾಯಿ ತೆಗೆದುಕೊಂಡು, ಹಾಲು ಬೋನವುಂಡು ಲೋಲಾಡಲಾ? ಅದಕ್ಕಿಂತಲೂ ಒಬ್ಬರ ಕೈಯ್ಯನೊಬ್ಬರು ಹಿಡಿದುಕೊಂಡು. ಇಬ್ಬರೂ ಒಮ್ಮೇಲೆ ಬಾವಿಯಲ್ಲಿ ಹಾರಿಕೊಂಡರೆ, ಆಗುವ ಕೇಡೇನು ? ಶಾಮಾ ! ಇಲ್ಲದುದೊಂದು ಯೋಚಿಸಿ ಹಣ್ಣಾಗಬೇಡಮ್ಮಾ ! " ಸೀತಮ್ಮ ಅಳುತಳುತಲೇ ನುಡಿದರು. ಶಾಮಲೆಯನ್ನು ಗಟ್ಟಿಯಾಗಿ ಅಪ್ಪಿಕೊಂಡರು. ಪ್ರೇಮದಿಂದ ಮೈದಡವಿದರು. ಮತ್ತೆ ಮಾತನಾಡಲು ತೊಡಗಿದರು.

" ಶಾಮಾ ! ವಿಧಿಯು ನಮ್ಮನ್ನು ಯಾವ ಯಾವ ರೂಪದಿಂದ ಕಾಡುತಿರುವನೆಂಬುದು ತಿಳಿಯದಾಗಿದೆ. ತನ್ನ ಮಾತು ಕೇಳಿ, ವೆಂಕಟರಾಯರಿಗೆ ನಿನ್ನನ್ನು ಕೊಡಲಿಲ್ಲವೆಂದು, ಗುಂಡಾಭಟ್ಟನು ಕೈ ತೊಳೆದುಕೊಂಡು ಬೆನ್ನಹತ್ತಿರುವನು. ಹರಿಶ್ಚಂದ್ರನನ್ನು ವಿಶ್ವಾಮಿತ್ರನು ಕಾಡಿದಂತೆ ಪರಿಪರಿಯಿಂದ ಕಾಡುತಿರುವನು. ನಮ್ಮ ಮನೆಯಲ್ಲಿ ಭೂತವಿದೆಯೆಂದು ಹುಯಿಲೆಬ್ಬಿಸಿ, ಬಾಡಿಗೆಯವರು ಬರದಂತೆ ಮಾಡಿದವನು ಆ ಬ್ರಹ್ಮರಾಕ್ಷಸನೇ. ಮೊದಲು ಸತ್ತ ಇಲಿಯನ್ನು ತಂದು ಮನೆಯಲ್ಲಿ ಚಲ್ಲಿದವನೂ ಅವನೇ ಎಂದು ಕಾಣುವುದು. ಈಗ ದಿನದಿನಕ್ಕೊಂದು ದುರ್ವಾರ್ತೆಯನು ಹಬ್ಬಿಸಿ, ನಮ್ಮ ಹೆಸರಿಗೆ ಹೊಲಸು ಬಳಿಯುತಿರುವವನೂ ಆ ಹೊಲೆಯನೇ. ಆ ನೀಚನು ಶಶಿಧರನ ತಂದೆಗೂ ಏನೇನನೋ ಹೇಳುತಿರುವನೆಂತೆ. ಅಗಲಮ್ಮಾ ! ಕಾಡುವವರೆಲ್ಲ

ಇನೇ ಜನ್ಮದಲ್ಲಿ ಕಾಡಿ ತೀರಿಸಿಕೊಳ್ಳಲಿ. ದೇವರು ನನ್ನ ಮೊರೆಯನ್ನು ಕೇಳಿ ನಿನಗಾದರೂ ಸುಖದ ದಾರಿಯನ್ನು ತೋರಿಸಿದರೆ, ನಾನು ಸಂತೋಷದಿಂದ ಕಣ್ಣು ಮುಚ್ಚಿಕೊಳ್ಳುವೆನು. ಏಳು ಮಗೂ? ರಾತ್ರಿ ಹನ್ನೊಂದು ಗಂಟೆಯಾಯಿತು. ನಿದ್ರೆ ಬಂದಿಲ್ಲವೆ! ಮಲಗಿಕೊಳ್ಳು! ನಡೆ! ನನ್ನ ಕರ್ಮದ ಕಥೆಯು ಕೊನೆಯೆಂದೋ ತಿಳಿಯದಾಗಿದೆ. ಅದನ್ನು ನೆನೆದು ನೀನೇನೂ ಕೊರಗಬೇಡವಮ್ಮಾ! ಏಳು." ಎಂದು ನುಡಿದು ಸೀತಮ್ಮ ಕಳವಳದಿಂದ ಮಗಳ ಕೈಹಿಡಿದೆಬ್ಬಿಸಿ, ಹಾಸಿಗೆಯಮೇಲೆ ಮಲಗಿಸಿದರು. ಹೊದಿಕೆ ಹೊಚ್ಚಿ, ಮೈ ಮೇಲೆ ಕೈಯ್ಯಾಡಿಸುತ್ತ, ಎಷ್ಟೋ ವೇಳೆಯವರೆಗೆ ಕುಳಿತುಕೊಂಡೇ ಇದ್ದರು. ಶಾಮಲೆಯೇನೂ ಮಾತನಾಡದೆ ಮಲಗಿದ್ದಳು. ಅವಳಿಗೆ ನಿದ್ರೆ ಹತ್ತಿರಬಹುದೇನು ?

೪

ಮರುದಿನ ರವಿವಾರ. ಪಾಠಶಾಲೆಗಳಿಗೆಲ್ಲ ಬಿಡುವು. ಅಂದು ಶಾಮಲೆಯು ಮನೆಯಲ್ಲಿಯೇ ಇದ್ದಳು. ಹಗಲು ನಾಲ್ಕು ಗಂಟೆಯ ಸಮಯ. ಸೀತಮ್ಮ ಮನೆಯಲಿರಲಿಲ್ಲ. ಶಾಮಲೆಯು ಮನೆಯ ಬಾಗಿಲನ್ನು ಮುಂದೆ ಮಾಡಿಕೊಂಡು, ಅದೇನನ್ನೋ ಯೋಚಿಸುತ್ತ ಮುಂದಿನ ಪಡಸಾಲೆಯಲ್ಲಿಯೇ ಮಲಗಿಕೊಂಡಿದ್ದಳು. ಕಿಟಕಿಯ ಬಾಗಿಲುಗಳೆರಡೂ ತೆರೆದಿದ್ದುವು. ಹಠಾತ್ತಾಗಿ ಶಶಿಧರನು ಅಲ್ಲಿಗೆ ಬಂದನು. ಮುಂಬಾಗಿಲು ಇಕ್ಕಿದ್ದಿತು. ಕಿಟಕಿಯೊಳಗಿಂದ ಒಳಗೆ ಇಣಿಕಿ ನೋಡಿದನು. ಅದಾವುದೋ ಗಹನವಾದ ಆಲೋಚನೆಯಲ್ಲಿ ಶಾಮಲೆಯು ಮಲಗಿದುದನ್ನು ಕಂಡನು. ಹೊರಗಣ ಅರಿವೇ ಇಲ್ಲದೆ, ಅಂತರಂಗದ ಚಿಂತೆಯಲ್ಲಿ ಸಾಮರಸ್ಯಹೊಂದಿ, ಚಿತ್ರದಲ್ಲಿಯ ಪ್ರತಿಮೆಯಂತೆ ಕದಲದೆ ಮಲಗಿದ ಶಾಮಲೆಯನ್ನು, ಶಶಿಧರನು ಕಣ್ಣುಲುಗಿಸದೆ ನೋಡಿಯೇ ನೋಡಿದನು. ನೋಡುವುದಾದರೂ ಅದೆಷ್ಟು ವೇಳೆ.

ಶಾಮಲೆಯು ಸ್ವಾಭಾವಿಕವಾಗಿಯೇ ಸೌಂದರ್ಯವತಿ. ಅದರಲ್ಲಿಯೂ ಅವಳ ಅಂಗಾಂಗಗಳು, ಇದೀಗ ಎಳೆಯತನದ ಮೇರೆಯನ್ನು ಮೀರುತ್ತ ನಡೆದಿದ್ದುವು, ಕಿಟಕೆಯಿಂದ ಒಳಗೆ ಹೋಗುತಿರುವ ಸುಳಿಗಾಳಿಯಿಂದ, ಮೆಲ್ಲಗೆ ಅಲುಗಾಡುತಿರುವ ಕೊಂಕು ಕುರುಳುಗಳೂ, ಯೋಚನೆಯಿಂದ ಸ್ಥಿರದೃಷ್ಟಿಯನ್ನು ತಳೆದ ಕಳೆಯುಳ್ಳ ಕಣ್ಣುಗಳೂ, ಚಲುವಿನ ನೆಲೆಯಾದ ಕೆನ್ನೆಗಳೂ, ಮುದ್ದು ಮುದ್ದಾದ ಬಣ್ಣದುಟಿಯ ಬಾಯಿಯೂ, ಹರವಾದ ಹಣೆಯೂ, ಹಣ್ಣು ನಿಂಬೆಯಂತಹ ಮೈಯ್ಯಬಣ್ಣವೂ ಪುಷ್ಟವಾದ ತೋಳನ್ನು ತಲೆಗಿಂಬಾಗಿಟ್ಟುಕೊಂಡು ಮಲಗಿದ ಭಂಗಿಯೂ, ಶಶಿಧರನ ಕಣ್ಮನಗಳನು ಸೆಳೆದು ಬಿಟ್ಟುವು. ಅವನನ್ನು ಸಂಭ್ರಾಂತನನ್ನಾಗಿ ಮಾಡಿದುವು. ಅಂದಿನ ಶಾಮಲೆಯನ್ನು ಕಂಡು, ಶಶಿಧರನು ಮನದಲೆಷ್ಟೆಷ್ಟೋ ರೂಪಕಗಳನೂ ಉತ್ಪ್ರೇಕ್ಷೆಗಳನೂ ಮಾಡಿದನು, "ವೇದಮಾತೃವಾದ ಗಾಯತ್ರೀ ಮಂತ್ರವನ್ನು ಕಂಡು ಹಿ

ಯುವ ಸಾಧನೆಯಾವುದೆಂಬುದನ್ನು ಯೋಚಿಸುತ್ತ ಮಲಗಿದ ಶಾರದೆಯೋ ಇವಳು? " ಎಂದನು. ಶಂಬರಾಸುರನ ಮನೆಯಲಿದ್ದುಕೊಂಡು, ಅಗಲಿ ಹೋದ ತನ್ನ ಪತಿಯ ನೆಂದು ಕೂಡುವೆನೋ? ಎಂದು ಚಿಂತಿಸುತ್ತ ಮಲಗಿದ, ನಿರ್ಜರೆಯಾದ ರತಿಯೋ ಇವ ಳು " ಎಂದು ಮನದಲ್ಲಿ ಎಂದುಕೊಂಡನು. ಎಷ್ಟು ನೋಡಿದರೂ ಕಣ್ಣಿಗೆ ತಣಿವು ಇಲ್ಲ. ಮನಸ್ಸಿಗೆ ತೃಪ್ತಿಯಿಲ್ಲ. ಶಾಮಲೆಗೆ, ಶಶಿಧರನು ಬಂದು ನಿಂತು ತನ್ನನ್ನು ನೋಡುತಿರುವುದರ ಪರಿವೆಯೇ ಇಲ್ಲ. ಅವಳು ತನ್ನ ಯೋಚನೆಯಲ್ಲಿ ಲೀನೆಯಾಗಿ ಹೋಗಿದ್ದಳು. ಒಮ್ಮಿಂದೊಮ್ಮೆ ನಿಟ್ಟುಸಿರು ಬಿಟ್ಟು, ಮೆಲುದನಿಯಲ್ಲಿ ಹಾಡಲು ತೊಡ ಗಿದಳು.

" ನೀನೇ ಅನಾಥ ಬಂಧು ಕೃಷ್ಣ ! ನೀನೇ ಕಾರುಣ್ಯಸಿಂಧು ॥ ಪಲ್ಲ ॥
" ಪತಿಗಳೈವರಿದ್ದರೇನು । ಸತಿಯ ಸಮಯಕ್ಕೊದಗಲಿಲ್ಲ ।
" ಗತಿನೀನೇ ಮುಕುಂದ ! ಎಂದರೆ । ಅತಿ ಬೇಗದಿ ಬಂದೊದಗಿದೆ ಕೃಷ್ಣ॥

ವೀಣೆಯನ್ನು ಮೂದಲಿಸುವ ಮಂಜುಲ ಕಂಠದಿಂದ ಶಾಮಲೆಯು ಹಾಡುತಲಿ ದ್ದಳು. ಶಶಿಧರನು ಇನ್ನಿಷ್ಟು ಹುಚ್ಚನಂತಾದನು. ಅವನಿಗೀಗ ತಡೆಯುವುದಾಗ ಲಿಲ್ಲ. ಕೈಯಲ್ಲಿ ಹಿಡಿದ ಮಲ್ಲಿಗೆಹೂವಿನ ಚಂಡಿನಿಂದ, ಶಾಮಲೆಯನ್ನು ಗುರಿಯಿಟ್ಟು ಎಸೆದನು. ಶಾಮಲೆಯು ಬೆಚ್ಚಿಬಿದ್ದಳು. ಚಟ್ಟನೆ ಎದ್ದು ಕುಳಿತಳು. ಬೆದರುಗ ಣ್ಣುಗಳಿಂದ ಕಿಟಕಿಯತ್ತ ನೋಡಿದಳು. ಮುಗುಳುನಗೆ ನಗುತ್ತ ನಿಂತ ಶಶಿಧರನ ಮೋರೆಯನ್ನು ಕಂಡಳು. ಶಾಮಲೆಯ ಮೋರೆಯರಳಿತು. ನಾಚಿಕೆಯಿಂದ ಕೆಂಪೇ ರಿತು. ಕಿರಿನಗೆ ನಗುತ್ತ " ಯಾವಾಗ ಬಂದೆ? ಶಶಿಧರ ! ನಿನ್ನ ದಾರಿಯನೇ ಕಾಯು ತಲಿದ್ದೆನು " ಎಂದು ನುಡಿದಳು. ಎದ್ದು ಬಂದು ಬಾಗಿಲು ತೆರೆದಳು. " ನೀನು ಬಂ ದುದು ನನಗೆ ಗೊತ್ತಾಗಲಿಲ್ಲ ಬಿಡು! " ಎಂದೆನ್ನುತ್ತಲೆ ಶಶಿಧರನನ್ನು ಆದರಿಸಿ ಒಳಗೆ ಕರೆದೊಯ್ದಳು. ಪುಸ್ತಕ ತೆಗೆದುಕೊಂಡು ಬಂದು ಬಳಿಯಲ್ಲಿ ಕುಳಿತಳು. ಶಶಿಧರನು ಪಾಠ ಹೇಳಿಕೊಡಲು ಮೊದಲು ಮಾಡಿದನು. ಅದೇಕೋ! ಇಂದು ಅವನೆದೆ ದಡದಡಿ ಸುತಲಿದ್ದಿತು. ಹೇಳುವಾಗ ನಾಲಿಗೆ ಎಡವುತಲಿದ್ದಿತು. ಹೇಗಾವರೂ ಹೇಳಿ, ಪಾಠದ ಕಾಟವನ್ನು ತೀರಿಸಿದಂತೆ ಮಾಡಿದನು. ಶಶಿಧರನು ಇಂದು ಹೀಗೇಕೆ ಮಾಡುತಿರುವ ನೆಂಬುದು ಶಾಮಲೆಗೆ ತಿಳಿಯಲಿಲ್ಲ.

"ಶಾಮಾ! ನಾನು ಬಂದಾಗ ನೀನೇನೋ ಗಹನವಾದ ಯೋಚನೆಯಲ್ಲಿ ಮುಳುಗಿ ಹೋಗಿದ್ದೆಯಲ್ಲ! ಅದೇನು ಯೋಚನೆ? " ಕುತೂಹಲದ ನೋಟದಿಂದ ಶಶಿಧರನು ಮಾ ತನಾಡಿದನು. " ಇಲ್ಲ! ನನಗೇತರ ಯೋಚನೆ? ಹೊತ್ತು ಹೋಗದಂತಾದುದರಿಂದ ಹಾಗೆಯೇ ಬಿದ್ದುಕೊಂಡಿದ್ದೆ; ಇಷ್ಟೇ ಹೊರತು ಮತ್ತೇನಿಲ್ಲ" ಶಾಮಲೆಯು ಮನದ

ಮಾತನ್ನು ಮರೆಮಾಡಿ ಹೇಳಿದಳು. "ನೀನೇನು ಹೇಳುವೆ? ನನಗೇನೂ ತಿಳಿಯುವು ದಿಲ್ಲವೆನ್ನುವೆಯೇನು? ನಾನು ೧೫-೨೦ ನಿಮಿಷಗಳವರೆಗೂ ನಿನ್ನನ್ನು ನೋಡುತ್ತ ನಿಂತು ಕೊಂಡಿದ್ದೆನು. ನಿನಗದರ ಅರಿವು ಕೂಡ ಇರಲಿಲ್ಲ. ಮೈಯ್ಯಲುಗಿಸದೆ, ಕಣ್ಣು ಕದಲಿಸದೆ, ಶೂನ್ಯದೃಷ್ಟಿಯುವಳಾಗಿ, ಮುಂಗಾಣದವಳಂತೆ ಮಲಗಿಕೊಂಡಿದ್ದೆ. ಅದೆ ಷ್ಟೋ ಸಲ ನಿಡುಸುಯ್ಯುತಲಿದ್ದೆ. ಯೋಚನೆಯೇನೂ ಇಲ್ಲದಿದ್ದಲ್ಲಿ "ನೀನೇ ಅನಾಥ ಬಂಧು" ಎಂಬ ಪದವನೇಕೆ ಹಾಡುತಲಿದ್ದೆ? ಅದೇನು ಬೇರೆಯವರಿಗೆ ಹೇಳದಂತಹ ಯೋಚನೆಯೇನು?" ಶಶಿಧರನು ತೀರ ಆಪ್ತನಂತೆ ಕಳನಳದ ದನಿಯಿಂದ ಕೇಳಿದನು.

ಶಾಮಲೆಯೇನೂ ಮಾತನಾಡಲಿಲ್ಲ. ಕುತ್ತಿಗೆಯ ನರಗಳು ಬಿಗಿದುವು. ನೀರು ತುಂಬಿದ ಕಣ್ಣುಗಳಿಂದ ಶಶಿಧರನ ಕಡೆಗೆ ನೋಡಲು ತೊಡಗಿದಳು.

"ಏಕೆ ಹೇಳುವಂತಿಲ್ಲವೇನು?" ಶಶಿಧರನು ಮೆಲ್ಲಗೆ ಕೇಳಿದನು.

"ಶಶಿಧರ! ನಮ್ಮ ತಾಯಿ ಮನೆಯ ಮಾತನ್ನು ಯಾರ ಮುಂದೆಯೂ ಹೇಳ ಕೂಡದೆಂದು, ನನಗೆ ಆಗಾಗ ಹೇಳುತಿರುವಳು. ಎಂತಲೇ ಯಾರೊಡನೆಯೂ ನಾನು ಹೆಚ್ಚಾಗಿ ಮಾತನಾಡುವುದಿಲ್ಲ. ನಾವು ಪಡುತಿರುವ ಕಷ್ಟನಷ್ಟದ ಸಂಗತಿಗಳನ್ನು ಇದುವರೆಗೆ ಯಾರೆದುರಿಗೂ ನಾನು ಬಾಯಿಬಿಚ್ಚಿ ನುಡಿದಿಲ್ಲ. ಹೆಚ್ಚೇನು! ನಿನ್ನ ಮುಂದೆ ಕೂಡ, ಇದರ ಬಗೆಗೆ ಒಮ್ಮೆಯೂ ಒಂದುಮಾತನೂ ಒಡೆನುಡಿದಿಲ್ಲ. ಶಶಿ ಧರ! ನೀನೀಗ ನನಗೆ ಮಂದಿಯವನಾಗಿ ಕಾಣಲೊಲ್ಲೆ. ಅದೇಕೋ ಮನೆಯವನೆಂ ದೇ ನನ್ನ ಭಾವನೆಯಾಗಿದೆ. ನಿನ್ನೆದುರಿಗೆ ಈಗ, ನಮ್ಮ ವಿಷಯದ ಯಾವ ಮಾತನ್ನು ಹೇಳಲೂ ಸಂಕೋಚವೆನಿಸದಂತಾಗಿದೆ. ನಮ್ಮ ಮನೆಯ ಸ್ಥಿತಿಗತಿಗಳನೆಲ್ಲ ನಿನಗೆ ಹೇಳಿಬಿಡಬೇಕೆಂದು ಆಗಾಗ ನನ್ನ ಮನಸ್ಸಿಗೆನಿಸುತಿದ್ದಿತು. ಮರಳಿ, ತಾಯಿ ಏನೆನ್ನು ವಳೋ! ಎಂದು ಹೆದರಿಕೊಂಡು ಸುಮ್ಮನಿರುತಿದ್ದೆನು. ಆದರೆ ಈಗ ನಿನ್ನೆದುರಿಗೆ ನನ್ನ ಹೃದಯವನ್ನು ಬಿಚ್ಚಿ ತೋರಿಸುವುದರ ಹೊರತು ನನಗೆ ಬೇರೆ ದಾರಿಯೇ ತೋರ ದಾಗಿದೆ. ಶಾಮಲೆಯು ಕಂಬನಿಯ ಕರೆಯುತ್ತಲೇ ಮಾತನಾಡಿದಳು.

"ಶಾಮಾ! ಸ್ವಲ್ಪವೂ ಸಂಕೋಚಗೊಳ್ಳಬೇಡ. ನಾನು ಮನೆಯವನಾಗಿಯೇ ಕೇಳುವೆನು, ಒಂದನೂ ಮರೆಮಾಜದೆ ಹೇಳು." ಶಶಿಧರನು ಎದೆಯು ಉಕ್ಕೇರಿ ಬರು ವಂತೆ ನುಡಿದನು.

"ಶಶಿಧರ! ನಮ್ಮ ಮನೆಯ ಸ್ಥಿತಿಯನ್ನು, ನೀನು ಸ್ವಲ್ಪವನಾದರೂ ಕಂಡುಹಿಡಿದಿ ರಬಹುದಲ್ಲವೇ? ನಮ್ಮ ದಾರಿದ್ರ್ಯದ ಚಿತ್ರವು ನಿನ್ನ ತಿಳಿನೋಟದ ಎದುರಿಗೆ ಬಾರದೆ ಹೋಗಿರಲಿಕ್ಕಿಲ್ಲ."

"ನಾನು ಅದನೆಲ್ಲವನ್ನು ಸರಿಯಾಗಿ ಅರಿತಿರುವೆನು"

"ಮನೆಗೆ ಬಾಡಿಗೆಯಾಗಿ ಬಂದ ಹಣದಿಂದಲೆ ನಮ್ಮ ಬಾಳುವೆಯೆಂಬುದನ್ನು ನೀನು ಬಲ್ಲೆಯಷ್ಟೇ ?"

"ಅಹುದು ಬಲ್ಲೆ."

"ಈಗ ನಾಲ್ಕು ತಿಂಗಳಿಂದ ನಮ್ಮ ಮನೆಯಲ್ಲಿರಲು ಬಾಡಿಗೆಯವರು ಬಂದೇ ಇಲ್ಲ. ಸಾಲದುದಕ್ಕೆ ನನ್ನ ಮದುವೆಯ ವಿಚಾರವೊಂದು ಮುಂದೆ ಬಂದು ನಿಂತಿದೆ. ಇದರಿಂದ ನಮ್ಮ ತಾಯಿಯೊಳ್ಳೆ ಹಣ್ಣಾಗಿರುವಳು. ಹೃದ್ರೋಗ ಹಚ್ಚಿಕೊಂಡಿರುವಳು. ಇಂತಹದರಲ್ಲಿ ಜೋಯಿಸ ಗುಂಡಾಭಟ್ಟರು, ನಳರಾಜನಿಗೆ ಕಲಿಯು ಕಾಡಿದಂತೆ ನಮ್ಮನ್ನು ಕಾಡುತಲಿರುವರು."

"ಅದೇಕೆ? ಅವನಿಗೇನು ಹೊಟ್ಟೆನೋವು!" ಶಶಿಧರನು ಆತುರದಿಂದ ಕೇಳಿದನು.

"ಹೇಳುವೆನು ಕೇಳು! ಶಶಿಧರ! ದೇಸಾಯಿ ವೆಂಕಟರಾಯರಿರುವರಲ್ಲ ! ಅವರಿಗೆ ನನ್ನನ್ನು ಕೊಡಿಸಿ ಮದುವೆ ಮಾಡಬೇಕೆಂದು, ಗುಂಡಾಭಟ್ಟರ ಪ್ರಯತ್ನ. ಅದಕ್ಕಾಗಿಯೆ ಆಗಾಗ ನಮ್ಮ ಮನೆಗೆ ಬರುತಿರುವರು. "ಶಾಮಲೆಯನ್ನು ವೆಂಕಟರಾಯರಿಗೆ ಕೊಟ್ಟರೆ ನಿಮಗೆ ಸಾವಿರ ರೂಪಾಯಿಗಳನ್ನು ಕೊಡಿಸುವೆನು" ಎಂದು ನಮ್ಮ ತಾಯಿಗೆ ಹೇಳುತಿರುವರು."

ಶಶಿಧರನ ಮೋರೆ ಹೇಗೆ ಹೇಗೆಂಯೋ ಆಯಿತು. ತಡೆಯುತಿರುವ ಮಾತಿನಿಂದ ಅವನು ಶಾಮಲೆಗೆ ಕೇಳಿದನು "ಏನು! ಸೀತಮ್ಮ ಅವನ ಮಾತಿಗೆ ಒಪ್ಪಿಕೊಂಡಿರುವರೇ!"

"ಇಲ್ಲ ಶಶಿಧರ! ಅಮ್ಮನು ಒಪ್ಪಿಕೊಂಡಿಲ್ಲ, ಒಪ್ಪಿಕೊಳ್ಳುವಂತೆಯೂ ಕಾಣುವುದಿಲ್ಲ. ಎಂತಲೇ ಗುಂಡಾಭಟ್ಟನು ಕಲಿಯಾಗಿ ಕಾಡುತಿರುವನು. ನಮ್ಮ ವಿಷಯವಾಗಿ ಹೊಲ್ಲದ ದುರ್ವಾರ್ತೆಗಳನು, ಸುಳ್ಳು ಸುಳ್ಳೇ ದಿನಕೊಂದು ಚೆಂದ ಹಬ್ಬಿಸುತಿರುವನು. ಮನೆಯಲ್ಲಿ ಸತ್ತ ಇಲಿಯನ್ನು ಚಲ್ಲಿ, ಇದ್ದ ಜನರನ್ನು ಬಿಡಿಸಿ ಕಳುಹಿಸಿದನು. ನಮ್ಮ ಮನೆಯಲ್ಲಿ ಭೂತವಿದೆಯೆಂದು ಹುಯಿಲೆಬ್ಬಿಸಿ, ಹೊಸತಾಗಿ ಬಾಡಿಗೆಯವರಾರೂ ಬಾರದಂತೆ ಮಾಡಿರುವನು. ನಮ್ಮನ್ನು ಹಣ್ಣುಹಣ್ಣು ಮಾಡಿ ತನ್ನ ಕಾರ್ಯ ಸಾಧಿಸಿಕೊಳ್ಳಬೇಕೆಂದು ಯೋಚಿಸಿರುವನಾಗಿ ಕಾಣುವುದು. ಏನುಮಾಡಬೇಕು ? ಶಶಿಧರ! ಬಲವಿಲ್ಲದ ಕಾಲಕ್ಕೆ ನೆಲವೆದ್ದು ಬಡಿಯಿತೆಂಬಂತೆ ನಮ್ಮ ಸ್ಥಿತಿಯಾಗಿದೆ..." ಶಾಮಲೆಯ ಕಂಠ ಬಿಗಿದು ಬಂದಿತು. ಕಣ್ಣಲ್ಲಿ ನೀರು ತುಳುಕಿದುವು. ಶಾಮಲೆಯ ಈಗಿನ ದೈನ್ಯಸ್ಥಿತಿಯ ಚಿತ್ರವು ಶಶಿಧರನಿಗೆ ಅಸಹನೀಯವಾಯಿತು. ಅವನ ಕಣ್ಣಿಂದಲೂ ಒಂದೆರಡು ಹನಿ ಕಂಬನಿಗಳುದುರಿದುವು.

ಶಾಮಲೆಯು ಅಳುವನ್ನು ತಡೆದು, ಮತ್ತೆ ಮಾತನಾಡಲು ತೊಡಗಿದಳು. "ಶಶಿಧರ ! ಸದ್ಯಕ್ಕೆ ನಮ್ಮ ಜೀವನದ ಮಾರ್ಗವೇ ಕಟ್ಟಾಗಿ ಕುಳಿತಿದೆ. ಅದರಲ್ಲಿ ನನ್ನ ಮದುವೆಯ ಮಾತಂತೂ ಎದೆಗೆ ಮುಳ್ಳಿನಂತೆ ಚುಚ್ಚುತಲಿದೆ."

"ಶಾಮಾ ! ಇಂತಹ ಪ್ರಸಂಗವು ಯಾರಿಗೂ ಬರಬಾರದು ನೋಡು ! ಇರಲಿ ! ಇದಕ್ಕಾಗಿ ನಾನು ಯಾವರೀತಿಯಿಂದ ನಿಮಗೆ ನೆರವಾಗಲಿ ?" ಶಶಿಧರನು ಉತ್ಕಂಠಿತ ನಾಗಿ ನುಡಿದನು.

"ಬೇರೆ ನೆರವೇನೂ ಬೇಕಾಗಿಲ್ಲ. ಆ ಗುಂಡಾಭಟ್ಟನ ಕಾಟದಿಂದ, ನನ್ನ ತಾಯಿ ಉಳಿದರೆ ಸಾಕಾಗಿದೆ. ನಿನ್ನೆ ರಾತ್ರಿ ನಾನು ಬೇಕಾದಷ್ಟು ಹೇಳಿದೆನು. ನನ್ನ ತಾಯಿ ಸಮ್ಮತಿಸಲೇ ಇಲ್ಲ. ಶಶಿಧರ! ನಿನಗೆ ಕೈಮುಗಿದು ಬೇಡಿಕೊಳ್ಳುತ್ತೇನೆ. ಹೇಗಾದರೂ ಮಾಡಿ, ವೆಂಕಟರಾಯರಿಗೆ ನನ್ನನ್ನು ಮದುವೆಮಾಡಿಕೊಡುವಂತೆ ಅಮ್ಮನ ಮನವನ್ನೊ ಲಿಸು ! ಅವಳ ಸಂಕಟವನ್ನು ನೋಡಿ, ನನ್ನಿಂದ ಸಹಿಸುವುದಾಗದಪ್ಪಾ ಆಗದು..." ಶಾಮಲೆಯು ಕರುಣಾವ್ಯಂಜಕ ದನಿಯಲ್ಲಿ ನುಡಿದಳು.

ಶಶಿಧರನು ಕೇಳಿದನು. ಕಣ್ಣು ಕೆರಳಿದುವು. ಮೋರೆಯೆಲ್ಲ ಕೆಂಪಾಯಿತು. "ಶಾಮಾ ! ನಿನ್ನನೆಂದೂ ಆ ಮುದಿಗೂಗೆಯಿಂದ ಮುಟ್ಟಗೊಡಲಾರೆ. ದುಃಖಾತಿಶಯ ದಿಂದ ಬುದ್ಧಿಯಿಲ್ಲದವಳಾಗಿ ಎಂತಹ ಅಭದ್ರ ಮಾತುಗಳನಾಡುತಿರುವೆ? ನಿನ್ನ ಕುಸುಮ ಕೋಮಲವಾದ ಕರವನ್ನು, ಆ ಕೋಡಗನ ಕೈಯಿಂದ ಎಂದೆಂದಿಗೂ ಹಿಡಿಸುಗೊ ಡೆನು" ಶಶಿಧರನು ಆವೇಶದ ಭರದಿಂದ ಇನ್ನೂ ಮುಂದೆ ಮಾತನಾಡುತಿದ್ದನು. ಹಠಾ ತ್ತಾಗಿ ಸೀತಮ್ಮ ಅವರು ಕುಳಿತಲ್ಲಿಗೆ ಬಂದರು.

"ಶಶಿಧರ; ಹಾಗಾದರೆ ಶಾಮಲೆಯು ಕೈಯನ್ನು ಇನ್ನಾರ ಕೈಯೊಳಗೆ ಕೊಡಬೇ ಕೆನುವೆ ? ಏನು ನೀನೇ ಹಿಡಿಯಬೇಕೆನುವೆಯೇನು ?" ವಿಷಾದದ ಕಿರಿನಗೆ ನಗುತ್ತ ಸೀತಮ್ಮ ನುಡಿದರು. ಶಾಮಲೆಯು ಬೆಚ್ಚಿಬಿದ್ದಳು. ಸೀತಮ್ಮ ಹೊರಗೆ ನಿಂತುಕೊಂಡು ಇವರಾಡುವ ಮಾತನೆಲ್ಲ ಕೇಳಿದ್ದರೇನೋ !

ಶಶಿಧರನು ಮೊದಲಿನ ಆವೇಶದಲ್ಲಿಯೇ ಮಾತನಾಡಿದನು. "ನಾನೇ ಹಿಡಿಯ ಬಹುದು. ಅದಕ್ಕೆ ತಡೆಯೇನು? ಸೀತಮ್ಮ ! ಶಾಮಲೆಯು ಕೈಯನ್ನು ನಾನು ಹಿಡಿದರೆ ನಿಮಗೆ ಒಪ್ಪಿಗೆಯೇ ?

ಸೀತಮ್ಮನ ಮೋರೆಯರಳಿತು. ಕಣ್ಣೀರು ತುಳುಕಿತು. ಹೃದಯವು ಉಕ್ಕೇರಿತು. "ನನ್ನಂತಹ ಹತಭಾಗಿನಿಯ ಮಗಳಿಗೆ ನಿನ್ನಂತಹ ಭಾಗ್ಯಶಾಲಿಯು ಕೈಹಿಡಿಯುವ ಪುಣ್ಯ ವೆಲ್ಲಿಯದಪ್ಪಾ !" ಶಶಿಧರನ ಮೋರೆಯನ್ನು ಆಶಾಪೂರಿತ ದೃಷ್ಟಿಗಳಿಂದ ನೋಡುತ್ತ ದೈನ್ಯಭಾವದಿಂದ, ಸೀತಮ್ಮ ನುಡಿದರು.

"ಸೀತಮ್ಮ ! ಬಹುದಿನಗಳಿಂದಲೂ ಬಚ್ಚಿಟ್ಟುಕೊಂಡಿರುವ ನನ್ನ ಬಗೆಯ ಮಾ ತನ್ನು ಈಗ ನೀವೇ ಬಿಚ್ಚಿ ಆಡಿಸುತಿರುವಿರಿ. ಶಾಮಲೆಯ ರೂಪ-ಗುಣ-ಶೀಲಗಳು, ನಿಜವಾಗಿಯೂ ನನ್ನ ಮನದಲ್ಲಿ ಮನೆಮಾಡಿಕೊಂಡು ಬಿಟ್ಟಿರುವವು. ಆಗುವುದಾದರೆ ಶಾಮಲೆಯನ್ನೇ ಮದುವೆಯಾಗಬೇಕೆಂದು ನಾನೆಂದೋ ಮನದಲ್ಲಿ ನಿಶ್ಚಯಮಾಡಿರು

ವೆನು. ಅಂದಿನ ವಿಚಾರದಲ್ಲಿಯ ನಿಶ್ಚಯವನ್ನೇ ಇನ್ನಿಷ್ಟು ಗಟ್ಟಿಮಾಡಿ, ಇಂದು ಪ್ರತಿಜ್ಞೆ ಯಂತೆ ಈಗ ನಿಮ್ಮೆದುರಿಗೆ ಉಚ್ಚಾರ ಮಾಡಿರುವೆನು." ಶಶಿಧರನು ನಿರಾತಂಕವಾಗಿ ಬಡಬಡ ನುಡಿದುಬಿಟ್ಟನು.

ಶಾಮಲೆಯು ಲಜ್ಜೆಯಿಂದ ಕೆಂಪೇರಿದ ತನ್ನ ಮೋರೆಯನ್ನು ಕೆಳಕ್ಕೆ ತಗ್ಗಿಸಿ ಕುಳಿತು, ಓರೆನೋಟದಿಂದ ತನ್ನ ತಾಯಿಯನ್ನೊಮ್ಮೆ ಶಶಿಧರನನ್ನೊಮ್ಮೆ ನೋಡುತ ಲಿದ್ದಳು. ಮುಚ್ಚಿಕೊಳ್ಳಬೇಕೆಂದರೂ ಮೀರಿಬರುತಲಿರುವ ಮುಗುಳುನಗೆಯ ಮೋರೆ ಯಿಂದ, ಕೈಬೆರಳಿನಿಂದ ನೆಲವನ್ನು ಕೆದರುತಲಿದ್ದಳು.

ಸೀತಮ್ಮ ಶಾಮಲೆಯ ಬಳಿಗೆ ಬಂದರು. ಮಮತೆಯಿಂದ ಮೈದಡವಿ ಮಾತನಾ ಡಿದರು. "ಮಗೂ ಮೇಲಕ್ಕೆ ಮೋರೆ ಮಾಡಮ್ಮ! ಇದುವರೆಗೆ ಸರಿಯಾಗಿ ತಿಳಿಯ ದಿದ್ದ ನಿನ್ನ ಹಣೆಯ ಬರೆಹವನ್ನು ಇನ್ನೊಮ್ಮೆ ಚೆನ್ನಾಗಿ ಓದಿನೋಡುವೆನು. ಶಶಿಧರ! ನಿಜವಾಗಿಯೂ ನೀನು ನನ್ನ ಪಾಲಿಗೆ ದೇವರು. ನಿನ್ನ ಹೊಟ್ಟೆಯಿಂದ ನಾನು ಸಾವಿರ ಸಲ ಹುಟ್ಟಿಬಂದು ನಿನ್ನ ಸೇವೆಮಾಡಿದರೂ, ನೀನೀಗ ನನಗೆ ಮಾಡಬೇಕೆನುತಿರುವ ಉಪ ಕಾರವು ತೀರದಷ್ಟು ಭಾರವಾದುದು. ಪರಮಾತ್ಮಾ! ನೀನು ನಿಜವಾಗಿಯೂ ಅನಾಥ ಬಂಧುವು; ದಯಾಪರಿಪೂರ್ಣನು."ಸೀತಮ್ಮನು ಅನಿರ್ವಚನೀಯವಾದ ಭಕ್ತಿಭಾವದಿಂದ ಕೈಮುಗಿದು ಮಾತನಾಡಿದರು. ಬಳಿಕ ಮೂವರೂ ಕೂಡಿ ಕುಳಿತು, ಅದೆಷ್ಟೋ ಮಾತ ನಾಡುತ್ತ ನಗುತ್ತ ಕುಳಿತಿದ್ದರು. ಅಂದಿನ ಸೀತಮ್ಮನ ಮೋರೆಯು ಹದಿನಾಲ್ಕು ವರ್ಷದ ಹಿಂದಿನದಾಗಿತ್ತು. ಶಾಮಲೆಯ ಕಣ್ಣು ಒಂದೇಸವನೆ ನಗುತಲಿದ್ದುವು.

೫

ಹತ್ತುಗಂಟೆ ರಾತ್ರಿಯ ಸಮಯ. ಕೃಷ್ಣನಾಯಕರು ಉಪ್ಪರಿಗೆಯ ಕಿರುಮನೆ ಯಲ್ಲಿ ಆರಾಮಕುರ್ಚಿಯೊಂದರಮೇಲೆ, ಕಾಲುಚಾಚಿ ಬಿದ್ದುಕೊಂಡಿರುವರು. ಹುಬ್ಬನ್ನು ಆಕುಂಚಿತವಾಗಿ ಮಾಡಿ, ಅದೇನನೋ ಯೋಚಿಸುತಲಿದ್ದರು. ಯಾವುದೊ ಬಗೆಹರಿಯದ ತೊಡಕಿನಲ್ಲಿ ಸಿಲುಕಿದಂತೆ, ಮೋರೆಯ ಲಕ್ಷಣವು ಒಡೆದುಕಾಣುತಲಿದ್ದಿತು. ನಸುವೇಳೆಯಲ್ಲಿಯೆ ಶಶಿಧರನು ಮೆಲ್ಲ ಮೆಲ್ಲಗೆ ಹೆಜ್ಜೆಗಳನು ಹಾಕುತ್ತ ಅಲ್ಲಿಗೆ ಬಂದನು. "ಮತ್ತೆ ನನ್ನನ್ನು ಕರೆಯಿಸಿದುದೇಕೆ?" ಎಂದು ಬೆದರುನುಡಿಯಿಂದ ಕೇಳಿದನು.

"ಏನು! ಇನ್ನೊಮ್ಮೆ ಹೇಳು! ಒಳ್ಳೆಯತನದಿಂದ ನನ್ನ ಮಾತಕೇಳಿ ಮದು ವೆಗೆ ಒಪ್ಪಿಕೊಳ್ಳುವೆಯೋ ಇಲ್ಲವೋ?" ನಾಯಕರು ಗಂಭೀರಸ್ವರದಿಂದ ನುಡಿದರು.

"ಮದುವೆಗೆ ನನ್ನ ಅಸಮ್ಮತಿಯೆಲ್ಲಿದೆ?" ಶಶಿಧರನು ವಿನಯದಿಂದ ಮಾತ ನಾಡಿದನು.

"ಎಂದರೆ! ಮದುವೆಗೆ ಅಸಮ್ಮತಿಯಿಲ್ಲ. ನಾವು ತಂದ ಕನ್ಯೆಯನ್ನು ಮದುವೆ ಯಾಗುವುದಿಲ್ಲ. ಇದೇನು ಹುಡುಗಾಟ ನಡೆಯಿಸಿರುವೆ? ನೀನು ಸಾವಿರ ಮಾತನ್ನು ಹೇಳಿದರೂ, ಆ ದರಿದ್ರ-ವಿಧವೆಯಮಗಳನ್ನು ತಂದುಕೊಂಡು, ನನ್ನ ಮನೆತನದ

ಘನತೆಗೆ ಹೊಲಸು ಬಳಿಯಲಾರೆನು." ನಾಯಕರು ನಿಷ್ಠುರವ ಸ್ವರದಿಂದ ನುಡಿದರು.

"ದರಿದ್ರರು ದೈವವಶದಿಂದ ಶ್ರೀಮಂತರೇಕೆ ಆಗಬಾರದು ? ಅಲ್ಲದೆ ತಾಯಿ ವಿಧವೆಯಾದುದಕ್ಕೆ, ಪಾಪ ! ಆ ಮಗಳ ಅಪರಾಧವೇನು ?" ಶಶಿಧರನು ಮೆಲ್ಲಗೆ ಹೇಳಿದನು.

"ಇನ್ನು ನಿನ್ನ ವಿನಯದ ಸೋಗನ್ನು ಸಾಕುಮಾಡು. ನಾನು ಹೇಳುವುದನ್ನು ಮುನ್ನೋಡಿ ಕೇಳು. ದೊಡ್ಡ ಮನೆತನದ ಹೆಂಣು ಬಂದಿದೆ. ನಾನು ತೆಗೆದುಕೊಳ್ಳುವೆನೆಂದು ಮಾತು ಕೂಡ ಕೊಟ್ಟಿರುವೆನು. ಎರಡುಸಾವಿರರೂಪಾಯಿ ವರದಕ್ಷಿಣೆ ಕೊಡಲು ಸಮ್ಮತಿಸಿರುವರು. ಸಣ್ಣವನಲ್ಲ ನೀನು. ವಿಚಾರ ಮಾಡಿ ನೋಡು." ನಾಯಕರು ನಸು ಸಮಾಧಾನದಿಂದ ಮಾತನಾಡಿದರು.

"ಮದುವೆ ಮಾಡಿಕೊಳುವುದು ವರದಕ್ಷಿಣೆಗಾಗಿ ಅಲ್ಲ" ಶಶಿಧರನು ಒಂದೇ ಮಾತನಾಡಿ ಸುಮ್ಮನಾದನು.

ನಾಯಕರು ರೇಗಿದರು "ಕತ್ತೆ ! ನನಗೆ ಬುದ್ಧಿಯ ಕಲಿಸಲು ಬರುವೆಯೇನು ! ನಾನಿನ್ನು ನಿನ್ನ ಸಮ್ಮತಿಯನ್ನೇ ಕೇಳುವುದಿಲ್ಲ ನಡೆ ! ಅದೇ ಹೆಣ್ಣನ್ನೇ ತಂದು ನಿನಗೆ ಮದುವೆ ಮಾಡುವೆನು. ಆಮೇಲೆ ನೀನೇನು ಮಾಡುವೆಯೆಂಬುದನು ನೋಡುವೆನು."

"ಮದುವೆಮಾಡಿಕೊಂಡು ಹೆಂಡತಿಯನಾಳುವವನು ನಾನು." ಶಶಿಧರನು ಮತ್ತೆ ಸಮಾಧಾನದಿಂದಲೇ ನುಡಿದರು.

ನಾಯಕರು ಹೆಡೆತುಳಿದ ಹಾವಿನಂತೆ ಒಮ್ಮೆಲೇ ಮೇಲಕೆದ್ದು ನೇರವಾಗಿ ಕುಳಿತುಕೊಂಡರು. "ಮೂರ್ಖಾ ! ನಡೆ ! ನನ್ನ ಪಾಲಿಗೆ ನೀನು ಸತ್ತೆಯೆಂದು ಇಂದೇ ನೀರು ಬಿಡುವೆನು. ಹೇಳಿದ ಮಾತನ್ನು ಕೇಳದ ಮಗನು, ಇದ್ದರೇನು ಸತ್ತರೇನು ! ನನಗೆ ಎದುರಾಡುವೆಯಾ ? ನಡೆ ! ನಾನಿನ್ನು ನಿನ್ನ ಕೆಟ್ಟ ಮೋರೆಯನು ನೋಡಲಾರೆ. ಮಕ್ಕಳು ಬೇಕು ಬೇಕು ! ಏತಕ್ಕೆ ಬೇಕು ? ಹಡೆದವರ ಜೀವ ತಿನ್ನಲಿಕ್ಕೆ ?" ನಾಯಕರು ಸಂತಾಪದಿಂದ ಸಿಡಿಯುತ್ತ ನುಡಿದರು.

ಶಶಿಧರನು ಏನೂ ಮರುಮಾತು ಕೊಡದೆ, ಅಲ್ಲಿಂದ ಹೊರಟು ಹೋಗಲು, ಮೋರೆ ತಿರುವಿದನು. ಒಂದೆರಡು ಅಡಿ ಮುಂದೆ ನಡೆದನು.

"ಏ ! ತಿಳಿಗೇಡಿ ! ತಡೆ! ಎಲ್ಲಿ ಹೋಗುವೆ ?" ನಾಯಕರು ಮತ್ತೆ ಸಿಟ್ಟಿನ ಭರದಲ್ಲಿಯೇ ನುಡಿದರು. ಶಶಿಧರನು ಅಲ್ಲಿಯೇ ಹೊರಳಿ ನಿಂತನು.

"ಇದು ನೋಡು! ನಿನಗೆ ಕೊನೆಯ ಮಾತನ್ನು ಹೇಳುತ್ತೇನೆ. ನಿನಗೆ ಶಾಮಲೆಯನ್ನು ಮದುವೆ ಮಾಡಿಕೊಳ್ಳುವುದಿದ್ದರೆ ಮಾಡಿಕೊ ! ನನ್ನದೇನೂ ತಡೆಯಿಲ್ಲ.

ಆದರೆ ಆ ವಿಧವೆ ವರದಕ್ಷಿಣೆಯನೆಷ್ಟು ಕೊಡುವಳು? " ನಾಯಕರು ನಸು ಶಾಂತರಾಗಿ ಕೇಳಿದರು.

" ಪಾಪ! ತಿನ್ನಲಿಕ್ಕೆ ಹೊಟ್ಟೆತುಂಬ ಅನ್ನದೊರೆಯದವರು ವರದಕ್ಷಿಣೆಯನ್ನೇನು ಕೊಡುವರು! " ಶಶಿಧರನು ಕನಿಕರದ ದನಿಯಿಂದ ಹೇಳಿದನು.

" ಆಹ್ಹಾ ! ನಾನೆಲ್ಲ ಬಲ್ಲೆ. ಆ ವಿಧವೆಯು ಬಳಿಯಲ್ಲಿ ಹಣವಿರುವುದಂತೆ. ಹುಗಿದಿಟ್ಟು ಮೇಲೆ ಬಡತನದ ಸೋಗು ಹಾಕಿರುವಳು. ಅವಳ ಹೊಯ್ಮಾಲೆತನವನೆಲ್ಲ ಗುಂಡಾಭಟ್ಟರು ನನಗೆಲ್ಲ ಕಥೆಮಾಡಿ ಹೇಳಿರುವರು. ಆ ಮಾಯಾವಿನಿಯು ನಿನಗೂ ಮಂಕುಬೂದಿಯ ತಳೆದು, ಮರುಳು ಮಾಡಿರುವಳು. ಇರಲಿ! ಈಗ ಉಳಿದುದನೆಲ್ಲ ತೆಗೆದುಕೊಂಡು ಮಾಡುವುದೇನಿದೆ ? ಮುಂದಿ ಎರಡುಸಾವಿರ ಕೊಡಲಿ! ನಾಲ್ಕು ಸಾವಿರ ಕೊಡಲಿ! ನಾನೇನೂ ನೋಡುವುದಿಲ್ಲ. ಕೇವಲ ನಿನ್ನ ಮನಸು ಮುರಿಯಬಾರದೆಂತಲೂ, ಅವಳು ಹೆಂಗುಸಿರುವುದರಿಂದಲೂ, ನಾನೇನು ಹೆಚ್ಚಿಗೆ ವರದಕ್ಷಿಣೆ ಬೇಡುವುದಿಲ್ಲ. ಹದಿನೈದುನೂರು ರೂಪಾಯಿಗಳನು ಮಾತ್ರ ಆಕೆ ಕೊಡಲೇಬೇಕು. ಏನು ? ಅವಳು ಕೊಡಲಿಕ್ಕೆ ಸಿದ್ಧಳಿರುವಳೇ ? ಹಾಗಿದರೆ ನನ್ನದೇನೂ ತಡೆಯಿಲ್ಲ. ಶಾಮಲೆಯನ್ನೇ ತಂದು ಮದುವೆ ಮಾಡುವೆನು " ನಾಯಕರು ಸೋತವರಾಗಿ ಮಾತನಾಡಿದರು.

" ನಾನು ಅವರ ಸ್ಥಿತಿಯನೆಲ್ಲ ಸರಿಯಾಗಿ ಬಲ್ಲೆ. ವರದಕ್ಷಿಣೆಯ ಮಾತನ್ನೇ ಮರೆತು ಬಿಡಬೇಕು. "

" ಹಾಗಾದರೆ ಶಾಮಲೆಯ ಮದುವೆಯ ಮಾತನ್ನು ನೀನೂ ಮರೆಯಬೇಕು. "

" ಇದರಿಂದ ನೀವು ನನ್ನನ್ನು ಕೊನೆಯತನಕ ಮರೆಯಬೇಕಾಗುವುದು. "

" ಮೂರ್ಖಾ, ಮತ್ತೆ ನನ್ನ ತಲೆಗೆ ಪಿತ್ತವೇರಿಸುವೆಯಾ? ನನಗೆ ಅಂಜಿಕೆ ತೋರಿಸುವೆಯಾ? ಎಲ್ಲಿಗೆ ಹೋಗುವೆ? ಹಾಳಾಗಿ ಹೋಗು. ನಡೆ ! ನನ್ನೆದುರಿನಲ್ಲಿ ನಿಲ್ಲಬೇಡ. ಆದರೆ ಇದೊಂದು ಮಾತನ್ನು ಚೆನ್ನಾಗಿ ಜ್ಞಾಪಕದಲ್ಲಿಡು! ಇನ್ನಿಂದಾದರೂ ನೀನು ಆ ಮುಂಡೆಯ ಮನೆಗೆ ಹೋಗಿಕುಳಿತ ಸುದ್ದಿ ತಿಳಿದರೆ, ಏನು ಮಾಡುವೆನೆಂಬುದನ್ನು ತಿಳಿದು ನೋಡು! ಈ ಕ್ಷಣದಿಂದ ಮೊದಲು ಮಾಡಿ ಆಕೆಯ ಮನೆಯ ಕಡೆಗೆ ಹೊರಳಿ ಸಹ ನೋಡ ಕೂಡದು! ನಡೆ ಹೋಗು ! ಇನ್ನು ಶಾಮಲೆಯೊಡನೆ ನಿನ್ನ ಮದುವೆಯಾಗುವುದು ಕನಸಿನಲ್ಲಿಯೇ ! " ಎಂದು ನಾಯಕರು ಕೆರಳಿ ಕಿಡಿಕಿಡಿಯಾಗಿ ನುಡಿದು, ಮತ್ತೆ ಕುರ್ಚಿಯ ಮೇಲೆ ಬಿದ್ದುಕೊಂಡರು. ಶಶಿಧರನು ಅಲ್ಲಿ ಬಹಳ ವೇಳೆ ನಿಲ್ಲಲಿಲ್ಲ. ಕೂಡಲೆ ತನ್ನ ಓದುವ ಕೋಣೆಗೆ ಹೊರಟು ಹೋಗಿಬಿಟ್ಟನು.

೬

ಶಾಮಲೆಯು ಶಾಲೆಯಿಂದ ೫॥ ಗಂಟೆಗೆ ಮನೆಗೆ ಬಂದಳು. ಪುಸ್ತಕಗಳನ್ನು ನೆಲೆವಾಡ ( ಕಪಾಟ ) ದಲ್ಲಿಟ್ಟು ಬೇಗಬೇಗನೆ ತಾಯಿಯ ಬಳಿಗೆ ಹೋದಳು. ಈಗ

ನಾಲ್ಕೈದು ದಿನಗಳಿಂದ ಅಳಲಿನಗುತಿರುವ ಸೀತಮ್ಮನ ಮೋರೆಯಿಂದು, ಬಾಡಿ ಬ
ಯಾಗಿ ಹೋಗಿದ್ದಿತು. ಕಣ್ಣು ಕೆಂಪಾಗಿದ್ದುವು. ಕಂಬನಿಗಳು ಗಲ್ಲದ ಮೇಲೆ ಧ
ಗಟ್ಟಿ ಸುರಿಯುತಲಿದ್ದುವು. ಲೀಲಾವತಿಯೂದ ಶಾಮಲೆಯು, ತಾಯಿಯೊಡನೆ ಅ
ವಿನೋದ ಮಾಡಬೇಕೆಂದು ಬಂದಿದ್ದಳೋ! ಮೋರೆಯ ಮೇಲೆ ಮುಗುಳು ನಗೆ ಮ
ದ್ದಿತು. ಸೀತಮ್ಮನನ್ನು ಕಂಡೊಡನೆಯೆ ಶಾಮಲೆಯ ನಗೆಯು ಮಾಯವಾಯಿ
ಬೆದರಿ ನಡುಗಿದಳು. ತನ್ನ ದೊಡ್ಡದೊಡ್ಡವಾದ ಕಣ್ಣುಗಳಲ್ಲಿ ದೈನ್ಯವನ್ನು ತ
ಕೊಂಡು, ಆತುರದಿಂದ "ಅಮ್ಮಾ ಮತ್ತೇಕೆ ಅಳುವುದಮ್ಮಾ" ಎಂದು ಕೇಳಿದಳು.

ಸೀತಮ್ಮ ಅಳುತಳುತಲೇ ಮಾತನಾಡಿದರು. "ಶಾಮಾ! ನಮ್ಮ ಅಳುವ
ಧಿಯು ಇನ್ನೂ ಮುಗಿದಂತೆ ತೋರುವುದಿಲ್ಲ. ಮುಳುಗಿ ಸಾಯುತಿರುವವನಿಗೆ ಹು
ಕಡ್ಡಿಯ ಆಧಾರವು ಕೈಗೆ ದೊರೆತಂತೆ, ವಿಧಿಯು ನಮಗೆ ಏತೇತರದೋ ಆಶೆಯ ಆ
ರವನ್ನು ಒದಗಿಸಿಕೊಟ್ಟನು. ನಮಗೆ ಆನಂದದ ಆಮಿಷವನ್ನು ತೋರಿಸಿದನು, ಸು
ಶಿಖರದ ಮೇಲೆ ಕೂಡಿಸುವೆನೆಂದು ಹೇಳಿ, ಕೈ ಹಿಡಿದು ಮೇಲೆ ಕರೆದುಕೊಂಡು ಹೋ
ಆಳವಾದ ಕೊಳ್ಳದಲ್ಲಿ ನೂಕಿದನು....."

ಶಾಮಲೆಯು ದಡದಡಿಸುವ ಎದೆಯಿಂದ ಕೇಳಿದಳು. "ಅಮ್ಮಾ! ಏನಾಯಿ
ಈಗ?"

"ಮತ್ತೇನಾಗಬೇಕಮ್ಮಾ! ಆ ಹೊಲೆಯ ಗುಂಡಾ ಭಟ್ಟನು ಇಲ್ಲದುದೊಂದ
ಹೇಳಿ, ಮದುವೆಗೆ ಕಲ್ಲು ಹಾಕಿ ಬಿಟ್ಟಿರುವನು. ಹದಿನೈದುನೂರು ರೂಪಾಯಿಗಳ
ದರೂ ವರದಕ್ಷಿಣೆಯಾಗಿ ಸಲ್ಲಿಸದಿದ್ದರೆ ಆ ಮದುವೆಯ ಮಾತನ್ನೇ ನನ್ನೆದುರಿಗೆ ಎ
ಬೇಡವೆಂದು, ನಾಯಕರು ಶಶಿಧರನಿಗೆ ಖಂಡಿತವಾಗಿ ಹೇಳಿದರಂತೆ. ಅಲ್ಲದೆ ನ
ಮನೆಗೆ ಕಾಲಿಕ್ಕಕೂಡದೆಂದು ಆತನಿಗೆ ನಿರ್ಬಂಧಪಡಿಸಿರುವರಂತೆ.

ಶಾಮಲೆಯು ಮುಂಗಾಣದವಳಾದಳು. ಬಿಸುಸುಯ್ದಳು. ನಿಲ್ಲುವುದಾಗದೆ ನಿ
ಲ್ಲಿಯೆ ಕುಸಿದು ಬಿದ್ದಳು. "ಅಮ್ಮಾ! ಹದಿನೈದು ನೂರು ಹರಳುಗಳಾದರೂ ನಮ
ಸಿಕ್ಕಬಹುದೇ? ದುರ್ದೈವದ ಮುಂದೆ ಓಡುವವರಾರು? ಇದೆಲ್ಲ ನಿನಗೆ ಹೇಗೆ ತಿ
ತಮ್ಮಾ!" ನಡುಗುವ ದನಿಯಿಂದ ಶಾಮಲೆಯು ಕೇಳಿದಳು.

"ಮೂರು ಗಂಟೆಯ ಸುಮಾರಿಗೆ ಆ ನರರಾಕ್ಷಸ ಗುಂಡಾಭಟ್ಟನು ಮತ್ತೆ ಮನೆ
ಬಂದಿದ್ದನು. ಅವನೇ ಇದನ್ನೆಲ್ಲ ಹೇಳಿದನು. 'ಸುಮ್ಮನೆ ನನ್ನ ಮಾತ ಕೇಳಿ, ಶಾ
ಲೆಯನ್ನು ವೆಂಕಟರಾಯರಿಗೆ ಕೊಟ್ಟು ಬಿಡಿರಿ, ಇದರಿಂದ ನಿಮ್ಮಿಬ್ಬರಿಗೂ ಸೌಖ್ಯ
ಗುವುದು.' ಎಂದು ಮತ್ತೆ ನನಗೆ ಉಪದೇಶಿಸಿದನು.' ಸೀತಮ್ಮ ಗುಂಡಾ ಭಟ್ಟನನ್ನು
ಶಪಿಸುತ್ತ ಹೇಳಿದರು.

ಶಾಮಲೆಯು ಮರಳಿ ಕೇಳಿದಳು. "ಅವನಿಗೆ ನೀನೇನು ಹೇಳಿದೆಯಮ್ಮಾ"

"ಆ ಹೊಲೆಯನಿಗೆ ಕೈಮುಗಿದು ಕಾಲಬಿದ್ದು ಅಂಗಲಾಚಿ ಬೇಡಿಕೊಂಡೆ. 'ಇದೊಂದು ಮಾತನ್ನು ಬಿಟ್ಟು ಇನ್ನೇನನಾದರೂ ಹೇಳಿದರೆ, ನಿಮ್ಮ ಮಾತುಗಳನ್ನು ಮೀರಿ ನಡೆಯಲಾರೆ' ಎಂದು ಅದೆಷ್ಟೋ ದೀನೆಯಾಗಿ ಹೇಳಿಕೊಂಡೆ. ಆದರೂ ಆ ಕರಿಯ ಕಲ್ಲ ಮೂರ್ತಿಯ ಹೃದಯವು ನೀರೊಡೆಯಲಿಲ್ಲ. ಸೀತಮ್ಮ ಅಳುತಳುತಲೇ ಹೇಳಿದರು.

ಶಾಮಲೆಯೇನೂ ಮಾತನಾಡಲಿಲ್ಲ. ಎಲ್ಲಿಯೋ ನೋಡುತ್ತ, ಏನನೋ ಯೋಚಿಸುತಿರುವವಳಂತೆ ಕುಳಿತಳು. ಸೀತಮ್ಮ ಮುಂದೆ ಹೇಳಲು ತೊಡಗಿದರು.

"ಶಾಮಾ! ತನ್ನ ಮಾತನ್ನು ಸಾಧಿಸುವವರೆಗೂ ಆ ಕಪಿಯು ನಮ್ಮನ್ನು ಕೈಲಾದಮಟ್ಟಿಗೆ ಕಾಡುವವನೇ! ಈಗ ನೋಡು. ಹೋಗುವಾಗ ಆತನು ನನ್ನ ಮಾತ ಕೇಳದಿದ್ದರೆ ನಿಮ್ಮ ಫಲಭೋಗವನ್ನು ನೀವು ಉಣ್ಣುವಿರಿ! ಈಗ ಶಾಮಲೆಗೂ ಶಶಿಧರನಿಗೂ ಸಂಬಂಧವಿದೆಯೆಂದು ಎಲ್ಲ ಕಡೆಗೂ ವಾರ್ತೆ ಹಬ್ಬಿದೆ. ಇನ್ನು ನಿಮ್ಮ ಮಗಳ ಮದುವೆಯಾಗುವುದೇ ಅಶಕ್ಯವಿದೆ. ಈ ಸುದ್ದಿಯು ಮಠಾಧಿಕಾರಿಗಳ ಕಿವಿಗೆ ನಿಲುಕಿದರಂತೂ ಕೆಲಸವೇ ಮುಗಿಯಿತು. ಸಮಾಜದಿಂದ ಬಹಿಷ್ಕೃತರಾಗಬೇಕಾಗುವುದು. ಜಾತಿಯಿಂದ ಹೊರಗೆ ಹೋಗುವ ವೇಳೆಯು ಒದಗುವುದು. ಸುಮ್ಮನೆ ನನ್ನ ಮಾತನ್ನು ಕೇಳಿರಿ.' ಎಂದು ಖಂಡಿತವಾಗಿ ಹೇಳಿಹೋಗಿರುವನು. ಆ ನೀಚನು ಎಂತಹ ಅನ್ಯಾಯವನ್ನು ಮಾಡಲಿಕ್ಕೂ ಹೇಸದವನು. ದೇವಾ! ದೇವಾ! ಏತಕಿಷ್ಟು ನನ್ನ ಪರೀಕ್ಷೆ ಮಾಡುತಿರುವೆಯಪ್ಪಾ!......" ಸೀತಮ್ಮ ದೊಡ್ಡದಾಗಿ ದನಿತೆಗೆದು ಅಳಲು ತೊಡಗಿದರು. ಶಾಮಲೆಗೂ ದುಃಖವು ಉಕ್ಕಿ ಬಂದಿತು. ಒಬ್ಬರನೊಬ್ಬರು ನೋಡುತ್ತ ಅದೆಷ್ಟೋ ವೇಳೆಯವರೆಗೆ ಅಳುತಲೇ ಕುಳಿತಿದ್ದರು. ಅವರನ್ನು ಸಂತೈಸಲಿಕ್ಕೆ ಬೇರೆ ಯಾರು ಬರುವರು.

ಮರಳಿ ತಾವೇ ಅಳುವನ್ನು ನುಂಗಿಕೊಂಡರು. ಬಹಳ ವೇಳೆಯವರೆಗೆ ಮಾತನಾಡಿ ಯಾವುದೋ ಮಾತಿನ ನಿಶ್ಚಯವನ್ನು ಮಾಡಿದರು. ನಡುನಡುವೆ ಇಬ್ಬರೂ ಅಳುವರು. ಮತ್ತೆ ಒಬ್ಬರನೊಬ್ಬರು ಸಂತೈಸುವರು. ಅಂದು ಇಬ್ಬರಿಗೂ ರಾತ್ರಿಯಲ್ಲಿ ಊಟವಿಲ್ಲ. ಉಡಿಗೆಯಿಲ್ಲ.

೭

ಸೀತಮ್ಮ ಶಾಮಲೆ ಮಾತನಾಡುತ್ತ ಕುಳಿತಿದ್ದರು.

"ಅಮ್ಮಾ! ನೀನಿನ್ನು ಅಳುವುದನ್ನು ಸಾಕು ಮಾಡು. ಇನ್ನು ಮೂರು ದಿನಗಳಿಗೆಯೆ ನನ್ನ ವಿವಾಹವಿಧಿಯು ಜರುಗಬೇಕಾಗಿಲ್ಲವೇ ? ಎಂತಹನೇ ಇರಲಿ! ಸತಿಯರು ದೇವರೆಂದು ತಿಳಿದು ನಡೆಯಬೇಕಾಗುವ ಪತಿರಾಜನು, ನನ್ನ ಕೈ ಹಿಡಿದು ನನ್ನನ್ನು

ಸೌಭಾಗ್ಯವತಿಯನಾಗಿ ಮಾಡಲಿರುವನು. ಇಂತಹ ಸುಸಮಯದಲ್ಲಿ, ಅಮಂಗಲವಾದ ಅಳುವಿನ ಸಂಗತಿಯೇತಕ್ಕೆ?" ಶಾಮಲೆಯು ಗದ್ಗದಕಂಠೆಯಾಗಿ ನುಡಿದಳು.

"ಶಾಮಲೇ! ಇದು ಅಳುವಲ್ಲ. ನಿನ್ನ ಮದುವೆಯ ಸಮಾರಂಭದಲ್ಲಿ ಬಾರಿಸಬೇಕಾಗಿರುವ ಮಂಗಲವಾದ್ಯ. ಚೆನ್ನಾಗಿ ನುಡಿಸುವುದಕ್ಕೆ ಈಗಲೇ ಅಭ್ಯಾಸ ಮಾಡುತ್ತಿರುವೆನು. ತಾಯೀ! ನಿನ್ನನ್ನು ಸೌಭಾಗ್ಯವತಿಯನಾಗಿ ಮಾಡಲು, ಆ ನಿನ್ನ ಗಂಡನೆನಿಸುವ ಅಜ್ಜನು ನಿನ್ನ ಕೈ ಹಿಡಿಯುವುದಿಲ್ಲ. ನನ್ನೊಡನೆ ಚಿತೆಯನೇರಲು ಬಾ! ಎಂದು ಕರೆಯಲು, ಕೈ ಹಿಡಿದು ಎಳೆಯುವನು. ನಿನ್ನನ್ನು ಅಖಂಡ ಮಂಗಲವತಿಯನಾಗಿ ಮಾಡುವನು. ಶಾಮಾ! ನೀನು ಈಗಲೇ ಸತ್ತು ಹೋಗೆ? ಆ ಮುದಿಮಗನ ಮುಂದೆ ನಿಂತಿರುವ ನಿನ್ನ ತಲೆಯ ಮೇಲೆ ಅಕ್ಷತೆ ಹಾಕುವುದಕಿಂತಲೂ, ನಿನ್ನ ಶವದಹನದ ಕಾರ್ಯವನ್ನು ನನ್ನ ಕೈಗಳು ಹೆಚ್ಚು ಆನಂದದಿಂದ ಮಾಡುತ್ತವೆ. ನಿಜವಾಗಿಯೂ ನೀನು ಸತ್ತು ಬಿಡು......" ಸೀತಮ್ಮ ಮಾತನಾಡಿ ಇನ್ನಿಷ್ಟು ಹೆಚ್ಚಾಗಿ ಅಳಲು ತೊಡಗಿದರು.

"ಅಮ್ಮಾ! ಸುಮ್ಮನಿರೀ ತಾಯಿ! ನಮ್ಮ ನಮ್ಮ ಕರ್ಮದಂತೆ ನಮಗೆ ಫಲವು ದೊರೆಯುವುದೆಂದು, ಆಗಾಗ ನನಗೆ ನೀತಿಯನು ಹೇಳುತಿದ್ದೆ. ಈಗ ನೀನೇ ಹುಚ್ಚಿಯಂತೆ ಮಾಡುತಿರುವೆಯಲ್ಲ! ಹೀಗೆ ನೀನು ಅಳುತ್ತ ಕುಳಿತರೆ ನನಗೆ ಧೈರ್ಯ ಹೇಳುವರಾರಮ್ಮಾ? ದುಃಖಾಗ್ನಿಯಲ್ಲಿ ಬೆಂದು ಬೆಂದು ಪರಿಶುದ್ಧವಾಗಿರುವ ನಿನ್ನ ದಿವ್ಯಾಣೆಯಿಂದ, ನನಗೆ ಹರಕೆಯನ್ನು ಕೊಡೇ! ಹಡೆದವಮ್ಮಾ! ನಿನ್ನ ಆಶೀರ್ವಾದದ ಬಲದಿಂದ, ಸಾವಿತ್ರಿಯಂತೆ ಸತ್ತು ಹೋದ ಗಂಡನನ್ನು ಕೂಡ ಮರಳಿಪಡೆಯುವೆನು. ನಿಳು ಈ ನಿನ್ನ ಮಗಳಿಗೆ, ಸಂಜೀವಿನಿಯಂತೆ ಸಹಾಯಕವಾಗುವಂತೆ ಒಂದೇ ಒಂದು ಹುರುಳುಳ್ಳ ಹರಕೆ ಕೊಡು." ಶಾಮಲೆಯು ಗಂಭೀರತನದಿಂದ ಹೇಳಿದಳು.

"ಮಗೂ! ನನ್ನ ಹರಕೆಯಲ್ಲಿ ಹುರುಳುಂಟೇ? ಏನೆಂದು ನಿನ್ನನ್ನು ಹರಸಲಿ; 'ಮದುವೆಯಾದ ಮರುದಿನವೇ ಚಿತೆಯನೇರು' ಎಂದೇನು? ಕಂದ! ಆಗೇನೋ ಎನಿಸಿತು. ನನ್ನ ಮಗಳು ಹೊಟ್ಟೆತುಂಬ ಉಂಡುಕೊಂಡಾದರೂ ಇರುವಳಲ್ಲ! ಎಂದು, ಎಂತಲೇ ಆ ಜೀವವಿರುವ ಹೆಣಕ್ಕೆ ಕೊಡಲು ಸಮ್ಮತಿಸಿದೆನು. ನನ್ನ ಮಗಳು ಜೀವದಿಂದಿದ್ದರೂ ಸಾಕು ಎಂದೆನು. ಆದರೆ ಈಗ, ನೀನು ಸತ್ತು ಹೋದರೆ ಹೆಚ್ಚು ಚೆನ್ನಾಗುವುದು ಎನಿಸುವುದು. ನೀಚಾ ಮನೆಮುರಕಾ! ಗುಂಡಾಭಟ್ಟಾ! ನನ್ನ ಹೆಣ್ಣಿನ ತಳಮಳಿಕೆಯು ಜನ್ಮಜನ್ಮಾಂತರದಲ್ಲಿಯೂ ನಿನ್ನ ಉಡಿಯೊಳಗೆ ಕಟ್ಟಿರಲಿ! ದೇವಾ! ನಿನ್ನ ಕೃಪೆಯಿಂದ ಎಂತೆಂತಹ ಕುತ್ತುಗಳನ್ನೂ ದಾಟಿ, ಇದುವರೆಗೂ ಬದುಕಿಕೊಂಡೆ. ಇನ್ನು ನನ್ನಿಂದದು ಸಾಧ್ಯವಿಲ್ಲ. ಶಾಮಾ! ಮಗಳೇ! ನೀನು ಹುಟ್ಟದಿದ್ದರೆ ಸರಿಯಾಗುತಿತ್ತು ನೋಡು."

"ಹಾಗಾದರೇ ನಾನು ಸತ್ತು ಬಿಡಲೇ?" ಶಾಮಲೆ ಒಂದುವಿಧವಾದ ಸ್ವರದಿಂದ ಕೇಳಿದಳು.

"ನೀನೊಬ್ಬಳೇ ಏಕೆ? ಇಬ್ಬರೂ ಕೂಡಿಯೇ ಸಾಯೋಣ. ನಾರಾಯಣಾ! ಸಾಕುಮಾಡಿ ಬಿಡಪ್ಪಾ! ಈ ಜನ್ಮವನ್ನು" ಎಂದು ನುಡಿದು, ಸೀತಮ್ಮ ನಿಡುಸುಯ್ದು ಹುಚ್ಚಿಯಂತಾಗಿ ಸುಮ್ಮನೆ ಕುಳಿತರು. ಶಾಮಲೆಯೂ ತಾಯಿಯ ಕಡೆಗೆ ಮಿಳಮಿಳನೆ ನೋಡುತ್ತ, ಮೈಯಲುಗಿಸದೆ ಕುಳಿತಿದ್ದಳು. ಇಬ್ಬರೂ ಕಲ್ಲಿನಂತೆ ನಿಶ್ಚಲರು.

ಶಾಮಲೆಯು ಮೇಲಕ್ಕೆ ಮೋರೆ ಮಾಡಿದಳು. ಅಂತಹ ಸ್ಥಿತಿಯಲ್ಲಿಯೇ ಹಾಡಲು ತೊಡಗಿದಳು. "ಕರುಣಾಕರ ನಿನಗೆನ್ನುವುದೇಕೋ ಭರವಸವಿಲ್ಲೆನಗೆ" ಅದೆಂತಹ ಹಾಡು! ಹೊಟ್ಟೆಯುರಿಯನ್ನು ತಾಳದೆ ಹೊರಟ ದುಃಖೋದ್ಗಾರ.

ಶಾಮಲೆಯು ಹಾಡುತಿದ್ದ ಸಮಯಕ್ಕೆ ಸರಿಯಾಗಿ ಅಂಚೆಯ ಜವಾನನು ಅಲ್ಲಿಗೆ ಬಂದನು. "ನಿಮ್ಮ ಹೆಸರಿನಿಂದ ಎಲ್ಲಿಯದೋ ಇದೊಂದು ಓಲೆ ಬಂದಿದೆ ನೋಡಿ" ಎಂದು ನುಡಿದು, ಬಾಗಿಲಲ್ಲಿಯೆ ಓಲೆಯನೊಗೆದು, ಹೋಗಿ ಬಿಟ್ಟನು. ಸೀತಮ್ಮ ಕದಲದೆ ಕುಳಿತುಬಿಟ್ಟಿದ್ದರು.

'ತಮ್ಮ ಮನೆಗೆ ಎಂದೂ, ಯಾರಿಂದಲೂ, ಸಮೀಪದಲ್ಲಿ ಓಲೆ ಬಂದಿಲ್ಲ. ಇಂದು ಇದೆಲ್ಲಿಯದು ಬಂದಿತೆಂ'ದು ಶಾಮಲೆಗೆ ಅಚ್ಚರಿಯಾಯಿತು. ಹಾಗೆಯೇ ಎದ್ದು ಬಂದು, ಆತುರದಿಂದ ಓಲೆಯನೊಡೆದು, ಮನದಲ್ಲಿಯೇ ಓದಲು ಮೊದಲು ಮಾಡಿದಳು. ಓಲೆಯನು ಓದುತ್ತ ಹೋದಂತೆ ಶಾಮಲೆಯ ಮೋರೆ ಹಿಗ್ಗಲು ತೊಡಗಿತು. ಕಣ್ಣಲ್ಲಿ ನೀರು ತುಂಬಿ ನಡುವೇ ಅಕ್ಷರಗಳು ಕಾಣದಂತಾದುವು. ಬೆರಳಿನಿಂದ ಕಂಬನಿ ಮಿಡಿದಳು. ಓಲೆಯನೋದಿ ಮುಗಿಸಿದಳು. ಒಮ್ಮೆಲೆ ಸದ್ಗದಿತ ಕಂಠೆಯಾಗಿ ಒತ್ತಿ ಮಾತನಾಡಿದಳು.

"ಅಮ್ಮ ಪರಮಾತ್ಮನು ನಿಜವಾಗಿಯೂ ಕರುಣಾಕರನು. ಅನಾಥಬಂಧುವು. ಆತನು ತನ್ನ ಕರುಣಾಕರತೆಯ ಸಾಕ್ಷಿಯನ್ನು, ಆಗಾಗ ನಮ್ಮ ಅನುಭವಕ್ಕೆ ತಂದುಕೊಡುತ್ತಿದ್ದರೂ ಮತ್ತೆಮತ್ತೆ ವ್ಯರ್ಥವಾಗಿ ನಾವು ಅವನನ್ನು ದೂರಿಕೊಳ್ಳುವೆವು. ..." ಶಾಮಲೆಯು ಇನ್ನೂ ಏನೇನನೋ ಮಾತನಾಡುವವಳಿದ್ದಳು ಸೀತಮ್ಮ ನಡುವೆ ತಡೆದು ನಿಲ್ಲಿಸಿದರು.

"ಶಾಮು! ಏನೆನ್ನುತಿರುವೆಯೇ? ನನಗೇನೂ ನಿನ್ನಮಾತಿನ ಅರ್ಥವಾಗಲೊಲ್ಲದು. ಯಾರ ಪತ್ರವದು? ಅದರಲ್ಲೇನು ಬರೆದಿದೆ?

"ವಿಜಯಪುರದಲ್ಲಿ ನಮ್ಮ ಮನೆಯೊಳಗಿದ್ದನಲ್ಲ! ಜವಾನ ಲಚ್ಚಪ್ಪನ ಮಗ ಗೋವಿಂದ; ಆತನ ಪತ್ರವಿದು"

"ಏನು ಗೋವಿಂದನ ಪತ್ರವೇ? ಏನೆಂದು ಬರೆದಿರುವನು? ಗಟ್ಟಿಯಾಗಿ ಓದು ನೋಡೋಣ" ಶಾಮಲೆಯು ಓಲೆಯನ್ನು ಓದಲು ತೊಡಗಿದಳು.

ಶ್ರೀ.

ವಿಜಯಪುರ
ತಾ॥ ..................

ಪ್ರಿಯ ಮಾತೃಸಮಾನರಾದ ಸೀತಮ್ಮನವರ ಚರಣಸನ್ನಿಧಿಗೆ:—

ಬಾಲಕ ಗೋವಿಂದನು ಮಾಡುವ ಶಿ. ಸಾ. ನ. ವಿ. ವಿ.

ತಾಯೀ!

ತಮ್ಮ ಕಡೆಯ ಸುದ್ದಿ ತಿಳಿಯದೆ ಬಹಳ ದಿನಗಳಾದುವು. ಇಲ್ಲಿಂದ ಹೋದಂದಿನಿಂದ ನಿಮ್ಮ ಕ್ಷೇಮವಾರ್ತೆಯೇ ನನಗೆ ತಿಳಿದಿಲ್ಲ. ವಿದ್ಯಾಭ್ಯಾಸದ ಗೊಂದಲದಲ್ಲಿ ನನಗೆ ಅದನು ತಿಳಿದುಕೊಳ್ಳಲು ಅನುಕೂಲಕಾಲವೂ ದೊರೆಯಲಿಲ್ಲ. ಎಂತಲೇ ನಿಮಗೆ ಓಲೆಗಳನೇ ಬರೆದಿಲ್ಲ. ಇದೊಂದು ನನ್ನ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುವೆನು.

ವಿದ್ಯಾಭ್ಯಾಸಕ್ಕಾಗಿ ನಾನೆಷ್ಟೋ ಕಷ್ಟನಷ್ಟಗಳನು ಸಹಿಸಿದೆನು. ಹಲವು ರೀತಿಯಿಂದ ಹೆಣಗಿದೆನು. ದೇವರ ದಯೆಯಿಂದಲೂ, ತಮ್ಮ ಹರಕೆಯಿಂದಲೂ, ಕಳೆದ ವರ್ಷವೇ ಎಲ್. ಎಲ್. ಬಿ. ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಇದೇ ಊರಲ್ಲಿಯೇ ವಕಾಲತ್ತು ನಡೆಯಿಸುತಿರುವೆನು. ಉದ್ಯೋಗವೂ ಚೆನ್ನಾಗಿ ನಡೆದಿದೆ. ಆಫೀಸಿನಲ್ಲಿಯ ತಾಸಿನ ಗಂಟೆಯನ್ನು ಬಾರಿಸಿ, ಹೊಟ್ಟೆಹೊರೆದುಕೊಳ್ಳಬಹುದಾದ ನನ್ನನ್ನು, ಈ ಯೋಗ್ಯತೆಗೆ ತಂದ ಶ್ರೇಯಸ್ಸೆಲ್ಲವೂ ತಮ್ಮ ಪತಿದೇವರಾದ, ತೀ. ರಾಮರಾಯರದೆ. ಆ ಮಹಾತ್ಮನ ಉಪಕಾರವನ್ನು ತೀರಿಸುವುದಕ್ಕೆ ನನಗೆಂದಿಗೂ ಸಾಧ್ಯವಿಲ್ಲ.

ಮೊನ್ನೆ ಗದುಗಿನಿಂದ ನಮ್ಮ ಮಿತ್ರರೊಬ್ಬರು ಬಂದಿದ್ದರು. ನಿಮ್ಮ ವಿಷಯವಾಗಿ ನಾನು ಅವರನ್ನು ಕೇಳಿದೆ. ಸದ್ಯಕ್ಕೆ ನೀವು ಒಳ್ಳೇ ಕಷ್ಟದಲ್ಲಿರುವಿರೆಂಬುದು ನನಗೆ ತಿಳಿಯಿತು. ಚಿ. ಶಾಮಲೆಯ ಲಗ್ನವೂ ಇನ್ನೂ ಆಗಿಲ್ಲವೆಂಬುದು ಗೊತ್ತಾಯಿತು. ಶಾಮಲೆಯು ನನ್ನ ಧರ್ಮದ ತಂಗಿ. ಅವಳ ಕಲ್ಯಾಣವನ್ನು ಕಟ್ಟಿ ತೀ. ರಾಮರಾಯರಿಂದಾದ ಉಪಕಾರದ ಭಾರವನ್ನು, ಕೊಂಚವಾದರೂ ಕಡಿಮೆ ಮಾಡಿಕೊಳ್ಳಬೇಕೆಂದು ಎಣಿಸಿರುವೆನು. ಅದಕ್ಕಾಗಿಯೇ ಚಿ. ಶಾಮಲಕ್ಕನ ಹೆಸರಿನಿಂದ, ನನ್ನ ಉತ್ಪನ್ನದೊಳಗಿನ ಮೊದಲಿನ ಎರಡು ಸಾವಿರ ರೂಪಾಯಿಗಳನು ತೆಗೆದಿಟ್ಟಿರುವೆನು.

ನಿಮ್ಮನ್ನು ನೋಡಬೇಕೆಂಬ ಹಂಬಲವು ಬಹಳವಾಗಿದೆ. ನಾಡಿದು ಅಂಚೆಯ ಉಗೆಬಂಡಿಯಿಂದ ಗದುಗಿಗೆ ಹೊರಟು ಬರಬೇಕೆಂದು ಗಟ್ಟಿಮಾಡಿರುವೆನು. ಬರುವಾಗ ಶಾಮಲಕ್ಕನಿಗೆ ಕೊಡಲಿರುವ ಹಣವನ್ನೂ ತೆಗೆದುಕೊಂಡು ಬರುವೆನು. ಉಳಿದುದೆಲ್ಲ ಸುಖವಾಗಿದೆ. ಇಂತು ವಂದನೆಗಳು.

ತಮ್ಮ ಹರಕೆಯನಾಶಿಸುವ,

ಗೋವಿಂದ.

ಓಲೆಯನೋದಿಸಿ ಕೇಳಿ, ಸೀತಮ್ಮನ ಮೋರೆ ಹಿಗ್ಗಿ ಇಷ್ಟಗಲವಾಯಿತು. ನಿರಾಶೆಯಿಂದ ತುಂಬಿ ತುಳುಕುತಿದ್ದ ಕಣ್ಣುಗಳಲ್ಲಿ, ಈಗ ಮತ್ತೆ ಆಶೆಯು ಬಂದು ಮನೆ ಮಾಡಿತು. ಎದ್ದು ಬಂದು ಶಾಮಲೆಯನ್ನು ಬಿಗಿಯಾಗಿ ಅಪ್ಪಿಕೊಂಡರು.

"ಧನ್ಯ ಧನ್ಯ ! ದೇವಾ ! ನಿನ್ನ ಲೀಲೆಯು ಅಗಾಧವಾದುದು. ಎಂದಿನ ವಿಜಯಪುರ ! ಎಲ್ಲಿಯ ಗೋವಿಂದ ! ಎಲ್ಲಿಯ ಹತಭಾಗಿನಿಯರಾದ ಈ ಸೀತಮ್ಮ, ಶಾಮಲೆಯರು! ಒಂದರದೊಂದು ಸಂಬಂಧವಿರದ ಸರಪಳಿಯನ್ನು ಅದು ಹೇಗೆ ಒಂದೇ ಕ್ಷಣದಲ್ಲಿಯೇ ಕೂಡಿಸಿದೆ ! ಶಾಮಾ ! ನೋಡಿದೆಯಾ ? ಆ ದೇವರಾಯನ ಅಘಟಿತ ಘಟನೆಯನ್ನು ! ಕಂದಮ್ಮಾ ! ದೈವದೊಡನೆ ಹಿಡಿದ ಕುಸ್ತಿಯಾಟದಲ್ಲಿ ನೀನಿಂದು ನಿಜವಾಗಿಯೂ ಜಯವನ್ನು ಪಡೆದೆಯೆ ! ದುರ್ದೈವವನ್ನು ಕಾಲ ಕೆಳಕ್ಕೆ ಹಾಕಿ ಮೆಟ್ಟುವಂತಹ ಕಸರತ್ತನ್ನು ನೀನೆಲ್ಲಿಂದ ಕಲಿತೆಯಮ್ಮಾ! ಇನ್ನಾದರೂ ಶಶಿಧರನು ನಿನ್ನವನಾಗಬಹುದೇನು ? ಆಗುವನು ! ನಿಜವಾಗಿಯೇ ಆಗುವನು ! ಎಂತಲೇ ವರದಕ್ಷಿಣೆಯ ಹಣಕ್ಕಾಗಿ, ಪರಮಾತ್ಮನು ಈ ಹುಂಡಿಯಪತ್ರವನ್ನು ಬರೆಯಿಸಿ ಕಳುಹಿಸಿರುವನು. ದೇವಾ! ಈ ದೀನೆಯು ಏನು ಮಾಡಿ ಈ ಉಪಕಾರವನ್ನು ತೀರಿಸಬಲ್ಲಳು!" ಸೀತಮ್ಮ ಕಳವಳದಿಂದ ನುಡಿದರು. ಶಾಮಲೆಗಂತೂ ತಾನು ಆನಂದದಲಿರುವೆನೋ? ದುಃಖದಲಿರುವೆನೋ ? ಎಂಬುದರ ಅರಿವು ಉಂಟಾಗಬೇಕಾದರೆ, ಎಷ್ಟೋ ವೇಳೆ ಬೇಕಾಯಿತು.

೮

ಓಲೆ ಬರೆದಂತೆಯೇ ಗೋವಿಂದನು ಗದುಗಿಗೆ ಬಂದು ಬಿಟ್ಟನು. ಅವನೀಗ ವಕೀಲ, ಗೋವಿಂದನೆಂದು ಹೇಗೆ ಕರೆಯುವುದು? "ಗೋವಿಂದರಾಯ" ಎಂದು ಗೌರವದಿಂದ ಕರೆಯಬೇಕು. ಗೋವಿಂದರಾಯನು ಬಂದುದಕ್ಕೆ ಸೀತಮ್ಮನಿಗೂ ಶಾಮಲೆಗೂ ಹಿಡಿಸಲಾರದಷ್ಟು ಹಿಗ್ಗು. ಅಗಲಿ ಹೋದ ಅಣ್ಣನನ್ನು ಕಂಡಂತೆ ಶಾಮಲೆಗೆ ಸಂತೋಷ. ಗೋವಿಂದರಾಯನಿಗೆ ಯಥೋಚಿತ ಆದರೋಪಚಾರವಾಯಿತು. ಸುದಾಮನ ಉಪಾಹಾರ, ವಿದುರನ ಮನೆಯ ಊಟ, ಒಳ್ಳೆ ಸೌಖ್ಯವಾಗಿ ನೆರವೇರಿತು. ಊಟವಾದೊಡನೆಯೆ ಮೂವರೂ ಕೂಡಿ ಕುಳಿತು, ಅದೆಷ್ಟೋ ಮಾತನಾಡಿದರು. ವಿಜಯಪುರವನು ಬಿಟ್ಟು ಬಂದುದನು ಮೊದಲು ಮಾಡಿಕೊಂಡು, ಇದುವರೆಗೆ ನಡೆದಿರುವ ತಮ್ಮ ಕರುಣ ಕಥೆಯನ್ನು, ಸೀತಮ್ಮ ಒಂದನೂ ಬಿಡದೆ ವಿವರಿಸಿ ಹೇಳಿದರು. ಕೇಳಿ ಗೋವಿಂದರಾಯನಿಗೆ ಅಸಹ್ಯವೆನಿಸಿತು. ಕಣ್ಣಿಂದೆ ನೀರು ಸುರಿಯಿತು. ಗೋವಿಂದರಾಯನೂ ತನ್ನ ಚರಿತ್ರೆಯನು ಕತೆಮಾಡಿ ಹೇಳಿದನು. ಕಲಿಯುವುದಕ್ಕಾಗಿ ಅವನು ಸಹಿಸಿದ ಕಷ್ಟ ನಷ್ಟಗಳನ್ನು ಕೇಳಿ, ಸೀತಮ್ಮ, ಶಾಮಲೆಯರೂ ಬೆರಗಾದರು.

ಗೋವಿಂದರಾಯನು ಗದುಗಿನ ತನ್ನ ಮಿತ್ರನನ್ನು ಮೊದಲು ಕರೆಯಿಸಿಕೊಂಡನ ಇಬ್ಬರೂ ಕೂಡಿ ಮಾತನಾಡಿದ ಬಳಿಕ, ಗುಂಡಾಭಟ್ಟನನ್ನು ಅಲ್ಲಿಗೆ ಕರೆಯಿಸಿ,

ದರು. "ಭಟ್ಟರೇ ! ನೀವು ತೋರಿಸಿದ ನೀಚತನದ ಸಲುವಾಗಿ ಕೋರ್ಟಿನಲ್ಲಿ ದೂರು ಹೇಳಿದರೆ ನಿಮ್ಮ ಪರಿಣಾಮವೇನಾಗುವುದೆಂಬುದನ್ನು ಅರಿತಿರುವಿರಾ ! ಸ್ವಾರ್ಥ ಸಾಧಿಸುವುದಕ್ಕಾಗಿ ಎಳೆಯ ಮಗುವನ್ನು ಆ ಹಳೆಯ ಹದ್ದಿನ ಕೊರಳಲ್ಲಿ ಕಟ್ಟಬೇಕೆಂದು ಬಗೆದಿರುವಿರಾ ? ಅಹಹ ! ಎಂತಹ ಬ್ರಾಹ್ಮಣ್ಯವು ನಿಮ್ಮದು ? ಇನ್ನಾದರೂ ಬಿಡಿ ಸ್ವಾಮಿ ! ಇಂತಹ ಮನೆಮುರಕತನವನ್ನು." ಎಂದು ಇಬ್ಬರೂ ಕೂಡಿ ಚನ್ನಾಗಿ ಅವನಿಗೆ ಗದ್ದರಿಸಿದರು. ಶಾಮಲೆಯನ್ನು ವೇಂಕಟರಾಯರಿಗೆ ಕೊಡುವುದಿಲ್ಲವೆಂದು ಹೇಳಿ ಕಳುಹಿಸಿದರು.

ತರುವಾಯ ಅವರಿಬ್ಬರೂ ಕೂಡಿ, ಕೃಷ್ಣನಾಯಕರ ಮನೆಗೆ ಹೋಗಿ, ಅವರಿಗೆ ಎಲ್ಲ ಮಾತನೂ ಸರಿಯಾಗಿ ತಿಳಿಹೇಳಿದರು. ಗುಂಡಾಭಟ್ಟನ ಬಂಡುತನವನ್ನೆಲ್ಲ ಬಣ್ಣಿಸಿ ಹೇಳಿದರು. ಸೀತಮ್ಮ ಶಾಮಲೆಯರ ಸೌಶೀಲ್ಯ ಸದಾಚರಣೆಗಳ ಬಗೆಗೂ ನಂಬುಗೆ ಮಾಡಿಕೊಟ್ಟರು. ಅಲ್ಲದೆ ನೀವು ಹೇಳಿದಷ್ಟು ವರದಕ್ಷಿಣೆಯನ್ನೂ ಕೊಡುವೆವೆಂದರು. ಕೃಷ್ಣನಾಯಕರೂ ಆನಂದದಿಂದ ಒಪ್ಪಿಕೊಂಡರು. ಶಶಿಧರನಿಗೆ ಶಾಮಲೆಯನ್ನು ತೆಗೆದುಕೊಳ್ಳುವೆನೆಂದು ಮಾತುಕೊಟ್ಟರು.

ಅಂದು ಗೋವಿಂದರಾಯನು ಶಾಮಲೆಗೆ, ಶಶಿಧರನಿಗೆ, ಹೇಗೆ ತೋರಿರಬಹುದು! ಪರಸ್ಪರರನ್ನು ಅಗಲಿಸಲೆಂದು ಹೊಂಚುಹಾಕಿಕೊಂಡು ಕುಳಿತಿರುವ, ದುರ್ವಿಧಿಯನ್ನು ದಂಡಿಸಲೆಂದು, ಸ್ವರ್ಗದಿಂದಿಳಿದು ಬಂದ ದೇವದೂತನಂತೆಯೇ ಕಂಡಿರಬಹುದಲ್ಲವೆ!

ಶಾಂತಿಃ ಶಾಂತಿಃ ಶಾಂತಿಃ

ಓಂ ನಲ್

# ಸ್ವಧರ್ಮ

॥ ಜಯಂ ಭದ್ರಂ ಶುಭಂ ಮಂಗಲಮ್ ॥

ವರ್ಷ.-೩' | ಶಕೆ ೧೮೪೮ ಅಕ್ಷಯ ಸಂ॥-ಮಾರ್ಗಶಿರ | ತಿಂ.-೯.

## ಚತುರ್ಮುಖ ಸೌಂದರ್ಯವೇ !

( ಒಂದು ಚಿಲ್ಪಿಕೆಯ ನಾಲ್ವರಿ )

ಮೈಮುಟ್ಟಿ ಮನಮುಟ್ಟಿಬರುವಿ ರೂಪವ ನೋಡಿ ।
ನೀ ಮೂಡಿ ಬುದ್ಧಿಯೊಳು ನಡುವಿ; ರಸವನು ಸವಿಯೆ ।
ಧೀಮೂಢತೆಯನೊಡೆದು ನಿಲ್ಲಿಸುವಿ ಚಿತ್ರವನು ಚಿತ್ರಿಸಿದ
ಬೊಂಬೆಯಂತೆ ॥

ಈ ಮಾತುಗಳ ವಾತ ಕಿವಿಯು ಕುಂಜದಿ ಕೂಗೆ ।
ಸೀಮಾತುಗಳ ಸೊನೆಯು ಸುರಿಸಿ ಎದೆಮುಗುಳಿನಿಂ; ।
ನಾ ಮೂಸೆ ಸೂಸಿದ್ಯೆ ಹಮ್ಮುನೆಮ್ಮದಿಯಿಂದ ಮೈಮರೆಯು
ವಂತೆ ಮಾಡಿ ॥ ೧ ॥

ಜಗದ ಜಗಲಿಯ ಕಟ್ಟೆಯೊಂದೆ ಕಾಲಲಿ ಮೆಟ್ಟಿ ।
ಜಿಗಿಜಿಗಿಯುತಿಹ ಸಪ್ತಸಾಗರಗಳಂ ಕಟ್ಟಿ ।
ನಗೆನಗುತಲೆದ್ದು ಹೊರಬಿದ್ದು ಮೇಲಕ್ಕೇರಿ ಮರುತ
ಲೋಕವನು ಮುಟ್ಟಿ ॥

ದಿಗಿಲೆದ್ದ ಗಾಳಿಗಳ ಗೂಳಿಗಳ ಬಿಗಿದಟ್ಟಿ, ।
ಹಗಲ ಹೆಗಲಿನ ಮೇಲೆಯೊಂದು ಕಾಲನ್ನಿಟ್ಟು, ।
ಮುಗಿಲಿನೊಳು ಮುಗಿಯದಂತಾಗಿ ಮೇಲಕೆ ಸಾಗಿ ನಿಂತೆಯೊ
ವಿರಾಟನಾಗಿ ! ॥ ೨ ॥

ಕಂಡ ರೂಪಕ್ಕಿಂತ ಕಾಣದೊಡವೆಯ ಸೊಬಗು ।
ಉಂಡ ರುಚಿಗಳಿಗಿಂತ ಉಣ್ಣದಮೃತದ ಸವಿಯು ।
ಮಿಂದ ನೀರಿನಕಿಂತ ಮೀಸಲಿರುವಂಥ ನೀರಿಂದ ಬಂದಂಥ ತಂಪು ॥
ಅಂದ ಹಾಡಿನಕಿಂತ ಬಂದ ಹಾಡಿನ ಸೊಗಸು ।
ಬಂದ ಗಂಧಕ್ಕಿಂತ ಬರದ ಹೂವಿನ ಕಂಪು ।
ಅಂದವದು; ಚೆಂದವದು; ಆನಂದಕಂದವದು; ಕಂದದದು ಕುಂದದೆಂದೂ ॥೩॥
ಹೆಸರಾಚೆಗಿರುವ ಚೆಲ್ವಿಕೆಯೆ ನಿನ್ನಯ ಹೆಸರು ।
ಕುಸುರುಕುಶಲತೆಯೆಂದು ಉಸುರಲಳವುಂಟೇನು ? ।
ಎಸೆವೆ ದಶದೆಸೆಗಳಲಿ ಮಸಗಿ ಪೊಸಪೊಸತೆರದಿ ಜಡಜೀವ ಜ್ಯೋತಿಯಿಂದ॥
ಒಸಗೆಯಾಯಿತು ಬಾಳು; ಹೊಸತು ಕಂಡಿತು ಹಾಳು; ।
ಬೆಸಲಾಯಿತೀಗ ಬಯಲೆಲ್ಲ; ಅಹ ! ಬಗೆಸೊಲ್ಲ ।
ಬಸುರು ಹಿಡಿಸದು; ಬಾಯಿಗೇನೊ ಬಂದಿತು ಅಂದೆ "ನಮೊ
ಪರಾತ್ಪರವೆ" ಎಂದು! ॥೪॥

**ಮೋರೆಗುರುತು** :— ಶ್ರೀಕನಕದಾಸರು ತಾವು ಉಂಡ ಕಂಡ ಸೊಬಗು ಯಾವತರದ್ದಿರಬಹುದೆಂಬದನ್ನು ಬಗೆಹರಿಸಲು ಬಯಸಿ, ಒಂದು ಕಾಲಕ್ಕೆ ಹೀಗೆ ಒಡನುಡಿದಿರುವರು:—

ಬಯಲು ಆಲಯದೊಳಗೊ ? ಆಲಯವು ಬಯಲೊಳಗೊ !
ಬಯಲುಆಲಯವೆರಡು ನಯನದೊಳಗೋ ?
ನಯನ ಬುದ್ಧಿಯ ಒಳಗೊ ? ಬುದ್ಧಿ ನಯನದ ಒಳಗೊ ?
ನಯನಬುದ್ಧಿಗಳೆರಡು ನಿನ್ನೊಳಗೊ ಹರಿಯೇ !

ಅಂದಮೇಲೆ ಸೊಬಗು ಒಡವೆಯೊಳಗೂ, ಕಂಡುಕೊಳ್ಳುವ ಕಣ್ಣೊಳಗೂ, ಅರಿವು ತಿಳಿವಿನೊಳಗೂ, ಉಂಡು ನೋಡುವ ಜೀವಾಳದೊಳಗೂ, ಹೊಳೆಯುವದೆಂಬ ಮಾತನ್ನು ಮುಂಡಿಗೆಯ ಮಾದರಿಯಲ್ಲಿ ಹೇಳಿರುವರು. ಇದೇ ಬಗೆಯ ಮಾತನ್ನೇ ಶ್ರೀ.ಅರವಿಂದ ಘೋಷರು ಕಬ್ಬಿಗನ ಕುಸುರಿಯನ್ನು ಬಣ್ಣಿಸುವಾಗ ಹೇಳಿರುವರು. ಕಬ್ಬಿಗನು Sensuous Beauty, Imaginative Beauty, Intellectual Beauty ಮತ್ತು Spiritual Beauty ತೋರಿಸುವನಂತೆ.

ಮೇಲೆ ಹೇಳಿದ ಮಂತ್ರಗಳೊಡನೆ ಎದೆಮುಗುಳಿನ ಕೂಟವನ್ನು ಬೆಳೆಯಿಸಿ ಕಂಡ ಕಂಡ ಒಡವೆಗಳನ್ನು ಉಂಡ ಮಾತಿನಿಂದ ಸೊಲ್ಲಿಸಬೇಕೆಂದು ಕಣ್ಣು-ಒಳಗಣ್ಣು-ಹೊಳೆಗಣ್ಣು-ತಿಳಿಗಣ್ಣುಗಳಿಂದ ಜಗವನ್ನು ನೋಡುವ ಒಂದು ಬಗೆಯ ಕಾವ್ಯಯೋಗಸಾಧನದಿಂದ ಇಲ್ಲಿ ಕವನಗೈದಿರುವೆನು. ಇನ್ನೂ ನನಗೇನು ಸಿದ್ಧಿ ದೊರೆತಿಲ್ಲ. ಇಲ್ಲಿ ಹಣ್ಣುಗಳಿರದಿದ್ದರೂ, ರುಚಿಯುಳ್ಳ ಕಾಯಿಗಳೂ ಪಾಡಿಗೆ ಬಂದ ಹಣ್ಣುಗಳೂ ಇರುವವೆಂದು ನನ್ನ ನಂಬಿಗೆಯಿದೆ. ಏನೆಂಬದನ್ನು ರಸಜ್ಞರೇ ಬಲ್ಲರು; ನಾಲ್ಮೊಗದ ನಲ್ಲೆ ನಾಲ್ಕು ಪರಿಯಾಗಿ ಬಿಚ್ಚಿ ತೋರಿರುವದರಿಂದ ಇದು ನಾಲ್ವರಿ.

ಅಂಬಿಕಾತನಯದತ್ತ

---

ಕವಿ :— ಕವಿಯ ಹೃದ್ಗತವನ್ನೂ, ಕವಿತೆಯ ಹೃದ್ಗತವನ್ನೂ ಸಾಕಲ್ಯದಿಂದ ತಿಳಿಯಲಪೇಕ್ಷಿಸುವವರು 'ನಾಲ್ವರಿ' ಯೆಂದರೇನೆಂಬುವನ್ನು ಕುರಿತು ಬರೆದ ಚಿಕ್ಕ ಮುನ್ನುಡಿಯನ್ನು ಕೂಲಂಕಷವಾಗಿ ಓದಬೇಕು. ಕಾವ್ಯಯೋಗಿಯ ದರ್ಶನವಿಷಯವು ನಾಲ್ಕು ಪರಿಗಳಿಂದ—ಪರೆಗಳಿಂದ ಗುರುತಿಸಲ್ಪಡಬಲ್ಲುದೆಂದು ಇಲ್ಲಿ ಪ್ರತೀತಿಯ ಮಾತು ಗಳಲ್ಲಿ ಹೇಳಿದಂತೆ, ಆ ಪರಿಗಳನ್ನೂ—ಪರೆಗಳನ್ನೂ ಕವಿಯು ಈ ಕವಿತೆಯಲ್ಲಿ ಒಂದೊಂದಾಗಿ ಉಚ್ಚಿ ಬಿಚ್ಚಿ ತೋರಿಸಿದ್ದಾನೆ.

ಕವಿಯ, ಕಾವ್ಯದ ಲಕ್ಷಣಗಳು ಯಾವವೆಂಬುವು ವಾದಗ್ರಸ್ತವಾದ ವಿಷಯ ವಾಗಿದೆ. ಪಂಡಿತಪಾಮರರನ್ನು ರಂಜಿಸುವಂತೆ, ಕಾಂತೆಯ ಮಧುರಭಾಷಣದಂತೆ ಹಿತವೂ ಮಿತವೂ ಆಗಿ, ಲೌಕಿಕದಲ್ಲಿ ಲೌಕಿಕವನ್ನೂ, ಪರಲೋಕದಲ್ಲಿ ಭೋಗೈಶ್ವರ್ಯಗ ಳನ್ನೂ, ಒದಗಿಸಿಕೊಡುವಂತಹದೇ ಕಾವ್ಯವೆಂಬುದು ಪ್ರಚಲಿತಮತವಾಗಿದೆ. ಆದರೆ ಇಷ್ಟು ಇಲ್ಲಿ ಹೇಳಬಹುದು. ಕಾವ್ಯಯೋಗಾರುರುಕ್ಷುವು ಇಹಾಮುತ್ರಗಳಲ್ಲಿ ನಿರೀ ಹನು; ಪ್ರಸಂಗಬಂದಾಗ ಒರಟು ಒಗರು ಮಾತುಗಳಿಂದಲೂ ವಿಭೂತಿಯ ದಿವ್ಯಭಾವ ವನ್ನು ತೋರಬಯಸುವವನು. ಆತನದು ನಿರ್ಹೇತುಕವಾದ ಆನಂದ. ವೇದಾಂತಿ ಯಂತೆ, ಇದೆಲ್ಲ ಸುಳ್ಳು—ಅದು ಮಾತ್ರ ದಿಟವೆಂದೆನ್ನುವ ಪ್ರವೃತ್ತಿ ಆತನದಲ್ಲ. ನಿಃಸೀ ಮದ ದರ್ಶನಾನುಭೂತಿಗಳನ್ನು ಛಂದೋಮಯವಾಣಿಯಿಂದ ಹೊರಹೊಮ್ಮಿಸುವದೇ ಆತನ ಕಾರ್ಯ. ಉಪನಿಷತ್ಕಾಲೀನ ಋಷಿಗಳು ಇದನ್ನು ಬಲ್ಲವರಾಗಿದ್ದರು. ಅವರ ದಿವ್ಯವಚನಗಳಲ್ಲಿ ವಾದದ ಜಂಜಾಲವಿಲ್ಲ; ತಾರ್ಕಿಕರ ಪಕ್ಷಾಭಿಮಾನವಿಲ್ಲ; ಮತಪ್ರ ಣಾಲಿಕೆಯ ಏಕದೇಶೀಯತೆಯಿಲ್ಲ; ಅಪರಿಪಕ್ವತೆಯ ನಿದರ್ಶಕವಾದ ಅನಿಶ್ಚಿತತೆಯಿಲ್ಲ. ಬಂದ ಅನುಭವವನ್ನು ಬಂದ ಮಾತಿನಲ್ಲಿ ಹೇಳುವದನ್ನಷ್ಟು ಅವರು ನೋಡುತ್ತಿದ್ದರು.

ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ ಬಹುಧಾಯಃ ಕರೋತಿ ।
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ ॥
ತಮೇವ ಭಾಂತಂ ಅನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥

ಎಂಬೀ ಮೊದಲಾದ ಕಾಠಕೋಪನಿಷತ್ತಿನಲ್ಲಿನ ಮಂತ್ರಗಳು ಮೇಲಿನ ಮಾತುಗಳಿಗೆ ಸಾಕ್ಷಿಯಾಗಿವೆ.

ಆಧುನಿಕ ಕವಿಗಳ ಕೃತಿಗಳಲ್ಲಿ ಕಾವ್ಯವಿಷಯಕವಾದ ಈ ದೃಷ್ಟಿಯು ಮತ್ತೆ ಪ್ರಾದುರ್ಭವಿಸಹತ್ತಿದೆ. ಅನಿರ್ವಚನೀಯದ ಅನುಭೂತಿಯೂ ಆನಂದವೂ ಮತ್ತೆ ಕಾವ್ಯದಲ್ಲಿ ಧ್ವನಿತವಾಗಹತ್ತಿವೆ. ದೈವತದೊಡನೆ ಸಾಮರಸ್ಯವನ್ನು ಉಂಟುಮಾಡಿ ಕೊಡುವದೇ ಯೋಗದ ಗುರಿ. ಅನುಭಾವಿಗಳು ಗುರುತಿಸಿದ ಅನೇಕ ಯೋಗಗಳಲ್ಲಿ ಕಾವ್ಯಯೋಗಕ್ಕೆ ವಿವಿಕ್ತವೂ, ವ್ಯತಿರಿಕ್ತವೂ, ವಿಶಿಷ್ಟವೂ, ಪ್ರತ್ಯೇಕವೂ ಆದ ಸ್ಥಾನವೊಂ ದಿದೆಯೆಂಬುದನ್ನು ಈ ಕವಿತೆಯು ಸುಸ್ಪಷ್ಟವಾಗಿ ವ್ಯಕ್ತಪಡಿಸುತ್ತಿದೆ. ನಿಮಿಷನಿಮಿ ಷಕ್ಕೆ ನವನವೋನ್ಮೇಷಗಳನ್ನು ತೋರಿಸುವ ಪ್ರತಿಭೆಯು ಅಲೌಕಿಕರೂಪವು ಅಂತಶ್ಚಕ್ಷು

ಗಳಿಗೆ ಹೊಳೆದೊಡನೆ, ಆ ಹೊಳೆವನ್ನು, ಯಾವ ಶಬ್ದಗಳಲ್ಲಿ ಪಡಿಮೂಡಿಸಲಿ? ಎಂಬ ಯೋಚನೆಗೊಳಗಾಗಿ, ಕವಿಯು ಆ ಪ್ರತೀತಿಗೆ ನಾಲ್ಕು ಅಂತಸ್ತುಗಳನ್ನು ಕಲ್ಪಿಸಿದ್ದಾನೆ. ಆನಂದಸೌಂದರ್ಯಗಳ ಅದ್ವೈತಮೈತ್ರಿಯು ತುರೀಯ ದರ್ಶನವು ವಾಙ್ಮನಗಳಿಗೂ ಅಗೋಚರವಹುದಾದರೂ (೪ನೆಯ ನುಡಿ), ಅದರಿಂದಾದ ಅನಿರ್ದೇಶ್ಯವಾದ ಸುಖವು (೩ ನೆಯ ನುಡಿ) ಬುದಿಯನ್ನು ಉದ್ಬುದ್ಧವನ್ನಾಗಿಸದೆ, ಗುಹಾಗ್ರಂಥಿಭೇದಕವಾದ ಪ್ರಶಾಂತ ಪ್ರಕಾಶವನ್ನು ಪಸರಿಸದೆ ಹೋಗದು; (೨) ಹೃದ್ಬಂಧಗಳನ್ನು ಕಿರುಳ್ಗೆನಿಸದೆ, ಚಿತ್ತವೃತ್ತಿಗಳನ್ನು ಬಿತ್ತರಿಸದೆ, ಕಲ್ಪನೆಯ ಕಣ್ಣನರಳಿಸದೆ, ಜೀವಭಾವಗಳನ್ನು ಉತ್ತಾನಿತವಾಗಿಸದೆ ತೆರಳದು; (೧) ಮೈಯ ಜುಮ್ಮೆನಿಸದೆ, ಅಂಗಾಂಗಗಳಲ್ಲಿನ ರೋಮರೋಮಗಳನ್ನು ಸಿಲ್ಲಿಸದೆ, ನಾಳನಾಳಗಳಲ್ಲಿನ ನೆತ್ತರದಲ್ಲಿ ನೃತ್ಯವನ್ನೆಸಗದೆ ಬಿಡದು. ಈ ರಸಾನುಭೂತಿಯು ಮೊದಲನೆಯ ಅವಸ್ಥೆಯು (೧ನೆಯ ನುಡಿ)—Sensuons apprehension of Beauty ಎಂದು ಶ್ರೀ ಅರವಿಂದರು ಕರೆದುದು ಕೀಟ್ಸ ಕೋಲ್ರಿಜಿ (Keats, Coleridge) ಕವಿಗಳ ಕಾವ್ಯದ ಬಂಡವಾಳವಾಗಿದೆ. ಎರಡನೆಯ ಅವಸ್ಥೆಯು (೨ನೆಯ ನುಡಿ) Expansion of the imaginatvie faculties, ಶೆಲ್ಲಿ ಶೇಕ್ಸಪಿಯರ ( Shelley; Shakespeare )ರ ಕವಿತೆಯಲ್ಲಿ ಪ್ರತಿಬಿಂಬಿತವಾಗಿದೆ. ಮೂರನೆಯದು(೩ನೆಯ ನುಡಿ)–Spiritual illumination, ವಿಜ್ಞಾನಕೋಶದಲ್ಲಿನ ಕಾಣ್ಕೆಯು ವರ್ಡ್ಸ್‌ವರ್ತ ( Wordsworth )ನ ಮೊಸಲಸೊತ್ತಾಗಿದೆ. ನಾಲ್ಕನೆಯದು (೪ನೆಯ ನುಡಿ):—The soul's inmost and intimate experiences, ಏ. ಈ.( Æ ) ಪ್ರಮುಖ ಆಧುನಿಕ ಕವಿಗಳಲ್ಲಿ ಕೆಲವರಲ್ಲಿ ಧ್ವನಿತವಾಗುತ್ತಿದೆ.

ಇಂತು ಸಮೀಪಗಳಲ್ಲಿ ಸಮೀಪವನ್ನೂ ನಿಃಸೀಮಗಳಲ್ಲಿ ನಿಃಸೀಮವನ್ನೂ (The tangible, the intimate and the remote, the ineffable) ಸೇತುವೆ ಕಟ್ಟಿ ಕೂಡಿಸುವದೇ ಕಾವ್ಯಯೋಗದ ಕಾರ್ಯ. ಈ ದರ್ಶನವು ಸಕೃತ್ಕಾಲಕ್ಕೆ ಅನುಭವವೇದ್ಯವೂ ವಾಙ್ಮನೋತೀತವೂ ಅಹುದು. ನಿಮಿಷನಿಮಿಷಕ್ಕೆ ಅನಿಸಿ ಅನಿಸಿ ಹೋಗುತ್ತಿದೆಯೆಂಬುದೇ ಅದರ ಅಸ್ತಿತ್ವಕ್ಕೆ ಸಾಕ್ಷಿ. ಅನಿಸುತ್ತಿದೆಯೆಂಬುದನ್ನು ಅನ್ನಹೋದರೆ ಅನ್ನುವದಾಗದು. ಅದುವೆ ನಮ್ಮ ಬುದ್ಧಿಶಕ್ತಿಗಳಲ್ಲಿನ ವಿಕಾಸಶಕ್ತಿ, ಜೀವವನ್ನು ಉನ್ಮುಖವನ್ನು ಮಾಡುವ ಉನ್ಮನೀಪ್ರಾತಿಭಶಕ್ತಿ. ಇಂತು ಅಡಿಯಿಂದ ಮುಡಿಯುವರೆಗೆ ಪುರುಷೋತ್ತಮನ ವಿರಾಟ್‌ಸ್ವರೂಪವನ್ನು ಹೊಗಳುವದೇ ಕಾವ್ಯಯೋಗಿಯ ಕಾರ್ಯ. ಕವಿಯಲ್ಲಿ ತೋರಿಸಿದ ಕಾವ್ಯಯೋಗ ಸೋಪಾನದ ಚತುಃಸ್ಥಲಗಳನ್ನು ಭಗವದ್ಗೀತೋಪನಿಷತ್ತುಗಳಲ್ಲಿ ಈ ಪರಿಯಾಗಿ ಗುರುತಿಸಿದೆ:—

इन्द्रियाणि पराण्याहुरिन्द्रियेभ्यः परं मनः।
मनसस्तु परा बुद्धिर्यो बुद्धेः परतस्तु सः।

—ಸೋಮೇಶಶರಣ]

# ಉಪನಿಷತ್ಕಾಲದಲ್ಲಿಯ ಸ್ತ್ರೀಯರ ಸ್ಥಿತಿಗತಿ.

ಲೇಖಕರು:—ಜೋಶೀ ಶಂಕರರಾಯರು.

ಸ್ತ್ರೀಯರ ಸ್ಥಾನವು.— ಹೆಂಗಸು ಜಾತಿಯೆಂದರೆ ಹೀನ, ಪಾಪಮಯ, ನರಕಕ್ಕೆ ಕಾರಣವೆಂಬ ಸೊಲ್ಲು ಉಪನಿಷತ್ತುಗಳಲ್ಲಿ ಕಂಡುಬರುವದಿಲ್ಲ. ಹೆಣ್ಣಿನ ಹೆಣ್ತನವೇ (ಇಹಲೋಕದ) ಎಲ್ಲ ಆನಂದಗಳಿಗೂ ಮೂಲಕಾರಣವು, ಎಂದು ಋಷಿಗಳು ಸ್ವಾನುಭವದಿಂದ ಸಾರಿದ್ದಾರೆ. ಪ್ರಜೋತ್ಪಾದನ ಕರ್ಮವು ಪಾಪಮಯವೆಂದು ತಿಳಿದಂತೆ ತೋರಲಿಲ್ಲ. ಸ್ತ್ರೀಪುರುಷಸಂಯೋಗಕ್ರಿಯೆಯನ್ನೇ ಒಂದು ಯಜ್ಞಕ್ಕೆ ಹೋಲಿಸಿ ಅದಕ್ಕೆ ಪಾವಿತ್ರ್ಯವನ್ನು ಕೊಟ್ಟಿದ್ದಾರೆ. ಈ ಅಗ್ನಿಸ್ವರೂಪದಲ್ಲಿ ಕೊಟ್ಟ ರೇತಸ್ಸು ದೇವರಿಗೆ ಮುಟ್ಟುತ್ತದೆ; ಆ ಆಹುತಿಯಿಂದಲೇ ಗರ್ಭವು ಉಂಟಾಗುತ್ತದೆ, ಎಂದು ಹೇಳಿರುವರು. ಮನುಷ್ಯನ ಎಲ್ಲ ವ್ಯವಹಾರಗಳೂ ಯಜ್ಞಸ್ವರೂಪದವು ಎಂದು ಹೇಳುವಾಗ, ಈ ಕ್ರಿಯೆಯನ್ನೂ ಸ್ಪಷ್ಟವಾಗಿ ಅದರಲ್ಲಿ ಎಣಿಸಿದ್ದಾರೆ. ಸ್ತ್ರೀಭೋಗವನ್ನು ಕೇವಲ ಕಾಮುಕರಾಗಿ ಇಂದ್ರಿಯ ತೃಪ್ತಿಗಾಗಿಯೇ ಮಾಡುತ್ತಿದ್ದಿಲ್ಲ. ಗಂಡಹೆಂಡರು ಮೂಢರಂತೆ ಕಾಮವಿಕಾರಿಗಳಾಗಿ ಸೇರಿಕೊಂಡಿರುವಾಗ, ಅವಿಚಾರದೊಳಗೆ ಅಂಥ ಇಂಥ ಎಂಥದಾದರೊಂದು ಕುನ್ನಿ ಹುಟ್ಟುವುದು ಅವರಿಗೆ ಸೇರುತ್ತಿದ್ದಿಲ್ಲ. ಸುಪುತ್ರರು ವೀರಪುತ್ರರೇ ತಮಗಾಗಬೇಕೆಂದು ಸಂಕಲ್ಪಶಕ್ತಿಯಿಂದ ಮಂತ್ರತಂತ್ರಗಳ ಸಹಾಯದಿಂದ ಪ್ರಯತ್ನಿಸುತ್ತಿದ ರು. ತೇಜಸ್ವಿಗಳಾದ ಮಕ್ಕಳು ಅಳದಕ್ಕಿ, ಹೇಡಿ, ಪುಕ್ಕಿ, ಕೈಲಾಗದ ತಾಯಿಯಿಂದ ಎಂದೆಂದಿಗೂ ಹುಟ್ಟಲಾರವೆಂದು ಪೂರಾ ಮನಗಂಡಿದ್ದರು. ಆದ್ದರಿಂದ ಒಳ್ಳೇ ಉತ್ತಮೋತ್ತಮ ಮಕ್ಕಳನ್ನುಬಯಸುವವಳಿಗೆ ಹೀಗೆ ಆಗಲು ಹೇಳುತ್ತಿದ್ದರು; ಹುರುದುಂಬಿಸುತ್ತಿದ್ದರು; ಪ್ರೋತ್ಸಾಹ ಮಂತ್ರ ಹೇಳುತ್ತಿದ್ದರು. ಅದಾವದೆಂದರೆ "ನೀನು ಇಲಾ ಹಾಗೂ ಮೈತ್ರಾವರುಣಿಗಳಂಥ ಶ್ರೇಷ್ಠಳಾದ ಹೆಂಗಸು ಇದ್ದೀ. ವೀರಳೇ, ವೀರನನ್ನು ಹಡೆ. ನೀನು ವೀರವತಿಯಾಗು; ನೀನು ನಮ್ಮನ್ನು ವೀರರನ್ನು ಮಾಡು."ಪ್ರಜೋತ್ಪಾದನ ಮಹತ್ವವನ್ನೂ ತಾಯಿತಂದೆಗಳ ಮೇಲಿರುವ ಹೊಣೆಯನ್ನೂ ಅವರು ಚನ್ನಾಗಿ ಅರಿತಿದ್ದರು. ಗಂಡು ಅಥವಾ ಹೆಣ್ಣು ಹುಡುಗರು ತಮಗಾಗಲೆಂದಿಷ್ಟೇ ಅವರು ಬೇಡಿಕೊಳ್ಳುತ್ತಿದ್ದಿಲ್ಲ. ಪಂಡಿತನೂ, ವಿಗೀತನೂ, ಸಭೆಗಳಿಗೆ ಹೋಗುವವನೂ, ಪ್ರಿಯ ಹಾಗೂ ಹಿತಕರವಾದ ನುಡಿಗಳುಳ್ಳವನೂ ಆದ ಮಗನು ಆಗಲೆಂದು ಬಯಸುತ್ತಿದ್ದರು. ಹೆಣ್ಣು ಹುಟ್ಟಿದರೆ ಹಾಳಾಯಿತೆಂಬ ಕಲ್ಪನೆಯು ಇದ್ದಂತೆ ತೋರಲಿಲ್ಲ. ಹಾಗೂ ಹೆಣ್ಣು ಅಶಿಕ್ಷಿತವೇ ಇರಬೇಕೆಂದೂ ಅವರು ತಿಳಿದಿದ್ದಿಲ್ಲ. ಪಂಡಿತೆಯಾದ ಮಗಳು ಹುಟ್ಟಲೆಂದು ಸಂಕಲ್ಪಮಾಡುತ್ತಿದ್ದರು. ಇದರಂತೆ ಚೆಂದ ಚೆಲುವು

ಗಳ ಸಂಬಂಧದ ಸಂಕಲ್ಪಗಳೂ ಇವೆ. ಹಾಗೂ ಎಂಥ ಮಕ್ಕಳು ಬೇಕಾದರೆ ಏನೇನು ಪ್ರಕ್ರಿಯೆಗಳನ್ನು ಮಾಡಬೇಕೆಂದು ವಿವರಿಸಿ, ಹೋಮಹವನಾದಿಗಳ ವಿವರವನ್ನೂ ಹೇಳಿದ್ದಾರೆ.

ಸರ್ವಸಾಧಾರಣವಾಗಿ ಸ್ತ್ರೀಯರ ಮುಖ್ಯ ಕಾರ್ಯಕ್ಷೇತ್ರವು, ಗೃಹವೆಂದೇ ಆಗಿನವರು ನಿಶ್ಚಯಿಸಿದ್ದರು. ಪತಿಯ ಕಾರ್ಯದಲ್ಲಿ ನೆರವಾಗುವುದು; ಆತನ 'ಪರಿಚಾರಿಣಿ' ಆಗಿರುವುದೇ ಸಾಧಾರಣವಾಗಿ ಅವರ ಕೆಲಸವಾಗಿತ್ತು. ತತ್ವಜ್ಞಾನ, ಶಾಸ್ತ್ರಗಳ ಆಳವಾದ ನೀರಿಗೆ ಹೋಗದೆ, ಬದುಕು ಬಾಳ್ವೆಯಲ್ಲಿ ಸಮಾಧಾನ ಹಚ್ಚಿಕೊಂಡು ಇರುವುದೇ ಸ್ತ್ರೀಸ್ವಭಾವವೆಂದು ಅವರು ಕಂಡು ಹಿಡಿದಿದ್ದರು. ಯಾಜ್ಞವಲ್ಕ್ಯರು ಗೃಹಸ್ಥಾಶ್ರಮವನ್ನು ಮುಗಿಸಿಕೊಂಡು ಮುಂದಿನ ಆಶ್ರಮದ ಸಿದ್ಧತೆಗಾಗಿ ಹೊರಡುವಾಗ, ತಮ್ಮಿಬ್ಬರು ಹೆಂಡರಿಗೆ ಇದ್ದು ಬಿದ್ದುದನ್ನೆಲ್ಲ ಹಂಚಿಕೊಟ್ಟು ಹೋಗುವವರಿದ್ದರು. ಆಗ ಇಬ್ಬರನ್ನೂ ಕರೆದು, 'ಇದನ್ನು ತಕ್ಕೊಂಡು ನೀವಿಬ್ಬರೂ ಒಟ್ಟಾಗಿ ಇದ್ದು ಬಿಡಿರಿ' ಎಂದು ಯಾಜ್ಞವಲ್ಕ್ಯರು ಹೇಳಿದಾಗ ಕಾತ್ಯಾಯನಿ ಎಂಬವಳು, ಗಂಡನ ಮಾತಿಗೆ ಸುಮ್ಮನಿದ್ದು ಮೂಕಸಮ್ಮತಿಯನ್ನು ಕೊಟ್ಟಿದ್ದಾಳೆ. ಆಗ ಕಾತ್ಯಾಯನಿಗೆ 'ಹೆಂಗಸರ ಬುದ್ಧಿಯವಳು' ಎಂದು ಉಪನಿಷತ್ಕಾರರು ಅಂದಿರುವರು. ಆದರೆ ಸ್ತ್ರೀಯರು ಜ್ಞಾನಿಗಳಾಗಲಿಕ್ಕೆ ಉಪನಿಷತ್ಕಾರರ ಯಾವ ಪ್ರತಿಬಂಧವೂ ಇದ್ದಂತೆ ಕಂಡುಬರುವದಿಲ್ಲ. ಪಂಡಿತೆಯಾದ ಮಗಳು ಹುಟ್ಟಲೆಂದು ಬೇಡಿಕೊಳ್ಳುತ್ತಿದ್ದರೆಂದು ಹಿಂದೆ ಹೇಳಿದ್ದೇವೆ. ತಂದೆಯು ಮಗಳಿಗೆ ಉತ್ತಮವಾದ ಶಿಕ್ಷಣ ಕೊಡುತ್ತಿದ್ದನು. ಗಂಡಂದಿರಿಗೂ ತಮ್ಮ ಹೆಂಡತಿಯು ವಿದ್ಯಾವತಿಯಾದರೆ ಅದರಿಂದ ತಮ್ಮ ಅಪಮಾನವಾದೀತೆಂಬ ಕೀಳು ಕಲ್ಪನೆಗಳು ಬಂದಿದ್ದಿಲ್ಲ. ಪಂಡಿತೆಯಾದ ಹೆಂಡತಿಯು ಹುಂಬ ಹೆಂಡತಿಗಿಂತ ಯಾರಿಗೆ ತಾನೆ ಹೆಚ್ಚು ಸೇರಲಿಕ್ಕಿಲ್ಲ? ಜ್ಞಾನವನ್ನು ಪಡೆಯಬೇಕೆಂಬ ಅಪೇಕ್ಷೆಯನ್ನು ತೋರಿಸಿದರೆ ಗಂಡಂದಿರು ಆ ಅಪೇಕ್ಷೆಯನ್ನು ತಿರಸ್ಕರಿಸುತ್ತಿದ್ದಿಲ್ಲ. ಯಾಜ್ಞವಲ್ಕ್ಯನು ಪರಿವ್ರಾಜಕನಾಗಲು ಸಿದ್ಧನಾದಾಗ ಮೈತ್ರೇಯಿಯು 'ನಾನು ಈ ದುಡ್ಡು ದುಗ್ಗಾಣಿ ತಕ್ಕೊಂಡು ಏನು ಮಾಡಲಿ? ಇದೇನು ನನ್ನ ಸಂಗಡ ಬರುವುದೇ ? ನನ್ನ ಉದ್ಧಾರವು ಯಾತರಿಂದ ಆದೀತೋ ನೀವು ಏನನ್ನು ತಿಳಿದಿರುವಿರೋ ಅದನ್ನೇ ನನಗೆ ಹೇಳಿರಿ,' ಎಂದು ಕೇಳಿದಾಗ ಜ್ಞಾನೇಚ್ಛುವಾದ ತನ್ನ ಹೆಂಡತಿಗೆ "ನೀನು ನನಗೆ ಮೊದಲಿಗಿಂತಲೂ ಪ್ರಿಯಳಾದೆ, ಬಾ; ಕುಳ್ಳಿರು; ಹೇಳುತ್ತೇನೆ ಕಿವಿಗೊಟ್ಟು ಕೇಳು " ಎಂದು ನುಡಿದನು. ಹೆಂಗಸರ ಬುದ್ಧಿ ಮೊಳಕಾಲ ಕೆಳಗೆ ಎಂದು ಹೀಯಾಳಿಸಿಲ್ಲ. ಉಪನಿಷತ್ಕಾರರು ಇವಳಿಗೆ 'ಬ್ರಹ್ಮವಾದಿನಿ' ಎಂದು ಸನ್ಮಾನಿಸಿ ಹೇಳಿದ್ದಾರೆ.

ವಚಕ್ನುವಿನ ಮಗಳಾದ ಗಾರ್ಗಿ ಎಂಬವಳು ಬಹಳ ಪಂಡಿತೆಯಾಗಿದ್ದಳು. ಅವಳು ವಾದಕ್ಕಾಗಿ ಸರಿಜೋಡಿ ವಿದ್ವಾಂಸರನ್ನು ಹುಡುಕುತ್ತ ನಾಡಿನಿಂದ ನಾಡಿಗೆ ವಿದ್ವತ್ಪರಿಷತ್ತುಗಳಿಗೆ ಹೋಗುತ್ತಿದ್ದಂತೆ ತೋರುತ್ತದೆ. ಇಂಥ ವಿದ್ಯಾವತಿಯಾದವ

ಹೆಂಗಸರೊಡನೆ ವಿಚಾರವಿನಿಯಮ ವಾದಗಳನ್ನು ಮಾಡುವುದರಲ್ಲಿ, ತಮ್ಮ ಯೋಗ್ಯತೆಗೆ ಕುಂದಕ ಬರುವದೆಂದು ಪಂಡಿತರು ಯಾರೂ ತಿಳಿಯುತ್ತಿದ್ದಿಲ್ಲ. ವಿದ್ವಾಂಸರ ಪರಿಷತ್ತುಗಳಲ್ಲಿ ಪಂಡಿತೆಯರಿಗೂ ತಕ್ಕ ಸ್ಥಳವು ಸಿಗುತ್ತಿತ್ತು. ಹಾಗೂ ವಿದ್ವಾಂಸರು ಅವರೊಡನೆ ವಾದಮಾಡುತ್ತಿದ್ದರು. ಯಾಜ್ಞವಲ್ಕ್ಯನೊಡನೆ ವಾದಮಾಡಲು ಗಾರ್ಗಿಯು ಜನಕನ ವಿದ್ವತ್ಪರಿಷತ್ತಿಗೆ ಎರಡು ಸಲ ಬಂದಿದ್ದಾಳೆ. ಯಾಜ್ಞವಲ್ಕ್ಯನಿಗೆ ಜಾಣತನವ ಹಲವು ಪ್ರಶ್ನೆಗಳನ್ನು ಕೇಳಿ, ಅವನನ್ನು ಒರೆಗೆ ಹಚ್ಚಿದ್ದಾಳೆ. (ಬೃ. ೩–೬ ಮತ್ತು ೮)

ಸ್ತ್ರೀಯರು ಗುರುಕುಲಗಳಲ್ಲಿ ನಿಂತು ಗಂಡು ಹುಡುಗರೊಡನೆ ವಿದ್ಯಾಭ್ಯಾಸ ಮಾಡಿದ್ದುದರ ಉಲ್ಲೇಖವಿಲ್ಲ. ಅವರಿಗೆ ತಂದೆ ಅಥವಾ ಮದುವೆಯಾಗಿದ್ದರೆ ಗಂಡನಿಂದಲೇ ವಿದ್ಯೆಯು ಕಲಿಸಲ್ಪಡುತ್ತಿರಬೇಕು.

ಸ್ತ್ರೀಯರ ವರ್ಚಸ್ಸು ಗಂಡಸರ ಮೇಲೆ ಇದ್ದೇ ಇದ್ದಿಲ್ಲವೆಂದು ಹೇಳಲಿಕ್ಕಾಗುವದಿಲ್ಲ. ಗಂಡಂದಿರ ಕೆಲಸದಲ್ಲಿ ತಮ್ಮ ಅಭಿಪ್ರಾಯಗಳನ್ನೂ ಹೇಳಲಿಕ್ಕೆ ಹಿಂದೆಗೆಯುತ್ತಿದ್ದಿಲ್ಲ. ಜಾಬಾಲ ಸತ್ಯಕಾಮರು ತಮ್ಮ ಶಿಷ್ಯನಿಗೆ ಇನ್ನೂ ಜ್ಞಾನ ಹೇಳದಿರುವುದನ್ನು ಕಂಡು ಅವರ ಹೆಂಡತಿಯು, ಶಿಷ್ಯನು ಬಹಳ ಕಾದಿರುವನು ಕಾರಣ ಅನುಗ್ರಹಿಸಬೇಕೆಂದು ಹೇಳಿದ್ದಾಳೆ. ರೈಕ್ವನೆಂಬ ತತ್ವಜ್ಞನು ಜಾನಶ್ರುತಿ ರಾಜನಿಗೆ ಆತನು ಮೊದಲು ೬೦೦ ಆಕಳು, ಹೆಸರಗತ್ತೆಯ ತೇರು, ಬಂಗಾರಗಳನ್ನು ಕೊಟ್ಟರೂ ಜ್ಞಾನ ಹೇಳಲಿಲ್ಲ. ಬಳಿಕ ಅರಸನು ಸಾವಿರ ಆಕಳು, ಬಂಗಾರ, ಮೊದಲಿನ ತೇರುಗಳನ್ನೂ ತನ್ನ ಮಗಳನ್ನೂ ಒಯ್ದನು. ಹಾಗು ಮುನಿಯನ್ನು ತನ್ನ ಅಳಿಯನನ್ನಾಗಿ ಮಾಡಿಕೊಂಡು ಆತನಿಗೆ ಇರಲು ಒಂದು ಊರನ್ನು ಕೊಟ್ಟನು. ರೈಕ್ವನು ತನ್ನ ಹೆಂಡತಿಯು ಸಲುವಾಗಿ ಬಳಿಕ ಮಾವನಿಗೆ (ಜಾನಶ್ರುತಿಗೆ) ಜ್ಞಾನವನ್ನು ಹೇಳಿದ್ದಾನೆ! (ಛಾಂ. ೪. ೨.)

ಸಮಾಜದಲ್ಲಿ ತಾಯಿಗೆ ಎಲ್ಲಕ್ಕೂ ಶ್ರೇಷ್ಠವಾದ ಸ್ಥಾನವು ಇತ್ತು. ತಂದೆ, ಗುರು ಈ ಮೊದಲಾದವರಿಗಿಂತ ಮೊಟ್ಟಮೊದಲಿಗೆ ' ಮಾತೃದೇವೋಭವ ' ಎಂದು ಕಟ್ಟಪ್ಪಣೆ ಕೊಟ್ಟಿದ್ದಾರೆ. ( ತೈ ೧–೧೧–೧ )

ಪುತ್ರವಾತ್ಸಲ್ಯವು ಕಡಿಮೆಯಿದ್ದಿಲ್ಲ. ಮಕ್ಕಳಿಗೆ ಅಕ್ಕರದಿಂದ ಮುದ್ದಿಟ್ಟು ಮುಂಡಾಡುತ್ತಿದ್ದರು. ಮಗುವನ್ನು ಅಪ್ಪಿಕೊಂಡು ಪಾಪಾ ಕೊಡುವಾಗ ಕಕ್ಕುಲತೆಯು ಹೆಚ್ಚಿ ಎದೆಯೊಳಗಿಂದ ಹುಂಕಾರವು ಹೊರಡುತ್ತಿತ್ತು. ಆಕಳು ತನ್ನ ಎಳೆಗರುವನ್ನು ಕಂಡು ಮಾಡುವ ಶಬ್ದದಂತೆ ಇವರೂ ಶಬ್ದಮಾಡಿ, ಮಕ್ಕಳನ್ನು ಮುಂಡಾಡುತ್ತಿದ್ದರು. ಮಕ್ಕಳಿಗೆ ಹಾಡಿಹರಿಸುವ ಆಗಿನ ಪದ್ಧತಿಯೇ ಇನ್ನೂ ನಡೆದಿದೆ. 'ಮಗನೆ ಕಲ್ಲಾಗು' ಅಂದರೆ ಕಲ್ಲಿನಂತೆ ತಾಳಿಬಾಳಿ ಅಚ್ಚಳಿಯದೆ ಉಳಿ ಎಂದೂ, 'ಕಡಿಲಿ (ಕೊಡ್ಲಿ) ಯಂತಾಗು' ಅಂದರೆ ಕಡಿಲಿಯಂತೆ, ವೈರಿವಿನಾಶಕನಾಗೆಂದೂ 'ಭಂಗಾರಾಗು' ಅಂದರೆ ಬಂಗಾರದಂತೆ ಎಲ್ಲರಿಗೂ ಬೇಕಾಗುವವನಾಗು, 'ಲೋಕಪ್ರಿಯನಾಗು ಎಂದೂ',ಮಕ್ಕಳು ಮರಿಗಳನ್ನು ಹೊಂದಿ ವಂಶನಡಿಸು' 'ಬೇನೆ ಬೇಸರಿಕೆಗಳಿಲ್ಲದವನಾಗು' ಎಂದೂ, ಇಂತು 'ನೂರು ಚಳಿಗಾಲಗಳನ್ನು ಬಾಳು' ಎಂದೂ ಆಶೀರ್ವದಿಸುತ್ತಿದ್ದರು.

# ಆಚಾರ ವಿಚಾರ

(ಮುಂದೆ ಸಾಗಿದುದು)

**ಲೇಖಕ:—'ಭೀಮು' ( ಇಂದೂರು )**

೪. ಆಚಾರವನ್ನು ತಿದ್ದುವ ಹಂಚಿಕೆ:— ನಮ್ಮ ಆಚಾರವನ್ನು ಸುಧಾರಿಸಲು ಮುಖ್ಯ ಉಪಾಯವಾವುದು? ಇದರ ವಿಷಯವಾಗಿ ಹೆಚ್ಚು ಬರೆಯುವ ಅವಶ್ಯವಿಲ್ಲ. ಕ್ಷುಲ್ಲಕ ಹಾಗು ಕ್ಷಣಿಕ ಸುಖಕ್ಕೆ ವಿಶೇಷ ಮಹತ್ತ್ವಕೊಡುವದರಿಂದ ನಮ್ಮ ಕೈಯಿಂದ ಕೆಟ್ಟ ಆಚರಣೆಯು ಸಂಭವಿಸುವುದು; ಆದ್ದರಿಂದ ಯಾವಾಗಲೂ ವಿವೇಕವನ್ನು ಎಚ್ಚರದಿಂದಿಟ್ಟು ನಡೆದರೆ ಕೆಟ್ಟ ಕೆಲಸವಾಗಲಾರದು. ಮಾತ್ರ ವಿವೇಕಜ್ಞಾನವನ್ನು ಅಭ್ಯಾಸದಿಂದ ಪ್ರಬಲ ಮಾಡಲುಬೇಕು. ಇದಕ್ಕೆ ಶಾಸ್ತ್ರದಲ್ಲಿ 'विवेकसाक्षात्कार' ವೆನ್ನುತ್ತಾರೆ. ಜ್ಞಾನವು ಸಂಶಯ ಹಾಗೂ ವಿಪರ್ಯಯಗಳಿಂದ ರಹಿತವಾಯಿತೆಂದರೆ ಸಾಕ್ಷಾತ್ಕಾರ ಪದವಿಯನ್ನು ಪಡೆಯುತ್ತದೆ. ಕೆಟ್ಟ ಕರ್ಮಗಳ ಪರಿಣಾಮದ ವಿಷಯವಾಗಿ ಹೀಗೆ ಮನಗಾಣಿಕೆಯಾಯಿತೆಂದರೆ, ಸುಡುವದನ್ನು ಬಿಡುವಂತೆ ಕೆಟ್ಟ ಕೆಲಸಗಳಿಂದ ಮನುಷ್ಯನು ದೂರವಾಗದೇ ಇರನು. ಅಂತೆಯೇ ವೇದಾಂತಶಾಸ್ತ್ರದಲ್ಲಿ ಸಾಧನ ಚತುಷ್ಟಯದಲ್ಲಿ ವಿವೇಕಕ್ಕೆ ಮೊದಲನೇ ಆಸನವು ಕೊಡಂಲಾಗಿದೆ. ಭಗವತನು ಅರ್ಜುನನಿಗೆ ' ಮೊದಲು ಇಂದ್ರಿಯನಿಯಮನವನ್ನು ಮಾಡಿ, ಬಳಿಕ ಜ್ಞಾನವಿಜ್ಞಾನವನ್ನು ನಾಶಮಾಡುವ ಕಾಮಕ್ರೋಧರೂಪಿಯಾದ ವೈರಿಯನ್ನು (ಅಜ್ಞಾನದಿಂದ ಹುಟ್ಟಿದುದರಿಂದ) ಕೊಲ್ಲು" ಎಂದು ಹೇಳಿರುವನು. ಈ ಇಂದ್ರಿಯನಿಯಮನವಾದರೋ ಜ್ಞಾನದಿಂದಲೇ ಸಾಧ್ಯವು. "ಯಾವಾಗಲೂ ಜ್ಞಾನವನ್ನು ಎಚ್ಚರಿಡುವದರಿಂದ, ವಿಷಯದಲ್ಲಿ ಹೊಕ್ಕ ಇಂದ್ರಿಯಗಳ ಸಂಯಮನವಾಗುವಂತೆ, ಅವುಗಳನು ಉಪವಾಸವಿಡುವುದರಿಂದ ಆಗಲಾರದು न तथैव तानि शक्यंते सन्नियन्तुमसेवया विषयेषु प्रजुष्टानि यथा ज्ञानेन नित्यशः" ಹೀಗೆ ಮನುವಚನವಿದೆ. ಯೋಗದರ್ಶನದಲ್ಲಿ ಅಹಿಂಸೆ, ಸತ್ಯ, ಅಸ್ತೇಯ ಮೊದಲಾದ ಯಮ; ಶೌಚ, ಸಂತೋಷ, ತಪಸ್ಸು ಮೊದಲಾದ ನಿಯಮಗಳನ್ನು ಹೇಳಿ, ಈ ನಿಯಮಗಳಂತೆ ನಡೆಯುವಾಗ ಅವಕ್ಕೆ ವಿಪರೀತವಾದ ಇಚ್ಛೆಗಳು (ಹಿಂಸೆಯೇ ಮೊದಲಾದ ವಿತರ್ಕಗಳು) ಹುಟ್ಟಿದರೆ "ಪ್ರತಿಪಕ್ಷ ಭಾವನೆಯನ್ನು ಮಾಡಬೇಕು. ಅಂದರೆ "ನಾನು ಯಾವಪರಿಸ್ಥಿತಿಯಲ್ಲಿ ಯಾವ ಉದ್ದೇಶದಿಂದ ಅಹಿಂಸೆಯೇ ಮೊದಲಾದ ಯೋಗಧರ್ಮಗಳನ್ನು ಕೈಗೊಂಡಿರುವೆನು? ಮತ್ತು ಹಿಂಸೆ ಮೊದಲಾದುವುಗಳ ಪರಿಣಾಮವು ಎಷ್ಟು ದು:ಖಮಯವಾಗಿದೆ? ಹಾಗು ಒಮ್ಮೆ ಬಿಟ್ಟಿದನ್ನು ಮರಳಿ ಮಾಡುವದೆಂದರೆ ವಾಂತಿ ತಿನ್ನುವ ನಾಯಿಯ ಜೊತೆಗೆ ಕುಳಿತಂತೆಯೇ ಸರಿ." ಹೀಗೆ ಚಿಂತನ ಮಾಡಿದರೆ ಈ ವಿತರ್ಕಗಳ ತೊಂದರೆಯು ದೂರ ಸಾರುವದೆಂದು ಭಗವಾನ್ ಪತಂಜಲಿಯು ನುಡಿದಿರುವನು. " अपिचेत्सुदुराचारो भजते मामनन्यभाक् ॥ साधुरेव स मंतव्यः सम्यग्व्यवसितोऽपि सः ॥ क्षिप्रं भवति धर्मात्मा शश्वत् शान्तिं निगच्छति । कौंतेय प्रतिजानीहि न मे भक्तःप्रणश्यति ।" ಈ

ಶ್ಲೋಕಗಳಲ್ಲಿ ಅತಿಶಯ ದುರಾಚಾರಿಯಾದ ಮನುಷ್ಯನೂ ಕೂಡ ಅನನ್ಯಭಾವದಿಂದ ನನ್ನ ಭಜನೆಯನ್ನು ಮಾಡಿದರೆ, ಬೇಗನೇ ಧರ್ಮಾತ್ಮನಾಗುವನೆಂದು ಪರಮಾತ್ಮನು ಅನ್ನುತ್ತಾನೆ. ಇದರ ತಿರುಳಾದರೂ ಇಷ್ಟೆ. ಮನಸ್ಸಿನಲ್ಲಿ ಯಾವಾಗಲೂ ಶುದ್ಧವಿಚಾರ ಗಳಿದ್ದರೆ, ಪಾಪಾಚರಣೆ ಆಗಲಾರದು. ಇದನ್ನೇ ಅನುಸರಿಸಿ " स यथा क्रतुर्भवति यच्चित्तस्तन्मयो मर्त्यः" " As you think so you become " ಮೊದಲಾದ ನೂರಾರು ವಚನಗಳು ಸಾರುತ್ತಿರುವದು ತೋರುವದು.

೫. ವಿಚಾರದ ಮೇಲೆ ಆಚಾರದ ಪರಿಣಾಮು:—ಮೇಲೆ ಹೇಳಿದಂತೆ ಬುದ್ಧಿ ವೃತ್ತಿಯನ್ನನುಸರಿಯೇ ಯಾವಾಗಲೂ ಕೃತಿಯಾಗುವದು. ಬಹಳವೇಕೆ? ವೃತ್ತಿಕೃತಿ ಗಳೆರಡೂ ಒಂದೇ ಒಡವೆಯ ಎರಡು ಅವಯುವಗಳಂತಿರುವದರಿಂದ ಒಂದನ್ನುಳಿದು ಇನ್ನೊಂದಿರಲಾರದು. ಆದ್ದರಿಂದ ನಮ್ಮ ವಿಚಾರಗಳು ಯಾವಾಗಲೂ ಶುದ್ಧವಾಗಿ ರುವಂತೆ ನೋಡಿಕೊಳ್ಳಲುಬೇಕು. ಆದಾಗ್ಯೂ ವಿಚಾರದ ಮೇಲೆ ಬಾಹ್ಯಕೃತಿಯ ಪರಿಣಾಮವೂ ಆಗುವದೆಂಬದನ್ನು ಮರೆಯಲಾಗದು. ಇಷ್ಟೇ ಅಲ್ಲದೆ ಮೊದಲು ಬಾಹ್ಯಕೃತಿಯನ್ನೇ ಯೋಗ್ಯ ದಾರಿಯಲ್ಲಿಡುವದೇ ಹೆಚ್ಚು ಮಹತ್ವದ್ದೆಂಬುದನ್ನೂ ಒಪ್ಪ ಬೇಕು. ಸರಿದಾರಿಯಿಂದ ವಿಚಾರಮಾಡುವ ಶಕ್ತಿಯು ಬರಲು, ನಿಯಮಬದ್ಧ ಆಚಾ ರವು ಅವಶ್ಯವಾಗಿದೆ. ಒಬ್ಬ ಹುಡುಗನಿಗೆ ಸತ್ಯವಾಡುವದು, ಹಿರಿಯರನ್ನು ಮನ್ನಿಸು ವದು, ಅತಿಥಿಯನ್ನು ಸತ್ಕರಿಸುವದು, ಮೊದಲಾದವುಗಳನ್ನಾಚರಿಸಲು ತಿಳಿಸಿಹೇಳಿದರೆ ಅವುಗಳ ಮಹತ್ವವು ಆತನಿಗೆ ಅನಿಸಲಾರದು. ಆದರೆ ಅದೇ ಕೆಲವು ಆಚರಣೆಗಳು ಉದಾಹರಣೆಯಿಂದಾಗಲಿ ಕೆಲವು ಹೆದರಿಕೆಯಿಂದಾಗಲಿ, ಹುಡುಗನ ಮೈಗೆ ಹತ್ತಿದ ವೆಂದರೆ ಆತನ ಬುದ್ಧಿಯು ಪರಿಪಕ್ವವಾದ ಬಳಿಕ ಅದರ ಕಾರಣಗಳು ಆತನಿಗೆ ಮನ ಗಂಡು ಆತನು ತಾನಾಗಿಯೇ ಸದಾಚರಣೆಯನ್ನವಲಂಬಿಸುವನು. ಅಂತೆಯೇ ಹುಡು ಗರ ಶಿಕ್ಷಣದಲ್ಲಿ ' Discipline ' ಅಂದರೆ ಶಿಸ್ತಿನ ಮಹತ್ವವು ಅತಿಶಯವಾಗಿದೆ. ಯಾವುದಾದರೂ ಸದ್ಗುಣವನ್ನು ಸಂಪಾದಿಸುವುದಿದ್ದರೆ, ಮೊದಲು ಅದರಂತೆ ಬಾಹ್ಯ ಕೃತಿಯನ್ನು ಮಾಡುತ್ತ ಹೋಗಬೇಕು, ಅಂದರೆ ಯೋಗ್ಯ ಮನಸ್ಥಿತಿಯು ದೊರೆಯು ವದೆಂದು ಅರಿಸ್ಟಾಟಲನ ಮತವಿದೆ. ವೈದಿಕ ಧರ್ಮದಲ್ಲಿಯು ಆಶ್ರಮವ್ಯವಸ್ಥೆಯನ್ನು ನೋಡಲು, ಬ್ರಹ್ಮಚರ್ಯೆಯಲ್ಲಿ ಶಿಸ್ತು ಬಲು ಕಠಿಣವಾಗಿದ್ದು, ಅದು ಕಡಿಮೆಕಡಿಮೆ ಯಾಗುತ್ತ, ಮುಂದೆ ಬುದ್ಧಿಯ ಶಿಕ್ಷಣವು ಬೆಳೆಯುತ್ತ ನಡೆದಿರುವದು. ' आचारः प्रथमो धर्मः ' ಆದರಿಂದ ಮನುಷ್ಯನ ಅಂತಃಕರಣವಲ್ಲಿಯ ರಜಸ್ತಮೋರೂಪಿಯಾದ ಕೊಲಸು ಹೊರಟುಹೋಗಿ ಅದು ಶುದ್ಧ ಅಂದರೆ ಸಾತ್ವಿಕವಾಗುವುದು. ಸಾತ್ವಿಕ ಅಂತಃಕರಣದಲ್ಲಿ ಯೋಗ್ಯವಾದ ವಿಚಾರಗಳು ಹುಟ್ಟಿ ಬಳಿಕ ಸದಾಚಾರದ ಕಡೆಗೆ ಸಹಜವಾದ ಪ್ರವೃತ್ತಿಯುಂಟಾಗುತ್ತದೆ. ಈ ತರವಾಗಿ ವೈದಿಕಧರ್ಮದಲ್ಲಿ ಜ್ಞಾನ ಹಾಗು ಕರ್ಮ ಇವುಗಳ ಸಾಂಗತ್ಯವನ್ನು ಬಲು ಕುಶಲತೆಯಿಂದ ಹಾಕಿರುವದರಿಂದ, ನಮ್ಮ ಕೆಲಸವಿಷ್ಟು ಸುಲಭವಾಗಿದೆ. ಈ ಧರ್ಮವನ್ನಾಶ್ರಯಿಸಿದವನು ವ್ಯಕ್ತಿ ಮತ್ತು ಸಮಾಜ ಇವೆರಡನ್ನೂ ತೊಂದರೆಗಳಿಂದ ಪಾರುಗಾಣಿಸಬಲ್ಲನೆಂಬುದರಲ್ಲಿ ಸಂಶಯವಿಲ್ಲ.

# ವಿಸರ್ಜನೆ.

( ೭ನೆಯ ಸಂಚಿಕೆಯಿಂದ ಮುಂದೆ ಸಾಗಿದುದು. )

ಗುಣ:—ನಿಮ್ಮ ಪಾಪಪುಣ್ಯಗಳನ್ನು ನಿಮ್ಮ ಹತ್ತರ ಇಡಿರಿ. ಕೇಳಿದ್ದೇನೆ! ತಮ್ಮ ಪಾಪವೇನೊ, ಪುಣ್ಯವೇನೊ, ಅದೊಂದೂ ನಾನರಿಯದ್ದಿಲ್ಲ. ನಿಮ್ಮ ಅಸಂಶಯ ನಿಮಗಿರಲಿ. ನನಗೆ ಮೊದಲು ಹಾದೀ ಮಾಡಿಕೊಡಿರಿ; ಅಮ್ಮನ ಪಾದಕ್ಕೆನ್ನ ಬಲಿಯ ನ್ನೊಯ್ಯುವೆ.

ಗೋವಿಂದ:—ದೇವೀ ! ಜನನಿಯ ಆಜ್ಞೆಯನ್ನು ಉಲ್ಲಂಘಿಸಲಾರೆನು.

ಗುಣ:—ನಾನೂ ಆರೆನು ! ಅಮ್ಮನಡಿಯಲ್ಲಿ ಹರಕೆ ಹೊತ್ತಿದ್ದೇನೆ. ಆದ್ದರಿಂದ ಯಥಾಶಾಸ್ತ್ರವಾಗಿ— ವಿಧಿಪೂರ್ವಕವಾಗಿ— ಅವಳನ್ನು ಪೂಜಿಸಲೇ ಬೇಕು; ಪೂಜಿಸುವೆ. ಹೋಗಿರಿ ! ನೀವು ಹೋಗಿರಿ !!!

ಗೋವಿಂದ:—ಮಹಾರಾಣಿಯ ಆದೇಶದಂತಾಗಲಿ !

(ಹೋಗುವನು.)

ರಘುಪತಿ ಬರುವನು.

ಗುಣ:—ದೇವಾ! ತಾಯಿಯ ಗುಡಿಯಿಂದ ನನ್ನ ಪೂಜೆಯನ್ನು ತಿರುಗಿಸಿದರಂತೆ!

ರಘು:— ಮಹಾರಾಣೀ, ನಿನ್ನ ಪೂಜೆಯಲ್ಲ; ತಾಯಿಯ ಪೂಜೆ ತಿರುಗಿತು!! ಕೂಳುಕಾಣದ ತಿರುಕನ ತಿರುಕೆಯ ಪೂಜೆಯಾದರೂ, ಅದು ನಿನ್ನಂಥ ರಾಜೇಂದ್ರಾ ಣಿಯ ಪೂಜೆಗಿಂತ ಯಾವ ವಿಧದಲ್ಲಿಯೂ ಕೀಳಲ್ಲ! ಆದರೆ ತಾಯಿಯ ಪೂಜೆ ತಿರುಗಿದ್ದು ಅನಿಷ್ಟ; ತುಂಬಾ ಸರ್ವನಾಶಕರ ! ಎಂಥ ಸರ್ವನಾಶವೆನ್ನಲಿ ! ಮೆಲ್ಲನೆ ರಾಜದರ್ಪವು ಮರ್ತ್ಯದ ರಾಜಿಕೆಯ ಮೇರೆಯನ್ನು ಮೀರಿಸುತ್ತಿದೆ. ದೇವತೆಗಳ ಹೆಬ್ಬಾಗಿಲಿಗೆ ಅಡ್ಡಿ ಯಾಗಿ ಕುಳಿತಿದೆ ! ತಾಯಿಯ ಭಕ್ತರೆಂದರೆ ಕಣ್ಣು ಕೆಂಪುಮಾಡಿ ಕುಣಿಯುತ್ತಿದೆ!!!

ಗುಣ:—ಪರಿಣಾಮವಿನ್ನೇನು ದೇವಾ !

ರಘು:—ಅದೇನೋ ಆ ಮಹಾಮಾಯೆಗೇ ಗೊತ್ತು ! ನೆರಳಿನಿಂದ ತಾಯಿಯ ಬಾಗಿಲನ್ನು ಮುಸುಕಿದ ಸಿಂಹಾಸನವು, ಕ್ಷಣಾರ್ಧದಲ್ಲಿ ಒಂದೇ ಫೂತ್ಕಾರಕ್ಕೆ ನೀರೊಳ ಗಿನ ನೆರಳಂತೆ ಚದರಿ ಹೋಗುವದು ! ಇಷ್ಟು ಮಾತ್ರ ನಾನು ತುಂಬಾ ಬಲ್ಲೆ. ಯುಗ ಯುಗಾಂತರವಾಗಿ ರಾಜಪಿತಾ—ಪಿತಾಮಹಾದಿಗಳು, ಮೋಡ ಮೀರಿ, ಮುಗಿಲು ಮುಟ್ಟಿ ಸಿದ ರಾಜಮಹಿಮೆಯು ಮುಹೂರ್ತಮಾತ್ರದಲ್ಲಿ ಸಿಡಿಲು ಬಡಿದು—ಸುಟ್ಟು—ಹಾರಿ ಯೆದ್ದು—ಹಾರಿ ಹೋಗುವದು.

ಗುಣ:—ಪ್ರಭೋ ! ಕಾಪಾಡಿರಿ ಕಾಪಾಡಿರಿ !

ರಘು:—ಹೌಧೌದು ! ನಾನು ನಿನ್ನನ್ನು ಕಾಪಾಡೇನು ! ಸ್ವರ್ಗಮರ್ತ್ಯದಲ್ಲೆಲ್ಲ ತನ್ನಾಳಿಕೆ ಸಾರಿದ ಪ್ರಬಲ ಪ್ರತಾಪಿಯು ರಾಣಿನೀ! ಯಾವರಾಜನು ದೇವ ಬ್ರಾಹ್ಮಣರ... ಥೀ ಥೀ ! ಧಿಕ್ಕಾರ ಧಿಕ್ಕಾರ !! ನೂರುಬಾರಿ ಧಿಕ್ಕಾರ ! ಸಾವಿರ ಬಾರಿ ಧಿಕ್ಕಾರ !! ಕಲಿಯುಗದ ಬ್ರಾಹ್ಮಣರಿಗೆ ಲಕ್ಷಗಟ್ಟಲೆ ಧಿಕ್ಕಾರ ! ಎಲ್ಲಿ ನಿಮ್ಮ ಬ್ರಹ್ಮತೇಜ !!!! ನಿಮ್ಮ ಜೊಳ್ಳು ಬ್ರಹ್ಮತೇಜವು ನಿಮ್ಮ ಎದೆಯನ್ನೇ, ಚೇಳಿನಂತೆ ಕಟುಕಿ ನೋಯಿಸುತ್ತಿದೆ! ನಿಮ್ಮ ಬ್ರಹ್ಮಾಡಂಬರವೆಲ್ಲ ಹುಸಿ ಹುಸಿ! ( ಜನ್ನಿವಾರ ಹರಿಯಲೆಳಸುವನು )

ಗುಣ:—ದೇವಾ ! ಇದೇನಿದೇನು !! ಹಾಗೆ ಮಾಡಬೇಡಿರಿ ! ನಿರ್ದೋಷಿಯ ಮೇಲಿಷ್ಟು ದಯಮಾಡಿರಿ !

ರಘು:—ಹಾಗಾದರೆ ಬ್ರಾಹ್ಮಣನ ಅಧಿಕಾರವನ್ನು ಮೊದಲಿನಂತೆ ನಡಿಸಿಕೊಡು.

ಗುಣ:—ಕೊಡುವೆ ಕೊಡುವೆ! ಪ್ರಭೋ ಹೋಗಿರಿ, ಮಂದಿರದಲ್ಲಿ ಮುಂಚಿನಂತೆ ಪೂಜೆಸಾಗಲಿ. ತಾಯಿಯ ಪೂಜೆಗೆ ಕೊರತೆ ಬೇಡ !!

ರಘು:—"ರಾಜ—ಅಧೀಶ್ವರೀ" ! ನಿನ್ನಾಜ್ಞೆ ! ಈ ನಿನ್ನಾದೇಶದಿಂದ ದೇವತೆ ಕೃತಾರ್ಥಳಾದಳು; ಬ್ರಾಹ್ಮಣನು ತನ್ನ ಮುನ್ನಿನ ತೇಜವನ್ನು ಪಡೆದನು ! ಕಲ್ಕಿಯ ಅವತಾರ ಏಳುವವರೆಗೆ ನೀನೇ ಧನ್ಯಳು ! (ಹೋಗುವನು)

## ಗೋವಿಂದಮಾಣಿಕ್ಯನು ಮತ್ತೆ ಬರುವನು.

ಗೋವಿಂದ:—ಅಪ್ರಸನ್ನಳಾದ ಪ್ರಿಯೆಯ ಮುಖವು, ವಿಶ್ವದಲ್ಲಿಯ ಎಲ್ಲ ಬೆಳಕನ್ನು ಎಲ್ಲ ಸುಖವನ್ನು ಲೋಪಗೊಳಿಸುವದು ! ಉನ್ಮನೋತ್ಸುಕ ಚಿತ್ತನಾಗಿ ತಿರುತಿರುಗಿ ಬರುತ್ತಿರುವೆ !!

ಗುಣ:—ಹೋಗಿರಿ ಹೋಗಿರಿ, ಬರಬೇಡಿರಿಲ್ಲಿ ! ನಿಮ್ಮ ಅಭಿಶಾಪವನ್ನು ಕಟ್ಟಿಕೊಂಡಿಲ್ಲಿಗೆ ಬರಬೇಡಿರಿ !

ಗೋವಿಂದ:— ಪ್ರಿಯೇ; ಪ್ರೇಮವು ಅಭಿಶಾಪವನ್ನು ನಾಶಗೊಳಿಸುವದು. ದಯೆಯು ಅಕಲ್ಯಾಣವನ್ನು ದೂರಗೊಳಿಸುವದು. ಸತಿಯ ಹೃದಯದಿಂದ ಪ್ರೇಮವು ಹೊರಬಿದ್ದು ಹೋದರೆ, ಪತಿಗೃಹಕ್ಕೆ ಆಗ ತಾನೆ ಅಭಿಶಾಪ ಹತ್ತುವುದು! ಹಾಗಾದರೆ ದೇವೀ ಹೋಗುವೆ !

ಗುಣ:—ಹೋಗಿರಿ, ತಿರುಗಿ ಮೋರೆ ತೋರಿಸಬೇಡಿರಿ !

ಗೋ:—ಇರಲಿ, ನೆನಪಾದರೆ ಬಂದೇನು ! ( ಹೊರಡುವನು )

ಗುಣ:—(ಕಾಲಮೇಲೆ ಬಿದ್ದು) ನಾಥಾ; ಕ್ಷಮಿಸಿರಿ ಕ್ಷಮಿಸಿರಿ! ಇಷ್ಟೊಂದು ನಿಷ್ಠುರವೇ! ರಮಣಿಯ ಅಭಿಮಾನವನ್ನು ಮೆಟ್ಟಿಯೇ ಹೋಗಬೇಕೇ? ಪ್ರಿಯರೇ; ಸುಮ್ಮನೆ

ಪ್ರೇಮವು ರೋಷದ ಮುಸುಕುಹಾಕಿ, ಮೋಜು ಮಾಡುವದು ತಮಗೆ ಗೊತ್ತಿಲ್ಲವೆ! ನೆಟ್ಟಗಿದೆ! ತಮ್ಮ ಬಲದಿಂದಲೇ, ತಮ್ಮ ಅಭಿಮಾನದಿಂದಲೇ, ತಮ್ಮನ್ನು ಅಪಮಾನ ಪಡಿಸಿದೆನು ಕ್ಷಮಿಸಬೇಕು !

ಗೋ:—ಪ್ರಿಯೇ; ನಿನ್ನ ಮೇಲಿನ ಪ್ರೇಮ ಹರಿದಾಗಳೇ, ನನ್ನ ಜೀವನ ಬಂಧವೂ ಹರಿದುಹೋಗುತ್ತಿತ್ತು ! ಪ್ರಿಯೇ ಗೊತ್ತಿದೆ ! ಮೋಡವೆಲ್ಲ ಒಂದೇ ಗಳಿಗೆಯದು; ಹಗಲೆಲ್ಲಾ ಇರುವವನು ಸೂರ್ಯನೇ !

ಗುಣ:—ಮೋಡವೆಲ್ಲ ಒಂದೇ ಗಳಿಗೆಯದು ! ಈ ಮೋಡ ಹರಿದು ಹೋಗಲಿ! ತೂರಿಬರುವ ವಿಧಿವಜ್ರವು ಹಿಂದಿರುಗಿ ಹೋಗಲಿ ! ಚಿರದಿನದ ಸೂರ್ಯನು ಜಗದಲ್ಲಿ ತನ್ನ ಚಿರದಿನದ ರೀತಿಯನ್ನು ತಿರುಗಿ ವ್ಯಕ್ತದೋರಿಸಲಿ ! ಸರ್ವಲೋಕವೂ ಅಭಯ ಹೊಂದಲಿ ! ಅರೆಗಳಿಗೆಯ ದುಸ್ವಪ್ನವು ದೂರಾಗಿ ಹೋಗಲಿ ! ಹಾಗೆ ಅಪ್ಪಣೆಕೊಡಿ ಸಿರಿ !!! ಬ್ರಾಹ್ಮಣನು ತನ್ನಧಿಕಾರವನ್ನು ಪಡೆಯಲಿ! ದೇವಿ ತನ್ನ ಪೂಜೆಯ ಪಡೆಯಲಿ! ರಾಜದಂಡವು ತಿರುಗಿ ತನ್ನ ಅಪ್ರಮತ್ತಮತ್ಯಾರ್ಥಿಕಾರಕ್ಕೆ ನಿಲ್ಲಲಿ !

ಗೋ:—ಧರ್ಮಹಾನಿಯು ಬ್ರಾಹ್ಮಣರ ಅಧಿಕಾರವಲ್ಲ ! ಅಸಹಾಯ ಜೀವಿಗಳ ರಕ್ತಪಾತವು ಜನನಿಯ ಪೂಜೆಯಲ್ಲ ! ದೈವಾಜ್ಞೆಯನ್ನು ಪರಿಪಾಲಿಸುವದಕ್ಕೆ ರಾಜನು ಸಕಲವಿಪ್ರರಿಗೂ ಅಧಿಕಾರಿಯಾಗಿದ್ದಾನೆ !

ಗುಣ:—ಭಿಕ್ಷೆ ! ಭಿಕ್ಷೆ ಹಾಕಿರಿ ! ಪ್ರಭೋ, ತಮ್ಮ ಪಾದಸನ್ನಿಧಿಯಲ್ಲಿ ಬೇಡಿ ಬಿನ್ನವಿಸುವೆ ! ಬಹುದಿನ ನಡೆದ ರೂಢಿ, ಸದಾ ಸಂಚರಿಸುವ ಮುತ್ತ ಮಾರುತನಂತೆ! ಅದು ರಾಜರ ಧನವಲ್ಲ—ಅದೂ ಕೂಡ ಸಮಸ್ತ ಪ್ರಜೆಗಳಿಗಾಗಿ, ತಮ್ಮ ಪಟ್ಟದರಾಣಿ ಕೈಮುಗಿದು ಭಿಕ್ಷೆ ಬೇಡುತ್ತಲಿದ್ದಾಳೆ !! ಅಕ್ಕರತೆಯ ಹಟವೆಂದಾದರೂ ಭಾವಿಸಿ ಪ್ರಿಯಾ ! ವಿಧಾತನೂ ಕೂಡ ಪ್ರೇಮಾಕರ್ಷಣಕ್ಕಾಗಿ ಕರ್ತವ್ಯಹಾನಿಯನ್ನು ಮಾಡಿ ಕೊಂಡೂ ಕ್ಷಮಿಸಬಲ್ಲನು. ದಯಮಾಡಿರಿ !!

ಗೋ:—ಮಹಾರಾಣೀ; ಇದೇನು ಉಚಿತವೆ? ಇದೆಂಥಾ ಹಳೆ ರೂಢಿ! ! ನೀಚ ಸ್ವಾರ್ಥದ ರೂಢಿ! ನಿಷ್ಠುರಮದೋನ್ಮತ್ತರ ದರ್ಪದ ರೂಢಿ! ಅಂಧ ಅಜ್ಞಾನತೆಯ ರೂಢಿ! ತೆರಪಿಲ್ಲದ ನೆತ್ತರುಸವಿದು ಕೊಬ್ಬಿದ ಹಿಂಸ್ರವೃದ್ಧರೂಢಿ!! ಥೀ ಥೀ!

ಸಹಸ್ರಶತ್ರುಗಳೊಡನೆಯೂ ಕಾದಿ ಶಾಂತವಾಗಿಯೇ ಮನೆಗೆ ಬರುವೆ. ನಾದ ಚಿತ್ತದಲ್ಲಿ ಅಮೃತಕುಡಿಯುವೆನೆಂದು ! ಆಯ್ಯೋ ! ಅಲ್ಲಿಯೂ ದಯಾಸುಧೆಯಿಲ್ಲವೆ! ! ಮನೆಯಲ್ಲಿ ಹೊಳೆಯಾಗಿ ಹರಿಯುತ್ತಿರುವ ಪುಣ್ಯಪ್ರೇಮದೊಡನೆ, ರಕ್ತಧಾರೆಯೂ ಕೂಡಿಕೊಂಡಿತೇ! ! ಇಂಥ ಇಷ್ಟೊಂದು ನೆತ್ತರದ ಝುರಿಯ ಬಾಯಿತೆರೆದು ಬಿಟ್ಟ ದೈತ್ಯ ನಾರು! ! ಭಕ್ತಿಯಲ್ಲಿ—ಪ್ರೇಮದಲ್ಲಿ ರಕ್ತತೊಡೆಯುವದೆಂದರೇನು ! ಕ್ರೂರಹಿಂಸೆಯು

ಪಯೂಮಯಿಯಾದ ರಮಣಿಯ ಪ್ರಾಣದಲ್ಲಿಯೂ ನೆತ್ತರದ ಮುದ್ರೆಯನ್ನೂರಿತೆ! ! ಈ ನೆತ್ತರದ ಹೊಳೆಯನ್ನು ನಾನು ಪ್ರತಿಬಂಧಿಸಬೇಡವೆ? !

ಗುಣ:—( ಮೋರೆ ಮುಚ್ಚಿ ) ಹೋಗಿರಿ ಹೋಗಿರಿ ನೀವು !

ಗೋ:—ಅಯ್ಯೋ! ಮಹಾರಾಣೀ! ಕರ್ತವ್ಯವು ಕಠಿನವಾಯಿತು. ನೀವಾದರೋ ನೋರೆದಿರುವಿದಿರಿ ! ( ಹೋಗುವನು )

ಗುಣ:—(ಅಳುತ್ತ) ಎಲೌ ಅಭಾಗಿನಿಯೇ, ಇಷ್ಟುದಿನ ಮನದಲ್ಲಿದೇನು ಭ್ರಾಂತಿ ಯಿತ್ತೆ! ಇಂಥ ಅಭಿಮಾನವೂ ಇಂಥ ಹಟವೂ ಇಂಥ ಅನುನಯವೂ ಇಂದು ವ್ಯರ್ಥ ವಾಗುವವೆಂದು ಎಷ್ಟೂ ಸಂಶಯುವಿರಲಿಲ್ಲವಲ್ಲ! ಧಿಕ್! ಪುತ್ರಹೀನೆ ಯಾವ ಡೌಲಿನಿಂದಿ ಷ್ಟೊಂದು ಪತಿಯಲ್ಲಿ ಅಭಿಮಾನತಾಳಬೇಕೊ! ಸುಟ್ಟಿತು ನಿನ್ನಭಿಮಾನ! ನಿನ್ನ ಮೋರೆಗೆ ಬೆಂಕೀಹಚ್ಚು! ಬೆಂದು ಬೂದಿಯಾಯಿತು ನಿನ್ನ ಪಟ್ಟದ ರಾಣಿಯೆಂಬ ಹೆಮ್ಮೆ! ಇನ್ನೇನು ಅಕ್ಕರತೆಯಾಟವಿಲ್ಲ! ಅಳುವೊಂದೇ ಆಳುವು! ಹೆಡೆಯೆತ್ತಿದ ಭುಜಂಗಿನಿಯು ನಿಸ್ತೇಜ ಳಾಗಿ ತಲೆಬಾಗಿಸಿ ಮಣ್ಣುಗೂಡಿದಳು ! ಇದೇ ಇನ್ನಿನ್ನ ಪದವಿ !

---

## ಪಂಚಮದೃಶ್ಯ.

### ಮಂದಿರ.

(ಒಂದು ಹಿಂಡು ಮಂದಿ ಬರುವದು.)

ನೇಪಾಲ:—ಎಲ್ಲಿರೋ ! ನಿಮ್ಮ ಮುನ್ನೂರು ಕುರಿ, ನೂರು ಕೋಣ!! ಒಂದು ಕೂದಲು ಒಂದು ಬಾಲ ಇಷ್ಟೂ ನೋಡಲಿಕ್ಕಿಲ್ಲ ! ಊದುವದು ಬಾರಿಸುವದು ಎಲ್ಲಿ ಹೋಯಿತೊ ! ಎಲ್ಲಾ ಬರೇ ಭಂಯ್ ಅನ್ನುವದಲ್ಲೋ ! ಖರ್ಚುಮಾಡಿಕೊಂಡು ಪೂಜೆಯು ನೋಡಲಿಕ್ಕೆ ಬಂದರೆ ಒಳ್ಳೇ ಶಿಕ್ಷೆಯಾಯಿತು !

ಗಣೇಶ:—ನೋಡು ! ಗುಡಿಯ ಬದಿಯಲ್ಲಿ ನಿಂತು ಹೀಗೆ ಬಾಯಿಗೆ ಬಂದ ಹಾಗೆ ಬಕಾಸಬೇಡ ನೋಡು ! ಅವ್ವಗೆ ಕೋಣಗೀಣ ಏನೂ ಸಿಕ್ಕಿಲ್ಲ ! ಎದ್ದಳೆಂದರೆ ನಿಮ್ಮನ್ನು ಒಬ್ಬೊಬ್ಬರನ್ನೇ ಹಿಡಿದು ಹಿಡಿದು ಬಾಯಿಗೆ ಹಾಕ್ಯಾಳು ನೋಡಿರಿ !

ಹರಿ:—ಏನಪ್ಪಾ ! ಹೋದವರುಷ ಎಲ್ಲಿದ್ದರೋ ಈ ಮಕ್ಕಳೆಲ್ಲ! ಆ ವರ್ಷ ಅರ ಸರ ಘನಚಕ್ರಪೂಜೆಯ ಮಾಡಿಸಿದಾಗೇನು ನಿಮ್ಮ ಕಾಲಿಗೆ ಹುಣ್ಣು ಹುಟ್ಟಿತ್ತೆ ? ಆವಾಗೊಮ್ಮೆ ನೋಡಿ ಹೋಗುವದಿತ್ತು ! ಬಂದರೀಗ ! ನಿಮ್ಮ ಕಾಲ್ಗುಣದಿಂದ ಅಮ್ಮನವರ ಪೂಜೆ ಕೂಡ ಬಂದಾಗಿ ಹೋಯ್ತು ! ನಿಮ್ಮನ್ನು ಒಬ್ಬೊಬ್ಬರನ್ನೆ ಅಮ್ಮ ನವರ ಬದಿಯಲ್ಲಿ ನೈವೇದ್ಯಮಾಡಿದರೆ ಕೂಡ ನನ್ನ ಮನಸು ಸಮಾಧಾನ ಆಗುವಹಾ ಗಿಲ್ಲ ನೋಡು !

ಕ್ರಿಷ್ಣ:—ಅಣ್ಣಾ; ಸುಳ್ಳೆಯೆ ಸಿಟ್ಟೇಕಪ್ಪ ? ನಮಗೆ ಹೇಳಲಿಕ್ಕೇನು ಬಾಯಿ ಉಳಿದಿದೆಯೆ ? ಅಂದ ಹಾಗೆ ಅನಿಸಿಕೊಳ್ಳುವ ಹೊತ್ತೇ ಇದೆ !

ಹರಿ:—ಅಲ್ಲಪಾ ! ನೀನೇನನ್ನುವೆಯಲ್ಲ, ಅದು ಹೌದು ! ಸುಮ್ಮ ಸುಮ್ಮನೆ ತುಸುದರ ದೆಸೆಯಿಂದ ನನಗೆ ಸಿಟ್ಟು ಬರುವದು. ಇದಕ್ಕೆ ನಾನೊಪ್ಪಿಕೊಳ್ಳುವೆನು ! ಅಂದು ಅವನು ಎಷ್ಟು ತೂರಿ ತೂರಿ ಬರುತ್ತಿದ್ದನಪ್ಪಾ! ಇನ್ನೊಂದೇನಾದರೂ ಆಡಿದ್ದ- ನನಗೆ ಕೈಗಿಯ್ ಹಚ್ಚಿದ್ದ–ಅಂದರೆ ತಿಳಿಯುತ್ತಿತ್ತು ನೋಡವನ ಬೆಳಕು !

ನೇಪಾಲ:—ನಡಿ! ಯಾರ ಮೈಯಲ್ಲಿ ಎಷ್ಟು ತಿಮರಿದೆ ನೋಡೋಣ ನಡಿ !

ಹರಿ:—ಸುಮ್ಮಗೆ ಕೂಡೊ ! ಈಗ ನಮ್ಮ ಮಾವ ಸಿಪಾಯಿಯಿದ್ದಾನೆ !

ನೇಪಾಲ:—ಕರಕೊಂಡು ಬಾ ! ನಿಮ್ಮ ಮಾವ ನೀನು ಕೂಡಿಯೇ ಬಾ, ತೋರಿಸಿ ಕೊಡುವೆನು ಅವನ ಸಿಪಾಯಿಕೆಯೆಲ್ಲಾ ಗಿಪಾಯಿಕೆ ಮಾಡಿ !

ಹರಿ:—ನೋಡಿರೆಪ್ಪಾ ಎಲ್ಲರೂ ಕೇಳಿರುವಿರಿ !

ಗಣೇಶ–ಕೃಷ್ಣ:—ಅಣ್ಣಗಳಿರಾ ! ಸುಮ್ಮಗೆ ಮನೆಗೆ ನಡೆಯಿರಿ. ನಿಮ್ಮ ಹುಡು ಗಾಟಿಕೆ ಸಾಕು !

ಹರಿ:—ಹುಡುಗಾಟಿಕೆಯೇತರ ಹುಡುಗಾಟಿಕೆಯೊ ! ಒಳ್ಳೆ ಹಚ್ಚಿರುವನಲ್ಲ, ನಮ್ಮ ಮಾವನಿಗೆ ಕೂಡ ಮಾತಾಡುವದೇ ?

ಗಣೇಶ–ಕೃಷ್ಣ:—ಸಾಕು ಬಿಡೋ ! ನಿಮ್ಮ ಮಾವನ ತೆಗೆದುಕೊಂಡು ನೀನೆ ಸಾಯಿ !

( ಹೋಗುವರು )

ರಘುಪತಿ, ನಯನರಾಯ, ಜಯಸಿಂಹ, ಬರುವರು

ರಘು:—ಅಮ್ಮನ ಮೇಲೆ ನಿನ್ನ ಭಕ್ತಿಯಿಲ್ಲವೆ ?

ನಯ:—ಹಾಗೆ ಹೇಗಾದೀತು ? ಭಕ್ತವಂಶದಲ್ಲಿ ನಾನು ಹುಟ್ಟಿದವ !

ರಘು:—ಒಳಿತೊಳಿತು! ಹಾಗಾದರೆ ನೀನು ತಾಯಿಯ ಸೇವಕ. ನಮ್ಮವರೊಳ ಗೊಬ್ಬ.

ನಯ:—ಪ್ರಭೋ; ಮಾತೃಭಕ್ತರೆಷ್ಟೋ ಅವರಿಗೆಲ್ಲಾ ನಾನು ದಾಸನೇ.

ರಘು:—ಒಳಿತು ! ನಿನ್ನ ಭಕ್ತಿ ಅಕ್ಷಯವಾಗಲಿ ! ನಿನ್ನ ಭಕ್ತಿ ನಿನ್ನ ತೋಳಿಗೆ ಅಜೇಯಶಕ್ತಿಕೊಡಲಿ! ನಿನ್ನ ಭಕ್ತಿ ನಿನ್ನ ಕತ್ತಿಯನ್ನು ಕೂರುಗೊಳಿಸಲಿ! ಅದಕ್ಕೆ ವಜ್ರ ದಂಥ ಹೊಳಪು ಕೊಡಲಿ! ಪದ–ಮಾನಗಳನ್ನು ಮೀರಿ, ನಿನ್ನ ಭಕ್ತಿ ಹೃದಯದಲ್ಲಿ ವಾಸ ಮಾಡಲಿ !

ನಯು:—ಬ್ರಾಹ್ಮಣರ ಹರಕೆ ಹುಸಿಯಾಗದು !

ರಘು:—ಹಾಗಾದರೆ ಕೇಳು ಸೇನಾಪತಿ ! ನಿನ್ನ ಎಲ್ಲ ಬಲವನ್ನೂ ತಾಯಿಯ ಕಾರ್ಯಕ್ಕಾಗಿ ಒಟ್ಟುಗೂಡಿಸು. ಮಾತೃವಿದ್ರೋಹಿಗಳನ್ನು ಹುರಿದು ಬಿಡು !

ನಯು:—ತಮ್ಮಾಜ್ಞೆ ಪ್ರಭೋ! ಯಾರಿದ್ದಾರೆ ತಾಯಿಗೆ ಶತ್ರುವಾಗಿ !

ರಘು:—ಗೋವಿಂದಮಾಣಿಕ್ಯನು !

ನಯು:—ನಮ್ಮ ಮಹಾರಾಜರೆ ?

ರಘು:—ಕೂಡಿಸು ನಿನ್ನ ಸೈನ್ಯಬಲವನ್ನು ! ಅವನನ್ನು ಮುತ್ತು !

ನಯು:—ಛೀ! ಪಾಪದ ಹಂಚಿಕೆಯಿದು! ಪ್ರಭೋ! ಇದೇನು ನನ್ನ ಪರೀಕ್ಷೆಯೆ?

ರಘು:—ಹೌದು! ಪರೀಕ್ಷೆಯೇ ಹೌದು! ನೀನಾರಭೃತ್ಯನೆಂಬುದೀಗ ಪರೀಕ್ಷೆಯಾಗಿ ಹೋಗುವದು ! ಚಿಂತೆಬಿಡು! ದ್ವಿಧಾ ಬೇಡ ! ಕಾಲವಿಲ್ಲ ! ಪ್ರಲಯಶೃಂಗಸಮನಾಗಿ ತ್ರಿಪುರೇಶ್ವರಿಯ ಆಜ್ಞೆಯೀಗ ಗುಡುಗುಟ್ಟುತ್ತಿದೆ. ಎಲ್ಲ ಸಂಬಂಧಗಳೂ ಇಂದು ಹರಿದುಹೋಗಿವೆ !

ನಯು:— ಚಿಂತೆಯಿಲ್ಲ. ಯಾತರದ್ವಿಧಾ ? ದೇವಿಯಿಟ್ಟಪದದಲ್ಲಿ ನಾನು ಅಚಲನಾಗಿರುವೆ !

ರಘು:— ಒಳಿತು !

ನಯು:— ಜನನಿಯ ಸೇವಕರಲ್ಲಿ ನನ್ನಂಥ ನರಾಧಮನಾರು ? ಇಂಥ ನನಗೆ ಇಂಥ ಆಜ್ಞೆಯೆ ? ನಾನು ವಿಶ್ವಾಸಘಾತಕನಾಗಬೇಕೆ ? ವಿಶ್ವಮಾತೆ ತಾನೇ ಹೃದಯದ ವಿಶ್ವಾಸದ ಗದ್ದುಗೆಯ ಮೇಲೆ ನಿಂತಿದ್ದಾಳೆ. ತನ್ನ ಸಿಂಹಾಸನವನ್ನು ತಾನೇ ಭಂಗಿಸಲು ಅಪ್ಪಣೆ ಕೊಡುವಳೇ ತನ್ನ ಮುಖದಿಂದ ? ಹಾಗೆಯೇ ಆದರೆ ಇಂದು ರಾಜ ಹೋದರೆ ನಾಳೆ ದೇವಿ! ಮನುಷ್ಯತ್ವವೇ ಮುರಿದು ಬಿದ್ದೀತು; ಹಾಳು ಮನೆಯ ಬೀಳು ಗೋಡೆಯಂತೆ !

ಜಯು:— ಧನ್ಯ ! ಸೇನಾಪತಿಯೇ ಧನ್ಯ ಧನ್ಯ !!

ರಘು:— ಹೌಧೌದು ಧನ್ಯ! ಇದೆಂಥಾ ಭ್ರಾಂತಿ? ಜನನಿಯೊಡನೆ ವಿಶ್ವಾಸಘಾತಿಯಾಗಿರುವ ರಾಜನೊಡನೆ ವಿಶ್ವಾಸಬಂಧನವಿನ್ನೆಲ್ಲಿ ?

ನಯು:— ಈ ಗೊಡ್ಡು ತರ್ಕದಿಂದೇನಾದೀತು ? ಬುದ್ಧಿಯ ವಿಪಾಕದಲ್ಲಿ ಬೀಳುವದಕ್ಕೆ ನನಗೆ ಇಷ್ಟವಿಲ್ಲ. ನಾನು ಬಲೆ, ಒಂದು ಹಾದಿಯಿದೆ— ಆ ಹಾದಿ ವಿಶ್ವಾಸದ ಹಾದಿಯೇ! ಆ ಸರಳ ಹಾದಿಯಿಂದಲೇ ಚಿರದಿನ ಈ ಅಬೋಧ—ಅಧಮ—ಭೃತ್ಯನಾದ ನಯನರಾಯನು ಸಾಗಿಹೋಗುವನು ! ( ಹೋಗುವನು. )

ಜಯ:— ದೇವಾ ! ಚಿಂತೆಯೇಕೆ ? ಇಂಥ ವಿಶ್ವಾಸದಿಂದಲೇ ನಾನೂ ಕಾರ್ಯ ಮಾಡುವೆ! ಪ್ರಭೋ ಯಾರದೇನು ಭಯ ? ಸೇನಾಬಲದಿಂದಾಗ ಬೇಕಾದುದೇನು! ಅಸ್ತ್ರವು ಯಾವಗಿಡದ ತೊಪ್ಪಲು ? ಯಾವಳ ಮೇಲೆ ಭಾರವಿದೆಯೋ ಅವಳ ಬಲವೇ ಬಲ! ನಾವು ನಿಜವಾಗಿಯೂ ಜನನಿಯ ಭಕ್ತರಾದರೆ, ಅವಳ ಪೂಜೆಯನ್ನು ಮಾಡಿಯೇ ತೀರಿಸೇವು ! ಪ್ರಭೋ ನಡೆಯಿರಿ ! ಜನನಿಯ ಜಯಭೇರಿಯ ಮೇಲೆ ಕೈಬೀಳಲಿ! ಪುರವಾಸಿಗಳನ್ನು ಕೂಗಿಕೊಂಡು ಬರುವೆ ! ಮಂದಿರದ ಮಹಾದ್ವಾರವು ಮುಕ್ತವಾಗಲಿ! ಹೊ! ಬನ್ನಿರಿ ಬನ್ನಿರಿ ! ಅಭಯೆಯ ಪೂಜೆಯಾಗುವದು ಬನ್ನಿರಿ ! ಜನನಿಯ ಏಕನಿಷ್ಠ ಪುತ್ರರು ಭಯವಿಲ್ಲದೆ ಬನ್ನಿರಿ! ಪುರವಾಸಿಗಳೇ ಬನ್ನಿ ಬನ್ನಿರಿ! ( ಹೋಗುವನು. )

ಪುರವಾಸಿಗಳು ಬರುವರು

ಅಕ್ರೂರ:— ಬನ್ನಿರೋ ಬನ್ನಿ ಬನ್ನಿ—

ಎಲ್ಲರೂ:— ಜಯಮಾತಾ !

ಹರಿ:— ಬನ್ನಿರೊ, ತಾಯಿಯ ಎದುರಿನಲ್ಲಿ ಕೈಯೆತ್ತಿ ಕುಣಿಯೋಣ !

ಬತ್ತಲೆ ಕುಣಿವಳು ರಣರಂಗದಲಿ ।
ನಾವೂ ಕುಣಿಯುವೆವೈ ಸಂಗದಲಿ ।
ಹತ್ತೂ ನಿಟ್ಟನು ಕತ್ತಲೆಗವಿಸುತ ಮೆರೆವಳೊ ದಿಗ್ವಸನೆ ॥
ಹೊಳೆವುದು ಉರಿಬಣ್ಣದ ನೀಳ್ನಾಲಗೆ ।
ಪತಂಗಗಳೋಡುವವೈ ಸಾವಿಗಿಲ್ಲಿಗೆ ।
ಕಪ್ಪನೆ ಕೂದಲು ಕೆದರಿತು ಮುಗಿಲಿಗೆ ರವಿಶಶಿಯಡಗಿದರು ॥
ಕೆಂಪನೆ ನೆತ್ತರ ಕರಿ ಮೈಗೆರೆಯಿತು ।
ತ್ರಿಭುವನ ನಡುಗಿತು ಹುಬ್ಬಿನ ಹಾರಿಕೆಗೆ ॥

ಎಲ್ಲರೂ:— ಜಯಮಾತಾ !

ಗಣೇಶ:— ಇನ್ನೇನೂ ಅಂಜಿಕೆಯಿಲ್ಲ.

ಕ್ರಿಷ್ಟ:— ಆಲ್ಲೋ ಆ ತೆಂಕಣೀ ಮನುಷ್ಯನೆಲ್ಲಿ ಹೋದನೋ ?

ಗಣೇಶ:— ತಾಯಿಯ ಕೀರ್ತಿಗೆ ತಾಳಲಿಲ್ಲೇಳೊ ! ಹೋಯಿತು.

ಹರಿ:— ಅಷ್ಟೇ ಯಾಕೋ ? ನಾನು ಅವನನ್ನು ಗೋಳುಮಾಡಿ ಬಿಟ್ಟಿದ್ದೇನೆ! ಇನ್ನೊಮ್ಮೆ ಈ ಕಡೆಗೆ ನೋಡುವ ಹಾಗಿಲ್ಲ! ನೋಡು ಅಕ್ರೂರಣ್ಣ! ನಮ್ಮ ಸಿಪಾಯಿ ಮಾವನ ಹೆಸರು ತೆಗೆದುಕೊಂಡದಕ್ಕೆ, ಅವನ ಮಾರಿ ಮಣ್ಣಾಗಿ ಹೋಯ್ತು !

ಅಕ್ರೂರ:— ನಮ್ಮ ನಿತ್ತಣ್ಣ ಇದ್ದಾನಲ್ಲ. ಅವನು ಅಂದು ಏನು ಬೈದನಪ್ಪ! ಮತ್ತೆ ಅವನು ತಿರುಗಿ ಉತ್ತರ ಕೊಡಲಿಕ್ಕೆ ಬಂದರೆ, "ಎಲೇ ಇದು ತೆಂಕಣ ದೇಶವು!

ಉತ್ತರ ದೇಶದ ನೀರು ಹತ್ತಿದವೇನು ? ಉತ್ತರ ಕೊಡುತ್ತಾನೆ ಉತ್ತರ!" ಅಂದ ಕೂಡಲೇ ಎಲ್ಲ ತಣ್ಣಗೆ, ಗಪ್‌ಚಿಪ್ !

ಗಣೇಶ:— ನಿತ್ತಣ್ಣನ ಮುಂದೆ ಮಾತಾಡುವ ಎದೆಯೇ ಅದು! ? ಛೀ ತೆಗೆ !

ಹರಿ:— ನಿತ್ತಣ್ಣನ ಮಾವ.

ಕ್ರಿಷ್ಟು:— ಕೇಳು ಮಾತುಕೇಳು ! ಎಂದು ನಿಮ್ಮ ಮಾವನಾದನಪ್ಪ! ?

ಹರಿ:— ನೀವೇನು ನನ್ನ ಮಾತನ್ನೆಲ್ಲ ಹಿಡಿಯಲಿಕ್ಕೆ ಹತ್ತಿದಿರಲ್ಲ! ಮಾವ ಅಲ್ಲ ದಿದ್ದರೆ ಅಲ್ಲ, ನಿನ್ನ ಗಂಟೇನು ಹೋಯಿತು ? ನಮ್ಮ ಮಾವ ಆಗಲಿಲ್ಲವೆಂದರೆ ಏನು ನಿನ್ನ ಮಾವನಾದನೇ! ?

## ರಘುಪತಿ, ಜಯಸಿಂಹ ಬರುವರು.

ರಘು:— ಸೈನ್ಯಬಂತ್ತಂತೆ! ಜಯಸಿಂಹ, ಅಸ್ತ್ರಧಾರಿಯಾಗಿ ನೀನು ಇಲ್ಲಿ ನಿಲ್ಲು. ನೀವು ಬನ್ನಿರಿ, ನಿವು ಇಲ್ಲಿ ನಿಲ್ಲಿರಿ, ಮಂದಿರದ ಬಾಗಿಲನ್ನು ಕೀಲಿಸಬೇಕು. ನಾನು ನಿಮಗೆ ಶಸ್ತ್ರಗಳನ್ನು ತಂದುಕೊಡುವೆನು.

ಗಣೇಶ:— ಅವೇಕೆ ಮಹಾರಾಜ ?

ರಘು:— ತಾಯಿಯ ಪೂಜೆಯನ್ನು ನಿಲ್ಲಿಸುವುದಕ್ಕಾಗಿ ರಾಜನ ದಂಡು ಬರುತ್ತಿದೆ.

ಹರಿ:— ದಂಡು ? ಹಾಗಾದರೆ ಶರಣಾರ್ತಿ !

ಕ್ರಿಷ್ಟು:— ನಾವೆಷ್ಟು ಮಂದಿಯೋ ? ದಂಡಿಗೆ ನಾವೇನು ಮಾಡೇವು ? !

ಹರಿ:— ಮಾಡುವವನು ಬೇಕಾದ್ದು ಮಾಡುವನು. ದಂಡು ಬಂದರೆ ಜಾಗೆ ಒಂದು ಬೇಕೋ ಇಲ್ಲೋ ? ಕಾದುವದನಕ ಹಿಂದುಗಡೆ, ಮೊದಲು ನಿಲ್ಲುವುದು ಎಲ್ಲಿ ಹೇಳು ?

ಅಕ್ರೂರ:— ನಿನ್ನ ಮಾತು ಬಿಡೊ ! ಮಹಾರಾಜರು ಸಿಟ್ಟಿಗೆ ಬಂದು ನಡುಗಲಿಕ್ಕೆ ಹತ್ತಿದ್ದಾರೆ. ಅಪ್ಪಣೆಯಾದರೆ ನಮ್ಮ ದಂಡನ್ನು ನಾವು ಕೂಡಿ ಹಾಕೋಣ.

ಹರಿ:— ಅದೇ ನೆಟ್ಟಗೆ. ಈಗ ನಿಂತಿರುವುದರೊಳಗೆ ನಮ್ಮ ಸಿಪಾಯಿಮಾಮಾನನ್ನು ಕರೆದುಕೊಂಡೇ ಬರುತ್ತೇನೆ, ನೋಡಿರಿ. ತಡಮಾಡಿ ಉಪಯೋಗವಿಲ್ಲ.

( ಎಲ್ಲರೂ ಹೊರಡುವರು. )

ರಘು:— ( ಸಿಟ್ಟಿನಿಂದ ) ನಿಲ್ಲಿರಿ ನೀವು !

ಜಯ:— ( ಕೈಮುಗಿದು ) ಪ್ರಭೋ; ಹೋಗಲಿ ಬಿಡಿರಿ. ಈ ತಿಳಿಗೇಡಿಗಳು ಪ್ರಾಣಭಯದಿಂದ ಹೆದರಿಕೊಂಡಿವೆ. ಮೊದಲೇ ನಿರ್ಜೀವಿಗಳು ! ಹೋಗಲಿ ಬಿಡಿರಿ !

ತಾಯಿಯ ಸೈನಿಕನು ನಾನಿದ್ದೇನೆ. ಒಂದೇ ದೇಹದಲ್ಲಿ ಸಾವಿರ ಸೇನೆಯ ಶಕ್ತಿ. ಅಸ್ತ್ರ ಗಿಸ್ರ ಬೀಳಲಿ ಅತ್ತ ! ಇರಲಿ; ಈ ಅಂಜುಬುರುಕರಿಗೆ ಹೋಗಗೊಡಿರಿ.

ರಘು:— ( ಸ್ವಗತ ) ಆ ಕಾಲ ಹೋಯಿತಪ್ಪೋ ಹೋಯಿತು. ಈಗ ಶಸ್ತ್ರ ಬೇಕು ಶಸ್ತ್ರ; ಬರಿ ಭಕ್ತಿ ಸಾಲದು ! (ಪ್ರಕಾಶವಾಗಿ) ಜಯಸಿಂಹ, ಹಾಗಾದರೆ ಬಲಿಯನ್ನು ತಾ. ಪೂಜೆಮಾಡುವೆ. ( ಹೊರಗೆ ವಾದ್ಯೋದ್ಯಮ )

ಜಯ:— ಪ್ರಭೋ; ಸೈನ್ಯವಲ್ಲ. ರಾಣಿಯ ಪೂಜೆ ಬಂತು !

### ರಾಣಿಯ ಅನುಚರರೂ ಪುರವಾಸಿಗಳೂ ಬರುವರು.

ಎಲ್ಲರೂ:—ಎಲ್ರೋ ಅಂಜಿಕೆ ಇಲ್ಲ, ಅಂಜಿಕೆ ಇಲ್ಲ. ಎಲ್ಲೀ ದಂಡು? ಏನು ಸುದ್ದಿ! ಪೂಜೆ ಬಂತು ಪೂಜೆ.

ಹರಿ:— ನನಗೆ ಗೊತ್ತಾದ ಹೊರತು ಲಗು ದಂಡು ಬರುವಂತಿಲ್ಲವೆಂದು, ನನ್ನ ಸುದ್ದಿಹತ್ತಿದೆ.

ರಘು:— ಜಯಸಿಂಹ, ಬೇಗನೆ ಪೂಜೆಯ ಸಿದ್ಧತೆ ಮಾಡು.

( ಪುರವಾಸಿಗಳ ನೃತ್ಯಗೀತೆಗಳಿಗಾರಂಭ )

### ಗೋವಿಂದಮಾಣಿಕ್ಯನು ಬರುವನು.

ಗೋ:— ನಡೆಯಿರಿ ಇಲ್ಲಿಂದ-- ನಿಮ್ಮ ಬಲಿಗಿಲಿ ತೆಗೆದುಕೊಂಡು ಹೋಗಿರಿ. ರಘುಪತೀ ! ನನ್ನ ಆದೇಶವನ್ನು ನೀನು ಕೇಳಿಲ್ಲವೇ ?

ರಘು:— ಕೇಳಿಲ್ಲ !

ಗೋ:— ಹಾಗಾದರೆ ನೀನು ಈ ರಾಜ್ಯದವನಲ್ಲ !

ರಘು:— ಅಲ್ಲಲ್ಲ ! ನಾನಿದ್ದಲ್ಲಿಗೆ ಬಂದರೆ ರಾಜದಂಡವು ಕಳಚಿ ಬೀಳುವುದು, ರಾಜಹಸ್ತದಿಂದ ! ಮುಕುಟವು ಮಣ್ಣುಗೂಡುವುದು, ಮಸ್ತಕದಿಂದ ! ಯಾರಿದ್ದೀರೋ ತಾಯಿಯ ಪೂಜೆಯನ್ನು ತನ್ನಿರಿ ( ವಾದ್ಯೋದ್ಯಮ )

ಗೋ:— ಬಾಯಿಮುಚ್ಚು ! ( ಅನುಚರರಿಗೆ ) ಸೇನಾಪತಿಯೆಲ್ಲಿ ? ಕರೆಯಿರಿ ! ಅಯ್ಯೋ ರಘುಪತಿ ! ಕೊನೆಗೆ ಸೈನ್ಯದಿಂದ ಧರ್ಮವನ್ನು ಸುತ್ತುವರಿಯುವುದಾಯಿತು! ಸೈನಿಕರನ್ನು ಕರೆಯುವುದಕ್ಕೆ ನಾಚಿಕೆಯಾಗುತ್ತದೆ. ! ಬಾಹುಬಲವು ದೌರ್ಬಲ್ಯವನ್ನು ನೆನಪುಗೊಳಿಸುತ್ತದೆ !

ರಘು:— ಅವಿಶ್ವಾಸೀ ! ಕಲಿಯುಗದಲ್ಲಿ ಬ್ರಹ್ಮತೇಜವು ಮುಳುಗಿ ಹೋಗಿದೆಯೆಂದು ನಿಜವಾಗಿಯೂ ಭಾವಿಸಿರುವೆಯಾ ? ಅಂತೇ ಇಷ್ಟೊಂದು ದುಸ್ಸಾಹಸವೇ ! ಹೋಗಿಲ್ಲ! ಹೋಗಿಲ್ಲ ! ಒಳಗೆ ಉರಿಯುತ್ತಿರುವ ದೀಪವು ನಿನ್ನ ಸಿಂಹಾಸನವನ್ನು

ನಿಶ್ಚಯವಾಗಿಯೂ ದಹಿಸುವುದು. ಇಲ್ಲದಿದ್ದರೆ ಈ ಮನೋನಲದಿಂದ ಎಲ್ಲ ಶಾಸ್ತ್ರ—ಎಲ್ಲ ಬ್ರಹ್ಮಗರ್ವ—ಮುವತ್ತೂರುಕೋಟಿ ಮಿಥ್ಯಾದೈವಗಳನ್ನು ಸುಟ್ಟು ಬೂದಿಮಾಡುವೆ! ಇಂದಿಲ್ಲದಿದ್ದರೆ ಎಂದಾದರೂ ಈ ಪ್ರಬಲಕಾಲವು ಬಂದೇತೀರುವುದೆಂದು ರಾಜಾಧಿ ರಾಜರೆಲ್ಲ ನೆನಪಿನಲ್ಲಿಡಲಿ !

## ನಯನರಾಯ, ಚಾಂದಪಾಲ ಬರುವರು.

ಗೋ:—(ನಯನನಿಗೆ) ಜೀವಬಲಿಯಾಗಗೊಡದಂತೆ ನೀನಿಲ್ಲಿ ಸೈನ್ಯದೊಡನೆ ಸಿದ್ಧ ನಾಗಿ ನಿಲ್ಲು.

ನಯನ:—ಈ ಅಧಮಕಿಂಕರನನ್ನು ಕ್ಷಮಿಸಿರಿ ! ದೇವಮಂದಿರದಲ್ಲಿ ರಾಜಭೃತ್ಯನು ಅಸಮರ್ಥನು. ರಾಜಪ್ರತಾಪವು ಎಷ್ಟು ದೂರ ಹೋಗಬಲ್ಲದೋ ನಾನದರ ಜೊತೆಗೆ ನೆರಳಾಗಿ ಹೋಗಬಲ್ಲೆ !

ಚಾಂದ:—ಸೇನಾಪತಿ! ಇಲ್ಲಿ ಕೇಳು. ದೀಪವಿರುವುದು ಎಲ್ಲೋ ಒಂದೆಡೆ. ಅದರ ಬೆಳಕು ಹಬ್ಬುವುದು ಎಲ್ಲಾ ಕಡೆ. ರಾಜರ ಇಚ್ಛೆ ಎಲ್ಲಿಗೆ ಹೋಗುವುದೊ ಅಲ್ಲಿಗೆ ಹೋಗುವವರು ನಾವು !

ಗೋ:—ಸೇನಾಪತೀ! ನನ್ನ ಆಜ್ಞೆ ನಿನ್ನ ವಿಚಾರಾಧೀನವಲ್ಲ! ಧರ್ಮಾಧರ್ಮವು ಲಾಭಹಾನಿಯೂ ನನ್ನ ಪಾಲಿಗೆ; ಹೇಳಿದಷ್ಟು ಕಾರ್ಯಮಾತ್ರ ನಿಮ್ಮದು !

ನಯನ:—ಹೃದಯವು ಈ ಮಾತಿಗೆ ಒಪ್ಪಲೊಲ್ಲದು ! ಮಹಾರಾಜರ ಭೃತ್ಯ ಹೌದು; ಆದರೆ ನಾನೂ ಮನುಷ್ಯ ! ಬುದ್ಧಿಯಿದೆ; ಧರ್ಮವಿದೆ; ರಾಜನಿದ್ದಾನೆ; ದೇವರಿದ್ದಾನೆ !!!

ಗೋ:—ಹೀಗಿದ್ದರೆ ಇಡು ನಿನ್ನ ಖಡ್ಗವನ್ನು! ಚಾಂದಪಾಲ! ನೀನಾದೆ ಸೇನಾಪತಿ. ಎರಡೂ ನಿಯೋಗ ನಿನಗಾದವು. ಸಾವಧಾನದಿಂದ ಸೈನ್ಯಸಮೇತನಾಗಿ ಮಂದಿರವನ್ನು ರಕ್ಷಿಸು.

ಚಾಂದ:—ಮಹಾರಾಜರ ಅಪ್ಪಣೆ !

ಗೋ:—ನಯನ, ನಿನ್ನ ಅಸ್ತ್ರವನ್ನು ಚಾಂದಪಾಲನಿಗೆ ಕೊಡು!

ನಯನ:—ಚಾಂದಪಾಲನಿಗೆ! ಮಹಾರಾಜ, ಯಾಕೆ? ಈ ಅಸ್ತ್ರವನ್ನು ನಿಮ್ಮ ಹಿರಿಯರು ನಮ್ಮ ಹಿರಿಯರಿಗೆ ಕೊಟ್ಟಿರುವರು. ತಾವು ತಿರುಗಿ ತೆಗೆದುಕೊಳ್ಳಬಯಸಿದರೆ, ತೆಗೆದುಕೊಳ್ಳಿರಿ. ಸ್ವರ್ಗದಲ್ಲಿರುವ ಪಿತೃಪಿತಾಮಹರುಗಳಿರಾ, ನೀವಿದಕ್ಕೆ ಸಾಕ್ಷಿಯಾಗಿರಿ; ಇದುವರೆಗೂ ಅಗ್ನಿಹೋತ್ರಿಯ ಪುಣ್ಯಾಗ್ನಿಯಂತೆ, ಬಹು ಯತ್ನಪೂರ್ವಕವಾಗಿ ರಾಜವಿಶ್ವಾಸವನ್ನು ಪಾಲಿಸಿಕೊಂಡು ಬಂದಿರುವೆ. ಕಲಂಕವಿಲ್ಲದೆ ಇಂದು ನಾನು ಅವರ ಒಡವೆಯನ್ನು ಅವರ ಕೈಯಲ್ಲಿ ತಿರುಗಿ ಕೊಡುವೆ!

ಚಾಂದ:—ಬಂಧು! ಇಲ್ಲೊಂದಿಷ್ಟು ಕೇಳು—

ನಯನ:—ಛೀ! ಸಾಕು ಸಾಕು! ಮಹಾರಾಜ, ಅಪ್ಪಣೆಯಿರಲಿ—

(ನಮಿಸಿ ಹೋಗುವನು.)

ಗೋ:—ರಾಜಕಾರ್ಯದಲ್ಲಿ ಕ್ಷುದ್ರಸ್ನೇಹದ ಉಪಯೋಗವಿಲ್ಲ. ದೇವತೆಗಳ ಕಾರ್ಯಭಾರವೀ ತುಚ್ಛಮಾನವರ ಮೇಲೆಯೇ? ಹಾ! ಎಂಥ ಕಠಿನತನ!

ರಘು:—ಬ್ರಹ್ಮಶಾಪದ ಫಲದಿಂದ ಇದೋ—ವಿಶ್ವಾಸದ ಹೃದಯಗಳು ಡೊಂಕ ಹೋಗುವವು! ನಿಂತ ಆಧಾರಸ್ಥಾನವು ಮುರಿದು ಹೋಗುವುದು!

ಜಯಸಿಂಹನು ಬರುವನು.

ಜಯ:—ಪೂಜೆಯ ಸಿದ್ಧತೆಯಾಗಿದೆ! ಬಲಿಯು ಇಲ್ಲೇ ಇದೆ!

ಗೋ:—ಬಲಿಯು ಯಾರಿಗೆ?

ಜಯ:—ಮಹಾರಾಜ, ತಾವು ಇಲ್ಲಿಯೇ ಇರುವಿರಾ! ಹಾಗಾದರೆ ನನ್ನ ಬಿನ್ನಹ ವನ್ನು ಲಾಲಿಸಬೇಕು! ತಮ್ಮ ಚರಣಯುಗಲತಲದಲ್ಲಿ ಬಿದ್ದು ಬೇಡಿಕೊಳ್ಳುವೆ! ಪ್ರಭೋ; ತಮ್ಮ ಗರ್ವಿತಆದೇಶವನ್ನು ತಿರುಗಿ ತೆಗೆದುಕೊಳ್ಳಿರಿ! ಮಾನವರಾಗಿಯೂ ದೇವಿ ಯನ್ನು ಮರೆಮಾಡಿ ನಿಲ್ಲುವ ಸಾಹಸ ಮಾಡಬೇಡಿರಿ!

ರಘು:—ಧಿಕ್ಕಾರ! ಜಯಸಿಂಹಾ, ಏಳು ಏಳು! ಯಾರ ಕಾಲಮೇಲೆ ಬೀಳುವಿ! ನಾನು ಯಾರಗುರುವೋ—ಅವರಿಗೆ ಈ ಸಂಸಾರದಲ್ಲಿ ಈ ಪಾದತಲವೊಂದೇ ಆಶ್ರಯ! ಮೂಢಾ ತಿರುಗಿ ನೋಡು, ಗುರುಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಕ್ಷಮೆಬೇಡು! ರಾಜನಪ್ಪಣೆಯನ್ನು ಪಡೆದು ದೇವಿಯನ್ನು ಪೂಜಿಸುವುದೆ! ಕರಾಳ ಕಾಳಿಕಾ! ಇಷ್ಟೊಂದು ನಿನಗೆ ಅಧೋಗತಿಯೇ? ಉಳಿಯಲಿ ಪೂಜೆ, ಉಳಿಯಲಿ ಬಲಿ! ರಾಜದರ್ಪವೆಷ್ಟುದಿನ ನಿಲ್ಲುವುದೋ ನೋಡುವೆ! ನಡೆ—ನಡೆ! ಜಯಸಿಂಹಾ—ಬಾ.

(ಹೋಗುವರು.)

ಗೋ:—ಈ ಸಂಸಾರದಲ್ಲಿ ವಿನಯವೆಂಬುದು ಎಲ್ಲಿದೆ? ಮಹಾದೇವೀ! ನಿನ್ನ ಪಾದಸನ್ನಿಧಿಯಲ್ಲಿಯೇ ಸುತ್ತುತ್ತಿರುವವರೂ ಕೂಡ ಅದನ್ನು ಕಲಿತಿಲ್ಲವಲ್ಲ! ಎಂಥ ನೀಚರು! ನಿನ್ನ ಮಹಿಮೆಯನ್ನು ಅಪಹರಿಸಿ ತಮ್ಮ ದೇಹದಲ್ಲಿ ತುಂಬಿಕೊಂಡು, ಅಹಂ ಕಾರದಿಂದ ಮೆರೆಯುವರಲ್ಲ! (ಹೋಗುವನು.)

## ಪ್ರಥಮಾಂಕ ಸಮಾಪ್ತ.

# ದ್ವಿತೀಯಾಂಕ.

## ಪ್ರಥಮದೃಶ್ಯ.
## ಮಂದಿರ.

---

ರಘುಪತಿ, ಜಯಸಿಂಹ, ನಕ್ಷತ್ರರಾಯ.

ನಕ್ಷ:—ಗುರುದೇವಾ ! ಯಾಕೆ ಕರೆಸಿದಿರಿ ?

ರಘು:—ನೀನು ರಾಜನಾಗುವಿಯೆಂದು ನಿನ್ನೆ ರಾತ್ರಿಯಲ್ಲಿ ದೇವಿ ಕನಸಿನಲ್ಲಿ ಹೇಳಿದ್ದಾಳೆ.

ನಕ್ಷ:-ನಾನು‼ರಾಜನಾಗುವೆನೇ! ಅಹಾಹಾ! ಪ್ರಭೋ ; ನನಗೆ ಅರಸೊತ್ತಿಗೆಯೆ? ಇದೆಂಥ ಹೊಸ ಮಾತಿದು !

ರಘು:—ಹೌದು ನೀನು ರಾಜನಾಗುವಿ !

ನಕ್ಷ:—ನನಗೆ ನಂಬುಗೆ ಹುಟ್ಟದು.

ರಘು:—ದೇವಿಯ ಸ್ವಪ್ನ ಸತ್ಯವೆ! ಸಂದೇಹವಿಲ್ಲ; ನೀನು ಅರಸೊತ್ತಿಗೆಯನ್ನು ಪಡೆಯಲೇಬೇಕು.

ನಕ್ಷ:—ಸಂದೇಹವೇ ಇಲ್ಲವೆ ! ಆಗದಿದ್ದರೆ—?

ರಘು:—ನನ್ನ ಮಾತಿಗೆ ಅವಿಶ್ವಾಸವೇ? !

ನಕ್ಷ:-ಅವಿಶ್ವಾಸವೆಷ್ಟೂ ಇಲ್ಲ. ಆದರೆ ದೇವಿಯ ಸ್ವಪ್ನ ಸಿದ್ಧಿಸದಿದ್ದರೆ ಹೇಗೆ– ? ಎಂದೆನು.

ರಘು:—ಎಂದಿಗೂ ಹಾಗಾಗದು !

ನಕ್ಷ:—ಆಗದೆ! ? ಆಗಲಿ. ಕೈಗೂಡಿದರೆ–ಆ ಮಂತ್ರಿಯನ್ನು ಮೊದಲು ಕಿತ್ತಿ ಹಾಕುವೆ. ಮುದಿಗೂಬೆಯಂತೆ ಅವನು ಯಾವಾಗಲೂ ನನ್ನ ಮೇಲೆ ಕಣ್ಣಿಟ್ಟುಕೊಂಡೇ ಇದ್ದಾನೆ. ಅವನೆಂದರೆ ನನಗೆ ಭಯ ! ಪ್ರಭೋ, ನಾನು ರಾಜನಾದರೆ ತಮ್ಮನ್ನು ಮಂತ್ರಿಯನ್ನಾಗಿ ಮಾಡಿಕೊಳ್ಳುವೆ.

ರಘು:—ಇಂಥ ಮಂತ್ರಿಪದವು ನನ್ನ ಕಾಲಕಸ !

ನಕ್ಷ:—ಹಾಗಾದರೆ ಜಯಸಿಂಹನು ಮಂತ್ರಿಯಾಗಲಿ. ಪ್ರಭೋ, ತಮಗೆ ಎಲ್ಲಾ ಗೊತ್ತು ! ಎಂದು ನಾನರಸನಾಗುವೆನು, ಹೇಳಿರಿ !

ರಘು:—ದೇವಿಯು ರಾಜರಕ್ತವನ್ನು ಬೇಡುವಳು !

ನಕ್ಷತ್ರ:—ರಾಜರಕ್ತವನ್ನು ಬೇಡುವಳೇ! ?

ರಘು:—ಹೌದು ! ಮೊದಲು ರಾಜರಕ್ತವನ್ನು ತಂದುಕೊಡು, ಬಳಿಕ ರಾಜನಾದೀಯಂತೆ !

ನಕ್ಷ:—ಎಲ್ಲಿ ಸಿಕ್ಕೀತು ?

ರಘು:—ಮನೆಯಲ್ಲಿಯೇ! ಗೋವಿಂದಮಾಣಿಕ್ಯನಿಲ್ಲವೆ ? ಅವನ ರಕ್ತ ಬೇಕು

ನಕ್ಷ:—ಅವನ ರಕ್ತಬೇಕೇ !

ರಘು:—ಜಯಸಿಂಹಾ, ಸ್ಥಿರನಾಗು, ಚಂಚಲಚಿತ್ತನಾಗಬೇಡ. ತಿಳಿಯಿತೇ! —ಕೇಳು. ಗೊತ್ತಾಗದಂತೆ ಅವನನ್ನು ವಧಿಸಿ ತಾಯಿಯ ಶ್ರೀಪಾದಕ್ಕೆ ಆ ತಪ್ತರಾಜ ರಕ್ತವನ್ನು ತಂದು ಅರ್ಪಿಸಬೇಕು. ಜಯಸಿಂಹಾ ! ಸ್ಥಿರನಾಗುವದಕ್ಕಾಗದಿದ್ದರೆ ಬೇರೆ ಕಡೆಗೆ ಹೋಗು! ನಕ್ಷತ್ರರಾಯನೇ, ತಿಳಿಯಿತೇ ! ಶ್ರಾವಣದ ಶೇಷರಾತ್ರಿಯಲ್ಲಿ ದೇವಿಗೆ ರಾಜರಕ್ತಬೇಕು ! ನೀವು ಒಡಹುಟ್ಟಿದವರಿಬ್ಬರು ! ಹಿರಿಯನುಳಿದರೆ ನಿನ್ನ ನೆತ್ತರಿಂದ! ಮಹಾಕಾಲಿ ತೃಷಿತಳಾಗಿರುವಳು ! ವಿಚಾರಮಾಡುವುದಕ್ಕೆ ಸಮಯವಿಲ್ಲ.

ನಕ್ಷ:—ಸರ್ವನಾಶ ! ದೇವಾ, ಅರಸೊತ್ತಿಗೆಯಿಂದ ನನಗಾಗಬೇಕಾದದ್ದೇನು! ರಾಜರಕ್ತವು ರಾಜದೇಹದಲ್ಲುಳಿಯಲಿ ! ಇಂದಿದ್ದದ್ದೇ ನನಗೆ ಸಾಕು !

ರಘು:—ಬಿಡದು ಬಿಡದು! ಏನುಮಾಡಿದರೂ ಬಿಡದು ! ರಾಜರಕ್ತವನ್ನು ತರಲೇ ಬೇಕು !

ನಕ್ಷ:—ದೇವಾ ! ಏನುಮಾಡಲಿ—ನೀವೇ ಹೇಳಿರಿ !

ರಘು:—ಸಿದ್ಧನಾಗು ! ಏನು ಹೇಳುವೆನೋ ಅದನ್ನು ತಡವಿಲ್ಲದೆ ಕಡೆಗಾಣಿಸು! ಕಾರ್ಯಸಿದ್ಧಿಯಾಗುವವರೆಗೆ ಮೋರೆ ಮುಚ್ಚಿಕೊಂಡಿರು ! ಹೋಗು ಹೋಗು—ಇದೇ ಅಪ್ಪಣೆ ಹೋಗು !

ನಕ್ಷ:—ಹೇತಾಯೀ ! ಕಾತ್ಯಾಯಿನೀ ! ( ಹೋಗುವನು. )

ಜಯ:—ಇದೇನು ಮಾತು! ದಯಾಮಯೀ, ಇದೇನು ಮಾತು! ನಿನ್ನ ಆಜ್ಞೆಯೆ! ತಮ್ಮನ ಕೈಯಿಂದ ಅಣ್ಣನ ಕೊಲೆ! ವಿಶ್ವದ ತಾಯೀ ! ಗುರುದೇವಾ ! ಇಂಥ ಅಪ್ಪಣೆ ಯನ್ನು ತಾಯಿಯ ಆಜ್ಞೆಯೆಂದು ಸಾರಿದಿಯಾ !

ರಘು:—ಮತ್ತೆ ಉಪಾಯವಿನ್ನೇನಿದೆ ಹೇಳು !

ಜಯ:—ಉಪಾಯವೇ! ಪ್ರಭೋ; ಯಾತರ ಉಪಾಯವು? ಹಾ! ಛೀ! ಜನನೀ ನಿನ್ನ ಕೈಯ್ಯಲ್ಲಿ ಖಡ್ಗವಿಲ್ಲವೆ ? ಚಂಡೀ, ನಿನ್ನ ರೋಷದಲ್ಲಿ ಸಿಡಿಲಬೆಂಕಿಯಿಲ್ಲವೆ ? ನಿನ್ನಿ ಚ್ಛೆಗೂ ಅನ್ಯ ಉಪಾಯವು ಬೇಕೆ ! ಇದಿರಿಗೆ ಬರಲಿಕ್ಕಾಗದೆ ಮರೆಯಲ್ಲಿ ನಿಂತು ಮಿಡಿ ಯುವ ಕಳ್ಳತನವೇ! ? ಇದೆಂಥ ಪಾಪವಿದು !

ರಘು:—ಪಾಪಪುಣ್ಯ ನಿನಗೇನು ಗೊತ್ತು !

ಜಯ:—ತಮ್ಮ ಬಳಿಯಲ್ಲಿಯೇ ಕಲಿತಿರುವೆ !

ರಘು:—ಮುದ್ದುಮಗೂ ! ಹೀಗಿದ್ದರೆ ನಿನಗಿನ್ನೊಂದು ಮಾತನ್ನು ಕಲಿಸಿಕೊ ಡುವೆ ಬಾ! ಪಾಪಪುಣ್ಯವೆಂಬುದೇನೂ ಇಲ್ಲ. ಬಂಧುವಾರು! ತನ್ನವರಾರು! ಕೊಲೆಯು ಪಾಪವೆಂದು ನಿನಗೆ ಯಾರು ಹೇಳಿದರು ? ಈ ಜಗತ್ತೊಂದು ದೊಡ್ಡ ಕೊಲೆಮನೆಯು

ಗದೆ ! ಗೊತ್ತಿಲ್ಲವೆ ? ಎವೆಮುಚ್ಚಿ ತೆರೆಯುವಷ್ಟರಲ್ಲಿ ಕೋಟಿ ಕೋಟಿ ಜೀವಿಗಳು ಸ್ಥಿರವಾಗಿ ಕಣ್ಣುಮುಚ್ಚುವವು ! ಅದು ಯಾರ ಆಟ ? ಈ ಧರಣಿಯ ಧೂಳಿಯೆಲ್ಲ ಕೊಲೆಯಲ್ಲಿ ಕಲಕಿದೆ ! ಹೆಜ್ಜೆಹೆಜ್ಜೆಗೆ ಶತಕೀಟಗಳ ಹತ್ಯ ! ಅವುಗಳಿಗೆ ಜೀವವಿಲ್ಲವೆ ? ವೃದ್ಧ ಮಹಾಕಾಲನು ವಿಶ್ರಾಂತಿಯಿಲ್ಲದೆ ವಿಶ್ವಪತ್ರದ ಮೇಲೆ ರಕ್ತಾಕ್ಷರಗಳಿಂದ ಜೀವಿಗಳ ಕ್ಷಣಿಕವಾದ ಇತಿಹಾಸವನ್ನು ಬರೆಯುತ್ತಿದ್ದಾನೆ ! ಮನೆಯಲ್ಲಿ ಕೊಲೆ; ವನದಲ್ಲಿ ಕೊಲೆ! ಹಕ್ಕಿಗಳ ಗೂಡಿನಲ್ಲಿ ಕೊಲೆ; ಹುಳುಗಳ ಬೀಡಿನಲ್ಲಿ ಕೊಲೆ! ಆಳವಾದ ಕಡಲಲ್ಲಿ ಕೊಲೆ; ನೀಳವಾದ ಮುಗಿಲಲ್ಲಿ ಕೊಲೆ! ಊಟಕ್ಕೆ ಕೊಲೆ; ಆಟಕ್ಕೆ ಕೊಲೆ! ಕಾರಣವಿಲ್ಲದೆಯೂ ಕೊಲೆ ! ಅನಿಚ್ಛೆಯಿಂದಲೂ ಕೊಲೆ ! ಹುಲಿಯ ಹಾರಿಕೆಗೆ ಸಿಕ್ಕ ಹರಿಣಿಯಂತೆ, ಹೊರಳಿ ನಿಲ್ಲುವುದಕ್ಕೂ ಕೂಡ ಹೊತ್ತಿಲ್ಲದೆ, ವಿಶ್ವಬ್ರಹ್ಮಾಂಡವೆಲ್ಲ ಜೀವದ ಹಂಗುದೊರೆದು ಕೊಲೆಯ ಮುಂದೆ ತಲೆಬಾಗಿಸಿ ಸಾಗಿದೆ ! ಕಾಲಸ್ವರೂಪಿಣಿಯಾದ ಮಹಾಕಾಲಿಯು, ತೃಷಾತೀಕ್ಷ್ಣಲೋಲಜಿಹ್ವೆಯನ್ನು ಚಾಚಿ ನಿಂತಿದ್ದಾಳೆ. ಹಿಚುಕಿದ ದ್ರಾಕ್ಷೆಯಿಂದೊಸರುವ ರಸಧಾರೆಯಂತೆ, ವಿಶ್ವದ ನಾಲ್ಕೂ ನಿಟ್ಟಿನಿಂದವಳ ಅನಂತಖರ್ಪರದಲ್ಲಿ ಚಿರರಕ್ತಧಾರೆ ತೂರಿ ಬರುವದು !

ಜಯ:—ನಿಲ್ಲು ನಿಲ್ಲು ನಿಲ್ಲು! ಮಾಯಾವಿನೀ ! ಪಿಶಾಚಿನೀ ! ತಾಯಿಯ ಮೋರೆ ಕಾಣದ ಈ (ಮಾತೃಹೀನ) ಸಂಸಾರದಲ್ಲಿ ತಾಯಿಯಸೋಗು ಮಾಡಿಕೊಂಡು ರಕ್ತಪಾನ ಲೋಭದಿಂದ ಬಂದಿರುವಿ ! ಹಸಿದ ಹಕ್ಕಿಯ ಮರಿಯು, ನೋಡುವವರಿಲ್ಲದ ಗೂಡಿನಲ್ಲಿ ತಾಯಿಯ ಹಾದಿನೋಡುವುದಕ್ಕೆ ಹಲುಬಿ ಹಣಿಕೆ ಹಾಕುತ್ತಿದ್ದರೆ—ಶೋಡಿಕಾಗೆ ಬಳಿ ಸುಳಿಯುವದು ! ಕಾತರಸ್ವರದಿಂದ—ಕಣ್ದೆರೆಯದ ಮರಿ ತಾಯಿಯೆಂದದನ್ನು ಕೂಗಿಕೊಂಡು, ಕಠಿನ ಚುಂಚಿನಿಂದ ಕುಕ್ಕಿಸಿಕೊಂಡು ಎಳೆಜೀವ ಕಳಕೊಳ್ಳುವುದಯ್ಯೋ ! ಮಾಯಾವಿನೀ! ನಿನ್ನ ವ್ಯಾಪಾರವೂ ಹೀಗೆಯೇ ಇದೆಯಲ್ಲವೇ!? ಪ್ರೀತಿ ಸುಳ್ಳು ; ಸ್ನೇಹ ಸುಳ್ಳು ; ದಯೆ ಸುಳ್ಳು—ಎಲ್ಲಾ ಸುಳ್ಳು ! ಅನಾದ್ಯನಂತಹಿಂಸೆಯೊಂದೇ ಸತ್ಯ ! ಹಾಗಾದರೆ ದಗ್ಧಧರಣಿಯು ತಪ್ತವಕ್ಷದಲ್ಲಿ ಆಶೀರ್ವಾದದಂತೆ ಮೋಡದಿಂದ ಮಳೆಸುರಿಯುವುದೇಕೆ ? ! ದಯಾಮಯಿಯಾದ ಸ್ರೋತಸ್ವಿನಿಯು ಕಲ್ಲಬಗಿದು ಮರುಭೂಮಿಗೆ ನುಸುಳಿ ಬರುವುದೇಕೆ ? ! ಸಾವಿರ ಮುಳ್ಳುಗಳ ಶಿರೋಭಾಗದಲ್ಲಿ ಹೂವರಳುವುದೇಕೆ ?

—ಪ್ರಭೋ! ನನ್ನನ್ನು ಒರೆದು ನೋಡಿದಿರಿ! ಮಾತೃಭಕ್ತಿಯು ರಕ್ತದಂತೆ ಹೃದಯವನ್ನು ಹರಿದು ಹೊರಚಿಮ್ಮುವುದೋ ಇಲ್ಲವೋ ಎಂದು ನೋಡುವಿರಾ! ನನ್ನ ಹೃದಯವನ್ನು ಮಾತೆಯ ಪಾದಕ್ಕೆ ಬಲಿಕೊಟ್ಟೆನು! ಅಕೋ, ನನ್ನ ಸ್ನೇಹಪರಿಹಾಸಕ್ಕೆ ಮಾತೆ ನಗುತ್ತಿರುವಳು!

—ಹೌದು ಹೌದು ! ನೀನು ರಾಕ್ಷಸಿಯಾದ ಪಾಷಾಣಿ ಹೌದು ! ನನ್ನ ತಾಯಿ ನೀನು ರಕ್ತಪಿಪಾಸಿನಿಯು ! ನನ್ನ ರಕ್ತವನ್ನು ಸ್ವೀಕರಿಸುವಿಯಾ!— ಈಜನ್ಮದ ಮಟ್ಟಿಗೆ ಈ ಸಂತಾನ ಜನ್ಮವನ್ನು ಅಳುಕಿಸುವಿಯಾ! ಎದೆಗೆ ಚೂರಿಯನ್ನು ಇರಿದುಕೊಳ್ಳಲೇ !?

ಮುದ್ದುಮಕ್ಕಳ ನೆತ್ತರು ನಿನಗೆ ತುಂಬಾ ಪ್ರಿಯಕರವಲ್ಲವೆ ! ಅಯ್ಯೋ, ತಾಯೀ ! ನಿಜವಾಗಿಯೂ ನೀನು ರಾಕ್ಷಸಿಯು! ಪಾಷಾಣಿಯು!

—ಗುರುದೇವಾ; ನನ್ನನ್ನು ಕರೆದಿರಾ ! ಇದೆಲ್ಲಾ ತಮ್ಮ ಛಲನೆಯೆಂದು ತಿಳಿಯುವೆ. ಭಕ್ತಹೃದಯವಿದಾರಿತವಾದ ರಕ್ತ ಬೇಕೆ! ತಾವು ಕೊಟ್ಟ ವೇದನೆಯ ಮೇಲೆ ತಾಯಿಯ ಸ್ನೇಹಹಸ್ತವಿದೆ. ದುಃಖಕ್ಕಿಂತ ಸುಖವು ಶತಗುಣವು ! ಆದರೆ—ರಾಜರಕ್ತ! ಛೀ ಛಿ ! ಭಕ್ತಿಪಿಪಾಸಿತಳಾದ ಮಾತೆಯನ್ನು ರಕ್ತಪಿಪಾಸಿನಿಯೆಂದು ಹೇಳಲಿಕ್ಕಾದೀತೆ!!

ರಘು:— ಹಾಗಾದರೆ ಬಲಿದಾನವು ನಿಂತು ಹೋಗಲಿ !

ಜಯ:— ನಿಂತುಹೋಗಲಿ ? ! ಬೇಡ ಬೇಡ ಗುರುದೇವಾ; ಒಳಿತುಕೇಡುಗಳನ್ನೆಲ್ಲಾ ನೀವು ಬಲ್ಲವರು ! ಸರಲಭಕ್ತಿಯ ವಿಧಿಯು ಶಾಸ್ತ್ರವಿಧಿಯಲ್ಲ. ತನ್ನ ಬೆಳಕಿನಿಂದಲೇ ಕಣ್ಣುನೋಡದು. ಆ ಬೆಳಕು ಮುಗಿಲಿನಿಂದಿಳಿದುಬರುವದು. ಪ್ರಭೋ; ಕ್ಷಮಿಸಿರಿ-- ಈ ದಾಸನನ್ನು ಕ್ಷಮಿಸಿರಿ! ಸ್ವದ್ಧರ್ಮಮೂಢತೆಯನ್ನು ಕ್ಷಮಿಸಿರಿ ! ತುಂಬ ನೊಂದಿನಲ್ಲಾಡಿದ ಉದ್ಭ್ರಾಂತಪ್ರಲಾಪವನ್ನು ಕ್ಷಮಿಸಿರಿ ! ಪ್ರಭೋ, ಹೇಳಿರಿ— ನಿಜವಾಗಿಯೂ ಮಹಾದೇವಿಯು ರಾಜರಕ್ತವನ್ನು ಬಯಸುವಳೇ ?

ರಘು:— ಅಯ್ಯೋ ಮಗು! ಅಯ್ಯೋ, ಕೊನೆಗೆ ನನ್ನ ಮೇಲೆ ಅವಿಶ್ವಾಸವೇ !

ಜಯ:— ಅವಿಶ್ವಾಸವೇ! ? ಎಂದೂ ಇಲ್ಲ ! ತಮ್ಮನ್ನು ಬಿಟ್ಟರೆ ನನ್ನ ವಿಶ್ವಾಸಕ್ಕೆ ನೆಲೆಯೆಲ್ಲಿ ? ವಾಸುಕಿಯ ಶಿರಶ್ಚ್ಯುತವಾದ ವಸುಂಧರೆಯಂತೆ ಶೂನ್ಯದಿಂದಲೂ ಶೂನ್ಯದಲ್ಲಿ ಬಿದ್ದು ನಿರ್ನಾಮವಾದೀತು! ಮಹಾಮಾಯೆಯು ರಾಜರಕ್ತವನ್ನೇ ಬೇಡುವಳಾದರೆ ಅವನ್ನು ನಾನು ತರುವೆ ! ಭ್ರಾತೃಹತ್ಯವಾಗಗೊಡಲಾರೆನು !

ರಘು:— ದೇವರ ಆಜ್ಞೆಯು ಪಾಪವಲ್ಲ !

ಜಯ:— ಪುಣ್ಯವೇ ಆದರೆ, ಅದನ್ನು ನಾನೇ ಗಳಿಸುವೆ !

ರಘು:— ಮಗೂ, ಹಾಗಾದರೆ ಸತ್ಯವಾಗಿ ಹೇಳುವೆ-- ನಾನು ನಿನ್ನನ್ನು ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸುವೆ. ನಿನ್ನನ್ನು ಶಿಶುಕಾಲದಿಂದಲೂ ತಾಯಿಗಿಂತ ಹೆಚ್ಚಾಗಿ ಸ್ನೇಹದಿಂದ ಕಾಪಾಡಿರುವೆನು. ಈಗ ನಿನ್ನನ್ನು ಕಳೆದುಕೊಳ್ಳಲಾರೆನು !

ಜಯ:— ನನ್ನ ಸ್ನೇಹದಲ್ಲಿ ಪಾಪವಾಗಗೊಡುವದಿಲ್ಲ. ತಮ್ಮ ಸ್ನೇಹಕ್ಕೆ ಅಭಿಶಾಪ ತರುವದಿಲ್ಲ !

ರಘು:— ಒಳ್ಳೆಯದು ಒಳ್ಳೆಯದು !!

# ದ್ವಿತೀಯದೃಶ್ಯ.

## ಮಂದಿರ.

## ಅಪರ್ಣಾ.

(ಗಾನ)

ನಿಮ್ಮೀ ಬಾಗಿಲೊಳೇ ।
ನಿಂತಿಹೆ ಕೂಳಿಲ್ಲದೆ ಪುರವಾಸಿಗಳೇ ॥

ಜಯಸಿಂಹಾ! ಜಯಸಿಂಹನೆಲ್ಲಿ ? ಈ ಮಂದಿರದಲ್ಲಿ ಯಾರೂ ಇಲ್ಲ! ಏ ಅಗಳಾ ಜದ ಅಚಲಮೂರ್ತೀ; ಇಲ್ಲಿ ನಿಂತವಳು ನೀನಾರು?! ಏನೂ ಮಾತಾಡದೆ ಜಗದ ಸಾರ ಧನವನ್ನೆಷ್ಟು ಸೆಳೆಯುವಿ! ನಾನು ಯಾರಿಗಾಗಿ, ಕಾತರಳಾಗಿ-ಕಂಗಾಲಳಾಗಿ ಹಾದಿ ಬೀದಿಯೆಲ್ಲ ಸುತ್ತಿಸಾಯುವೆನೋ, ಅವನು ತಾನಾಗಿ ನಿನ್ನ ಕಾಲಕೆಳಗೆ ತುಂಬಾ ತನ್ನನ್ನು ನೀಡುವನಲ್ಲವೆ! ಅವನಿಂದ ನಿನಗೇನು ಪ್ರಯೋಜನ! ? ದರಿದ್ರವಾದ ಈ ಸಂಸಾರದ ಸರ್ವವ್ಯವಹಾರದಿಂದ ಸೆಳೆದುಕೊಂಡು, ಆ ಪ್ರಾಣಿಯನ್ನು ಕೃಪಣನ ಧನದಂತೆ ಯಾಕೆ ಈ ಮಂದಿರದ ತಳದಲ್ಲಿ ಹುಗಿದಿಟ್ಟಿರುವಿ?! ಜಯಸಿಂಹಾ, ಈ ಪಾಷಾಣಿಯು ಏನು ಸುಖಕೊಡುವಳು? ನಿನ್ನೊಡನೆ ಏನು ಹೇಳುವಳು? ನಿನಗಾಗಿ ಏನು ಚಿಂತಿಸುವಳು?! ಪ್ರಾಣದ ಗೋಪನಪಾತ್ರದಲ್ಲಿ ಚಿರರಾತ್ರಿದಿನವೂ ಯಾವ ಸಾಂತ್ವನಸುಧೆಯನ್ನು ಕೂಡಿಸಿಡುವಳು ? ಎಲೋ ಚಿತ್ರೋಪವಾಸಿಯೆ! ಯಾರ ಮುಚ್ಚುಬಾಗಿಲ ಬಳಿಯಲ್ಲಿ ಕುಳಿತಿರುವಿ?!

ನಿಮ್ಮೀ ಬಾಗಿಲೊಳೇ ।
ನಿಂತೆಹೆ ಕೂಳಿಲ್ಲದೆ ಪುರವಾಸಿಗಳೇ ॥
ಸುಖದ ಸಂತೆ ತೊರೆದೆ । ಮನೆಮನೆಯಾಟವನ್ನು ಬರಿದೆ ।
ಕೇಳುವೆ ಸುಮಧುರಮುರಲಿಯ ದನಿಯನು ಹಗಲಿರುಳೂ ಇರದೆ ॥

### ರಘುಪತಿಯು ಪ್ರವೇಶಿಸುವನು.

ರಘು:—ಈ ಮಂದಿರದಲ್ಲಿ ನೀನಾರೇ !?

ಅಪರ್ಣೆ:—ನಾನೊಬ್ಬ ತಿರುಕಿ ! ಜಯಸಿಂಹನೆಲ್ಲಿ ?

ರಘು:—ಮಾಯಾವಿನೀ ! ಇಲ್ಲಿಂದ ದೂರ ಹೋಗು ! ಜಯಸಿಂಹನನು ದೇವಿಯ ಸನ್ನಿಧಿಯಿಂದ ಕಸಿದುಕೊಂಡು ಹೋಗುವುದಕ್ಕೆ ಬಂದಿದ್ದಾಳೆ, ಈ ಉಪದೇವಿ!!

ಅಪರ್ಣೆ:—ನನ್ನಿಂದ ದೇವಿಗೇನು ಭಯ? ನನ್ನದನ್ನೆಲ್ಲಾ ನುಂಗಿಬಿಡುವಳೆಂದು, ನಾನೇ ಅವಳಿಗೆ ಭಯಪಡುವೆ.

( ಎಂದು ಹಾಡುತ್ತ ಹೋಗುವಳು ).

ಆಯುವ ಬಯಸೆನು । ಶ್ರೀಯನು ಬಯಸೆನು ।
ತೇಲಿ ಹೋಗುವೆನು ಮೊದಲು ಹೊರಟೆಡೆಗೆ ॥
ಹೊಸ ಹೊಸ ಸುಖದಲಿ । ನಲಿಯಿರಿ ಜಗದಲಿ ।
ಬಾಡದು ಬೀಡಿನೊಳುಕ್ಕುವ ತುಂಬುನಗೆ ॥

---

## ತೃತೀಯ ದೃಶ್ಯ.

---

## ಮಂದಿರದಿದಿರಿನ ಬೀದಿ.

### ಜಯಸಿಂಹ.

ಜಯ:—ಎಲೈ ಚಿಂತಾಜಾಲವೇ ದೂರಾಗು ! ದ್ವಿಧಾವೃತ್ತಿಯೇ ದೂರಾಗು! ಎಷ್ಟೇ ಕ್ರೂರವಾದರೂ ಸರಿ, ಎಷ್ಟೇ ಕಠೋರವಾದರೂ ಸರಿ, ಯೋಚನೆಯ ನರಕಕ್ಕಿಂತ ಕಾರ್ಯವು ಒಳ್ಳೆಯದು ! ಕಾರ್ಯಕ್ಕೆ ಕೊನೆಯಿದೆ. ಆದರೆ ಯೋಚನೆಗೆ ಮೇರೆಯೇ ಇಲ್ಲ. ಪಳಪಳಕ್ಕೂ ಮೋಡದಂತೆ ಸಹಸ್ರಮೂರ್ತಿಗಳನ್ನು ಧರಿಸುವದು. ನಾಲ್ಕೂ ದಿಕ್ಕಿಗೆ ಎಷ್ಟು ಹಾದಿಯನ್ನು ಹುಡುಕಿ ಸತ್ತರೂ ಸರಿ ; ಅಷ್ಟೂ ಹಾದಿ ಲೋಪವೇ ! ಹಲವು ತೆರಕ್ಕಿಂತ ಒಂ—ದೊಳ್ಳೆಯದು ! ನೀನು ಸತ್ಯ, ಗುರುದೇವಾ ನಿನ್ನಾದೇಶವೂ ಸತ್ಯ ! ನೀನು ತೋರಿಸಿದ್ದೆಲ್ಲಾ ಸತ್ಯ. ಕೊಲೆಯು ಪಾಪವಲ್ಲ, ಅಣ್ಣನ ಕೊಲೆಯು ಪಾಪವಲ್ಲ, ರಾಜಹತ್ಯ ಪಾಪವಲ್ಲ ! ಇದುವೆ ಸತ್ಯ ; ಇದುವೆ ಸತ್ಯವೆ! ಪಾಪ ಪುಣ್ಯವಿಲ್ಲ, ಇದುವೆ ಸತ್ಯವೆ !? ಯೋಚನೆ ಸಾಕು ! ಆತ್ಮದಾಹವೂ ಸಾಕು! ವಿಚಾರವಿವೇಕವೆಲ್ಲಾ ಸಾಕು !—ಅಣ್ಣಗಳಿರಾ ಎಲ್ಲರೂ ಎಲ್ಲಿಗೆ ಹೊರಟಿರುವಿ! ನಿಶಿಪುರದಲ್ಲಿ ಜಾತ್ರೆಯೆಂದು ತೋರುತ್ತದೆ! ಕುಕೀರಮಣಿಯ ನರ್ತನವಾಗುವದೇ! ನಾನೂ ಹೋಗುವೆ. ಈ ಧರೆಯಲ್ಲಿ ಎಷ್ಟು ಸುಖವೆಂದು ಹೇಳಲಿ ! ನಾರಿಯರೆಲ್ಲ ನಿಶ್ಚಿಂತೆಯಿಂದ ನರ್ತಿಸುತ್ತಿದ್ದಾರೆ. ದಡವಿಾರಿ ಹರಿಯುವ ಹೊಳೆಯಂತೆ ನಾಲ್ಕು ನಿಟ್ಟನಿಂದ ಮಧುರ ಅಂಗದ ರಂಗಭಂಗ ಸೂಸಿ ಕುಣಿಯುವದು. ನಿಶ್ಚಿಂತ ಆನಂದದಲ್ಲಿ ಎಲ್ಲ ನಿಟ್ಟನಿಂದಲೂ ಎಲ್ಲರೂ ಬಂದು ಸೇರುತ್ತಿದ್ದಾರೆ ! ಗೀತಗಾನವೇಳುತ್ತಿದೆ; ಹಾಸ್ಯ ಪರಿಹಾಸಗಳೇಳುತ್ತಿವೆ; ಧರಣಿಯ ಶೋಭೆಯು ಉಜ್ವಲಮೂರ್ತಿಯನ್ನು ಧರಿಸಿದೆ! ನಾನೂ ಹೊರಟೆನು !

ಯಾರು ಕೊಳ್ಳುವಿರಯ್ಯ । ಮಾರುವೆನು ನನ್ನ ॥
ಮನದ ಮುಸುಕನು ತೆರೆದು । ಕೆಲಸಬೊಗಸೆಯ ಮರೆದು ।
ಬರುವೆ ನಿಮ್ಮೊಳಗೆ ॥

( ದೂರದಲ್ಲಿ ಅಪರ್ಣೆ ಬರುವಳು. )

ಅದಾರು ? ಅಪರ್ಣೆಯು ! ದೂರದಲ್ಲೇಕೆ ನಿಂತಿರುವೆ ! ಮೌನವಾಗಿ ನಿಂತು ಜಯಸಿಂಹನ ಗೀತಮಾಧುರ್ಯವನ್ನು ಸವಿಯುವಿಯೋ ! ಎಲ್ಲ ಸುಳ್ಳು; ತುಂಬಾ ನೋಸ! ಅಂತೆಯೆ ನಗುವೆ—ಅಂತೆಯೆ ಹಾಡುವೆ ! ಅದೋ ನೋಡು ; ಅಂತೆಯೆ ಏನೂ ಭಾವಿಸದೆ ಮಂದಿ ಹೇಗೆ ನಡೆದಿದ್ದಾರೆ! ಅಂತೆಯೆ ಸೊಟ್ಟಪುಟ್ಟ ಮಾತಿಗೂ ಇಷ್ಟೊಂದು ಕೌತುಕದ ನಗೆ; ಇಷ್ಟೊಂದು ಕುತೂಹಲ ! ಅಂತೆಯೆ ಇಷ್ಟೊಂದು ಯತ್ನದಿಂದ ಯುವತಿಯರು ಸಿಂಗಾರ ಮಾಡಿಕೊಂಡಿದ್ದಾರೆ. ಮಿಥ್ಯೆಯಲ್ಲದೆ ಸತ್ಯವೇ ಆಗಿದ್ದರೆ ಹೀಗಾಗುತ್ತಿದ್ದಿತೇ ? ಸಹಜವಾಗಿ ಇಷ್ಟೊಂದು ಆನಂದವಿಲ್ಲಿ, ಹರಿಯಬಹುದಾಗಿದ್ದಿತೇ ? ಹಾಗಾಗಿದ್ದರೆ ವೇದನೆಯಿಂದ ವಿದೀರ್ಣವಾದ ಧರೆಯಲ್ಲಿ, ವಿಶ್ವವ್ಯಾಪಿಯಾದ ವ್ಯಾಕುಲಕ್ರಂದನವು ನಿಂತುಹೋಗಿ, ಅನಂತಕಾಲದಿಂದಲೂ ಮೂಕಾಗಿ ಹೋಗುತ್ತಿದ್ದಿತು ! ವೇದನೆಯಲ್ಲಿ ಕೊಳಲು ನಿಜವಾಗಿಯೇ ಅಳುತ್ತಿದ್ದರೆ, ಒಡೆದು, ಅವರ ಸಂಗೀತವೆಲ್ಲ ನಿಂತುಹೋಗುತ್ತಿದ್ದಿತು ! ಸುಳ್ಳೆಂತಲೇ ಇಷ್ಟೊಂದು ನಗೆ ! ಸುಳ್ಳೆಂತಲೇ ಸ್ಮಶಾನದ ತೊಡೆಯ ಮೇಲೆಯೂ ಆಟ ! ಅಂತೆಯೆ ವೇದನೆಯ ಮಗ್ಗುಲಲ್ಲಿ ಮಲಗಿಯೂ ಗಾನ ! ಅಂತೆಯೆ ಹಿಂಸಾವ್ಯಾಘ್ರಿಣಿಯ ಕೂರುಗುರಲ್ಲಿ ಸಿಕ್ಕೂ ದಿನದ ಕೆಲಸಬೊಗಸೆ ! ಸತ್ಯವೇ ಆಗಿದ್ದರೆ ಹೀಗಾಗುತ್ತಿದ್ದಿತೇ ? ಹಾ ! ಅಪರ್ಣಾ, ನಾನೂ ನೀನೂ ಏಷ್ಟು ಸತ್ಯವಲ್ಲ ! ಅಂತೆಯೇ—ತಿಳಿದುಕೊಂಡು ಸುಖಿಯಾಗು! ವಿಷಂಣ-ವಿಸ್ಮಯ-ಮುಗ್ಧನಯುನಗಳನ್ನೆತ್ತಿ ಏಕೆ ದುರುಗುಟ್ಟುವೆ ? ಬಾರೇ ಸಖಿ ! ಶೂನ್ಯನಭಸ್ತಲದಲ್ಲಿ ತೇಲಿಹೋಗುವ ಲಘುಮೇಘಖಂಡಮುಗಲವಂತೆ ನಾವಿಬ್ಬರೂ ಸಂಸಾರವನ್ನು ದಾಟಿ ಕಡೆತನಕ ತಿರುಗಿ ಬಾರದಂತೆ ಸಾಗಿ ಹೋಗುವ, ಬಾರೇ !

**ರಘುಪತಿ ಬರುವನು.**

ರಘು:—ಜಯಸಿಂಹಾ !

ಜಯ:—ನನಗೆ ನಿನ್ನ ಗುರುತು ಸಿಕ್ಕದು. ಸಾವಿರಾರು ಮಂದಿ ಹಾದಿಕಾರರಂತೆ, ನಾನು ಕೂಡ ನನ್ನ ದೈವಪಥದಲ್ಲಿ ತೇಲಿ ಹೋಗುತ್ತಿದ್ದೇನೆ ! ನನ್ನನ್ನು ತಡೆಯುವವನು ನೀನು ಯಾರು ? ನಡೆ ಹೋಗು—ನಾನೂ ನಡೆದೆ !

ರಘು:— ಜಯಸಿಂಹಾ !

ಜಯ:— ಅದೋ ನೋಡು ಇದಿರಿಗೆ ಹಾದಿ ನಿಡಿದಾಗಿ ಹೋಗಿದೆ. ಭಿಕ್ಷಾಪಾತ್ರೆಯನ್ನು ಹಿಡಿದುಕೊಂಡು, ಅದೋ ಅಲ್ಲಿ ನಡೆದಿರುವ ನನ್ನ ಭಿಕಾರಿಣೀ ಸಖಿಯೊಡನೆ ನಡೆದೆ.- ಆ! ಯಾರೆಂದರು- ಸಂಸಾರದ ರಾಜಪಥವು ಬಿಕ್ಕಟ್ಟಾದದ್ದೇ ! ಹೇಗಾದರೂ ಹೋಗಲೊಲ್ಲೆನೇಕೆ, ಹೊತ್ತು ಮುಗಿಯುವಷ್ಟರಲ್ಲಿ, ಆಚಾರ—ವಿಚಾರ—ತರ್ಕವಿತರ್ಕ ಜಾಲಗಳೆಲ್ಲ ಮಸುಳಿ ಮಾಯವಾಗಿ ಹೋಗುವ ಆ ಜೀವನದ ಕೊನೆಯ ಕ್ಷಣವನ್ನು ಸೇರುವೆ. ಪರಿಶ್ರಾಂತವಾದ ಈ ಕ್ಷುದ್ರನರಜನ್ಮವನ್ನು ಧರಣಿಯ ತೊಡೆಯಲ್ಲಿ ನೀಡುವೆ. ನನ್ನಿಹೀ ನಾಲ್ಕಾರು ದಿನದ ಹೊರೆಯನ್ನು,-- ಅರುವು ಮರವು, ನೋವು

ನಲಿವು, ಆಶೆ ನಿರಾಶೆಗಳಲ್ಲಿ ಭ್ರಷ್ಟವಾಗಿದ ಜೀರ್ಣಜೀವನದ ಹೊರಲಾರದ ಹೊರೆಯನ್ನು, ಅನಂತಕಾಲನ ಕೈಗೆ ನೀಡಿ ತುಂಬಾ ದಣಿವಾರಿಸಿಕೊಳ್ಳುವೆ! ಇಂಥಾದ್ದೀ ಸಂಸಾರ! ಶಾಸ್ತ್ರಗೀಸ್ತ್ರವೇನು ಕೆಲಸದ್ದು! ಗುರುವಿನಿಂದಾಗ ಬೇಕಾದದ್ದೇನು !!!...

ಪ್ರಭೋ, ಪಿತನೇ, ಗುರುದೇವಾ ! ಏನು ಬಡಬಡಿಸಿದೆನು?! ಇಷ್ಟೊತ್ತು ಕನಸಿನಲ್ಲಿದ್ದೆನು ! ಇದೋ ಮಂದಿರ; ಅದೋ ವಟವೃಕ್ಷ ! ಅಚಲ-ಕಠಿಣ-ದೃಢ-ನಿಷ್ಠುರ-ಸತ್ಯದಂತೆ ಸೆಟಗೊಂಡು ನಿಂತಿವೆ! ದೇವಾ ಆದೇಶವೇನು ! ಮಾಡಬೇಕಾದ್ದೇನೂ ಮರೆತಿಲ್ಲ. ಇದೋ ನೋಡಿರಿ! ( ಎಂದು ಚೂರಿಯನ್ನು ತೋರಿಸುವನು )-- ತಮ್ಮ ಅಪ್ಪಣೆಯ ನೆನಪು ಒಳಹೊರಗೆ ಒಂದೇ ಸವನೆ ಹೊಳೆಯುತ್ತಿದೆ! ಪ್ರಭೋ, ಮತ್ತೇನು ಆದೇಶವಿರುವದು!

ರಘು:— ಮೊದಲು ಆ ಬಾಲಿಕೆಯನ್ನು, ಮಂದಿರದಿಂದ ದೂರಕ್ಕೆ ಅಟ್ಟು, ಮಾಯಾವಿನೀ! ನಿನ್ನ ಕುಹಕವನ್ನೆಲ್ಲ ಬಲ್ಲೆ! ಅವಳನ್ನು ಹೊರದೂಡು !

ಜಯ:— ಹೊರದೂಡಲೇ! ? ಬಸವಿ ನನ್ನಂತೆ ಮಂದಿರವನ್ನಾಶ್ರಯಿಸಿದವಳು; ಅಯ್ಯೋ! ನನ್ನಂತೆ ದಿಕ್ಕಿಲ್ಲದವಳು; ಮುಳ್ಳಿಲ್ಲದ ಹೂವಿನಂತೆ ನಿರ್ಮಲೆ; ನಿಷ್ಪಾಪ ಜೀವಿ; ನೊಂದು ಬಿಳುವಾದವಳು; ಸುಂದರಿ, ಸರಲ—ಕೋಮಲ ಹೃದಯಳು; ವೇದನಾಕಾತರಳು! ಇಂಥವಳನ್ನು ಹೊರದೂಡಬೇಕೇ! ? ಗುರುದೇವಾ, ಅದೂ ಆಗಲಿ! ಅಪರ್ಣಾ; ನಡೆ, ಹೊರಬೀಳು! ದಯೆ, ಮಮತೆ, ಪ್ರೇಮ, ಸ್ನೇಹ, ಎಲ್ಲಾ ಸುಳ್ಳು! ಅಪರ್ಣಾ ಸತ್ತು ಹೋಗು! ಸಂಸಾರದ ಹೊರಗೆ ಏನೂ ಇಲ್ಲವೆಂದರೂ ದಯಾಮಯಮೃತ್ಯುವಾದರೂ ಇದ್ದೇ ಇದೆ ! ಅಪರ್ಣಾ, ಹೊರಟುಹೋಗು !

ಅಪ:— ಜಯಸಿಂಹಾ! ನೀನು ಈ ಮಂದಿರವನ್ನು ತೊರೆದು ಬಾ; ಇಬ್ಬರೂ ಹೊರಟು ಹೋಗುವಾ !

ಜಯ:— "ಇಬ್ಬರೂ ಹೊರಟು ಹೋಗುವಾ!" ಕನಸಿನ ಮಾತಿದು! ಒಮ್ಮೆ ಸ್ವಪ್ನದಲ್ಲಿ, ಈ ಜಗವೂ ಒಂದು ಸ್ವಪ್ನವೆಂದುಕೊಂಡಿದ್ದೆನು ! ಅಂತೇ ಸುಖದಿಂದ ನಕ್ಕೆನು, ನಲಿದೆನು, ಹಾಡಿದೆನು ! ಅಯ್ಯೋ, ಸತ್ಯವು ಇಲ್ಲಿ ಕುಳಿತಿದೆ! ಆಹಾ! ಮತ್ತೆ ಸುಖದ ಮಾತನ್ನೆತ್ತಬೇಡ ! ಸ್ವಾಧೀನತೆಯ ಆಶೆ ತೋರಿಸಬೇಡ ! ನಾನೀ ಸತ್ಯದ ಸೆರೆಮನೆಯಲ್ಲಿ ಸಿಕ್ಕುಬಿದ್ದಿದ್ದೇನೆ !

ರಘು:— ಜಯಸಿಂಹಾ ! ಇದು ಸವಿಮಾತಿನ ಸಮಯವಲ್ಲ ! ಆ ಬಾಲಿಕೆಯನ್ನು ದೂರಗೊಳಿಸು !

ಜಯ:— ಅಪರ್ಣಾ, ಹೊರಟು ಹೋಗು !

ಅಪ:— ಯಾಕೆ ಹೋಗಲಿ ?

ಜಯ:— ಇದು ನಿನ್ನ ನಾರೀ ಅಭಿಮಾನ !

ಅಪ:— ಅಭಿಮಾನವೆಷ್ಟೂ ಇಲ್ಲ. ಜಯಸಿಂಹಾ ! ನಿನ್ನ ವೇದನೆ, ನನ್ನ ವ್ಯಥೆ ಎಲ್ಲ ಗರ್ವಗಳಿಗಿಂತ ಹೆಚ್ಚಿನವು ! ನನ್ನ ಅಭಿಮಾನವಿನ್ನೇನೂ ಇಲ್ಲ !

ಜಯ:— ಹಾಗಾದರೆ ನಾನೇ ಹೋಗುವೆ. ನೀನಿಲ್ಲಿರುವಷ್ಟು ಹೊತ್ತು, ನಿನ್ನ ಮೋರೆಯನ್ನು ನೋಡಲಾರೆ! ಅಪರ್ಣಾ; ಹೊರಟು ಹೋಗು!

ಅಪ:—ನಿಷ್ಠುರ ಬ್ರಾಹ್ಮಣಾ! ನಿನ್ನ ಬ್ರಾಹ್ಮಣತ್ವಕ್ಕೆ ಧಿಕ್ಕಾರವಿರಲಿ! ಕ್ಷುದ್ರ ನಾರಿ ನಾನು, ನಿನಗೆ ಅಭಿಶಾಪ ಕೊಟ್ಟು ಹೋಗುವೆ! ಈ ಜಯಸಿಂಹನನ್ನು, ನಿನ್ನ ಈ ಬಂಧನದಲ್ಲಿ ನೀನು ಕಟ್ಟಿ ಹಾಕಲಾರಿ!

( ಹೋಗುವಳು. )

ರಘು:— ವತ್ಸ! ಮೋರೆ ಮೇಲಕ್ಕೆ ಮಾಡು! ಒಂದು ಮಾತನಾಡು! ಪ್ರಾಣ ಪ್ರಿಯನಾದ—ಪ್ರಾಣಾಧಿಕನಾದ ಜಯಸಿಂಹಾ! ನನ್ನ ಪ್ರಾಣದಲ್ಲಿ ಅಗಾಧಸಮುದ್ರ ಸಮನಾದ ಸ್ನೇಹವಿಲ್ಲವೆ! ಮತ್ತೆ ಹೆರವರು ಬೇಕೆ?! ನಾನು ಆಜನ್ಮಬಂಧುವು ಮೂರು ಗಳಿಗೆಯ ಮಾಯಪಾಶವು ಹರಿದು ಹೋದದ್ದಕ್ಕೆ ಇಷ್ಟೊಂದು ಕ್ಲೇಶವೇ?!

ಜಯ:—ಸಾಕು, ಪ್ರಭೋ ಸಾಕುಸಾಕು! ಮತ್ತೆ ಆ ಸ್ನೇಹದ ಮಾತು ಬೇಡ! ಮನದಲ್ಲಿ ಬರಿ ಕರ್ತವ್ಯವು ಮಾತ್ರ ಉಳಿದಿದೆ! ಸ್ನೇಹ—ಪ್ರೇಮವೆನ್ನುವುದೆಲ್ಲಾ—ಭೂಪೃಷ್ಠದಮೇಲೆ ಗಿಡಬಳ್ಳಿ, ಹೂಕಾಯಿಗಳು ಮೂಡಿ-ಬಾಡಿ-ಹುಡಿಯಾಗಿ ಸ್ವಪ್ನ ದಂತೆ ಹಾರಿಹೋಗುವ ಹಾಗೆಯೇ ಸರಿ! ಕೆಳಗೇನಿದೆ?—ಶುಷ್ಕರೂಢ ಪಾಷಾಣಸ್ತೂಪವೇ! ಹಗಲಿರುಳೂ ಹೃದಯವು ಹಗುರಾಗದ ಹೊರೆಯೇ ಸರಿ!

( ಹೋಗುವನು. )

ರಘು:—ಇಷ್ಟೊಂದು ಛಲದಿಂದ—ಬಲದಿಂದ ಸಾಧನೆಮಾಡಿಯೂ, ನಿನ್ನ ಮನ ವನ್ನರಿಯದಾದೆನಲ್ಲೋ ಜಯಸಿಂಹಾ!

( ಹೋಗುವನು. )

## ಚತುರ್ಥದೃಶ್ಯ.

ಗಣೇಶ:— ಈ ಬಾರಿ ಜಾತ್ರಿಗೆ ಅಷ್ಟೊಂದು ಮಂದಿಯೇ ಕೂಡಲಿಲ್ಲಾ!

ಅಕ್ರೂರ:—ಕೂಡಬೇಕಾದರೂ ಹೇಗಪ್ಪಾ? ಇಲ್ಲಿಂತೂ ಹಿಂದೂಮುಂದೀ ರಾಜ ಕೀನೇ ಉಳಿಯಲಿಲ್ಲಾ; ನಬಾಬರ ರಾಜಕಿ ಆದಂತೆ ಆಗಿದೆ. ದೇವತೀ ಬಲಿಯೇ ಬಂದಾಗಿ ಹೋಯ್ತು. ಇನ್ನು ಜಾತ್ರಿಯು ನೆರಿಯೆಂದರೆ ಹೇಗೆ ನೆರೆದೀತು?

ಕಿಟ್ಟೂ:—ಅಣ್ಣಾ, ರಾಜನದಂತೂ ಇಂಥ ಬುದ್ಧಿಯೇ ಇದ್ದಿದ್ದಿಲ್ಲ. ಇದೇನೋ ಅವನ ಮೈಯೊಳಗೆ ಸೇರಿಕೊಂಡಂತೆ ಕಾಣುತ್ತದೆ.

ಅಕ್ರೂರ:—ಸೇರಿಕೊಂಡಿದ್ದರೆ, ಮುಸಲ್ಮಾನರ ದೆವ್ವ ಸೇರಿಕೊಂಡಿರಬೇಕು. ಇಲ್ಲ ದಿದ್ದರೆ ಬಲಿ ಹೇಗೆ ಬಂದಾಗುತ್ತದಪ್ಪಾ?

ಗಣೇಶ:— ಏನಾದರೂ ಆಗಿಹೊಯ್ತು; ಆದರೆ ದೇಶಮಾತ್ರ ಘೋರದೊಳಗೆ ಬಿತ್ತು.

ಕಿಟ್ಟೂ:—ಆಚಾರ್ಯಸ್ವಾಮಿಗಳಂತೂ ಹೇಳೇ ಬಿಟ್ಟಾರೆ—ಮೂರು ತಿಂಗಳ ದೊಳಗೆ ದೇಶ ಹರಿದು ಹೋಗುವದು!

ಹರಿ:—ಮೂರು ತಿಂಗಳೇತಕೋ? ಸದ್ಯದ ಸ್ಥಿತಿಗತಿ ನೋಡಿದರಂತೂ ಮೂರು ದಿನಕೂಡ ತಾಳುವಂತೆ ಕಾಣುವದಿಲ್ಲ! ನೋಡಿಲ್ಲವೇ—ನಮ್ಮ ಮುಧ್ಧೂ, ಮೂರು

ವರ್ಷದಿಂದ ಬೇನೆಯಿಂದ ಕೊಳೆಯುತ್ತಿದ್ದರೂ ಬದುಕಿಯೇ ಇದ್ದಾ. ಆದರೆ ಮೊನ್ನೆ ಬಲಿ ಬಂಡಾಗುವದೇ ತಡಾ; ಸತ್ತೇ ಹೋದಾ.

ಆಕ್ರೂರ :— ಇಲ್ಲೊ ಮಡಳೀ ! ಅಪನು ಸತ್ತು, ತಿರುಗಿ ಮೂರು ತಿಂಗಳ ಮೇಲಾಯ್ತು.

ಹರಿ:—ಎಲೆಇವನ!-ಮೂರು ತಿಂಗಳ ಮೇಲಾದರೇನಾಯ್ತು ; ಇದೇವರುಷನ್ನೇ ಅಲ್ಲೇನು ?

ಖೇಮೂ:—ಅಲ್ಲ-ಅದು ಹೇಗಾದರೂ ಇರಲಿ ನಮ್ಮ ಸತ್ತಾನೆನ್ನುವದ್ಯಾರಿಗೆ ತಿಳಿದಿತ್ತೇ ? ಮೂರೆ ದಿನ ಉರಿ, ಔಷಧ ತಗೊಳ್ಳುವದೇ ತಡ, ಕಣ್ಣೇ ಛೆಳ್ಳಗೆ !

ಗಣೇಶ:—ಅಂದು ಮಂತ್ರಾಪುರದ ಓಣಿಯಲ್ಲಿ, ಮಟಮಟ ಮಧ್ಯಾಹ್ನದಲ್ಲಿ ಬೆಂಕಿಹತ್ತಿದರೆ, ಒಂದು ಲಂಗೋಟಿ ಚಿಂದಿಯಾದರೂ—

ಚಿಂತಾಮಣಿ:—ಇಷ್ಟೊಂದು ಮಾತು ತಗೊಂಡು ಮಾಡುವದೇನಪಾ ! ಈ ವರ್ಷ, ಆಕ್ಕೀ-ಬ್ಯಾಳೀ-ಜೋಳಾ-ಕಾಳು ಅಗ್ಗಾಗುವದಕ್ಕೇನಾದರೂ ಅಳತಿ? ಹೀಗೆಂದಾದರೂ ಆಗಿತ್ತೇ ? ಒಕ್ಕಲಿಗರ ಹಣೆಯಬರಹದಲ್ಲಿ, ಏನದೆಯೋ ಯಾರಿಗೆ ಗೊತ್ತು !!

ಹರಿ:—ಅದು ನೋಡಿರಿ, ರಾಜನು ಬರುತ್ತಾನೆ. ಬೆಳಗುಮುಂಜಾನೆ ಎದ್ದು ಇಂಥ ರಾಜನ ಮೋರೆ ನೋಡಿದೆವು; ಹೊತ್ತು ಮುಳುಗುವದರೊಳಗಾಗಿ ಏನೇನಾಗುವದೋ ಯಾರಿಗೆ ಗೊತ್ತು ! ನಡೀರಿ ಹೋಗೋಣ !

( ಎಲ್ಲರೂ ಹೋಗುವರು )

**ಚಾಂದಪಾಲನೂ ಗೋವಿಂದ ಮಾಣಿಕ್ಯನೂ ಬರುವರು.**

ಚಾಂದ:—ಮಹಾರಾಜ ! ಸಾವಧಾನತೆಯಿಂಲಿ ! ನಾಲ್ಕೂ ನಿಟ್ಟಿನಲ್ಲಿ, ನಿಮ್ಮ ಮೇಲೆ ಕಣು —ಕಿವಿ ಕುಣಿಯುತ್ತಿವೆ. ರಾಜಹಿತಾಹಿತಗಳೊಂದೂ ತಿಳಿಯಲೊಲ್ಲವು. ಮಹಾರಾಜ, ತಮ್ಮ ಕೊಲೆಗಾಗಿ ಒಳಸಂಚು ನಡೆದಿರುವದನ್ನು ಕಿವಿಮುಟ್ಟ ಕೇಳಿದ್ದೇನೆ!

ಗೋ:—ಕೊಲೆ ! ಯಾರಿಂದ ???—

ಚಾಂದ:—ಹೇಳುವುದಕ್ಕೆ ಬಾಯಿಯಿಲ್ಲ! ಕೊಲೆಯ ಕತ್ತಿಗಿಂತ, ಕೊಲೆಯ ಸುದ್ದಿ ತಮ್ಮನ್ನು ಹೆಚ್ಚು ಬಾಧಿಸುವದೆಂದು ಹೆದರುವೆ !

ಗೋ:—ಸಂಕೋಚವಿಲ್ಲದೆ ಹೇಳಿಬಿಡು! ಪೆಟ್ಟು ತಾಳುವುದಕ್ಕೆ ರಾಜಹೃದಯವು ಸದಾ ಸಿದ್ಧವಾಗಿಯೇ ಇರುತ್ತದೆ ! ಯಾರು ಇಂಥ ಯೋಚನೆಮಾಡಿದ್ದಾರೆ !

ಚಾಂದ:—ಯುವರಾಜ—ನಕ್ಷತ್ರರಾಯನೇ ----

ಗೋ:—ನಕ್ಷತ್ರನೇ ! ?

ಚಾಂದ:—ಮಹಾರಾಜ ! ಕಿವಿಮುಟ್ಟ ಕೇಳಿದ್ದೇನೆ. ರಘುಪತಿಯೂ ಯುವರಾಜನೂ ಸೇರಿ, ಮಂದಿರದಲ್ಲಿಯೇ ಎಲ್ಲ ಸಂಚು ಗೊತ್ತುಪಡಿಸಿಬಿಟ್ಟಿದ್ದಾರೆ !

ಗೋ:—ಮುಹೂರ್ತಮಾತ್ರದಲ್ಲಿ, ಆಜನ್ಮ ಬಂಧನವನ್ನು ಕತ್ತರಿಸುವ ಹಂಚಿಕೆ! ಆಯ್ಯೋ ವಿಧಿಯೇ !

ಚಾಂದ:—ದೇವಿಯು ಸನ್ನಿಧಿಗೆ ತಮ್ಮ ರಕ್ತ ಬೇಕಂತೆ!

ಗೋ:—ದೇವಿಯು ಸನ್ನಿಧಿಗೆ ! ? ಹಾಗಾದರೆ ನಕ್ಷತ್ರನ ತಪ್ಪಲ್ಲ ! ಬಲ್ಲೆ ಬಲ್ಲೆ; ದೇವರಿದಿರಿಗೆ ಮನುಷ್ಯನು ಮನುಷ್ಯತ್ವಕ್ಕೆ ಎರವಾಗುವದನ್ನು ಬಲ್ಲೆ! ಏನೂ ಭಯವಿಲ್ಲ. ನೀನು ನಿನ್ನ ಕೆಲಸಕ್ಕೆ ಹೋಗು. ನಾನು ಸಾವಧಾನವಾಗಿ ಇರುವೆನು.

( ಚಾಂದಪಾಲನು ಹೋಗುವನು. )

ಮಹಾದೇವೀ ! ನೆತ್ತರೇಕೆ, ಹೂಂ ತರುವೆ ನಿನ್ನಡಿಗೆ ! ಭಕ್ತಿಯೆಂಬುದು ಕೇವಲ ಹಿಂಸೆಯೇ ಅಲ್ಲ, ತಾಯೀ! ಈ ಜಗದಲ್ಲಿ ದುರ್ಬಲರು ತೀರ ಅಸಹಾಯರು; ಬಾಹುಬಲವು ಬಹಳ ನಿಷ್ಠುರವು; ಸ್ವಾರ್ಥದ ಕ್ರೂರತನಕ್ಕೇನು ಅಳತೆಯೆ? ಲೋಭದಂಥ ದಾರುಣವಿನ್ನೇನು? ಅಜ್ಞಾನವು ತೀರ ಕುರುಡು; ಗರ್ವವು ಕರುಣವಿಲ್ಲದೆ—ಕಾರಣವಿಲ್ಲದೆ ಕ್ಷುದ್ರರನ್ನು ಮೆಟ್ಟಿಪೋಗುವದು ! ಇಲ್ಲಿ ಸ್ನೇಹಪ್ರೇಮಗಳ ದೇಟು, ಇಷ್ಟೊಂದು ಕ್ಷೀಣವೆ ! ಸ್ವಾರ್ಥ ಸೋಂಕುವುದೇ ತಡ, ಉದುರಿ ಬೀಳುವವು! ತಾಯೀ! ನಿನ್ನದಾದರೂ ಇದೇನೆನ್ನಲಿ! ನೀನು ಕತ್ತಿಯೆತ್ತಿದಿ! ನಾಲಿಗೆ ಚಾಚಿದಿ ! ಇನ್ನೇನು, ತುಂಬಾ ಕತ್ತಲೆ ! ಇಂದು ಬಂಧುವು ಬಂಧುವಲ್ಲ; ಎಡದೊಡೆಯು ಸತಿಯು ಪತಿಗೆ ಪ್ರತಿಪಕ್ಷಿ. ಮಾನವರ ವಾಸಗೃಹವು ನೆತ್ತರಿಂದ ಕೆಸರುಗಟ್ಟಿದೆ ! ಹಿಂಸೆಯು ಪುಣ್ಯವಾಯಿತು; ಕರುಣೆ ಕಾಡುಪಾಲಾಯಿತು ! ಇನ್ನೇನಿದೆ ಇನ್ನೇನಿದೆ ? ನಿನ್ನ ಸೋಗು ಸಾಕುಮಾಡು ! ಇನ್ನೂ ಕಾಲವು ಕೂಡಿ ಬಂದಿಲ್ಲವೆ ! ? ನಿನ್ನ ಪ್ರಳಯ ರೂಪವಿನ್ನೂ ಇರಲೇಬೇಕೇ? ತಾಯೀ! ಹತ್ತೂ ದಿಕ್ಕಿನಿಂದೆನ್ನಮೇಲೆ ತೂರಿಬರುತ್ತಿರುವ ಕತ್ತಿ ನಿನ್ನ ಅಷ್ಟಭುಜದ್ದೇ ? ಹಾಗೇ ಆಗಲಿ ! ನಿನ್ನಿಷ್ಟವಿರುವಂತೆಯೇ ಆಗಲಿ ! ನನ್ನ ನೆತ್ತರ ನೀರಲ್ಲಿ ಹಿಂಸಾನಲವು ಆರಿಹೋಗುವದೆನ್ನುವೆ! ಧರಣಿಯಿಷ್ಟೊಂದು ಹಿಂಸೆತಾಳುವಹಾಗಿಲ್ಲ ! ರಾಜಹತ್ಯ; ತಮ್ಮನ ಕೈಯಲ್ಲಿ ಅಣ್ಣನ ಕೊಲೆ ! ಸಮುಸ್ತಪ್ರಜೆಗಳ ಹೃದಯಕ್ಕೆ ಹತ್ತದೆ ಇರಲಾರದು ! ಸಮುಸ್ತ ಬಾಂಧವರ ಜೀವಕ್ಕೆ ಕಸವಿಸಿಯಾಗದಿರದು! ನನ್ನ ರಕ್ತದಿಂದ ಹಿಂಸೆಯ ಮಾತೃವೇಷವು ಮಾಯವಾಗಿ, ರಕ್ಕಸಿಯ ರೂಪು ಬೆಳಕಿಗೆ ಬರುವದು! ಇದೇ ನಿನ್ನ ದಯಾಭಾವದ ನಿದರ್ಶನವಾದರೆ, ಹಾಗೇ ಆಗಲಿ !

## ಜಯಸಿಂಹನು ಪ್ರವೇಶಿಸುವನು.

ಜಯ:—ಹೇಳು ಹೇಳು—ಚಂಡೀ-ನಿಜವಾಗಿಹೇಳು-ನಿನಗೆ ರಾಜರಕ್ತ ಬೇಕೇ ??? ಹೇಳು ಈ ಹೊತ್ತಿಗೆ ಹೇಳದೆ ನಿರ್ವಾಹವಿಲ್ಲ! ಹೇಳು; ಸ್ವಮುಖದಿಂದ ಹೇಳು! ಹೇಳು; ಮಾನವರ ಮಾತಿನಿಂದ ಹೇಳು ! ಬೇಗನೆಹೇಳು—ನಿಜವಾಗಿಯೂ ನಿನಗೆ ರಾಜರಕ್ತ ಬೇಕೇ ???

( ಕಿರಿಯಲ್ಲಿ )—" ಬೇಕು "—

ಜಯ:—ಹಾಗಾದರೆ, ಮಹಾರಾಜರೇ ಇಷ್ಟದೇವತೆಯ ಹೆಸರು ತೆಗೆದುಕೊಳ್ಳಿರಿ! ಹೊತ್ತು ಒದಗಿಬಂತು !

ಗೋ:—ಏನಾಗಿದೆಯೋ ಜಯಸಿಂಹಾ ! ?

ಜಯ:—ನಿಮ್ಮ ಕಿವಿಯಿಂದಲೇ ಕೇಳಲಿಲ್ಲವೇನು? ನಿಜವಾಗಿಯೂ ರಾಜರಕ್ತ ಬೇಕೇ, ಎಂದು ದೇವಿಯನ್ನು ಕೇಳಿದರೆ ಸ್ವಮುಖದಿಂದ ಬೇಕೆಂದಳು !

ಗೋ:—ಎಲೋ ಜಯಸಿಂಹಾ, ದೇವಿ ಹೇಳಿಲ್ಲ;. ರಘುಪತಿಯೇ ಮರೆಯಲ್ಲಿದ್ದು ಹಾಗೆ ಹೇಳಿದನು. ಗುರುತಿನ ದನಿಯಲ್ಲವೇ ?

ಜಯ:—ರಘುಪತಿ ಹೇಳಿದನೇ ? 'ಮರೆಯಲ್ಲಿದ್ದು ಹೇಳಿದನೇ ? ಅಲ್ಲ—ಅಲ್ಲ—ಇನ್ನೇನೂ ಅಲ್ಲ! ಕೇವಲ ಸಂಶಯದಿಂದ ಸಂಶಯಕ್ಕೆ ಹಾರಲಾರೆ ! ದಡವನ್ನು ಸನ್ನಿಪಿಸಿರುವೆ—ಯಾರು ಹಿಂದೆಳೆದು ಅತಲದಲ್ಲಿ ನೂಕುತ್ತಿರುವರು ? ! ಅಯ್ಯೋ, ಅನನು ಅವಿಶ್ವಾಸದೈತ್ಯನು ! ಏನೇ ಇರಲಿ, ಗುರುವಾದರೂ ಸರಿ, ದೇವಿಯಾದರೂ ಸರಿ; ಯಾರಾದರೂ ಸರಿ; ಒಂದೇ ಮಾತು !

( ಚೂರಿಯನ್ನು ಹಿರಿಯುವನು. )

ತಾಯಿ! ಹೂಂ ಹಿಡಿ! ಹಿಡಿ ಹಿಡಿ, ಹೂಂ ಹಿಡಿ! ಅಡಿಯ ಬಳಿ ಹಿಡಿದಿರುವೆ. ಹಬ್ಬ ಮುಡಿದು ತಣಿಯುವವಳಾಗು! ನೆತ್ತರಲ್ಲ, ನೆತ್ತರಿಲ್ಲ! ಇವೂ ನೆತ್ತರಂತೆ ಕೆಂಪಾದ ಎರಡು ಹೂಗಳು! ಸಂತಾನ—ರಕ್ತಪಾತದಿಂದ ವ್ಯಥಿತಳಾದ ವಸುಂಧರೆಯ ಸ್ನೇಹವೇದನೆಯಿಂತ್ಕ ಪೃಥ್ವಿಯ ತಾಯ್ಗರುಳು ಕರಗಿ ಹರಿಯುತ್ತಿದೆ ! ತೆಗೆದುಕೋ, ಇದನ್ನು ತೆಗೆದುಕೋ ! ನಾನು ನಿನ್ನ ರೋಷಕ್ಕೆ ಬೆದರುವದಿಲ್ಲ! ನೆತ್ತರು ಕೊಡಲಾರೆ ! ನಿನ್ನ ಕಣ್ಣಲ್ಲಿ ಕಿಡಿಮಳೆ ಎತ್ತು ನಿನ್ನ ಕತ್ತಿ! ನಿನ್ನ ಸುಡುಗಾಡದ ಸೇನೆಬರಲಿ ! ನಾನು ಬೆದರಲಾರೆ ! (ಜಯಸಿಂಹ ಹೊರತು ಎಲ್ಲರೂ ಹೋಗುವರು. ) ಅಯ್ಯೋ; ಇದೇನು ಮಾಡಿದೆ ! ದೇವಿ, ಗುರು—ಇದ್ದವನ್ನೆಲ್ಲಾ ಮುಹೂರ್ತಮಾತ್ರದಲ್ಲಿ ತೊರೆದು ನಿಂತೆ ! ವಿಶ್ವದಲ್ಲಿ ಇನ್ನೇನೂ ಉಳಿಯಲಿಲ್ಲ !

## ರಘುಪತಿಯು ಬರುವನು.

ರಘು:—ನಾನೆಲ್ಲಾ ಕೇಳಿದೆ! ಎಲ್ಲಾ ಹಸಿಗೆಟ್ಟಿತು! ಎಲೋ ವಿಶ್ವಾಸಘಾತುಕಿಯೇ; ಏನುಮಾಡಿ ಬಿಟ್ಟೆ !!!

ಜಯ:—ಪ್ರಭೋ ! ದಂಡಿಸಿಬಿಡಿರಿ !!

ರಘು:—ಎಲ್ಲಾ ಹಾಳುಮಾಡಿಬಿಟ್ಟೆ! ಬ್ರಹ್ಮಶಾಪವು ನಡುದಾರಿಯಿಂದ ಹಿಂದಿರುಗಿತು ! ಗುರುವಾಕ್ಯವನ್ನು ಮೀರಿದಿ ! ದೇವಿಯ ಆವೇಶವು ವ್ಯರ್ಥ್ಯವಾಗಿ ಹೋಯಿತು ! ನಿನ್ನ ಬುದ್ಧಿಯನ್ನೇ ಎಲ್ಲಕ್ಕಿಂತ ಹೆಚ್ಚೆಂದು ಮಾಡಿದಿ ! ಆಜನ್ಮದ ಉಪಕಾರವನ್ನು ಈ ರೀತಿ ತೀರಿಸಿದಿ !

ಜಯ:—ತಂದೆಯೇ ! ದಂಡಿಸಿಬಿಡಿರಿ !!

ರಘು:—ಯಾವ ದಂಡನೆ ನಿನಗೆ !

ಜಯ:—ಪ್ರಾಣದಂಡನೆ !!!

ರಘು:—ಆಗದಾಗದು ! ಇದಕ್ಕಿಂತ ಹೆಚ್ಚಿನ ದಂಡನೆಯಾಗಬೇಕು ! ಮುಟ್ಟು ದೇವಿಯ ಪಾದವನ್ನು !!

ಜಯ:—ಮುಟ್ಟಿದೆ !

ರಘು:—ಅನ್ನು—"ಶ್ರಾವಣದ ಶೇಷರಾತ್ರಿಯೊಳಗಾಗಿ, ದೇವಿಯ ಪಾದಕ್ಕೆ ರಾಜರಕ್ತವನ್ನು ತಂದು ಅರ್ಪಿಸುವೆ! " ಎಂದನ್ನು.

ಜಯ:— ಶ್ರಾವಣದ ಶೇಷರಾತ್ರಿಯೊಳಗಾಗಿ ದೇವಿಯ ಪಾದಕ್ಕೆ ರಾಜರಕ್ತವನ್ನು ತಂದು ಅರ್ಪಿಸುವೆ !!!

ರಘು:— ನಡೆ ಹೋಗು !

## ದ್ವಿತೀಯಾಂಕ ಸಮಾಪ್ತ

# ಮಮತೆ.

೧.

ಇವಳೊಬ್ಬ ಕೂಸಿನ ತಾಯಿ. ಅತ್ತೆಯಮನೆಯ ಸೊಸೆ. ಇವಳ ಪಾಲಿಗೆ ಮನೆಯವರ ಕಾಟವಿಲ್ಲದ ದಿನವೇ ಇಲ್ಲ. ಈ ಗಳಿಗೆಯಲ್ಲೊಂದಿದ್ದರೆ, ಇನ್ನೊಂದು ಗಳಿಗೆಯಲ್ಲಿ ಬೇರೊಂದು ಕಾಟ. ಆದುದರಿಂದ ಎಲ್ಲದರ ಮೇಲೂ ಇವಳಿಗೆ ಜುಗುಪ್ಸೆ.

೨.

ಹೀಗೆ ಕಳೆದ ದಿನಗಳು ಒಂದೇ? ಎರಡೇ? ಎಷ್ಟೋ! ಪ್ರಬಲವಾಗಿ ಹರಿಯುವ ಈ ಜುಗುಪ್ಸೆಯ ಹೊಳೆಯಿಂದು ಸ್ಥೈರಣೆಯ ಮೇರೆಯನ್ನು ಮೀರಿತು. ಅದರಲ್ಲಿಯೇ ಹರಿದು ಹೋಗುತ್ತಿದ್ದ ಸೊಸೆಗೆ "ಬುದ್ಧಕ್ಕ" ನು ಕೈಗೊಟ್ಟಳು. ಅದು ಕಾಯುವ ಕೈಯ್ಯೋ—ಕಚ್ಚುವ ಹಾವೊ! ?

೩.

ಇಂದು ಇದೀಗ ನಟ್ಟಿರುಳು. ಅದರಲ್ಲೂ ಮೋಡಮುಚ್ಚಿದೆ. ಈಗ ಯಾವದನ್ನೂ ಪ್ರತ್ಯೇಕಿಸುವಂತಿಲ್ಲ. ಇದ್ದದ್ದೂ, ಇಲ್ಲದ್ದೂ ಎಲ್ಲಾ ಕತ್ತಲೆ. ಬಾವಿಯ ದಡದಮೇಲೊಬ್ಬ ಹೆಂಗಸು; ಕೈಯ್ಯಲ್ಲೊಂದು ಮುದ್ದು ಮಗು !!!

೪.

ಇನ್ನು ಕೂಸನ್ನು ಕೈಯಿಂದ ಬಿಡುವವಳು; ಇಷ್ಟರಲ್ಲಿಯೆ ಅದು ಕುಲಕ್ಕನೆ ನಕ್ಕಿತು! ಬಂದ ಮೋಡ ಬಯಲಾಯಿತು! ಕತ್ತಲೆ ಹರಿದು ಬೆಳಗಾಯಿತು. ತಾಯಿ ಮಕ್ಕಳ ತುಟಿಗಳ ನಡುವೆ ಸಿಕ್ಕ, ಆ ಸವಿನಗೆಯು ಅಮರಲೋಕದ ಅಮೃತವೆ !!!

೫.

ಕೂಡಲೆ ತುಂಬಿಬಂದ ಹೃದಯದ ಹೊನಲಲ್ಲಿ ಹರಿದು ಅಮರಸಂಗೀತದ ಒಂದೊಂದು ತಾನವನ್ನೂ ಹಕ್ಕಿಪಕ್ಕಿಗಳು ಜಾಣ್ಮೆಯಿಂದ ಮುಗಿಲಲ್ಲಿ ಮೂಡಿಸಿದ್ದವು.

"ಮಮತೆಯೆ ಸಾವಿನ ಸಂಜೀವಿನಿಯೈ
ಮಮತೆಯೆ ಕಹಿಯಲಿ ಸಿಹಿದೋರುವುದೈ
ಮಮತೆಯೆ ಮರ್ತ್ಯಕೆ
ಅಮರ ಲೋಕವನು
ತವಕದಿ ಬರಿಸುವುದೇತಕೆ ತಡವೋ
ಮಮತೆಯ ಮನ್ನಿಸಿರೈ ॥"

# ತೃತೀಯಾಂಕ.

## ಪ್ರಥಮದೃಶ್ಯ.

## ಮಂದಿರ.

### ಜನರು, ರಘುಪತಿ, ಜಯಸಿಂಹ.

ರಘು:—ನೀವೆಲ್ಲರೂ ಇಲ್ಲಿಗೆ ಯಾತಕ್ಕೆ ಬಂದಿದ್ದೀರಿ?

ಎಲ್ಲರು:—ನಾವು ಮಾದೇವಿಯ ದರುಶನಕ್ಕೆ ಬಂದಿರುವೆವು.

ರಘು:—ನೆಟ್ಟಗಿದೆ! ದರ್ಶನಕ್ಕೆ ಬಂದಿರುವಿರಾ? ಇನ್ನೂ ನಿಮ್ಮ ಕಣ್ಣುಗಳೇನೊ ಉಳಿದಿವೆ, ಅದೂ ನಿಮ್ಮ ಹಿಂದಿನ ಹಿರಿಯರ ಪುಣ್ಯದಿಂದ! ಮಹಾದೇವಿ! ಇನ್ನೆಲ್ಲಿಯ ಮಹಾದೇವಿ! ಮಹಾದೇವಿಯು ಈ ರಾಜ್ಯವನ್ನು ತೊರೆದು ಹೋದಳು! ಮಹಾದೇವಿಯನ್ನು ನೀವು ಇರಗೊಟ್ಟರೆಲ್ಲಿ? ಅವಳು ಹೋಗಿ ಬಿಟ್ಟಳು!

ಎಲ್ಲರು:—ಛೇ ಛೇ ಛೇ! ಸ್ವಾಮೀ; ನಾವೇನು ಮಾಡಿದೆವು?! ಇದೆಂಥ ಮಾತು ಸ್ವಾಮೀ!

ನೀರಾಬಾಯಿ:—ನಮ್ಮಕ್ಕನ ಮಗನು ಬೇನೆಬಿದ್ದಿದ್ದನೆಂದು ನನಗಿಷ್ಟು ದಿನ ಪೂಜೆಯ ತರುವದಾಗಲಿಲ್ಲ ನೋಡಿರಿ!

ಗೋವರ್ಧನ:—ನಮ್ಮ ಎರಡೂ ಕರುಗಳನ್ನು ತಾಯಿಗೆ ಬಲಿಕೊಡುವದಕ್ಕೆ ದೆಸೆಯಿಂದ ಬಹುದಿವಸದಿಂದ ಮನಸ್ಸಿನಲ್ಲಿ ಮಾಡಿಟ್ಟಿದ್ದೆ. ಇಷ್ಟರಲ್ಲಿಯೇ ರಾಜ ಬಲಿಯನ್ನು ಬಂದು ಮಾಡಿದ. ನಾನೇನು ಮಾಡಲಿ ಹೇಳಿರಿ!

ಹರಿ:—ನಮ್ಮ ಗೋಪೂ ತಾಯಿಗೆ ಬಲಿಕೊಡುತ್ತೇನೆಂದು ಬೇಡಿಕೊಂಡದ್ದು ತೀರಿಸಲಿಲ್ಲ. ಇದೂ ನಿಜವೇ! ಆದರೆ ತಾಯಿಯೂ ಅವನಿಗೆ ಕೈತೋರಿಸಲಾರದೆ ಬಿಟ್ಟಿಲ್ಲ. ಗುಳ್ಳಿಯಾದದ್ದೆ ನೆವವಾಗಿ ಹುಣ್ಣು ಬಿದ್ದು ಹೋಗಿದೆ. ಈಗ ಆರು ತಿಂಗಳಾಯ್ತು, ಹಾಸಿಗೆಯನ್ನೇ ಹಿಡಿದಿದ್ದಾನೆ! ಸರಿ ಆಯ್ತು! ನಮ್ಮ ಅಯ್ಯನವರ ಹೊತ್ತಿಗೆಯೊಳಗೂ ಅದೇ ಹೊರಟದೆ; ತಾಯಿಗೆ ಬಳದು ಕಟ್ಟಿಡಬೇಕೆಂದು ಹೊರಟದೆ!

ಅಕ್ರೂರ:—ನೀವೆಲ್ಲ ಒಂದಿಷ್ಟು ಗಪ್ಪಾಗಿರೊ! ಸುಮ್ಮನೆ ಗೊಂದಲ ಎಬ್ಬಿಸಬೇಡಿರೊ! ಒಳ್ಳೇದು ಸ್ವಾಮೀ; ತಾಯಿ ಯಾಕೆ ಹೋದರು? ನಾವೇನು ತಪ್ಪು ಮಾಡಿದೆವು!

ರಘು:—ತಾಯಿಗೆ ಒಂದು ಹನಿ ರಕ್ತವನ್ನು ಕೂಡ ತೋರಿಸಲಿಲ್ಲ; ಇದೆಂಥಾ ನಿಮ್ಮ ಭಕ್ತಿಯೊ?

ಎಲ್ಲರೂ:—ರಾಜರ ಹುಕುಮಿಗೆ ನಾವೇನು ಮಾಡಬೇಕು ಸ್ವಾಮೀ!

ರಘು:—ಯೂವರಾಜ! ರಾಜಸಿಂಹಾಸನಕ್ಕಿಂತ ತಾಯಿಯ ಸಿಂಹಾಸನವು ಹಳಾಯಿತಲ್ಲವೇ! ಈ ತಾಯಿಯಿಲ್ಲದ ದೇಶದಲ್ಲಿ ನಿಮ್ಮ ರಾಜನನ್ನಿಟ್ಟುಕೊಂಡೇ ಕುಳಿತುಕೊಳ್ಳಿರಿ. ನಿಮ್ಮ ರಾಜನು ನಿಮ್ಮನ್ನು ಹೇಗೆ ರಕ್ಷಿಸುವನೋ ನೋಡೋಣ!

( ಎಲ್ಲರೂ ಗುಣುಗುಣು ಮಾತನಾಡುವರು. )

ಅಕ್ರೂರ:—ಗಪ್ಪಾಗಿರಿ! ಮಕ್ಕಳು ತಪ್ಪುಮಾಡಿದರೆ ತಾಯಿ ಕಪಾಳಕ್ಕೆ ಹೊಡೆದು ಬುದ್ಧಿಗಲಿಸಲಿ. ಆದರೆ ಹೀಗೆ ಒಮ್ಮಿಂದೊಮ್ಮೆಲೇ ಬಿಟ್ಟುಹೋಗುವದು ತಾಯಿಯ ಕೆಲಸವೇ? ಇರಲಿ! ಹೇಳಿರಿ ಸ್ವಾಮೀ; ಏನು ಮಾಡಿದರೆ ತಾಯಿ ತಿರುಗಿ ಬರುತ್ತಾರೆ?

ರಘು:—ನಿಮ್ಮ ರಾಜನು ರಾಜ್ಯವನ್ನು ಬಿಟ್ಟು ನಡೆದಾಗ, ತಾಯಿಯು ತಿರುಗಿ ರಾಜ್ಯದಲ್ಲಿ ಕಾಲಿಟ್ಟಾಳು !

( ಕಕ್ಕಾವಿಕ್ಕಿಯಾಗಿ ಒಬ್ಬರ ಮೋರೆಯನ್ನೊಬ್ಬರು ನೋಡುವರು. )

ರಘು:—ಹಾಗಾದರೆ ನೋಡುವಿರೋ? ಇಲ್ಲಿ ಬನ್ನಿರಿ! ಬಲು ದೂರಿನಿಂದ ಬಲು ಆತುರದಿಂದ ತಾಯಿಯನ್ನು ನೋಡುವನಕ್ಕೆ ಬಂದಿರುವಿರಿ; ಹಾಗಾದರೆ ಒಮ್ಮೆ ನೋಡಿ ಬಿಡಿರಿ! ( ಮಂದಿರದ ಬಾಗಿಲು ತೆರೆಯುವದು ಒಳಗೆ ಮೂರ್ತಿ ಬೆನ್ನುತಿರುವಿ ನಿಂತಿರುವದು. )

ಎಲ್ಲರೂ:—ಅಯ್ಯೋ! ಏನು ಮಾತಿದು! ತಾಯಿಯ ಮೋರೆ ಎಲ್ಲಿಯೋ???

ಅಕ್ರೂರ:—ಎಲ್ಲಿರೋ? ತಾಯಿ ಮುನಿದಿರುವಳು!

ಎಲ್ಲರೂ:—ಅವ್ವಾ ತಾಯೀ! ತಿರುಗಿ ನಿಂದಿರವ್ವಾ ತಾಯೀ! ತಿರುಗಿ ನಿಂದಿರು!!! ತಿರುಗಿ ನಿಲ್ಲವ್ವಾ ತಾಯೀ, ತಿರುಗಿ ನಿಲ್ಲು!! ಇಂದೊಂದು ಬಾರಿ ತಿರುಗಿ ನಿಲ್ಲು! ತಾಯೀ, ಎಲ್ಲಿರುವೆಯವ್ವಾ ಎಲ್ಲಿರುವೆ ಹೇಳು. ತಿರುಗಿ ಕರಕೊಂಡು ಬರುವೆವು! ತಾಯೀ ನಿನ್ನ ಬಿಟ್ಟು ಇರೋಣವೆ ? ನಮಗೆ ಯಾವ ರಾಜನೂ ಬೇಡ! ರಾಜಾ ಹೋಗಲಿ ! ರಾಜಾ ಸಾಯಲಿ!! ನೀನು ಬೇಕು ನಮಗೆ!!!

ಜಯ:—( ರಘುಪತಿಯ ಬಳಿಗೆ ಬಂದು) ಪ್ರಭೋ, ನಾನೇನೂ ಕೇಳಬೇಡವೇ?

ರಘು:—ಊಂ ಹೂಂ!

ಜಯ:—ಏನೂ ಸಂದೇಹವಿಲ್ಲವೇ ?

ರಘು:—ಛಿ !

ಜಯ:—ಎಲ್ಲವನ್ನೂ ನಂಬಬೇಕೇ ?

ರಘು: – ಹಾ !

ಅಪರ್ಣಾ (ಮಗ್ಗಲಿಗೆ ಬಂದು):—ಜಯಸಿಂಹಾ, ಬಾ ಜಯಸಿಂಹಾ ! ಬೇಗನೆ ಈ ಮಂದಿರವನ್ನು ಬಿಟ್ಟು ಬಾ !

ಜಯ:—ಅಯ್ಯೋ! ಸೀಳಿತೆನ್ನ ಎದೆ !!

(ಶಘು, ಜಯ, ಅಪರ್ಣಾ, ಹೋಗುವರು.)

ರಾಜನು ಬರುವನು.

ಪ್ರಜೆಗಳು:—ಮಹಾರಾಜ! ಕಾಪಾಡಬೇಕು; ತಾಯಿಯನ್ನು ತಿರುಗಿ ತಂದುಕೊ ಡಿರಿ!

ಗೋವಿಂದ:—ಮಕ್ಕಳಿರಾ, ತಾಳಿರಿ ! ನನ್ನ ಜೀವವನ್ನೊತ್ತೆ ಹಾಕಿಯಾದರೂ ನ ತಾಯಿಯನ್ನು ತಿರುಗಿ ತಂದುಕೊಡುವೆ !

ಪ್ರಜೆ:—ಜಯವಾಗಲಿ! ಮಹಾರಾಜರಿಗೆ ಜಯವಾಗಲಿ !!

ಗೋವಿಂದ:—ನಿಮಗೊಂದು ಮಾತು ಕೇಳುವೆ! ನೀವು ತಾಯಿಯ ಹೊಟ್ಟೆಯಲ್ಲಿ ಹುಟ್ಟಿಲ್ಲವೇ ? ತಾಯಿಗಳಿರಾ, ನೀವಂತೂ ತಾಯಿಯ ಕರುಳಿನ ಅಮೃತವನ್ನು ನಿಮ್ಮ ಮೃದುಹೃದಯದಲ್ಲಿ ಸದಾ ಅನುಭವಿಸುತ್ತೀರಿ! ತಾಯಿಯೆಂದರೆ ಏನಲ್ಲ!!! ನೀವೇ ಹೇ ಳಿರಿ ನೋಡೋಣ. ತಾಯಿಯ ಕರುಳು ಎಲ್ಲಕ್ಕಿಂತ ಪವಿತ್ರವಾದದ್ದು, ಪ್ರಾಚೀನವಾದದ್ದು! ಸೃಷ್ಟಿಯ ಮೊದಲು ಮುಹೂರ್ತದಲ್ಲಿ ಈ ಮಾತೃಸ್ನೇಹವೊಂದೇ ಎಚ್ಚತ್ತು, ತರುಣ ವಿಶ್ವವನ್ನು ತೊಡೆಯಮೇಲಿರಿಸಿಕೊಂಡು ನತನೇತ್ರವಾಗಿ ಕುಳಿತಿದ್ದಿತಲ್ಲವೆ ! ಇಂದಿಗೂ ಆ ಪುರಾತನಮಾತೃಸ್ನೇಹವು ಧೈರ್ಯದ ಪ್ರತಿಮೆಯಾಗಿ ಕುಳಿತುಕೊಂಡೇ ಇದೆ. ಅದು ಸಹಿಸಿದ ತಾಪ–ತೊಂದರೆಗಳೆಷ್ಟು; ನೋವು–ನೆರಳಿಕೆಗಳೆಷ್ಟು! ಬೈಸಿಕೊಂಡು ಬೆಂದ ದ್ದೆಷ್ಟು !!! ಕಣ್ಣಮುಂದೆ ಅಣ್ಣತಮ್ಮರಲ್ಲಿ ಬಡಿದಾಟವೆಷ್ಟು! ರಕ್ತಪಾತವೆಷ್ಟು! ನಿಷ್ಠುರತೆ ಎಷ್ಟು! ಅವಿಶ್ವಾಸವೆಷ್ಟು!!! ಆದರೂ ಒಂದು ತುಟಿ ಎರಡು ಮಾಡದೆ, ಆ ತಾಯಿಯೆಂಬ ವಳು ಎಷ್ಟು ವೇದನೆಯನ್ನು ಸಹಿಸಿಯೂ, ದುರ್ಬಲ ಸಂತಾನಕ್ಕಾಗಿ–ಅಸಹಾಯ ಸಂ ತಾನಕ್ಕಾಗಿ ಅಂತಃಕರಣದಿಂದ ತೊಡೆಯನ್ನು ಹಾಸಿಕೊಂಡೇ ಕುಳಿತಿದ್ದಾಳೆ !!! ಮಕ್ಕ ಳಿರಾ; ಇಂದು ಅಂಥಾ ಅಸೀಮಮಾತೃಸ್ನೇಹವು ಕೂಡ ನಮ್ಮನ್ನು ತಾಯಿಯಿಲ್ಲದ ಪರ ದೇಶಿಗಳನ್ನು ಮಾಡಿ, ಅನಾಥಸಂಸಾರವನ್ನು ತೊರೆದು ಹೋಗುವಂಥ ಮಹಾಪರಾಧ ವನ್ನು ನಾವೇನುಮಾಡಿದೆವು ? ಮಕ್ಕಳಿರಾ, ತಾಯಿಗಳಿರಾ; ಹೇಳಿರಿ–ಬಾಯಿ ಬಿಚ್ಚಿ ಹೇಳಿರಿ; ನಾವು ಅಂಥಾ ಅಪರಾಧವನ್ನು ಮಾಡಿದ್ದೇನು ? !

ಒಬ್ಬಿಬ್ಬರು:—ತಾಯಿಯ ಬಲಿಯನ್ನು ಬಂದು ಮಾಡಿದಿರಿ! ತಾಯಿಯ ಪೂಜೆ ಯನ್ನು ನಿಲ್ಲಿಸಿದಿರಿ!!

ಗೋವಿಂದ:—ಬಲಿಯನ್ನು ನಿಲ್ಲಿಸಿದ್ದಕ್ಕೆ-ಅಭಿಮಾನದಿಂದ ಮೋರೆ ತಿರುವಿದಳೇ! ಅಂತೆಯೆ ಬೇನೆ, ಬರ, ಉಪವಾಸ, ಬೆಂಕಿ, ಕೊಲೆ, ಒಟ್ಟಾಗಿ ಬಂದವೇ! ಇಂಥ ತಾಯಿ ಯು ನಮ್ಮ ತಾಯಿಯೇ ಹೌದು! ಹೊತ್ತು ಹೊತ್ತಿಗೆ ಚಿಕ್ಕಮಗುವಿಗೆ ತಾಯಿ ಮೊಲೆ ಗೊಟ್ಟು ಕಾಪಾಡುವುದು, ಅದರ ನೆತ್ತರ ಹೀರುವದಕ್ಕಾಗಿಯೇ ? !

ಇಂಥ ತಾಯ ಅಪಮಾನಕ್ಕೆ ಮನದಲ್ಲಿ ನೆಲೆಸಿಕ್ಕಾಗಲೇ, ಆಜನ್ಮದ ಮಾತೃಸ್ನೇಹದ ಸ್ಮೃತಿಯಲ್ಲಿ ವೇದನೆಯ ಊರ್ಮಿಯೇಳದೆ? ತಾಯಿಯ ಮುಖವಿನ್ನೂ ನಿಮ್ಮ ಲಕ್ಷ್ಯಕ್ಕೆ ಬಂದಿಲ್ಲವೆ?—"ರಕ್ತಬೇಕು, ರಕ್ತಬೇಕು" ಎಂದು ತಾಯಿ ಗದ್ದರಿಸುವಳು! ಮಾತುಬಾರದ ದುರ್ಬಲ ಜೀವಿಗಳು, ಪ್ರಾಣಭಯದಿಂದ ಥರಥರ ನಡುಗುವವು ! ರಕ್ತಮದವೇರಿ ದಯಾಹೀನನರನಾರಿಯರು ನರ್ತಿಸುವರು ! ಇದೇನು ತಾಯಿಯ ಪರಿವಾರವೆ? ಮಕ್ಕಳಿರಾ, ಇದೇನು ತಾಯಿಯ ಸ್ನೇಹಪ್ರದರ್ಶನವೇ ?

ಪ್ರಜೆ:-- ನಾವು ಮೂರ್ಖರು! ತಿಳಿಯಲಿಲ್ಲ!!

ಗೋ:— ತಿಳಿಯಲಿಲ್ಲವೆ? ! ಎರಡು ದಿನದ ಕೂಸಿಗೆ ಇನ್ನೇನೂ ತಿಳಿಯದಾ ದರೂ, ಅದು ತನ್ನ ತಾಯಿಯನ್ನು ತಾನು ತಿಳಿದಿರುವದು ! ಅಂಥ ಕೂಸಿಗೂ ಕೂಡ, ಭಯದ ಹೊತ್ತಿಗೆ ಅಭಯ ಸ್ಥಾನವು ತಾಯಿಯೇ ಎಂದು ತಿಳಿದಿದೆ! ಹಸಿದ ಹೊತ್ತಿಗೆ ತಾಯಿಯ ಮೊಲೆಯಲ್ಲಿ ಹಾಲಿದೆಯೆಂದು ಅದಕ್ಕೆ ಗೊತ್ತಿದೆ! ವೇದನೆಯಾದರೆ ಅವಳ ಮೋರೆ ನೋಡಿ ಅಳುವುದೂ ಅದಕ್ಕೆ ಗೊತ್ತಿದೆ! ಎರಡು ದಿನದ ಕೂಸಿಗೂ ಗೊತ್ತಿರು ವಷ್ಟು ನಿಮಗೆ ಗೊತ್ತಿಲ್ಲವೆ ? ತಾಯಿಯನ್ನು ಮರೆಯುವಷ್ಟು ನಿಮಗೆ ಮತಿಭ್ರಮವಾಗಿ ದೆಯೆ ? ತಾಯಿಯು ದಯಾಮಯಿಯೆಂಬುದು ನಿಮಗೆ ಗೊತ್ತೇ ಇಲ್ಲವೆ ? ಜೀವಜನ ನಿಯ ಪೂಜೆ ಜೀವರಕ್ತದಿಂದಾಗದೆ, ಜಗಜ್ಜಯಿಯಾದ ಮಮತೆಯಿಂದಾಗುವದೆಂಬದು ನಿಮಗೆ ತಿಳಿಯಲಿಲ್ಲವೆ ? ಭಯವಿದ್ದಲ್ಲಿ ಮಾತೆಯಿಲ್ಲ. ಹಿಂಸೆಯಿದ್ದಲ್ಲಿ ಮಾತೆಯಿಲ್ಲ. ನೆತ್ತರು ನೆಗೆಯುವಲ್ಲಿ ಮಾತೆಯ ಕಣ್ಣೀರು ಸೂಸಿಬರುವದು ನಿಮಗೆ ಗೊತ್ತಿಲ್ಲವೆ? ! ಅಯ್ಯೋ ಮಕ್ಕಳಿರಾ, ಅವಳ ಶ್ರೀಮುಖದಲ್ಲಿ ಕಂಡ ವೇದನೆಯನ್ನು, ಕನವರಿಕೆಯ ಕರುಣೆಯನ್ನು, ತಪತಪನೆ ತೊಯ್ದ ಕಣ್ಣಲ್ಲಿ ಕುಣಿಯುವ ತೀವ್ರತಿರಸ್ಕಾರವನ್ನು ನಾನು ನಿಮಗೆ ಹೇಗೆ ಕಾಣಿಸಿಕೊಡಲಿ? ! ತೋರಿಸಿಕೊಡುವಂತಿದ್ದರೆ ಆ ಮುಹೂರ್ತ ದಲ್ಲಿಯೇ ನೀವು ನಿಮ್ಮ ತಾಯಿಯನ್ನು ಗುರುತಿಸುತ್ತಿದ್ದಿರಿ! ಮಾತೃಸಿಂಹಾಸನದ ಕಲಂಕ ವನ್ನು ಕಣ್ಣೀರಿನಿಂದ ತೊಳೆಯುವುದಕ್ಕೆ, ದಯೆಯು ದೀನವೇಷದಿಂದ ಮಂದಿರದ ಮಹಾ ದ್ವಾರದ ಬಳಿಗೆ ಬಂದಿತೆಂದು ಸಿಟ್ಟಾಗಿ, ತಾಯಿಯು ತಪ್ಪು ಹೊರಿಸಿ ಹೋದಳೆಂದು ಬಗೆದಿರೋ? !

ಪ್ರಜೆ:— ನೀವೇ ನೋಡಿರಿ! ಮಕ್ಕಳ ಮೇಲೆ ತಾಯಿ ಮುನಿದು ಮೋರೆ ತಿರುವಿ ರುವಳೋ ಇಲ್ಲವೊ; ನೀವೇ ನೋಡಿರಿ !!

ಅಪರ್ಣಾ:— ( ಮಂದಿರದ ಬಾಗಿಲಲ್ಲಿ ಹೋಗಿ ) ತಾಯಿಯು ವಿಮುಖಳಾಗಿದ್ದಾ ಳೆಯೆ! ತಾಯಿ ಒಂದಿಷ್ಟು ಇದಿರಿಗೆ ಬಾರೇ ನಮ್ಮವ್ವಾ ನೋಡೋಣ! ( ಪ್ರತಿಮೆಯನ್ನು ತಿರುವಿ ) ಇದೋ ನೋಡಿರಿ, ತಾಯಿಯು ಮುಂಚಿನಂತೆ ಮೋರೆಯನ್ನು ತಿರುಗಿಸಿದ್ದಾಳೆ!!

ಎಲ್ಲರು:— ತಾಯಿ ತಿರಗಿ ಬಂದಳೇ! ಜಯ ಜಯ ಮಹಾಕಾಳೀ !!!

ಇರಬಲ್ಲೆಯೇನೇ । ತೊರೆದು । ಇರಬಲ್ಲೆಯೇನೆ? ।
ನೊರೆವ ಮಕ್ಕಳ ಕರುಳ । ಮರೆದೆಲ್ಲಿ ಹೋಗಿದ್ದೆ ? ॥
ತಪ್ಪು ಬಹಳುಂಟೆಂದು । ಒಪ್ಪೊತ್ತು ತೊರೆದೆಯೆ? । ತಾಯಿ ।
ತಪ್ಪು ಮನ್ನಿಸಿ ಕೊನೆಗೆ । ಒಪ್ಪುತ್ತ ಬಂದೆಮ್ಮ ! ॥

## ಜಯಸಿಂಹನೂ ರಘುಪತಿಯೂ ಬರುವರು.

ಜಯ:—ಪ್ರಭೋ ಸತ್ಯವಾಗಿ ಹೇಳಿರಿ! ನಿಜವಾಗಿಯೂ ಇದು ನಿಮ್ಮ ಕೆಲಸವೆ!

ರಘು:— ಯಾಕೆ ಸತ್ಯವನ್ನು ಹೇಳಲಾರೆ ? ನಾನೇನು ಸತ್ಯವನ್ನು ಹೇಳುವದಕ್ಕೆ ಹೆದರುವೆನೆ? ಹೌದು ಹೌದು-- ನನ್ನದೇ ಈ ಕೆಲಸ!! ಪ್ರತಿಮೆಯ ಮುಖವನ್ನು ತಿರುವು ಮುರುವು ಮಾಡಿದವನು ನಾನೇ !!! ಏನೆನ್ನುವೆ ಅನ್ನು ! ಗುರುವಿನ ಗುರುವಾಗಿರುವಿ! ನನ್ನನ್ನು ಆಡಿಸಾಡುವಿಯಾ! ? ಗುರುವಿಗೇ ಉಪದೇಶಮಾಡು—!!!

ಜಯ:— ಮಾತಾಡುವದೇ ಉಳಿಯುಲಿಲ್ಲ !

ರಘು:— ಉಳಿಯಲಿಲ್ಲವೆ ? ನನಗೆ ಕೇಳಬೇಕಾದ್ದು ಇನ್ನೇನೂ ಇಲ್ಲೇ ಇಲ್ಲ! ಮನದಲ್ಲಿ ಸಂಶಯವುಂಟಾದರೆ ನಿವಾರಣೆಗೆ ಗುರುವಿನ ಅಗತ್ಯವೇ ಇಲ್ಲ! ಎಷ್ಟುದೂರ ಓಡಿದಿಯೊ? ನನ್ನ ನಿನ್ನ ಸಂಬಂಧವು, ಇಷ್ಟೊಂದು ಕಡಿದು ಹೋಯಿತೆ ? ಮೂಢಾ! ಕೇಳು! ಸತ್ಯವಾಗಿಯೇ ದೇವಿಯು ವಿಮುಖಳಾಗಿದ್ದಾಳೆ ! ಅಂತೆಯೇ ಅವಳು ಮೋರೆಯನ್ನು ತಿರುಗಿಸಲೊಲ್ಲಳು! ಮಂದಿರದಲ್ಲಿ ಮಾಡುವ ರಕ್ತಪಾತವು ಅವಳಿಗೆ ಪಾನಕವಾಗುವದು! ಅವಳು ಕುಡಿದರೂ ಪ್ರತಿಮೆಯ ಮೋರೆಯ ಮೇಲೆ ನೆತ್ತರೇಳುವದಿಲ್ಲ. ದೇವತೆಗಳ ಸಂತೋಷವು ಪ್ರತಿಮೆಯ ಮುಖದಲ್ಲಿ ಮೈದೋರದು! ಆದರೆ ಮೂರ್ಖರಿಗೆ ಇದನ್ನೆಲ್ಲಾ ಹೇಗೆ ತಿಳಿಸಿ ಹೇಳಲಿ? ಅವರು ಕಣ್ಣಿಗೆ ಕಾಣದ್ದನ್ನೆಲ್ಲ ಕಣ್ಣಿನಿಂದಲೇ ನೋಡಬಯಸುತ್ತಾರೆ! ಆದ್ದರಿಂದಲೇ ಸುಳ್ಳಿನಿಂದ ಸತ್ಯವನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆನ್ನುವರು! ಮೂರ್ಖಾ, ನಮ್ಮ ನಿಮ್ಮ ಕೈಯ್ಯಲ್ಲಿ ಸತ್ಯವಿಲ್ಲ! ಸತ್ಯದ ಪ್ರತಿಮೆಯು ಸತ್ಯವಲ್ಲ, ಮಾತು ಸತ್ಯವಲ್ಲ, ಬರಹ ಸತ್ಯವಲ್ಲ, ಮೂರ್ತಿ ಸತ್ಯವಲ್ಲ, ಯೋಚನೆ ಸತ್ಯವಲ್ಲ! ಸತ್ಯವೆಲ್ಲಿದೆಯೋ ಏನೋ ಯಾರಿಗೂ ಗೊತ್ತಿಲ್ಲ! ಯಾರೂ ಕಂಡಿಲ್ಲ, ಯಾರೂ ಉಂಡಿಲ್ಲ! ಆ ಸತ್ಯವು ಕೋಟಿಮಿಥ್ಯಾರೂಪದಿಂದ ಹತ್ತೂ ಕಡೆಗೆ ಹರಿಬಿದ್ದಿದೆ. ಅಂತಲೇ ಆ ಸತ್ಯವು ಮಹಾಮಾಯೆಯೆಂದು ಹೆಸರಾಗಿದೆ ! ಮಹಾಮಾಯೆಂದರೇ ಮಹಾಮಿಥ್ಯಾ ! ಸತ್ಯ ಮಹಾರಾಯನು ಅಂತಃಪುರದಲ್ಲಿ ಕುಳಿತುಕೊಂಡಿದ್ದಾನೆ; ನೂರುಗಟ್ಟಲೆ ಮಿಥ್ಯಾ ಪ್ರತಿನಿಧಿಗಳೇ ಎಲ್ಲೆಲ್ಲೂ ತಲೆಯೆತ್ತಿ ತಿರುಗುತ್ತಿದ್ದಾರೆ ! ಮುಂದಲೆಗೆ ಕೈಯಿಟ್ಟು ಒತ್ತಟ್ಟಿಗೆ ಕುಳಿತು ಯೋಚಿಸಿ ನೋಡು— ನಮಗೆ ಇನ್ನೂ ಎಷ್ಟೋ ಕೆಲಸಗಳನ್ನು ಮಾಡುವದಾಗಿದೆ ! ಪ್ರಜೆಗಳ ಮನಸ್ಸಂತೂ ಮತ್ತೆ ತಿರುಗಿ ಬಿಟ್ಟಿದೆ!

ಜಯ:— ದಂಡೆಗೆ ತಂದ ಅಲೆಯೇ ಮತ್ತೆ ದಂಡೆಹತ್ತರದ ನಡುವಿಗೆಳೆಯುವ ದಲ್ಲವೆ! ಸತ್ಯವಿಲ್ಲ, ಸತ್ಯವಿಲ್ಲ, ಸತ್ಯವಿಲ್ಲ, ಎಲ್ಲಾ ಮಿಥ್ಯಾ ಮಿಥ್ಯಾ ಮಿಥ್ಯಾ! ದೇವಿ ಪ್ರತಿ ಮೆಯಲ್ಲಿಲ್ಲ; ಹಾಗಾದರೆ ಇರುವುದೆಲ್ಲಿ? ಎಲ್ಲೆಲ್ಲಿಯೂ ಅವಳಿಲ್ಲ! ದೇವಿಯೇ ಇಲ್ಲ! ಧನ್ಯ ಧನ್ಯ ಧನ್ಯ ಮಹಾಮಿಥ್ಯಾ !!!

---

## ದ್ವಿತೀಯದೃಶ್ಯ.

## ಪ್ರಾಸಾದಕಕ್ಷ.

### ರಾಜನೂ, ಚಾಂದಪಾಲನೂ.

---

ಚಾಂದ:— ಪ್ರಜೆಗಳು ದುರಾಲೋಚನೆಯನ್ನು ಮಾಡಿದ್ದಾರೆ! ಮೊಗಲರ ಸೇನಾ ಪತಿಯು ಕಾಳಗಕ್ಕಾಗಿ ಆಸಾಮುದ ಕಡೆಗೆ ಸಾಗಿರುವನು. ಸಮೀಪದಲ್ಲಿಯೇ ನಾಲ್ಕಾರು ದಿನದ ಹಾದಿಯ ಮೇಲೆ ಇದ್ದಾನೆ. ನಿಮ್ಮನ್ನು ಸಿಂಹಾಸನದಿಂದ ತಳ ಬೇಕೆಂದು ಪ್ರಜೆಗಳು ಅವನಿಗೆ ಬಿನ್ನೈಸುವರು!

ಗೋ:— ನನ್ನನ್ನು ತಳ್ಳುವರೇ ? ನನ್ನ ಮೇಲೆ ಇಷ್ಟೊಂದು ಅಸಂತೋಷವೇ?

ಚಾಂದ :— ಪ್ರಭೋ, ಚಿತ್ತೈಸಿರಿ ! ನಿಷ್ಠುರಪ್ರಜೆಗಳು ಪಶುರಕ್ತವನ್ನು ಇಷ್ಟೊಂದು ಪ್ರೀತಿಸುವರಾದರೆ ಅವರಿಗೆ ಅದನ್ನೇ ದಯಪಾಲಿಸಿ ಬಿಡಿರಿ ! ನೀಚರಾಕ್ಷಸೀ ಪ್ರವೃತ್ತಿಯು ಪಶುಗಳ ಮೇಲೆಯೇ ಹಾದು ಹೋದರೆ ಹೋಗಿಬಿಡಲಿ! ಯಾವಾಗ ಏನಾಗುವದೋ ಏನೋ, ಎಂದು ಹಗಲಿರುಳೂ ಎದೆ ಹೊಡೆದುಕೊಳ್ಳುತ್ತಿದೆ !

ಗೋ:—ಬಲ್ಲೆ. ಚಾಂದಪಾಲ, ಭಯವಿದ್ದುದು ನಿಜವೇ! ಇತ್ತ ರಾಜಕಾರ್ಯವೂ ಇದೆ! ಭಯಂಕರವಾದ ಬಿರುಗಾಳಿಯೆದ್ದದ್ದೂ ನಿಜ, ನಮ್ಮ ಹಡಗವನ್ನು ದಂಡೆಗೊಯ್ಯ ಬೇಕಾದದ್ದೂ ನಿಜ! ಪ್ರಜೆಗಳ ದೂತನು ಮೊಗಲರ ಕಡೆಗೆ ಹೋದನೇನು?

ಚಾಂ:— ಇಷ್ಟರಲ್ಲಿ ಹೋಗಿರಬಹುದು.

ಗೋ:— ಹಾಗಾದರೆ ನೀನು ಈಗಿನದೀಗಲೆ ಹೋಗಿ ಮೊಗಲರ ಬಿಡಾರದ ಸಮೀಪದಲ್ಲಿದ್ದುಕೊಂಡು, ನಡೆಯುವ ಸಂಗತಿಗಳನ್ನೆಲ್ಲ ತಿಳುಹಿಸು !

ಚಾಂ:— ಮಹಾರಾಜರೇ, ತಾವು ಜಾಗ್ರತೆಯಾಗಿ ಇರ್ರಿ. ಒಳಗೂ ಹೊರಗೂ ಕೂಡಿಯೇ ಶತ್ರುಗಳಿದ್ದಾರೆ !

( ಹೋಗುವನು. )

### ಗುಣವತಿಯು ಬರುವಳು.

ಗೋವಿಂದ:—ಪ್ರಿಯೇ ಶುಷ್ಕಸಂಸಾರವಿದು! ಶೂನ್ಯ ಸಂಸಾರವಿದು ! ಒಳಗೂ ಹೊರಗೂ ಕೂಡಿಯೇ ಶತ್ರುಗಳು ! ನೀನಿಂಥ ವೇಳೆಯಲ್ಲಿ ಒಂದು ಕ್ಷಣದ ಮಟ್ಟಿಗಾ

ದರೂ ಹತ್ತಿರದಲ್ಲಿ ಬಂದುನಿಂತು ನಗೆಮೊಗದಿಂದ ಅಕ್ಕರತೆಬೀರು ! ತುಂಬಗತ್ತಲೆಯ ತುಟ್ಟತುದಿಯಮೇಲೆ ನಿರ್ಣಮೇಷ ಚಂದ್ರನಂತೆ, ನಿನ್ನ ಸುಧಾಮಯಸಾವಿಷ್ಯವಿಂದು ಸಕಲ ಸಂಚುಹೊಂಚುಗಳ ವಿಪತ್ತುವಿದ್ವೇಷಗಳ ಮೇಲೆ ಮೆರೆಯಲಿ ! ಪ್ರಿಯತಮ್ಮ ಮಾತಾಡಲೊಲ್ಲೆಯೇಕೆ? ತಪ್ಪು ಎಣಿಸುವುದಕ್ಕೆ ಇದು ಸಮಯವೆ? ಮರುಭೂಮಿಯಲ್ಲಿ ಮೃತಪ್ರಾಯನಾಗಿ ಮರುಗುತ್ತಿರುವ ತೃಷಾರ್ತನಿದಿರಿಗೆ, ಸುಧಾಪಾತ್ರನನ್ನು ಹಿಡಿದು ಕೊಂಡು ಹಾಗೆಯೇ ಹಾದುಹೋಗಬೇಕೆ? ಹೋಗಿಯೇ ಬಿಟ್ಟೆಯಾ? ! ಥೀ ದುರ್ವಹ ಜೀವನವೇ !!!

( ಗುಣವತಿಯು ಹೋಗುವಳು. )

## ನಕ್ಷತ್ರರಾಯನು ಬರುವನು.

ನಕ್ಷತ್ರ :—( ಸ್ವಗತ ) ಎಲ್ಲಿಹೋದರೂ ಎಲ್ಲರೂ ಅನ್ನುವದೊಂದೇ ಮಾತು— "ರಾಜನಾಗುವಿಯಾ!" "ರಾಜನಾಗುವಿಯಾ?" ಇದೊಂದು ಆಶ್ಚರ್ಯಕಾಂಡವೇ ಆಗಿದೆ! ಒಬ್ಬನೇ ಕುಳಿತಿದ್ದೆನು. ಆಗಲೂ ಯಾರೋ ಎಂದರು—" ರಾಜನಾಗುವಿಯಾ !" " ರಾಜನಾಗುವಿಯಾ!" ಎರಡೂ ಕಿವಿಯಲ್ಲೆರಡು ಊಳಕ್ಕಿ ಕುಳಿತಂತಾಗಿದೆ ! ಒಂದೆ ಸವನೇ ಕೀಸರಿಟ್ಟಿದೆ—" ರಾಜನಾಗುವಿಯಾ? ರಾಜನಾಗುವಿಯಾ? "—ಹೂಂ, ಆಗು ವೆನು! ಆದರೆ ರಾಜರಕ್ತವನ್ನು ನೀವು ತಂದು ಕೊಡುವಿರಾ ! ?

ಗೋವಿಂದ:---ನಕ್ಷತ್ರಾ! (ಎನ್ನುತ್ತಲೇ ನಕ್ಷತ್ರನು ದಿಗಿಲುಪಡುವನು) ನಕ್ಷತ್ರಾ! ನೀನು ನನ್ನನ್ನು ಕೊಲ್ಲುವಿಯಾ? ಹೇಳು ನಿಜವಾಗಿ ಹೇಳು—ನನ್ನನ್ನು ಕೊಲ್ಲಬೇಕೆನ್ನುವಿಯಾ! ಹಗಲಿರುಳೂ ನಿನ್ನ ಹೃದಯದಲ್ಲೀ ಮಾತು ಹಾರಿಬೀಳುತ್ತಿದೆಯೆ ? ಇಂಥ ಮಾತನ್ನು ಮನದಲ್ಲಿ ಮುಚ್ಚಿಟ್ಟುಕೊಂಡು ನನ್ನೊಡನೆ ನಕ್ಕು ನಲಿಯುವಿಯಾ? ನಮಿಸುವಿ, ಆಶೀ ರ್ವದಿಸಿಕೊಳ್ಳುವಿ, ಮಧ್ಯಾಹ್ನದ ಊಟದ ಹೊತ್ತಿಗೆ ಒಂದೇ ಅನ್ನವನ್ನು ಸರಿಪಂಕ್ತಿಗೆ ಕುಳಿತು ಉಣ್ಣುವಿ! ಒಳಗೆ ಅದನ್ನು ತುಂಬಿಕೊಂಡೇ ಇಷ್ಟೆಲ್ಲ ಮಾಡುವಿಯಾ? ನನ್ನೆದೆಗೆ ಕತ್ತಿಯನ್ನೊತ್ತುವಿಯಾ?!! ಎಲೋ ತಮ್ಮಾ ! ಈ ಕಠಿನಮರ್ತ್ಯಭೂಮಿಯಮೇಲೆ ನೀನು ಹೆಜ್ಜೆಯಿಟ್ಟ ಮೊದಲ ಮುಹೂರ್ತದಲ್ಲಿ, ನಾನು ನಿನ್ನನ್ನು ಇದೇ ಎದೆಗೆ ಅವಚಿಕೊಂಡಿ ರುವೆನು ! ನಿನ್ನ ತಲೆಯಮೇಲೆ ಕೊನೆಯ ಹರಕೆಯ ಹಸ್ತವನ್ನಿರಿಸಿ ತಾಯಿಯು ಧರಾ ಧಾಮವನ್ನು ಶೂನ್ಯಗೊಳಿಸಿ ನಡೆದಾಗ, ನಾನು ನಿನ್ನನ್ನು ಇದೇ ಎದೆಗೆ ಅವಚಿಕೊಂ ಡೆನು! ಇಂದು ಅದೇ ನೀನು, ಇದೇ ಎದೆಯನ್ನು ಕತ್ತಿಯಿಂದ ಇರಿಯುವಿಯಾ? ಇಬ್ಬರ ಮೈಯಲ್ಲಿಯೂ ಒಂದೇ ರಕ್ತಧಾರೆ ಹರಿಯುವದು ! ತಾತ—ಮುತ್ತಾತರಿಂದ ತೆರಪಿಲ್ಲದೆ ಹರಿದು ಬಂದಿರುವ ಏಕೈಕರಕ್ತಧಾರೆಯನ್ನು, ಅಣ್ಣತಮ್ಮಂದಿರ ಮೈಯಿಂದೀಗ ಹಂ ಗೆಡಿಸಬೇಕೆನ್ನುವಿಯಾ ! ಇದೋ ನೋಡು; ಬಾಗಿಲು ಮುಚ್ಚಿದೆನು. ತಕ್ಕೊ ಈ ಕತ್ತಿಯನ್ನು ಇರಿ ಈ ಅವಾರಿತವಕ್ಷವನ್ನು ! ತೀರಲಿ ನಿನ್ನ ಬಯಕೆ !!

ನಕ್ಷ:—ಕ್ಷಮಿಸು ಕ್ಷಮಿಸು! ಅಣ್ಣಾ ಕ್ಷಮಿಸು !!!

ಗೋ:—ಬಾರೈ ತಮ್ಮಾ ಅಮರಬಾರೆನ್ನ ಆದೇ ಆ ಎದೆಗೆ! ಕ್ಷಮಾಯಾಚನೆಯೆ? ಈ ಮಾತು ಕಿವಿಗೆ ಬಿದ್ದಾಗಲೇ ಕ್ಷಮಿಸಿರುವೆ. ನಿನ್ನನ್ನು ಕ್ಷಮಿಸದ ಅಕ್ಷಮನೇ ನಾನು!!

ನಕ್ಷ :—ರಘುಪತಿಯ ಮರಾಲೋಚನೆಯ ಬಲೆಯಿಂದ, ನನ್ನನ್ನು ಕಾಪಾಡ ಬೇಕು !

ಗೋ:—ತಮ್ಮಯ್ಯಾ ಎಷ್ಟೂ ಹೆದರಬೇಡ !

---

## ತೃತೀಯ ದೃಶ್ಯ.

## ಅಂತಃಪುರಕಕ್ಷ.

### ಗುಣವತಿ.

ಗುಣ:—ಈಗಲಾದರೂ ಎಲ್ಲಾ ಮುಗಿಯಿತಲ್ಲವೆ! ತುಸುದಿನ ಬಿಗಿದುಕೊಂಡು ಕಠಿನಳಾಗಿ ಕುಳಿತರೆ, ಪ್ರೇಮತೃಷ್ಣೆಯಿಂದ ಬಲೆಗೆ ಬೀಳಬಹುದೆಂದು ಮನದಲ್ಲೇನೋ ತುಂಬಾ ಆಶೆಯಿದ್ದಿತು. ಮನದಲ್ಲಿ ಇಷ್ಟೊಂದು ಅಹಂಕಾರ! ಮೋರೆ ತಿರುವಿದೆ; ಮಾತು ಬಿಟ್ಟೆ; ಕಣ್ಣೀರಿನ ಸುದ್ದಿಯಿಲ್ಲ; ಬರಿ ಒಣಸಿಟ್ಟು; ಬರಿ ತೀವ್ರತಿರಸ್ಕಾರ. ಹೀಗೆ ಕಳೆದು ಹೋದ ದಿನಗಳೆಷ್ಟೊ ! ನಾರೀರೋಷವು ಪುರುಷರಿಗೆ ಬರಿ ಹೊಳೆಯುವ ಚೆಲುವಂತೆ, ಏನೂ ಅವರಿಗೆ ತಾಪವಿಲ್ಲವಂತೆ. ವಜ್ರಪ್ರಕಾಶದ ಸಮವಂತೆ ! ಧಿಕ್ಕಾರವಿರಲೀ ಶೋಭೆಗೆ ! ಈ ರೋಷವೊಂದು ಸಿಡಿಲಾಗಿದ್ದರೆ—ಪ್ರಾಸಾದದ ಪತನವಾಗುತ್ತಿತ್ತು ! ರಾಜನ ಮಬ್ಬು ಮಣ್ಣಾಗುತ್ತಿತ್ತು! ಅರಸನ ಅಹಂಕಾರವು ಚೂರ್ಣವಾಗುತ್ತಿತ್ತು! ಅರ ಸಿಯ ಮಹಿಮೆಯು ಪೂರ್ಣವಾಗುತ್ತಿತ್ತು !—ನಾನು ಅರಸಿಯೇ ??? ಇಂಥ ಸುಳ್ಳು ನೆಚ್ಚಿಕೆ ನನಗೇಕೆ ಬಂತೋ ! ಹೃದಯದ ಅಧೀಶ್ವರೀ; ಈ ಮಿಥ್ಯಾಮಂತ್ರವನ್ನೇಕೆ ಎಡೆಬಿಡದೆ ಕಿವಿಯಲ್ಲಿ ಊದಿದಿ? ಕ್ರೀತದಾಸಿಯೆಂದು, ಅರಸನ ಪಡಿತೊತ್ತೆಂದು, ಅರಸಿ ಯಲ್ಲೆಂದು ಯಾಕೆ ತಿಳಿಸಲಿಲ್ಲ ? ಹಾಗಿದ್ದರೆ ಇಂದಿನ ಪೆಟ್ಟಿಗೆ, ಇಂದಿನ ಪತನಕ್ಕೆ ಗುರಿ ಯಾಗಬೇಕಾಗಿರಲಿಲ್ಲ !

### ಧ್ರುವನು ಬರುವನು.

ಗುಣ:—ಎಲ್ಲಿಗೆ ಹೋಗುವಿಯೋ ನೀನು ???

ಧ್ರುವ:—ನನ್ನನ್ನು ಮಹಾರಾಜರು ಕರೆದಿದ್ದಾರೆ. ( ಹೋಗುವನು )

ಗುಣ:—ಇದೇ ಹುಡುಗನೇ ರಾಜನ ಹೃದಯರತ್ನವಲ್ಲವೆ!! ಎಲೋ ಕುನ್ನಿಯೇ, ನನ್ನ ಮಕ್ಕಳ ಅಕ್ಕರತೆಯ ಹಕ್ಕಿನ ಪದವನ್ನು ನೀನು ಕದ್ದುಕೊಂಡೆಯಾ ! ನನ್ನ ಕಂದಮ್ಮಗಳು ಬಾರದಿದ್ದರೆ, ಅವರಿಗೆ ಸಲ್ಲುವ ಪಿತೃಸ್ನೇಹವು ನಿನ್ನ ಪಾಲಿಗೇ ಉಳಿಯು

ವದಲ್ಲವೆ ! ರಾಜಹೃದಯದ ಅಮೃತಕುಂಭದಿಂದ ಪ್ರಥಮಾಂಜಲಿಯನ್ನು ನೀನೆ ನೆಗು ದೆಯಾ ? ಹಿಂದೆಬರುವ ರಾಜಕುಮಾರರು ನಿನ್ನ ಪ್ರಸಾದವನ್ನು ಸ್ವೀಕರಿಸಬೇಕೇನೇ; ರಾಜದ್ರೋಹೀ!? ಮಹಾಮಾಯೆ! ನೀನೇನು ಬೇಡುವಿ ಬೇಡು—ನನಗೊಂದು ಮಗುವನ್ನು ದಯಪಾಲಿಸು ! ಇಂಥ ಸೃಷ್ಟಿ, ಇಂಥ ಲೀಲೆ—ಇಷ್ಟೆಲ್ಲಾ ನಿನ್ನದು ! ಲೀಲಾಚ್ಛಲದಿಂದಾ ದರೂ ನನಗೆ ತೊಡೆತುಂಬ ಕೂಡುವಂಥ ಒಂದೇ ಒಂದು ಮಗುವನ್ನು ಕೊಟ್ಟರೂ ಸಾಕು ! ನಿನ್ನ ಇಷ್ಟವಿದ್ದದ್ದನ್ನು ನಿನಗೊಪ್ಪಿಸುವೆ !

## ನಕ್ಷತ್ರರಾಯನು ಬರುವನು.

ನಕ್ಷತ್ರಾ! ಎಲ್ಲಿಗೆ ಹೊರಟೆ ?! ತಿರುಗಿ ನಡೆದೆಯೇಕೆ !? ನಿನಗಿಷ್ಟೊಂದು ಭಯ ವಾರದು ? ನಾನು ನಾರಿ, ಶಸ್ತ್ರಹೀನೆ, ಬಲಹೀನೆ, ನಿರುಪಾಯೆ, ಅಸಹಾಯೆ ! ಇಂಥ ನಾನು ಇಷ್ಟೊಂದು ಭಯಂಕರಳೇ ? !

ನಕ್ಷ:—ಸಾಕು ಸಾಕು—ನನ್ನನ್ನು ಕೂಗುವುದು ಸಾಕು !

ಗುಣ:—ಯಾಕೆ ಏನಾಯಿತು ?

ನಕ್ಷ:—ಒಲ್ಲೆ; ನಾನು ರಾಜನಾಗುವುದಕ್ಕೆ ಒಲ್ಲೆ !

ಗುಣ:—ಒಲ್ಲೆಯಾದರೆ ? ಇಷ್ಟೊಂದು ಆಸ್ಫಾಲನವೇಕೆ ?

ನಕ್ಷ:—ರಾಜನು ಚಿರಜೀವಿಯಾಗಿರಲಿ. ನಾನು ಯುವರಾಜನಾಗಿದ್ದುಕೊಂಡೇ ಸಾಯುವೆ !

ಗುಣ:—ಹಾಗೇ ಸಾಯಿ ! ಬೇಗನೆ ಸಾಯಿ ! ಮನೋರಥವು ಸಫಲವಾಗಲಿ! ನಿನ್ನನ್ನು ಬದುಕಿಸಿ ನಾನೇನು ಕಾಲಿಗೆ ಕಟ್ಟಲೇ ?

ನಕ್ಷ:—ಹಾಗಾದರೆ ಅನ್ನುವದೇನು ?

ಗುಣ:—ನಿನ್ನ ಮಕುಟವನ್ನು ಕದ್ದ ಕಳ್ಳನನ್ನು ದೂರೀಕರಿಸು ! ತಿಳಿಯಿತೆ!

ನಕ್ಷ:—ಎಲ್ಲಾ ತಿಳಿದಿದೆ ! ಆದರೆ ಆ ಕಳ್ಳನು ಯಾರೆಂಬುದೇ ತಿಳಿಯಲಿಲ್ಲ !

ಗುಣ:—ಆ ಬಾಲಕ ಧ್ರುವನು ! ರಾಜನ ತೊಡೆಯಮೇಲೆ ದಿನದಿನಕ್ಕೂ ಮಕುಟದ ವರೆಗೆ ಬೆಳೆಯುತ್ತಿದ್ದಾನಲ್ಲವೆ !

ನಕ್ಷ:—ಅದು ಸರಿ. ಇಷ್ಟೊತ್ತಿಗೆ ಎಲ್ಲಾ ತಿಳಿದಿದೆ. ಧ್ರುವನ ತಲೆಯಮೇಲೆ ಮಕುಟವನ್ನು ಕಂಡಿರುವೆ. ಆದರೆ ಅದೊಂದು ಚೆಲ್ಲಾಟ !

ಗುಣ:—ಮಕುಟದೊಡನೆ ಚೆಲ್ಲಾಟವೆ ? ಒಳ್ಳೇ ಆಟ ! ಈಗಲೆ ಈ ಆಟವನ್ನು ಮುರಿದು ಬಿಡು. ಇಲ್ಲದಿದ್ದರೆ ನೀನೇ ಈ ಆಟದ ಆಟಗೆಯಾದೀ !

ನಕ್ಷ:—ಸರಿ. ಇದೇನೋ ಒಳ್ಳೇ ಆಟವಲ್ಲ.

ಗುಣ:—ಇಂದು ಸಮರಾತ್ರಿಯಲ್ಲಿ ಗೋಪನವಾಗಿ ಅವನನ್ನು ಹಿಡಿದೊಯ್ದು, ದೇವಿಯ ಶ್ರೀಪಾದಕ್ಕೆ ನನ್ನ ಹೆಸರಿನಿಂದ ಬಲಿಗೊಡು! ಆ ನೆತ್ತರಲ್ಲಿ ದೇವಿಯ ರೋಷಾ

ನಲವು ನಂದಿ, ಸಿಂಹಾಸನವು ರಾಜವಂಶಕ್ಕೆ ಸ್ಥಿರವಾಗುವದು. ಪಿತೃಲೋಕವು ನಿನ್ನ ಕಲ್ಯಾಣವನ್ನು ಕೊಂಡಾಡುವದು ! ತಿಳಿಯಿತೇ ?

ನಕ್ಷ:—ತಿಳಿಯಿತು !

ಗುಣ:—ಹಾಗಾದರೆ ಹೋಗು. ಹೇಳಿದಷ್ಟುಮಾಡು ! ನೆನಪಿನಲ್ಲಿರಲಿ—ನನ್ನ ಹೆಸರಿನಿಂದ ನಿವೇದನಮಾಡಬೇಕು !

ನಕ್ಷ:— ಹಾಗೇ ಆಗಲಿ ! ಮಕುಟದೊಡನೆ ಆಟವೆ ! ಇದೆಂಥ ಸರ್ವನಾಶವು ! ದೇವಿಯ ಸಂತೋಷ, ರಾಜ್ಯರಕ್ಷಣೆ, ಪಿತೃಲೋಕ-- ತಿಳಕೊಳ್ಳುವದಿನ್ನೇನೂ ಉಳಿಯ ಲಿಲ್ಲ!

---

## ಚತುರ್ಥ ದೃಶ್ಯ.

## ಮಂದಿರದ ಮೆಟ್ಟಲು.

### ಜಯಸಿಂಹ.

ಜಯ:— ದೇವೀ— ಇದ್ದೀ— ನೀನು! ದೇವೀ, ಇದ್ದೀಯಾ ನೀನು? ಈ ಅಶೀಮರಜನಿಯ ಸರ್ವಪ್ರಾಂತಶೇಷದಲ್ಲಿ ಕ್ಷಣಮಾತ್ರವಾಗಿಯಾದರೂ ನೀನಿದ್ದರೆ, ಅಲ್ಲಿಂದಲೇ ಕ್ಷೀಣತಮಸ್ವರದಿಂದಲಾದರೂ ಆಗಲೊಲ್ಲದೇಕೆ— "ಮಗು, ಇದ್ದೇನೆ"— ಎಂದು ಒಡನುಡಿದು ಬಿಡು! ಇಲ್ಲ ! ಇಲ್ಲ! ದೇವಿಯಿಲ್ಲ ! ಇಲ್ಲವೆ ? ದಯಮಾಡಿ ಇರು ! ಎಲಾ ಮಾಯಾಮಯೀ ಮಿಥ್ಯಾ ! ಕರುಣಿಸು—ಕರುಣಿಸು— ಜಯಸಿಂಹನಿಗೆ ಸತ್ಯವಾಗು ! ಆಶೈಶವಭಕ್ತಿಯೆನ್ನದು; ಆಜನ್ಮಪ್ರೇಮವಿರುವಾಗ ಪ್ರಾಣವನ್ನೀಯಲಿಕ್ಕಾಗದೆ ? ನೀನು ಇಷ್ಟೊಂದು ಮಿಥ್ಯೆಯೆ ? ಜಯಸಿಂಹಾ, ಈ ಜೀವನವನ್ನು ಯಾರಿಗಿತ್ತೆಯೊ! ? ಸತ್ಯಶೂನ್ಯ, ದಯಾಶೂನ್ಯ, ಮಾತೃಶೂನ್ಯ, ಸರ್ವಶೂನ್ಯದಲ್ಲಿ- ಎಲ್ಲವನ್ನು ನೂಕಿದಿಯಲ್ಲವೋ !

### ಅಪರ್ಣೆ ಬರುವಳು.

ಅಪರ್ಣಾ ! ಮತ್ತೂ ಬಂದೆಯಾ ? ಮಂದಿರದಿಂದ ಹೊರಡೂಡಿದೆನು. ಆದರೂ ಸುಖದ ದುರಾಶಾಸಮನಾದ ದರಿದ್ರಮನದಿಂದ, ಸುತ್ತುಮುತ್ತಲೇ ಸುತ್ತಾಡುತ್ತಿರುವೆಯಾ ? ಸತ್ಯಮಿಥ್ಯೆಗಳ ಪ್ರಭೇದವು ಇಲ್ಲೇ ಇದೆ ಸರಿ ! ಮಿಥ್ಯೆಯನ್ನು ಮಂದಿರದಲ್ಲಿ ಬಹು ಯತ್ನದಿಂದ ಇರಿಸಿಕೊಂಡಿರುವೆ. ಆದರೂ ಅದು ಇದ್ದೂ ಇಲ್ಲ ! ಸತ್ಯವನ್ನು ಅನಾದರದಿಂದ ಮಂದಿರಬಿಟ್ಟೋಡಿಸಿದೆ. ಆದರೂ ಅದು ಸುತ್ತಿ ಸುತ್ತಿ ಸುಳಿಯುತ್ತಿದೆ ! ಅಪರ್ಣಾ, ಹೋಗಬೇಡೇ ನೀನು. ಇನ್ನು ನಾನು ನಿನ್ನನ್ನು ತಿರುಗಿಸುವುದಿಲ್ಲ. ಇಲ್ಲಿಯೇ ಇಬ್ಬರೂ ಇರುವಾ! ರಾತ್ರಿ ಹೆಚ್ಚಾಗಿದೆ. ಕೃಷ್ಣಪಕ್ಷ. ಶಶಿಯೂ ಮರದೊಳಗೆ

ಮಿಣುಕುತ್ತಿದ್ದಾನೆ. ಚರಾಚರವೆಲ್ಲ ಸುಪ್ತಿಮಗ್ನವಾಗಿದೆ. ನಾವಿಬ್ಬರೇ ನಿದ್ರಾಹೀನರು! ಅಪರ್ಣಾ, ವಿಷಾದಮಯಿಯೂ, ಮಾಯಾದೇವತೆಯು ನಿನ್ನ ಕಣ್ಣಲ್ಲಿಯೂ ಮಂಕುಬೂದಿಯನ್ನು ಚೆಲ್ಲಿ ಹೋದಳೇನೆ? ದೇವರ ಅಗತ್ಯವೇನು ? ನಮ್ಮ ಚಿಕ್ಕ ಸುಖದ ಸಂಸಾರದಲ್ಲಿ, ಅದನ್ನು ಕರೆದು ಹೊಗಿಸಿಕೊಳ್ಳುವದೇಕೆ? ಆ ದೇವರೆಂಬವುಗಳಿಗೇನು ನಮ್ಮ ನೋವಿನ ಅರಿಕೆಯಿದೆಯೆ ? ಕಲ್ಲಿನಂತೆ ಬರಿ ಸುಮ್ಮನಿದ್ದುಬಿಡುವವು ! ಬಂಧುಬಳಗಕ್ಕೆ ಸಲ್ಲುವ ಮಮತೆಯನ್ನು- ವಂಚಿಸಿ ತಂದು ಇವುಗಳಿಗಿಟ್ಟರೆ ಉಪಯೋಗವೇನು ? ಈ ಸುಖಮಯಿಯೂ ಸುಂದರಿಯೂ ಆದ ಧರಣಿಯಿಂದ ಮೋರೆತಿರುವಿ, ಆ ದೇವತೆಯ ಕಡೆಗೆ ನೋಡಿದರೆ ಅದೆಲ್ಲಿ ನೋಡುವದು?! ಆ ದೇವತೆ ಇದಿರಿಗೆ ಕ್ಷುದ್ರವಾದರೂ ಸರಿ, ತುಚ್ಛವಾದರೂ ಸರಿ. ಏನಾದರೂ ನಮ್ಮ ಮಾತೃಭೂಮಿ ! ಆ ದೇವತೆಯಿದಿರಿಗೆ ಹುಟ್ಟಹುಳುವಾದರೂ ಸರಿ—ಏನಾದರೂ ನಮ್ಮ ಬಳಗ ! ಅವಹೇಲನೆಯಿಂದ ಅಂಧರಥಚಕ್ರತಲದಲ್ಲಿ ನುಚ್ಚುನುಗ್ಗಾಗುತ್ತಿದ್ದರೂ ಸರಿ- ಏನೇ ಆದರೂ ಆ ದಲಿತ ಉಪೇಕ್ಷಿತರೆಂಬವರು ನಮ್ಮವರು ! ಬಂಧುಬಳಗವೇ, ಬೇಗನೆ ಬನ್ನಿರಿ ! ದೇವತಾಹೀನರಾಗಿ ಒಬ್ಬರನ್ನೊಬ್ಬರು ಹೊಂದಿಕೊಂಡಿರುವಾ ! "ರಕ್ತಬೇಕು ರಕ್ತ !" ಚೆನ್ನಾಗಿದೆ ! ಆ ಸ್ವರ್ಗದ ಸಿರಿಯನ್ನು ತೊರೆದು ಇದಕ್ಕಾಗಿಯೇ ಈ ದರಿದ್ರಧರಾತಲಕ್ಕೆ ಬಂದಿಯಾ ? ಅಲ್ಲಿ ಮಾನವಿಲ್ಲ, ಜೀವಿಗಳಿಲ್ಲ, ನೆತ್ತರಿಲ್ಲ, ನೋಯುವವರಿಲ್ಲ—ಅಂತಲೇ ಸ್ವರ್ಗದ ಮೇಲೆ ನಿನಗೆ ಅರುಚಿಯುಂಟಾಯಿತೆ ? ನಿರ್ಭಯವಿಶ್ವಾಸಸುಖದಿಂದ ಮಾನವರ ಕ್ಷುದ್ರಪರಿವಾರವು ಮನೆ ಮಾಡಿಕೊಂಡಿರುವಲ್ಲಿ ಬೇಟೆಯನ್ನಾಡಬಂದಿರುವಿ! ಬಾಲಿಕಾ, ಅಪರ್ಣಾ, ದೇವಿಯಿಲ್ಲ ದೇವಿಯಿಲ್ಲ !

ಅಪರ್ಣೆ:— ಜಯಸಿಂಹಾ, ಹೀಗಿದ್ದರೆ ಈ ಮಂದಿರವನ್ನು ಬಿಟ್ಟು ಬಾರೋ!

ಜಯ:— ಹೋಗುವೆ, ಹೋಗುವೆ—ಅದಕ್ಕಾಗಿಯೇ ಹೋಗುವೆ—ಬಿಟ್ಟು ಹೊರಟು ಹೋಗುವೆ! ಅಯ್ಯೋ ಅಪರ್ಣಾ, ಹೋಗಲೇಬೇಕು ! ಆದರೆ ಇಡೀ ಜನ್ಮವೂ ರಾಜತ್ವದಲ್ಲಿದ್ದು, ಕೊನೆಗೆ ರಾಜಋಣವನ್ನು ತೀರಿಸಿದರೆ ಆಗ ಹೋಗಬಲ್ಲೆ ! ಇರಲಿ, ಆ ಎಲ್ಲ ಮಾತು ಒತ್ತಟ್ಟಿಗೆ ! ನೋಡು, ದಿಟ್ಟಿಸಿನೋಡು. ಗೋಮತಿಯ ಶೀರ್ಣಜಲ ರೇಖೆಯು ಬೆಳದಿಂಗಳಲ್ಲಿ ಬೆಳಗುತ್ತಿದೆ ಕಲಧ್ವನಿಯು ಅದರ ಒಂದೇ ಮಾತನ್ನು ನೂರುನೂರು ಬಾರಿ ಸಿಚ್ಚಳಗೊಳಿಸುತ್ತಿದೆ! ಆಕಾಶದಲ್ಲಿ ಅರ್ಧಚಂದ್ರನ ಪಾಂಡು ಮುಖಚ್ಛವಿಯು ಶ್ರಾಂತಿಕ್ಷೀಣವಾಗಿದೆ ! ಬಹುರಾತ್ರಿ ಜಾಗರಣದಿಂದ ಚಂದ್ರನ ನೇತ್ರ ಪಲ್ಲವವು ನಿದ್ರಾಭಾರದಿಂದ ಜೋಲುಬಿದ್ದಂತಿದೆ! ಸುಂದರ ಜಗತ್ !! ಹಾ ಅಪರ್ಣಾ, ಇಂಥ ಇರುಳಲ್ಲಿಯೂ ಆ ದೇವಿಯಿಲ್ಲ ! ಅಪರ್ಣಾ, ಸುಖಪೂರ್ಣವಾದ-ಸುಧಾಪೂರ್ಣವಾದ ಒಂದಿಷ್ಟೇನಾದರೂ ಮಾತನ್ನು ನೀನು ಬಲ್ಲೆಯಾ ? ಗೊತ್ತಿದ್ದರೆ ಹೇಳು ಹೇಳು! ಕೇಳಿದ ಕೂಡಲೆ ಅತಲದಲ್ಲಿ ಮಗ್ನನಾಗಿ, ಜೀವನದ ತಾಪವನ್ನೂ ಮರಣವನ್ನೂ ಮರೆಯುವಂಥ, ಮಧುರಮಂತ್ರದ ಸವಿಯನ್ನು ತೋರಿಸಿ ಕೊಡು! ಅಪರ್ಣಾ, ಅಂಥದೇನಾದರೂ ಇದ್ದರೆ—ನನ್ನ ಮೊಗದಿದಿರಿಗೆ ನಿನ್ನ ಮಧುನಯನಗಳ ಮುದ್ದುಬೀರಿ, ಮಧು

ಕಂಠದಿಂದ-ಈ ನಿರ್ಜನಸ್ತಬ್ಧರಜನಿಯಲ್ಲಿ, ಈ ವಿಶ್ವಜಗದ ನಿಬಿಡನಿದ್ರೆಯಲ್ಲಿ-ಒಮ್ಮೆ ಒಡನುಡಿಯೇ! ಕೇಳಿದೊಡನೆ ನಿಟ್ಟು ನೀರಾಗಿ, ಪೌರ್ಣಿಮೆಯ ಸುಪ್ತರಾತ್ರಿಯ ಇರುಳು ಮಲ್ಲಿಗೆಯ ತನಿಗಂಪಿನಂತೆ, ಮಮತೆಯೊಂದೇ ತೇಲಿಬರುವ ಮುದ್ದು ಮಾತೊಂದು ಹೇಳೆ!

ಅಪರ್ಣಾ:— ಹಾ ಜಯಸಿಂಹಾ ! ಹೇಳುವದಕ್ಕಾಗಲೊಲ್ಲದು ! ಬಗೆಯಲ್ಲಿ ತುಂಬಿದೆ, ಬಾಯಲ್ಲಿ ಬಾರದು !!!

ಜಯ:— ಹಾಗಿದ್ದರೆ ಇನ್ನೂ ಸನಿಯಾಗು. ಮನದ ಮಾತು ಮನಕ್ಕೆ ಮುಟ್ಟಲಿ! ಅಯ್ಯೋ ನಾನು ಇದೇನು ನಡಿಸಿರುವೆ !!! ಅಪರ್ಣಾ ಅಪರ್ಣಾ, ಮಂದಿರವನ್ನು ಬಿಟ್ಟು ಹೊರಟು ಹೋಗು! ಗುರುದೇವನ ಅಪ್ಪಣೆಯಿದೆ !

ಅಪರ್ಣಾ:— ಜಯಸಿಂಹಾ! ನಿಷ್ಠುರನಾಗಬೇಡ ! ತಿರುತಿರುಗಿ ಅಟ್ಟಬೇಡ ! ನಾನು ಸಹಿಸಿದ್ದೆಲ್ಲಾ ಅಂತರ್ಯಾಮಿಗೆ ಗೊತ್ತಿದೆ!

ಜಯ:— ಹಾಗಾದರೆ ನಾನೇ ಹೋಗುವೆ ! ಒಂದು ನಿಮಿಷವೂ ನಿಲ್ಲಲಾರೆ! (ಸ್ವಲ್ಪದೂರ ಹೋಗಿ, ಬಂದು) ಅಪರ್ಣಾ, ನಾನು ನಿಷ್ಠುರನೇ ? ಜಯಸಿಂಹನು ಕಠಿಣ ನಿಷ್ಠುರನೆಂದು ನಿನ್ನ ಮನದಲ್ಲಿರುವದೇ ? ಎಂದೂ ನಾನು ನಗೆಮೋರೆಯಿಂದ ಮಾತಾಡಿಲ್ಲವೆ? ಎಂದೂ ನಿನ್ನನ್ನು ಹತ್ತರ ಕರೆದಿಲ್ಲವೆ? ಎಂದೂ ನಿನ್ನ ಅಳುವಿಗೆ ಅತ್ತಿಲ್ಲವೆ? ಅಪರ್ಣಾ, ಅದೊಂದೂ ನಿನಗೆ ನೆನಪಾಗದೆ, ಬರಿ ಈ ಜಯಸಿಂಹನು—ಯಾವ ಪಾಷಾಣಮೂರ್ತಿಗೆ ದೇವಿಯೆನ್ನುವೆವೋ ಆ ಪಾಷಾಣದಂಥ ಕಠಿನನಿಷ್ಠುರಪಾಷಾಣನೆಂಬುದೊಂದೇ ಮನದಲ್ಲಿ ಮನೆಮಾಡುವದೇ? ಹಾಯ್ ದೇವೀ! ಈ ಅಂತರ್ದಾಹದ ಅರಿಕೆಯಾಗುತ್ತಿದ್ದರೆ ನೀನು ದೇವಿಯು !!!

ಅಪರ್ಣಾ:— ಈ ಕ್ಷುದ್ರನಾರೀಹೃದಯವು ಬುದ್ಧಿಹೀನವಾದದ್ದು, ವ್ಯಥೆಪಟ್ಟದ್ದು. ಇದನ್ನು ಕ್ಷಮಿಸಬೇಕು. ಜಯಸಿಂಹಾ, ಈಗಲೆ ಬಾ-ನಾವು ಈ ಮಂದಿರವನ್ನು ಬಿಟ್ಟು ಹೋಗುವಾ !

ಜಯ:— ರಕ್ಷಿಸು ರಕ್ಷಿಸು—ಅಪರ್ಣಾ, ಕರುಣಿಸು ! ದಯವಿಟ್ಟು ನನ್ನನ್ನು ಚೆಲ್ಲಿ ಹೋಗು! ಈ ಜೀವನದಲ್ಲಿ ಮಾಡಬೇಕಾದ ಒಂದು ಕಾರ್ಯವಿನ್ನೂ ಉಳಿದುಕೊಂಡಿದೆ! ಅದುವೆ ನನ್ನ ಪ್ರಾಣಾಧಿಪತಿಯು! ಅದರ ಸ್ಥಳವನ್ನು ನೀನು ಕಸಿದುಕೊಳ್ಳಬೇಡ !

(ಓಡಿ ಹೋಗುವನು.)

ಅಪರ್ಣಾ:— ನೂರು ಬಾರಿ ಸಹಿಸಿರುವೆ ! ಇಂದೇಕೆ ಸಹಿಸಲಾರೆ ?

# ಪಂಚಮದೃಶ್ಯ.

## ಮಂದಿರ.

### ನಕ್ಷತ್ರ, ರಘುಪತಿ, ನಿದ್ರಿತಧ್ರುವ.

ರಘು:— ಅತ್ತುತ್ತು ಮಲಗಿಕೊಂಡಿದೆ! ಜಯಸಿಂಹನೂ ಇಷ್ಟು ಕೂಸಿದ್ದಾಗಲೇ ಪಿತೃಮಾತೃಹೀನನಾಗಿ ನನ್ನ ತೊಡೆಗೆ ಬಂದನು! ಅಂದು ಎಲ್ಲೆಲ್ಲಿಯೂ ಹೊಸ ಹೊಸದನ್ನೇ ಕಂಡು ಅತ್ತುತ್ತು ದಣಿದು ಉಸಿರುಗುಂದಿ ಹೀಗೆಯೇ ಮಲಗಿಕೊಂಡಿರಲು, ದೇವಿಯ ಪಾದದಲ್ಲಿಯೇ ಸಂಜೆಯಾಗಿ ಹೋಯಿತು! ಅಯ್ಯೋ ಇಲ್ಲಿ ಆ ಮುದ್ದು ಮಗುವಿನ ಶಿಶುಮುಖವೂ ಶಿಶುರೋದನವೂ ನೆನಪಾಗುವವು!

ನಕ್ಷ:— ಗುರುದೇವಾ! ತಡಮಾಡಬೇಡಿರಿ. ರಾಜನಿಗೆ ಯಾವಾಗ ಸುದ್ದಿ ಹತ್ತೀತೆಂಬ ನಿಯಮವಿಲ್ಲ!

ರಘು:— ಹೇಗೆ ಸುದ್ದಿ ಹತ್ತುವದು? ನಾಲ್ಕೂ ದಿಕ್ಕು ನಿಶೀಥನಿದ್ರೆಯಿಂದ ನಿಬಿಡವಾಗಿ ಹೋಗಿದೆ!

ನಕ್ಷ:— ಪ್ರಭೋ! ಯಾರದೋ ನೆರಳು ಬಿದ್ದಂತಾಯಿತು!

ರಘು:— ಅದು ನಿನ್ನ ಭಯದ್ದು!

ನಕ್ಷ:—ಪ್ರಭೋ, ಯಾರೋ ಅತ್ತಂತೆ ಕೇಳಿಸಿತು!

ರಘು:—ಅದು ನಿನ್ನ ಹೃದಯದ್ದು! ನಿರಾನಂದವು ದೂರಾಗಲಿ! ಬಾ ಈ ಕಾರಣ ಸಲಿಲವನ್ನು ಪಾನಮಾಡುವಾ! (ಮದ್ಯಪಾನ) ಮನೋಭಾವವು ಮನದಲ್ಲಿರುವಷ್ಟು ಹೊತ್ತೂ ಅದು ಬಹಳ ದೊಡ್ಡದಾಗಿ ತೋರುವದು! ಕೆಲಸಕ್ಕೆ ನಿಂತರೆ ಚಿಕ್ಕದಾಗುವದು! ಎಷ್ಟೋ ಉಗಿ ತಂಪಾದರೆ ಒಂದು ಹನಿ ನೀರು! ಏನೂ ಅಲ್ಲ! ಒಂದು ನಿಮಿಷದ ಕೆಲಸ! ಒಂದು ಅಳುಮೋರೆ ದೀವಿಗೆಯನ್ನು ನಂದಿಸುವಂತೆ! ಶ್ರಾವಣರಜನಿಯ ಕೋಲುಮಿಂಚಿನಂತೆ, ಪ್ರಾಣರೇಖೆಯು ಸುಖನಿದ್ರೆಯಿಂದ ಹೊರಟು ಮಹಾ ನಿದ್ರೆಯಲ್ಲಿ ಬೆರೆತು ಹೋಗುವದು; ಆದರೆ ಸಿಡಿಲಿನ ಹೊಡೆತವು ಮಾತ್ರ ರಾಜದಂಭವನ್ನು ಚಿರದಿನದ ಮಟ್ಟಿಗೆ ಮುಕ್ಕುಮಾಡುವದು! ಬಾ—ಯುವರಾಜನೇ ಮೋರೆ ಬಾಡಿಸಿಕೊಂಡೇಕೆ ಮೂಲೆಯಲ್ಲಿ ನಿಂತಿರುವೆ? ಮಾತಿಲ್ಲ, ನಗೆಯಿಲ್ಲ; ಮೋರೆ ಹೀಗೇಕೆ ಹಿಪ್ಪೆಯಾಗಿದೆ! ಬಾ ಕಾರಣಸಲಿಲವನ್ನು ಪಾನಮಾಡುವಾ!

ನಕ್ಷ:—ಬಹಳ ತಡವಾಯಿತು! ಇಂದು ಸಾಕು; ನಾಳೆ ಪೂಜೆಯಾಗಲಿ!

ರಘು:—ಹೌದು ತಡವಾಯಿತು, ರಾತ್ರಿ ಮುಗಿಯಲಿಕ್ಕೆ ಬಂತು!

ನಕ್ಷ:—ಅದೋ ಕಾಲಸಪ್ಪಳು ಕೇಳಿಸುತ್ತಿದೆ!

ರಘು:—ಎಲ್ಲಿ? ಕೇಳಿಸಲೊಲ್ಲದು!

ನಕ್ಷ:— ಅದೋ ನೋಡಿರಿ—ಅಲ್ಲಿ ಬೆಳಕು !

ರಘು:—ರಾಜನಿಗೆ ಸುದ್ದಿಹತ್ತಿದೆ. ಇನ್ನು ಒಂದು ಪಳವೂ ತಡ ಬೇಡ. ಜಯ ಮಹಾಕಾಳಿ !!! ( ಕತ್ತಿಯನ್ನೆತ್ತುವನು )

ರಾಜನೂ ಕಾವಲುಗಾರರೂ ಅವಸರದಿಂದ ಬರುವರು.

( ಅರಸನ ಇಂಗಿತದಂತೆ ಕಾವಲುಗಾರರು ರಘುಪತಿಯನ್ನೂ, ನಕ್ಷತ್ರನನ್ನೂ ಹಿಡಿಯುವರು. )

ಗೋವಿಂದ:—ಸೆರೆಮನೆಗೆ ತೆಗೆದುಕೊಂಡು ಹೋಗಿರಿ. ವಿಚಾರಣೆಯಾಗುವದು !

ತೃತೀಯಾಂಕ ಸಮಾಪ್ತ

# ಚತುರ್ಥಾಂಕ

## ಪ್ರಥಮದೃಶ್ಯ.

### ಓಲಗ.

ಗೋವಿಂದ:—( ರಘುಪತಿಗೆ ) ಮತ್ತೇನಾದರೂ ಹೇಳುವದಿದೆಯೆ ?

ರಘು:—ಏನೂ ಇಲ್ಲ.

ಗೋ:—ತಪ್ಪನ್ನು ಒಪ್ಪಿಕೊಂಡಿಯಾ ?

ರಘು:—ತಪ್ಪೊ ? ಹೌದು ತಪ್ಪು ಮಾಡಿದ್ದೇನೋ ಹೌದು ! ಕೊನೆಗೆ ದೇವಿಯನ್ನು ಪೂಜಿಸಲಿಲ್ಲ. ಮೋಹಮೂಢನಾಗಿ ಕಾರಣವಿಲ್ಲದೆ ತಡಮಾಡಿದೆ ! ಅದಕ್ಕೆ ದೇವಿಯು ಶಾಸನಮಾಡಿದಳು; ನೀನು ನಿಮಿತ್ತ ಮಾತ್ರನು !

ಗೋ:—ಸರ್ವರೂ ಕೇಳಿರಿ! ನನ್ನ ನಿಯಮವೇನಂದರೆ—ಪವಿತ್ರವಾದ ಪೂಜೆಯ ನೆವದಿಂದ ಯಾವ ಮೋಹಾಂಧರು ಜೀವಬಲಿಯನ್ನು ಕೊಡುವರೋ, ಅಥವಾ ರಾಜಾಜ್ಞೆಯನ್ನು ಮೀರಿ ಅದಕ್ಕೆ ಯತ್ನಿಸುವರೋ ಅಂಥವರಿಗೆ ನಾಡ ಬಿಟ್ಟೋಡಿಸುವದೇ ನನ್ನ ದಂಡನೆ ! ರಘುಪತಿಯೇ ಎಂಟು ವರುಷ ನಿನಗೆ ಈ ದಂಡನೆ. ನಿನ್ನನ್ನು ಸೈನಿಕರು ಸೇವಕರೂ ರಾಜ್ಯದ ಹೊರಗಿಟ್ಟು ಬರುವರು !

ರಘು:—ಈ ನನ್ನ ಜಾನುವು ದೇವಿಯನ್ನು ಬಿಟ್ಟು ಈ ಜಗದಲ್ಲಿ ಯಾರ ಮುಂದೆಯೂ ಬಾಗಿಲ್ಲ ! ನಾನು ಬ್ರಾಹ್ಮಣ, ನೀನು ಶೂದ್ರ. ಆದರೂ ನಿನ್ನ ಬಳಿಯಲ್ಲಿ ನತಜಾನುವಾಗಿ ಬೇಡಿಕೊಳ್ಳುವೆ—ಎರಡು ದಿನ ನನಗೆ ಅವಕಾಶಕೊಡು, ಶ್ರಾವಣದ ಕೊನೆಯ ಎರಡೇದಿನ! ಆ ಮೇಲೆ ಶರತ್ಕಾಲದ ಪ್ರಥಮ ಪ್ರತ್ಯುಷೆಯಲ್ಲಿಯೇ—ನಿನ್ನ ಈ ಅಭಿಶಪ್ತದಗ್ಧರಾಜ್ಯವನ್ನು ಬಿಟ್ಟು ಹೋದರೆ, ತಿರುಗಿ ಹಣಿಕೆ ಹಾಕುವದಿಲ್ಲ !

ಗೋ:—ತಥಾಸ್ತು. ಎರಡುದಿನ ಅವಕಾಶ ಕೊಟ್ಟೆನು !

ರಘು:—ಮಹಾರಾಜ ರಾಜಾಧಿರಾಜ, ಮಹಿಮಾಸಾಗರ, ಕೃಪಾವತಾರ ನೀನು! ಧೂಳಿಯ ಅಧನು ನಾನು, ದೀನನು, ಅಭಾಜನನು ! ( ಹೋಗುವನು. )

ಗೋ:—ನಕ್ಷತ್ರಾ, ನಿನ್ನ ಅಪರಾಧವನ್ನು ಒಪ್ಪಿಕೋ !

ನಕ್ಷತ್ರ:—ಮಹಾರಾಜ ! ನಾನು ದೋಷಿ ! ಕ್ಷಮಾಯಾಚನೆ ಮಾಡಬೇಕೆಂದು ಬಿನ್ನೈಸಲಿಕ್ಕೆನಗೆ ಬಾಯಿಯಿಲ್ಲ ! ( ಕಾಲಮೇಲೆ ಬೀಳುವನು. )

ಗೋ:—ಹೇಳು! ಯಾರ ತಂತ್ರಕ್ಕೆ ಬಲಿಬಿದ್ದು ಇಂಥ ಕಾರ್ಯಕ್ಕೆ ಕೈಹಾಕಿದಿ! ಸ್ವಭಾವಕೋಮಲನು ನೀನು ! ಇಂಥ ನಿದಾರುಣಬುದ್ಧಿ ನಿನ್ನದಲ್ಲ !

ನಕ್ಷ:—ಇನ್ನಾರಿಗೆ ದೋಷ ಕೊಡಲಿ ? ! ಈ ಪಾಪಮುಖದಿಂದ ಇನ್ನಾರ ಹೆಸರನ್ನೂ ನುಡಿಯಲಾರೆ! ನಾನೇ ತುಂಬಾ ಅಪರಾಧಿ ! ನನ್ನ ಪಾಪಾಲೋಚನೆಯಲ್ಲಿಯೇ ನಾನು ಬಲಿಬಿದ್ದೆನು! ತಿಳಿಗೇಡಿ ತಮ್ಮನ ಶತದೋಷಗಳನ್ನು ಕ್ಷಮಿಸಿರುವಿ-ಅಣ್ಣಯ್ಯಾ! ಇದೊಂದು ಸಾರೆ ಕ್ಷಮಿಸು !!!

ಗೋ:—ನಕ್ಷತ್ರಾ ! ಕಾಲುಬಿಡು—ಏಳು ! ನೋಡು—ಕ್ಷಮೆಮಾಡಲಿಕ್ಕೆ ನನ್ನ ಕೈಯ್ಯಲ್ಲೇನಿದೆ ? ನ್ಯಾಯಾಧಿಪತಿಯು ತನ್ನ ಕಟ್ಟಳೆಯಿಂದಲೇ ತಾನು ಕಟ್ಟಲ್ಪಟ್ಟಿರುತ್ತಾನೆ; ಸೆರೆಯಾಳಿಗಿಂತ ಸೆರೆಯಾಳು! ಒಂದೇ ಅಪರಾಧಕ್ಕೆ ಗುರಿಯಾದವರಲ್ಲಿ ಒಬ್ಬನು ದಂಡನೆ ಹೊಂದಬೇಕು, ಇನ್ನೊಬ್ಬನು ಬಿಡುಗಡೆ ಹೊಂದಬೇಕು! ಇಂಥ ಶಕ್ತಿ ಪ್ರತ್ಯಕ್ಷ ವಿಧಾತನಿಗೂ ಕೂಡ ಇಲ್ಲದಿರುವಾಗ ನಾನೆಷ್ಟರವನು ! ?

ಎಲ್ಲರು:—ಪ್ರಭೋ ಕ್ಷಮಿಸಿರಿ ಕ್ಷಮಿಸಿರಿ ! ನಕ್ಷತ್ರನು ನಿಮ್ಮ ತಮ್ಮನು !

ಗೋ:—ಎಲ್ಲರೂ ಸಾವಧಾನದಿಂದ ಕೇಳಿರಿ—ಈ ಗದ್ದುಗೆಯ ಮೇಲಿರುವ ತನಕ ನನಗೆ ಬಂಧುವಿಲ್ಲ, ಬಳಗವಿಲ್ಲ. ತಪ್ಪು ಒಪ್ಪಿಹೋಗಿದೆ! ತ್ರಿಪುರರಾಜ್ಯದ ಶೀಮೆಯನ್ನು ದಾಟಿ ಬ್ರಹ್ಮಪುತ್ರತೀರದಲ್ಲಿ ತೀರ್ಥಸ್ನಾನಕ್ಕಾಗಿ ಇರುವ ರಾಜಗೃಹದಲ್ಲಿ ನಕ್ಷತ್ರನು ಎಂಟುವರುಷ ಕಾಲಕಳೆಯಬೇಕು ! ( ಕಾವಲುಗಾರರು ನಕ್ಷತ್ರನನ್ನೆಳೆಕೊಂಡು ಹೊರಡುವರು. ರಾಜನು ಸಿಂಹಾಸನದಿಂದಿಳಿಯುವನು. )

ಗೋ:—ತಮ್ಮಯ್ಯಾ! ಈಗ ನಿನ್ನ ಕೊನೆಯ ಆಲಿಂಗನವನ್ನು ಕೊಟ್ಟು ಹೋಗು! ತಮ್ಮಯ್ಯಾ, ಈ ದಂಡನೆಯು ನಿನಗೊಬ್ಬನಿಗೇ ಇಲ್ಲ, ನನಗೂ ಇದೆ ! ಇಂದಿನಿಂದ ಅರಮನೆಯೆನ್ನ ಮೈಗೆ ಮುಳ್ಳುಮುಸಿಯಾಗಿ ಚುಚ್ಚುವದು! ನನ್ನ ಹರಕೆ ನಿನ್ನ ಮುದಿಯಮೇಲಿರಲಿ ! ಕಂದಾ ! ದೂರದಲ್ಲಿರುವಷ್ಟು ದಿನವೂ ನಿನ್ನನ್ನು ದೇವತೆಗಳು ಕಾಪಾಡಲಿ ! ( ನಕ್ಷತ್ರನು ಹೋಗುವನು. )

ಗೋ:—(ಸಭಾಸದರಿಗೆ) ಓಲಗವು ಮುಗಿಯಿತು. ಎಲ್ಲರೂ ಹೋಗಿರಿ. ಒಂದು ಗಳಿಗೆ ಒಬ್ಬನೇ ಬಿದ್ದುಕೊಂಡಿರುವೆ! (ಎಲ್ಲರೂ ಹೋಗುವರು.)

ನಯನರಾಯನು ಅವಸರದಿಂದ ಬರುವನು.

ನಯನ:—ಮಹಾರಾಜ! ತುಂಬಾ ವಿಪತ್ತು!

ಗೋ:—ರಾಜನೇನು ಮನುಷ್ಯನಲ್ಲವೆ? ಹಾಯ್, ವಿಧಿಯೇ! ರಾಜನ ಹೃದಯವನ್ನು ಅತಿ ದೀನದರಿದ್ರನಿಗೆ ಸಮಾನವಾಗಿ ನಿರ್ಮಿಸಿಲ್ಲವೆ? ಎಲ್ಲರಂತೆ ದುಃಖಕೊಡುವಿ. ಆದರೆ ಕಣ್ಣೀರು ಸುರಿಸುವುದಕ್ಕೆ ಅವಕಾಶ ಕೊಡಬಾರದೆ?—ಇರಲಿ! ಯಾವ ವಿಪತ್ತು? ಬೇಗನೆ ಹೇಳು!

ನಯನ:—ತ್ರಿಪುರವನ್ನು ನಾಶಪಡಿಸುವದಕ್ಕೆ ಮೊಗಲರ ಸೈನ್ಯದೊಡನೆ ಚಾಂದಪಾಲನು ಬರುತ್ತಿದ್ದಾನೆ.

ಗೋ:—ನಯನರಾಯನೇ, ಇದು ನಿನಗೆ ಉಚಿತವಲ್ಲ! ಚಾಂದಪಾಲನು ನಿನಗೆ ಶತ್ರುವೇನೋ ಹೌದು. ಅಷ್ಟುಮಾತ್ರಕ್ಕೆ ಅವನ ಮೇಲೆ ಇಂಥ ಅಪವಾದವೆ?

ನಯನ:—ಮಹಾರಾಜ! ಈ ದೀನ ಅಧೀನನಿಗೆ ಅನೇಕ ದಂಡನೆಗಳನ್ನು ವಿಧಿಸಿರುವಿ; ಆದರೆ ಇಂದಿನ ಅವಿಶ್ವಾಸವು ಅವೆಲ್ಲಕ್ಕಿಂತ ತುಂಬಾ ಹೆಚ್ಚಿನದು! ಶ್ರೀಚರಣಚ್ಯುತನಾಗಿ ಹೋದ ಮಾತ್ರಕ್ಕೆ ಇಷ್ಟೊಂದು ಅಧಃಪಾತಕ್ಕಿಳಿದೆನೇ?!

ಗೋ:—ಇನ್ನೊಮ್ಮೆ ಚೆನ್ನಾಗಿ ಎಲ್ಲಾ ಹೇಳು; ವಿಚಾರಿಸಿ ನೋಡುವೆ.

ನಯನ:—ಚಾಂದಪಾಲನು ಮೊಗಲರಲ್ಲಿ ಸೇರಿ ನಿಮ್ಮನ್ನು ತಳ್ಳಿಬಿಡುವುದಕ್ಕೆ ಬಯಸುತ್ತಾನೆ.

ಗೋ:—ನಿನಗೆ ಈ ಮಾತು ಎಲ್ಲಿ ಗೊತ್ತಾಯಿತು.

ನಯನ:—ಪ್ರಭುಗಳು ನನ್ನನ್ನು ನಿರಸ್ತ್ರಗೊಳಿಸಲು, ನಾಚಿಕೆಯಿಂದ ನಾನು ದೇಶಭ್ರಷ್ಟನಾದ ದಿನವೇ, ಮೊಗಲರು ಅಸಾಮದೊಡನೆ ಕದನಹೂಡಿರುವುದನ್ನು ಕೇಳಿ, ಅಲ್ಲಿಯ ರಾಜಸನ್ನಿಧಿಯಲ್ಲಿ ಸೇವೆಗೆ ನಿಲ್ಲಬೇಕೆಂದು ಹೊರಟೆನು. ಆದರೆ ಮೊಗಲಸೇನೆಯು ಚಾಂದಪಾಲನೊಡನೆ ಸೇರಿ ತ್ರಿಪುರದ ಕಡೆಗೇ ಸಾಗಿ ಬರುತ್ತಿರುವುದು ಹಾದಿಯಲ್ಲಿಯೇ ಗೊತ್ತಾಯಿತು. ಸಂಧಾನದಿಂದ ಉದ್ದೇಶ್ಯವು ಗೊತ್ತಾಗಲು ಇತ್ತ ಪ್ರಭುಗಳ ಸನ್ನಿಧಿಗೆ ಓಡಿಬಂದೆನು!

ಗೋ:—ಹೇ ವಿಧಾತಾ! ಒಮ್ಮೆಗೇ ಸಂಸಾರವು ಹೀಗೆಂತಾಯಿತು? ಈ ನಾಲ್ಕಾರು ದಿನಗಳಲ್ಲಿಯೇ ಭೂಮಿಗೆ ಎಲ್ಲಿಯೋ ತೂತುಬಿದ್ದು, ಸಮಸ್ತ ನಾಗವಂಶವು ರಸಾತಲದಿಂದ ಪೃಥಿವಿಗೆ ಬಂದು ಹೆಜ್ಜೆಹೆಜ್ಜೆಗೆ ಹೆಡೆಯನ್ನೆತ್ತುವಂತಾಗಿದೆಯೆ?! ಪ್ರಳಯಕಾಲವೇ ಬಂದಿತೆ? ಈಗ ವಿಸ್ಮಯಕ್ಕೆ ಸಮಯವಿಲ್ಲ! ಸೇನಾಪತಿಯೇ, ಸೈನ್ಯಭಾರವನ್ನು ಕೈಕೊಳ್ಳುವವನಾಗು!

# ದ್ವಿತೀಯ ದೃಶ್ಯ.

## ಮಂದಿರ ಪ್ರಾಂಗಣ.

### ಜಯಸಿಂಹನೂ ರಘುಪತಿಯೂ.

ರಘು:—ಹೋಯಿತು! ಗರ್ವವೂ ಹೋಯಿತ್ತು, ತೇಜವೂ ಹೋಯಿತ್ತು,
ಬ್ರಾಹ್ಮಣತ್ವವೂ ಹೋಯಿತು! ಎಲೋ ಮಗು, ಇನ್ನು ನಾನು ನಿನ್ನ ಗುರುವಲ್ಲ!
ನಿನ್ನೆ ನಾನು ಸಂಶಯವಿಲ್ಲದೆ ಗುರುವಿನ ಗೌರವದಿಂದ ಅಪ್ಪಣೆ ಮಾಡುತ್ತಿದ್ದೆನು;
ಆದರೆ ಇಂದು ವಿನಯದಿಂದ ಭಿಕ್ಷೆ ಬೇಡುವುದಕ್ಕೆ ಅಧಿಕಾರ ಬಂದಿದೆ! ಐಶ್ವರ್ಯದ
ಜ್ಯೋತಿಯನ್ನು, ರಾಜಪ್ರತಾಪವನ್ನು ಧಿಕ್ಕರಿಸುತ್ತಿದ್ದ ಒಳಗಿನ ದೀಪವು ನಂದಿಹೋ
ಯಿತು! ನಕ್ಷತ್ರವು ಕಳಚಿಬಿದ್ದರೆ ಹಣತಿಯ ದೀಪಕ್ಕಿಂತ ಕಡೆ ! ಅದನ್ನು ಧೂಳಿ
ಯಲ್ಲಿ ಎಷ್ಟು ಹುಡುಕಿದರೂ ಫಲವಿಲ್ಲ. ದೀವಿಗೆಯು ಪ್ರತಿದಿನ ನಂದುವದು, ಪ್ರತಿ
ದಿನ ಬೆಳಗುವದು, ತಾರೆಯು ಒಮ್ಮೆ ನಂದಿದರೆ ತೀರಿತು! ಚಿರ ಅಂಧಃಕಾರವೇ! ನಾನು
ಅಂಥ ಚಿರದೀಪ್ತಿಹೀನನು! ಸಾಮಾನ್ಯವಾದ ಈ ಪರಮಾಯುವು ದೇವರ ಕ್ಷಿಪ್ರ
ದಾನವು. ರಾಜದ್ವಾರದಲ್ಲಿ ಶಿರಬಾಗಿ ಬೇಡಿಕೊಂಡು ಎರಡು ದಿನಗಳನ್ನು ಗಳಿಸಿರುವೆ!
ಜಯಸಿಂಹಾ, ಈ ಎರಡು ದಿನಗಳು ವ್ಯರ್ಥವಾಗಬಾರದು ! ಈ ಭಿಕ್ಷೆಯ ಎರಡು
ದಿನಗಳು ತಮ್ಮ ಕಲಂಕವನ್ನು ತೊಳೆದುಕೊಂಡು ಸಾಯಬೇಕು! ತಮ್ಮ ಕಾಲಾಮುಖ
ವನ್ನು ರಾಜರಕ್ತದಿಂದ ಸಿಂಗರಿಸಿಕೊಂಡು ಹೋಗಲಿ! ಮಗು, ಏನೂ ಉತ್ತರವಿಲ್ಲ!
ಗುರುವಿನ ಅಪ್ಪಣೆಯಲ್ಲಿವಿದು. ಚಿಕ್ಕಮಗುವಿರುವಾಗಿನಿಂದ ಸಲುಹಿದ್ದಕ್ಕೆ ಏನೂ ಸಲು
ಗೆಯಿಲ್ಲವೆ? ಪಿತೃಹೀನನ ಪಿತನು ಪಿತನಿಗಿಂತ ಹೆಚ್ಚಿನವನಲ್ಲವೇನೊ? ಅಯ್ಯೋ ದುಃಖ
ವೇ—ಇಷ್ಟೆಲ್ಲ ನೆನಪಿಗೆ ತಂದು ಕೊಡಬೇಕಾಯಿತೇ! ಕೃಪಾಭಿಕ್ಷೆಯನ್ನು ಸಹಿಸ
ಹುದು ಆದರೆ ಅಕ್ಕರತೆಯನ್ನು ಭಿಕ್ಕೆಬೇಡುವ ಅಭಾಗ್ಯನು ಭಿಕ್ಷುಕರಲ್ಲಿ ಅಧಮಭಿಕ್ಷು
ಕನು! ಮಗು, ಇನ್ನೂ ಉತ್ತರವಿಲ್ಲ! ನನ್ನ ಜಾನುವು ಇನ್ನೂ ಒಮ್ಮೆ ಬಾಗಲಿ! ತೊಡೆ
ಯಮೇಲೆ ಬಂದಾಗ ಜಾನುವಿಗಿಂತ ಕಿರಿದಾಗಿದ್ದೆ. ಈಗ ದೊಡ್ಡವನಾದಿ. ಈಗ
ಬಾಗುವೆ! ಪುತ್ರಾ, ಭಿಕ್ಷೆ ಹಾಕು ಭಿಕ್ಷೆ !!!

ಜಯ:—ತಂದೆ! ಈ ವಿದೀರ್ಣ ವಕ್ಷವನ್ನು ಮತ್ತೆ ವಜ್ರದಿಂದಿರಿಯಬೇಡಾ!
ದೇವಿಯು ರಾಜರಕ್ತವನ್ನು ಬೇಡುತ್ತಾಳೆ; ಅವಳಿಗೆ ಅದನ್ನು ತಂದೊಪ್ಪಿಸುವೆ ! ಏನು
ಬೇಡುವಳೋ ಅದನ್ನೆಲ್ಲಾ ಸಲ್ಲಿಸುವೆ ! ಎಲ್ಲ ರಿಣವನ್ನು ತೀರಿಸಿ ಹೋಗುವೆ ! ಹಾಗೆ
ಆಗಲಿ ! ಹಾಗೇ ಆಗಲಿ !! (ಹೋಗುವನು. )

ರಘು:—ಆಗಲಾಗಲಿ! ದೇವಿ ಬೇಡಿದ್ದಕ್ಕೆ ಕೊಡುತ್ತೀ ! ನಾನು ನಿನಗೇನೂ
ಅಲ್ಲ! ಛೀ! ಉಪಕಾರಗೇಡಿ! ದೇವಿ ನಿನ್ನದೇನೇನು ಮಾಡಿದಳು??? ಶಿಶುಕಾಲದಿಂದ

ದಿನವೂ ನಿನ್ನ ಸಲುಹಿದಳೇ? ಬೇನೆಯಾದಾಗ ಸೇವೆಮಾಡಿವಳೇ? ಹಸಿದಾಗ ಹೊಟ್ಟೆಗೆ ಹಾಕಿದಳೇ? ಕೇಳಿದ್ದಕ್ಕೆಲ್ಲ ಹೇಳಿ ಸಮಾಧಾನಪಡಿಸಿದಳೇ? ಕೊನೆಗೆ ಈ ಉಪಕಾರ ಗೇಡಿತನದ ನೋವನ್ನು ನುಂಗಿಕೊಂಡಳೇ? ಹಾಯ್ ಕಲಿಕಾಲವೇ! ಇರಲಿರಲಿ!!!

---

## ತೃತೀಯ ದೃಶ್ಯ.

### ಪ್ರಾಸಾದ ಕಕ್ಷ.

ರಾಜ.

ನಯನ ರಾಯನು ಬರುವನು.

ನಯನ:— ವಿದ್ರೋಹಿ ಸೈನಿಕರನ್ನು ತಿರುಗಿಸಿರುವೆ, ಯುದ್ಧದ ಸಿದ್ಧತೆಯೆಲ್ಲ ಸಿದ್ಧವಾಗಿದೆ. ಮಹಾರಾಜ! ಆಜ್ಞೆಯಾಗಲಿ—ಏರಿ ಹೋಗುವೆ— ಆಶೀರ್ವದಿಸಿರಿ.

ಗೋವಿಂದ:— ಸೇನಾಪತಿಯೇ ಸ್ವಯಂ ನಾನು ರಣಕ್ಷೇತ್ರವನ್ನು ಮೆಟ್ಟು ವೆನು— ನಡೆ!

ನಯನ:— ಈ ದಾಸನ ದೇಹದಲ್ಲಿ ಜೀವವಿರುವವರೆಗೆ ಮಹಾರಾಜರು ನಿಶ್ಚಿಂತೆ ಯಿಂದಿರಲಿ !! ವಿಪತ್ತಿನ ಬಾಯಿಗೆ ಸಿಕ್ಕು—

ಗೋ:— ಸೇನಾಪತೀ! ಎಲ್ಲರಿಗೆ ಬಂದಿರುವ ವಿಪತ್ತಿನಲ್ಲಿ ನನ್ನ ಪಾಲಿನ ವಿಪ ತ್ತನ್ನು ನಾನು ಎದುರಿಸುವೆ! ನನ್ನದು ರಾಜನ ಪಾಲು; ಎಲ್ಲರಿಗಿಂತ ದೊಡ್ಡ ಪಾಲು! ಸೈನಿಕರೇ, ಬನ್ನಿರಿ, ನನ್ನನ್ನು ನಿಮ್ಮೊಳಗೆ ಸೇರಿಸಿಕೊಳ್ಳಿರಿ! ನಿಮ್ಮ ನೃಪತಿಯನ್ನು ಸಿಂಹಾಸನದ ತುದಿಯಲ್ಲೆಲ್ಲಿಯೋ ಬಿಟ್ಟು ಸಮರಗೌರವಕ್ಕೆ ಎರವಾಗುವಂತೆ ಮಾಡ ಬೇಡಿರಿ!

ದೂತನು ಪ್ರವೇಶಿಸುವನು.

ದೂತ:— ಮಹಾರಾಜ! ದೇಶತ್ಯಾಗ ದಂಡನೆಯಿಂದ ಕುಮಾರನ ನಕ್ಷತ್ರರಾ ಯನನ್ನು ಬಿಡಿಸಿಕೊಂಡು, ಮೊಗಲರು ಅವನನ್ನೆ ರಾಜನನ್ನಾಗಿ ಮಾಡಿಕೊಂಡು ರಾಜ ಧಾನಿಯ ಕಡೆಗೆ ಸಸೈನ್ಯವಾಗಿ ಬಂದರು—

ಗೋ:— ಮುಗಿದು ಹೋಯಿತು! ಭಯವಿಲ್ಲ! ಯುದ್ಧವು ತಪ್ಪಿತು!

ಪ್ರಹರಿಯು ಬರುವನು.

ಪ್ರಹರಿ:—ಮಹಾರಾಜ! ವಿಪಕ್ಷದವರ ಶಿಬಿರದಿಂದ ಪತ್ರ ಬಂದಿದೆ. (ಕೊಡುವನು)

ಗೋವಿಂದ:—ನಕ್ಷತ್ರನ ಕೈ ಬರಹ! ಕ್ಷೇಮಸಮಾಚಾರ ವಿದ್ದೀತು!— ಇದೇನು ಮಮತೆಯ ಮಾತೇ ಇದು?! ನಕ್ಷತ್ರನ ಭಾಷೆಯಲ್ಲ! ನಾನು ದೇಶಭ್ರಷ್ಟನಾಗ

ಬೇಕೆನ್ನುತ್ತಾನೆ; ಇಲ್ಲದಿದ್ದರೆ ಬಂಗಾರದ ತ್ರಿಪುರವನ್ನು ಸೆತ್ತರಲ್ಲಿ ತೇಲಿಸುವನಂತೆ; ನಾಡನ್ನು ಹುರಿಯುವನಂತೆ; ತ್ರಿಪುರ ರಮಣಿಯರನ್ನು ಮೊಗಲರ ಅಂತಃಪುರಕ್ಕೆ ಅಟ್ಟುವನಂತೆ! ಹೌಧೌದು ಇದು ಅವನ ಬರಹವೇ ಹೌದು! "ಮಹಾರಾಜ ನಕ್ಷತ್ರ ಮಾಣಿಕ್ಯ!" ಎಂದಿದ್ದಾನೆ! ಅಬ್ಬಾ! "ಮಹಾರಾಜ"ನೇ !!! ನೋಡು ನೋಡು ಸೇನಾಪತೀ! ಇದು ನೋಡು— ರಾಜವಾಣಿಯಿಂದ ರಾಜನಿಗೆ ದೇಶತ್ಯಾಗ ದಂಡನೆಯನ್ನು ವಿಧಿಸಿದ್ದಾನೆ! ವಿಧಿಯ ಆಟವು ತೀರ ಹೀಗೆಯೆ? !

ನಯನ:— ರಾಜ್ಯತ್ಯಾಗವೆ! ಇದೆಂಥ ಮಾತು! ಇನ್ನೂ ಯುದ್ಧವೆಲ್ಲಿ ಮುಗಿದಿದೆ, ಮಹಾರಾಜ? !

ಗೋ:— ಇದಂತೂ ಮೊಗಲರ ಸೇನೆಯಲ್ಲ! ತ್ರಿಪುರ ರಾಜಪುತ್ರನು ರಾಜನಾಗ ತಿಳಿಸುವನು, ಅವನೊಡನೆ ಯುದ್ಧವೇತಕ್ಕೆ?

ನಯನ:— ರಾಜ್ಯದ ಮಂಗಳವು—

ಗೋ:— ರಾಜ್ಯಕ್ಕೆ ಮಂಗಳವಾಗುವದೇ? ಉಭಯ ಬಂಧುಗಳು ಇದಿರು ಬಿದಿರು ನಿಂತು, ಸೋದರ ವಕ್ಷವನ್ನು ಗುರಿಯಿಟ್ಟು ಮೃತ್ಯುಮುಖೀ ಶಸ್ತ್ರವನ್ನೆತ್ತುತ್ತಿರುವಾಗ ರಾಜ್ಯದ ಮಂಗಳವೇ? ರಾಜ್ಯದಲ್ಲಿ ಬರೇ ಸಿಂಹಾಸನವೊಂದು ಮಾತ್ರವಿದೆ— ಗೃಹಸ್ಥರ ಗೃಹಗಳಿಲ್ಲ, ಬಂಧುಬಳಗವಿಲ್ಲ, ಸೋದರ ಸಂಬಂಧವಿಲ್ಲ! ಅಲ್ಲವೆ??? ನೋಡೋಣ ಇನ್ನೊಮ್ಮೆ ನೋಡೋಣ— ಇದು ಅವನ ಅಕ್ಷರವೇ? ಸ್ವಯಂ ನಕ್ಷತ್ರನ ಹಂಚಿಕೆಯಲ್ಲ! ನಾನು ಅನಾರ್ಯ! ನಾನು ದೇವದ್ವೇಷಿ! ನಾನು ಅವಿಚಾರಿ! ನಾನು ರಾಜ್ಯದ ಅಕಲ್ಯಾಣಕಾರಿ! ಅಲ್ಲಲ್ಲ—ಇಂಥಾದ್ದಿದು ಅವನ ನುಡಿಯಲ್ಲ! ಮಾತು ಯಾರದೇ ಆಗಲಿ, ಬರಹವು ಅವನದೇ ಸರಿ! ಸ್ವಹಸ್ತದಿಂದ ಬರೆದಿದ್ದಾನೆ! ಯಾವ ಹಾವಿನ ವಿಷವಾದರೂ ಸರಿ-- ಅವನ ಸ್ವಾಕ್ಷರಗಳು ಅದನ್ನು ಮೋರೆಗೆ ಲೇಪಿಸಿಕೊಂಡು ನನ್ನೆದೆಗೆ ಬಡಿಯುತ್ತಲಿವೆ! ವಿಧಿಯೇ, ಇದು ನಿನ್ನ ಶಾಸನ-- ಅವನದಲ್ಲ! ದೇಶತ್ಯಾಗವೇ! ? ಹಾಗೇ ಆಗಲಿ— ಅವನಿಗಾದ ದಂಡನೆಯನ್ನು ಅವನದಾಗಿ ನಾನು ಭೋಗಿಸುವೆ!

## ಚತುರ್ಥಾಂಶ ಸಮಾಪ್ತ.

---

# ೧೨ನೆಯ ಅಧ್ಯಾಯ

---

## ಭಕ್ತಿಯೋಗ.

ಭಕ್ತಿಹುಟ್ಟಲಿಯೆಂದು ಬರೆವೆನೀ ಪದ್ಯ ।
ಯುಕ್ತಿ ಬೇರೇ ಕಾಣೆ ನಿನಗಿರಲಿ ವೇದ್ಯ ॥ ೧ ॥

**ಅರ್ಜುನ:**—ನಿನ್ನನ್ನೆ ಭಜಿಸುವವ ನಿನಗೆ ಮೆಚ್ಚೊ? ।
ನಿನ್ನ ಕಾಣದ ರೂಪ ಭಜಿಪ ಹೆಚ್ಚೊ? ॥ ೨ ॥

**ಶ್ರೀಭಗವಾನ:**—ನನ್ನಲ್ಲಿ ತನ್ನ ಮನವೆಸೆ ನಚ್ಚು ।
ನನ್ನ ಜೀವಕೆ ಮೆಚ್ಚು—ಅದುವೆ ಹೆಚ್ಚು ॥ ೩ ॥
ಯಾರು ಕಾಣದುದನ್ನು ತಿಳಿಯಲಾರದುದ ।
ಮೀರಿ ಮಿಕ್ಕಿದುದನ್ನು ಅಳಿಯದುಳಿದಿಹುದ ॥
ಭಜಿಸುವರು ಎಲ್ಲರಲಿ ಸಮಬುದ್ಧಿಯವರು ।
ನಿಜವಾಗಿ ನನ್ನನವರು ಪಡೆಯುವರು ॥ ೪–೫ ॥
ಮೈಗರೆದ ನಾನೆ ಯಾರಿಗೆ ನಚ್ಚು ಮೆಚ್ಚು ।
ಮೈಗೊಂಡ ಆ ಜನಕೆ ಕಷ್ಟ ಹೆಚ್ಚು ॥ ೬ ॥
ಯಾರು ಎಲ್ಲದುದನ್ನು ನನಗೊಪ್ಪಿಸುವರೋ ।
ಯಾರು ನನ್ನಲಿ ಕವಾಡಿ ನನಗಪ್ಪಿ ಇಹರೊ ॥
ಹುಟ್ಟು ಸಾವುಗಳಿಂದಲವರ ನಾನೇ ।
ಪುಟ್ಟ ಬೇಗದಿ ದಾಟಸುವೆನು ತಾನೇ ॥ ೭–೮ ॥
ಮನಸಿರಲು ನನ್ನಲ್ಲಿ ನನ್ನಲ್ಲಿ ಬುದ್ಧಿ ।
ಮನೆಯು ನಾನೇ ನಿನಗೆ; ನೀನು ಗೆದ್ದಿ ॥ ೯ ॥
ಚಿತ್ತ ನನ್ನಲಿ ನಿಲದೆ ಓಡಿ ಓಡಿ ॥
ಅತ್ತಿತ್ತಲಾಗೆ ನಿಲ್ಲಿಸು ರೂಢಿಮಾಡಿ ॥ ೧೦ ॥
ರೂಢಿ ಕೈಗೂಡದಿರೆ—ಮಾಡಿಮುಟ್ಟದುದು ।
ಕೂಡಲೈ ನಿನಗೆನ್ನು—ಸಿದ್ಧಿ ಪುಟ್ಟುವದು ॥ ೧೧ ॥
ಇದು ಕೂಡ ಕೈಲಾಗದಾಗಲಿನ್ನು ।
ಇದಕೊ ಬಂದಿಹ ಫಲವ ಬಿಟ್ಟೆನೆನ್ನು ॥ ೧೨ ॥
ಜ್ಞಾನ ರೂಢಿಗು ಮೇಲು, ಧ್ಯಾನಕ್ಕೆ ಕೀಳೆ !
ಧ್ಯಾನ ತ್ಯಾಗಕೆ ಕೀಳು—ಶಾಂತಿ ಆ ಮೇಲೆ ॥ ೧೩ ॥
ಅಲ್ಲಿಹಗೆ ಕರುಣಿತಾ ನೆಲ್ಲರಿಗು ಗೆಳೆಯ ।

ಇಲ್ಲಿ ಹಮ್ಮು ಭೇದ ಸುಖಸುಃಖ ತಿಳಿಯ ॥ ೧೪ ॥
ಇದ್ದದ್ದರಲಿ ಹಿಗ್ಗು ಹಿಡಿದಿದ್ದ ಬಿಡನು ।
ಬುದ್ಧಿ ಮನ ನನಗೊಪ್ಪಿಸಿದ್ದವನ ಬಿಡೆನು ॥ ೧೫ ॥
ಬೇಕು ಇವನೆಲ್ಲರಿಗೆ ಇವನಿಗೂ ಎಲ್ಲ ।
ಶೋಕಭಗಿಯು ವಿಲ್ಲದಾ ಭಕ್ತ ಬೆಲ್ಲ ॥ ೧೬ ॥
ಮಡಿಯುಂಟು ಧೃಡವುಂಟು ಹಿಗ್ಗುತಗಿಲ್ಲ ।
ಬಿಡದೆನಾ ಮಾಡೆ ತಾಮಾಳ್ವನನ ಬೆಲ್ಲ ॥ ೧೭ ॥
ಸಿಟ್ಟಿಲ್ಲ ಸೆಡವಿಲ್ಲ ಬೇಕು ಬೇಡಿಲ್ಲ ।
ಬಿಟ್ಟವ ಶುಭಾಶುವನಾ ಭಕ್ತ ಬೆಲ್ಲ ॥ ೧೮ ॥
ಈತ್ನಹಶಿ ಆತ ಕೆಳೆ ಎನ್ನದಿಹ ವಿಮಲ ।
ಶೀತ ಭೀತನೆ ಇವನು ? ನೀರೊಳಿಹ ಕಮಲ ॥ ೧೯ ॥
ಹೊಗಳಿದರು ಬಗುಳಿದರು ನಿತ್ಯ ತೃಪ್ತೆ ।
ವಿಗಲವಾಗದ ಗಾಪ್ತ ನಾನವಗೆ ಪ್ರಾಪ್ತ ॥ ೨೦ ॥
ಇಲ್ಲಿ ನುಡಿದೊಲು ನಡೆಯೆ ನಚ್ಚಿದಂಥವಗೆ ।
ನಲ್ಲನಾರಿಗೋ ನಾನು ಮೆಚ್ಚಿದೆನು ಅವಗೆ ॥ ೨೦ ॥
ಬಿದ್ದೆ ನಾದರೆ ನನ್ನ ಬೆರಳು ನೀ ಪಿಡಿಯೈ ।
ಎದ್ದು ದಟ್ಟಡಿ ಇಡುವೆ ಏಳೆಂದು ನುಡಿಯೈ ॥ ೧ ॥
ಇಕೋ ದತ್ತ ಸ್ವಾತಂತ್ರ್ಯ-ಜಕುತ ಹರಣಾ ।
ಇಕೋ ಬರೆದು ಬರೆಯಿಸಿದೆ ನಾರಾಯಣ ॥ ೨ ॥

---

## ಶ್ರೀ ಭಗವದ್ಗೀತೆಯಲ್ಲಿನ ಕರ್ಮಪಂಚಾಧ್ಯಾಯಿಯೊಳಗಿನ ಸೂತ್ರಮಾಲೆ.

### ೨ನೇ ಅಧ್ಯಾಯ.

ಯಾವಾಗಲೂ ಶರೀರವು ಅಂತವಂತವು, ಶರೀರಿಯು ಅವಿನಾಶಿಯು. ಸುಖ ದುಃಖವನ್ನು ಸಹಿಸು, ಶೋಕವನ್ನು ಮಾಡಬೇಡ. ಸಿದ್ಧಿ ಅಸಿದ್ಧಿಯ ಬಗ್ಗೆ ಹಾತೊರೆಯಬೇಡ. ಅಂದರೆ ನಿನಗೆ ಪಾಪಹತ್ತಲಾರದು.

ಈ ಬುದ್ಧಿಯಿಂದ ಸಾಗಿದರೆ, ಕರ್ಮಲೇಪವೇ ಆಗುವದಿಲ್ಲ. ಈ ಯೋಗಕ್ಕೆ ಯಾವದೂ ಅಡ್ಡಬರಲಾರದು; ಈ ಯೋಗದಿಂದಾದ ಕರ್ಮಕ್ಕೆ ನಾಶವಿಲ್ಲ. ಒಂದಿಷ್ಟೇ ಈ ಧರ್ಮವು ಇದ್ದರೆ ಸಾಕು ; ಎಂಥೆಂಥ ಭಯುವನ್ನೂ ನಿವಾರಣೆ ಮಾಡುವದು.

ವ್ಯವಸಾಯಾತ್ಮಿಕಬುದ್ಧಿಯು ಒಂದು; ಅವ್ಯವಸಾಯಿಕಬುದ್ಧಿಗಳು ನೂರೊಂದು. ದ್ವಂದ್ವಗಳಿಗೆ ಅಳುಕದೆ, ಯೋಗಕ್ಷೇಮಕ್ಕಾಗಿ ಅಳುಪದೆ, ನಿತ್ಯಸತ್ವನಾಗಿ ತನ್ನಲ್ಲಿ ಶ್ರದ್ಧೆಯನ್ನಿಡುವದೇ ಉತ್ತಮ ಮಾರ್ಗ.

ಯಾವಾಗಲೂ **ಯೋಗವಿರಬೇಕು. ಸಂಗವಿರಬಾರದು.** ಯಾವ ಬುದ್ಧಿಯಿಂದ ಮಾಡಬೇಕು, ಇದನ್ನೇ ನಿಶ್ಚಯಿಸಬೇಕು. ಯಾವ ಫಲಕ್ಕಾಗಿ ಮಾಡಬೇಕು, ಎಂಬುದು ಗೌಣಪಕ್ಷವು.

ಸ್ಥಿತಪ್ರಜ್ಞ:—

**आत्मन्यवात्मना तुष्टः । वस्ते हि यस्येंद्रियाणि ।**

ಇಂಥವನು ರಸವರ್ಜ್ಯಪರವನ್ನು ನೋಡುತ್ತಲಿರುವಾಗ, ರಸಗಳು ಇವನನ್ನು ಮುಟ್ಟಲೇ ಆರವು. ಯಾವ ಧ್ಯಾನದಿಂದಲೂ ಸಂಗವುಂಟಾಗಬಾರದು. ಹೀಗಾದರೆ ಮನಸ್ಸು ಯಾವಾಗಲೂ ಪ್ರಸನ್ನವಾಗಿಯೇ ಉಳಿಯುವದು; ಯಾವಾಗಲೂ ಪ್ರಸನ್ನರಿರುವವರಲ್ಲಿಯೇ ಬುದ್ಧಿಯುಂಟಾಗುವದು. ಈ ಬುದ್ಧಿಯಿಂದಲೂ, ಅದರಿಂದಾದ ಭಾವನೆಯಿಂದಲೂ ಶಾಂತಿ ದೊರೆಯುವದು. **ಈ ಶಾಂತಿಯೇ ಬ್ರಾಹ್ಮೀಸ್ಥಿತಿಯು. ಕಾಮಕಾಮಿಯಾಗಿರಬಾರದು; ಆತ್ಮವಶಿಯಾಗಬೇಕು.** ಈ ಬ್ರಾಹ್ಮೀಸ್ಥಿತಿಯೊಳಗಿಂದ ಬ್ರಹ್ಮನಿರ್ವಾಣಕ್ಕೆ ಸಾಗಬರುವದು.

---

## ೩ನೇ ಅಧ್ಯಾಯ.

ಕರ್ಮಕಾರಣವು ಪ್ರಕೃತಿಯ ಗುಣಗಳು. ಕರ್ಮ ಮಾಡದಿರುವದು ನೈಷ್ಕರ್ಮ್ಯವೆನಿಸಿಕೊಳ್ಳದು. ಶರೀರಯಾತ್ರೆಯಾದರೂ ಸುಸೂತ್ರವಾಗಿ ಸಾಗಲಿಕ್ಕೆ, ನಿಯಮಿತ ಕರ್ಮಗಳನ್ನು ಮಾಡಲೇ ಬೇಕು. ಯಜ್ಞಾರ್ಥಕರ್ಮದಿಂದ ಬಂಧನವಿಲ್ಲ. ಉಳಿದ ಕರ್ಮವು ಬಂಧನಕರವು. ಮುಕ್ತಸಂಗನಾಗಿ ಕರ್ಮ ನಡೆಯಿಸಬೇಕೆಂಬುದೇ ಗುಟ್ಟು. ಯಜ್ಞಮುಖದಿಂದಲೇ ದೇವರಿಗೂ, ಮನುಷ್ಯರಿಗೂ ಸಂಬಂಧವು ಉಳಿಯಬಹುದು; ಬೆಳೆಯಬಹುದು. ಅ—ಕ್ಷರದಿಂದಲೇ ಯಜ್ಞವೂ, ಯಜ್ಞದಿಂದ ಅನ್ನವೂ ಉಂಟಾಗುವವು. ಸರ್ವಗತಬ್ರಹ್ಮವು ನಿತ್ಯವೂ ಯಜ್ಞದಲ್ಲಿರುವದು. ಜಗಚ್ಚಕ್ರವು ಹೀಗೆ ಪ್ರವರ್ತಿಸಲ್ಪಟ್ಟಿರಲಾಗಿ, ಇದಕ್ಕೆ ಪ್ರತಿಯಾಗುವವನು ಪಾಪಿಯು. ಆದರೆ ಆತ್ಮರತಿಯುಳ್ಳವನೂ ಆತ್ಮತೃಪ್ತನೂ ಆತ್ಮತೃಷ್ಟನೂ ಆದವನು, ಕರ್ಮ ಮಾಡಿದರೇನು! ಬಿಟ್ಟರೇನು! ಆದರೆ ಜನರದು, ದೊಡ್ಡವರು ಮಾಡಿದಂತೆ ಮಾಡಲು ಯತ್ನಿಸುವ ಸ್ವಭಾವವುಂಟು. ಹಾಗಾಗಿ ಅನವಸ್ಥೆಯಾದೀತೆಂದು, ದೊಡ್ಡವರು ಲೋಕಸಂಗ್ರಹಕ್ಕೆಂದು ಕರ್ಮಮಾಡುತ್ತಿರಬೇಕು. ಇಲ್ಲದಿದ್ದರೆ ಜಗದ ಭಟ್ಟಿಯೇ ಕೆಟ್ಟು ಹೋದೀತು.

ದೊಡ್ಡವರು ಕರ್ಮಬಿಡುವದರಿಂದಲೇ ಜಗತ್ತಿನಲ್ಲಿ ಸಂಕರವಾಗುವದು. ವಿದ್ವಾಂಸನು ಕರ್ಮಾಸಕ್ತರನ್ನು ಯೋಗ್ಯಕರ್ಮದಲ್ಲಿ ನಿಯೋಜಿಸಬೇಕೇ ಹೊರತು ಬುದ್ಧಿಬೇಧ ಮಾಡಬಾರದು; ಕರ್ಮಕ್ಕೆ ಪ್ರಕೃತಿಯ ಗುಣಗಳು ಕಾರಣಗಳೇ ಹೊರತು ತಾನಲ್ಲ. ಈ ಪ್ರಕೃತಿಯ ಗುಣವನ್ನು ಬದಲಿಸುವದನ್ನು ಪರಮಾತ್ಮನಿಗೆ ಆತ್ಮನು ಒಪ್ಪಿಸಿ ಬಿಡಬೇಕು. ಇದೇ ಹಾದಿ. ಬರೇ ನಿಗ್ರಹದಿಂದ ಏನೂ ಕಾರ್ಯವಾಗಲಾರದು. ಜೀವ ಹೋದರೂ ಸ್ವಧರ್ಮ ಬಿಡಲಾಗದು. ಎಷ್ಟೇ ಆಗಲಿ ಸ್ವಧರ್ಮಮಾಡಬೇಕು. ಆದರೆ ನಾವು ಇದರ ವಿರುದ್ಧವಾಗಿ ಕರ್ಮ ಮಾಡುತ್ತೇವಲ್ಲ—ಅದು ಏಕೆ ? ಅದು ಕಾಮದಿಂದ, ಕ್ರೋಧದಿಂದ, ಇವೆರಡು ಮನುಷ್ಯನ ಶ್ರೇಯೋಮಾರ್ಗದಲ್ಲಿಯ ನಿತ್ಯವೈರಿಗಳು. ಇವೆರಡನ್ನು—ಜ್ಞಾನಚಂದ್ರನನ್ನೂ ವಿಜ್ಞಾನ ಸೂರ್ಯನನ್ನೂ ಗ್ರಾಸಿಸಲು ಬರುವ ರಾಹುಕೇತುಗಳಂತೆ ಇರುವ ಕಾಮ ಕ್ರೋಧಗಳನ್ನು ಕೊಲ್ಲಬೇಕು. ಇಂದ್ರಿಯಗಳಿಗಿಂತ ಮನವೂ, ಮನಕ್ಕಿಂತ ಬುದ್ಧಿಯೂ, ಬುದ್ಧಿಗಿಂತ ಅವನೂ ಹೆಚ್ಚಿನವನು. ಅವನನ್ನೇ ಮೊರೆ ಹೊಕ್ಕು ಇವೆರಡರನ್ನು ತುಂಡರಿಸಬೇಕು.

---

## ೪ನೇ ಅಧ್ಯಾಯ.

ಧರ್ಮ ಕುಗ್ಗುವಕಾಲಕ್ಕೂ, ಅಧರ್ಮ ಹಿಗ್ಗುವ ಕಾಲಕ್ಕೂ, ಸಾಧುಗಳ ಸಂರಕ್ಷಣೆಗಾಗಿಯೂ ನೀಚರ ಸಂಹಾರಕ್ಕಾಗಿಯೂ, ಧರ್ಮಸಂಸ್ಥಾಪನಕ್ಕೂ ನಾನು ಕಾಲ ಕಾಲಕ್ಕೆ ನನ್ನ ಆತ್ಮಮಾಯೆಯ ಯೋಗದಿಂದ, ನನ್ನ ಪ್ರಕೃತಿಯಲ್ಲಿ ಅಧಿಷ್ಠಿತನಾಗಿ ಅವತರಿಸುವೆನು. ಇದೇ ನನ್ನ ಜನ್ಮದ ಮತ್ತು ಕರ್ಮದ ರಹಸ್ಯ. ಇದನ್ನು ಬಲ್ಲವನೇ ಮುಕ್ತ. ಯಾರು ಯಾವ ಹಾದಿಯಿಂದ ಹೋದರೂ, ನನ್ನ ಕಡೆಗೇ ಬರಲಿಕ್ಕೆ ಬೇಕು. ಆದರೆ ಯಜ್ಞಕರ್ಮದಿಂದಲೇ ಈ ಮನುಷ್ಯಲೋಕದಲ್ಲಿ ಸಿದ್ಧಿಯುಂಟಾಗುವದು. ಯಜ್ಞಗಳು ಅನಂತವಾಗಿರುವವು. ಕರ್ಮದ ತೊಡಕು ಬಿಡಿಸಲಿಕ್ಕೆ ಬಲು ಬಿಗಿ. ಕರ್ಮಮಾಡಿ ಮಾಡದವನಂತಿರಬೇಕು. ಮಾಡದೇ ಮಾಡುವವನಂತೆ ಇರಬೇಕು. ಇವನೇ ಯೋಗಿ, ಪಂಡಿತ. ಅಂತೂ ಯಾವ ಕಾರ್ಯವು ಜ್ಞಾನಯುಕ್ತವೂ ಕಾಮಸಂಕಲ್ಪವಿಲ್ಲದ್ದೂ ಇರುವದೋ, ಅದರಿಂದ ಬಂಧನವುಂಟಾಗುವದಿಲ್ಲ. ಸಿದ್ಧಿಯ ಚಿಂತೆಯನ್ನು ಹಚ್ಚಿಕೊಳ್ಳಬಾರದು. ಯಜ್ಞವೆಂದು ಕರ್ಮ ಮಾಡಬೇಕು. ಶರೀರ ಕರ್ಮವಂತೂ ಸರಿಯೇ ಸರಿ. ಹೀಗೆ ಮಾಡುವದರಿಂದ ಪಾಪವು ಅಂಟಲಾರದು. ಆದರೆ ಯಜ್ಞಮಾಡದವನಿಗೆ ಈ ಲೋಕವೂ ಇಲ್ಲ. ಪರಲೋಕವೂ ಇಲ್ಲ. ಇಂತು ಯಜ್ಞಕರ್ಮದಿಂದ ಜ್ಞಾನವುಂಟಾಗುವದು. ಆ ಜ್ಞಾನದಿಂದ ಮುಂದೆ ಶಾಂತಿ ದೊರಕುವದು. ಈ ಜ್ಞಾನವನ್ನು ತತ್ವದರ್ಶಿಗಳ ಸೇವೆಯಿಂದಲೂ ಪ್ರಶ್ನೆಗಳಿಂದಲೂ ಶರಣಾಗತನಾಗಿಯೂ ದೊರಕಿಸಬೇಕು. ಆದರೆ ಇದಕ್ಕೆ ಅಶ್ರದ್ಧೆ ಉಪಯೋಗವಿಲ್ಲ, ಸಂಶಯ ಉಪಯೋಗವಿಲ್ಲ. ಶ್ರದ್ಧಾವಂತನಾಗು ; ನಿಃಸಂಶಯನಾಗು.

---

## ೫ನೇ ಅಧ್ಯಾಯಂ.

ಸನ್ಯಾಸವೂ ಕರ್ಮಯೋಗವೂ—ಎರಡೂ ನಿಃಶ್ರೇಯಸಪ್ರಾಪ್ತಿಗೆ ಸಾಧನಗಳಾದರೂ, ಯೋಗವಿಲ್ಲದೆ ಸನ್ಯಾಸವು ಸುಲಭಸಾಧ್ಯವಲ್ಲದ್ದರಿಂದ, ಕರ್ಮಯೋಗವೇ ವಿಶೇಷನೆಂದು ಹೇಳಬಹುದು. ಹಗೆಯಿಲ್ಲ—ಬಗೆಯಿಲ್ಲದವನು ನಿತ್ಯ ಸನ್ಯಾಸಿಯು, 'ನಾನೇನು ಮಾಡುತ್ತೇನೆ? ಎಲ್ಲ ಆಗುತ್ತಿದೆ' ಎಂಬ ಭಾವನೆಯಿಂದ ತತ್ತ್ವವೇತ್ತನಿರಬೇಕು, ಇದೇ ಆತ್ಮಶುದ್ಧಿಯ ಮಾರ್ಗವು. 'ಸ್ವಭಾವದಿಂದ ಎಲ್ಲ ನಡೆದಿದೆಯೆಂದು ಸಮತ್ವದಿಂದ ಪಂಡಿತನಿರಬೇಕು. 'समत्वं योग उच्यते.' ಸರ್ವಭೂತಗಳ ಸುಹೃದನಾದ ಪುರುಷೋತ್ತಮನನ್ನು ತಿಳಿಯುವದರಿಂದಲೇ ಶಾಂತಿ ದೊರೆಯುವದು.

---

## ೬ನೇ ಅಧ್ಯಾಯ

ಕರ್ಮ ಫಲದ ಆಶೆಯಿಲ್ಲದೆ ಕರ್ಮ ಮಾಡುವದೇ ಸನ್ಯಾಸಯೋಗವು. ಸನ್ಯಾಸವೂ ಒಂದು ಬಗೆಯ ಯೋಗವೇ ! ಸಂಕಲ್ಪಸನ್ಯಾಸವಾಗುವವರೆಗೆ, ಯೋಗವಾಗುವದೇ ಇಲ್ಲ, ಯೋಗಾರುರುಕ್ಷುವು ಕರ್ಮಯೋಗದಿಂದೇರುವನು, ಆವರೆ ಯೋಗಾರೂಢನು ಶಮಯೋಗದಿಂದ ಸ್ಥಿರನಾಗುವನು. ವಿಷಯುಗಳಲ್ಲಿಯೂ ಕರ್ಮಗಳಲ್ಲಿಯೂ ಆಸಕ್ತನಾಗದೆ, ಸರ್ವಸಂಕಲ್ಪಸನ್ಯಾಸ ಮಾಡುವದೇ ಯೋಗಾರೂಢನ ಲಕ್ಷಣ.

ಆತ್ಮದಿಂದ ಆತ್ಮವನ್ನು ಗೆದ್ದವನು ಆತ್ಮದ ಬಂಧುವು. ಆತ್ಮದ ಕೈಯಲ್ಲಿ ಆತ್ಮವಿರದಿರುವದೇ ಆತ್ಮದ ಶತ್ರುತ್ವ. ಆತ್ಮದಿಂದಲೇ ಆತ್ಮನನ್ನು ಉದ್ಧರಿಸಬೇಕು. ಸಮಬುದ್ಧಿಯಿಂದ ನಡೆಯಬೇಕು. ಯೋಗ ಸಾಧಿಸಬೇಕಾದರೆ ಎಲ್ಲದರಲ್ಲಿಯೂ ಯುಕ್ತಿಬೇಕು.

॥ आत्मनाऽऽत्मानमात्मनि ॥

ಮನಸ್ಸಿನಿಂದಲೇ ಇಂದ್ರಿಯ ಗ್ರಾಮವನ್ನು ನಿಯಮಿಸಬೇಕು. ಮನಸು ಹರಿದಾಡಿದರೂ, ಮತ್ತೆ ಮತ್ತೆ ಅದನ್ನು ಹಿಡಿದು ಆತ್ಮನ ವಶಕ್ಕೆ ಕೊಡಬೇಕು. ಸರ್ವವನ್ನೂ ಸರ್ವನಲ್ಲಿ ಕಾಣಬೇಕು. ಆತ್ಮೌಪಮ್ಯದಿಂದಿರಬೇಕು. ಮನಸ್ಸು ಚಂಚಲವಿದ್ದರೂ ಅಭ್ಯಾಸದಿಂದ ಅವಕ್ಕೆ ಸಂಯಮವನ್ನು ಕಲಿಸಬಹುದು. ಕಲ್ಯಾಣಮಾಡಿದವನು ಹಾಳಾಗಲಾರನು. ಯೋಗಭ್ರಷ್ಟನಾದವನಿಗೂ, ಇಂದಿಲ್ಲ ನಾಳೆ ಸಿದ್ಧಿ ಸಿಗುವದು ನಿಶ್ಚಯ. ಆದರೆ ಎಲ್ಲ ಯೋಗಿಗಳಲ್ಲಿಯೂ, ಶ್ರದ್ಧೆಯಿಂದ ತನ್ನ ಅಂತರಾತ್ಮವನ್ನು ನನಗೆ ಒಪ್ಪಿಸಿದವನು, ಯುಕ್ತತಮನೆಂದು ನಾನು ತಿಳಿಯುತ್ತೇನೆ.

---

# ೭ನೇ ಅಧ್ಯಾಯ. ಜ್ಞಾನಯೋಗ.

(೧) ನನ್ನಲ್ಲಿ ಆಸಕ್ತಿಯುಳ್ಳ ಮನಸಿನವನಾಗಿ, ನನ್ನನ್ನೇ ಆಶ್ರಯವನ್ನು ಮಾಡಿಕೊಂಡವನಾಗಿ, ಯೋಗವನ್ನು ಕೂಡಿದವನಾದರೆ, ಪಾರ್ಥನೆ! ನಿಃಸಂಶಯವಾಗಿ ಎಳ್ಳಷ್ಟೂ ಬಿಡದೆ ನನ್ನನ್ನು ಹೇಗೆ ಅರಿಯುವಿಯೆಂಬದನ್ನು ತಿಳಿ, ಕೇಳಿಕೊ. ಒಂದಿಷ್ಟೂ ಉಳಿಯಗೊಡದಂತೆ ವಿಜ್ಞಾನಸಹಿತವಾದ ಜ್ಞಾನವನ್ನು ಹೇಳುವೆನು. ಅದನ್ನು ನೀನು ತಿಳಿದುಕೊಂಡಮೇಲೇ ಬೇರೆ ತಿಳಿಯುವದೇನೂ ಇಲ್ಲಿ ಉಳಿಯುವದೇ ಇಲ್ಲ. ಸಾವಿರಾರು ಜನರಲ್ಲಿ ಒಬ್ಬಾನೊಬ್ಬನು ಸಿದ್ಧಿಗಾಗಿ ಹವಣಿಸುವನು. ಹಲವು ಸಿದ್ಧರಲ್ಲಿ ಒಬ್ಬಾನೊಬ್ಬನು ನನ್ನನ್ನು ತತ್ವಪೂರ್ವಕವಾಗಿ ತಿಳಿದುಕೊಳ್ಳುವನು. (೧–೩)

ಗುಟ್ಟು:—ಪುರುಷೋತ್ತಮನಾದ ನನ್ನಲ್ಲಿ, ಭಕ್ತಿಯಿಂದ ಆಸಕ್ತಿಯುಳ್ಳ ಮನಸ್ಸಿನವನಾಗು; ಅಕ್ಷರನಾದ ನನ್ನನ್ನೆ ಸರ್ವಶರೀರದಿಂದ ಆಶ್ರಯವನ್ನು, ಜ್ಞಾನದಿಂದ ಮಾಡಿಕೊಂಡವನಾಗು, ಕ್ಷರನಾದ ನನ್ನ ಲೀಲಾಯೋಗವನ್ನು ಕರ್ಮಗಳಿಂದ ಕೂಡಿದವನಾಗು, ಅಂದರೆ ಸಮಗ್ರಜ್ಞಾನವಾಗುವದು. ದೇಹಪ್ರಾಣಮನಗಳನ್ನು, ಕರ್ಮಜ್ಞಾನಭಕ್ತಿಗಳಿಂದ, ಕ್ಷರಕ್ಷರಾಪುರುಷೋತ್ತಮರಲ್ಲಿ ಸಮರಸ ಮಾಡುವದರಿಂದಲೆ ಸಮಗ್ರಜ್ಞಾನವಾಗುವದು; ಉಳಿದುದು ಅಸಮಗ್ರವು. ಸಿದ್ಧಿಗೆ ಪ್ರಯತ್ನಮಾಡುವವರೆ ಕಡಿಮೆ; ಸಿದ್ಧರಾದರೂ, ನನ್ನನ್ನು ತತ್ವಪೂರ್ವಕವಾಗಿ ತಿಳಿದುಕೊಳ್ಳುವವರೋ, ಒಬ್ಬಿಬ್ಬರೇ! ಸಿದ್ಧನೂ ತತ್ವಜ್ಞಾನಿಯಲ್ಲ; ತತ್ವಜ್ಞಾನಾರ್ಹನು.

(೪) ಪಂಚಮಹಾಭೂತಗಳು, ಮನಸ್ಸು, ಬುದ್ಧಿ, ಅಹಂಕಾರ, ಹೀಗೆ ಎಂಟು ಹೋಳಾಗಿದೆ ನನ್ನ ಪ್ರಕೃತಿ; ಇದು ಅಪರಾ. ಯಾತರಿಂದ ಈ ಜಗತ್ತಿನ ಧಾರಣೆಯಾಗಿದೆಯೊ, ಆ ಜೀವರೂಪವಾದದ್ದೆ ನನ್ನ ಪರಾಪ್ರಕೃತಿ ; ಈ ಪರಾಪರ ಪ್ರಕೃತಿಯೇ ಸರ್ವಭೂತಗಳ ತಾಯಿ. ಎಲ್ಲ ಜಗತ್ತಿನ ಹುಟ್ಟಿಗೂ ಅಳಿವಿಗೂ ನಾನು ಕಾರಣ. ನನ್ನಗಿಂತ ಹೆಚ್ಚಿನದೇನೂ ಇಲ್ಲ. ಧಾರದಲ್ಲಿ ಮಣಿಗಳನ್ನು ಪೋಣಿಸಿದಂತೆ, ನನಲ್ಲಿ ಎಲ್ಲವೂ ಪೋಣಿಸಲ್ಪಟ್ಟದೆ. ನೀರಿನೊಳಗಿನ ಸವಿ ನಾನು, ಸೂರ್ಯಚಂದ್ರರ ಹೊಳಪು ನಾನು ವೇದಗಳಲ್ಲಿ ಓಂ ಕಾರ ನಾನು, ಮುಗಿಲಿನಲ್ಲಿ ಸೊಲ್ಲು ನಾನು, ಮನುಷ್ಯರಲ್ಲಿ ಪೌರುಷ ನಾನು, ಮಣ್ಣೊಳಗಿನ ಕಂಪು ನಾನು, ಬೆಂಕಿಯೊಳಗಿನ ಹೊಗರು ನಾನು, ಎಲ್ಲದರೊಳಗಿನ ಜೀವ ನಾನು, ತಪಸ್ವಿಗಳ ತಪವು ನಾನು, ಎಲ್ಲ ಭೂತಗಳ ಸನಾತನಬೀಜ ನಾನು, ಬುದ್ಧಿವಂತರ ಬುದ್ಧಿ, ತೇಜಸ್ವಿಗಳ ತೇಜ ನಾನು, ಬಲವಂತರಲ್ಲಿ ಕಾಮರಾಗವಿಲ್ಲದ ಬಲವು ನಾನು, ಧರ್ಮಕ್ಕೆ ವಿರುದ್ಧವಲ್ಲದ ಕಾಮವು ನಾನು. ಅಂತೂ ಏನು! ಸಾತ್ವಿಕರಾಜಸಿಕತಾಮಸಿಕ ಭಾವಗಳೆಲ್ಲ ನಾನು—ನನ್ನಿಂದ—ನನ್ನಲ್ಲಿ—ಇವು ; ಇವುಗಳಲ್ಲಿ ನಾನಿಲ್ಲ. (೪–೧೨)

ಗುಟ್ಟು:—ಅಪರಾಪ್ರಕೃತಿಯೇ ಕ್ಷೇತ್ರ, ಶರೀರ, ಕ್ಷರಬ್ರಹ್ಮ; ಪರಾಪ್ರಕೃತಿಯೇ ಕ್ಷೇತ್ರಿ, ದೇಹಿ, ಅಕ್ಷರಬ್ರಹ್ಮ ಇವೆರಡೂ ಒಂದಾಗಿ ನನಗೆ ಕ್ಷೇತ್ರ; ಯೋನಿ; ನಾನು—ಕ್ಷೇತ್ರಜ್ಞ, ಬೀಜ ಎಲ್ಲವರೊಳಗಿನ ಶ್ರೀಮದೂರ್ಜಿತ ತತ್ತ್ವವು—ವಿಭೂತಿಯು—ನಾನು. ಇವಿಷ್ಟೆಲ್ಲಕೂಡಿ ನನ್ನ ಒಂದು ಭಾಗಮಾತ್ರ. ನಾನು ಇವನ್ನೆಲ್ಲ ಮಿಕ್ಕಿ ಮೀರಿ ಮೀಸಲ ನಾಗಿರುವೆನು.

(೧೩) ತ್ರಿಗುಣಭಾವದಿಂದ ಮರುಳಾದ ಜಗವು, ಇವುಗಳನ್ನು ಮಿಕ್ಕಿರುವ, ತೀರದ, ನನ್ನನ್ನರಿಯದು. ಗುಣಮಯವಾದದ್ದಿದು ದೈವೀಮಾಯೆಯು. ದಾಟಲು ಬಿಗಿ. ನನ್ನ ಮೊರೆಹೊಕ್ಕವರು ಇದನ್ನು ದಾಟುವರು. ಮೂಢರು, ದುಷ್ಕೃತಿಗಳು, ಅಸುರ ಭಾವವುಳ್ಳವರು, ಗುಣಮಾಯೆಯಿಂದ ಅಜ್ಞಾನಿಗಳಾದ ನರಾಧಮರು ನನ್ನ ಮೊರೆ ಹೊಗರು. ನನ್ನ ಮೊರೆ ಹೊಗುವ ಜನರು ನಾಲ್ಕು ಬಗೆಯವರು:—ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ. ಇವರಲ್ಲಿ ಜ್ಞಾನಿ ಭಕ್ತನ ವಿಶೇಷವೇನೆಂದರೆ—ಅವನು ಏಕಭಕ್ತಿಯುಳ್ಳವನು. (ಅನನ್ಯನು) ನಿತ್ಯಯುಕ್ತನು (ಸದಾಸಮರಸಿಯು, ಶರಣನು). ಅವನಿಗೆ ನಾನು ಅತ್ಯಂತ ಪ್ರಿಯನು ; ನನಗೆ ಅತ್ಯಂತಪ್ರಿಯನು ಅವನು. ನಾಲ್ಕೂ ಭಕ್ತರೂ ಉದಾರರೇ! ಆದರೂ ತಾರತಮ್ಯಮಾಡಿ ಹೇಳುವುದೇ ಆದರೆ ಜ್ಞಾನಿಯು ನನ್ನಾತ್ಮನೆಂದು ನನ್ನ ಮತ ; ಅದೇಕೆ ? ನನಗಿಂತ ಹೆಚ್ಚಿನ ಗತಿಯಿಲ್ಲೆಂಬದನರಿತು ನನ್ನಲ್ಲಿ ಬೆರೆತು ಯಾವಾಗಲೂ ಇರುವನಾಗಿ ! ಎಷ್ಟೋ ಜನ್ಮಗಳಾದ ಮೇಲೆ ಜ್ಞಾನಿಯಾದ ಭಕ್ತನು 'ಎಲ್ಲವೂ ವಾಸುದೇವನೇ' ಎಂದು ನನ್ನ ಮೊರೆಹೊಗುವನು. ಇಂಥ ಮಹಾತ್ಮನು ವಿರಳ. ಯಾಕೆ ? ಬಯಕೆಗಳಿಂದ ತಿಳಿಗೇಡಿಗಳಾಗಿ ಬೇರೆ ದೇವತೆಗಳಿಗೆ ಮೊರೆ ಹೊಗುವರಾಗಿ ! ಅದು ಹೇಗೆ ? ತಮ್ಮ ಹುಟ್ಟುಗುಣದ ಬಿಗಿಕಟ್ಟಿನಲ್ಲಿ ಸಿಕ್ಕು ಆ ಆ ಕಟ್ಟಳೆಗೆ ಒಳಪಟ್ಟವರಾಗಿ ! (೧೩—೨೦)

ಗುಟ್ಟು:—ನೀರಿನಲ್ಲಿ ಈಸಿ ಪಾರಾಗಬೇಕಾದರೆ, ಎಂದೂ ಮುಳುಗದ ಒಡವೆಯ ಜೊತೆ ಬೇಕು. ಗುಣದಲ್ಲಿ ಮುಳುಗದವನು ತ್ರಿಗುಣಾತೀತ ಪುರುಷೋತ್ತಮನೊಬ್ಬನೆ. ತ್ರಿಮೂರ್ತಿಗಳೂ ತ್ರಿಗುಣಕ್ಕೆ ಆಧೀನರು. ಹೀಗಿದ್ದರೂ ದುಷ್ಕೃತಿಯುಳ್ಳ ಮೂಢನಿಗೆ ಪುರುಷೋತ್ತಮನಿಗೆ ಶರಣುಹೋಗಬೇಕೆಂದು, ತೋಚುವದೇ ಇಲ್ಲ. ಭಕ್ತಿಯ ಮೆಟ್ಟುಗಳು ನಾಲ್ಕು. ಜ್ಞಾನಿಯಮೆಟ್ಟೇ ನಿಲುಕಡೆ. ಆಗ್ಗೆ 'ಎಲ್ಲವೂ ವಾಸುದೇವ' ನೆಂಬ ಪ್ರತೀತಿಯು ಪ್ರತಿಕ್ಷಣದ ಅನುಭವವಿರುತ್ತದೆ. ಮೇಲು ದೇವನ ಬಿಟ್ಟು ಕೀಳು ದೇವತೆಗಳಿಗೆ ಮೊರೆಹೋಗುವ ಕಾರಣವು ನಮ್ಮ ಬಯಕೆಗಳು ; ಬಯಕೆಗಳ ಕೂಡ ಕಟ್ಟಳೆಗಳು ಬರುವರು. ಅವುಗಳಿಗೂ ನಾವು ಈಡಾಗಲಿಕ್ಕೆ ಬೇಕಾಗುವದು. ಇದಕ್ಕೇನು ಕಾರಣ ? ನಮ್ಮ ಪ್ರಕೃತಿ ಪುರುಷೋತ್ತಮನಿಗೆ ಮೊರೆಹೊಗದ್ದರಿಂದ ಪ್ರಕೃತಿಗೆ ಅಧೀನವಾಗಬೇಕಾಯಿತು. ಪ್ರಕೃತಿಯಿಂದ ಗುಣ, ಗುಣದಿಂದ ಕಾಮ; ಕಾಮದಿಂದ ನಿಯಮ; ನಿಯಮದಿಂದ ನಿರೋಧ; ನಿರೋಧದಿಂದ ಅಗತಿ ; ಅಗತಿಯಿಂದ ಅಧೋಗತಿ—ಹೀಗೆ ಚಕ್ರವು ಸಾಗುವದು.

(೨೧) ಯಾರಾರು ಯಾವಾವಂಗವನ್ನು ನಚ್ಚಿ ಮೆಚ್ಚಿ ಪೂಜಿಸುವರೋ ಅವರ ನಚ್ಚನ್ನು ಅಲ್ಲಲ್ಲಿ ನೆಟ್ಟನಾಟಸುವೆನು. ಆ ನಚ್ಚಿನಿಂದ ಕೂಡಿ ಅವರು ಅದಕ್ಕೆ ನಡ ಕೊಳ್ಳುವರು ; ಮತ್ತು ಅಲ್ಲಲ್ಲಿ ನಾನೇ ಕಟ್ಟಿಟ್ಟಿರುವ ಭೋಗಗಳನ್ನು ಪಡೆಯುವರು. ಆವರೆ ಏನು! ಆ ಅತಬುದ್ಧಿಗಳಿಗೆ ಬಹಳ ದಿವಸ ಬಾಳದ ಫಲವು ದೊರಕುವದು. ದೇವ ತೆಗಳನ್ನು ಭಜಿಸುವವರು ದೇವತೆಗಳಿಗೆ ಕೂಡಿಕೊಳ್ಳುವರು; ನನ್ನವರು ನನಗೆ ಕೂಡಿ ಕೊಳ್ಳುವರು. ಬುದ್ಧಿಗೇಡಿಗಳಿಗೆ ನಾನೆಂದರೆ ವ್ಯಕ್ತವಾದ ಒಂದು ಅವ್ಯಕ್ತ ತತ್ವವಾತ್ರ ವೆನಿಸುವದು. ಎಲ್ಲಕ್ಕೂ ಮೇಲಾದ, ಎಂದೂ ತೀರದ, ನನ್ನ ಹೆಚ್ಚಿನ ಇರವು ಅವ ರಿಗೆ ಗೊತ್ತಿಲ್ಲ. ನನ್ನ ಯೋಗ ಮಾಯೆಯ ಮುಸುಕಿನಲ್ಲಿದ್ದ ನಾನು ಎಲ್ಲರಿಗೇನು ಕಾಣು ವದಿಲ್ಲ ! ಇಂದಿನದು ಹಿಂದಿನದು ಮುಂದಿನದು ನಾನು ಬಲ್ಲೆ ; ಆದರೆ ನನ್ನ ಬಲ್ಲವರಿಲ್ಲ. ಅದೇಕೆ ? ಹುಟ್ಟದೊಡನೆ ಎಲ್ಲ ಪ್ರಾಣಿಗಳಿಗೆ ಇಚ್ಛಾದ್ವೇಷವೆಂಬ ದ್ವಂದ್ವಮೋಹವು ಮುಸುಕುವದು. ಪುಣ್ಯಕರ್ಮಗಳಿಂದ ಯಾರ ಪಾಪವಿಲ್ಲದಾಗಿರುವದೋ ಅವರು ದ್ವಂದ್ವ ಮೋಹದ ಪರಿಯನ್ನು ಹರಿದು, ಗಟ್ಟಿಮನಸು ಮಾಡಿ, ನನ್ನ ಭಜಿಸುವರು. ಆ ಮೇಲೆ ಮುಪ್ಪು ಸಾವುಗಳ ಹಿಡತದೊಳಗಿಂದ ಪಾರಾಗಲು ನನ್ನ ಆಶ್ರಯದಲ್ಲಿದ್ದೆ ಯತ್ನಿಸುವರು. ಅಂಥವರಿಗೆ ಆ ಬ್ರಹ್ಮವೂ, ಇಡೀ ಅಧ್ಯಾತ್ಮವೂ, ಅಖಿಲ ಕರ್ಮವೂ ತಿಳಿಯಿತು. ಅಧಿ ಭೂತ, ಅಧಿದೈವ, ಅಧಿಯಜ್ಞ ಸಹಿತನಾದವನು ನಾನೆಂದಾರು ಬಲ್ಲರೋ ಅವರು ಯುಕ್ತಚಿತ್ತ ರಾದ್ದರಿಂದ ಸಾಯುವ ಕಾಲಕ್ಕೂ ನನ್ನ ಬಲ್ಲರು.

ಗುಟ್ಟು:—ಎಲ್ಲ ಭೂತಗಳನ್ನು ಹುಟ್ಟಿಸಿದವನು ನಾನು, ಎಲ್ಲ ದೇವತೆಗಳಲ್ಲಿ ಸೇವ್ಯನು ನಾನು, ಎಲ್ಲ ಕರ್ಮಗಳಿಗೆ ಫಲ ಕೊಡುವವನು ನಾನು, ಇದನ್ನು ಬಲ್ಲದ ಬುದ್ಧಿಗೇಡಿಗಳು, ಇಚ್ಛಾ-ದ್ವೇಷ, ಕಾಮ-ಕ್ರೋಧ, ಸುಖ-ದುಃಖಗಳ ದ್ವಂದ್ವಮೋಹ ಕ್ಕೊಳಗಾಗಿ, ಇಡಿಯುದನ್ನು ಬಿಟ್ಟು ಬಿಡಿಯುದರ ಮೊರೆಹೊಕ್ಕು, ಇದ್ದುದರಲ್ಲಿಯೇ ತೊಳ ಲಾಡುವರು. ಪಾಪವನ್ನು ಪುಣ್ಯದಲ್ಲಿ ಕಳೆಯಬೇಕು; ಪುಣ್ಯವನ್ನು ಭಕ್ತಿಯಲ್ಲಿ ಮೇಳವಿಸ ಬೇಕು; ಭಕ್ತಿಯಿಂದ ನನ್ನಲ್ಲಿ ಲೀನರಾಗಬೇಕು. ಇದೇ ಹಾದಿ. ನಾನು ಎಂದಿಗೂ ತೀರದವನಿರುವೆನು. ಸನಾತನ ಭಕ್ತಿಗೆ ಪಾತ್ರನಿರುವೆನು. ಇದು ಎಂದು ತಿಳಿಯಿತೋ ಅಂದಿಗೆ ಜ್ಞಾನ. ಆಗ್ಗೇಜ್ಞಾನ.

ಶ್ರೀ ಗುರುಅರವಿಂದಸ್ಥಿತ-ನಾರಾಯಣ ಪುರುಷೋತ್ತಮಾಯ

ಅರ್ಪಣಮಸ್ತು.

---

# ಬ್ರಹ್ಮೀಭೂತ.

## ಶ್ರದ್ಧಾನಂದ–ಸಂನ್ಯಾಸಿ.

ಸಂನ್ಯಾಸಿ! ನೀನಿನ್ನ ದಂಡದಂತೆ ।
ಇನ್ನು ಮುನ್ನೂ ಯೋಗಿಯಂತೆ ನಿಂತೆ ॥ ೧ ॥
ಗೀತೆಹಾಡುವ ಆತ್ಮತತ್ತ್ವದಂತೆ ।
ಭೀತಿಮೀರಿದ ಬ್ರಹ್ಮಸತ್ತ್ವದಂತೆ ॥ ೨ ॥
ಹೀಗೆಯೇ ನೀನಿದ್ದೆ ದೇಹವಿದ್ದಾಗ್ಗೆ ।
ಹಾಗೆಯೇ ನೀನುಳಿದೆ ದೇಹವಿಟ್ಟಾಗ್ಗೆ ॥ ೩ ॥
ನೆಚ್ಚಿದ್ದೆ ಹಿಗ್ಗಿದ್ದೆ ಇರು ತೀರುವಾಗ್ಗೆ ।
ಹೆಚ್ಚೇನು ಬ್ರಹ್ಮವನು ಸೇರುವಾಗ್ಗೆ ॥ ೪ ॥

---

# ಶ್ರದ್ಧಾನಂದರ

## ಆತ್ಮಗೀತ.

### ಉದ್ಗಾರ!

ಜಯಧರ್ಮವೇ!–ಜಯವೆ! ಗುರುವರ್ಯನೇ ।
ಜಯವೇದಭೂಮಿಯೇ! ಜಯ ಆರ್ಯನೇ ॥ ೧ ॥
ಗುರುವೆ "ಶ್ರದ್ಧಾನಂದ" ಎಂದು ಕರೆದೆ ।
"ಹಿರಿದು ಇದುವೇ" ಎಂದು ಇಂದು ಅರಿದೆ ॥ ೨ ॥
ನೀನಿಟ್ಟ ಹೆಸರಿಂದು ಹೆಸರಾಗಿ ಮೆರೆದು ।
ತಾನಾಗಿ ಆಗಿಹುದು ಆತ್ಮದಾ ಬಿರುದು! ॥ ೩ ॥

### ಕೊಲೆಗಡಕನಿಗೆ!

ಇರುಯಾವನೇ ನೀನು ಮರುಳ ನೀನು ।
ಮರಣಬಯಸಿದೆ ಆದೆನಮರನಾನು ॥ ೪ ॥
ಮತಭ್ರಾಂತನೇ ನೀನು ಮತಿಭ್ರಾಂತನಾದೆ ।
ಮಿತಿಮೀರದೊಲು ಇಂದು ನಾ ಶಾಂತನಾದೆ ॥ ೫ ॥
ಕೊಂದು ಅಳಿಸುವೆನೆಂದು ನೀತಿಳಿದು ಕೊಂಡೆ ।
ಹಿಂದಿಯರ ಹೃದಯದಲಿ ನಾನು ನೆಲೆಗೊಂಡೆ ॥ ೬ ॥
ಹೋದೀತು ಎಂದೆಯಾ ಶ್ರದ್ಧೆಯೇ ಸತ್ತು! ।
ಆದರದು ಕ್ಷೇತ್ರದಲಿ ಬೀಜ ಬಿತ್ತು ॥ ೭ ॥
ನಂಬಿದವರೆಯೆ ಕಡೆಗು ತಾಳಿಬಾಳುವರು ।
ಹುಂಬರವರಿದಿರಲ್ಲಿ ಹೇಗೆ ತಾಳುವರು ॥ ೮ ॥

ನಚ್ಚಿದವರಾಳುವರು ಕಡೆಯು ವರೆಗೆ ।
ಹುಚ್ಚೆದ್ದು ಹರಿದವರು ಕಣ್ಣ ಮರೆಗೆ ॥ ೯ ॥
ಹುಸಿಹೋಯಿತಲೆ ಮೂಢ ! ನೇನೆಸೆದ ಗುಂಡು ।
ಮಸೆಗಲ್ಲು ಅದು ಮಸೆಯೆ ಮಸದ ವೊಂಡು ॥ ೧೦ ॥

ಆರ್ಯರಿಗೆ !

ಮರುಗದಿರಿ ಮರುಗದಿರಿ ! ಸನ್ಯಾಸಿ ನಾನು ।
ಮರುಗದಿರಿ ನೀವೆಲ್ಲ ಆರ್ಯರಲ್ಲೇನು ॥ ೧೧ ॥
ದೇಶಕಾರ್ಯವು ಮತ್ತೆ ಧರ್ಮಕಾರ್ಯ ।
ಈಶಕಾರ್ಯವು ಎಂದು ತಿಳಿದವನು ಆರ್ಯ ॥ ೧೨ ॥
ಅಂಜುವವನಳುಕುವವನಾರ್ಯನಲ್ಲ ।
ಹಿಂಜರಿಸ ಹೇಡಿಯುವನಾರ್ಯನಲ್ಲ ॥ ೧೩ ॥
ರೊಚ್ಚಿನಿಂ ಶಪಿಸದಿರಿ ಕೊಂದವನ ಕುಲವ ।
ಹುಚ್ಚೆದ್ದು ಮರೆಯದಿರಿ ನಿಮ್ಮ ಬಲವ ॥ ೧೪ ॥
ತಲೆಗಡಕ ಕೊಲೆಗಡಕರಿಗೆ ಧರ್ಮವಿಲ್ಲ ।
ತಲೆತಿರುಕಹೇಸದಂತಹ ಕರ್ಮವಿಲ್ಲ ॥ ೧೫ ॥
ಭೇದವಿರಲೂ ಬಹುದು ಜಾತಿಯುಲ್ಲಿ ।
ಭೇದಕ್ಕೆ ನೆಲೆಯಿಲ್ಲ ನೀತಿಯುಲ್ಲಿ ॥ ೧೬ ॥
ಎಲ್ಲ ಧರ್ಮಕೆ ಹೊರತು ಮೋಸಗಾರಿಕೆಯು ।
ಬಲ್ಲವರದಲ್ಲ ಕ್ಷುಲ್ಲಕರ ಹಾರಿಕೆಯು ॥ ೧೭ ॥
ಇವರ ಹಾರಿಕೆಯಲ್ಲ ಮೇಲೆ; ಕೆಳಕೆ ।
ಇವರು ಇಳಿವುದು ತೀರ ಪಾತಾಲ ತಲಕೆ ॥ ೧೮ ॥
ಮರುಗದಿರಿ ಮುನಿಸದಿರಿ ಕೆಡದಿರಲಿ ಗಂಡು ।
ಮರೆಯದಿರಿ ಧೀರನೇ ಧರ್ಮದಾದಂಡು ॥ ೧೯ ॥
ನಿಮ್ಮ ಶೋಕಕೆ ಬರಲಿ ದಯೆಯುರೂಪ ।
ಹೊಮ್ಮುತಿರಲುತ್ಸಾಹ ಬೇಡಕೋಪ ॥ ೨೦ ॥

ಶಾಸನ

ನಿಮ್ಮ ಕುಲವನು ಕಾಯ್ವ ಛಲವು ಇರಲಿ ।
ನಿಮ್ಮ ಧರ್ಮದಿನಡೆವ ಬಲವು ಬರಲಿ ॥ ೨೧ ॥
ಆಗದಿರಿ ಆಗದಿರಿ ಷಂಢರಂತೆ ।
ಆಗಿರೆನ್ನಯ ಕೈಯ ದಂಡದಂತೆ ॥ ೨೨ ॥

# ನಮ್ಮ ಸಂಸ್ಕೃತಿಯ ಪುನರುಜ್ಜೀವನ.

( ಮುಂದೆ ಸಾಗಿದ್ದು )

ನಮಗೀಗ ಸಾಮಾನ್ಯತಃ ಮೂರು ಸಂಗತಿಗಳನ್ನು ಗಮನಿಸಬೇಕಾಗಿದೆ. ೧. ಭಾರತದ ಪ್ರಾಚೀನಸಂಸ್ಕೃತಿಯ ವೈಭವವು ಕೈಸಾಗದೆ ನಿರ್ವೀರ್ಯವಾಗುವ ಕ್ಷಣವು. ೨. ಪಾಶ್ಚಾತ್ಯಸಂಸ್ಕೃತಿಯ ಸೋಂಕಿನಿಂದ ನಾವು ಮೆಲ್ಲಮೆಲ್ಲನೆ ಕುಂದಿ ಮೃತಪ್ರಾಯ ರಾಗಹತ್ತಿದ ಕಾಲವು. ೩. ಹತ್ತಿಪ್ಪತ್ತು ವರ್ಷಗಳಿಂದ ಕಂಡುಬರುತ್ತಿರುವ ಚೈತನ್ಯದ ಲಕ್ಷಣವು. ರಾಷ್ಟ್ರವೈಭವದ ಇಳಿತದ ಹೊತ್ತಿನಲ್ಲಿ ಕೂಡ, ಬಲಗುಂದದೆ ನಿಂತ ಆತ್ಮ ಶಕ್ತಿಯ ಕಡೆಗಷ್ಟೇ ಕೆಲವರು ಗಮನಕೊಡುವರು. ರಾಷ್ಟ್ರವನ್ನು ಕುತ್ತಿನ ಹೊತ್ತುಗ ಳಿಂದ ಆತ್ಮಬಲವೇ ಉಳಿಸಿತು, ಆತ್ಮಬಲವೇ ಪುನರುದ್ದೀಪನವನ್ನು ಮಾಡಿತು, ಎಂಬ ಸಂಗತಿಯೇನು ಸುಳ್ಳಲ್ಲ. ಮತ್ತಾವದಾದರೂ ರಾಷ್ಟ್ರವು ಇಂಥ ಪೇಚಿನಲ್ಲಿ ಸಿಕ್ಕಿದ್ದರೆ ಎಂದೋ ಜೀವಕಾಯಸಹಿತವಾಗಿ ಮಣ್ಣುಪಾಲಾಗುತ್ತಿತ್ತು. ಹೀಗಿದ್ದರೂ ನಮ್ಮ ರಾಷ್ಟ್ರದ ಇಂದ್ರಿಯಗಳೆಲ್ಲ ಕೊಳೆತಂತಾಗಿ, ಕೆಲವೊಂದು ಕ್ಷಣಕ್ಕೆ ಇಡೀ ರಾಷ್ಟ್ರಜೀವ ನವು ಸಾವಿನ ಸೆಳವಿಗೆ ಸಿಕ್ಕು, ಹೋಗಬಹುದಾಗಿತ್ತೆಂಬದನ್ನು ನಾವು ಮರೆಯಕೂಡದು. ಈಗ ತಾನೇ ಮೋಕ್ಷ ನಿಮಿಷವು-ಪುನರ್ಜನ್ಮ ಸಮಯವು-ಬಂದಿರುವದರಿಂದ, ಭಾರ ತವು ತನ್ನ ಕೇಂದ್ರವನ್ನು ಬಿಡದೆ, ತನ್ನ ವೈಶಿಷ್ಟ್ಯವನ್ನು ಕಾಯ್ದುಕೊಂಡೀತೆಂಬದರ ವಿಷಯದಲ್ಲಿ ಸಾಸಿವೆಯಷ್ಟೂ ಸಂದೇಹವಿಲ್ಲ. ತಿರುಳು ಅದೇ ಉಳಿದೀತು; ಆದರೆ ರೂಪಮಾತ್ರ ಎಷ್ಟೋ ಮಟ್ಟಿಗೆ ಬದಲಾದೀತು. ಅದೇ ಉತ್ಪಾದಕಆತ್ಮಶಕ್ತಿಯಿಂದ ಪ್ರಾಚೀನ ಸತ್ವತತ್ವಗಳಿಗೆ ಬಾಧೆಬರದಂತೆ, ಆದರೆ ಅವೇ ತತ್ತ್ವಗಳನ್ನು ಹೊಸದಾಗಿ-ತೀರಿಯಾಗಿ-ಪೂರ್ಣವಾಗಿ-ಆವಿಷ್ಕರಿಸುವಂತೆ, ತತ್ತ್ವ-ಕಲಾ-ಸಾಹಿತ್ಯ-ಸಂಸ್ಕೃತಿ-ನಯಶಾಸ್ತ್ರ-ಸಮಾಜ ವಿಷಯಕವಾದ ಹೊಸ ಕೋಶಗಳ ಸೃಷ್ಟಿಯೇ ಬರುವ ಭಾರ ತದ ಸಂಸ್ಕೃತಿಯ ಕೈಸೂಚನೆಯೆಂದು ನನಗನಿಸುತ್ತದೆ.

ಪ್ರಾಚೀನ ಆರ್ಯಾವರ್ತದ ಈ ತಿರುಳು-ಈ ವೈಶಿಷ್ಟ್ಯವು ಎಲ್ಲಿತ್ತು ? ಯುರೋ ಪೀಯ ಲೇಖಕರು ಭಾರತೀಯರ ಆಧ್ಯಾತ್ಮಿಕ ಒಲವು, ಬಲವಾದ ಧಾರ್ಮಿಕ ಭಾವನೆ, ಧರ್ಮೋತ್ಸಾಹ, ಪಾರಲೌಕಿಕಪ್ರೀತಿ ಮುಂತಾದವುಗಳನ್ನು ಕಂಡು, ಇವೇ ಭಾರತದ ವೈಶಿಷ್ಟ್ಯವೆಂದು ಹೇಳುವ ಸಂಭವವುಂಟು. ಭಾರತೀಯರ ಮನಸ್ಸು ಏನೋ ತಾತ್ತ್ವಿಕ, ಆಧ್ಯಾತ್ಮಿಕ ಧಾರ್ಮಿಕ ಭಾವನೆಗಳಿಂದ ತುಂಬಿದೆ. ಅನಂತತ್ತ್ವದ ಕಲ್ಪ ನೆಯು ಇವರಿಗೆ ಅಂಟಿಕೊಂಡಿದೆ, ಇವರು ವ್ಯವಹಾರಜ್ಞರಲ್ಲ, ಬರೀ ಸ್ವಪ್ನಸೃಷ್ಟಿ ಯಲ್ಲಿಯೇ ಓಡಾಡುವವರು. ಪ್ರಪಂಚವೆಲ್ಲ ಮಾಯಾರೂಪಿಯೆನ್ನುವರು......ಇತ್ಯಾದಿ ಸಂಗತಿಗಳನ್ನು ಎಷ್ಟೋ ಪಾಶ್ಚಾತ್ಯರಾದ ದೊಡ್ಡ ಮನುಷ್ಯರು ಸಾರಿದರು; ಮತ್ತು ನಮ್ಮ ಜನರು ಕವಲೆತ್ತಿನಂತೆ ಗೋಣುಹಾಕಿದರು, ಇವರಿಗೂ ತಮ್ಮ ಆಧ್ಯಾತ್ಮಿಕತೆಯು,

ವಾಙ್ಮಯದ, ಧರ್ಮದ ಜಂಭಬಡಿಯುವ ಚಟಹತ್ತಿತು; ಆದರೆ ಉಳಿದ ಸಂಗತಿಗಳಲ್ಲೆಲ್ಲ ಅವರು ಕುಣಿಸಿದಂತೆ ಕುಣಿಯುವರು, ಕಲಿಸಿದಂತೆ ಹಾಡುವರು. ಭಾರತೀಯರದು ಕೂಡ ಉಚ್ಚಪ್ರತಿಯ ಚಿತ್ರಕಲೆಯಿರುವದೆಂದು ಮೊನ್ನೆ ಮೊನ್ನೆ ಯುರೋಪಿಯರಿಗೆ ಗೊತ್ತಾಯಿತು; ಆದರೆ ಅವರಿಗಿನ್ನೂ ಭಾರತದ ಪೂರಾ ಸತ್ಯಸ್ವರೂಪವು ಮನವರಿಕೆಯಾಗಲಿಲ್ಲ. ಈ ಸಂಧಿಯಲ್ಲಿ ಭಾರತೀಯರ ಮುಸಣಿಸಿದ ಮನಸ್ಸು ತಿಳಿಯಾಗ ಹತ್ತಿತು. ತಮ್ಮ ಗತವೈಭವದ ಚಿತ್ರವನ್ನು ಹೆಚ್ಚು ನಿಚ್ಚಳವಾಗಿ ನೋಡಲು ಅವರು ಕಲಿತರು; ತಮ್ಮ ದೃಷ್ಟಿಕೋನವು ತೀರ ತಪ್ಪಾಗಿರುವದೆಂಬದನ್ನು ಅರಿತರು. ಇಂಥ ಏಕಾಂಗೀಣ ಸಮರ್ಥನೆಗಳಲ್ಲಿ ಸುಳ್ಳಾಗುವ ಸಂಭವವೇ ಹೆಚ್ಚು. ಒಂದು ಕಾಲಕ್ಕೆ ಜರ್ಮನಿಯ ವಿಷಯವಾಗಿಯೂ, ಇದೇ ರೀತಿಯ ತಪ್ಪುಕಲ್ಪನೆಗಳು ರೂಢವಾಗಿದ್ದಿಲ್ಲವೆ? ಜರ್ಮನಿಯು ತತ್ತ್ವಜ್ಞಾನದಲ್ಲಿಯೂ ಮತ್ತು ಸಂಗೀತದಲ್ಲಿಯೂ ಮೇಲ್ತರಗತಿಯನ್ನು ಪಡೆದಿದ್ದರೂ, ಬಾಳುವೆಯನ್ನು ಸಾಗಿಸುವಗುಟ್ಟೂ, ಪ್ರಸಂಗಗಳ ಪೂರ್ಣ ಲಾಭವನ್ನು ಪಡೆಯುವ ಹಿಡಿತವೂ ಗೊತ್ತಾಗದ್ದರಿಂದ ಅದೊಂದು ವ್ಯವಹಾರಶೂನ್ಯರ, ಭಾವನಾಲೋಲುಪರ, ರಣಹೇಡಿಗಳ ರಾಷ್ಟ್ರವೆಂದು ಹೀಯಾಳಿಸುತ್ತಿದರು. ಆದರೆ ಯುರೋಪಕ್ಕೆ ತನ್ನ ತಪ್ಪನ್ನು ಬೇಗನೇ ತಿದ್ದಬೇಕಾಯಿತು. ಭಾರತವು ತನ್ನ ಕಾಲಿನ ಮೇಲೆ ಪೂರಾ ಎದ್ದು ನಿಂತಿತೆಂದರೆ, ಅಂಥ ಪಾಶವೀ ಚೈತನ್ಯವನ್ನು ತೋರಿಸಲಿಕ್ಕಿಲ್ಲ. ಆದರೆ ತನ್ನ ಸತ್ಯಸ್ವರೂಪದ ಗುರುತನ್ನು ಮಾತ್ರ ಕೊಟ್ಟೀತು.

ಆಧ್ಯಾತ್ಮವೇ ಆರ್ಯಮನೋಧರ್ಮದ ಅಚ್ಚುಕಟ್ಟು; ಅನಂತತ್ತ್ವದ ಭಾವನೆಯು ಅದರ ಗಂಡುಮೆಟ್ಟು; ಭಾರತವು ಮೊದಲಿನಿಂದ,—ಅಂದರೆ, ಬುದ್ಧಿಪ್ರಧಾನ ತಮಃಪ್ರಧಾನ ಯುಗಗಳಲ್ಲಿ ಕೂಡ—ಬಹಿರಂಗದ ಜೀವನವು ಜೀವನದ ಒಂದು ಅಂಗವೆಂಬದನ್ನು ಮರೆಯಲಿಲ್ಲ. ಮೈಮಣ್ಣುಗಳ ಕೂಗನ್ನು ಕೇಳದಿರಲಿಲ್ಲ; ಭೌತಿಕ ಶಾಸ್ತ್ರಗಳ ಮಹತ್ವಕ್ಕೆ ಕಣ್ಣೆವುಟಲಿಲ್ಲ; ಬಾಳುವೆ ಸಾಗಿಸುವದಾಗುವದಿಲ್ಲವೆಂದು ಜೋಲುಮೋರೆ ಹಾಕಿಕೊಂಡು ಕೂಡಲಿಲ್ಲ. ಆದರೆ ಮೈಮೆಟ್ಟನಿಂತ ಮನವನ್ನು ಮನ್ನಿಸದೆ ಹೋದರೇ ಮೈಮಾತ್ರ ಗೌಣವೆಂಬದನ್ನು ನಮ್ಮ ನಾಡು ಅರಿತಿತ್ತು. ವರ್ತಮಾನ ಮಾನವನ ಮೇಲಿಂದಲೇ ವಿಶ್ವಗುಹ್ಯವು ತಿಳಿಯಾಗದೆಂದು ಆದಕ್ಕೆ ಗೊತ್ತಿತ್ತು. ಮಾನವ್ಯವು ಅಪೌರುಷೇಯದ ಬೀಜಕ್ಕೆ ಭೂಮಿಯೆಂದು ಅದು ಒಪ್ಪಿತ್ತು. ಅವ್ಯಕ್ತವು ವ್ಯಕ್ತವನ್ನು ಅತೀಂದ್ರಿಯವು ಇಂದ್ರಿಯಾನುಮೇಯವನ್ನು, ಅನಂತವು ಸಾಂತವನ್ನು ಯಾವಾಗಲೂ ಮುತ್ತಿರುವದೆಂಬದನ್ನು ಅದು ತಿಳಿದಿತ್ತು. ಮಾನವ್ಯವನ್ನು ಮೀರಿ, ಮಾನವನು ದಿವ್ಯನಾಗಬಹುದೆಂಬದನ್ನು ಭಾರತವು ಕಂಡಿತ್ತು; ಅದರ ನೆಳಲನ್ನೀಗ ಯುರೋಪವು ಮಸ-ಮಸಕಾಗಿ ಕಾಣಹತ್ತಿದೆ. ಮಾನವನ ಹಿಂದೆ ದೇವಕೋಟಿಯನ್ನು, ದೇವಕೋಟಿಯ ಹಿಂದೆ ದೇವದೇವನನ್ನು, ದೇವದೇವನ ಹಿಂದೆ ಅಗಾಧ ಅನಂತತ್ತ್ವವನ್ನು ಅದು ನೋಡಿತ್ತು; ಭೂರ್ಲೋಕದ ಮೇಲೆ ಭುವರ್ಲೋಕವನ್ನೂ, ಭುವರ್ಲೋಕದ

ಮೇಲೆ ಸ್ವರ್ಲೋಕವನ್ನೂ, ಇವೆಲ್ಲವುಗಳ ಮೇಲೆ ಒಳದಿರುಳಿನ ತಿಳಿಬೆಳಕನ್ನೂ ಅದು ಕಣ್ಣಾರೆ ಕಂಡಿತ್ತು. ಅಂತೇ ಭೀತಿಯನ್ನು ಬೆದರಿಸುವ, ಬಡತನವನ್ನು ಓಡಿಸುವ ವಿಜ್ಞಾನದ ಮಹಾಬಲದಿಂದ ಆರ್ಯರು ಸಾರಿದರು:— ಇಚ್ಛಾಶಕ್ತಿ: ತಮಾತ್ರುಮಾರಿ, ಮಾನವನು ಮನವನ್ನು ಗೆದ್ದು, ಆತ್ಮತೀರ್ಥದಲ್ಲಿಮಿಂದು, ದೇವನಾಗಬಹುದು; ದೇವ-ದೇವನಾಗಬಹುದು; ಬ್ರಹ್ಮಸಾಯುಜ್ಯವನ್ನು ಪಡೆಯಬಹುದು—ಎಂದು ಹೇಳಲಿಕ್ಕೆ ಅವರು ಹೆದರಲಿಲ್ಲ. ಇಷ್ಟೊಂದು ಬಿಡಲಿಲ್ಲ;—ಭಗೀರಥ ಪ್ರಯತ್ನದಿಂದ ಸ್ವರ್ಗಂಗೆಯನ್ನು ತ್ರಿಪಥಗಂಗೆಯನ್ನಾಗಿ ಮಾಡಿದರು. ಆದ್ದರಿಂದಲೇ ಅನಾದಿ-ಬುನಾದಿ ಕಾಲದಿಂದ ಈ ಆತ್ಮನಿಷ್ಠೆ, ಈ ಗಹನ ವಿಚಾರಶಕ್ತಿ, ಈ ಮುಗಿಲು ಮುದ್ದಿಡುವ ಹಂಬಲ, ಈ ಅಜೇಯವಾದ ಧರ್ಮಜಿಜ್ಞಾಸೆ, ಈ ಭಾವನಾಲೋಲುಪತೆ, ಈ ತತ್ತ್ವ-ಕಲಾ-ಪ್ರೀತಿ ಇವೆಲ್ಲ ಆರ್ಯರ ಮನೋಭೂಮಿಯಲ್ಲಿ ಬೇರು ಬಿಟ್ಟಿರುತ್ತವೆ.

ಆದರೆ ಇಷ್ಟರಿಂದಲೇ ಆರ್ಯಮನೋಧರ್ಮದ ಪೂರ್ಣಜ್ಞಾನವಾಗದು. ಬುಡವಿಲ್ಲದ ಗುಡ್ಡಗಳಿರದಂತೆ, ತಳವಿಲ್ಲದ ಆಧ್ಯಾತ್ಮವಿಲ್ಲ.

---

# ಧರ್ಮವೀರ ಶ್ರೀ ಸ್ವಾಮೀ ಶ್ರದ್ಧಾನಂದರು.

ಸತ್ವಶಾಲಿಯು ತಾನು ಸತ್ತನೆಂದೆನಬೇಡ (ಸರ್ವಜ್ಞ)

ಯಾವ ಮಹಾತ್ಮನು ಧರ್ಮಧ್ವಜವನ್ನು ಕೈಯಲ್ಲಿ ಹಿಡಿದು, ತನ್ನ ಜೀವದ ಹಂಗು ತೊರೆದು, ಹಿಂದುಧರ್ಮದ ಪುನರುಜ್ಜೀವನ ಕಾರ್ಯವನ್ನು ನಡೆಸಿದ್ದನೋ, ಯಾವ ಮಹಾತ್ಮನು ಸತ್ಯಾಗ್ರಹದ ಧ್ವಜವನ್ನು ಹಿಡಿದು ಅಧಿಕಾರಿಗಳ ಗರ್ವವನ್ನು ಅಡಗಿಸಿದನೋ, ಯಾವ ಮಹಾತ್ಮನು ತನ್ನ ತನುಮನಧನಗಳನ್ನು ರಾಷ್ಟ್ರಕ್ಕಾಗಿ ಅರ್ಪಿಸಿ ಭಾರತೀಯತರುಣರಿಗೆ ರಾಷ್ಟ್ರಧರ್ಮವನ್ನು ಉಪದೇಶಿಸಿದ್ದನೋ, ಯಾವ ಮಹಾತ್ಮನು ಹಿಂದುವಾಗಿದ್ದರೂ ಮುಸಲ್ಮಾನರ ಪವಿತ್ರಸ್ಥಾನವಾದ ಜುಮ್ಮಾಮಶೀದಿಯ ವ್ಯಾಸಪೀಠವನ್ನಲಂಕರಿಸಿ, ಮುಸಲ್ಮಾನರಿಗೆ ಧರ್ಮೋಪದೇಶವನ್ನಿತ್ತನೋ, ಇಂಥ ಮಹಾತ್ಮನನ್ನು ಒಬ್ಬ ಮುಸಲ್ಮಾನ ತಲೆತಿರುಕನು ಕೊಲೆಮಾಡಿದ್ದನ್ನು ಕಂಡು, ಹಿಂದುಸ್ಥಾನದ ಹಿಂದುಮುಸಲ್ಮಾನ ಮೊದಲಾದ ಎಲ್ಲ ಸಮಾಜದ ಮುಖಂಡರಿಗೆ ಅತ್ಯಂತ ದುಃಖವಾಗಿದೆ, ಸ್ವಾಮಿಗಳ ಕೊಲೆಯಿಂದ ಹಿಂದುಗಳ ಅತ್ಯಂತ ಹಾನಿಯಾದುದಲ್ಲದೆ, ರಾಷ್ಟ್ರದ ಹಾಗೂ ರಾಜಕಾರಣದ ದೃಷ್ಟಿಯಿಂದಲೂ ಹಿಂದುಸ್ಥಾನಕ್ಕೆ ಸಿಡಿಲು ಬಡಿದಂತಾಗಿದೆ. ಪ್ರತಿಯೊಬ್ಬ ಮುಂದಾಳುವಿಗೆ ದಿಕ್ಕುಗಾಣದಾಗಿದೆ. ಕಾಲಪುರುಷನ ದವಡೆಯೊಳಗೆ ಸಿಕ್ಕು ನುಚ್ಚುನುರಿಯಾಗದ ಮಾನವರು ಇರುವರೇ? ನಿರ್ದಯನಾದ ಕಾಲಪುರುಷಾ! ನಿನ್ನ ಭವಿಷ್ಯತ್ಕಾಲದ ಉದರದೊಳಗೆ ಎಂಥ ಭಯಂಕರವಾದ ಮನಃಸಂಕಲ್ಪಗಳಿವೆಯೆಂಬುದನ್ನು ತಿಳಿಯು

ವದು ಅಸಾಧ್ಯವಾಗಿದೆ. ಸ್ವಾಮಿಗಳು ಡಾ. ಅನ್ಸಾರಿಯವರ ಶುಶ್ರೂಷೆಯಿಂದ ನಿಸ್ಸ ನಗರದಿಂದ ಮರುಳಿರಲು, ಅಬದುಲ್ ರಶೀದನೆಂಬ ಕೊಲೆಗಡಕನ ರೂಪದಿಂದ ಎದುರು ನಿಂತಿಯಾ! ಧಿಕ್ಕಾರವಿರಲಿ, ನಿನ್ನ ಈ ಹೇಡಿತನಕ್ಕೆ! ವೀರನಿಗೆ ತಕ್ಕ ಮರಣವನ್ನಿತ್ತು ದಕ್ಕೆ ರಶೀದ, ನಿನ್ನ ಆಭಾರಮನ್ನಿಸುವದು ಅಗತ್ಯವಿದೆ; ಇರಲಿ, ಭಾರತೀಯತರುಣರೇ, ಈ ಧರ್ಮವೀರನ ಚರಿತ್ರೆಯನ್ನು ಮನನಮಾಡುವದು ಪ್ರತಿಯೊಬ್ಬನ ಕರ್ತವ್ಯವಲ್ಲವೇ!

(೨) ಶ್ರದ್ಧಾನಂದರ ಮೊದಲಿನ ಹೆಸರು ಲಾಲಾಮುನಸೀರಾಮ. ಇವರು ಹುಟ್ಟಿದ ಊರು ಜಲಂದರ ಪಟ್ಟಣವು. ೧೮೫೬ನೇ ಇಸ್ವಿಯಲ್ಲಿ ಕ್ಷತ್ರಿಯಕುಲದಲ್ಲಿ ಜನಿಸಿದರು. ಇವರು ವಿದ್ಯಾರ್ಥಿದೆಶೆಯಲ್ಲಿರುವಾಗಲೇ ಇವರ ತಂದೆಯು ತೀರಿಕೊಂಡರು. ಮನೆಯ ಭಾರವೆಲ್ಲವು ಮೈಮೇಲೆ ಬಿದ್ದಿತು. ಕೊತವಾಲಿ ಎಂಬಲ್ಲಿ ನೌಕರಿಯನ್ನು ಹಿಡಿದರು. ಸ್ವಾತಂತ್ರ್ಯಪ್ರಿಯರಾದ ಮುನಸೀರಾಮರಿಗೆ ನೌಕರಿಯು ಬಗೆಹರಿಯಲಿಲ್ಲ. ಕೂಡಲೇ ವಕೀಲಿಯ ಅಭ್ಯಾಸವನ್ನು ಮಾಡಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಜಲಂದರದಲ್ಲಿ ಬಂದು ವಕೀಲಿಯನ್ನು ಪ್ರಾರಂಭಮಾಡಿದರು. ಬೆಲ್ಲವಿದ್ದಲ್ಲಿ ನೊಣಗಳು ಬಂದು ಮುಕುರುವಂತೆ, ಮುನಸೀರಾಮರ ಸುತ್ತಲೂ ಜನರು ನೆರೆಯಹತ್ತಿದರು. ಅಪ್ರತಿಮಬುದ್ಧಿಯುಳ್ಳವರಾದ ಮುನಸೀರಾಮರು ಸ್ವಲ್ಪ ದಿನಗಳಲ್ಲಿಯೇ ಒಳ್ಳೇ ಪ್ರಸಿದ್ಧಿಗೆ ಬಂದರು.

(೩) ಹಿಂದುಗಳ ಧಾರ್ಮಿಕ ಹಾಗು ಸಾಮಾಜಿಕ ಅವನತಿಯು, ಮುನಸೀರಾಮರಲ್ಲಿ ಧಾರ್ಮಿಕಕ್ರಾಂತಿಯನ್ನುಂಟುಮಾಡಿತು. ಅವರು ವಿಚಾರಾಂತ್ಯದಲ್ಲಿ ಆರ್ಯಸಮಾಜಕ್ಕೆ ಸೇರಿಕೊಂಡರು. ವೀರವೃತ್ತಿಯು ಎಲ್ಲಿದ್ದರೇನು ? ಅದು ತನ್ನ ಪ್ರಭಾವವನ್ನು ತೋರಿಸಿದೆ ಬಿಡುವದೇ ? ಅದು ಸುಧಾರಣಾರೂಪದಿಂದ ಹೊರಬಿದ್ದಿತು. ಸ್ತ್ರೀಸಮಾಜದ ಅವನತಿಯನ್ನು ಕಂಡು ಕಳವಳಗೊಂಡು ಸ್ತ್ರೀಶಿಕ್ಷಣದ ಕಾರ್ಯವನ್ನು ಕೈಕೊಂಡರು. ಕೂಡಲೇ ಪಂಜಾಬದಲ್ಲೆಲ್ಲ ಸ್ತ್ರೀಶಿಕ್ಷಣಾಲಯಗಳು ಹೊರಟವು. ಎಲ್ಲಿ ನೋಡಿದಲೆಲ್ಲ ಸ್ತ್ರೀಶಿಕ್ಷಣ ಕೋಲಾಹಲವನ್ನೆಬ್ಬಿಸಿದರು. ಇದರಿಂದ ಸ್ತ್ರೀಶಿಕ್ಷಣಕ್ಕೆ ಬಹಳ ಕಳೆಯೇರಿತು.

ಪಂಜಾಬದಲ್ಲಿಯ ಮುಸಲ್ಮಾನರ ಪ್ರಾಬಲ್ಯವನ್ನೂ, ಹಿಂದೂಗಳ ಹೇಡಿತನವನ್ನೂ ಕಂಡು ಇವರ ಮನಸ್ಸು ಮರುಗತೊಡಗಿತು. ಹಿಂದುಗಳ ಧಾರ್ಮಿಕ ಹಾಗು ಸಾಮಾಜಿಕ ಸುಧಾರಣೆಗಳಾಗಬೇಕಾದರೆ, ವೈದಿಕಧರ್ಮದ ದಿವ್ಯತತ್ವಗಳನ್ನು ಹಿಂದುಗಳಿಗೆ ತಿಳಿಸಿದ ಹೊರ್ತು ಗತ್ಯಂತರವಿಲ್ಲವೆಂದು ಅವರಿಗೆ ಅನಿಸಹತ್ತಿತು. ಅದೇ ಕಾಲಕ್ಕೆ ಆರ್ಯಸಮಾಜಸ್ಥಾಪಕರಾದ ಶ್ರೀದಯಾನಂದರು ದೇಶದಲ್ಲಿ ವೈದಿಕಧರ್ಮದ ಪುನರುಜ್ಜೀವನಕ್ಕಾಗಿ, ಗುರುಕುಲಗಳನ್ನು ಸ್ಥಾಪಿಸಬೇಕೆಂದು ಉಪದೇಶಿಸುತ್ತಿದ್ದರು. ಈ ಉಪದೇಶವು ಮುನಸೀರಾಮರ ಮನಸ್ಸಿನ ಮೇಲೆ ವಿಲಕ್ಷಣವಾದ ಪರಿಣಾಮವನ್ನುಂಟು

ಮಾಡಿತು. ಕೂಡಲೇ ಮುನಸೀರಾಮರು ಆರ್ಯಸಮಾಜದವರ ಸಭೆ ಕೂಡಿಸಿದರು. ಆದರೆ ಅವರು ೩೦ ಸಾವಿರ ರೂಪಾಯಿಗಳು ಕೂಡಿದ ಹೊರ್ತು, ಗುರುಕುಲವನ್ನು ತೆಗೆಯುವದು ಅವ್ಯವಹಾರ್ಯವೆಂದು ನಿರ್ಣಯಿಸಿದರು. ಕೂಡಲೇ ಮುನಸೀರಾಮರು ವಕೀಲಿಗೆ ಶರಣಹೊಡೆದು ೩೦ ಸಾವಿರ ರೂಪಾಯಿಗಳನ್ನು ಕೂಡಿಸಿದ ಹೊರ್ತು ಮನೆಯ ಕಟ್ಟೆಯನ್ನು ಹತ್ತುವದಿಲ್ಲೆಂದು ಪ್ರತಿಜ್ಞೆಗೈದು ಹೊರಬಿದ್ದು, ಹಾಹಾ ಅನ್ನುವ ಪುಲ್ಲಿಯೇ ದುಡ್ಡು ಕೂಡಿಸಿದರು. ೧೯೦೧ನೇ ಇಸ್ವಿಯಲ್ಲಿ ಹರಿದ್ವಾರದ ಬಳಿಯಲ್ಲಿ ಗಂಗಾತೀರದ ಮೇಲಿರುವ ಕಾಂಗಡಿ ಎಂಬ ಸ್ಥಳದಲ್ಲಿ ಗುರುಕುಲವನ್ನು ಸ್ಥಾಪಿಸಿದ್ದಲ್ಲದೆ, ಸ್ವತಃ ಅಧ್ಯಾಪಕಕಾರ್ಯವನ್ನು ಕೈಕೊಂಡರು. ಈ ರೀತಿಯಿಂದ ಮುನಸೀರಾಮರು ಗುರುಕುಲವನ್ನು ಸ್ಥಾಪಿಸಿ ಹಿಂದುಗಳ ಸಂಘಟನಕಾರ್ಯವನ್ನು ಕೈಕೊಂಡದ್ದನ್ನೂ ಅವರ ಕರ್ತೃತ್ವಶಕ್ತಿಯನ್ನೂ ಕಂಡು, ಪಂಜಾಬ ಸರಕಾರದ ಹಾಗು ಮುಸಲ್ಮಾನರ ವಕ್ರದೃಷ್ಟಿಯು ಅವರ ಮೇಲೆ ಬಿದ್ದಿತು. ಮುನಸೀರಾಮರು ಗುರುಕುಲವಲ್ಲಿಯೇ ಕುಳಿತರೂ ಪಂಜಾಬದಲ್ಲೆಲ್ಲ ಅವರ ಕೀರ್ತಿಯು ಹಬ್ಬಿತು. ಬರಬರುತ್ತ ಗುರುಕುಲದಿಂದ ಹೊರಬಿದ್ದ ತರುಣರು ದೇಶದಲ್ಲೆಲ್ಲ ತಮ್ಮ ಮತಪ್ರಚಾರವನ್ನು ನಡಿಸಿದರು. ಈ ಕಾಲಕ್ಕೆ ಮುನಸೀರಾಮರಿಗೆ, ಮಹಾತ್ಮಾ ಎಂಬ ಬಿರುದು ಜನರಿಂದ ಕೊಡಲ್ಪಟ್ಟಿತು.

ಗುರುಕುಲವು ವ್ಯವಸ್ಥಿತವಾಗಿ ನಡೆದ ಕೂಡಲೇ ಮಹಾತ್ಮಾ ಮುನಸೀರಾಮರ ದೃಷ್ಟಿಯು ಅಸ್ಪೃಶ್ಯೋದ್ಧಾರದ ಕಡೆಗೆ ಒಲಿಯಿತು. ಆಗ ಅವರು ದಲಿತೋದ್ಧಾರ ಎಂಬ ಸಂಸ್ಥೆಗಳ ಮುಖಾಂತರವಾಗಿ ಅಸ್ಪೃಶ್ಯೋದ್ಧಾರದ ಕಾರ್ಯವನ್ನುನಡಿಸಹತ್ತಿದರು. ಮಹಾತ್ಮಾ ಮುನಸೀರಾಮರು ರಾಜಕಾರಣದಲ್ಲಿ ಬೀಳದಿದ್ದರೂ ೧೯೦೭ ರ ಆಂದೋಲನದ ಕಾಲದಲ್ಲಿ, ಸರಕಾರದ ವಕ್ರದೃಷ್ಟಿಯು ಆರ್ಯಸಮಾಜದ ಮೇಲೆ ಬಿದ್ದಿತು. ಮುನಸೀರಾಮರು ಆರ್ಯಸಮಾಜದ ತತ್ವಗಳನ್ನು ಬರೆದು ಸರಕಾರದ ತಪ್ಪುತಿಳವಳಿಕೆಯನ್ನು ದೂರಮಾಡಿದರು.

ಮಹಾತ್ಮಾ ಮುನಸೀರಾಮರು, ಮುಂದೆ ೧೯೧೭ರಲ್ಲಿ ಸನ್ಯಾಸವನ್ನು ಸ್ವೀಕರಿಸಿದರು. ಅಂದಿನಿಂದ ಸ್ವಾಮೀ ಶ್ರದ್ಧಾನಂದರೆಂಬ ಹೆಸರಿನಿಂದ ಪ್ರಸಿದ್ಧರಾದರು. ಶ್ರದ್ಧಾನಂದರು ಹೇಗೆ ವೀರಧರ್ಮಾಭಿಮಾನಿಗಳೋ, ಹಾಗೆಯೇ ಜಾಜ್ವಲ್ಯವಾದ ದೇಶಾಭಿಮಾನಿಗಳು. ೧೯೧೯ರಲ್ಲಿ ಮಹಾತ್ಮಾ ಗಾಂಧಿಯವರು ಸತ್ಯಾಗ್ರಹವನ್ನು ಪ್ರಾರಂಭಮಾಡಿದ ಕೂಡಲೇ ಅದನ್ನು ಎತ್ತಿ ಹಿಡಿದು, ತೋಫಿನ ಬಾಯಿಗೆ ತಮ್ಮ ಎದೆಯನ್ನು ಒಡ್ಡಿ ಸರಕಾರವನ್ನು ಎದೆಗೆಡಿಸಿದರು. ಗಂಡುಗಲಿಗಳೆಂದು ತೋರಿಸಿದರು !

ಜಾಲಿಯಾನವಾಲಾಬಾಗದಲ್ಲಿ ಡಾಯರನು ಮಾಡಿದ ಕೊಲೆಯಿಂದ ಕೆಂಗೆಟ್ಟು ಕಂಗಾಲಾದ ಪಂಜಾಬಿಗಳನ್ನು ಹುರಿದುಂಬಿಸಿ ಧೈರ್ಯಗೊಟ್ಟು ಅಮೃತಸರ ಕಾಂಗ್ರೆಸನ್ನು ಕೂಡಿಸಿ ಡಾಯರಶಾಹಿಗೆ ಉತ್ತರ ಕೊಟ್ಟ ಗಂಡುಗಲಿಗಳೂ ಇವರೇ !

ಶ್ರದ್ಧಾನಂದರು ಸ್ವಧರ್ಮದ ಸಲುವಾಗಿ ಎಷ್ಟು ಹೆಣಗುತ್ತಿದ್ದರೋ, ಅಷ್ಟೇ ಸ್ವಾತಂತ್ರ್ಯದ ಸಲುವಾಗಿಯೂ ಪ್ರಯತ್ನಿಸುತ್ತಿದ್ದರು. ಹಿಂದೂಮುಸಲ್ಮಾನರ ಐಕ್ಯಕ್ಕಂತೂ ಅವರು ಜೀವಕೊಡುತ್ತಿದ್ದರು. ತಾವು ಸ್ವಧರ್ಮದ ಸಲುವಾಗಿ ಹೇಗೆ ಅಭಿಮಾನಪಡುತ್ತಿದ್ದರೋ ಹಾಗೆಯೇ ಪರಧರ್ಮದ ವಿಷಯವಾಗಿಯೂ ಅವರಿಗೆ ಆದರವಿರುತ್ತಿತ್ತು. ಆದ್ದರಿಂದಲೇ ಮುಸಲ್ಮಾನರ ಖಿಲಾಫತಚಳವಳಿಯನ್ನು ಎತ್ತಿ ಹಿಡಿದರು. ಇತಿಹಾಸಪ್ರಸಿದ್ಧವಾದ ಜುಮ್ಮಾಮಸೀದಿಯಲ್ಲಿ ವ್ಯಾಸಪೀಠವನ್ನಲಂಕರಿಸಿ ಮುಸಲ್ಮಾನರಿಗೆ ಉಪದೇಶಮಾಡುವ ಬಹುಮಾನವು ಸ್ವಾಮಿಯವರಿಗೆ ದೊರೆಯಿತು. ಇದರಂತೆಯೇ ಶೀಖರಧರ್ಮಯುದ್ಧದಲ್ಲಿ ಧುಮುಕಿ, ೬೦ ವರ್ಷದ ಮುದುಕರು ೧ವರ್ಷದ ಸಶ್ರಮಶಿಕ್ಷೆಯನ್ನು ಅನುಭವಿಸಿದರು. ಜೇಲಿನಿಂದ ಮರಳಿ ಬಂದಬಳಿಕ ಅಸಹಕಾರವು ಹಿಮ್ಮೆಟ್ಟಿದ್ದನ್ನೂ ಮುಸಲ್ಮಾನರು ಮಲಬಾರದಲ್ಲಿ ನಡೆಸಿದ ಅತ್ಯಾಚಾರವನ್ನೂ ಕಂಡು, ಶ್ರದ್ಧಾನಂದರು ಆರ್ಯಸಮಾಜದ ತಮ್ಮ ಮೊದಲಿನ ಶುದ್ಧೀಚಳವಳಿಯನ್ನು ಪ್ರಾರಂಭಮಾಡಿದರು. ಅಸ್ಪೃಶ್ಯೋದ್ಧಾರದ ಕಾರ್ಯವನ್ನು ಇಮ್ಮಡಿ ಉತ್ಸಾಹದಿಂದ ಮುಂದರಿಸಿದರು. ಇದರಿಂದ ಮುಸಲ್ಮಾನರ ಬಲಿಗೆ ಬಿದ್ದು ಮುಸಲ್ಮಾನನಾಗುವ ಪ್ರಸಂಗ ತಪ್ಪಿತು. ಮನಸ್ಸಿಲ್ಲದೆ ಜುಲುಮೆಯಿಂದ ಮುಸಲ್ಮಾನರಾದವರನ್ನು ಈ ಚಳವಳಿಯಿಂದ ತಿರುಗಿ ತಕ್ಕೊಳ್ಳುವ ಮಾರ್ಗವು ತೆರೆಯಲ್ಪಟ್ಟದ್ದರಿಂದ ಹಿಂದುಸಮಾಜಕ್ಕೆ ನವಶಕ್ತಿಯುಂಟಾಯಿತು.

ಶ್ರದ್ಧಾನಂದರು ಮಾತಿನ ಮಲ್ಲರಲ್ಲ. ಕಾರ್ಯಕರ್ತೃಗಳು ಶುದ್ಧಿಚಳವಳಿಗಾಗಿ ಬದ್ಧಕಂಕಣರಾಗಿ, ಹಿಂದುಸ್ಥಾನದಲ್ಲೆಲ್ಲ ವಿಲಕ್ಷಣವಾದ ಚಳವಳಿಯನ್ನು ನಡಿಸಿದರು. ಆಗ್ರಾ ಸಮೀಪದಲ್ಲಿರುವ ಮಲಿಕಾನಾ-ರಜಪೂತರು ಅರ್ಧಮುಸಲ್ಮಾನರಾಗಿ ಇದ್ದುದನ್ನು ಕಂಡು ಅವರನ್ನೆಲ್ಲ ಹಿಂದು ಧರ್ಮದಲ್ಲಿ ತೆಗೆದುಕೊಂಡರು. ಈ ಕಾರ್ಯದಿಂದ ಮುಸಲ್ಮಾನರ ತಲೆತಿರುಗಿತು. ನಿನ್ನನ್ನು ಕೊಲ್ಲುವೆವೆಂದು ಬೆದರಿಕೆಯನ್ನು ಹಾಕಹತ್ತಿದರು. ಆದರೂ ಶ್ರದ್ಧಾನಂದರವರು ತಮ್ಮ ಶಿರಃಕಮಲವನ್ನು ಕೈಯಲ್ಲಿಹಿಡಿದು ಶುದ್ಧಿಚಳವಳಿಯನ್ನು ಧೈರ್ಯದಿಂದ ಸಾಗಿಸಿದರು. ಅನೇಕತರದ ಆರೋಪಗಳನ್ನು ಹಾಕಿದರು. ಆದರೆ ಅದರೊಳಗಿಂದ ಪಾರಾದರು. ಹೀಗೆ ಶ್ರದ್ಧಾನಂದರು ಕೊನೆಗೆ ಧರ್ಮಯುದ್ಧದಲ್ಲಿಯೇ ಹೋರಾಡುತ್ತ, ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ವೀರಮರಣವನ್ನು ಪಡೆದು ೧೯೨೬ನೇ ಡಿಶಂಬರದಲ್ಲಿ ಧರ್ಮವೀರರೆಂದು ಕೀರ್ತಿವಂತರಾದರು.

ಉಜ್ವಲವಾದ ದೇಶಭಕ್ತರೂ ದೇಶದ ಏಕನಿಷ್ಠ ಸೇವಕರೂ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಗಂಡುಗಲಿಗಳೂ ಅಸ್ಪೃಶ್ಯಸಮಾಜೋದ್ಧಾರಕರೂ ಜಾಜ್ವಲ್ಯಮಾನ ಹಿಂದೂಧರ್ಮೋಪದೇಶಕರೂ ಆದ ಶ್ರದ್ಧಾನಂದರ ಆತ್ಮವು ಭಾರತೀಯ ತರುಣರಲ್ಲಿ ಉತ್ಸಾಹವನ್ನೀಯಲೆಂದೂ ಅವರ ಆತ್ಮಕ್ಕೆ ಪರಮಾತ್ಮನು ಶಾಂತಿಯನ್ನೀಯಲೆಂದೂ ಬೇಡಿಕೊಳ್ಳುತ್ತೇವೆ.

ಓಂ ನಲ್

# ಸ್ವಧರ್ಮ

॥ ಜಯಂ ಭದ್ರಂ ಶುಭಂ ಮಂಗಲಮ್ ॥

ವರ್ಷ.-೩ } ಶಕೆ ೧೮೪೮ ಅಕ್ಷಯ ಸಂ.-ಪುಷ್ಯ { ತಿಂ - ೧೦.

## 'ಮಮ'-ತೆ.

( ವಾರ್ಧಿಕಾಧರ್ಂಗಳ್ )

ಎಳಕಿನಲಿ ಬೆಳಗೆಯುಲಿ । ತಿಳಿಕೊಂಡೊ ತಿಳಿಯದೆಯೊ ।
ಎಳೆಯ ಬೆಳಕಿನ ಸೆಳವು । ಸೆಳೆಯುತಿರೆ ಹೊಳಕರಿಸಿ ।
ಕಳೆದೆನ್ನೈ ದಿನಗಳನು । ಹೊಳೆವ ಹಲಕೆಲನೆಲ್ಲ—
" ಎನ್ನವಿವು ಎನ್ನವೆ " ಂದು ॥ ೧ ॥

ಎಳಕಿನೆಳೆ ಬೀಜವೇ । ಮೊಳೆತು ಮರವಾದಂತೆ ।
ತಿಳಿಯಾದ ತಿಳಿಯಿಂದು । ಬೆಳೆದೊಂದು ಕಳೆಯಾಗಿ ।
ಹೊಳೆವ ಬೆಳಕಿನ ಸರಿಯು । ಸುಳಿಯಲ್ಲಿ ಸುಳಿದಾಡಿ—
ಮಳೆಗರೆಯಿತೀ "ಮಮ–ತೆ"ಯಾ ॥ ೨ ॥

ಇಂಬಿಲ್ಲವೆಲ್ಲೆಲ್ಲಿ । ತುಂಬಿ ತುಳುಕುವುದೊಂದೆ ।
ಎಂಬೆನೇನೀ ವಿಶ್ವ । ತುಂಬಿತೀ "ಮಮ–ತೆ"ಯೊಳು ।
ಕಾಂಬ—ಕಾಣದುದೆಲ್ಲ । ಬೊಂಬೆಯಂದದಿ ಕುಣಿವು—
ದೆಂದೆನ್ನ•ಮಮ–ತೆಯಲ್ಲಿ ॥ ೩ ॥

ಮಮ–ತೆಯೊಡನೆಯೆ ಮೂಡಿ । ಘಮಘಮಿಸಿತಿನ್ನೊಂದು ।
ತಮವೆಂದು ಕೆಲವರೂ । ಭ್ರಮವೆಂದು ಕೆಲವರೂ ।
ತಮತಮಗೆ ತಿಳಿದಂತೆ । ದುಮುದುಮಿಸುತಿರುವರೈ—
ಈ " ಅಹಂ"ಕಾರವನ್ನು ॥ ೪ ॥

ಅಳಿವೆನೆಂದೆಂಬೆನೇ । ಅಳಿಯದುಳಿಯಿತು–ಮತ್ತೆ– ।
ಕಳೆವೆನೆಂದೆಂಬೆನೇ । ಬೆಳೆದು ಬೆಳಗಿತು ತಾನೆ ।
"ಅಳಿದು ಬೀಜವೆ ಮೊಳೆತು । ಮೆಳೆಯಾಗಿ ಬೀಜಗಳ—
ಮಳೆಯನ್ನೆ ಸುರಿಸುವಂತೆ ॥ ೫ ॥

ಏನೆಂಬೆನಿಂದೆನಗೆ । ನಾನೆ ತೋರುತ್ತಿಹೆನು ।
ನಾದೆ ನಾನಾದೆನ್ನೈ । ನಾನೆಂಬ ದನಿಯಲ್ಲಿ ।
ಏನೇನು ತೋಚದೈ । ನಾನಲ್ಲದಿನ್ನೇನು—
ತಾನುಂಟೊ ವಿಶ್ವದಲ್ಲಿ! ॥ ೬ ॥

'ಮಮ–ತೆ'ಯಾಮಾಟದಿಂ । ಸಮನಿಪುದನೇನೆಂಬೆ? ।
'ತಮ'ವು ಉತ್ತಮವಾಯ್ತು । 'ಭ್ರಮ'ವು ಸಂಭ್ರಮವಾಯ್ತು ।
'ಮಮ–ತೆ' ಅಮಿತನಿಗಾಗಿ । "ಮಮತೆ"ಯಾಯಿತು ಮತ್ತೆ
**ಮಮತೆಯಿಂ ಸಮತೆಯಾಯ್ತು** ॥ ೭ ॥

—ಚೆನ್ನಮಲ್ಲ.

---

ಸವಿ:—"ನಾನು" ಎಂಬುದರ ಹೊಟ್ಟೆಯಲ್ಲಿ "ನನ್ನದು" ಎಂಬುದು ಹುಟ್ಟುವುದು. "ಮಮ"ಕಾರವು "ಅಹಂ"ಕಾರದ ಮಗು– "ನನ್ನದು" ಎಂಬುದು ನಚ್ಚಿಗೆ (ಪ್ರೀತಿಗೆ) ಆಧಾರವಿದ್ದಂತೆ, ಮಮತೆಗೆ ಮಮತ್ವವು ಆಧಾರ. ಮಮತ್ವದ ಗೊರಟೆಯೊಳಗೆ ಒಗರಿದ್ದರೂ ಮಮತೆಯು ಹಣ್ಣಿನಲ್ಲಿ ಸಿಹಿಯಿದೆ. ನಾನು ತಾನೆಂಬಹಂಕಾರವನ್ನು ಬಿಡುವದೆಂದರೆ ಒಗರನುಳಿದು ಸಿಹಿಯಾಗುವುದು. ಈ ಸಿಹಿಯು ಆ ಸಚ್ಚಿದಾನಂದದ ರುಚಿ. ಜೀವಜೀವದಲ್ಲಿಯೂ ಇದು ಇದೆ. ಬಡವ ಬಲ್ಲಿದನೆಂಬ ಭೇದವಿಲ್ಲಿಲ್ಲ. ಈ ಸಿಹಿಯು ಆ ಆನಂದಕ್ಕೆ ಹಾದಿ. ಇದೇ ಸಂಚಿಕೆಯಲ್ಲಿ ಮತ್ತೊಂಡೆಗೆ ಮುದ್ರಿತ "ಮಮತೆ"ಯೆಂಬ "ಹೊಳೆ–ಕಥೆ"ಯ ಹುರುಳಾದರೂ ಇದೆ.

---

# ಹೆಂಗರುಳು.

## ಚಿಕ್ಕ ಕಥೆ.

ಬರೆದವನು ವನಮಾಲಿಯು.

ಕಮಲಕ್ಕನನ್ನು ದೇಸಾಯಿ ರಾಮರಾಯರ ಮಗ, ರಂಗನಿಗೆ ಕೊಟ್ಟಿತ್ತು. ರಂಗ ನಿದೇವರ್ಷ ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ಎಲೆಲ್ಬಿ ಪರೀಕ್ಷೆಯನ್ನು ಕೊಟ್ಟು ಬ್ಯಾರಿಸ್ಟರ ಪರೀಕ್ಷೆಗೆ ಇಂಗೆಂಡಿಗೆ ಹೋಗುವದಾಗಿ ಗೊತ್ತುಮಾಡಿದ್ದ. ರಾಮರಾಯರೂ ಹಿಂದುಮುಂದು ನೋಡಿ ಒಪ್ಪಿದ್ದರೇನೋ ನಿಜ.

ಎಫ್. ಎ. ದಲ್ಲಿರುವಾಗಲೇ ರಂಗನ ಮದುವೆಯಾಗಿತ್ತು. ಮದುವೆಯಾದಾಗಲೇ ಕಮಲಕ್ಕನು ಬೆಳೆದುನಿಂತಿದ್ದಳು. ರಸಿಕನಾದ ರಂಗ ತನ್ನ ಸಂಸಾರದ ಸವಿಗನಸುಗಳನ್ನೆಷ್ಟೋ ಮೊದಲೇ ಕಟ್ಟಿಕೊಂಡಿದ್ದ. ಕಮಲಕ್ಕನಂಥ ಚೆಲುವೆಯೂ ಕಲಿತಂಥವಳೂ ತನಗೆ ಹೆಂಡತಿಯಾದುದು ಹೊನ್ನಿಗೆ ಹೊಳಪುಹಾಕಿದಂತಾಯಿತೆಂದು ಬಗೆದುಕೊಂಡ. ಕಮಲಕ್ಕನು ಮನೆಗೆ ಬರುವವರೆಗಂತೂ ಆತನ ಹರುಷ ಹಕ್ಕಿಯಾಗಿ ಹಾರುತ್ತಿತ್ತು. ಅವಳು ಮನೆಗೆ ಬಂದಮೇಲಂತೂ ಅದು ವಿಶ್ವದ ಅಂಚುಗಳನ್ನೆಲ್ಲ ಒಕ್ಕಲಿಕ್ಕಿ ಬಂತು.

ರಂಗ, ನಿಜವಾದ ಪ್ರೇಮಿ. ಆತನಿನ್ನೂ ಹುಡುಗ. ಅಂತೇ ಆತನ ಪ್ರೇಮವಿನ್ನೂ ಹಣ್ಣಿಗೊಳ್ಳುವದರಲ್ಲಿತ್ತು. 'ಹೆಂಡತಿಯೆಂದರೆ ಗೃಹಲಕ್ಷ್ಮಿ; ಆದಿದೈವತೆ. ಅವಳೆ ಜಗತ್ಪಾಲಕಳು; ಪ್ರಕೃತಿದೇವಿ; ಮನುಷ್ಯನ ಬಯಕೆಗಳನ್ನು ಕೊನರಿಸುವವಳು ಅವಳೆ; ಆತನೆದೆಯ ಗರ್ಭಗುಡಿಯ ನಿತ್ಯ ನಂದಾದೀಪವವಳು ' ಎಂದು ಮೊದಲಾಗಿ ಹುಚ್ಚು ಕಲ್ಪನೆಗಳೆಷ್ಟೋ ಅವನಲ್ಲಿ ಮನೆಮಾಡಿದ್ದವು. ಈ ಕಲ್ಪನೆಗಳ ಕೋಟಲೆಯ ಬಲೆಯಲ್ಲಿ ಸಿಕ್ಕು, ಆತನು ಜಗತ್ತಿನಿರುವಿನ ಬಗೆಗೆ ಕುರುಡನಾಗಿದ್ದನು. ಆತನೊಬ್ಬ ಅನುಭವವಿಲ್ಲದ ಅನುಭಾವಿ,—ಆದರ್ಶವಾದಿ. ಹಾಗೆಯೆ ಆತನು ಕಮಲಕ್ಕನನ್ನೇ ತನ್ನ ಗರ್ಭಗುಡಿಯ ಗದ್ದುಗೆಯಲ್ಲಿ ಕೂಡಿಸಿ ತಾನವಳ ಪೂಜಾರಿಯಾಗಿಬಿಟ್ಟಿದ್ದ.

ಕಮಲಕ್ಕನ ಸ್ವಭಾವವೇ ಬೇರೆ. ಮೊದಲಿನಿಂದಲೂ ಅವಳು ಬಣ್ಣ-ಬೆಡಗಿನ ಹುಡುಗಿ. ವಸ್ತ್ರವಡವೆಗಳ ಮೇಲೆ ಅವಳ ಪ್ರೀತಿ ಹೆಚ್ಚು. ಅವಳಾವಾಗಲೂ ತನ್ನ ಸಿಂಗರದಲ್ಲಿಯೇ ಗುಂಗಾಗಿರುವಳು. ತಿನಸುಣಿಸು ಮರೆತು ಕೂಡ ಉಡಿಗೆ ತೊಡಿಗೆಯ ಬೆಡಗಿನಲ್ಲೇ ಬೆರೆತು ಹೋಗುವಳು. ಚಿಕ್ಕಂದಿನಲ್ಲಿಯ ಅವಳ ಗೊಂಬೆಯಾಟದ ಸಡಗರವಷ್ಟಿಷ್ಟೆಂತಲ್ಲ. ತನಗಿಂತಲೂ ಹೆಚ್ಚಾಗಿಯೇ ಗೊಂಬೆಗಳನ್ನು ಸಿಂಗರಿಸುವಳು. ಅವಳ ಆಟದೋರಣವನ್ನೂ ವಸ್ತ್ರವಡವೆಗಳ ಕುದುರನ್ನೂ ಕಂಡು ಹಿರಿಯರೂ ಬೆರಳು ಕಚ್ಚಬಹುದು. ಅವಳೊಬ್ಬ ಚೆಲ್ಲಗಾರ್ತಿ, ಹೋದ ಹೋದಂತೆಲ್ಲ ತನ್ನ ಹೊನ್ನ-ಬೆಡ

ಗನ್ನು ಹಾದಿಗುಂಟ ಕೈಸೂರಿಮಾಡುವಳು. ಅವಳಿಗೆ ಕಟ್ಟುನಿಟ್ಟುಗಳಿಲ್ಲ. ಬಾಳುವೆಯ ಉಸುಬಿನಲ್ಲಿ, ಎಣೆಯಿಲ್ಲದ, ಕೊನೆಯಿಲ್ಲ; ಚಿನ್ನಾಟವಾಡುವ ಒಂದು ಕೌಸವನ್ನು ಅವಳಿಗೆ ಇದೆಲ್ಲ ಒಂದು ಸೊಗಸಿನಂತೆ; ಹರುಷದ ಹಬ್ಬ. ಅವಳ ಲೋಕದಲ್ಲಿ ಯಾವ ಒಡವೆಗಳಿಗೂ ಬೆಲೆಯಿಲ್ಲ. ನೀರಿನ ಆಳವನ್ನರಿಯದ ಹಾಳಿ-ಹಡಗಿನಂತೆ ಅವಳು ಈ ಬಾಳು-ಗಡಲಲ್ಲಿ ಸಿಕ್ಕತ್ತ ತೇಲುವಳು. ಅವಳಿಗೆ ಎಡೆತಡೆಗಳಿಲ್ಲ.

ಕಮಲಕ್ಕನಿಗೆ, ಬೆಡಗಿನೊಡನೆ ಸಹಜವಾದ ಬಿಂಕವೂ ಹೆಚ್ಚು. ತನ್ನದೆನ್ನುವ ಮಮತೆ ಅವಳನ್ನು ಮುತ್ತಿಕೊಂಡಿತ್ತು. ಅವಳು ತನ್ನ ಹೊರತು ಇನ್ನುಳಿದವರನ್ನು ಗಣನೆಗೆ ತರುವಂತೆ ಕಾಣಲಿಲ್ಲ. ಎಂದರೆ ಇನ್ನುಳಿದವರು ಅವಳ ಕಣ್ಣಿಗೆ ಕಾಣುತ್ತಲೆ ಇರಲಿಲ್ಲ. ಎಲ್ಲವೂ ತನಗಾಗಿಯೇ ಇದೆಯೆಂಬ ವಿಶ್ವವಾದವೇ ಅವಳ ತತ್ತ್ವ.

ಇಷ್ಟಾದರೂ ಕಮಲಕ್ಕ ಯಾವ ಬಗೆಯಿಂದಲೂ ದುರ್ಗುಣಿಯಲ್ಲವೆಂದು ಎ ಮಾಡಿ ಹೇಳಬಹುದು. ಅವಳು ಸರಲ ಸ್ವಭಾವದವಳು. ಮರೆಮೋಸಗಳ ಸುಳಿವನ್ನು ಯಳು. ಹೊಟ್ಟೆಯಲ್ಲಿ ಕೆಟ್ಟದ್ದನ್ನೆಂದೂ ಇಟ್ಟುಕೊಳ್ಳದವಳು. ಪರಪೀಡೆಯಾಗಲಿ, ಪರನಿಂದೆಯಾಗಲೀ ಅವಳಲ್ಲೆಡೆಗೊಂಡಿರಲಿಲ್ಲ. ಒಟ್ಟಾರೆ ಅವಳ ತನ್ನತನವು ತ ಮೇರೆಯನ್ನು ಮೀರಿರಲಿಲ್ಲ. ಅವಳಿಗೆ ತನ್ನದೆನ್ನುವವಷ್ಟೇ ತನಗೆ ಬೇಕೇ ಹೊರತು ಹೆರವರದನ್ನು ಎಳ್ಳಷ್ಟೂ ಹಾರೈಸಳು. ಅಂತೇ ಅವಳು ಎಂದೂ ಹೆರವರಿಗೆ ಕೇಡುಬಗೆ ದವಳಲ್ಲ. ಇಷ್ಟೇ ಅವಳ ಬಿಂಕಬೆಡಗಿನ ಒಲವಿನಲ್ಲಿ ಒಂದೆರಡು ಸುಗುಣಗಳೊತೆ ಅವಳ ದುರ್ಗುಣಗಳೂ ಮುಳುಗಿ ಹೋಗಿದ್ದವು.

ಗಂಡನ ಮನೆಗೆ ಬಂದ ಮೇಲಾದರೂ ಅವಳ ಈ ತರದ ಇರುವಿನಲ್ಲಿ ಹೆಚ್ಚು ಕಡಮೆಯಾಗಬಹುದೆಂದು ಎಲ್ಲರೂ ಬಗೆದಿದ್ದರು. ಆದರೆ ಅವಳ ಆ ಸ್ವಭಾವ ತೌ ಜೀವನದಲ್ಲಿಯೇ ಉಂಡು ಹೋಗಿದ್ದರಿಂದ ಅವಕ್ಕೆ ಏರಿಳಿತಗಳೆನ್ನುವ ಮಾತೇ ಗೊತ್ತಿ ಲಿಲ್ಲ. ಅದು ಎಂದಿನಂತೆ ಗಂಡನ ಮನೆಗೆಬಂದಮೇಲೂ ತಾನಿರುವಂತೆ ಇದ್ದೇ ಇದ್ದಿತು. ಕಮಲಕ್ಕನ ಈ ತರದ ನಡತೆ ರಂಗನಿಗೆ ಸರಿಬೀಳಲೊಲ್ಲದು. ಆತ ಸವಿಗಾತ. ಸರಸ ಸಲ್ಲಾಪಗಳಿಗೆ ಮೆಚ್ಚಿದವ. ಕಮಲಕ್ಕನೊಡನೆ ಚಿನ್ನಾಟವಾಡಬೇಕೆಂದು ಅವನ ಬಯಕೆ. ಅವನು ಅವಳ ಹೆರಳು ಜಗ್ಗುವದು, ಕೂದಲು ಗೂಡಲುಮಾಡುವದು, ಹಿಂದಿನಿಂದ ಬಂದು ಕಣ್ಣು ಮುಚ್ಚುವದು, ಕಳ್ಳತನದಿಂದ ತುರುಬಿನ ಗುಬ್ಬಿಯನ್ನು ಕಿತ್ತುಕೊಳ್ಳು ವದು ಅವಳ ಹೆಣ್ಗೆಯ ಒಡವೆಗಳನ್ನು ಮುಚ್ಚಿಡುವದು, ಇವೆಲ್ಲ ಆತನ ಏಕಾಂತದಾಟ ಗಳ ಮಾದರಿಗಳು. ಒಬ್ಬ ಹೆಣ್ಣು ಹುಡುಗಿ, ಅಣ್ಣ ತಂದುಕೊಟ್ಟ ಹೊಸ ಗೊಂಬೆ ಮಾಡಬಹುದಾದ ಬೆಡಗು-ಬಿನ್ನಾಣಗಳನ್ನೆಲ್ಲ ಕಮಲಕ್ಕನೊಡನೆ ಆತ ಮಾಡುತ್ತಿದ್ದ; ಇವು ಆವವೂ ಕಮಲಕ್ಕನಿಗೆ ಸರಿ ಬೀಳುತ್ತಿರಲಿಲ್ಲ. ಒಮ್ಮೊಮ್ಮೆ ರಂಗ, ತಾನೋದಿದ ಒಳ್ಳೊಳ್ಳೆ ಪುಸ್ತಕಗಳನ್ನು ಓದಲು ಕೊಡುತ್ತಿದ್ದ. ಅವನ್ನವಳು ಕಣ್ಣೆತ್ತಿಕೂಡ ನೋಡು ತ್ತಿರಲಿಲ್ಲ. ಒಮ್ಮೊಮ್ಮೆ ಆತನೇ ಓದಿ ತೋರಿಸಲು ಬಂದರೆ, ಅತ್ತೆಯವರು ಬಾರಿಸ

ರೆಂದು ಹೇಳಿ ಮೋರೆತಿರುವಿಕೊಂಡು ಹೋಗಿಬಿಡುವಳು. ಗಂಡನನ್ನೂ ಗಣನೆಗೆ ತಾರದ ಅವಳ ಈ ನಡತೆ ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿತು. ರಂಗನಿಗಂತೂ ತನ್ನ ಹೃದಯವನ್ನೆ ಕಿತ್ತಿ ತೆಗೆದಷ್ಟು ನೋವು ಆಗಹತ್ತಿತು. ಆತನ ಸವಿಗನಸುಗಳೆಲ್ಲ ಕಹಿಯಾಗಿ ಪರಿಣಮಿಸಹತ್ತಿದವು. ಆತನಿಗೆ ಬಾಳುವೆಯೆಲ್ಲ ಬರೀ ಬಯಲೆಂದು ತೋರ ಹತ್ತಿತು. ಒಗಟು ಒಡೆಯುವ ದಾರಿಯೇ ತೋರದಾಯಿತು.

ಬಡಿಗನ ಜಾಣತನವಿರುವದು—ಆತನು ಕೆತ್ತಿದ ಹಲವೊಂದು ಅಂದಚಂದದ ಕುಸುರುಗಳಲ್ಲಿಲ್ಲ. ಎಂದರೆ ಆ ಕುಸುರುಗಳಲ್ಲಿ ಇರುವದಿಲ್ಲವೇ ಇಲ್ಲವೆಂತಲ್ಲ; ಆದರೆ ಜಾಣ್ಮೆಯ ನಿಜವಾದ ಒರೆಯೆಂದರೆ ಆತನು ಕೂಡಿಸಿದ ಚಿಕ್ಕದೊಂದು ಕೂಲು. ಹಾಗೆಯೇ ಆ ಹಿರಿ-ಬಡಿಗ ಕಮಲಕ್ಕನಲ್ಲಿ ಕುಸುರುಗಳನ್ನು ಅಂದವಾಗಿ ಕೆತ್ತಿದ್ದನೇನೋ ನಿಜ. ಆದರೆ ಕೂಲು ಮಾತ್ರ ಸರಿಯಾಗಿ ಕೂಡಿಸಲಿಲ್ಲ. ಅಂತೆಯೇ ಇಷ್ಟೆಲ್ಲ ಅನರ್ಥ. ಇಷ್ಟೆಲ್ಲ ನೀರಸತೆ. ಅಂತೇ ರಂಗ ಕಮಲಕ್ಕನಿಗೆ ಕಾಲುಕಸವಾದ.

೨.

ಒಂದು ಹುಣ್ಣಿವೆಯ ಮುಚ್ಚಂಜೆ. ರಂಗ ತನ್ನ ಮನೆಯ ಮುಂದಿರುವ ಕೈ-ತೋಟದಲ್ಲಿ ಜೋಲು-ಕುರ್ಚಿಯಲ್ಲಿ ಬಿದ್ದುಕೊಂಡಿದ್ದ. ಆಗ ಕಮಲಕ್ಕನೇತಕ್ಕೊ ಹೊರಗೆ ಬಂದಳು. ಅವಳನ್ನು ಕಂಡು ರಂಗ "ಕಮಲಾ! ಸ್ವಲ್ಪ ಬಾರೇ ಇಲ್ಲಿ" ಎಂದು ಕರೆದು ಆತನ ಕರೆಯು ಅವಳಿಗೆ ಕೇಳಿಸಿತೋ ಇಲ್ಲೊ. ಗಿರ್ರನೆ ತಿರುಗಿ ಗಾಳಿಯಂತೆ ಒಳಗೆ ಹೋದಳು. ಬಾಗಿಲಲ್ಲಿರುವಾಗ ರಂಗ ಮತ್ತೊಮ್ಮೆ ಒದರಿದ "ಕಮಲಾ! ಕಮಲಾ!"

"ಏನು"

"ಅಪ್ಪನೆಲ್ಲಿ"

"ಪುರಾಣಕ್ಕೆ ಹೋದವರಿನ್ನೂ ಬಂದಿಲ್ಲ"

"ಇಲ್ಲಿ ಬಾರ, ತುಸು ಕೆಲಸವಿದೆ"

"ಅತ್ತೆಯವರು ಬರುವ ಹೊತ್ತಾಯಿತು. ಮನೆಯು ಕಸಗೂಡಿಸಬೇಕು. ಹರಟೆ ಹೊಡೆಯುತ್ತ ನಿಂತರೆ ಬಂದಮೇಲೆ ಏನಂದಾರು"

ಎಂದು ಗುಣುಗುಟ್ಟುತ್ತ ಕಮಲಕ್ಕ ಒಳಗೆ ಹೋದಳು.

ರಂಗನೊಂದು ನಿಟ್ಟುಸಿರು ಬಿಟ್ಟ. ಅದು ಕಮಲಕ್ಕನ ಎದೆಯೊಳಗೆ ಅನಿಸಿತೋ ಇಲ್ಲವೊ ಯಾರು ಬಲ್ಲರು! ಕಡೆಗೆ ಮಲಗಿದಲ್ಲಿಯೇ ರಂಗ ತನ್ನಲ್ಲಿಯೇ ಬಿಕ್ಕಿ ಬಿಕ್ಕಿ ಅಳಹತ್ತಿದನು. ಪ್ರಪಂಚದಲ್ಲಿ ಆತನ ನೋವಿನೆದೆಯನ್ನು ಸೈಪಿಡುವ ಪ್ರಾಣಿ ಒಂದಾದರೂ ಇದ್ದಿತೇ! ಎಷ್ಟೊ ಹೊತ್ತಿನ ಮೇಲೆ ಅಲ್ಲಿಂದೆದ್ದು ಒಳಗೆ ಬಂದ. ಕಮಲಕ್ಕ ದೇವರೆದುರಿಗೆ ದೀಪಹಚ್ಚಿಡುತ್ತಲಿದ್ದಳು.

"ಕಮಲಾ"

"ಏಕೆ"

"ಒಂದೇ, ಕೊನೆಯ ಮಾತು' ಬರುವದಿಲ್ಲವೇ, ಹಾಗಾದರೆ ನಾನು ಹೋಗಲೇ!"

ಕಮಲಕ್ಕನಿಗೇನೋ ಒಂದು ತರದ ನಡುಗು ಬಂದಂತಾಯಿತು. ಏನೇನೋ ತುಟಿಯಲ್ಲೇ ಮಾತಾಡುತ್ತ ಕೈಯಕೆಲಸಬಿಟ್ಟು ಎದ್ದು ನಿಂತಳು. ಮುಳುಗುವವನಿಗೆ ಹುಲ್ಲು ಆಸರವಾದಂತೆ ರಂಗಸಿಗೆ ಅಷ್ಟೇ ಸಾಕಾಯಿತು. ತಾನೇ ಮುಂಜರಿದು ಅವಳ ಕೈಹಿಡಿದು ಕೋಣೆಗೆ ಕರೆದೊಯ್ದ.

"ಕಮಲಾ"

" ....."

"ಕಮಲಾ"

"ಏನದು! ಮತ್ತೆ ಮತ್ತೆ ಕಮಲಾ! ಕಮಲಾ! "

ಹಾಗಾದರೆ ನನ್ನೊಡನೆ ಮಾತನಾಡುವದಿಲ್ಲವೇ."

"ಅದೇಕೆ ಆಡೇ ಆಡುತ್ತಿರುವೆನಲ್ಲ"

"ಕಮಲಾ, ನಿನಗೆ ಕಣ್ಣುಗಳಿವೆಯೋ!"

"ಅದೇಕೆ ನಾನೇನು ಕುರುಡಿಯೇನು!"

"ಹೌದು! ನನ್ನ ಮಟ್ಟಿಗಂತೂ ನೀನು ಕುರುಡಿಯೇ ಆಗಿರುವಿ. ಕಮಲಾ! ನಾನು ನಿನ್ನನದೆಷ್ಟು ಹಚ್ಚಿಕೊಂಡಿರುವೆ. ನೀನೊಬ್ಬಳಿದ್ದರೆ ನನಗಾವುದು ಬೇಡವೆಂದೆನ್ನುವೆ. ನೀನೆ ನನ್ನ ಸರ್ವಸ್ವವೆಂದು ತಿಳಿದಿರುವೆ. ನಿನ್ನನ್ನು ನನ್ನ ಎದೆಯ ಗುಡಿಯಲ್ಲಿಟ್ಟು, ನನ್ನ ದೈವತವೆಂದು, ನನ್ನ ಕರುಳನ್ನು ಹೂವಮಾಡಿ ನಿನ್ನ ಪಾದಪೂಜೆ ಮಾಡಲಿರುವೆ. ಕಮಲಾ! ನಿನಗಾಗಿ ನನ್ನೆದೆಯು ಬೆಳೆದಿಂಗಳನ್ನು ಕಂಡ ಕಡಲಂತೆ ಉಬ್ಬಿಬರುವದು! ನಿನ್ನಲ್ಲಿಯೇ ನನ್ನ ಸುಖವನ್ನು ಕಾಣಬೇಕೆಂದಿರುವೆ. ನಿನಗಾಗಿ ನಾನು ಇಷ್ಟೊಂದು ಹಂಬಲಿಸಿ ಹಾತೊರೆದು ಕರುಳು ಕೊರಗಿಸುತ್ತಿರುವವನ್ನು ಕಾಣದ ನೀನು ಕುರುಡಿಯಲ್ಲೇ! ನನ್ನ ಪ್ರೀತಿಹುಡಿಯಲ್ಲಿ ಹುಟ್ಟಿ ಕೂಡಿಸಿದಂತಾಯಿತು, ನೋಡು! ಕಮಲಾ! ದಿಟವಾಗಿ, ನೀವು—ಹೆಂಗಸರು—ಕಟುಕರು. ನಿಮ್ಮಲ್ಲಿ ಕಾರುಣ್ಯದ ಕಣವಾದರೂ ಇಲ್ಲ.

ಬಳ್ಳಿಯ ಜಯಕೆಯು ಬಲಿತು ಹೂಗೊಂಡಂತಿರುವ ಮಲ್ಲಿಗೆಯನ್ನು ತಟ್ಟನೆ ಹರಿದು ತಡೆಯಲ್ಲಿ ಮುಡಿದುಕೊಂಡು ಬಿಡುವಿರಿ ನಿಮ್ಮ ಬೆಡಗಿಗಾಗಿ! ಅದರ ಅಂದ ಚೆಂದ, ಸೊಬಗು—ಸೊಗಸು, ಆಶೆ—ಆಕಾಂಕ್ಷೆಗಳ ಅರಿವು ನಿಮಗಿರುವದೇ. ಅದನ್ನು ನಿಮ್ಮ ಮುಡಿಯಲ್ಲಿ ಬಿಗಿದು ಕಟ್ಟುವವನ್ನುಷ್ಟು ಬಲ್ಲಿರಿ. ಇರುವತನಕ ಅದು ನಿಮ್ಮ ಬೆಡಗನ್ನೆ ಬೀರಿ ಕಡೆಗೆ ಬಾಡಿ ಬಯಲಾಗಬೇಕು. ನಿಮ್ಮನ್ನು ನೆನೆನೆನೆಸಿ ನಮ್ಮ ಹರೆಯದೆಯ ಮೊಗ್ಗೆಯನ್ನು, ಪ್ರೇಮರಸವನ್ನೆರೆದು ಮುಗುಳಿಸಿ, ಅರಳಿಸಿ, ಕಡೆಗೆ ನಿಮಗೊಪ್ಪಿಸಿದರೆ ಅವನ್ನು ನಿಮ್ಮದೊಂದು ಬೆಡಗಿನೊಡವೆಯಾಗಿ ಮಾಡಿ ಬಿಡುವದೇ! ನಿನ್ನನ್ನೇ ನಂಬಿದ ನನ್ನ ಹೃದಯದ ಆಸೆಗಳನ್ನು ಮಣ್ಣುಗೂಡಿಸಬೇಡ! ಕಂಡಿಯಾ! ಕಮಲಾ! ಹರಕೆಹೊತ್ತವರಂತೆ ನಿನ್ನ ಮರುಕವನ್ನು ಕಾಯುತ್ತಿರುವೆ. ಇದಾವುದೂ ನಿನಗೆ ಕಾಣುತ್ತಿರುವುದಿಲ್ಲವೇ ಕಮಲಾ!"

“ಹೀಗೆಲ್ಲ ಎಂದರೇನು? ನನಗೆ ನಿಮ್ಮ ಮಾತಿನ ಅರ್ಥವೇ ಆಗಲಿಲ್ಲ.” ಹೊರಗೆ ಬಾಗಿಲು ಸಪ್ಪಳವಾಯಿತು. ಅತ್ತೆಯವರು ಬಂದರೆಂದು ಕಮಲಕ್ಕ ಎದ್ದುಹೋಗಿ ಬಿಟ್ಟಳು. “ಅಯ್ಯೋ”—! ಅಪ್ಪ ಹೊಡೆದನೆಂದು ಮಗುವು ಇನ್ನಾರ ಮುಂದೆ ಹೇಳಬೇಕು! ನೋವೇ ರಂಗನ ತಾಯಿ. ನಿಟ್ಟುಸಿರುವಳೇ ಅವಳ ಲಲ್ಲೆಗಳು. ತನ್ನ ನೋವಿನಲ್ಲೆ ತನ್ನ ಸುಖ-ಸಮಾಧಾನಗಳನ್ನು ಕಂಡುಕೊಳ್ಳಬೇಕು. ಕೊರಗುವವರಿಗೆ ಈ ನೋವು ಎಂಬವು ಅನಾಥ ಬಾಂಧವನಂತೆ.

ಹೊಸ್ತಿಲ ಹುಣ್ಣಿವೆಯ ಚಂದ್ರ ತನ್ನ ಹೊನ್ನನ್ನು ಮುಗಿಲುತುಂಬೆಲ್ಲ ಸೂರೆ ಮಾಡುತ್ತ ನಡೆದಿರುವ. ಕೈಕಾಗದ (Handbill) ಕ್ಕಾಗಿ ಓಡುವ ಮಕ್ಕಳಂತೆ ಚಿಕ್ಕೆಗಳು ಆತನ ಬೆನ್ನುಹತ್ತಿ ಗುಂಪುಗೂಡಿ ನಡೆದಿದ್ದವು. ಆಗ ಮಕ್ಕಳೋಟವನ್ನು ನೋಡುತ್ತ ಮನೆ ಬಾಗಿಲಲ್ಲಿ ನಿಂತಿರುವ ತಾಯಂದಿರಂತೆ ಮೋಡಗಳು ಅಲ್ಲಲ್ಲಿ ನೆಲೆಯಾಗಿ ನಿಂತುಬಿಟ್ಟದ್ದವು. ಈ ನೆಲವ ಆಟವನ್ನು ಯಾವಾಗಲೂ ನೋಡುತ್ತಿರುವ ಚಿಕ್ಕೆಗಳಂತೆ, ಆ ಮುಗಿಲುನೆಲದ-ಜ್ಯೋತಿ-ಜಗತ್ತಿನ-ಆಟವನ್ನು, ಗಿಡಬಳ್ಳಿಗಳು ನೋಡಿ ನೋಡಿ ನಲಿಯುತ್ತಿದ್ದವು. ಹೀಗೆ ಇಡೀ ಬಾಳುವೆಯು ಎದೆಗಳೆಲ್ಲ ಒಂದೇ ತಾಳದಲ್ಲಿ ಹಾರುತ್ತಲಿದ್ದವು.

ಒಂದು ಎದೆಯು ಮಾತ್ರ ಹಿಂಡುತಪ್ಪಿದ ಹಕ್ಕಿಯಂತೆ ತಾಳಗೆಟ್ಟು ಹಾರುತ್ತಿತ್ತು.

೩.

ರಂಗನ ಎಲ್. ಎಲ್. ಬಿ. ಪರೀಕ್ಷೆಯು ಇಳಿದ ಸುದ್ದಿ ತಿಳಿದ ದಿನವೇ ಕಮಲಕ್ಕನು ಹೆಣ್ಣುಹಡೆದ ಸುದ್ದಿ ಬಂತು. ರಂಗನಿಗೆ ಎರಡರಲ್ಲೂ ಸೊಗಸಿಲ್ಲ. ಆತ ಇತ್ತೀಚೆ ಯಾರೊಡನೆಯೂ ಹೆಚ್ಚಾಗಿ ಮಾತನಾಡುವದಿಲ್ಲ. ಉಣಿಸು ತಿನಿಸುಗಳಲ್ಲಿ ಆತನಿಗೆ ಸೊಬಗಿಲ್ಲ. ಓದು-ಬರೆಹದಲ್ಲಿ ಆತನಿಗೆ ಮನವಿಲ್ಲ. ದಿನಕ್ಕೆ ಒಂದೆರಡು ತಾಸುಗಳನ್ನುಳಿದು, ಉಳಿದ ವೇಳೆಯಲ್ಲೆಲ್ಲ ತನ್ನ ಕೋಣೆಯಲ್ಲಿ ಬಾಗಿಲು ಹಾಕಿಕೊಂಡೇ ಇರುತ್ತಿದ್ದ. ಜೋಡೆಲುಬಿನ ಆತನ ಮೈಯೀಗ ಕಡ್ಡಿಯಂತೆ ಆಗಿಬಿಟ್ಟಿತ್ತು. ಉಬ್ಬು-ಗಲ್ಲಗಳು ಪಚ್ಚಾಗಿದ್ದವು. ಮಿಂಚು-ಗಣ್ಣುಗಳು ಒಳಸೇರಿಕೊಂಡಿದ್ದವು.

ಮಾವನೂರಿಂದ, ಮಗುವನ್ನು ನೋಡಿಕೊಂಡು ಹೋಗಬೇಕೆಂದು ಎಷ್ಟೆಷ್ಟೊ ಪತ್ರಗಳು ಬಂದವು. ರಂಗನಾವಾಗಲೂ ಅಲ್ಲಿಗೆ ಹೋಗುವ ಮನಸ್ಸು ಮಾಡಲಿಲ್ಲ. ಬರುವದಾಗುವದಿಲ್ಲೆಂದು ಬರೆಯಬೇಕಾಗಿ ರಾಮರಾಯರಿಗೇ ಹೇಳಿಬಿಟ್ಟ. ಮಗನ ಈ ಪರಿಯನ್ನು ನೋಡಿ ಸೀತಮ್ಮನವರು ಕೈಕಾಲು ಕಳೆದುಕೊಂಡರು. ಮಗನ ಹೃದ್ರೋಗದ ಬಗೆ ಅವರಿಗೆ ತಿಳಿಯಲಿಲ್ಲ. ಮಗನ ಪರೀಕ್ಷೆಗಾಗಿ ಹರಕೆ ಹೊತ್ತಂತೆ, ಆತನ ಆರೋಗ್ಯಕ್ಕಾಗಿ ಮತ್ತೂ ಹರಕೆ ಹೊತ್ತರು. ಒಳ್ಳೊಳ್ಳೆ ವೈದ್ಯರ ಹತ್ತರ ಅವುಷಧ ತೆಗೆದುಕೊಳ್ಳಲು ಮಗನನ್ನು ಪೀಡಿಸಹತ್ತಿದರು. ಇದನ್ನೆಲ್ಲ ಕೇಳಿ, ರಂಪ,

"ಅವ್ವಾ! ನನ್ನ ಬೇನೆಗೆ ನಾನೇ ವೈದ್ಯ! ಆ ಬೇನೆಗೆ ತಕ್ಕಮದ್ದು ಈ ಜಗತ್ತಿನಲ್ಲಿ ಸಿಗಲಾರದೆಂಬದನ್ನು ಬಲ್ಲೆ ಎಂದು ತನ್ನಲ್ಲಿ ತಾನೇ ಎಂದುಕೊಳ್ಳುವನು.

ಮೊದಮೊದಲು ರಂಗ ಇಂಗ್ಲೆಂಡಿಗೆ ಹೋಗುವದನ್ನು ತಾನೇ ಬಿಟ್ಟು ಬಿಟ್ಟ. ಮನೆಯವರೆಲ್ಲ ಒಂದು ಬಗೆಯಿಂದ ತಣ್ಣಗಾಯಿತೆಂದು ಬಗೆದಿದ್ದರು. ಆದರೆ ಅರ್ಧ ವರ್ಷಹೋದ ಮೇಲೆ ಇಂಗ್ಲೆಂಡಿಗೆ ಹೋಗುವದಕ್ಕಾಗಿ ಹಟತೊಟ್ಟನು. ಯಾರು ಹೇಳಿದರೂ ಕೇಳಲಿಲ್ಲ. ಆತನ ತಾಯಿಯವರು ಅಲ್ಲೋ ರಂಗ! ಇಂಥ ಬೇನೆ ಕಟ್ಟಿಕೊಂಡು ಅಷ್ಟು ದೂರ ದೇಶಕ್ಕೆ ಹೇಗಾದರೂ ಹೋಗುವಿಯಪ್ಪಾ! ಇತ್ತೀಚೆ ನಿನ್ನ ಪ್ರಕೃತಿಯಂತೂ ಬಲು ಸೂಕ್ಷ್ಮನಾಗಿದೆ. ಸ್ವಲ್ಪ ಗಾಳಿಮಳೆಗಳು ಕೂಡ ನಿನಗೆ ತಡೆಯುವದಿಲ್ಲ. ಕೂಡಲೇ ನೆಗಡಿ–ಕೆಮ್ಮುಗಳು ಗಂಟೇ ಬೀಳುವವು. ಮನೆಯಲ್ಲಾದರೂ ನಿನ್ನ ಹೊರತು ಇನ್ನಾರಿರುವರು. ಅವರೂ ಮುಪ್ಪಿನವರು ಬರಬರುತ್ತ ದಿನ ಹೋಗುವವೋ ಬರುವವೋ! ನಿನ್ನನ್ನು ನಂಬಿಯೇ ನಾವೆಲ್ಲರೂ ಇರುವದಲ್ಲವೆ! ನೀನೇ ನಮ್ಮನ್ನೆಲ್ಲ ಬಿಟ್ಟು ಹೋದ ಮೇಲೆ ನಮ್ಮ ಮನಸ್ಸಿಗೆ ಹೇಗೆ ಸೊಗಸಾಗಬೇಕು! ನಾಳೆ ಬೆಳಗಾದರೆ ನಿನ್ನ ಹೆಂಡತಿ ಹೆತ್ತ–ನಿಬ್ಬಣ ಬರುವವಳು." ಎಂದು ಮೊದಲಾಗಿ ಏನೇನೋ ಮಾತುಗಳನ್ನು ಗಿಳಿಗೆ ಹೇಳಿದಂತೆ ಹೇಳೀ ಹೇಳುವರು; ರಂಗನಿಗೆ ಇದೆಲ್ಲ ಬೇಸರ. ಒಮ್ಮೊಮ್ಮೆ ಕವಕ್ಕನೆ ತಾಯಿಯ ಮೇಲೆ ಹೋಗಿ "ನಾನೇನು ಇನ್ನೂ ಕೂಸಲ್ಲ; ನನ್ನ ಹಿತಾಹಿತಗಳೆಲ್ಲ ನನಗೆ ತಿಳಿವೇ ಇವೆ. ನೀವೇನು ಬೇರೆ ಹೇಳಬೇಕಾಗಿಲ್ಲ." ಎಂದು ಒದರಾಡಿಬಿಡುವನು. ಬೆಳೆದ ತಿಳಿದ ಹುಡುಗರಿಗೆ ಹೇಳುವದೇನೆಂದು ಸೀತಕ್ಕ ಈಚೆಗೆ ಸುಮ್ಮನೆ ಬಂದು ಬಿಡುವರು.

ಕಡೆಗೊಮ್ಮೆ ರಂಗ ಇಂಗ್ಲೆಂಡಿಗೆ ಹೋಗಿಯೆ ಬಿಟ್ಟ. ಸೀತಮ್ಮನವರಿಗೆ ಮನೆಯ ದೀಪ ತಟ್ಟನೆ ಆಂದಂತಾಯಿತು.

೪.

ರಂಗನು ಹೊರಡುವದಕ್ಕೆ ಎರಡು ದಿನ ಮೊದಲೇ ಕಮಲಕ್ಕ ತವರು ಮನೆಯಿಂದ ಬಂದಿದ್ದಳು. ಇದ್ದ ಎರಡು ದಿನಗಳಲ್ಲಿ ರಂಗ ಅವಳೊಡನೆ ತುಟಿ ಎರಡು ಮಾಡಿರಲಿಲ್ಲ. ಮಗುವನ್ನು ಕಣ್ಣೆತ್ತಿ ನೋಡಿದನೋ ಇಲ್ಲವೋ! ಮುಟ್ಟಿ ಮುದ್ದಾಡುವದಂತೂ ದೂರದ ಮಾತು. ಮೊದಲೇ ಹೊರಡುವ ಗಡಿಬಿಡಿ. ಮೇಲೆ ಯಾರೊಡನೆಯೂ ಮಾತಾಡುವ ಮನಸಿಲ್ಲ. ಕಾರಣ ಕಮಲಕ್ಕನಾಗಲಿ ಮಗುವಾಗಲಿ ಆತನ ಹೃದಯದ ಅಟ್ಟಾಲಿಕೆಯನ್ನೇರಿ ಬರಲು ಶಕ್ತರಾಗಲಿಲ್ಲ. ಸರಲ ಹೃದಯದ ಬಾಲೆ ಕಮಲಕ್ಕನಿಗೆ ಇದರ ಗುಟ್ಟು ಆಗ ತಿಳಿಯಲಿಲ್ಲ. ಅವಳ ಮನಸ್ಸು ಕನ್ನಡಿಯಂತಹದು. ಎಂದೂ ಎರಡು ಬಗೆಯುವವಳಲ್ಲ. ಪಾಪ! ಜಗತ್ತನ್ನು ಬಿಗಿದ ಸೂಕ್ಷ್ಮತಂತುಗಳು ಅವಳ ಬರಿಗಣ್ಣಿಗೆ ಕಾಣಲಿಲ್ಲ. ಅಷ್ಟರ ಮಟ್ಟಿಗೆ ಅವಳು ಕುರುಡಿಯಾದರೂ ಇದರಲ್ಲಿ ಅವಳ ತಪ್ಪೇನು! ಜಗತ್ತಾದರೂ ಇಷ್ಟೊಂದು ತೊಡಕಿನದೇಕಾಗಿರಬೇಕು. ಕನ್ನಡ ಮೊದಲನೇ ಪುಸ್ತಕ

ಡಿತಿದ್ದರೆ ಅವಳು ಜಗತ್ತಿನ ಪಾಡನ್ನು ಬಲು ಬೇಗ ಓದಿ ಬಿಡಬಹುದಾಗಿತ್ತು! ಆದರೆ ಆ ಮೊದಲಪುಸ್ತಕವೇ ಮೊದಲನವರ್ಗದ ಹುಡುಗನಿಗೆ ಎಷ್ಟೊಂದು ಬಿಗಿಯಾಗುವದು! ಕಮಲಕ್ಕನಿನ್ನೂ ಈ ಬಾಳುವೆಯ ಮೊದಲನೇ ವರ್ಗದಲ್ಲಿರುವಳು, ಪಾಪ! ಅವಳಾದರೂ ಏನು ಮಾಡಬೇಕು. ಬಾಳುವೆಯೊಂದು ಒಗಟು.

* * * *

ಕಮಲಕ್ಕ ಬಂದ ದಿನ ಗಂಡನನ್ನು ನೋಡಿದೊಡನೆ, ಅವಳ ಎದೆಯೊಡೆದು ಹೋಯಿತು. ತೊಗಲು-ಎಲಬು ತೊಡೆದುಕೊಂಡಂತೆಯಾದ ಆತನನ್ನು ಗುರುತಿಸುವದು ಕೂಡ ಮೊದಲು ಅವಳಿಗೆ ಅಶಕ್ಯವಾಗಿರಬೇಕು. ಚೆಂಡುಮಲ್ಲಿಗೆಯಂಥ ರಂಗ ಹೀಗೆ ಯಾಗಬಹುದೆಂದು ಅವಳು ಕನಸು ಮನಸ್ಸಿನಲ್ಲೂ ನೆನಸಿರಲಿಲ್ಲ. ಎಂಟುಹತ್ತು ತಿಂಗಳ ಮೇಲೆ ಈಯವಸ್ಥೆಯಲ್ಲಿ ಗಂಡನನ್ನು ನೋಡಿದಾಗ ಒಮ್ಮೆಲೆ ಅವಳಿಗೆ ಮೈಯೆಲ್ಲ ಜುಗುಪ್ಸೆ ಕಣ್ಣು ಕತ್ತಲೆಗೂಡಿದವು. ಆಗಲೇ ಅವಳಲ್ಲಿ ಯಾವದೋ ಒಂದು ಆಕಾಂಕ್ಷೆಯು ಮೊಳಕೆಯೊಡೆಯಿತು. ಅವಳ ಹೃದಯ ಸಾಗರದಲ್ಲಿ ಎಲ್ಲಿಂದಲೋ ಯಾವದೋ ಒಂದು ಭಾವನಾನೌಕೆಯು ಪ್ರೇಮವೀಚಿಗಳ ಮೇಲೆ ತೇಲಿಬರಹತ್ತಿತು. ಇದಾವದನ್ನು ಕಮಲಕ್ಕನು ಎಚ್ಚರವಲ್ಲಿ ಅರಿಯಳು. ಗಂಡನ ಆ ಪಾಡಿನ ಪರಿಯು ಅವಳಿಗೆ ತಿಳಿಯದು.

ರಂಗ ಹೊರಡುವ ಹೊತ್ತಿಗೆ ಕಮಲಕ್ಕ ಮಗುವಿನೊಡನೆ ನಮಸ್ಕಾರ ಮಾಡಬರಲು ಆತ ಕಾಲು ಕೊಸರಿಕೊಂಡ. ಇವನ್ನಾರೂ ನೋಡಲಿಲ್ಲ. ಕಮಲಕ್ಕ ಮಾತ್ರ ಮನವಲ್ಲಿಯೇ ನೊಂದುಕೊಂಡಳು. ಇವಳಿಗೆ ರಂಗನ ನಡೆತೆಯ ಗುಟ್ಟೇ ಹೊಳೆಯಲಿಲ್ಲ. ದೂರದಿಂದಲೇ ಮನಃಪೂರ್ವಕವಾಗಿ ನಮಸ್ಕರಿಸಿದಳು. ತೀವ್ರಮನಸ್ಸಿನಿಂದ ಆತನನ್ನು ತನ್ನಲ್ಲಿಯೇ ಪೂಜಿಸಿದಳು. ಗೆಳೆಯರೊಡನೆ ನಮಸ್ಕಾರ ಚಮತ್ಕಾರವಾದಮೇಲೆ ಬಂಡಿಹೊರಡುವ ಕಾಲಕ್ಕೆ ರಂಗನು, ಅಯ್ಯನವರು ಹೊಡೆದು ಗೋಡೆಯ ಕಡೆಗೆ ಮೋರೆ ಮಾಡಿ ನಿಲ್ಲಿಸಿದ ಹುಡುಗನಂತೆ, ಒಂದು ಬದಿಯಲ್ಲಿ ಕೂಸನ್ನೆತ್ತಿಕೊಂಡು, ಮಾಗುಬಡೆದು ನಿಂತಿದ್ದ ಕಮಲಕ್ಕನನ್ನು, ಅವ್ಯದೊ ಒಂದು ಬಗೆಯ ಆಶೆಯಿಂದ-ಆಕಾಂಕ್ಷೆಯಿಂದ-ಕರುಣಾಪೂರ್ಣವಾದ ಎಣ್ಣೆಗಣ್ಣುಗಳಿಂದ ನೋಡಿದ. ಕಮಲಕ್ಕನೂ ತನ್ನ ಬೊಗಸೆಗಣ್ಣುಗಳಿಂದ ಆತನ ಜೀವನವನ್ನೇ ಕುಡಿದುಕೊಳ್ಳುವಳೋ ಎಂಬಂತೆ, ನೋಡಿನೋಡಿದಳು. ಆಕ್ಷಣ, ಆರನಿಮಿಷ, ಆ ಮಂಗಲಮುಹೂರ್ತ ಒಂದೇ ಒಂದು ಗಳಿಗೆ, ಆ ಗಳಿಗೆಯಲ್ಲಿಯೇ ಕಮಲಕ್ಕನಿಗೆ ಜ್ಯೋತಿ ದರ್ಶನವಾಯಿತು. ತನ್ನ ನಲ್ಲನೆದೆಯಲ್ಲಿ ತನಗಾಗಿ ಹೊಳೆಯುತ್ತಿರುವ ಪ್ರೇಮಸೂರ್ಯನನ್ನು ಕಂಡು ಕೈಮುಗಿದಳು.

ಕಮಲಕ್ಕನ ಜೀವನರಥದ ಗಾಲಿಗಳು ಹೊಸ ಹಾದಿಯಲ್ಲಿ ಉರುಳುರುಳುತ್ತಿರುವಾಗಲೇ ರಂಗನು ಕುಳಿತ ಬಂಡಿಯ ಗಾಲಿಗಳು ಗೊತ್ತಿಲ್ಲದ ಗುರಿಯ ನಿಟ್ಟಿಗೆ ಉರುಳಹತ್ತಿದವು. ರಂಗ-ಕಮಲಕ್ಕರ ಕಣ್ಣೋಟ ಕೂಡಿರುವಾಗಲೇ ರಂಗನ ಕಣ್ಣೊಳಗಿಂದ

ಕರುಣೆ ಕರಗಿ, ಎರಡೆಂದರೆರಡೇ ಕಣ್ಣೀರುಗಳು—ಬಯಕೆ ಬಲಿತು ತುಂಬಿ ನಿಂದುದು
ಹಣ್ಣುಮಾವಿನಂತೆ—ಉದುರಿದವು. ರಂಗನ ಸೋಗೆಗಣ್ಣುಗಳಿಂದ ಆತನ ಕರುಳು ಕರ
ನೀರಾಗಿ ಉದುರುವಾಗ. ಕಮಲಕ್ಕ ಆ ನೀರು ಕುಡಿಯು ಆತನ ನೋವನ್ನು ತನ್ನ ಹೃ
ಯಗರ್ಭದಲ್ಲಿ ಧರಿಸಿದಳು.

* * * *

ಅತ್ತ, ರಂಗ ಹೋದಮೇಲೆ ಕಮಲಕ್ಕನಿಗೆ ಇರುಳುಕಣ್ಣು ಹೋದಂತೆ ಆಯಿತು
ನೇಸರು ಮೂಡುಮೂಡುವದರೊಳಗೆ ಮೋಡವಡ್ಡ ಬಂದರೆ ಕಮಲಿನಿಯ ಪಾಡು
ಹೇಗಾಗಬೇಡ! ಇಂದಿಗೆ ಕೆಲವು ದಿನಗಳ ಹಿಂದೆ ರಂಗನಿಗಿದ್ದ ಪಾಡು ಈಗ ಅವ
ಪಾಲಿಗೆ ಬಂತು. (ನೋಯುವದು) ಈಗ ಕಮಲಕ್ಕನ ಸರತಿ (ಬಾರಿ) ಬಂತು.

ಇಂದು ಮಣ್ಣೆತ್ತಿನ ಅಮಾವಾಸ್ಯೆ. ಅಂದು ರಂಗನ ನೋವು ಉಬ್ಬಿಯು
ಬಂದಾಗ, ಹೊನ್ನಿಗಾಗಿ ಚಂದಪ್ಪನ ಹಿಂದೆ ಓಡುತ್ತಿದ ಚಿಕ್ಕೆಗಳೆಲ್ಲ ಮುಗಿಲಂಗಳದ
ಒಂದುಗೂಡಿ, ಹೀಗೆ ಪ್ರೇಮಗೀತೆಯನ್ನು ಹಾಡುತ್ತಿದ್ದವು—

" ಪೂರ್ಣ ಪುಂಜೇನ ಯದಿ । ಪ್ರೇಮಧನಂಕೋಪಿಲಭೇತ್ ।
ತಸ್ಯ ತುಚ್ಛಂ ಸಕಲಂ ॥
' ಯಾತಿ ಮೋಹಾಂಧತಮಃ ಪ್ರೇಮರವೇರಭ್ಯುದಯೆ ।
ಭಾತಿ ತತ್ತ್ವಂ ವಿಮಲಂ ॥
'ಪ್ರೇಮ ಸೂರ್ಯೋ ಯದಿಭಾತಿ ಕ್ಷಣಮೇಕಂ ಹೃದಯೇ ।
ಸಕಲಂ ಹಸ್ತತಲಂ ॥ " *

ಇಂದು ಆ ಚಿಕ್ಕೆಗಳನ್ನು ಒಲಿಸಿ ಓಡಿಸಿಕೊಂಡು ಹೋಗಲು ಆವ ಚಂದಪ್ಪನು
ಇರಲಿಲ್ಲ. ತಮ್ಮ ತಾಳಮೇಳದಲ್ಲಿ ಬೆರೆತು ಅವು ಇಂತು ಹಾಡುತ್ತಿದ್ದವು. ಇಂದು
ಕಮಲಕ್ಕನ ಭಾವನೆಯ ತಾಳವೂ ಅವುಗಳೊಡನೆ ಬೆರೆತುಕೊಂಡಿತ್ತು. ಅಂತೆಯೆ
ಅವಳು ಆ ನಿತಾಂತಪ್ರಶಾಂತ ನಿಶಾಸಮಯದಲ್ಲಿ ತನ್ನ ಮೋರೆಯನ್ನು ಮುಗಿಲೆಡೆ
ನೀಡಿ ತನ್ನ ಕಣ್ಣ ಕಾಂತಿಯನ್ನು ಚಿಕ್ಕೆಗಳ ಕಾಂತಿಯೊಡನೆ ಬೆರೆಸಿ ನೋಡುತ್ತಿದ್ದಳು.

ಸುಖದ ಸೊಬಗು ಕಸುಕಾಗಿರುವಾಗ ಒಂದು ರುಚಿ. ಹಣ್ಣಾದಮೇಲೆ ಮತ್ತೊಂ
ದು ರುಚಿ. ರಂಗ ಸವಿದಪ್ಪು ಕಸುಕಿನ ರುಚಿ; ಕಮಲಕ್ಕನೀಗ ಸವಿಯಹತ್ತಿರುವು
ಹಣ್ಣಿನರುಚಿ. ರಂಗನ ಸುಖವು, ಕನಸಿನದು; ಕಮಲಕ್ಕನ ಸುಖ ನೆನಸಿನದು, ಏಕೆಂ
ದರೆ ಅವಳ ಸುಖವೀಗ ಅವಳ ಕೈಯೊಳಗಿನದು.

ಕಿಡಿಕಿಯ ಕಿಂಡಿಯೊಳಗಿಂದ, ಅವಳು, ಎಷ್ಟೋ ಹೊತ್ತಿನವರೆಗೆ ನಿಂತಲ್ಲಿಯೆ
ನಿಂತು ಮುಗಿಲಿನಲ್ಲಿ ತನ್ನ ಹಣೆಯ ಬರಹವನ್ನೋದಹತ್ತಿದಳು. ತನ್ನ ಭವಿಷ್ಯತ

---

* ಕವೀಂದ್ರ ರವೀಂದ್ರರದೊಂದು ಗೀತಿಕೆ.

ಎಣಿಕೆ ಹಾಕಹತ್ತಿದಳು. ಭವ್ಯದ ಭೀಕರತೆಯನ್ನು ಎದುರಿಸಲು ಎದೆಮಾಡತೊಡಗಿದಳು. ರಂಗನ ಕಟ್ಟಕಡೆಯ ಅಗಲಿಕೆಯ ಕಣ್ಣೀರುಗಳು ಅವಳ ಕಣ್ಣೆದುರಿಗೆ ಭೂತ(ಕಾಲ)ದ ಹೊತ್ತಿಗೆಯನ್ನು ತೆರೆದಿಟ್ಟವು. ಅವಳು ಅದರಲ್ಲಿ ತನ್ನ ಇತಿಗತವನ್ನೆಲ್ಲ ಕಂಡುಕೊಂಡಳು.

ಗಂಡನ ಈ ಹಾಡಿಗೆ ತಾನೆಷ್ಟರ ಮಟ್ಟಿಗೆ ಕಾರಣಳಾದಳೆಂದು ಆಗ ಅವಳಿಗೆ ಹೊಳೆಯಿತು. ಅದಕ್ಕವಳು ಎಷ್ಟು ಮರುಗಿದರೇನು! ಅತ್ತರೇನು! ಕರೆದರೇನು! ಹಣೆಗಟ್ಟಿಸಿಕೊಂಡರೇನು ? ಆದರೆ ದುಃಖಪ್ರವಾಹದ ನಾಲಿಕೆಗಳಾದ ಇವುಗಳಲ್ಲಿ ದುಃಖವು ಕೋಡಿಗಟ್ಟಿ ಹರಿಯಿತು. ಆ ಹೊಲೆ ನೀರು ಹರಿದುಹೋದಮೇಲೆ ಅವಳ ಅಂತರಂಗದ ತಿಳಿ ಕನ್ನಡಿಯಮೇಲೆ ರಂಗನ ಭಾವಚಿತ್ರ ಒಡಮೂಡಿಕೊಂಡಿತು. ಅವಳದೆಷ್ಟೋ ಅನುತಾಪಪಟ್ಟಳು. ಅದೆಷ್ಟೋ ಸಲ ತನ್ನ ಹೃದಯೇಶನನ್ನು ಅನನ್ಯತಮವಾದ ಭಕ್ತಿಯಿಂದ ನಮಿಸಿದಳು. ಅಗಲಿಹೋದ ರಂಗನ ನಲ್ಲೆದೆಯನ್ನು ಮುಟ್ಟಿ ಮುದ್ದಿಡುವಷ್ಟು ಅವಳ ಎದೆ ಅಗಲಾಯಿತು.

ಶುದ್ಧ ರಕ್ತವಾಹಿನಿಯನ್ನು ಕಡಿದು ಬಿಟ್ಟರೆ ನೆತ್ತರವು ತಡೆತಡೆದು ಹೊರಹೊಮ್ಮುವಂತೆ ಕಮಲಕ್ಕನ ದುಃಖ ತಡೆತಡೆದು ಉಕ್ಕಿ ಬರಹತ್ತಿತು. ಅವಳು ತನ್ನ ಗಂಡನ ಹಾಸಿಗೆಯನ್ನು ಅಪ್ಪಿಕೊಂಡು ಆತನ ಸ್ಪರ್ಶಸುಖವನ್ನು ಅನುಭವಿಸಿದಳು. ಆತನ ತಲೆದಿಂಬನ್ನು ಕಣ್ಣೀರಿನಿಂದ ತೊಯಿಸಿಬಿಟ್ಟಳು. ಆತನಿಂದ ಪಡೆದ ಮಗುವಿನಲ್ಲಿ ಆತನ ರೂಪವನ್ನು ಕಾಣಹತ್ತಿದಳು. ಎಷ್ಟೆಷ್ಟೊ ಬಗೆಯಿಂದ ಆತನ ಸಾಕ್ಷಾತ್ಕಾರವನ್ನು ಮಾಡಿಕೊಳ್ಳಹತ್ತಿದಳು. ಅವಳ ಪ್ರೇಮೋದಧಿಯು ಆತನ ಕಡೆಗೆ ಕೈಮಾಡಿ ಸಾಗರಬಿದ್ದು ಉಕ್ಕೇರಹತ್ತಿತು.

ಅವಳಿಗೆ ಆಗ ಏನು ಮಾಡಬೇಕೆಂಬುದು ತಿಳಿಯಲಿಲ್ಲ. ತನ್ನ ಗಂಡನಿಗೆ ತನ್ನೆದೆ ಸೀಳಿ ತೋರಿಸಬಹುದಾಗಿತ್ತು. ಆದರಾತನಲ್ಲಿರಲಿಲ್ಲ. ತನ್ನಪರಾಧವನ್ನು ಒಪ್ಪಿ ತಪ್ಪು ಕ್ಷಮಿಸಬೇಕೆಂದು ಬೇಡಿಕೊಳ್ಳಲು ಹವಣಿಕೆ ಹಾಕಹತ್ತಿದಳು. ಎದ್ದುಕೂತು, ಆತನ ಹೆಸರಿನಲ್ಲಿ ಪತ್ರಬರೆದಳು—ಮತ್ತೆ ಹರಿದಳು; ಮತ್ತೆ ಬರೆದು ಮತ್ತೆ ಹರಿದಳು. ಮತ್ತೆ—; ಮತ್ತೆ—; ಪಶ್ಚಾತ್ತಾಪಪೂತ ನಿರ್ಭಯತೆಯು ಮುಂದೆಳೆಯುತ್ತಿದ್ದರೂ, ಹೆಣ್ಣು-ನಾಚಿಕೆಯೂ, ಮತ್ತೊಂದ ತೆರದ ಭಯವೂ ಅವಳನ್ನು ಹಿಂದೆಳೆಯುತ್ತಿದ್ದವು.

ಕಡೆಗೊಮ್ಮೆ ತನ್ನ ಒಲವನ್ನು ಒತಿಯಿಂದ ಕಳಿಸಿಕೊಟ್ಟಳು. ಕಮಲಕ್ಕನ ಓಲೆ ಯು ಬಂದಾಗ ರಂಗ ತನ್ನ ಅಭ್ಯಾಸ ಮುಗಿಸಿಕೊಂಡು ಮರುಳಬೇಕೆನ್ನುತ್ತಿದ್ದ. 'ಆದರೆ ಮರಳಿ ಮಾಡಬೇಕೇನು! ನನ್ನ ನೋವಿಗೆ ಕೊನೆಯುಂಟೆ! ಎಲ್ಲಿ ಇದ್ದು; ಎಲ್ಲಿ ಬಿದ್ದು; ಹೋದರೇನು!!' ಎಂದು ತನ್ನ ಬರುವನ್ನು ಮುಂದೆ ಹಾಕುತ್ತಿದ್ದ. ಆದರೀ ಕಮಲಕ್ಕ

ನಿಗಾಗಿ ಯಲ್ಲದಿದ್ದರೂ ತನ್ನ ತಾಯಿ-ತಂದೆಗಳಿಗಾಗಿಯಾದರೂ ತಿರುಗಿಬರಬೇಕೆಂದು ಎಣಿಸುವ; ಮರುಚಣದಲ್ಲಿ ಮತ್ತೆ ಮುಗ್ಗರಿಸುವ.

ಹೀಗೆ ರಂಗನು ಉಯ್ಯಾಲೆಯಾಡುತ್ತಿರುವಾಗ ಕಮಲಕ್ಕನ ಓಲೆ ಕೈಸೇರಿತು. ಇಷ್ಟಾದರೂ ಅವನಲ್ಲಿ ಕಮಲಕ್ಕನ ವಿಷಯಕ್ಕೆ ಪ್ರೀತಿ ಎಳ್ಳಷ್ಟು ಕಡಿಮೆಯಾಗಿರಲಿಲ್ಲ. ಒಳ್ಳೇ ಆಸ್ಥೆಯಿಂದ ಆ ಓಲೆಯನ್ನು ಓದಿ ಮುಗಿಸಿದ. ಕಮಲಕ್ಕನು ಊರಲ್ಲಿ ಕುಳಿತು ಎಷ್ಟು ಸಲ ಓಲೆ ಬರೆದಳೋ ಅದಕ್ಕೂ ಹೆಚ್ಚು ಸಲ ಆತನದನ್ನು ಓದಿದ. ಆತನಿಗೆ ಅದೊಂದು ಆಕಾಶವಾಣಿ; ವರದವಾಣಿ; ಅದನ್ನು ಅವನು ಕಣ್ಣಿಗೆ, ಎದೆಗೆ, ಒತ್ತಿಕೊಂಡು ತಲೆಯಮೇಲೆ ಇಟ್ಟುಕೊಂಡು ಆತ ಆ ಅಂತರ್ಜ್ಯೋತಿಯ ಕೂಗಿಗೆ ಮಾರುತ್ತರ ಕೊಟ್ಟ. ಆಗ ಮತ್ತೆರಡು ಕಣ್ಣೀರುದುರಿದವು.

ಮರು ಹಡಗದಲ್ಲಿ ಕುಳಿತುಕೊಂಡು ರಂಗ ಊರಿಗೆ ಹೊರಟೇಬಿಟ್ಟ. ಕನ್ನಡಿಯಲ್ಲಿಯ ತನ್ನ ಪಡಿನೆರಳು ನೋಡಿ ಮುಟ್ಟಲೆತ್ನಿಸುವ ಕೂಸಿನಂತೆ ಆತನು ಮನದನ್ನೆಯನ್ನು ಅಲ್ಲಿಂದಲೇ ಮುದ್ದಿಡಹತ್ತಿದ.

* * *

### ೨೦ನೇ ತಾರೀಖಿನ ಕರ್ಮವೀರದಲ್ಲಿ ಇದೊಂದು ಸುದ್ದಿ:—

ಮೊನ್ನೆ ಮೊನ್ನೆ; ಹಿಂದುಸ್ಥಾನಕ್ಕಾಗಿ ಇಂಗ್ಲೆಂಡದಿಂದ ಹೊರಟ P.&.O.ಂದ ಸಿಟಿ ಆಫ್ ಅಮರಾವತಿ ಯೆಂಬ ಹಡಗು, ಬಲವಾದ ಬಿರುಗಾಳಿಯಲ್ಲಿ ಸಿಕ್ಕು ಏಡನ್ನದ ಹತ್ತರ ಸಮುದ್ರ ತಳವನ್ನು ಕಂಡಿತು. ಉಳಿದವರಾರು, ಸತ್ತವರಾರು ಇನ್ನೂ ಗೊತ್ತಾಗಿಲ್ಲ.

* * *

ಕಮಲಕ್ಕನ ಹೃದಯ ಸಾಗರದಲ್ಲಿ ತೇಲುತ್ತಿದ್ದ ನಾವೆಯೊಂದು, ಅದೆಷ್ಟೊ ತಾಕಲಾಟದಲ್ಲಿ ಸಿಕ್ಕು ಅವಳಲ್ಲಿಯೇ ಮುಳುಗಿಹೋಯಿತು. ನಮ್ಮ ಅದೃಷ್ಟಕರ್ಮ ಫಲವೊಂದು ಹೊಂಚುಹಾಕಿದ ಬೆಕ್ಕಿನಂತಿದೆ. ಇಲಿಗಳಾಡುವ ಚಿನ್ನದಾಟದ ಪರಿಯನ್ನೇನು ಬಲ್ಲದದು ? ಬೇಡನ ಕ್ರೌಂಚ ಮಿಥುನದಲ್ಲೊಂದನ್ನು ಕೊಲ್ಲುವಾಗ ಆತನಿಗೆ ಅವುಗಳ ಪ್ರೇಮದರಿವು ಆಗುವದು ಹೇಗೆ ? ತನ್ನ ತೃಷಾಪೂರ್ತಿಯೊಂದು ಆತನ ಗುರಿಆಯಿತು. ಆ ಬೇಡ ತನ್ನ ಬಾಣವನ್ನು ಬಿಟ್ಟೇಬಿಟ್ಟ ಇಷ್ಟು ಹೊತ್ತಿನವರೆಗೆ ಬಿರುಗಾಳಿಯಲ್ಲಿ ಸಿಕ್ಕು ಅಲ್ಲೋಲಕಲ್ಲೋಲವಾಗಿ ಈಗ ಶಾಂತವಾದ ಅವಳ ಪ್ರೇಮಸಾಗರದ ಮೇಲೆ ಈಗ ಬಯುಲು-ನೆನಪುಮಾತ್ರ ತೇಲುತ್ತಿದೆ.

---

# ನಿದ್ದೆ ಎಂದರೇನು ?

( ಉಪನಿಷತ್ತಿನ ಕೆಲ ಋಷಿಗಳ ವಿಚಾರಗಳು )

ತನ್ನೊಳಹೊರಗೆ ಏನು ನಡೆದಿರುವದೆಂಬ ಅರಿವು ಇಲ್ಲದ ಪರಿವೆಗೇಡಿಯನ್ನು ಬಿಟ್ಟರೆ 'ನಿದ್ದೆ ಅಂದರೇನು ?' ಎಂಬ ಪ್ರಶ್ನೆಯು ಯಾರಿಗಾಗಲಿ ಉಂಟಾಗದೆ ಇಲ್ಲ. ಮನುಷ್ಯನ ಒಳಜೀವಕ್ಕೆ ತೀರ ಹತ್ತಿಕೊಂಡ ಈ ನಿದ್ದೆಯ ತೊಡಕಿನ ಗುಟ್ಟನ್ನು ಅರಿಯಲಿಕ್ಕೆ, ಒಳಗಣ್ಣಿನ ಪ್ರಾಚೀನ ಋಷಿ-ಮುನಿಗಳು ಹಲವು ಬಗೆಯಿಂದ ಹವಣಿಸಿದ್ದರೆ ಸೋಜಿಗವಲ್ಲ.

ನಿದ್ದೆಯನ್ನು ಕುರಿತು, ಮೈ ಮತ್ತು ಮನಗಳೆರಡು ನಿಟ್ಟಿನಿಂದಲೂ ವಿಚಾರಮಾಡಿ ಹೇಳುವುದು ಸರಿಯಾಗುವುದು. ಆದರೆ ಈಚೆಗಿನ ಕೆಲ ಮೈಮಣ್ಣಿಗರು ( ಭೌತಿಕವಾದಿಗಳು ) ಮನಸನ್ನು ಲೆಕ್ಕದಲ್ಲಿ ತಕ್ಕೊಳ್ಳದೆ ಮೈಯನ್ನಷ್ಟೇ ಎಣಿಸುವರು. ಹಾಗೂ ಮೈದಣುವಿನಿಂದಲೆ ನಿದ್ದೆಬರುವುದೆಂಬುವರು. 'ಶ್ರಮವೇ ನಿದ್ರೆಗೆ ಕಾರಣ' ಎಂಬ ಸಿದ್ಧಾಂತವೂ, ಮಾನಸ ಹಾಗೂ ಆಧ್ಯಾತ್ಮಶಾಸ್ತ್ರದಲ್ಲಿಯೇ ಮುಖ್ಯವಾಗಿ ಆಸಕ್ತರಾದ ಉಪನಿಷತ್ಕಾರರಿಗೆ ಗೊತ್ತಾಗದೆ ಹೋಗಿಲ್ಲ. "ಗಿಡಗವು ಅಥವಾ ಹದ್ದು ಮುಗಿಲಲ್ಲಿ ಹಾರಾಡಿ ದಣಿದು, ರೆಕ್ಕೆಗಳನ್ನು ಮುಚ್ಚಿಕೊಂಡು ತನ್ನ ಗೂಡು ಸೇರುವಂತೆ, ಮನುಷ್ಯನಾದರೂ ಈ ಅವಸ್ಥೆಯಲ್ಲಿ ನಿದ್ದೆಹೋಗುವನು; ಆಗ ಅವನು ಏನನ್ನೂ ಬಯಸನು; ಕನಸನ್ನೂ ಕಾಣನು." ಎಂದು ಬೃಹದಾರಣ್ಯಕ (೪-೩-೧೯)ದಲ್ಲಿ ಹೇಳಿದೆ.

ಆದರೆ ಕೇವಲ ಶರೀರವನ್ನಷ್ಟೇ ವಿಚಾರದಲ್ಲಿ ತಕ್ಕೊಂಡ, ಮೇಲಿನಸಿದ್ಧಾಂತವು ಸರ್ವಸಾಮಾನ್ಯವಾಗುವ ಸಂಭವನವೇ ಇಲ್ಲ. ಮೈಯಿಂದ ಬೇರೆ ಒಡವೆಯು ಒಳಗೊಂದುಂಟು; ನಿದ್ದೆಗೂ ಅದಕ್ಕೂ ಏನಾದರೂ ಒಂದು ತರದ ಸಂಬಂಧವು ಇರದೆ ಇಲ್ಲ; ಎಂಬ ವಿಚಾರವು ಹೊಳೆದು, ಛಾಂದೋಗ್ಯದೊಳಗಿನ ಒಬ್ಬ ಋಷಿಯು ನಿದ್ದೆಗೆ ಇನ್ನೊಂದು ಬೇರೆ ಕಾರಣವನ್ನೇ ಹೇಳುತ್ತಾನೆ. "ಮನುಷ್ಯನು ಗಾಢನಿದ್ರೆಯಲ್ಲಿರುವಾಗ ಅವನ ಎಲ್ಲ ಇಂದ್ರಿಯ ವೃತ್ತಿಗಳು ಸಂಪ್ರಸನ್ನವಾಗಿದ್ದರೆ, ಅವನಿಗೆ ಕನಸು ಬೀಳುವದಿಲ್ಲ; ಆಗ ಅವನ ಜೀವವು ನಾಡಿಗಳಲ್ಲಿ ಸೇರಿಕೊಳ್ಳುತ್ತದೆ" (೮-೬-೩).

'ನಿದ್ದೆಯಲ್ಲಿ ಜೀವವು ನಾಡಿಯಲ್ಲಿ ಸೇರಿಕೊಳ್ಳುತ್ತದೆ' ಎಂದು ಸ್ಥೂಲವಾಗಿ ಹೇಳುವುದೂ ಸರಿಯೆನಿಸದೆ, ಯಾವ ನಾಡಿಯಲ್ಲಿ, ಎಂದು ಅವುಗಳ ಸ್ಥಳ ಸಂಖ್ಯಾದಿಗಳ ಹೆಚ್ಚಿನ ವಿಚಾರಮಾಡಿ ಇನ್ನೊಬ್ಬ ಋಷಿಯು ನಿದ್ದೆಯನ್ನು ಕುರಿತು ಹೇಳುವದೇನಂದರೆ, "ಮನುಷ್ಯನು ಮಲಗಿ ಅವನಿಗೆ ಏನೂ ಎಚ್ಚರಿಕೆ ಇಲ್ಲದಿದ್ದಾಗ, ಆತನ ಜೀವವು ಹೃದಯದಿಂದ ಪುರೀತತ್ತಿನವರೆಗಿರುವ ೭೨೦೦೦ ಹಿತಾ ಎಂಬ ಹೆಸರಿನ ನಾಡಿಗಳೊಳಗಿಂದ ಹಾಯ್ದು ಹೃದಯದಿಂದ ಹೊರಟು, ಪುರೀತತ್ತಿನಲ್ಲಿ ಸೇರುತ್ತದೆ; ಅಲ್ಲಿ ಆ ಜೀವವು ಮಹದಾನಂದ

ಹೊಂದಿದ ಚಿಕ್ಕ ಮಗುವಿನಂತೆ, ಅಥವಾ ಮಹಾರಾಜನಂತೆ, ಇಲ್ಲವೆ ಮಹಾ ಬ್ರಾಹ್ಮಣನಂತೆ ಮಲಕೊಳ್ಳುವುದು " (೨-೧-೧೯)

ಶರೀರ ರಚನೆಯನ್ನು ಅಭ್ಯಾಸಿಸಿದ ಅರ್ವಾಚೀನ ಶಾಸ್ತ್ರಜ್ಞರು, ಮೇಲ್ಕಾಣಿಸಿದ ಶರೀರ ಶಾಸ್ತ್ರದ ವಿಚಾರಗಳನ್ನು ಓದಿ ನಕ್ಕು ಬಿಡಬಹುದು; ಹಾಗೂ ಅದೊಂದು ಪೌರಾಣಿಕ ಕಲ್ಪನಾತರಂಗವೆನ್ನಬಹುದು.

ನೈಯಾಯಿಕರು ಪುರೀತತ್ತಿನ ಮೇಲಣ ಕಲ್ಪನೆಯನ್ನೇ ಹೆಚ್ಚುಗೊಳಿಸಿ, ಮನುಷ್ಯನ ನಿದ್ದೆಯಲ್ಲಿ ಆತನ ಜೀವವು ಪುರೀತತ್ತಿನ ಬಲಭಾಗದಲ್ಲಿ ಸೇರಿಕೊಂಡಿರುವುದೆಂದೂ, ಜೀವವು ಪುರೀತತ್ತಿನ ಬಾಗಿಲಲ್ಲಿ ಹೊಸ್ತಿಲಮೇಲಿದ್ದಾಗ ಕನಸು ಬೀಳುವದೆಂದೂ, ಎಚ್ಚರಿಕೆಯಲ್ಲಿ ಜೀವವು ಹೃದಯದಿಂದ ಪುರೀತತ್ತಿನವರೆಗೆ ಓಡಾಡುತ್ತಿರುತ್ತದೆಂದೂ ಹೇಳುತ್ತಾರೆ.

ಶರೀರ ಹಾಗೂ ಜೀವಗಳ ನಿಟ್ಟಿನಿಂದ ವಿಚಾರಮಾಡಿದ ಋಷಿಗಳ ಅಭಿಪ್ರಾಯಗಳನ್ನು ಮೇಲೆ ಹೇಳಿದ್ದಾಯಿತು; ಆದರೆ ಮನಸುಗರು (ಮಾನಸ ಶಾಸ್ತ್ರಜ್ಞರು) ನಿದ್ದೆಗೆ ಬೇರೆ ತೆರನಾಗಿ ಕೆಲ ಕಾರಣಗಳನ್ನು ಹೇಳುತ್ತಾರೆ. " ದಾರದಿಂದ ಕಟ್ಟಿದ ಹಕ್ಕಿಯು ದಿಕ್ಕುದಿಕ್ಕಿಗೂ ಹಾರಾಡಿ, ಎಲ್ಲಿಯೂ ದಿಕ್ಕುಗಾಣದೆ ಕೊನೆಗೆ ಕಟ್ಟಿದ ಮೆಟ್ಟಿನಲ್ಲಿಯೇ ಆಸರಗೊಳ್ಳುವುದು; ತೀರ ಇದೇ ಮೇರೆಗೆ ಮನಸು ಸಹ ದಿಕ್ಕುದಿಕ್ಕಿಗೂ ಹರಿದಾಡಿ, ಎಲ್ಲಿಯೂ ಇಂಬುಗಾಣದೆ, ಕಡೆಗೆ ಉಸಿರಿ ( ಪ್ರಾಣ ) ನಲ್ಲಿ ಆಶ್ರಯ ಹೊಂದುವುದು; ಯಾಕೆಂದರೆ ಉಸಿರಿನಿಂದ ಮನಸ್ಸನ್ನು ಕಟ್ಟಿಬಿಟ್ಟಿರುತ್ತದೆ." ( ಛಾಂ ೬-೮-೧-೨ ). ಹೀಗೆ ಮನಸು ಉಸಿರಿನಲ್ಲಿ ಬೆರೆತಾಗ ನಿದ್ದೆ ಬರುವುದೆಂದು, ಒಬ್ಬ ಋಷಿಯ ತಿಳುವಳಿಕೆಯು.

ಕಾಶಿಯ ಅಜಾತಶತ್ರುವೆಂಬ ಅರಸನು, ಬೃಹದಾರಣ್ಯಕದಲ್ಲಿ ಇನ್ನೂ ಒಂದು ಬೇರೆ ಕಾರಣವನ್ನೇ ಹೇಳಿದ್ದಾನೆ. " ಮನುಷ್ಯನೊಳಗಿನ ವಿಜ್ಞಾನಮಯ ಪುರುಷನು ಹೃದಯದೊಳಗಿನ ಅವಕಾಶದಲ್ಲಿ ಮಲಗಿಕೊಂಡಾಗ ನಿದ್ದೆ ( ೨-೧ ) " ಎಂದು ಆತನ ಅಭಿಪ್ರಾಯ.

ಪಿಪ್ಪಲಾದ ಮುನಿಯು ಪ್ರಶ್ನೋಪನಿಷತ್ತಿನಲ್ಲಿ ನಿದ್ದೆಯ ಕುರಿತು ಎರಡು ಮೂರು ತೆರನಾಗಿ ಹೇಳಿದ್ದಾನೆ. ಮೊದಲು ಒಂದೆಡೆಯಲ್ಲಿ ಈತನು ಅನ್ನುವುದೇನೆಂದರೆ:— " ಸಂಜೆಗೆ ಸೂರ್ಯನ ಕಿರಣಗಳೆಲ್ಲವೂ ತೇಜೋಮಂಡಳದಲ್ಲಿ ಹೇಗೆ ಒಂದುಗೂಡುವವೋ, ಹಾಗೂ ಬೆಳಗಾಗುವಾಗ ಮತ್ತೆ ಮೂಡಿ ಎಲ್ಲೆಡೆಗೆ ಹೇಗೆ ಚದುರುವವೋ ಹಾಗೆ ನಿದ್ದೆಯಲ್ಲಿ ಎಲ್ಲ ಇಂದ್ರಿಯಗಳೂ (ಇಂದ್ರಿಯಾಂತರ್ಗತ-ವಾಸನಾದಿಗಳೂ ಮನೋವಿಭಾಗಗಳೂ) ಶ್ರೇಷ್ಠವಾದ ಹಾಗೂ ತಮ್ಮೆಲ್ಲರಿಗೆ ಪ್ರೇರಕವಾದ, ದಿವ್ಯವಾದ ಮನೋದೇವತೆಯಲ್ಲಿ ಒಂದುಗೂಡುತ್ತವೆ. ಆದುದರಿಂದಲೇ ಆಗ ಮನುಷ್ಯನಿಗೆ ಏನೂ ಕೇಳಬರುವದಿಲ್ಲ; ಕಾಣುವದಿಲ್ಲ; ರುಚಿ ತಿಳಿಯುವದಿಲ್ಲ; ಸ್ಪರ್ಶಜ್ಞಾನವಿರುವದಿಲ್ಲ; ಮಾತು

ಇಲ್ಲ; ಕೊಡಕೊಂಬುದಿಲ್ಲ; ಆನಂದವಿಲ್ಲ; ನಡೆದಾಟವಿಲ್ಲ; (ಗಾಢ) ನಿದ್ದೆ ಹತ್ತುವುದು" (೪.೨).

ಆದರೆ ಮೇಲೆ ಹೇಳಿದ ಮಾತನ್ನು ತುಸು ತಿದ್ದಿಕೊಂಡು, ಸ್ವಲ್ಪ ಮುಂದಿನ ಮಾತಿನಲ್ಲಿಯೇ ಹೇಳಿರುವುದೇನೆಂದರೆ:—"ಮನಸು (ಪರಬ್ರಹ್ಮನ) ತೇಜಸ್ಸಿನಿಂದ ಸುತ್ತಿಮುತ್ತಲ್ಪಡುವುದರಿಂದ ಆಗ ಅದು ಕನಸ ಕಾಣುವುದಿಲ್ಲ; ಆಗ ಸುಖವುಂಟಾಗುತ್ತದೆ" (೪.೬)

ಯಾವುದೊಂದು ತೊಡಕು ಬಿಡಿಸುವುದಕ್ಕೆ ತಲೆ ತುರಿಸಿಕೊಂಡು ಕೊನೆಗೆ ಸಂಪೂರ್ಣ ಸಮಾಧಾನಕರ ಉತ್ತರವು ದೊರೆಯದಾಗುತ್ತಲೆ, ಏನಕೇನೋ ಸಮಾಧಾನ ಹಚ್ಚಿಕೊಳ್ಳುವುದೊಂದು ರೀತಿಯಿದೆ. 'ಮಾಯಾ,' 'ಬ್ರಹ್ಮ' ಎಂಬ ಶಬ್ದಗಳು ಇಂತಹ ಪ್ರಸಂಗಗಳಲ್ಲಿ ಹಲವರಿಂದ ಉಪಯೋಗಿಸಲ್ಪಡುತ್ತವೆ. ಈ ಉತ್ತರಗಳಿಂದ ವಿಚಾರವಿಕಾಸಕ್ಕೆ ಸ್ವಲ್ಪವೂ ಅವಕಾಶ ಸಿಗದೆ, ಮೊದಲಿದ್ದ ತೊಡಕಿಗಿಂತಲೂ ಹೆಚ್ಚಿನ ತೊಡಕು ಉಂಟಾಗುತ್ತದೆ. ಇದೇ ಬಗೆಯ ಒಂದು ಉತ್ತರವು ನಿದ್ದೆಯತೊಡಕಿಗೆ ಉಪನಿಷತ್ತಿನಲ್ಲಿದೆ. ಗಾಢನಿದ್ರೆಯಲ್ಲಿ ಜೀವಬ್ರಹ್ಮೈಕ್ಯವಾಗುತ್ತದೆಂದು ಹೇಳಿದೆ. ಪ್ರಶ್ನೋಪನಿಷತ್ತಿನಲ್ಲಿ ಪಿಪ್ಪಲಾದ ಮುನಿಗಳು, (ಅಂತಃ) ಯಜ್ಞದ ಯಜಮಾನವಾದ ಮನಸು, ದಿನಾಲು ಬ್ರಹ್ಮನಲ್ಲಿ ಹೋಗುತ್ತಿರುತ್ತದೆ. ಎಂದಿರುವರು (೪೦೪). ಛಾಂದೋಗ್ಯದಲ್ಲಿ ಇದೇ ಅಭಿಪ್ರಾಯವು ಇದಕ್ಕೂ ಸುಸ್ಪಷ್ಟವಾಗಿ ಹೇಳಲ್ಪಟ್ಟದೆ. ನನ್ನಿಯನ್ನು (ಸತ್ಯ) ಹೊಂದುವುದೆ ನಿದ್ದೆ (ಸತಾ ಸಂಪನ್ನಃ); ಎಂದು ಅಲ್ಲಿ ಹೇಳಲಾಗಿದೆ (೬.೮.೧)

ಆದರೆ ಬ್ರಹ್ಮಾತ್ಮೈಕ್ಯಕ್ಕೂ, ನಿದ್ದೆಗೂ, ಬ್ರಹ್ಮಾನಂದಕ್ಕೂ, ನಿದ್ರೆಯಿಂದುಂಟಾದ ಸಮಾಧಾನಕ್ಕೂ ಎತ್ತಣ ಹೋಲಿಕೆ ! ದೇವ ಹಾಗೂ ದೆವ್ವ ಶಬ್ದಗಳಲ್ಲಿ ಅಕ್ಷರಗಳ ತುಂಬಾ ಹೋಲಿಕೆಯಿದ್ದ ಮಾತ್ರಕ್ಕೆ, ಎರಡೂ ಒಂದೇ ವರ್ಗದವಾಗಬಹುದೇ ? ಜೀವಬ್ರಹ್ಮೈಕ್ಯ ಹಾಗೂ ನಿದ್ದೆಗಳಲ್ಲಿರುವ ಈ ಹೆಚ್ಚು ಕಡಿಮೆಯು, ಆಗಿನ ಋಷಿಗಳ ಚಿತ್ತಕ್ಕೆ ಹೊಳೆಯದೆ ಹೋಗಿಲ್ಲ. ಆದುದರಿಂದ ಛಾಂದೋಗ್ಯದ ಎಂಟನೆಯ ಅಧ್ಯಾಯದ ಮೂರನೆಯ ಖಂಡದ ಎರಡನೆಯ ಮಂತ್ರದಲ್ಲಿ ಹೀಗೆ ಹೇಳಿದೆ. "ನೆಲದಲ್ಲಿ ಹೂಳಿಟ್ಟ ಬದುಕು ಗೊತ್ತು ಇಲ್ಲದವನು, ಅದರ ಮೇಲೆ ಎಷ್ಟು ಸಲ ಅಲೆದಾಡಿದರೇನು ? ಅವನು ಅದನ್ನು ಅರಿಯಲಾರನು. ಅದೇ ಮೇರೆಗೆ ಈ ಜನಗಳೆಲ್ಲ ಪ್ರತಿನಿತ್ಯದಲ್ಲಿ ಬ್ರಹ್ಮನೊಡನೊಂದುಗೂಡಿದರೂ, ಅವರು ಅದನ್ನು ತಿಳಿಯರು; ಏತಕ್ಕೆಂದರೆ ಅವರನ್ನು ಸುಳ್ಳು (ಅಜ್ಞೆ) ಹಿಂದೆ ಎಳೆಯುತ್ತಿರುತ್ತದೆ."

ಒಂದು ನಿದ್ದೆಯ ವಿಚಾರದಲ್ಲಿಯೇ ಇಷ್ಟು ಮತವೈಚಿತ್ರ್ಯವಿರುವಾಗ, ದ್ವೈತವೋ ಅದ್ವೈತವೋ, ವಿಶಿಷ್ಟಾದ್ವೈತವೋ ! ಈ ಯಾವದೊಂದೇ ಮಾರ್ಗದ ಪ್ರತಿಪಾದನವೇ ಎಲ್ಲ ಉಪನಿಷತ್ತುಗಳಲ್ಲ ಎಲ್ಲ ಋಷಿಮುನಿಗಳಿಂದ ಆಗಿದೆಯೆಂದು ಹೇಳುವುದೂ, ಅಥವಾ ಹಾಗೆ ಸಾಧಿಸುವುದೂ ಹಟಮಾರಿತನವೆಂದು ಹೇಳಿದರೆ, ಅದು ಬಿರುನುಡಿಯಾದೀತೇ ?

# " ಕನಸು " ಏನು?

( ಉಪನಿಷತ್ತಿನ ಋಷಿಗಳ ವಿಚಾರವು. )

ಉಪನಿಷತ್ತಿನಲ್ಲಿ ನಿದ್ರೆಯನ್ನು ಕುರಿತು ಇರುವಷ್ಟು, ಮತವೈಚಿತ್ರ್ಯವು ಕನಸಿನ ಬಗೆಗೆ ಇಲ್ಲ. 'ಅಜೀರ್ಣಾಂಶವು ಕನಸಿಗೆ ಕಾರಣ' ವೆಂದು ಹೇಳುವ ಈ ಗಣ ಮಣ್ಣಿಗರ (ಭೌತಿಕ ವಾದಿಗಳ) ಸಿದ್ಧಾಂತವು ಉಪನಿಷತ್ಕಾರರಿಗೆ ಗೊತ್ತಿದ್ದಿಲ್ಲವೋ ಏನೋ! ನಾಲಗೆಯ ಸವಿಗೆ ಹೊಟ್ಟೆ ಹರಿಯುವಂತೆ ಎಂದೂ ತಿನ್ನದೆ ದೇಹರಕ್ಷಣೆಗಾಗಿ ಅಳತೆಯಿಂದ ತಿಂದು ಅಳತೆಯಿಂದ ನಡೆವವರಿಗೆ ಈ ಸಿದ್ಧಾಂತವು ತಿಳಿಯದೆ ಹೋಗಿದ್ದರೂ ಹೋಗಿರಬಹುದು. ಅಲ್ಲದೆ ಉಪನಿಷತ್ತಿನಲ್ಲಿ ಕನಸನು ಕುರಿತು ಬಂದ ನುಡಿಗಳಲ್ಲಿ 'ಅದು ಯಾಕೆ ಬೀಳುವುದು!' ಎಂಬ ಬಗ್ಗೆ ಹೆಚ್ಚಿಗೆ ಮಾತುಗಳಿರದೆ, 'ಬಿದ್ದಾಗ ಏನು ಆಗುವುದು'! ಹಾಗೂ ಹಾಗೆ ಆಗಲು ಕಾರಣವೇನು!' ಎಂಬ ಪ್ರಶ್ನೆಗಳಿಗೆ ಕೊಟ್ಟ ಉತ್ತರವೇ ಮುಖ್ಯವಾಗಿದೆ.

ಬೃಹದಾರಣ್ಯಕದಲ್ಲಿ ಜನಕ ಹಾಗೂ ಯಾಜ್ಞವಲ್ಕ್ಯರ ಅತ್ಯಂತ ಮಹತ್ವದ ಹಾಗು ಸುಪ್ರಸಿದ್ಧವಾದ ಸಂವಾದದಲ್ಲಿ ಕನಸಿನ ವಿವರಣೆಯು ಸಾಕಷ್ಟಿದೆ. ಅದರಲ್ಲಿ ಯಾಜ್ಞ ವಲ್ಕ್ಯರು ಜನಕರಾಜನಿಗೆ ಅಧ್ಯಾತ್ಮಜ್ಞಾನವನ್ನು, ಮಾಡಿಕೊಡುವಕಾಲಕ್ಕೆ ಕನಸಿನ ವಿಚಾರ ಹೊರಟಾಗ ಹೀಗೆ ಅಂದಿರುವರು. 'ಹೊಂಬಣ್ಣದವನೂ, ಹಂಸ ಪಕ್ಷಿಯೂಹುಟ್ಟು ಸಾವುಗಳಿಲ್ಲದವನೂ (ಅಮೃತನು) ಆದ ಆತ್ಮನು ಕೆಳಗಿನ ತನ್ನ ಗೂಡನ್ನು ಉಸಿರಿನಿಂದ (ಪ್ರಾಣದಿಂದ) ಕಾಯುತ್ತ ತನಗೆ ಬೇಕು ಬೇಕಾದಲ್ಲಿ ಬೇಕಾದಂತೆ ಆಡಾಡುವನು. ನಿದ್ದೆಯ ಕೊನೆಗೆ ಅತ್ತಿತ್ತ ಅಲೆದಾಡಿ, ಒಳೆಯನು (ಆತ್ಮನು) ಅಂದ ಅಂದದ ಸೋಗುಗೊಳ್ಳುವನು; ಸೋಗುಗೊಂಡು ಹೆಣ್ಣಿನೊಡನಾಟದಲ್ಲಿ ಹಿಗ್ಗುವನು. ಉಂಡುಂಡು ಉಬ್ಬುವನು, ಇಲ್ಲವೆ ಕರಾಳ ರೂಪುಗಳನ್ನು ಕಂಡು ಕುಗ್ಗುವನು."

ಇದೇ ಮಾತಿನಲ್ಲಿ ಯಜ್ಞವಲ್ಕ್ಯರು ಕನಸಿನ ಎಡೆಯನ್ನು ಗೊತ್ತುಪಡಿಸುವಾಗ ಹೇಳಿದ್ದೇನಂದರೆ:—ಆತ್ಮನಿಗೆ (ಜೀವಾತ್ಮನಿಗೆ) ಎರಡು ಎಡೆಗಳು; ಒಂದು ಇಲ್ಲಿ ಮತ್ತೊಂದು ಅಲ್ಲಿ (ಪರಲೋಕಸ್ಥಾನ); ಇವೆರಡಕ್ಕೂ ಹೊಂದಿಸುವುದು ಸಂಜೆಯಂತೆ ಕನಸು, ನಡು (ಸಂಜೆ) ಎಡೆಯಲ್ಲಿ ನಿಂತು ಅವನು ಇದು ಹಾಗೂ ಅದು ಇವೆರಡನ್ನೂ ಕಾಣುವನು. ಯಜ್ಞವಲ್ಕ್ಯರು ಮೇಲಣ ಮಾತಿನಲ್ಲಿ ಕನಸಿಗೆ ಸಂಜೆಯ ಹೋಲಿಕೆ ತೋರಿಸಿರುವದರಿಂದ ಇದು ಅಂದರೆ ಈ ಲೋಕದ ಇರುವು ತಿಳಿವಿನ ಬೆಳಕಿನದೆಂದೂ ಅದು ಮರಣಾನಂತರದ್ದು– ಬೆಳಕಿಲ್ಲದುದೆಂದೂ ಸೂಚಿಸಿದಂತಾಗಲಿಲ್ಲವೆ? ಯಜ್ಞವಲ್ಕ್ಯರು ಮುಂದೆ (ಜೀವ) ಆತ್ಮನನ್ನು ಮೀನಕ್ಕೆ ಹೋಲಿಸಿ, "ಮೀನು

ದೊಡ್ಡ ಮೀನದಂತೆ 'ಆ' ಹಾಗು 'ಈ' ಎರಡೂ ದಂಡೆಗುಂಟ ಅಂದರೆ ನಿದ್ದೆ ಹಾಗೂ ಎಚ್ಚರದ ಎರಡೂ ಎಡೆಗಳಲ್ಲಿ ಓಡಾಡುವದು ಎಂದಿರುವರು.

ಕನಸಿನಲ್ಲಿ (ಜೀವ) ಆತ್ಮನು ತೋರ್ಪಡಿಸುವ ಅದ್ಭುತ ಕರ್ತೃತ್ವಶಕ್ತಿ–ಮಾಟಗಾರಿಕೆಯನ್ನು ಕುರಿತು ಯಾಜ್ಞವಲ್ಕ್ಯರು ಅದೇ ಮಾತಿನಲ್ಲಿ ಬಹಳ ಚನ್ನಾಗಿ ಬಣ್ಣಿಸಿರುವರು. ಈ ಬಗೆಗೆ ಅವರು ಹೇಳುವುದೇನಂದರೆ:–ಕನಸಿನಲ್ಲಿ ನಿಜವಾಗಿ ತೇರುಗಳಿಲ್ಲ, ಕುದುರೆಗಳಿಲ್ಲ, ತೇರದಾರಿಗಳಿಲ್ಲ. ಆದರೆ ತೇರು, ಕುದುರೆ, ದಾರಿಗಳನ್ನು ಅವನೇ ಉಂಟುಮಾಡಿಕೊಳ್ಳುತ್ತಾನೆ; ಆನಂದಗಳಿಲ್ಲ, ಮೋದವಿಲ್ಲ, ಅಥವಾ ಪ್ರಮೋದವೂ ಇಲ್ಲ, ಆದರೆ ಆತನೇ ಆನಂದ, ಮೋದ, ಪ್ರಮೋದಗಳನ್ನೆಲ್ಲ ಹುಟ್ಟಿಸಿಕೊಳ್ಳುತ್ತಾನೆ; ಕೆರೆಗಳಿಲ್ಲ, ಹೊಂಡಗಳಿಲ್ಲ, ಇಲ್ಲವೆ ಹೊಳೆಗಳಿಲ್ಲ ಆದರೆ ಆತನೇ ಕೆರೆ, ಹೊಂಡ, ಹೊಳೆಗಳನ್ನು ನಿರ್ಮಿಸಿಕೊಳ್ಳುತ್ತಾನೆ. ಯಾಕಂದರೆ ಅವನು ಅಂತಹ ಮಾಟಗಾರನು!

ಕನಸಿನಲ್ಲಿ ಕಾಣುವುದೇನು? ಮತ್ತು ಯಾಕೆ? ಎಂಬ ತೊಡಕನ್ನು ಉಪನಿಷತ್ಕಾಲದ ಪ್ರಖ್ಯಾತ ಮಾನಸ ಅಧ್ಯಾತ್ಮಶಾಸ್ತ್ರಿಯಾದ ಪಿಪ್ಪಲಾದ ಮುನಿಯು ಪ್ರಶ್ನೋಪನಿಷತ್ತಿನಲ್ಲಿ ಬಿಡಿಸಿದ್ದಾನೆ. "ಹಗಲೂ ಹನ್ನೆರಡೂ ತಾಸು ಕಂಡುದು, ಕನವರಿಸುತ್ತಿದ್ದುದನ್ನೇ ಕನಸಿನಲ್ಲಿ ಕಾಣುವರು" ಎಂಬ ಆಧುನಿಕರ ಸಿದ್ಧಾಂತವನ್ನು ಪಿಪ್ಪಲಾದನು ಒಪ್ಪಿದರೂ ಆತನು ಇದಕ್ಕೂ ಹೆಚ್ಚಿನ ಒಂದು ಮಾತನ್ನು ಹೇಳುತ್ತಾನೆ; ಆಡಿದುದು ನೋಡಿದುದು, ಮಾಡಿದುದರ ಪಡಿನೆಳಲನ್ನಷ್ಟೇ ಕನಸಿನಲ್ಲಿ ಕಾಣುವನೆಂತಲ್ಲ, ಎಂದೆಂದೂ ಕಾಣದ್ದನ್ನೂ ಕಾಂಬನು; "(ಕನಸಿನಲ್ಲಿ ಜೀವ) ದೇವನು ಹಿರಿತನವನ್ನು ಅನುಭವಿಸುತ್ತಾನೆ; ಕಂಡೇ ಕಂಡುದನ್ನು ಮತ್ತೆ ಕಾಣುವನು; ಕೇಳಿಯೇ ಕೇಳಿದ್ದನ್ನು ಮತ್ತೆ ಕೇಳುವನು; ಕಂಡದ್ದು ಮತ್ತು ಕಾಣದ್ದು, ಕೇಳಿದ್ದು ಮತ್ತು ಕೇಳದ್ದು ಭೋಗಿಸಿದ್ದು ಹಾಗೂ ಭೋಗಿಸದ್ದು, ಇದ್ದುದು ಹಾಗೂ ಇಲ್ಲದ್ದು ಎಲ್ಲವನೂ ಅನುಭವಿಸುವನು. ಏತಕ್ಕೆಂದರೆ ಎಲ್ಲವೂ ಅವನೇ.

ಇದರ ಮೇಲಿಂದ ಪ್ರಾಚೀನ ಋಷಿಗಳು ನಿದ್ದೆ ಕನಸು ಮೊದಲಾದ ಮಾನಸಶಾಸ್ತ್ರದ ವಿಷಯಗಳ ಸಂಸೋಧನವನ್ನು ಎಷ್ಟು ಸೂಕ್ಷ್ಮವಾಗಿ ಮಾಡುತ್ತಿದ್ದರೆಂಬುದು ಕಂಡುಬರುವದು. ಆದರೆ ಅವರ ವಂಶಜರಾದ ನಾವು ಹಿಂದಿನವರು ಬಿಟ್ಟುದರ ಮುಂದೆ ಮತ್ತೆ ಸಂಶೋಧನ ಕಾರ್ಯವನ್ನು ಕೈಕೊಳ್ಳದೆ "ಹಿಂದಿನವರು ಕಂಡುಹಿಡಿದುದೇ ಕೊನೆಯ ಮಾತು" ಎಂಬ ಭ್ರಮದೊಳಗೆ ಇರುವೆವು. ಆದರೆ ಪಡುವಣರು (ಪಾಶ್ಚಾತ್ಯರು) ಮಾತ್ರ ಮುಂದೆ ಸಂಶೋಧನ ಕಾರ್ಯ ನಡಿಸಿ, ಮಾನಸ ಹಾಗೂ ಆಧ್ಯಾತ್ಮಶಾಸ್ತ್ರಗಳಲ್ಲಿ ಹೆಚ್ಚಿನವರೆನಿಸಿದ ಭಾರತೀಯರನ್ನೂ ಹಿಂದೊಗೆಯುವ ಹವಣಿಕೆಯಲ್ಲಿದ್ದಾರೆ! ಅದಕಾರಣ ನಮ್ಮ ಹಿಂದಿನ ಬಂಡವಾಳವೇನೆಂಬುದನ್ನು ಅರಿತು ಮುಂದೆ ಅದನ್ನು ಹೆಚ್ಚಿಸಿ ಪ್ರಪಂಚದ ವ್ಯಾಪಾರದಲ್ಲಿ ಹಿಂದಿನವರು ಪಡೆದ ಮೇಲ್ಮೆಯನ್ನು ಕಾಯ್ದುಕೊಳ್ಳುವುದು ಕರ್ತವ್ಯವಾಗಿಲ್ಲವೆ?

# ಸ್ತ್ರೀಯರ ಬಗ್ಗೆ ವೇದದ ವಿಚಾರಗಳು.

ರೂಪದೊಂದು ಪದಾರ್ಥ ಗ್ರಹಣಮಾಡಿದ ಕೂಡಲೇ ಆ ವಸ್ತುವಿನ ಸುಗುಣ ದುರ್ಗುಣಗಳೆರಡೂ ಅದರೊಡನೆಯೇ ಬರುತ್ತವೆ. ಪಾಶ್ಚಾತ್ಯ ಶಿಕ್ಷಣ, ಸಂಸ್ಕೃತಿ, ಸಂಸರ್ಗಗಳಿಂದ ತೇಜೋಹೀನರಾದ ಕೆಲ ಭಾರತೀಯ ತರುಣ ತರುಣಿಯರ ಮನಸ್ಸಿನಮೇಲೆ, ವಿಲಕ್ಷಣವಾದ ಪರಿಣಾಮಗಳಾಗಿವೆ. ಆರ್ಯಸಂಸ್ಕೃತಿಯೆಂದ ಕೂಡಲೇ ಅವರಿಗೆ ತಲೆನೋವು ಏಳುತ್ತದೆ. ಅವರ ಆಚಾರ ವಿಚಾರಗಳೆಂದ ಕೂಡಲೇ ತಿರಸ್ಕಾರದಿಂದ ಮೂಗುಮುರಿಯುತ್ತಾರೆ. ಪಾಶ್ಚಾತ್ಯರ ಆಚಾರ ವಿಚಾರಗಳೇ ಅವರಿಗ ಒಗ್ಗುತ್ತವೆ. ಅವರ ಬುದ್ಧಿಯೇ ಇವರ ಬುದ್ಧಿ. ಅವರ ವಿಚಾರವೇ ಇವರ ವಿಚಾರ, ಹೀಗಾಗಿ ಎಷ್ಟೋ ಭಾರತೀಯರು ಪಾಶ್ಚಾತ್ಯ ಸಂಸ್ಕೃತಿಯ ತೊತ್ತಾಗಿ ಸೂತ್ರಗೊಂಬೆಗಳಂತೆ, ಕುಣಿಯ ತೊಡಗಿದ್ದಾರೆ.

ಸಮುದ್ರ ಮಧ್ಯದಲ್ಲಿ ಉಂಟಾದ ತೆರೆಯು ಸುತ್ತು ಮುತ್ತಲೂ ದಂಡೆಗೆ ಬಂದು ಅಪ್ಪಳಿಸುವಂತೆ, ಇಂದು ಪಾಶ್ಚಾತ್ಯ ಮನಃಸ್ಸಾಗರದಲ್ಲಿ ಉಂಟಾದ ಸ್ತ್ರೀ ಸ್ವಾತಂತ್ರ್ಯವೆಂಬ ಹಿರಿ ತೆರೆಯು ಭಾರತದ ಮೇಲೆಯೂ ಅಪ್ಪಳಿಸಿ, ಪಾಶ್ಚಾತ್ಯ ಸಂಸ್ಕೃತಿಯಿಂದ ಮೋಹಿತರಾದ ಪರಪ್ರತ್ಯಯ ಬುದ್ಧಿಯುಳ್ಳ, ಭಾರತೀಯ ತರುಣ ತರುಣಿಯರಲ್ಲಿ ವಿಲಕ್ಷಣವಾದ ಕ್ರಾಂತಿಯನ್ನುಂಟುಮಾಡಿದೆ. ಹಳೆಯುದನ್ನೆಲ್ಲ ಹೊಳೆಗಾಣಿಸುವೆವೆಂಬ ಮನಸಂಕಲ್ಪರಾಗಿ, ಸುಧಾರಣಾಗ್ರೇಸರ ಚಕ್ರವರ್ತಿಗಳು ವಾಗ್ಬಾಣಗಳಿಂದ ಆರ್ಯ ಸಂಸ್ಕೃತಿಯನ್ನು ನುಚ್ಚುನುರಿಮಾಡಲು ಬದ್ಧ ಕಂಕಣರಾಗಿದ್ದಾರೆ. ಕಣ್ಣನ್ನು ಕುಕ್ಕಿಸುವ ಭೌತಿಕ ಶಾಸ್ತ್ರದ ಬೆಡಗೇ ಇದಕ್ಕೆ ಕಾರಣವೆಂಬುವನ್ನು ನಾವು ಬಲ್ಲೆವು. ಭಾರತೀಯ ಸಂಸ್ಕೃತಿಯು ಉಜ್ವಲಸ್ವರೂಪವನ್ನು ನಮ್ಮೆದುರಿಗಿಡಲು ನಮ್ಮ ಜನರು ಆಲಸ್ಯ ಮಾಡಿದ್ದರ ಪರಿಣಾಮವು ಇದೇ ಎಂದು ಹೇಳಲೂ ನಮಗೆ ಯಾವ ತಡೆಯೂ ಕಾಣುವದಿಲ್ಲ. ಇರಲಿ. ಇವರಿಂದ ಕೇವಲ ಪಾಶ್ಚಾತ್ಯ ಸಂಸ್ಕೃತಿಯನ್ನು ಹಳಿಯುವೆವೆಂದು ಮಾತ್ರ ತಿಳಿಯಲಾಗದು. ಆದರೆ ನಮಗೂ ಒಂದು ಸಂಸ್ಕೃತಿಯುಂಟು. ಆ ಸಂಸ್ಕೃತಿಯೂ, ಎಷ್ಟೋ ಜನ ಧರ್ಮವೀರರನ್ನೂ ಕರ್ಮವೀರರನ್ನೂ ರಾಷ್ಟ್ರವೀರರನ್ನೂ ಉಂಟುಮಾಡಿದೆ. ಆ ಸಂಸ್ಕೃತಿಯೂ, ಒಂದು ಕಾಲಕ್ಕೆ ಜಗತ್ತಿನ ಸಾರ್ವಭೌಮತ್ವವನ್ನು ಪಡೆದಿದೆ. ಇಷ್ಟೇ ಅಲ್ಲ ಎಷ್ಟೋ ಜನ ಒಳಗಣ್ಣಿನ ಪಾಶ್ಚಾತ್ಯ ತತ್ವಜ್ಞಾನಿಗಳು ಕೂಡ ಕೊಂಡಾಡುತ್ತಿರುವರು. ಅನೇಕ ಆಘಾತ ಪ್ರತ್ಯಾಘಾತಗಳಿಂದ ಇಂದಿಗೂ ಜಗತ್ತಿನಲ್ಲಿ ಅನೇಕ ಶತಮಾನಗಳಿಂದ ಬಾಳಿಬದುಕಿರುವರು. ಆದ್ದರಿಂದ ಮೊದಲು ಸಧ್ಯದ ರೂಢಿಯನ್ನು ಸಮಾಜವನ್ನೂ, ಬದಿಗಿರಿಸಿ, ಅದರ ಉಗಮಸ್ಥಾನವನ್ನು ಸಂಶೋಧಿಸಿರಿ, ಅದರಲ್ಲಿರುವ ನ್ಯೂನತೆಗಳನ್ನು ಹುಡುಕಿ ತೆಗೆಯಿರಿ, ಆ ಮೇಲೆ ಸುಧಾರಿಸು

ನದಿದ್ದರೆ ಆ ಸುಧಾರಣೆಯು ನಮ್ಮ ಸಂಸ್ಕೃತಿಗೆ ಅವಿರೋಧವಾಗಿದ್ದು ನಮ್ಮ ಸಮಾಜಕ್ಕೂ ದೇಶಕ್ಕೂ ಹಿತಾವಹವಾಗಿದ್ದರೆ ಸುಧಾರಿಸೋಣ.

ಯಾಕಂದರೆ ಅವರು ಭೌತಿಕ ಶಾಸ್ತ್ರದಲ್ಲಿ ಎಷ್ಟೋ ಮುಂದುವರಿದಿದ್ದರೂ ಅಂತರಂಗಿಕ ಸುಧಾರಣೆಯಲ್ಲಿ ಭಾರತದಷ್ಟು ಮುಂದುವರಿದಿಲ್ಲ. ಅವರ ಸುಧಾರಣೆಗಳೂ ಆಕಾಂಕ್ಷೆಗಳೂ ಇನ್ನೂ ಸ್ವಾರ್ಥಮೂಲವಾಗಿ ಬಹಿರ್ಮುಖವಾಗಿಯೇ ಇವೆ. ಅವರ ಸಮಾಜದ ಬೆಳವಣಿಗೆಯು ಇನ್ನೂ ಪೂರ್ಣವಾಗಿಲ್ಲ. ಡಾರ್ವಿನ್ನನ ಉತ್ಕ್ರಾಂತಿತತ್ವದಂತೆ ಈಗೀಗ ಮಾನವ ಜಾತಿಯ ಸಮೀಪಕ್ಕೆ ಅವರ ಸಮಾಜವು ಬರಹತ್ತಿದೆ. ಆದ್ದರಿಂದ ಅವರ ಸಮಾಜದಲ್ಲಿ ಆಧ್ಯಾತ್ಮಿಕ ಹಾಗು ಆದಿಭೌತಿ ಸುಧಾರಣೆಗಳು ಸರಿಯಾಗಿ ವಿಕಾಸವನ್ನು ಹೊಂದುವಂತೆ, ಅವರ ಸಮಾಜಘಟನೆಗಳು ಇನ್ನೂ ಉಂಟಾಗಿಲ್ಲವೆಂಬುದಕ್ಕೆ ಅವರ ಸ್ತ್ರೀಯರ ಬಗ್ಗೆ ಇದ್ದ ಈಗಿನ ಕಲ್ಪನೆಗಳೇಸಾಕ್ಷಿಯಾಗಿವೆ. ಆದರೆ ನಮ್ಮ ಸಂಸ್ಕೃತಿಯ ಮಾತು ಹಾಗಲ್ಲ. ನಮ್ಮ ಸಮಾಜವೂ ಪಾಶ್ಚಾತ್ಯರ ಈ ಎಲ್ಲ ಸುಧಾರಣೆಗಳಲ್ಲಿ ಹಾಯ್ದು ಈ ಮೆಟ್ಟಿಗೆ ಬಂದು ನಿಂತಿದೆ. ನಮ್ಮ ಮಹರ್ಷಿಗಳು ಯೋಗಸ್ಥರಾಗಿ ಸ್ತ್ರೀ ಪುರುಷರ ಸ್ವಭಾವಶೀಲಗಳನ್ನರಿತು ಮಾನವಜಾತಿಗೇ ಆದರ್ಶಪ್ರಾಯವಾಗುವಂಥ ಸಮಾಜ ನಿಯಮಗಳನ್ನುಂಟುಮಾಡಿರುವರು. ಹಾಗಾದರೆ ಸಧ್ಯದ ಈ ಅನವಸ್ಥೆಗಳೇಕೆ! ಎಂಬ ಪ್ರಶ್ನೆಯು, ಇದಕ್ಕೆ ನಮ್ಮ ಇಷ್ಟೇ ಉತ್ತರವು. ಸಧ್ಯದ ನಮ್ಮ ಸಮಾಜವು ಮೈಮರೆತಿದೆ. ಅದು ಗೊತ್ತುಗುರಿಗಳಿಲ್ಲದೇ ಸಾಗಿದೆ. ಅದಕ್ಕೆ ತನ್ನ ಸಂಸ್ಕೃತಿಯ ಅರಿವು ತನಗಿಲ್ಲ. ಆದ್ದರಿಂದಲೇ ಪಾಶ್ಚಾತ್ಯ ಸಂಸ್ಕೃತಿಯ ಬೀಜಗಳು ಬಿದ್ದು ಮೊಳಕೆಯೊಡದಿವೆ. ಇಂದು ನಾವು ನಮ್ಮ ಸಂಸ್ಕೃತಿಯ ಮೇಲಿನ ಧೂಳನ್ನು ಝಾಡಿಸಿ ತೆಗೆದು ಅದರ ದಿವ್ಯಸ್ವರೂಪವನ್ನು ಭಾರತೀಯರ ಎದುರಿಗೆ ಇಡವದು ಅವಶ್ಯವಿದೆ. ಈ ದೃಷ್ಟಿಯಿಂದ ಆರ್ಯ ಸಂಸ್ಕೃತಿಯ ತಾಯಿಬೇರಾದ ತಿಳಿನುಡಿಯಲ್ಲಿ (ವೇದ) ಮಹಿಳೆಯರ ಸಮಾಜದಲ್ಲಿಯ ಯೋಗ್ಯತೆ, ಸ್ಥಾನ, ಪತಿಪತ್ನಿಯ ಸಂಬಂಧ ಮೊದಲಾದವುಗಳ ಬಗ್ಗೆ ಯಾವ ಬಗೆಯ ವಿಚಾರಗಳಿವೆಯೆಂಬುದನ್ನು ನೋಡೋಣ—

(೧) ಇಡೇರಂತೇ ಹವ್ಯೇ ಕಾಮ್ಯೇ ಚಂದ್ರೇ ಜ್ಯೋತೇಽದಿತೇ ಸರಸ್ವತಿ ಮಹಿ ವಿಶ್ರುತಿ । ಸತಾತ್ಯೇಘ್ನ್ಯೇನಾಮಾನಿ ದೇವೇಭ್ಯೋಯಾ ಸುಕೃತಂ ಬ್ರೂಯಾತ ।

(೨) ಅಜಿಘ್ರ ಕಲಶಮ್ಮಹ್ಯಾತ್ವಾ ವಿಶಂತು ಇಂದ್ರವಃ । ಪುನರುರ್ಜಾ ನಿವರ್ತ್ತಸ್ವಸಾನಃ ಸಹ ಅಂಧು ಕ್ಷ್ವೋರುಧಾರಾ ಪಯಸ್ವತೀ । ಪುನರ್ಮಾ ವಿಶತಾದ್ರಯಿಃ ।

ಯಜು. ಅ. ೮, ಮಂ. ೪೦–೪೧.

(೧) ಸ್ತ್ರೀಯಳೇ! ನೀನು ಪೂಜ್ಯಳೂ ಸನ್ಮಾನಾರ್ಹಳೂ ಗೃಹದ ಆನಂದಪ್ರವರ್ತಿಯೂ ಮನೋಹರಳೂ ಮಾಧುರ್ಯದ ಸಾರಳೂ, ಅಂಗೀಕಾರಾರ್ಹಳೂ (ಕಟ್ಟಲ್ಪಬಡ) ಮನೇಚ್ಛಾಪೂರಕಳೂ ಚಂದ್ರನಂತೆ, ಸಮಾಧಾನದಾಯಕಳೂ ಶಾಂತಳೂ ಗೃಹದ ಜ್ಯೋತಿಯೂ ಯಾವ ವಿಧದ ಅಪಮಾನಕ್ಕೂ ಅನರ್ಹಳಾದ ಮೂಲ ಪ್ರಕೃತಿಯೂ ವಾಣಿಯ ದೇವತೆಯೂ ಗೃಹದ ಹಾಗು ಸಮಾಜದ ಅಧಿಷ್ಠಾತ್ರಿಯೂ ಬುದ್ಧಿಯಪ್ರೇರಕಳೂ ವೇದವೇತ್ತೆಯೂ ಕಾಮಧೇನುವಿನಂತೆ, ನಮ್ರಳೂ ಪೋಷಣಾರ್ಹಳೂ ಮುಂತಾದ ಪವಿತ್ರವಾದ ಅನೇಕ ನಾಮಗಳಿಂದ ಸಂಬೋಧಿಸಲ್ಪಡುತ್ತಿರುವಿ. ಬುದ್ಧಿಯು ಹಾಗು ಅಂತಃಕರಣದ ದಿವ್ಯವಾದ ಗುಣಗಳು ನನಗೆ ಪ್ರಾಪ್ತವಾಗುವಂತೆ, ಪುಣ್ಯಕರವಾದ ಕರ್ಮಗಳನ್ನು ಸವಿನಯದಿಂದ ನೀನು ನನಗೆ ನಿವೇದಿಸು.

(೨) ಸ್ತ್ರೀಯಳೇ! ನೀನು ನಿಜವಾಗಿ ಮಹಾತ್ಮಳಾಗಿದ್ದು ಪೂಜ್ಯಳಾಗಿರುವಿ. ನನ್ನ ಗೃಹದೇವತೆಯಾಗಲು ನೀನು ಬಾ! ನಿನ್ನ ಸಹವಾಸದಿಂದ ನಾನು ಅಪ್ರತಿಮವಾದ ಸಮಾಧಾನವನ್ನು ಹೊಂದುವೆನು. ಅನೇಕ ವಿಧವಾದ ಸಂಪತ್ತು ನಿನ್ನದಾಗಲಿ. ಈ ಗ್ರಹದ ಸಿಂಹಾಸನವನ್ನು ಅಲಂಕರಿಸಿ ನನ್ನ ಕ್ಲೇಶಗಳು ಶಾಂತವಾಗುವಂತೆಯೂ ಸಮಾಧಾನ ವಾಗುವಂತೆಯೂ ನೀನು ಮಾಡು. ಸಹಸ್ರಶಃ ಶಕ್ತಿಗಳನ್ನು ನೀನು ನನಗೆ ದಯಪಾಲಿಸು. ಅನೇಕ ಶಿಕ್ಷಾ ಶಾಸ್ತ್ರಗಳ ಪುರಸ್ಕೃತಳೇ! ಆಶೀರ್ವಚನಗಳಿಂದ ಪರಿಪೂರಿತಳಾದ ಪಯಸ್ವಿನಿಯೇ ನಿನ್ನ ಮುಖಾಂತರವಾಗಿ ಆಧ್ಯಾತ್ಮಿಕ ಆದಿಭೌತಿಕ ಸುಖಗಳು ನನಗೆ ದೊರೆಯಲಿ.

ಈ ಮನೋಹರವಾದ ಮಂತ್ರಗಳು ಸ್ತ್ರೀಯರ ಮಹಿಮೆಯನ್ನು ಯಾವ ಬಗೆಯ ಆದರಣೀಯ ಶಬ್ದಗಳಿಂದ ವರ್ಣಿಸುತ್ತವೆಂಬುದನ್ನು ವಾಚಕರೇ ವಿಚಾರಮಾಡಬೇಕು. ನಿಜವಾಗಿ ಸ್ತ್ರೀಯು ಗೃಹದ ಅಧ್ಯಕ್ಷದೇವತೆಯಾಗಿರುತ್ತಾಳೆ. ಪವಿತ್ರವಾದ ಅಗ್ನಿಯಂತೆ ಅವಳು ತೇಜಮಯಳೂ ಪಾಪಗಳನ್ನು ದಹಿಸುವವಳೂ ಆಗಿರುವಳು. ಪೂಜಾರ್ಹಳೂ ಪೋಷಣೀಯಳೂ, ರಕ್ಷಣೀಯಳೂ ಅಹನ್ಯಳೂ ಆಗಿರುವಳು. ಸೃಷ್ಟಿಯ ಉತ್ಪತ್ತಿಗೆ ಕಾರಣಳಾದ ಆದಿಮೂರ್ತಿಯೇ ಇವಳು. ಸಾಧ್ವಿಯಾದ ಹಾಗು ಪವಿತ್ರಳಾದ ಗೃಹಿಣಿಗೆ ಸಮಾನವಾದ ಪವಿತ್ರವಸ್ತುವು ಬೇರೊಂದು ಇಲ್ಲ. ಸ್ತ್ರೀಯಳು ಮಾನವರ್ಗಕ್ಕೆ ಗುರುಸ್ಥಾನದಲ್ಲಿರುವಳು ವೇದವಾಣಿಯಂತೆ, ಅವಳು ಖುಾವಾಗಲೂ ಸರ್ವಶಕ್ತಿಮಾನನಾದ ಪರಮಾತ್ಮನ ಅಖಂಡವಾದ ಗುಣಗಳನ್ನು ಹೊಗಳುವವಳು ಮಾನವರಿಗೆ ಉನ್ನತಾವಸ್ಥೆಯನ್ನೀಯುವ ಅತ್ಯಂತ ಶ್ರೇಷ್ಠವಾದ ಹಾಗು ಪ್ರೇಮಮಯವಾದ ಸದ್ಗುಣಗಳ ತವರಮನೆಯಾಗಿರುವವಳು. ಅನಾದಿಕಾಲದಿಂದ ಸಂಸ್ಕೃತ ರಾಷ್ಟ್ರಗಳಲ್ಲಿ ಸ್ತ್ರೀಯು ಸಕಾರಣವಾಗಿ ಪುರುಷನ ಆದರದ ವಿಷಯವಾಗಿರುವಳು. ಅವಳ ಸ್ವಭಾವದಲ್ಲಿ ಸೃಷ್ಟಿದೇವತೆಯ ಪ್ರತಿಬಿಂಬವನ್ನು ಕಾಣಬಹುದು. ಮಾನವ ಪ್ರಾಣಿಯ ಶೀಲದ ಸುಂದರವಾದ ಮಂದಿರವನ್ನು ಕಟ್ಟುವವಳು ಅವಳೇ! ಭೂಮಿಯಂತೆಯೂ ಕಾಮ

ಧೇನುವಿನಂತೆಯೂ ಆಕೆಯು ಮಾನುಷ್ಯವರ್ಗದ ಪೋಷಕಳಾಗಿರುತ್ತಾಳೆ. ಪ್ರಜರನ್ನು ಅಸ್ತಿತ್ವದಲ್ಲಿ ತರುವವಳೂ ದುಗ್ಧಪಾನವನ್ನು ಮಾಡಿಸುವವಳೂ ಅವಳೇ ! ಕರುಣಾ ಪೂರ್ಣವಾದ ಅವಳ ದೃಷ್ಟಿಯಿಂದಲೇ ಸಕಲ ದುಃಖಗಳು ನಿವಾರಣೆಯಾಗುವವು. ನಮ್ಮ ಸಲುವಾಗಿ ಸ್ವರ್ಗದ ಬಾಗಿಲಗಳನ್ನು ತೆರೆಯುವವಳು ಅವಳೇ ! ಮನುಷ್ಯನ ಪ್ರೇಮವೆಲ್ಲ ಅವಳಲ್ಲಿಯೇ ಏಕೀಕರಣವಾಗಿರುವದು. ಶುದ್ಧ ಭಾವನಾಮಯವಾದ ಅಲೌಕಿಕವಾದ ಮೋಕ್ಷದ ಮೆಟ್ಟಲಾದ ಪ್ರೇಮದ ಮೂರ್ತಿಯೇ ಅವಳು. ಜಗತ್ತಿನ ರಂಗಭೂಮಿಯಿಂದ ಸ್ತ್ರೀಯು ಮಾಯವಾದರೆ, ಪ್ರೇಮಭಾವನೆಯೇ ಲುಪ್ತವಾಗುವದು. ಪ್ರೇಮವನ್ನು ಪೋಷಿಸುವವಳೂ ಪೂರ್ಣತ್ವಕ್ಕೆ ಮುಟ್ಟಿಸುವವಳೂ ಅವಳೇ ! ಇದಕ್ಕಾಗಿಯೇ ಅವಳು ರತ್ನಾ–ರಮ್ಯಳು. ಕಾಮ್ಯ–ಸ್ಪೃಹಣೀಯಳೂ ಎಂದು ಕರೆಯಲ್ಪಡುತ್ತಾಳೆ. ಅವಳ ಹೊರ್ತು ಸಮಾಜವು ಅಥವಾ ಪ್ರಪಂಚವು ಅಂಧಕಾರಮಯವಾಗಿಯೂ ಉದಾಶೀನವಾಗಿಯೂ ಆಗುವದರಿಂದಲೇ ಅವಳು ಜ್ಯೋತೀ ಚಂದ್ರೀ ಎಂದು ಕರೆಯಲ್ಪಡುತ್ತಾಳೆ. ನಿತ್ಯದಲ್ಲಿಯೂ ಅವಳು ಅಂಗೀಕರಣೀಯಳಾದ್ದರಿಂದಲೂ ತ್ಯಾಗಕ್ಕೆ ಅನರ್ಹಳಾಗಿದ್ದರಿಂದಲೂ ಹವ್ಯೆ, ಅಘ್ನ್ಯೇ ಎಂದು ಕರೆಯಲ್ಪಡುತ್ತಾಳೆ.

ವಾಚಕರೇ! ಈ ವರ್ಣನೆಯಲ್ಲಿ ಅತಿಶಯೋಕ್ತಿಯಿಲ್ಲ. ತಿಳಿನುಡಿಗಳಿಗೆ (ವೇದಗಳಿಗೆ) ಅತಿಶಯೋಕ್ತಿಯು ಗೊತ್ತಿಲ್ಲ. ಯೋಗಾರೂಢರಾಗಿ ಕುಳಿತಂಥ ವೇಳೆಯಲ್ಲಿ ಪರಮಾತ್ಮನಿಂದ ಬಂದ ತಿಳಿನುಡಿಗಳಿವು. ವಿಕಾರವಶರಾದ ಮಾನವರ ಕಣ್ಣುಗಳಿಗೆ ಈ ಗುಣಗಳು ಕಾಣದಿದ್ದರೂ ಪರಮಾತ್ಮನ ಈಶಬ್ದಗಳು ಸ್ತ್ರೀಯರಿಗೆ ಉಚ್ಚಸ್ಥಾನವನ್ನು ಕೊಟ್ಟವೆ. ಆದ್ದರಿಂದಲೇ **यत्र नार्यस्तु पूज्यन्ते तत्र रमन्ते च.** ಎಂದು ಭಗವಂತನೇ ಹೇಳಿದ್ದಾನೆ.

ಸ್ತ್ರೀಯರ ಸದ್ಗುಣಗಳನ್ನೂ ಕರ್ತವ್ಯಗಳನ್ನೂ ಕರ್ತವ್ಯಗಳನ್ನೂ ನಿವೇದಿಸುವ ಯಜುರ್ವೇದದೊಳಗಿನ ಕೆಲವು ಮಂತ್ರಗಳನ್ನು ಇಲ್ಲಿ ಕೊಡುತ್ತೇವೆ. ಸಮಾಜದಲ್ಲಿಯ ಸ್ತ್ರೀಯರ ಸ್ಥಾನ ಯಾವುದೆಂಬುದನ್ನು ಅವು ನಿರ್ಣಯಿಸುತ್ತವೆ. ವಿವಾಹದಲ್ಲಿ ಅಗ್ನಿಯ ಸುತ್ತಲೂ ಪ್ರದಕ್ಷಿಣೆಗಳನ್ನು ಹಾಕುವ ವಧೂವರರಿಂದ ಮಂತ್ರಗಳು ಪಠಿಸಲ್ಪಡುತ್ತವೆ. (ಅದರ ತಿಳಿಯುವ ದ್ಯಾಂಗೆ)

(೧) ಓಂ ಸರಸ್ವತಿ ಪ್ರೇದಮವಂ ಸುಭಗೇವಾಜಾನೀವತಿ । ಯಾಂ ತ್ವಾ ವಿಶ್ವಸ್ಯ ಭೂತಸ್ಯ ಪ್ರಜಾಮಾಸ ಸ್ಯಾಗ್ರತಃ ॥ ಯಸ್ಯಾಂ ಭೂತಸಮಭವದ್ಯಸ್ಯಾಂ ವಿಶ್ವಮಿದಂಜಗತ್ । ತಾಮದ್ಯಗಾಥಾಂಗಾಸ್ಯಾಮಿಯಾ ಸ್ತ್ರೀಣಾಮುತ್ತಮಂ ಯಶಃ ॥

ವಿದ್ಯಾದೇವಿಯೇ । ವೈಬಭಶಕ್ತಿಗಳದಾಯಕಳೇ ! ನಿನ್ನ ಪಾಣಿಗ್ರಹಣ ಮಾಡಿದವನನ್ನು ರಕ್ಷಿಸು । ಈ ಸೃಷ್ಟಿಗೆ ನೀನು ಉಗಮಸ್ಥಾನಳು. ಮಾನವೀ ಅಸ್ತಿತ್ವವು ನಿನ್ನಲ್ಲಿ ಉಂಟು. ನಿನ್ನ ಕೀರ್ತಿಕರವಾದ ಮಹಿಮೆಯ ಗಾನವನ್ನು ಮಾಡುವೆನು.

(೨) ಕನ್ಯಲಉತತ್ವಯಾವಯಂ ಧಾರಾ ಉದನ್ಯ ಇವಾತಿ ಗಾಹೇ ಮಹಿದ್ವಿಷ॥ ವೇಗಯುಕ್ತವಾದ ಪ್ರವಾಹವು ಮಾಲಿನ್ಯವನ್ನು ದೂರಮಾಡುವಂತೆ, ಹೇ ತೇಜೋಮಯಳೇ ನಿನ್ನ ಸಹಾಯದಿಂದ ಪ್ರತಿಸ್ಪರ್ಧಿಗಳಾದ ಶತ್ರುಗಳ ಸಾಮರ್ಥ್ಯಗಳನ್ನೆಲ್ಲ ಇಲ್ಲವಂತೆ ಮಾಡುವೆನು.

(೩) ಅಹಂ ನಿಷ್ಯಾಮಿ ಮಯಿರೂಪಮಸ್ಯಾ ವೇದದಿತ್ ಪಸ್ಯನ್ ಮನಸಾ ಕುಲಾಯನಸ್ತೇ ಮಮದ್ಯ ಮನಸೋದ ಮುಚ್ಯೆ ಸ್ವಯಂ ಶ್ರಂಥಾನೋ ವರುಣಸ್ಯಪಾಶಾನ್।

ಕುಟುಂಬದ ಕಲ್ಯಾಣವನ್ನು ಇಚ್ಛಿಸುವವನಾದ ನಾನು ಸತ್ಕರ್ಮಗಳನ್ನು ಬಲ್ಲವಳಾದ ನಿನ್ನ ಚಾರುಮುಖವನ್ನು ನೋಡಲು ಬಯಸುತ್ತೇನೆ. ದುಷ್ಟವಾಸನೆಯಿಂದ ನನ್ನ ಮನಸ್ಸು ಗ್ರಸ್ತವಾಗದಂತೆ ಯಾವಗಲೂ ಎಚ್ಚರಪಡುವೆನು. ನಿನ್ನ ವ್ಯತಿರಿಕ್ತವಾಗಿ ಯಾವ ಭೋಗಗಳನ್ನೂ ಭೋಗಿಸಲಿಕ್ಕಿಲ್ಲ. ನಿನ್ನಿಂದ ಯುಕ್ತನಾದವನಾಗಿ ವರುಣನ ಪಾಶವನ್ನು ಕತ್ತರಿಸುವೆನು.

(೪) ಓಂ ಅಮೋಽಹ ಮಸ್ಮಿಸಾತ್ವಂ ಸಾತ್ವಮಸಿ. ಅಮೋಽಹ ಮಸಾಯು ಬ್ರಂಹವಸ್ಮಿ ಋವತ್ವಂ ದ್ಯೌರಹಂ ಪೃಥಿವೀತ್ವಂ ತಾವೇವ ವಿವಾಹಾ ವೈಹ ಸಹರೇತಾದಂಥಾ ವೈಹ ಪ್ರಜಾಯ ಪ್ರಜಾಂ ಪ್ರಜನಯಾ ವಹೈ ಪುತ್ರಾನ ವಿಂದಾವಹೈವಹನತೇ ಸಂತು ಜರದಷ್ಟಯಃ ಸಂಪ್ರಿಯೌರೋಚಿಷ್ಣು ಸುಮನಸ್ಯ ಮಾನೌ ಪಶ್ಯೇನು ಶರದಃಶತಮ್.

ಈ ಗೃಹಯಜ್ಞದಲ್ಲಿ ನೀನು ವಾಣಿಯ ಕಾರ್ಯವನ್ನು ಮಾಡುತ್ತಿದ್ದು ನಾನು ಪ್ರಾಣನ ಕಾರ್ಯವನ್ನು ಮಾಡುತ್ತೇನೆ. ನಾನು ಸಾಮವೇದರೂಪವಾಗಿಯೂ ನೀನು ಋಗ್ವೇದರೂಪವಾಗಿಯೂ ಇರುವೆವು. ಪ್ರಕಾಶದ ಕಿರಣಗಳನ್ನು ಬೀರುವ ಪರ್ಜನ್ಯವೃಷ್ಟಿಯನ್ನು ಮಾಡುವಂಥ ಲೋಕದಂತೆ ನಾನು ಇದ್ದು ಇವುಗಳನ್ನು ಧಾರಣಮಾಡುವ ಪೃಥ್ವಿಯಂತೆ ನೀನು ಇರುವಿ. ನಾವು ಉಭಯತರು ಏಕತ್ರವಾಗಿ ಪರಸ್ಪರರ ಗುಣಗಳನ್ನು ಪರಸ್ಪರರು ಸಂಗ್ರಹಿಸಿ ವೃದ್ಧಾಪ್ಯವನ್ನು ಕಾಣುವ ಸಂತತಿಯನ್ನು ನಿರ್ಮಿಸುವ. ಈ ರೀತಿಯಾಗಿ ಪರಸ್ಪರರಿಗೆ ಆನಂದವನ್ನು ಕೊಡುತ್ತ ದಾರ್ಢ್ಯವನ್ನುಳ್ಳವರಾಗಿಯೂ ಶಿಥಿಲರಹಿತ ನೇತ್ರಕರ್ಣಗಳುಳ್ಳವರಾಗಿಯೂ ಶತಸಂವತ್ಸರಗಳವರೆಗೆ ಜೀವಿಸುವ,

(೫) ಪತ್ನಿತ್ವಮಸಿ ಧರ್ಮಸ್ಯಾಹಂ ಗೃಹಪತಿ ತವ ಯಮೇ ಮಮಸ್ತು ಯೋಷ್ಯಾಮಹ್ಯಂ ತ್ವಾದಾದ್ ಬೃಹಸ್ಪತಿಃ ॥

ಪವಿತ್ರವಾದ ಬಂಧನಗಳಿಂದ ನೀನು ನನ್ನ ಪತ್ನಿಯೂ ನಾನು ನಿನ್ನ ಪತಿಯೂ ಆಗಿರುವೆವು. ನೀನು ನನ್ನ ಸಮಾಧಾನದ ವಿಷಯವಾಗಿರುವಿ. ಈ ಸೃಷ್ಟಿಗೆ ಈಶ

ನಾದನನು ನಿನ್ನನ್ನು ಕೊಟ್ಟಿರುವನು. ನಿನ್ನ ಪತಿಯಾದ ನನ್ನ ಕೂಡ ನೀನು ಸಂತತಿ ಯುಕ್ತಳಾಗಿ, ನೂರುವರ್ಷಗಳವರೆಗೆ ಬಾಳು.

ಈ ಮಾತ್ರುಗಳ ಅರ್ಥವನ್ನು ಮುಮುಕ್ಷುಗಳು ಅರಿತರೆಷ್ಟು ಎಷ್ಟು ಒಳಿತಾಗು ವದು !

ಸ್ತ್ರೀಯರ ಸದ್ಗುಣಗಳ ವಿಷಯವಾಗಿಯೂ ಕರ್ತವ್ಯಗಳ ವಿಷಯವಾಗಿಯೂ ಈ ಕೆಳಗಿನ ಮಂತ್ರುಗಳು ಹೇಳುತ್ತವೆ.

(೧) ಶರ್ಮ ಚಸ್ಥೋ ವರ್ಮ ಚಸ್ಥೋಽಛಿದ್ರೆ ಬಹುಲೇ ಉಭೇ ವ್ಯಚಸ್ವತೀ ಸಂವ ಸಾಥಾ ಭೃತಮಗ್ನಿಂ ಪುರೀಷ್ಯಮಂ ।

ಯ. ಅ. ೧೧. ಮ. ೧೩.

ವಿವಾಹಿತರಾದ ದಂಪತಿತಳಿರಾ ! ನೀವು ಪರಸ್ಪರ ಶಾಂತರಾಗಿಯೂ ಶರೀರ ರಕ್ಷಕ ಕವಚರಾಗಿಯೂ ಇರುವಿರಿ. ನಿಮ್ಮ ನೀತಿಯು ಮಲಿನವಾಗದೆ ಅಭಿವೃದ್ಧಿ ಯನ್ನು ಹೊಂದುವ ವೈಭವದಿಂದ ಯುಕ್ತರಾಗಿರಿ. ನೀವು ಈ ಗೃಹದಲ್ಲಿ ವಾಸಮಾಡಿ ಕೊಂಡು ಆಯುರಾರೋಗ್ಯ ಐಶ್ವರ್ಯಾದಿಗಳನ್ನು ಕೊಡುವ ಯಜ್ಞಪುರುಷನಾದ ವೈಶ್ವಾನರವನ್ನು ಸ್ಥಾಪಿಸಿರಿ.

(೨) ಲೋಕಂಪ್ರಣ ಛಿದ್ರ ಪೃಸ್ಯ ಅಥೋ ಸೀದ ಧೃವಾತ್ವಂ।
ಇಂದ್ರಾಗ್ನಿತ್ವಾ ಬೃಹಸ್ಪತಿ ರಸ್ಮಿನ್ಯೂ ನಾವಸೀಷದನ ।

ಯ. ಅ. ೧೨. ಮ. ೫೪

"ಸತ್‌ಕುಲಜಳಾದ ವಧುವೇ, ಈ ಕುಟುಂಬದ ಸಂಸ್ಕೃತಿಯನ್ನು ಹೆಚ್ಚಿಸಿ, ಅದರ ಪಾವಿತ್ರ್ಯವನ್ನು ಬೆಳಿಸಿ, ಅದರಲ್ಲಿಯ ನ್ಯೂನತೆಗಳನ್ನು ಇಲ್ಲದಂತೆಮಾಡಿ, ಅನಂತರ ಅಲ್ಲಿ ಸ್ಥಿರವಾಗಿ ವಾಸಿಸು. ವೇದಪುರುಷನು ಈ ದಂಪತಿಗಳಿಗೆ ಇಂದ್ರಾಗ್ನಿಗಳಂತೆ ಉಚ್ಚ ಪದವಿಯನ್ನು ಕೊಡಲಿ.

ಈ ಮಂತ್ರುಗಳಲ್ಲಿ 'ದಂಪತಿಗಳು' ಪರಸ್ಪರರ ಶಾಂತಿಯೆಂತಲೂ, ಶರೀರರಕ್ಷಕ ಕವಚವೆಂತಲೂ ವರ್ಣಿಸಲ್ಪಟ್ಟ ಸಂಗತಿಯು ಲಕ್ಷ್ಯದಲ್ಲಿಡತಕ್ಕದ್ದಾಗಿದೆ. ಪತಿ ಪತ್ನಿ ಯರುಭಯುತರೂ ಅವನತಿಯನ್ನಾಗಲೀ, ಇಲ್ಲವೇ ಉನ್ನತಿಯನ್ನಾಗಲೀ ಏಕಕಾಲಕ್ಕೆ ಹೊಂದುತ್ತಿದ್ದರೂ ಪರಸ್ಪರರ ಶೀಲವೃದ್ಧಿಗೆ ಪರಸ್ಪರರು ಸಹಾಯಕರಾಗಿದ್ದರೂ ಸ್ತ್ರೀಯಳ ಶೀಲದಿಂದಲೇ ಕುಲದ ಇಲ್ಲವೇ ರಾಷ್ಟ್ರದ ಶೀಲವು ಗೊತ್ತಾಗುವದರಿಂದ ಸ್ತ್ರೀಯಳಿಗೆ ಶ್ರೇಷ್ಠತ್ವವು ಕೊಡಲ್ಪಟ್ಟಿದೆ.

(೩) ಸಮಿತಂ ಸಂಕಲ್ಪೇಥಾಂ ಸಂಪ್ರಿಯೌರೋಚಿಷ್ಣೂ ।
ಸುಮನಸ್ಯಮಾನ್ ಸಾ ಇಷ ಮೂರ್ಜಯ ಭಿಸಂವಸಾಪೌ ।

ಯ. ಅ. ೧೨. ಮ. ೫೭

" ಪರಸ್ಪರರನ್ನು ಪ್ರೀತಿಸುತ್ತ, ಆನಂದಿಸುತ್ತ, ಆನಂದ ಐಶ್ವರ್ಯಾದಿಗಳನ್ನು ಸಂಪಾದಿಸುವ ಆಲೋಚನೆಗಳಿಂದ ನೀವು ಸುಖೇನ ಜೀವಿಸಿರಿ."

(೪) ಮಾತೇವಪುತ್ರಂ ಪೃಥಿವೀ ಪುರೀಷ್ಯಮಗ್ನಿಃ ಸ್ವೇಯೋನಾವಭಾರುಖಾ ತಾಂ ವಿಶ್ವೈರ್ದೇವೈಋತುಭಿಃಸಂವಿಧಾನಃ ಪ್ರಜಾಪತಿರ್ವಿಶ್ವಕರ್ಮಾ ವಿಮುಂಚತು.

ಯ. ಅ. ೧೨. ಮ. ೬೦.

ವನಸ್ಪತಿಕೋಟಿಯು ಅಂಕುರಿಸಿ ವಿಕಾಸಹೊಂದಲೆಂದು ಭೂಮಾತೆಯು ಅವು ಗಳ ಬೀಜಗಳನ್ನು ಧಾರಣಮಾಡುವಂತೆ, ಪುತ್ರರೂಪವಾದ ಜಾಜ್ವಲ್ಯಗರ್ಭವನ್ನು ತನ್ನಗರ್ಭಾಶಯದಲ್ಲಿಟ್ಟು ಕೊಂಡವಳ ಕ್ಲೇಶಗಳನ್ನು ಸೃಷ್ಟಿಕರ್ತನು ಯಥಾವಾಗಿಯೂ ದೂರಮಾಡಲಿ.

ಮಾತೆಯಾದ ಪೃಥ್ವಿಯ ತೊಡೆಯ ಮೇಲೂ, ಉದರದಲ್ಲಿಯೂ ವನಸ್ಪತಿಗ ಳಿದ್ದು ತಮ್ಮ ಪೋಷಕ ಆಹಾರವನ್ನು ಪಡೆಯುವಂತೆ ಮಾನವೀಸೃಷ್ಟಿಯು ಸ್ತ್ರೀಯ ತೊಡೆಯಮೇಲೆ ಪೋಷಿತವಾಗುತ್ತದೆ. ಅದಕ್ಕಾಗಿಯೇ ಸ್ತ್ರೀಯಳಿಗೆ ಪೃಥ್ವಿಯ ಉಪಮೆಯು ಕೊಡಲ್ಪಟ್ಟಿದೆ.

(೫) ವಿಮುಚ್ಯಧ್ವಮಘ್ನ್ಯಾ ದೇವಯಾನಾಗನ್ಮತಮಸಸ್ಪಾರಮಸ್ಯ ಜ್ಯೋತಿರಾಪಾಮ, । ಯ. ಅ. ೧೨. ಮ. ೭೩.

" ಸ್ವರ್ಗೀಯ ಶಾಂತಿಗೆ ಕಾರಣರಾಗಿರುವ ಸ್ತ್ರೀಯರನ್ನೂ ಕಾಮಧೇನುಗಳನ್ನು ಸಂಪಾದಿಸಿರಿ. ಇಂಥ ಸಂಪಾದನೆಯುಮೂಲಕವಾಗಿ ರೋಗಗಳಿಂದಲೂ, ಅಸುಖದಿಂ ದಲೂ ನೀವು ನಿಮ್ಮ ರಕ್ಷಣಮಾಡಿಕೊಳ್ಳಿರಿ; ಈ ಸೃಷ್ಟಿಯಲ್ಲಿ ಹಬ್ಬಿಕೊಂಡಿರುವ ಮರ ಣದ ಹಾಗೂ ತಮಸ್ಸಿನ ಪರತೀರವನ್ನೂ ಮುಟ್ಟಿ ನಿತ್ಯವಾದ ಪ್ರಕಾಶವನ್ನೂ, ಜೀವಿ ತವನ್ನೂ ಪ್ರಾಪ್ತಮಾಡಿಕೊಳ್ಳಿರಿ."

ವೇದಕಾಲದಲ್ಲಿ ಆರ್ಯ ಸ್ತ್ರೀಯರ ಯೋಗ್ಯತೆಯು ಸಮಾಜದಲ್ಲಿ ಯಾವ ಬಗೆ ಯದಾಗಿತ್ತೆಂಬದನ್ನು ವಾಚಕರು ಈ ಮಂತ್ರಗಳಿಂದ ಸಹಜವಾಗಿ ಊಹಿಸಬಹುದು.

—ಬಿಂದುಮಾಧವ.

# ಪ್ರಗತಿಯ ವಿಚಾರಗಳು.

(೧) ನಮ್ಮ ಈಗಿನ ಸಮಾಜಕ್ಕೆ ನಿಂತ ನೀರಿನ ಸರೋವರವೆಂದು ಯಥಾರ್ಥವಾಗಿ ಕರೆಯಬಹುದು. ಅದೇ ಪರದೇಶದ ಸಮಾಜಕ್ಕೆ ಹರಿಯುವ ನೀರಿನ ಹೊಳೆಯೆಂದು ಒಂದರ್ಥದಲ್ಲಿ ಅನ್ನಬಹುದು. ಆದರೆ ನಮ್ಮ ಸಮಾಜವು ಶಾಶ್ವತವಾಗಿ ಬತ್ತಲೆ ನಿಂತಿರುವದು. ಅದೇ ಪಾಶ್ಚಾತ್ಯರ ಸಮಾಜವು ಹರಿಯುತ್ತ ಹಳ್ಳವನ್ನು ಕೂಡಿ ಎತ್ತಲೋ ಹೋಗುವದು. ನಮ್ಮ ಸಮಾಜದ ತಳಹದಿಯು ತತ್ವಗಳು ಕೆಟ್ಟವಲ್ಲ, ಅಥವಾ ತತ್ವಗಳಿಗೆ ಹೊಂದಿಸಿ ಹೇಳಿದ ಆಚರಣೆಗಳೂ ಹೀನವಲ್ಲ. ಆದರೆ ಹಿಂದಿನ ಋಷಿಗಳು, ವಿಚಾರವಂತರು ಹಾಗೂ ಸಮಾಜದ ಮುಖ್ಯಸ್ಥರು ಹಾಕಿಕೊಟ್ಟ ಮಾರ್ಗವೇ ಪಡಿಯಚ್ಚಾಗಿ-ಸ್ಥಿರವಾಗಿ-ಕುಳಿತಿದೆ. ಕಾಲಕ್ಕೆ ಸರಿಯಾದ ಚಲನವಲನವೇ ಇಲ್ಲದ ಕಾಲವೆಂದರೆ ಈಗಿನದು. ಅಂತೇ ಪ್ರಗತಿಗೆ ಯತ್ಕಿಂಚಿತ್ತಾದರೂ ಆಶ್ರಯವಿಲ್ಲ, ಪ್ರಗತಿಯ ವಿಚಾರಗಳಿಗೂ ಆಸ್ಪದವಿಲ್ಲ. ಅದೇ ಪಾಶ್ಚಾತ್ಯರು ಸಾಮಾಜಿಕವಾದ ಪ್ರಗತಿಯೆಂಬ ಧೋರಣೆಯನ್ನಾದರೂ ಕಣ್ಣಮುಂದೆ ಇಟ್ಟುಕೊಂಡಿದ್ದಾರೆ. ಪ್ರಗತಿಯು ಅದರಿಂದ ದುಷ್ಟವಾಗ ಬಲ್ಲದು-ದುಷ್ಟವಾಗ ಬಲ್ಲದು. ಆದರೆ ಪ್ರಗತಿಯು ಸಮಾಜಕ್ಕೆ ಅತ್ಯವಶ್ಯಕ. ಅಂತೇ ಪ್ರಗತಿಪರವಾದ ಸಮಾಜವನ್ನು ನಾವು ಉತ್ಸಾಹ ಸಾಹಸಗಳ ಸಮಾಜವೆಂದು ಹೊಗಳುವದು. ಅಂಥ ಸಮಾಜದಲ್ಲಿ ಪ್ರಗತಿಯವೇಗವನ್ನು ಬಿಗಿಹಿಡಿಯುವ ಧುರೀಣರಿಸ್ಸಿದ್ದರೆ, ಅದರ ಉತ್ಸಾಹಗಳು ಸಮಾಜಸುಖಕ್ಕೆ ಸಹಕಾರಿಯಾಗುವವು. ಇನ್ನು ಪ್ರಗತಿಯು ಈ ಕಾಲದಲ್ಲಿ ಇಲ್ಲದೆಯೂ ನಮ್ಮ ಹಿಂದೂಸಮಾಜವು ಯಾವ ಸಮಾಜಕ್ಕೂ ಹಿಂದೆ ಬೀಳಲಾರದು. ಹಳ್ಳದಂತೆ ಹರಿಯದಿದ್ದರೂ ಅದೀಗ ಸರೋವರವು ಸುಳ್ಳಲ್ಲ. ಅದರ ನೈತಿಕ-ಧಾರ್ಮಿಕ ಬುದ್ಧಿಗಳು ಶುದ್ಧಿಹೊಂದಬೇಕಾಗಿದ್ದರೂ, ಅವುಗಳನ್ನು ಹಿಂದೊಗೆದು ಮುಂದಾಗಲಿಕ್ಕೆ ಯಾವ ಬೇರೆ ಸಮಾಜವೂ ಸಮರ್ಥವಾಗಿಲ್ಲ. ಇಲ್ಲಿಯೇ ನಮ್ಮ ಕಣ್ಣೆದುರಿಗೆ ಕಾಣುವ ಇಂಗ್ಲಸಮಾಜವ ಕೆಲವೊಂದು ಭಾಗವನ್ನು ನಿರೀಕ್ಷಿಸಿದರೆ ಅದರ ನೈತಿಕ ದೃಷ್ಟಿಯು ವಿಕಾಸವಾಗಿಲ್ಲೆಂದು ಇದಕ್ಕೆ ಪ್ರತಿಯಾಗಿ ತಾನೇ ತಿಳಿಯುವದು. ಅಂತೇ ಎಂದಿನಿಂದಲೂ ಹೆಚ್ಚು ಪರಿಯಿಂದ ನೀತಿಯನ್ನು ಕಾಯ್ದುಕೊಂಡು ಬಾಳುತ್ತ ಬಂದಿರುವ ನಮ್ಮ ಸಮಾಜವನ್ನು ನಾವು ಹೊಗಳುವದು. ಆದರೆ ಈ ನೀತಿಯನ್ನು ಯೋಗ್ಯವಾದ ಹಾದಿಯಲ್ಲಿ ಹರಿಯಗೊಡದಿದ್ದರೆ ಸಮಾಜದ ಸರೋವರವು ಹೋಗಿ ಪಾಲಿತ ನೀರಿನ ಕೆರೆಯಾಗಿ ಸಮಾಜದ ಕೇಡಾಗುವದು ಸಹಜವಿದೆ. ಇದರ ಚಿನ್ಹಗಳು ಈಗಲೇ ಭರದಿಂದ ತೋರಹತ್ತಿವೆ. ಆದಕಾರಣ ಪ್ರಗತಿಯ ಮೌಲಿಕ-ವಿಚಾರಗಳು ಪ್ರಚಲಿತ-ಸಮಾಜದಲ್ಲಿ ರೂಢವಾಗಬೇಕೆಂಬುದೇ ನಮ್ಮ ಬಯಕೆ.

(೨) ಯಾಕೆ ಪ್ರಗತಿ? ಯಾವಪ್ರಗತಿ? ಎಂಬುದು ಬೇರೆ ಮಾತು. ಸಮಾಜವು ಮೊದಲು ಪ್ರವಾಹಶೀಲವಾಗಬೇಕು. ಆ ಮೇಲೆ ಇದೆಲ್ಲ ಮುಂದೆ ಚರ್ಚಾಸತಕ್ಕ

ವಿಷಯ. ಆದರೆ ಸಮಾಜದಲ್ಲಿ ಸಂಪ್ರದಾಯದ ದಾಸ್ಯವೂ (Conservatism) ಪರಂಪರೆಯ ಪ್ರೀತಿಯೂ ಅತಿಯಾಗಿ ಬೆಳದಿದೆ. ಹಳೆಯದನ್ನು ಕಿತ್ತೊಗೆಯುವ ಮತ್ತು ತ್ರುಟ್ಟಗಿರಲಿ, ತತ್ವಗಳನ್ನು ಪಲ್ಲಟಿಸಿ ವೈಯರ್ಥ್ಯದಿಂದ ಉಂಟಾದ ಆಚಾರ-ದೋಷಗಳನ್ನು ನುಡಿಯುವದೆಂದರೆ ನಮ್ಮ ಹಳೆನಾಡ ಹಿರಿಯರಿಗೆ ಅಸಹ್ಯವೆನಿಸುತ್ತದೆ. ಪುರಾತನ ಮತದ ವಿಷಯಕವಾಗಿ ಅವರಲ್ಲಿದ್ದ ಶ್ರದ್ಧೆಯೇನೋ ಸನ್ಮಾನ್ಯವಾದುದು. ಹಳೆಯ ಪಕ್ಷವನ್ನು ಬಲವಾಗಿ ಎತ್ತಿಹಿಡಿಯುವ ಕಾರ್ಯವೂ ಯೋಗ್ಯವಾದುದು. ಆದರೆ ಪಕ್ಷಾಭಿಮಾನಕ್ಕಿಂತ ಸತ್ಯಸುಖವುಳ್ಳ ಪ್ರಗತಿಯ ಅಭಿಮಾನವು ಹೆಚ್ಚಿರಬೇಕು. ಶ್ರದ್ಧೆಗೂ ಜೀವವಿರಬೇಕು. ಹರಿಯುವ ನಾಡಿಯಿರಬೇಕು. ಶ್ರದ್ಧಾಳುವಾದರೂ ಪುರುಷನು ಶ್ರದ್ಧೆಯ ಆಳಾಗಕೂಡದು. ಜಗತ್ತಿನ ಶಾಂತಿಗೂ ಸತ್ಯತತ್ವಕ್ಕೂ ಬಾಧೆ ತರುವ ಸಂಪ್ರದಾಯಗಳಿದ್ದರೆ ವಿಚಾರಪೂರ್ವಕವಾಗಿ ನೋಡಿ ತ್ಯಜಿಸಿ ಶ್ರದ್ಧೆಯನ್ನು ಸತ್ಯಭೂತವಾದ ಪರಮಾತ್ಮನಲ್ಲಿ ನೆಲಿಸತಕ್ಕದ್ದು. ಅದನ್ನು ಬಿಟ್ಟು ಈ ಶ್ರದ್ಧೆಯು ಕುರುಡು ನಂಬುಗೆಯಿಂದ ಹಿಂದಿನಿಂದ ನಡೆದುಬಂದ ಯಾವದೇ ಮಾತನ್ನು ಪರಂಪರೆಯೆಂದಿಷ್ಟೇ ಕಾರಣದಿಂದ ನಡೆದುಕೊಂಡರೆ ಪರಮಾತ್ಮನನ್ನು ಕಾಣಲಿಕ್ಕೆ ಕೂಡ ಶ್ರದ್ಧೆಯು ಕುರುಡಾಗಿ ಉಳಿಯುವದು. ಇನ್ನೂ ಒಂದು ದೃಷ್ಟಾಂತದಿಂದ ಕುರುಡನಂಥ ನಂಬುಗೆಯು ಬೇಕು, ಅಂದರೆ ಕುರುಡನು ಹೇಗೆ ತನಗೆ ಕಾಣದ ವಿಷಯಗಳ ಬಗ್ಗೆ ಊರುವ ಕೋಲನ್ನು ನಂಬುವನೋ ಹಾಗೆಯೇ ಮನುಷ್ಯ ವಿಚಾರದ ಕಣ್ಣುಕಟ್ಟಿ ಮರೆಯಾಗಿರುವ ದೈವಶಕ್ತಿಯ ಮುಂದೆ ಪುರುಷನು ಕುರುಡನಾಗಿ, ಅದನ್ನು ನೆಚ್ಚಿ ಕೈಯೂರುತ್ತ ಸಿದ್ಧಿಯಗುಂಟ ಸಾಗಬೇಕು. ಇದನ್ನು ಮನನಮಾಡದೆ ಎಷ್ಟೋ ನಮ್ಮ ಸಮಾಜದ ಹುದ್ದರಿಗಳೆನಿಸಿಕೊಳ್ಳುವ ಹಿರಿಯರು ರೂಢಿಯೆಂಬ ಅಶಾಸ್ತ್ರವನ್ನೇ ಶಾಸ್ತ್ರವನ್ನಾಗಿ ಮಾಡಿ ಅದರ ಬಲಿಯೊಳಗೂ ಸಿಕ್ಕುಬಿದ್ದು ತಮ್ಮೊಳಗಿನ ತತ್ವಗಳನ್ನೂ ಕೆಡವಿ ಬಳಲುತ್ತಿದ್ದರೂ ತಾವೇನು ನೆರಳುವವರಂತೆ ತೋರಿಸಿಕೊಡುವದಿಲ್ಲ. ಸ್ತ್ರೀಸಮಾಜದಲ್ಲಿಯಂತೂ ಧರ್ಮಶಾಸ್ತ್ರಗಳಕಿಂತ ರೂಢಿ ಶಾಸ್ತ್ರದ ಪ್ರಾಬಲ್ಯವೇ ಹೆಚ್ಚಾಗಿದೆ. ಮದುವೆ-ಮುಂಜಿವೆ ಮುಂತಾದ ಸಮಾರಂಭಗಳಲ್ಲಿ ಕಂಡುಬರುವ ಅನೇಕ ವಿಚಿತ್ರ ಪದ್ಧತಿಗಳಿಗೆ ಅವರೇ ಕಾರಣರು. ಅಂತೇ ಅವರ ಹೆಸರಿನಲ್ಲಿ ಚಿರಸ್ಥಾಯಿಯಾಗುವ ಯಾವದೇ ಶಾಸ್ತ್ರವಿದ್ದರೆ ಈ ರೂಢಿಶಾಸ್ತ್ರವು ಅಹುದು. ಹೀಗಾಗಿ ನಿಜವಾದ ಪಾಪಪುಣ್ಯಗಳ ಬೆಲೆಯೇ ಸಮಾಜದಲ್ಲಿ ಇಲ್ಲದಾಗಿದೆ. ಇನ್ನು ಮುಂದಿನ ಪೀಳಿಗೆಯು ಹಾದಿಯೊಂದನ್ನು ಕಾಯ್ದರೆ, ಪಾಶ್ಚಾತ್ಯ ಸಂಸ್ಕೃತಿಯಿಂದ ತೀಡಿ ತಂದ ಬೇರೊಂದು ಶಾಸ್ತ್ರವನ್ನೇ ನಮ್ಮ ತರುಣ-ತರುಣಿಯರು ಬರೆಯದೆಯೂ ರೂಢಿಯಲ್ಲಿ ಬರುವಂತೆ ಮಾಡುವರು. ಕೆಲವು ವರ್ಷಗಳಲ್ಲಿ ನಿತ್ಯಧರ್ಮದ ತತ್ವಗಳಂತೂ ಅಡಗುವವಲ್ಲದೆ ಬೇರೆ ಧರ್ಮಶಾಸ್ತ್ರಗಳೇ ಉದಯವಾಗಬಹುದು. ಸಂಧ್ಯಾವಂದನೆಯ ಬಂಧನವು ಅಳಿದುಹೋಗಿ, ಚಹಾ ಪೇಯವನ್ನು 'ಶಾಸ್ತ್ರಕ್ಕೆ' ತೆಗೆದುಕೊಳ್ಳಿರಿ ಎನ್ನುವ ದಿನಗಳು ಸಮೀಪಿಸಬಹುದು. ಒಟ್ಟಿಗೆ

ನಮ್ಮ ಸಮಾಜನಲ್ಲಿ ಚೆನ್ನಾಗಿ ತಿದ್ದುಪಡೆ ಹೊಂದದ ಪೂರ್ವಿಕರ ಧರ್ಮಶಾಸ್ತ್ರ, ರೂಢಿ ಶಾಸ್ತ್ರ, ಹೊಸ ಸಮಾಜದ ಶಾಸ್ತ್ರ ಹೀಗೆ ಮೂರು ಒತ್ತುಗಳು ಹಿಂದಿನ ಹಿಂದೂ ಸಮಾಜದ ಭೂಮಿಯನ್ನು ಕೊರೆಯುತ್ತ ಹೋಗುನವು. ಇವಕ್ಕೇನೋ! ಪ್ರಗತಿಯ ಒಂದು ಸ್ವರೂಪವೆನ್ನಬಹುದು. ಆದರೆ ದುರ್ಗತಿಗೆ ಮುಟ್ಟಿಸುವ ಪ್ರಗತಿಯು ಪ್ರಗತಿಯೇ ? ಉನ್ನತಿಯೇ ಪ್ರಗತಿಯ ಗುರಿಯಿರಲಿಕ್ಕೆಬೇಕು. ಈ ಉನ್ನತಿಯನ್ನು ಅಪೇಕ್ಷಿಸದೆ ತಟಸ್ಥವಾಗಿ ನಮ್ಮ ಧರ್ಮಶಾಸ್ತ್ರಗಳು ನಿಂತರೆ, ಅನಿಯಂತ್ರಿತವಾದ ಸಮಾಜವು ಅಡ್ಡ ಹಾದಿಯನ್ನು ಹಿಡಿಯುವದು ಸಹಜವೇ ಇದೆ. ಇದರ ಮೇಲಿಂದ ಏನು ಪರಿಣಾಮ ವಾಗುವದೆಂಬದು ವಿಚಾರಿಗಳಿಗೆ ತಿಳಿಯುವದಿಲ್ಲವೇ ? "ತಿಳಿದರೇನಾಯಿತು, ಹೊಸದು ಬೇಡ, ಹೊಸಬರಲ್ಲಿ ಅನಾದಿಕಾಲದ ಹಿಂದಿನವರ ಯೋಗ್ಯತೆಯಿಲ್ಲ; ಹಿಂದಿನವರು ಧರ್ಮವನ್ನು ಮಾಡಿವರು ನಾವೀಗ ನಡೆಯಬೇಕು" ಎಂಬುವ ದಟ್ಟ ನಂಬುಗೆಯು (Orthodoxy) ಬಹು ಜನರ ವಿಚಾರಶಕ್ತಿಯನ್ನು ಕುಗ್ಗಿಸಿ ತಾನು ತನ್ನ ಹಟವನ್ನು ಸಾಧಿಸುತ್ತದೆ. ಇತ್ತ 'ಹೊಸಬರಾಗುವದೇ ಹಿತ, ಕೆಟ್ಟ ಹಳಬರೇಕೆ?' ಎಂಬ ನೂತನ ಪ್ರಕೃತಿಯ ಪುರುಷೋತ್ತಮರು ಧರ್ಮದೇವರುಗಳನ್ನು ಮೀರಿ ವೈಯಕ್ತಿಕ-ಮಾನಸಿಕ ರಾಜ್ಯಗಳನ್ನು ಸ್ಥಾಪಿಸಿ ಹಳೆಯ ಮಂದಿರವನ್ನು ಕೆಡಿಸಿ ಹೊಸದನ್ನು ಕಟ್ಟಲಾಗದೆ ಸ್ವಚ್ಛಂದವಾಗಿ ಜೀವಿಸುವರು. ಇವೆರಡೂ ನಡತೆಗಳು ಸಮಾಜಕ್ಕೆ ಸುರಕ್ಷಿತವಲ್ಲವೆಂಬ ವಿವೇಕಮಾರ್ಗವು ಇನ್ನು ತಲೆಯೆತ್ತಬೇಕಾಗಿದೆ. ಆರ್ಯರ ಹಾಗೂ ಬೇರೆ ರಾಷ್ಟ್ರಗಳ ಅತ್ಯಂತ ಹಿತಸ್ವರೂಪಿಯಾದ ತತ್ವಗಳನ್ನು ಮುಂದಿಟ್ಟುಕೊಂಡು, ಕ್ಷೇಮಕರವಾದ ಪರಂಪರೆಗಳಿಗೆ ಇಂಬುಗೊಟ್ಟು, ಉಳಿವವುಗಳನ್ನು ಕಾಲ್ತೊಡಕೆಂದು ನೋಯದಂತೆ ಕತ್ತರಿಸಿ, ಹಾದಿಯನ್ನು ಮಾಡುವ ಈ ಮೂರನೇ ವರ್ಗಕ್ಕೆ ಸಮಾಜದಲ್ಲಿ ಆಸ್ಪದ ವಿರುವದೇ? ಎಂಬದೊಂದು ಪ್ರಶ್ನೆ. ಆದರೆ ಮೊದಲು ಪ್ರಗತಿಯೇ ಬೇಡೆನ್ನುವವರು ಬಹ್ವಂಶದಿಂದ ಇದ್ದಾರೆ. ಸದ್ಯದ ಸಮಾಜದಲ್ಲಿ ಪ್ರಗತಿಪುರಃಸರವಾದ ಬದಲಾವಣೆಗಳಿಗೆ ಅಧಿಕಾರವೇ ಇಲ್ಲೆಂದು ಅವರು ಸಾಧಿಸುವದುಂಟು. ಆದರೆ ಪ್ರಗತಿಪರವಾದ ಸಂಸ್ಥೆಗಳೂ ವಿಚಾರಗಳೂ ಪೂರ್ವಿಕರಲ್ಲಿ ಕೂಡ ಇದ್ದವೆಂದು ತೋರಿಸಿಕೊಡಬಹುದು.

(೩) ವಿಚಾರವಂತರು ಹಾಗೂ ಶ್ರದ್ಧಾಳುಗಳು ಶ್ರುತಿಸ್ಮೃತಿಗಳನ್ನು ಓದಿದರೆ ಏನು ನಿಷ್ಪನ್ನವಾಗುವದು ? ವೇದವು ಅಪೌರುಷೇಯವಿರಲಿ-ಅದು ಪುರುಷನ ಶ್ರದ್ಧೆಯ ಮಾತು—ಆದರೆ ಪ್ರತ್ಯಕ್ಷವಾಗಿರುವ ಋಷಿಗಳ ನಾಮೋಲ್ಲೇಖದಿಂದಲೂ ಕೆಲವೊಂದು ಸಮಾಜಚಿತ್ರದ ದರ್ಶನದಿಂದಲೂ ಅದಕ್ಕೊಂದುಕಾಲವಿದೆ. ಅದರಂತೆಯೇ ಬ್ರಾಹ್ಮಣ ಕಾಲ, ಉಪನಿಷತ್‌ಕಾಲ, ಸ್ಮೃತಿಕಾಲ ಇತ್ಯಾದಿ ಇವೆಲ್ಲ ಕಾಲಗಳ ಸಮಾಜದ ನೀತಿ ನಡತೆಗಳ ಪ್ರಮಾಣವು ಒಂದಾಗಿದ್ದಿತೇ ? ಅಥವಾ ಯೋಗ್ಯ ಪರಿಸ್ಥಿತಿಗೆ ಅನುಸರಿಸಿ ಆಚಾರ-ಭೇದಕ್ಕೆಯೂ ವಿಚಾರ ಶುದ್ಧಿಗೂ ಹೊಸಸಂಸ್ಕಾರಗಳಿಗೂ ಆಸರವಿತ್ತೇ ? 'ದೇಶ ಕಾಲ ಗುಣ'ಎಂಬ ಮೂರು ಶಬ್ದಗಳನ್ನುಬಾರೆಬಾರೆಗೆ ಸ್ಮೃತಿಕಾರರು ಇಟ್ಟಿರುವ

ಒಂದು ಮಾತನ್ನು ಲಕ್ಷಿಸಿಪತೆ. ಸಮಾಜದಲ್ಲಿ ತತ್ವಾಚಾರಗಳು ಕಾಲಕಾಲಕ್ಕೆ ಶುದ್ಧಿ ರೂಪವಾದ ಅಗ್ನಿಯನ್ನು ಪ್ರವೇಶಿಸಿ ಸಂಸ್ಕಾರವನ್ನು ಹೊಂದಿಯೇ ಬರಬೇಕಾಗಿತ್ತು. ಹೀಗೆ ಉಂಟಾದ ಪರಂಪರೆಗೂ ಸಹಾಯಕವಾದ ಆಪದ್ಧರ್ಮವೊಂದು ಇದ್ದಿತ್ತು. ಅಂದರೆ ಕಾಲಪರಿಸ್ಥಿತಿಗೆ ತಕ್ಕುವಾದ ಹೊಂದಿಕೆಗಳನ್ನೂ ಮಾಡಲಿಕ್ಕೆ ಸಮಾಜದ ಪ್ರಮುಖರಿಗೆ ಅಧಿಕಾರವಿದ್ದಂತೆ ಆಯಿತು. ಅದರೆ ಪ್ರಚಲಿತ-ಸಮಾಜದಲ್ಲಿ ಅಂಥ ಅಧಿಕಾರಿಗಳೇ ಇಲ್ಲವೆಂದು ವಾದಿಸಬಹುದು. ಇದೇನು ದಿಟವಲ್ಲ. ಯಾಕಂದರೆ ಧರ್ಮಸಂಬಂಧಗಳಲ್ಲಿ ಮತದ ಶ್ರೀಗಳವರೂ ಸಮಾಜ—ಸಂಬಂಧದಲ್ಲಿ ವಿಚಾರಿಗಳಾದ ಹಿರಿಯರೂ ಇದ್ದೇ ಇರುವರು. ಅವರವರಲ್ಲಿ ನಾವು ಸೂಚಿಸಿದಂತೆ ಪ್ರಗತಿಯ ಭಾವನೆಗಳು ಉದಯಿಸಲಿಕ್ಕೆಬೇಕು. ನಿಜವಾಗಿ ನೋಡಿದರೆ ಸಮಾಜದ ಅವ್ಯವಸ್ಥೆಯನ್ನು ಕಂಡು ಸಮಾಜ-ಸುಧಾರಕರು ಹುಟ್ಟಲೇಬೇಕೆಂಬುದು ಹತ್ತು ಪಾಲಿಗೆ ನಿಜ. ಆದರೆ ಹುಟ್ಟಿಸುವ ದೇವರಲ್ಲಿ ಕೃಪೆಯು ಹುಟ್ಟದಿದ್ದರೆ, ಸಮಾಜದ ಸಲುವಾಗಿ ಇದ್ದ ಧಾರ್ಮಿಕೋತ್ತಮರೇ ಆತ್ಮಶಕ್ತಿಯಿಂದ ಕಾರ್ಯವನ್ನು ಕೈಕೊಳ್ಳಬೇಕು. ಪ್ರಗತಿಯನ್ನು ಅವರು ಒಪ್ಪಲೇಬೇಕೆಂಬುದು ಮೊದಲನೆಯ ಮಾತು. ಮುಂದೆ ಯಾವ ಕ್ರೂರ ಸಂಪ್ರದಾಯಗಳೂ ಕೆಟ್ಟ ರೂಢಿಗಳೂ ಶಾಸ್ತ್ರದ ಬಿರುದನ್ನು ತೊಟ್ಟು ಸಾಮಾಜಿಕ ಜೀವನದ ನಡೆನುಡಿಗಳನ್ನೇ ಹಿಂಸಿಸುತ್ತಿರುವವೆಂಬದು ಧ್ಯೇಯ ವಿಷಯು. ಉದಾಹರಣಾರ್ಥವಾಗಿ ಸದ್ಯದ ವಿಧವಾವಿಪತ್ತಿ ಅಥವಾ ಬಾಲವಿವಾಹದ ಅನಿಷ್ಟಗಳು ಅನ್ನುವಷ್ಟು ಉಗ್ರವಾಗಿರುವವೋ ಹೇಗೆ ? ಸಮಾಜವು ಕೆಟ್ಟಿರುವದು ಇವುಗಳಿಂದಲೋ ಅಥವಾ ಬೇರೆ ಕಾರಣಗಳಿಂದಲೋ ? ಉಪಾಯುವೆಲ್ಲಿ ? ಎಂಬುದು ಚಿಂತನೀಯಾಂಶ. ಪ್ರಗತಿಯ ಪರಿಮಾಣವು ಕೆಲಕಾಲದವರೆಗೆ ಬೆಳೆಯಲಿಕ್ಕಿಲ್ಲ ಆದರೆ ಪ್ರಗತಿಯು ಸಮಾಜಸುಖದ ಒಂದು ಪ್ರಮಾಣವಿರಲಿಕ್ಕೆ ಬೇಕು. ಇಷ್ಟೇ ಈ ಚಿಕ್ಕನಿಬಂಧದ ಇಂಗಿತವು.

—ಈಗ

ಓಂ ಸತ್

# ಸ್ವಧರ್ಮ

॥ ಜಯಂ ಭದ್ರಂ ಶುಭಂ ಮಂಗಲಮ್ ॥

ವರ್ಷ.-೩. } ಶಕೆ ೧೮೫೮ ಅಕ್ಷಯ ಸಂ॥-ಮಾಘ { ಅಂ.-೧೧.

## ನನ್ನದೇವಿ

ಕವಿ:—ಕೃ. ಶ್ರೀ. ಬೆಟಗೇರಿ "ಕವಿಭೂಷಣ"

"ಗುಡಿಯಲ್ಲಿ ದೇವನಿಹ ಪೊಡಮಡುತೆ ಬೇಡಿಕೊಳೆ
"ಕೊಡುವನವ ಬೇಡಿದುದ" ನೆಂದು ನೀ ಹೇಳುತಲೆ
ಹಿಡಿಸಲಾರದ ಹಿಗ್ಗಿನಿಂದೆ ನಾನೋಡೋಡಿ
ಗುಡಿಗೆ ಹೋಗುತಲಿ ಪೊಡಮಡುತೆ ಬಿನ್ನಹಮಾಡಿ
ಎನಿತೆನಿತೊ ಬಗೆಯ ಬಯಕೆಯ ಬೇಡಿಕೊಂಡೆ
ಕೊನೆಗೆ ಬೇಸತ್ತು ನಿನ್ನಯ ಬಳಿಗೆ ಬಂದೆ
"ದೂರಹೋಗಿದ್ದರೆಯು ಅಮ್ಮನೆಲ್ಲಿಯೊ ಹೊರಗೆ
"ತೋರುತಿರುವೊಲು ನಿಚ್ಚ ಅವಳ ನಗೆಮೊಗವೆನಗೆ
"ಮಾಡಬೇಕೆಂ"ದು ಮೋಡಿಯ ಹಿಡಿದು ಕೈಮುಗಿದು
ಬೇಡಿಕೊಂಡೆನು ಹೋಯಿತೆಲ್ಲ ಹುಸಿಯಾಗಿ ಅದು
ಎನಿತು ಹುಸಿನುಡಿಯ ಹೇಳಿದೆಯೆ ನೀನಿಂದು!
ಎನಿಸಿತಾ! "ನನಗೆ ಹೇಳಿದುದು ನಿಜ"ವೆಂದು
"ಕರೆದೊಡನೆಯೇ ನಾನು ಇರುವೆಡೆಯೊಳೇ ಅಮ್ಮ
"ಹೊರಟುಬರುವಂತೆ ಬಲುಸರವ ನೀಡೆನಗೆಂದೆ"
"ಕರೆಯುವಳಲಾ ಅಮ್ಮ! ನನ್ನನಿನಿನುಡಿಯಿಂದೆ
"ಸಿರುತವಾನುಡಿ ಕೇಳುತಿರಬೇಕು ಕಿವಿಗೆಂದೆ"

"ಮುದ್ದಾಡಿ ಮೆಯ್‌ದಡಹುವಾಗೆನ್ನ ಮೆಯ್‌ಮನವು
"ಹೊದ್ದಿದಂತಹ ಹಿಗ್ಗು ತಗ್ಗದೆಯೆ ಇರಲೆಂದೆ"
"ತನ್ನ ಮೆಲುಗೈಯಿಂದೆ ಉಣ್ಣಿಸುತ್ತಿರಲಮ್ಮ
"ಅನ್ನವದು ಎನಿತು ಸವಿಯೆನ್ನಿಸುವುದೋ? ಅಂತೆ
"ಇನ್ನಾರು ಉಣಿಸಿದರೆಯೂ ಅಮ್ಮನುಣಿಸಿದೊಲು
"ಚೆನ್ನಾಗುವಂತೆ ಮಾಡಲೆ ಬೇಕು ನೀನೆ"ಂದೆ
ಮತ್ತೆ ಎನಿತೆನಿತೊ! ಮಾತನು ಕೇಳಿಕೊಂಡೆ
"ವ್ಯರ್ಥವಿದು" ಎಂದರಿದು ಮರಳಿ ನಾ ಬಂದೆ
ಹುಡುಗರಾಡುವ ಬೊಂಬೆಯಂತಿರುವನಾದೇವ
ಕೊಡುವುದೇ ಅಕ್ಕನಾಟದ ಬೊಂಬೆ ಬೇಡಿದುದ?
ಪೊಡೆಮಡುತೆ ಕೈಮುಗಿದು ನಾನೀಗ ಬೇಡಿದುದು
ಹುಡುಗಾಟ ಹುಚ್ಚಾಟವೆಂದು ತಿಳಿದೆನು ಬಗೆದು
ಹುಸಿಹೇಳಿ ಗುಡಿಗೆನ್ನ ಹೊರಡಿಸಿದುದೇಕೆಂದು
ಹಸನಾಗಿ ಎಲ್ಲವನು ಕಂಡುಕೊಂಡಿಹೆನಿಂದು
"ಮನೆಯಲಿರೆ ಬರಿದೆ ಇವ ಗುಣಗುಣಿಸುವನು" ಎಂದು
"ಬೇಡಿ ಏನೇನನೋ ಮೋಡಿಗೊಳುವನು" ಎಂದು
"ಕರೆದುಕೊಳು ಬಳಿಯಲ್ಲಿ ಎನುತೆ ಕಾಡುವನೆ"ಂದು
ಮರೆವುಗೊಳಿಸಲು ನನ್ನ ಹೊರಗೆ ಕಳುಹಿದೆ ಅಹುದು!
ಬಿಡೆ! ತಿಳಿದೆನೆಲ್ಲ! ಹೇಳಿದೆಯೆ ಹುಸಿಯನ್ನು
ಗುಡಿಯಲಿಹ ಕಲುಬೊಂಬೆ ದೇವನೇನವನು ?
ಬೇಡಿದುದ ನೀಡದವ ದೇವನೆಂತಹನೇ ?
ಬೇಡದೆಯೆ ನೀಕೊಡುವೆ ದಿಟದೇವಿ ನೀನೇ!

---

ಸವಿ:—ಈ ಕೂಸಿನ ನಾಸ್ತಿಕವಾದವನ್ನು ಕಂಡು ಕೆಲವರು ಅಸಹ್ಯಪಡಬಹುದು. ಕವಿಯನ್ನೂ ನಿಂದಿಸಬಹುದು. ಚಿಕ್ಕವನ ಕೂಸು-ಮಾತು (ಬಾಲಭಾಷಿತ) ಎಂದು ಅಲಕ್ಷಮಾಡಬಹುದು. ಆದರೆ ಸಗುಣೋಪಾಸನೆಯಲ್ಲಿ ಬಾಂಧವ್ಯದ ಮಾರ್ಗದಿಂದಲೆ ನಡೆಯಬೇಕಾಗುವದು; ಕೂಸಿನ ಮಾತೃಪ್ರೇಮವು, ಭಕ್ತಿಯೆನ್ನಿಸಿಕೊಳುವಷ್ಟು ನಿರತಿಶಯವು; ನಿತ್ಯವು; ಅನನ್ಯವು. ಈ ಕೂಸಿಗೆ ದೇವನ ಅನುಭವವಿಲ್ಲ. ಆದರೆ ಆ ಅನುಭವಕ್ಕೆ ಮೆಟ್ಟಿಲಾದ ಮಾತೃಪ್ರೇಮದ ನಿತಾಂತ ಅನುಭವವಿಲ್ಲೆಂದು ಯಾರೆಂದಾರು? ದೇವನು ಇರುವನೋ ಇಲ್ಲವೊ ಎಂಬುದು ಇಲ್ಲಿ ವಿಷಯವೇ ಅಲ್ಲ; ತನ್ನ ದೇವಿಯ ಮಹಿಮೆಯನ್ನು ಬಣ್ಣಿಸುವುದೇ ವಿಷಯ.

---

# ಉತ್ತರ ಹಿಂದುಸ್ಥಾನದೊಳಗಿನ ನಮ್ಮ (ಪ್ರಾಚೀನ) ವಿಶ್ವವಿದ್ಯಾಲಯಗಳು.

---

## (೧) ತಕ್ಷಶಿಲೆಯ ವಿದ್ಯಾಪೀಠವು.

### (ಅ)

ತಕ್ಷಶಿಲೆಯು ಗಾಂಧಾರದೇಶದ ರಾಜಧಾನಿಯು. ಇದು ರಾವಲಪಿಂಡಿ ಜಿಲ್ಲೆಯಲ್ಲಿ ಹರಿಯುವ ಸಾಧೇರಿ ನದಿಯ ಸಮೀಪದಲ್ಲಿರುವದು. ಬುದ್ಧನಾಳಿಕೆಯಲ್ಲಿ ಇದು ಹೆಸರಿಗೆ ಬಂದಿತ್ತು.

ಸಾಯರಸ್‌ದಿ ಗ್ರೇಟನು ಗಾಂಧಾರದೇಶದ ಕೆಲವು ಭಾಗವನ್ನು ಗೆದ್ದುಕೊಂಡಿದ್ದನು. (ಕ್ರಿ. ಪೂ. ೫೫೮-೫೩೦ ) ಅವುಗಳಲ್ಲಿ ಇದೊಂದು. ಇವನು ಇರಾಣದೇಶದ ಅರಸನು. ಇವನ ತರುವಾಯ ಬಂದ ಕ್ಯಾಂಬಿಸೆಸ್ ಎಂಬ ರಾಜನ ವಶದಲ್ಲಿಯೂ ಇದು ಕೆಲವು ಕಾಲ ಉಳಿಯಿತು. ( ಕ್ರಿ. ಪೂ. ೫೩೦-೫೨೨ ) ತಕ್ಷಶಿಲೆಯು ಸುಮಾರು ೨೦೦ ವರ್ಷಗಳ ವರೆಗೆ ಇರಾಣದೇಶದ ಅರಸೊತ್ತಿಗೆಗೆ ವಶವಾಗಿತ್ತು. ಹಿರೋಡೋಟಸ್ ಅನ್ನುವದೇನಂದರೆ:—

“ಕ್ರಿ. ಶ. ಪೂ. ೫೧೦ ರಲ್ಲಿ ಡರಾಯುಸ್‌ನು ಸ್ಕಾಯುಲಾಕ್ಸನನ್ನು ಸಿಂಧೂನದದ ಪ್ರದೇಶಗಳಿಗೂ ಗಾಂಧಾರದೇಶಕ್ಕೂ ನಡುವೆ ಹಡಗುಗಳ ಏರ್ಪಾಡಿಗಾಗಿ ಕಳುಹಿದ್ದನು. ೨ನೆಯ ಡರಾಯುಸ್ ಹಾಗೂ ಆರ್ಟಗ್ಝರ್ಸಸ್ ಇವರ ಆಳಿಕೆಯಲ್ಲಿ (ಕ್ರಿ. ಪೂ. ೪೧೫-೩೯೮ ) ಕ್ಲೇಸಿಯಸ್‌ನು, ೧೫ ವರ್ಷಗಳ ವರೆಗೆ ವೈದ್ಯನಾಗಿದ್ದನು. ಈ ಕಾಲದಲ್ಲಿ ಗಾಂಧಾರವು ಇರಾಣರ ಪ್ರಾಂತವಾಗಿತ್ತು. ಕ್ರಿ. ಪೂ. ೪-೫ ಶತಮಾನಗಳಲ್ಲಿ ಬರೆದಿಟ್ಟ ಅರಾಮಿಕ್ ಲಿಪಿಯ ಶಿಲಾಲಿಪಿಗಳು ಇದಕ್ಕೆ ಸಾಕ್ಷಿಯು. ಅವು ಈಗಲೂ ಹಿಂದುಸ್ತಾನದಲ್ಲಿ ಸಿಗುತ್ತವೆ. ( E. J. Rapson's Ancient India )”

ಕ್ರಿ. ಪೂ. ೩೨೬ರಲ್ಲಿ ಅಲೆಕ್ಝಾಂಡ್ರನು, ತನ್ನ ದಂಡಿನೊಡನೆ ತಕ್ಷಶಿಲೆಯ ಅರಸನ ಮೇಲೇರಿ ಬಂದಿದ್ದನು. ತಕ್ಷಶಿಲೆಯ ರಾಜನು ಅವನಿಗೆ ಈ ಮೊದಲು ವಶನಾಗಿದ್ದನು. ಮುಂದೆ ಮಯೂರರು ಇದನ್ನು ತಮ್ಮ ವಶಮಾಡಿಕೊಂಡು ಮಗಧ ರಾಜ್ಯಕ್ಕೆ ಸೇರಿಸಿಬಿಟ್ಟರು. ಅಶೋಕನು ಕೆಲವುಕಾಲ ತಕ್ಷಶಿಲೆಯನ್ನು ಆಳಿರುವನು. ತಕ್ಷಶಿಲೆಯನ್ನೂ ಗಾಂಧಾರ ದೇಶವನ್ನೂ ಪುನಃ ಎಂಥಿಡರ್ನಿಸ್ ಅಥವಾ ಡೆಮೊಕ್ರಿಟಸ್‌ನು ಗೆದ್ದನು. ಆ ಮೇಲೆ ಎನಟಾರ್ಯಿಡ್ಸ್‌ನು ಗ್ರೀಕರಿಂದವನ್ನು ತಕ್ಕೊಂಡನು. ತಕ್ಷಶಿಲೆಯು ಶೇಕ ಪರ್ಶಿಯನ್ನರು ಎನಟಾರ್ಯಿಡ್ಸ್‌ನನ್ನು ಗೆದ್ದು, ಕುಶನ್‌ರಿಂದ ತಾವು ಸೋಲುವವರೆಗೆ ಕಾಬೂಲಕೊಳ್ಳವನ್ನು ತಮ್ಮ ಕೈವಶದಿಂದ ಬಿಡಲಿಲ್ಲೆಂದು ಶಿಲಾಲಿಪಿಗಳೂ ನಾಣ್ಯಗಳೂ ಹೇಳುತ್ತವೆ,

ತಕ್ಷಶಿಲೆಯ 'ಪಾಟಲಾ' ಎಂಬ ತಾಮ್ರಶಾಸನದ ಮೇಲೆ ಬುದ್ಧನ ಕುರುಹು ಗಳಿವೆ. ಮೋಗೋ ಅಥವಾ ಮೆನ್ಸನೆಂಬ ಅರಸನು ಪಾರ್ಥಿಯನ್ ಶತಕದ ೭೮ನೇ ವರ್ಷವಲ್ಲಿ (ಕ್ರಿ. ಪೂ. ೯೩) ಮಾಡಿದ ದೇಣಿಗೆಯು ಹೆಲಿಯೋಡೋರಸನ ಶಿಲಾಸ್ತಂಭ ವೊಂದು ಸಿಕ್ಕಿದೆ. ಇವನು ತಕ್ಷಶಿಲೆಯಲ್ಲಿದ್ದ ಗ್ರೀಕರವನು; ಹಾಗು ವೈಷ್ಣವ ಮತಾನು ಯಾಯಿಯು. ಈ ಕಂಬದಲ್ಲಿ ಬರೆದಿರುವದೇನಂದರೆ—

"ಈ ವಾಸುದೇವನ ಗರುಡಗಂಬವನ್ನು ಹೆಲಿಯೋಡೋರಸ್‌ನು ನಿಲ್ಲಿಸಿದನು. ಇವನು ವಿಷ್ಣುವಿನ ಪೂಜಕನು. ಡಾಯೋನ್‌ನ ಮಗನು. ತಕ್ಷಶಿಲೆಯ ವಾಸಸ್ಥನು. ತಕ್ಷಶಿಲೆಯನ್ನು ಒಳ್ಳೇ ವೈಭವದಿಂದಾಳುತ್ತಲಿದ್ದ ೧೪ ವರ್ಷದ ಕಾಶೀಪುತ್ರಭಾಗಭದ್ರ ನೆಂಬ ಅರಸನ ಕಡೆಗೆ, ಆಂಟಿಅಕ್ಲಾಯ್ಡಿಸ್‌ನು ಇವನನ್ನು ರಾಯಭಾರಿಯಾಗಿ ಕಳುಹಿ ದ್ದನು."

( ಬ )

ತಕ್ಷಶಿಲೆಯು ಪೂರ್ವದೇಶದ ದೊಡ್ಡ ಪಟ್ಟಣಗಳಲ್ಲಿ ಒಂದು; ಉತ್ತರಹಿಂದು ಸ್ತಾನದಲ್ಲಿ ಹಿಂಪೂ ಶಿಕ್ಷಣದ ಹೆಸರಾದ ಸ್ಥಳವು. ಇದಕ್ಕೆ ಎಲ್ಲ ವರ್ಗಗಳ ವಿದ್ಯಾರ್ಥಿ ಗಳು ಮುಗಿಬೀಳುತ್ತಿದ್ದರು. ಮುಖ್ಯವಾಗಿ ವೈದ್ಯಶಾಸ್ತ್ರವನ್ನು ಕಲಿಯುವವರ ಸಂಖ್ಯೆ ವಿಶೇಷ. ಜೀವಕನು ಇಲ್ಲಿಯೇ ಶಸ್ತ್ರಕ್ರಿಯೆಯನ್ನೂ ಔಷದೋಪಚಾರಗಳನ್ನೂ ಕಲಿತ ನಂತೆ. (ಮಹಾವಗ್ಗ VII 3. Dr. wenburg'sed) ಇವನು ಬುದ್ಧನಿಗೆ ಮನೆಯ ವೈದ್ಯನಾಗಿದ್ದನು. ಶಿಕ್ಷಣಕ್ಕೆ ಹಣವೇ ಆವಶ್ಯಕವಾಗಿರಲಿಲ್ಲ. ಯಾವನೇ ಯಲ್ಲಾದರೂ ಗುರುಸೇವೆ ಮಾಡಿ ವಿದ್ಯೆಯನ್ನು ದೊರಕಿಸಬಹುದಾಗಿತ್ತು. ಜೀವಕನು ಹೀಗೆ ವಿದ್ಯೆಪಡೆದವರಲ್ಲಿ ಒಬ್ಬನು. ಬಹುಶಃ ಮೂರುವೇದಗಳಲ್ಲಿಯೂ ಹದಿನೆಂಟು ವಿದ್ಯೆಗಳಲ್ಲಿಯೂ ಶಿಕ್ಷಣವು ಸಿಗುತ್ತಿತ್ತು.

ಪೋಲೋನಿಕಸ್ ಆಫ್ ಟಾಯ್ನಾನ ಚರಿತ್ರೆಯಲ್ಲಿ ಫಿಲೊಸ್ಟ್ರೇಟಸ್‌ನು ಬರೆದಿರುವದೇನಂದರೆ— ಇವನೊಬ್ಬ ತತ್ವಜ್ಞಾನಿಯು. ಇವನೊಮ್ಮೆ ಹಿಂದುಸ್ಥಾನಕ್ಕೆ ಬಂದಿದ್ದನು. ಇವನ ಬಳಿಯಲ್ಲಿ ಡೇಮ್ಸ ಎಂಬ ಬ್ಯಾಬಿಲೋನಿಯನ್ನದ ಮಾರ್ಗ ದರ್ಶಕ (Guide) ವೆಂಬ ಚಿಕ್ಕ ಪುಸ್ತಕವಿತ್ತು. ತಕ್ಷಶಿಲೆಯ ಅರಸನಾಗಿದ್ದ ಫ್ರೌಟಸ್‌ನಿಗೆ ಗ್ರೀಕ ಭಾಷೆಯು ಬರುತ್ತಿತ್ತು. ೧೨ ವರ್ಷದ ವರೆಗೆ ಮೊದಲು ಅವಗೆ ಗ್ರೀಕು ಕಲಿಸಿ, ಹಿಂದುಗಡೆ ಬ್ರಾಹ್ಮಣರ ಕಡೆಗೆ ಕಳುಹಿದರಂತೆ. ತಕ್ಷಶಿಲೆಯು ನಿನ್ನೆವಾದಷ್ಟು ದೊಡ್ಡ ಪಟ್ಟಣವು. ಇದಕ್ಕೆ ಗ್ರೀಸದಂತೆ ಸುತ್ತಲೂ ಕೋಟೆ. ಅಲ್ಲಿ ಒಬ್ಬ ಅರಸನು ಪೋರಸನಂತೆ ರಾಜ್ಯವಾಳುವವನು. ತಕ್ಷಶಿಲೆಯಿಂದ ಶಫಾಯಿಯು ವರೆಗೆ ಹಳ್ಳಿಯವರೂ ಕೂಡ ಗ್ರೀಕ ಭಾಷೆಯನ್ನಾಡುವರು. ಸಫಯಿಯು ಜನರಿಗೆ ಪಾಯ್ಥಾಗೋರಿಯನ್ ವೇದಾಂತವು.ಬರುತ್ತಿತ್ತು. ಹಿಂದೂ ಮತ್ತು ಗ್ರೀಕ ವೇದಾಂತ ಗಳು ಪರಸ್ಪರ ಪದ್ಧತಿಗಳನ್ನನುಸರಿಸಿ ಪೂಜ್ಯವೆಂದೆಣಿಸಲ್ಪಡುತ್ತಿದ್ದವು. ಬ್ರಾಹ್ಮಣರು

ಮುಖ್ಯವಾಗಿ ಗ್ರೀಕರನ್ನು ತಮ್ಮ ಅಣ್ಣತಮ್ಮಂದಿರೆಂದು ಭಾವಿಸುತ್ತಿದ್ದರು. ಹಿಂದೂ ಸ್ಥಾನಕ್ಕೂ ಬ್ಯಾಬಿಲೋನಕ್ಕೂ ಇಜಿಪ್ತಕ್ಕೂ ನಡುವೆ ಪತ್ರವ್ಯವಹಾರವಿತ್ತು. ಎಷ್ಟೋ ಪ್ರವಾಸಿಕರು ಬ್ಯಾಬಿಲೋನದಿಂದ ಹಿಂದುಸ್ಥಾನಕ್ಕೆ ಭೂಮಾರ್ಗದಿಂದ ಹೋಗುಬರುತ್ತಿದ್ದರು."

(೧) ಏರಿಯನ್ (೨) ಸ್ಟ್ರಾಬೋ (೩) ಟೋಲೇಮಿ (೪) ಡಾಯೋನೀಸಿಯಸ್ (೫) ಪ್ಲಿನೀ (೬) ಫಾಹೀನ್ ಮತ್ತು (೭) ಹುವೇನ್‌ತ್ಸಾಂಗ ಇವರೆಲ್ಲರೂ ತಕ್ಷಶಿಲೆಯ ವಿಷಯಕ್ಕೆ ಬರೆದಿಟ್ಟವರೇ. ಕ್ರಿ. ಶ. ೭ನೇ ಶತಮಾನದಲ್ಲಿ ಬಂದ ಹಿಕನ್ಟ್ಸನಿಯ ಅನ್ನುವದೇನಂದರೆ— "ಮೊದಲು ತಕ್ಷಶಿಲೆಯು ಕಾಪಿಸಾನ ವಶದಲ್ಲಿತ್ತು. ನಂತರ ಕಾಶ್ಮೀರ ದೇಶಕ್ಕೆ ಸೇರಿತು."

೯ ನೇ ಶತಮಾನದ ನಂತರ ತಕ್ಷಶಿಲೆಯ ಬಗ್ಗೆ ಯಾರ ಸಂಗತಿಗಳೂ ಸಿಕ್ಕುವದಿಲ್ಲ.

## (೨) ನಾಲಂದದ ವಿದ್ಯಾಪೀಠವು.

ಬಿಹಾರ ಪ್ರಾಂತದಲ್ಲಿಯ ರಾಜಗೀರದ ಉತ್ತರಕ್ಕೆ ೭ ಮೈಲಿನ ಮೇಲಿರುವ ಈಗಿನ ಬಾರಾಗಾಂವ ಹಳ್ಳಿಗೆ ನಾಲಂಡಾ ಎಂದು ಕರೆಯುತ್ತಿದ್ದರು. ಪಾಲೀ ಗ್ರಂಥಗಳಲ್ಲಿ ನಾಲಂದದ ಹೆಸರು ಮೇಲೆ ಮೇಲೆ ಬಂದಾಗೂ, ಮಹಾಯಾನನು ಉದಯವಾಗುವ ಮೊದಲು ಕ್ರಿ. ಶ. ಪ್ರಾರಂಭದಲ್ಲಿ ಈ ಹಳ್ಳಿಯೇನು ಬೆಳಕಿಗೆ ಬಂದಿರಲಿಲ್ಲ. ಈ ಹಳ್ಳಿಯ ಶಿಕ್ಷಣ ಸಂಘಕ್ಕಾಗಿ ಬಹಳ ಕಕ್ಕುಲತೆಯನ್ನು ತೋರಿಸುವವರೆಂದರೆ, ಕ್ರಿ. ಶ. ೩೦೦ರಲ್ಲಿ ನಾಗಾರ್ಜುನನು; ೩೨೦ ರಲ್ಲಿ ಆರ್ಯದೇವನು ನಾಗಾರ್ಜುನನ ಸಮಕಾಲೀನನಾದ ಸುವಿಷ್ಣನು, ಮಹಾಯಾಣದ ಅಭಿಧರ್ಮವು ಅಳಿಯಬಾರದೆಂದು ೧೦೮ ದೇವಸ್ಥಾನಗಳನ್ನು ಕಟ್ಟಿಸಿದನೆಂದು ಉಲ್ಲೇಖವಿದೆ. ಕ್ರಿ. ಶ. ೪೦೦ರ ಸುಮಾರಕ್ಕೆ ಫಾಹೀಯಾನನೆಂಬ ಚೀನದ ಯಾತ್ರಿಕನೊಬ್ಬನು ಈ ಹಳ್ಳಿಗೆ ಬಂದಿದ್ದನು. ಅವನು ಈ ಊರಿಗೆ ನಾಲೋ ಎಂದು ಕರೆದಿರುವನು. ಗೌತಮಬುದ್ಧನ ಪ್ರಿಯಶಿಷ್ಯನಾದ ಸಾರೀಪುತ್ರನು ನಿರ್ವಾಣವನ್ನೈದಿದ ಸ್ಥಳದಲ್ಲಿ ಕಟ್ಟಿದ ದೊಡ್ಡ ಗೋಪುರವನ್ನು ಇವನು ಕೌತುಕದಿಂದ ನೋಡಿದನು. ಕ್ರಿ. ಶ. ೭ನೇ ಶತಮಾನದಾದಿಯಲ್ಲಿ ಹುವೇನ್‌ತ್ಸಾಂಗನೆಂಬ ಎರಡನೆಯ ಚೀನ ಪ್ರವಾಸಿಯು ಇಲ್ಲಿಗೆ ಬಂದು, ಶೀಲಭದ್ರನ ಬಳಿಯಲ್ಲಿ ಸಂಸ್ಕೃತಾಭ್ಯಾಸಕ್ಕೆ ೧೫ ತಿಂಗಳ ತನಕ ನಿಂತನು. ನಾಲಂದದ ಗ್ರಾಮವು ಮಾವಿನ ಬನಗಳುಳ್ಳ ಸುಂದರ ಸ್ಥಳವು. ಇದನ್ನು ೫೦೦ ಮಂದಿ ವ್ಯಾಪಾರಸ್ಥರು ೧೦ ಕೋಟಿ ಬಂಗಾರದ ತುಣುಕುಗಳಿಗೆ ಕೊಂಡು ಬುದ್ಧನಿಗೆ ದಾನಮಾಡಿದರು. ಬುದ್ಧನ ನಿರ್ವಾಣದ ನಂತರ, ಶಕ್ರಾದಿತ್ಯ, ಬುದ್ಧಗುಪ್ತ, ತಥಾಗತಗುಪ್ತ, ಬಾಲಾದಿತ್ಯ ಮತ್ತು ವಜ್ರರೆಂಬ ಐವರು ಅರಸರು ಐದು ಸಂಗ್ರಾಮಗಳನ್ನು ನಾಲಂದದಲ್ಲಿ ಕಟ್ಟಿಸಿರುವರು. ಆಗಿನ ಪ್ರತಿಯೊಬ್ಬ ಅರಸನು ಒಂದೊಂದು ಬುದ್ಧದೇವಸ್ಥಾನವನ್ನು ಕಟ್ಟಿಸುತ್ತ ಬಂದಿರುವನು.

ಅವೆಲ್ಲವೂ ನೋಡಲು ಬಲು ರಮ್ಯವಿರುವವು. ಇಂಥ ದೇವಸ್ಥಾನಗಳಲ್ಲಿ ಬೌದ್ಧಯತಿಗಳು ವಾಸಮಾಡಿಕೊಂಡಿರುತ್ತಿದ್ದರು. ಅವರೆಲ್ಲರೂ ಒಳ್ಳೇ ಪಂಡಿತರಾಗಿದ್ದರು. ವಿನಯವೃತ್ತಿಯುವರಾಗಿರಲು ಹೆಚ್ಚು ಜಾಗರೂಕರಾಗಿರುತ್ತಿದ್ದರು. ಅಭ್ಯಾಸದಲ್ಲಿಯೂ ವಾದವಿವಾದದಲ್ಲಿಯೂ ಅವರಿಗೆ ದಿನವು ಒಂದು ಗಳಿಗೆಯಂತೆ ಓಡುತ್ತಿತ್ತು. ಪರಿಪೂರ್ಣತೆಗೆ ಹಿರಿಯರೂ ಸಣ್ಣವರೂ ಒಂದಾಗಿ ಕಲೆತು ಹಗಲಿರುಳು ಹೆಣಗಾಡುವವರು. ಹೆಸರು ಪಡೆಯಲಿಕ್ಕೆ ನಾಲ್ಕೆಡೆಗಳಿಂದ ನಿಪುಣರು ನಾಲಂದಕ್ಕೆ ಬರಹೋಗುತ್ತಿದ್ದರು. ಹೊರಗಿನಿಂದ ಬಂದವರಲ್ಲಿ ಸೋಲುವವರೇ ಹೆಚ್ಚು. ಪರೀಕ್ಷೆಯ ಒರೆಗಲ್ಲಿಗಿಳಿದವಗೆ ನಾಲಂದದ ಶಾಲೆಗಳಲ್ಲಿ ಪ್ರವೇಶವು. ಧರ್ಮಪಾಲ, ಚಂದ್ರಪಾಲ, ಗುಣಮತಿ, ಸ್ಥಿರಮತಿ; ಪ್ರಭಾಮಿತ್ರ, ಜಿನಮಿತ್ರ, ಜ್ಞಾನಚಂದ್ರ ಮತ್ತು ಶೀಲಭದ್ರ ಇವರು ನಾಲಂದದಲ್ಲಿ ಮನ್ನಣೆಗೆ ಪಾತ್ರರಾದ ಸಜ್ಜನರೆಂದು ಹುವೆನ್‌ತ್ಸಾಂಗನು ಹೇಳಿರುವನು. ನಾಲಂದದ ಒಂದು ದೊಡ್ಡ ಆಶ್ರಮದಲ್ಲಿ ೩೦೦ ಕೋಣೆಗಳೂ ೮ ದೊಡ್ಡ ಪಟಾಂಗಣಗಳೂ ಇದ್ದು ೩೦೦೦ ಯತಿಗಳ ವಾಸಸ್ಥಳವಾಗಿದೆ ಎಂದು, ನಾಲಂದಲ್ಲಿದಲ್ಲಿಯೇ ವಾಸವಾಗಿದ್ದುಕೊಂಡ ಇನ್ನೊಬ್ಬ ಚೀನಯಾತ್ರಿಕನು ( Itsing ಕ್ರಿ. ೬೭೫-೬೮೫) ಹೇಳುವನು. ಈ ನಾಲಂದದ ಗ್ರಾಮದ ಸಮೀಪದಲ್ಲಿ ಸುತ್ತಲೂ ೨೦೦ ಹಳ್ಳಿಗಳಿದ್ದವು. ಇವೆಲ್ಲವುಗಳನ್ನು ಆ ಕಾಲದ ಅರಸರು ಆಶ್ರಮಗಳಿಗಾಗಿ ದಾನಮಾಡಿದ್ದರಂತೆ.

ಕ್ರಿ. ಶ. ೪೫೦ರಲ್ಲಿ ನಾಲಂದಕ್ಕೆ ಯುನಿವ್ಹರ್ಸಿಟಿಯ ರೂಪು ಬಂತು. ಮಗಧದ ಅರಸನಾದ ಬಾಲಾದಿತ್ಯನೂ ಹೂಣ ಅರಸನಾದ ಮಿಹಿರಾಕುಲನೂ ಸಮಕಾಲೀನರು. ಹೂಣ ಅರಸನು ಮೊದಲು ಶಾಕಲದಲ್ಲಿಯೂ ನಂತರ ಕಾಶ್ಮೀರದಲ್ಲಿಯೂ ಆಳಿದನು. ಬಾಲಾದಿತ್ಯನು ನಾಲಂದದಲ್ಲಿ ಒಂದು ದೊಡ್ಡ ಆಶ್ರಮವನ್ನು ಕಟ್ಟಿಸಿದನು. ಬಾಲಾದಿತ್ಯನ ಮೊದಲಿನವರೂ ನಾಲಂದದಲ್ಲಿ ಆಶ್ರಮಗಳನ್ನು ಕಟ್ಟಿಸುತ್ತ ಬಂದಿದ್ದರು. ಅವರಲ್ಲಿ ಮೊದಲಿನವನು ಶಕ್ರಾದಿತ್ರನು. (ಕ್ರಿ. ಶ. ೪೫೦) ಕ್ರಿ. ಶ. ೭೫೦ರಲ್ಲಿ ಕಮಲಶೀಲನು ನಾಲಂದದಲ್ಲಿ ತಂತ್ರವನ್ನು ಹೇಳುವ ಪಂಡಿತನಾಗಿದ್ದನು. ಇವನೇ ಕಡೆಯ ಪಂಡಿತನಾಗಿರಬಹುದು. ಆದರೆ ವಿಕ್ರಮ ಶಿಲೆಯ ವಿದ್ಯಾಪೀಠಕ್ಕೂ ನಾಲಂದದ ಪೀಠಕ್ಕೂ ಇದ್ದ ಪರಸ್ಪರ ಸಂಬಂಧದಿಂದ ನಾಲಂದ ಗುರುಕುಲವು ಕ್ರಿ. ಶ. ೮೫೦ ರ ವರೆಗೆ ಹೆಸರಾಗಿದ್ದಿತೆಂದು ಹೇಳಬಹುದು.

ನಾಲಂದದ ವಿದ್ಯಾಪೀಠವು ಹಾಗೂ ಅದರ ವಿಶಿಷ್ಟ ಪುಸ್ತಕಾಲಯವು ಕಟ್ಟಿದ ಸ್ಥಳಕ್ಕೆ ಧರ್ಮರಂಜನವೆಂದು ಕರೆಯುತ್ತಿದ್ದರೆಂದು ತಿಬೇಟದ ಕೆಲವು ಕುರುಹುಗಳಿಂದ ತಿಳಿಯುವದು. ಅಲ್ಲಿ ರತ್ನಸಾಗರ, ರತ್ನೋದಧಿ, ಹಾಗೂ ರತ್ನರಂಜಕಗಳೆಂಬ ಮೂರು ಉನ್ನತವಾದ ಮಂದಿರಗಳಿದ್ದವು. ರತ್ನೋದಧಿಯು ಒಂಭತ್ತು ಅಂತಸ್ತುಗಳಿದ್ದು ಅದರಲ್ಲಿ ಪವಿತ್ರವಾದ ಪ್ರಜ್ಞಾಪಾರಮಿತ ಸೂತ್ರ, ಮತ್ತು ಸಮಾಜ ಗುಹ್ಯ ಮೊದಲಾದ

ತಾಂತ್ರಿಕ ಗ್ರಂಥಗಳು ಇದ್ದವು. ತುರುಷದಾಳಿಗಾರರ ದೌಡಿನಿಂದ ನಾಶಹೊಂದಿದ ನಾಲಂದದಲ್ಲಿಯ ಗುಡಿಗುಂಡಾರಗಳನ್ನೂ ಚೈತ್ಯಾಲಯುಗಳನ್ನೂ ಮುದಿತಭದ್ರನು ಜೀರ್ಣೋದ್ಧಾರಮಾಡಿದನು. ಇದಾದ ಮೇಲೆ ಮಗಧ ಅರಸನ ಮಂತ್ರಿಯಾದ ಕುಕುತಸಿದ್ಧನು ದೊಡ್ಡದೊಂದು ಗುಡಿಯನ್ನೇ ಕಟ್ಟಿಸಿಬಿಟ್ಟನು. ಈ ಮಂದಿರವಲ್ಲಿ ಧಾರ್ಮಿಕ ಉಪನ್ಯಾಸಗಳು ನಡೆದಾಗ್ಗೆ ಇಬ್ಬರು ಬಡ ಬಿಕ್ಷುಗರು ಬಂದಿದ್ದರಂತೆ. ಅವರ ಮೇಲೆ, ಒಬ್ಬ ಅಡ್ಡನಾಡಿ ತರುಣ ಸನ್ಯಾಸಿಯು ಹೊಲಸು ನೀರು ಚಲ್ಲಿದನು. ಇದರಿಂದ ಆ ಬಿಕ್ಷುಗರಿಗೆ ಬಹಳ ಕೋಪ ಬಂತು. ಮುಂದೆ ಅವರು ೧೨ ವರುಷಗಳವರೆಗೆ ಸೂರ್ಯಾರಾಧನೆಯನ್ನು ಮಾಡಿ ಅಗ್ನಿಯಜ್ಞವನ್ನು ಹೂಡಿದರು. ಯಜ್ಞಕುಂಡದೊಳಗಿನ ಬೂದಿಯನ್ನು ಬೌದ್ಧ ಗುಡಿಗಳ ಮೇಲೆ ಚಲ್ಲಲು, ಎದ್ದ ವಡವಾಗ್ನಿಯಿಂದ ರತ್ನೋದಧಿಯು ಸುಟ್ಟು ಬೂದಿಯಾಯಿತು. ಪ್ರಜ್ಞಾಪಾತಮಿತ ಸೂತ್ರ ಮತ್ತು ಬೇರೆ ತಂತ್ರಗಳು ನೀರಿನಿಂದ ರಕ್ಷಿಸಲ್ಪಟ್ಟವೆಂದು ಹೇಳುತ್ತಾರೆ.

## ರಾಜ-ವಿಶ್ವವಿದ್ಯಾಲಯ (ವಿಕ್ರಮಶಿಲಾ)

## ಕ್ರಿ. ಶ. ೮೦೦-೧೨೦೦

### (೩) ವಿಕ್ರಮಶಿಲೆಯ ವಿದ್ಯಾಪೀಠವು.

ಕ್ರಿ. ಶ. ೮ನೆಯ ಶತಮಾನಾಂತ್ಯದಲ್ಲಿ ಈ ವಿದ್ಯಾಪೀಠವು ಧರ್ಮಪಾಲನೆಂಬ ಅರಸನಿಂದ ಸ್ಥಾಪಿಸಲ್ಪಟ್ಟಿತು. ಸಂಸ್ಕೃತ ಸ್ರಗ್ಧರಾಸ್ತೋತ್ರ ಟೀಕೆಯಲ್ಲಿಯೂ ವೃತ್ಸ್ವಯಂಭೂ ಪುರಾಣದಲ್ಲಿಯೂ ತಿಬೇಟದ ಟ್ಯಾಂಜೀರ ದಲ್ಲಿಯೂ ಈ ಪೀಠದ ಹೆಸರು ಉಲ್ಲೇಖವಾಗಿದೆ. ಗಂಗೆಯ ಶಿಲಾಸಂಗಮದ ಧಡದಲ್ಲಿ ಬಿಹಾರ ಪ್ರಾಂತದ ಉನ್ನತವಾದ ಗುಡ್ಡದ ಮೇಲೆ ಇದು ಕಟ್ಟಲ್ಪಟ್ಟಿತ್ತು. ಇದಕ್ಕೀಗ ಭಾಗಲಪುರ ಜಿಲ್ಹೆಯ ಕೋಲಗಾಂಗದ ಸಮೀಪಕ್ಕಿರುವ ಪಾಥರಘಾಟವೆನ್ನುವರು. ಇಲ್ಲಿಯ ೧೦೮ ಯತಿಗಳಿಗೂ ಎಷ್ಟೋ ಹೊರಗಿನಿಂದ ಬರುವ ವಿದ್ಯಾರ್ಥಿಗಳಿಗೂ ಯಾತ್ರಿಕರಿಗೂ ಅನ್ನ ವಸ್ತ್ರಗಳಿಗೆ ಕೊರತೆ ಬೀಳದಂತೆ ಧರ್ಮಪಾಲನು ಮೇಲಿಂದ ಮೇಲೆ ದೇಣಿಗೆಯನ್ನು ಕೊಡುತ್ತಲಿದ್ದನು. ಪಂಡಿತನೂ ಸದ್ಗುಣಿಯೂ ಆದ ಋಷಿಯು ಮಹೋಪಾಧ್ಯಾಯನಾಗಿರುತ್ತಿದ್ದನು. ಧರ್ಮಪಾಲನಾಳಿಕೆಯಲ್ಲಿ ಆಚಾರ್ಯ ಬುದ್ಧಜ್ಞಾನನು ವಿದ್ಯಾಪೀಠದ ವ್ಯವಸ್ಥಾಪಕನಿದ್ದನು. ಕ್ರಿ. ಶ. ೧೦೩೪-೧೦೩೮ ರ ವರೆಗೆ ದೀಪಾಂಕರನು ಮುಖ್ಯ ಗುರುವಾಗಿದ್ದನು. ಸ್ಥವಿರ ರತ್ನಾಕರನಾದರೂ ಇದೇ ಕಾಲಕ್ಕೆ ಇಲ್ಲಿ ಹೆಸರಾಗಿದ್ದನು. ದೀಪಾಂಕರ ಶ್ರೀ ಜ್ಞಾನನನ್ನು ತಿಬೇಟಕ್ಕೆ ಕರೆಯಲು ಬಂದ ತಿಬೇಟದ

ಪಂಡಿತನಾದ ವತ್ಸಲೋತ್ಸವನು ವಿಕ್ರಮಶಿಲೆಯ ವಿದ್ಯಾಪೀಠದಲ್ಲಿ ಕ್ರಿ. ಶ. ೧೦೩೫—೧೦೩೮ರ ವರೆಗೆ ಮೂರು ವರುಷ ನಿಂತಿದ್ದನು. ಕಮಲಕುಲಿಶ, ನರೇಂದ್ರ ಶ್ರೀಜ್ಞಾನ, ದಾನರಕ್ಷಿತ, ಅಭ್ಯಂಕರಗುಪ್ತ, ಶುಭಾಂಕರಗುಪ್ತ, ಸುನಾಯಕ ಶ್ರೀ, ಧರ್ಮಾಂಕರಶಾಂತಿ, ಮತ್ತು ಶಾಕ್ಯ ಶ್ರೀ ಪಂಡಿತ ಇವರೆಲ್ಲರೂ ಈ ಪೀಠಕ್ಕೆ ಸಂಬಂಧಿಸಿದವರು. ವಿಶೇಷವಾಗಿ ವೇದಾಂತ ನ್ಯಾಯ ಹಾಗೂ ಧರ್ಮಶಾಸ್ತ್ರ ಈ ವಿಷಯಗಳನ್ನು ಕಲಿಸುತ್ತಿದ್ದರು. ವಿದ್ಯಾಪೀಠದ ಗೋಡೆಗಳ ಮೇಲೆ, ದೊಡ್ಡ ದೊಡ್ಡ ಪಂಡಿತರ ಭಾವಪಟಗಳನ್ನು ಬಣ್ಣದಲ್ಲಿ ಬರೆಯುತ್ತಿದ್ದರು. ತೇರ್ಗಡೆ ಹೊಂದಿದ ಮೇಲ್ತರದ ವಿದ್ಯಾರ್ಥಿಗಳಿಗೆ ಅರಸರು ಪಂಡಿತರೆಂಬ ಬಿರುದು ಕೊಡುವರು. ಇಂಥ ಬಿರುದುಗಳನ್ನು ಪಡೆದವರು, ವರೇಂದ್ರದ ಆಚಾರ ಜೇತಾರಿ, ಮತ್ತು ಕಾಶ್ಮೀರದ ರತ್ನವಜ್ರರಾಗಿದ್ದರು. ವಿದ್ಯಾಪೀಠದ ರಾಜಪಾಲಕರಾದರೂ ಪಂಡಿತರೇ. ಇಂಥ ದ್ವಾರಪಾಲಕರು ಆರು ಜನರು. ಕನಕ ರಾಜನಾಳಿಕೆಯಲ್ಲಿ (ಕ್ರಿ. ಶ. ೮೫೫ — ೯೮೩) ಕೆಳಗೆ ಬರೆದ ತರ್ಕಶಾಸ್ತ್ರಜ್ಞರು ದ್ವಾರಪಾಲಕರಾಗಿದ್ದರು.

(೧) ಪೂರ್ವ ದ್ವಾರದಲ್ಲಿ ... ... ... ಆಚಾರ್ಯ ರತ್ನಾಕರ ಶಾಂತಿಯು.

(೨) ಪಶ್ಚಿಮ ,, ... ...ವಾಗೀಶವರಕೀರ್ತಿ. (ಇವನು ಕಾಶಿಯವನು)

(೩) ಉತ್ತರ ,, ... ... ... ...ಕೀರ್ತಿವಂತನಾದನರೋಪನು.

(೪) ದಕ್ಷಿಣ ,, ... ... ... ... ... ಪ್ರಜ್ಞಾಕರ ಮತಿಯು.

ನಡುವಿನ ಎರಡು ಬಾಗಿಲುಗಳಲ್ಲಿ :—

(೫) ಮೊದಲನೇದಕ್ಕೆ ... ... ... ... ಕಾಶ್ಮೀರದ ರತ್ನವಜ್ರನು.

(೬) ಎರಡನೇದಕ್ಕೆ ... ... ... ... ಗೌಡದ ಜ್ಞಾನಶ್ರೀಮಿತ್ರನು.

ಕಾಶ್ಮೀರದ ಶಾಕ ಶ್ರೀ ಪಂಡಿತನು ಮುಖ್ಯಗುರುವಿದ್ದಾಗ್ಗೆ ದಾಳಿಗಾರನಾದ ಬಕ್ತ್ಯಾರ ಖಿಲಜೀಯು ಕ್ರಿ. ಶ. ೧೨೦೩ರಲ್ಲಿ ವಿಕ್ರಮಶಿಲೆಯ ವಿದ್ಯಾಪೀಠವನ್ನು ಹಾಳು ಮಾಡಿದನಂತೆ.

## (೪) ಮಿಥಿಲಾ ವಿದ್ಯಾಪೀಠವು.

ರಾಮಾಯಣದಲ್ಲಿಯೂ ಮಹಾಭಾರತದಲ್ಲಿಯೂ ಬೌದ್ಧಗ್ರಂಥಗಳಲ್ಲಿಯೂ ಮಿಥಿಲೆಯು ಪ್ರಖ್ಯಾತವಾದ ರಾಜ್ಯವಾಗಿತ್ತೆಂಬ ಉಲ್ಲೇಖಗಳಿವೆ. ಇದರ ಇನ್ನೊಂದು ಹೆಸರು ತಿರಹೂತವು. ಹಾದುಹೋಗಲು ಕಠಿಣವಾದ ಹಿಮಾಲಯದ ದಟ್ಟವಾದ ಅರಣ್ಯಗಳು ಮಿಥಿಲೆಯ ಉತ್ತರಕ್ಕಿರುವವು. ಉಳಿದ ಮೂರು ದಿಕ್ಕುಗಳಲ್ಲಿ ಗಂಡಕಿ,

ಗಂಗಾ, ಹಾಗೂ ಕೌಶಕ ನದಿಗಳು ಸುತ್ತುಗಟ್ಟಿ, ಹರಿಯುತ್ತವೆ. ಇಂತು ರಕ್ಷಣೆ ಯಾಗುತಿರುವ ಮಿಥಿಲಾ ನಗರವು ಮೇಲಿಂದ ಮೇಲೆ ಪರದೇಶದವರ ದೌಡುಗಳಿಗೆ ಗುರಿಯಾಗುತ್ತಿರಲಿಲ್ಲ. ಆದರೂ ೧೩ನೆಯ ಶತಮಾನದಲ್ಲಿ ೯ನೆಯ ಮಲೀಕ ಇಝು ದ್ದೀನ ತುಘ್ರಿಲ್‌ನು ದಂಡೆತ್ತಿ ಬಂದಿದ್ದನೆಂದು ತಿಳಿಯುತ್ತದೆ. ಬಂಗಾಲವನ್ನು ವಿಜಯ ಸೇನನು ಆಳುವಾಗ, ಕರ್ನಾಟಕ ವಂಶಜನಾದ ನಾನ್ಯದೇವನು ಕ್ರಿ. ಶ. ೧೦೯೭ರಲ್ಲಿ ಮಿಥಿಲೆಯನ್ನು ಆಳುತ್ತಿದ್ದನು. ವಿಜಯನು ಮೊದಲು ನಾನ್ಯದೇವನನ್ನು ಸೋಲಿಸಿ ದ್ದನು. ಆದರೆ ನಾನ್ಯದೇವನ ಮಗನಾದ ಗಂಗದೇವನು ಪುನಃ ಮಿಥಿಲೆಯನ್ನು ತಿರುಗಿ ಸಂಪಾದಿಸಿದನು. ನಾನ್ಯದೇವನು ೩೬ ವರ್ಷ ರಾಜ್ಯವಾಳಿ ಕ್ರಿ. ಶ. ೧೧೨೫ರಲ್ಲಿ ತೀರಿದನು. ಇವನ ತರುವಾಯ ಇವನ ಮಗ ಗಂಗದೇವನೇ ಅರಸನಾದನು. ಇವನು ತೀರಲು ಇವನ ಮಗ ನೃಸಿಂಹದೇವನು ಪಟ್ಟವೇರಿದನು. ಇವನ ಆಳಿಕೆ ಮುಗಿದ ಮೇಲೆ ಬಂದ ಅರಸರು ರಾಮಸಿಂಹ, ಶಕ್ತಿಸಿಂಹ, ಭೂಪತಿಸಿಂಹ, ಮತ್ತು ಹರಸಿಂಹ ರೆಂಬವರು. ಇವರೆಲ್ಲರು ೨೧೬ ವರುಷ ಆಳಿದರು. ಕರ್ನಾಟಕದರಸರು ಮಿಥಿಲೆ ಯನ್ನು ೧೧೫೦ ರಿಂದ ೧೩೯೫ರ ವರೆಗೆ ಆಳಿರಬಹುದು. ಇವರಾದ ಮೇಲೆ ಕಾಮೇ ಶ್ವರ ವಂಶಜರು ೧೧೫೦ರಿಂದ ೧೫೧೫ರ ವರೆಗೆ ಆಳಿದರು. ಇವರು ೧೫ ಮಂದಿ; (೧) ಕಾಮೇಶ್ವರ (೨) ಭಾಗೀಶವರ (೩) ಗಣೇಶವರ (೪) ಸಿಂಹದೇವ (೫) ಕೀರ್ತಿಸಿಂಹ (೬) ಭವಸಿಂಹದೇವ (೭) ದೇವಸಿಂಹ (೮) ಶಿವಸಿಂಹ (೯) ಪದ್ಮಸಿಂಹ (೧೦) ಹರ ಸಿಂಹದೇವ (೧೧) ನೃಸಿಂಹ (೧೨) ಧೀರಸಿಂಹ (೧೩) ಭಯಿರವ (೧೪) ರಾಮಭದ್ರ ದೇವ (೧೫) ಲಕ್ಷ್ಮಿನಾಥದೇವ. ಇವರಾದ ಮೇಲೆ, ಅಕಬರ ಬಾದಶಹನ ಕಾಲದಲ್ಲಿ ಮಹೇಶ್ವರ ಠಕ್ಕೂರ ರಾಜನು, ತನ್ನದೊಂದು ವಂಶವನ್ನು ಸ್ಥಾಪಿಸಿದನು. ಇದು ಈಗಲೂ ನಡೆಯುತ್ತ ಬಂದಿದೆ.

೧೨ನೇ ಶತಮಾನದ ಕೊನೆಯಲ್ಲಿ, ಗಣೇಶನು ಒಂದು ನ್ಯಾಯಶಾಲೆಯನ್ನು ಪ್ರಾರಂಭಿಸಿದನು. ಇದೇ ಶತಮಾನದಲ್ಲಿ ಸ್ಮೃತಿ-ಲೇಖಕರು ಉದಯವಾದರು. ಇವ ರಲ್ಲಿ ಗೃಹೇಶ್ವರನು ಮೊದಲಿನವನು.

ಕಾಮೇಶ್ವರನ ಕಾಲದ ಪ್ರಖ್ಯಾತ ಪಂಡಿತನು, ಜಗದ್ಧರನು. ಇವನು ಗೀತಾ, ದೇವೀಮಹಾತ್ಮ್ಯೆ, ಮೇಘದೂತ, ಗೀತಗೋವಿಂದ, ಮಾಲತೀಮಾಧವ, ಮೊದಲಾದ ಗ್ರಂಥಗಳ ಮೇಲೆ, ಟೀಕೆಯನ್ನು ಬರೆದನಲ್ಲದೆ, ರಸಿಕ ಸರ್ವಸ್ವ, ಸಂಗೀತ ಸರ್ವಸ್ವ ಮೊದಲಾದ ರಸಿಕ ಗ್ರಂಥಗಳನ್ನು ಹೊಸದಾಗಿ ಬರೆದಿರುವನು. ಜಗದ್ಧರನ ತರು ವಾಯ ವಿದ್ಯಾಪತಿಯು ಬೆಳಕಿಗೆ ಬಂದನು. ಇವನ ಹೆಸರು 'ಪದಾವಲಿ'ಯಲ್ಲಿ ಕಾಣು ವದು. ಇವನ ಗ್ರಂಥಗಳು ಬಂಗಾಲದ ವೈಷವ ಲೇಖಕರನ್ನು ದಂಗುಬಡಿಸುವಂತಿವೆ.

ಶಂಕರ ಮಿಶ್ರನು ಮೂರನೆಯ ವಿದ್ವಾಂಸನು. ಇವನು ಬರೆದ ನ್ಯಾಯ, ವೈಶೇಷಿಕ, ಗ್ರಂಥಗಳು ಅಮೌಲ್ಯವಾಗಿವೆ. ಸ್ಮೃತಿಗಳ ಮೇಲೆ ಬರೆದ ಟೀಕೆಗಳು ವಿಶೇಷ ಗೌರವಕ್ಕೆ ಪಾತ್ರವಾಗಿವೆ.

ವಾಚಸ್ಪತಿ-ಮಿಶ್ರನು ನಾಲ್ಕನೆಯ ಪಂಡಿತನು. ಭೈರವೇಂದ್ರ ಹಾಗೂ ರಾಮಭದ್ರರ ಕಾಲದಲ್ಲಿ ಇವನು ಬಹಳ ಬೆಳಕಿಗೆ ಬಂದನು. ಇವನು ವಿಶೇಷತಃ ಸ್ಮೃತಿಗಳ ಮೇಲೆ ಗ್ರಂಥಗಳನ್ನು ಬರೆದನು. ನ್ಯಾಯಶಾಸ್ತ್ರದ ಮೇಲೆಯೂ ಕೆಲವು ಗ್ರಂಥಗಳನ್ನು ಬರೆದಿರುವನು. ಈ ಗ್ರಂಥಗಳು ಮೂರು. (೧) ನ್ಯಾಯಸೂತ್ರಧರ, (೨) ಖಂಡನ ಖಂಡಧರ, (೩) ಅನುಮಾನಖಂಡ, ಇದಲ್ಲದೆ ನೀತಿ-ಚಿಂತಾಮಣಿಯೆಂಬದೊಂದು ನೈತಿಕ ಗ್ರಂಥವನ್ನು ಬರೆದಿದ್ದಾನೆ.

ಈ ನಾಲ್ವರ ಕಾಲದಲ್ಲಿ ಮಿಕ್ಕ ಪಂಡಿತರು ಎಷ್ಟೋ ಜನರಿದ್ದರು. ಆದರೆ ಇವರ ಬೆಳಕಿನಲ್ಲಿ ಅವರದೇನು ಒಡೆದು ಕಾಣುವಂತಿರಲಿಲ್ಲ, ಈ ಯುಗವು ಪಂಡಿತ ಕೋಕಿಲೆಗಳಿಗೆ ವಸಂತಋತುವಿದ್ದಂತೆ; ಮಿಥಿಲಾಪೀಠದ ವೈಭವವು, ಪಂಡಿತ ಮಂಡನದಿಂದ ಉನ್ನತಿಯ ಶಿಖರವನ್ನು ಮುಟ್ಟಿತ್ತು; ಕೀರ್ತಿಯು ಭರತಭೂಮಿಯ ಮಿಕ್ಕ ಪೌರ್ವಾತ್ಯ ಪೀಠಗಳನ್ನೆಲ್ಲ ತುಂಬಿಬಿಟ್ಟಿತ್ತು.

ಹೀಗೆ ಮಿಥಿಲೆಯು ೧೩, ೧೪, ೧೫ನೆಯ ಶತಮಾನಗಳಲ್ಲಿ ಹಿಂದೂ ಶಿಕ್ಷಣದ ಕೇಂದ್ರಸ್ಥಾನವಾಗಿತ್ತು. ಎಷ್ಟೋ ವಿದ್ಯಾರ್ಥಿಗಳು ನ್ಯಾಯ, ವೇದಾಂತ, ತರ್ಕಗಳನ್ನು ಕಲಿಯಲಿಕ್ಕೆ ಇಲ್ಲಿಗೆ ಹೊರಗಿನಿಂದ ಬರುತ್ತಲಿದ್ದರು.

ಇಲ್ಲಿಯ ಶಿಕ್ಷಣವು ಮುಗಿದ ಮೇಲೆ, ವಿದ್ಯಾರ್ಥಿಗಳು ಶಲಾಕಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕಾಗುತ್ತಿತ್ತು. ಶಲಾಕಾ ಪರೀಕ್ಷೆಯು ವಿಚಿತ್ರತರವಾಗಿತ್ತು. ಪರೀಕ್ಷಕರು ಒಂದು ಸೂಜಿಯನ್ನು ಪರೀಕ್ಷಿಗಿಟ್ಟ ಯಾವದೇ ಪುಸ್ತಕದಲ್ಲಿ ಚುಚ್ಚುತ್ತಿದ್ದರು. ಆ ಸೂಜಿನಟ್ಟ ಪಾನಿನಲ್ಲಿಯ ವಿಷಯವೇ ಪರೀಕ್ಷೆಯ ಪ್ರಶ್ನೆಯು. ಈ ತೆರದ ಪರೀಕ್ಷೆಯಲ್ಲಿ ಇಳಿದ ಮೇಲೆ, ವಿದ್ಯಾರ್ಥಿಗಳಗೆ ಮಿಥಿಲಾ ವಿದ್ಯಾಪೀಠದ ಬಿರುದೊಂದು ಸಿಗುತ್ತಿತ್ತು.

---

## ೫. ನಡಿಯಾದ ವಿದ್ಯಾಪೀಠವು.

### ಕ್ರಿ. ಶ. ೧೫೭೫-೧೯೨೦.

ನವದ್ವೀಪವು ನಡಿಯಾ ಎಂಬ ಹೆಸರಿನಿಂದ ಪ್ರಖ್ಯಾತವಾಗಿದೆ. ಇದೊಂದು ಬಂಗಾಲದಲ್ಲಿಯ ಚಿಕ್ಕ ಪಟ್ಟಣವು. ಭಾಗೀರಥೀ ಮತ್ತು ಜಲಾಂಗಿ, ಇವುಗಳ ಸಂಗಮದಲ್ಲಿ ಈ ಪಟ್ಟಣವಿರುವದು. ಗಂಗೆಯು ಡೆಲ್ಟಾ ಪ್ರದೇಶದ ವಾಯವ್ಯ ಮೂಲೆ

ಯನ್ನು ಇದು ಸಂಪೂರ್ಣ ವ್ಯಾಪಿಸಿದೆ. 'ಹೊಸ ನಡುಗಡ್ಡೆ' ಎಂಬದೊಂದು ಇದರ ಹೊಸ ಹೆಸರು.

ಈಗಿನ ನಡಿಯಾ ಪಟ್ಟಣದ ಪೂರ್ವಕ್ಕೆ ನಾಲ್ಕು ಮೈಲುಗಳಾಚೆ, ಸುವರ್ಣವಿಹಾರ ಎಂಬ ಚಿಕ್ಕ ಹಳ್ಳಿಯುದೆ. ಪಾಲವಂಶದ ಬೌದ್ಧರಾಜರು ಇಲ್ಲಿ ವಾಸಮಾಡಿಕೊಂಡಿರುತ್ತಿದ್ದರೆಂದು ಹಲಕೆಲವು ಶಿಲಾಲಿಪಿಗಳೂ ಶಿಲಾಸ್ತಂಭಗಳೂ ಹೇಳುತ್ತವೆ. ಇವರ ಭವ್ಯ ಮಂದಿರಗಳ ಕುರುಹುಗಳು ಇಲ್ಲಿ ಈಗಲೂ ಸಿಗುವವು. ಬೌದ್ಧರಾಳಿಕೆಯಲ್ಲಿ ಭಾರತೀಯ ಕಲಾವೈಭವವು ಒಳ್ಳೇ ಘನತೆಗೇರಿತ್ತೆಂದು ಚಿತ್ರ ವಿಚಿತ್ರ ನಕ್ಷೆಗಳ ಮೇಲಿಂದ ಒಡೆದು ಕಾಣುವಂತಿದೆ.

ನಡಿಯಾನಗರವು ಭಾಗೀರಥೀ ನದಿಯ ಪವಿತ್ರವಾದ ದಂಡೆಯಲ್ಲಿರುವದೆಂದು ಗೌಡದೇಶದ ಬುಹಾರಾಜ ಲಕ್ಷ್ಮಣಸೇನನು ಈ ಪಟ್ಟಣವನ್ನು ತನ್ನ ರಾಜಧಾನಿಯನ್ನು ಮಾಡಿಕೊಂಡಿದ್ದರಿಂದ ಇದಕ್ಕೆ ಐತಿಹಾಸಿಕ ಮಹತ್ವವು ಸಿಕ್ಕು, ಕ್ರಿ. ಶ. ೧೧೬೩ರಲ್ಲಿದು ಒಳ್ಳೇ ಬೆಳಕಿಗೆ ಬಂತು. ಈ ಅರಸರ ರಾಜವೈಭವದ ಕುರುಹುಗಳು ಈಗಲೂ ನಡಿಯಾದಲ್ಲಿ ಸಿಗುವವು. ನಡಿಯಾದ ಈಶಾನ್ಯ ಮೂಲೆಗೆ ಬಲ್ಲಾಳದಿಗಿ ಎಂಬ ದೊಡ್ಡ ಕೆರೆಯುಂಟು. ಇದನ್ನು ಲಕ್ಷ್ಮಣಸೇನ ರಾಜನು ತನ್ನ ತಂದೆಯು ಹೆಸರು ವಾಸಿಯಾಗಿರಲು ಕಡಿದಿದನೆಂದು ಊಹೆಯಿದೆ.

ಸಣ್ಣ ನಡಿಯಾ ಪಟ್ಟಣವನ್ನು ದೊಡ್ಡ ನಗರವನ್ನು ಮಾಡಿದ ಅರಸನು ಇದೇ ಲಕ್ಷ್ಮಣಸೇನನು. (ಕ್ರಿ. ಶ. ೧೧೧೦೩-೧೧೩೮) ಇವನು ವೀರನಾಗಿದ್ದನು. ಇವನ ಮುಖ್ಯ ಪ್ರಧಾನನು ಹಲಾಯುಧನು. ಈ ಮಂತ್ರಿಯು ಬ್ರಾಹ್ಮಣ ಸರ್ವಸ್ವ, ಸ್ಮೃತಿ ಸರ್ವಸ್ವ, ಮೀಮಾಂಸಾ ಸರ್ವಸ್ವ, ಮತ್ತು ನ್ಯಾಯ ಸರ್ವಸ್ವ ಎಂಬ ನಾಲ್ಕು ಗ್ರಂಥಗಳನ್ನು ಬರೆದಿಟ್ಟ ಪಂಡಿತನು. ಇವನ ತಮ್ಮನಾದ ಪಶುಪತಿಯು ಲಕ್ಷ್ಮಣಸೇನನ ಕೋರ್ಟಿನಲ್ಲಿ ನ್ಯಾಯಾಧೀಶನಾಗಿದ್ದನು. ಇವನು ಪಶುಪತಿ ಪದ್ಧತಿಯೆಂಬ ಗ್ರಂಥವನ್ನು ಬರೆದಿರುವನು. ಸ್ಮೃತಿ ವಿವೇಕವನ್ನು ಬರೆದ ಶೂಲಪಾಣಿಯು, ವಿಭ್ರಮ ಹಾಗು ಗೀತಗೋವಿಂದಗಳನ್ನು ಬರೆದ ಕೆಂದು ಬಿಲ್ವದ ಜಯದೇವನು, ಪವನದೂತದ ಗ್ರಂಥಕರ್ತೃನಾದ ಧೋಯಿಯು, "Language to sprout into luxuriant foliage." [ ] ಎಂಬ ಕಾವ್ಯವನ್ನು ಬರೆದ ಉಮಾಪತಿಯೆಂಬ ಕವಿಯು ಲಕ್ಷ್ಮಣಶೇನನ ರಾಜದರ್ಬಾರದ ಆಸ್ಥಾನಪಟುಗಳು. ಇವರಲ್ಲದೆ, ಭಾತುದಾಸನು ದಳಪತಿಯಾಗಿದ್ದನು. ಇವನ ಮಗನಾದ ಶ್ರೀಧರದಾಸನು, ಸದುಕ್ತಿ ಕರ್ಣಾಮೃತವೆಂಬ ಪುಸ್ತಕವನ್ನು ಬರೆದು, [೧೨೦೮] ಅದರಲ್ಲಿ ಆ ಕಾಲದ ಎಷ್ಟೋ ಪಂಡಿತರ ಹೆಸರುಗಳು ತೋರಿಸಿರುವನು.

ಲಕ್ಷ್ಮಣಸೇನನು ನಡಿಯಾದಲ್ಲಿ ವಾಸಿಸುತ್ತಿದ್ದನು. ಬಂಗಾಲದ ರಾಜಧಾನಿಯಾ ಗಿದ್ದ ಗೌಡಪಟ್ಟಣವನ್ನು ಒಳ್ಳೇ ಸುಂದರ ನಗರವನ್ನು ಮಾಡಿದ್ದನು. ಇದರಿಂದ ಅದಕ್ಕೆ ಲಕ್ಷ್ಮಣವತಿಯೆಂಬ ಉಪನಾಮ ಬಿದ್ದಿತ್ತು. ಇವನ ತರುವಾಯ ೧೧೩೮ ರಲ್ಲಿ ಮಾಧವಸೇನನು, ೧೧೩೯ ರಲ್ಲಿ ಕೇಶವಸೇನನು, ೧೧೩೯–೧೨೦೫ ರ ವರೆಗೆ ಲಕ್ಷ್ಮಣೇಯ ಸೇನ ಉರ್ಫ ಅಶೋಕಸೇನ ಹೀಗೆ ರಾಜವಾಳಿದರು. ಮುಸಲ್ಮಾನಲೇಖರಿಂದ ಲಕ್ಷಣೇಯನೆಂದು ಕರೆಯಲ್ಪಡುತ್ತಿದ್ದ ಲಕ್ಷ್ಮಣೇಯನಿಗೆ, ಬಕ್ತಿಯಾರ ಖಿಲಜಿಯು ಪಟ್ಟದಿಂದ ತಳ್ಳಿದ್ದರಿಂದ, ಪೂರ್ವ ಬಂಗಾಲದ ಕಡೆಗಿದ್ದ ವಿಕ್ರಮಪುರಿಗೆ ಓಡಿಹೋ ಗಬೇಕಾಯಿತು. [ಕ್ರಿ. ಶ. ೧೧೯೭] ಬಕ್ತಿಯಾರನು ನಡಿಯಾಪಟ್ಟಣವನ್ನು ಮುತ್ತಿ ಹಾಳುಮಾಡಿ, ಅಲ್ಲಿಯೊಬ್ಬ ಕಾಜಿಯನ್ನು ನಗರದ ರಾಜಕರಣಕ್ಕಾಗಿ ನಿಯಮಿಸಿಟ್ಟನು. ಮುಂದೆ ತಾನೇ ಸ್ವತಃ ಗೌಡ ಪಟ್ಟಣಕ್ಕೆ ತೆರಳಿ ಅದನ್ನು ಗೆದ್ದುಕೊಂಡು, ಇಡೀ ಬಂ ಗಾಲ ದೇಶಕ್ಕೆ ರಾಜಧಾನಿಯನ್ನು ಮಾಡಿಕೊಂಡು, ಕ್ರಿ. ಶ. ೧೨೦೦ ರ ವರೆಗೆ ಆಳ್ಲಿ ಆಳಿದನು. ಪ್ಲಾಸೀಕಾಳಗದಿಂದ ಬಂಗಾಲ ಪ್ರಾಂತವು ಬ್ರಿಟಿಶರ ವಶವಾಯಿತು.

ಮುಸಲ್ಮಾನರಾಳಿಕೆಯಲ್ಲಿ [ ೧೧೯೭–೧೭೫೭ ] ನಡಿಯಾಪಟ್ಟಣವು ಹಿಂದೂ ಶಿಕ್ಷಣದ ವಿದ್ಯಾಪೀಠವಾಗಿತ್ತು. ೧೫ನೆಯ ಶತಮಾನದಲ್ಲಿ ಇದು ಸ್ಥಾಪಿಸಲ್ಪಟ್ಟಿತು. ಮುಸಲ್ಮಾನ ಅರಸರು ಈ ಪೀಠದ ನೆರವಿಗಾಗಿ ಪ್ರತ್ಯಕ್ಷವಾಗಿ ಎಷ್ಟು ಧನಸಹಾಯ ಮಾಡಿದರೆಂದು ಹೇಳಲಿಕ್ಕೆ ಬಾರದಂತಿದ್ದರೂ, ಧರ್ಮಬದ್ಧವಾದ ಹಿಂದೂಪದ್ಧತಿಗಳ ಮೇಲೆ, ಈ ವಿದ್ಯಾಪೀಠದ ಸ್ಥಾಪನೆಗೆ ಅವರಿಂದ ಪುಷ್ಟಿಯು ಸಿಕ್ಕಿತೆಂದೆನ್ನ ಬಹುದು.

ನಡಿಯಾ ಪೀಠವು ಬೆಳಕಿಗೆ ಬರುವ ಮೊದಲು ಬಂಗಾಲದಲ್ಲಿ ಎರಡು ಬೇರೆ ವಿದ್ಯಾಪೀಠಗಳಿದ್ದವು. ಒಂದು ವಿಕ್ರಮಶಿಲೆಯಲ್ಲಿ ಬೌದ್ಧರದು; ಇನ್ನೊಂದು ಮಿಥಿಲೆ ಯಲ್ಲಿ ಬ್ರಾಹ್ಮಣರದು. ವಿಕ್ರಮಶಿಲೆಯ ಪೀಠವನ್ನು ಬಕ್ತಿಯಾರ ಖಿಲಜಿಯು ೧೧೯೮ ರಲ್ಲಿ ಬಿಹಾರದಿಂದ ನಡಿಯಾಕ್ಕೆ ಬರುವ ಮುಂದೆ, ಸುಟ್ಟನೆಂದು ಉಲ್ಲೇಖಿಸಿದೆ. ಹಾಗು ಮುಂದೆ ಮುಂದೆ ಬರುತ್ತಲಿದ್ದ ಹೊಸ ಹುರುಪಿನ ನಡಿಯಾದ ಪಂ ಡಿತರ ಬೆಳಕಿನಲ್ಲಿ ಮಿಥಿಲಾಪೀಠದ ಹೆಸರು ಅಡಗಿಹೋಯಿತು. ೧೪ನೆಯ ಶತಮಾನದಲ್ಲಿ ಬೆಳಕಿಗೆ ಬಂದಿದ್ದ ಮಿಥಿಲೆಯು, ಎಲ್ಲ ದಿಕ್ಕುಗಳಿಂದ ಬರುತ್ತ ಲಿದ್ದ ವಿದ್ಯಾರ್ಥಿಗಳಿಗೆ ತವರುಮನೆಯಂತಿತ್ತು. ಮುಖ್ಯವಾಗಿ ನ್ಯಾಯಶಾಸ್ತ್ರವನ್ನು ಒಳ್ಳೇರೀತಿಯಿಂದ ಕಲಿಸುತ್ತಿದ್ದರು. ಇದಕ್ಕೆ ತನ್ನ ಶಿಕ್ಷಣ ಪದ್ಧತಿಯ ಅಭಿಮಾನವು ವಿಶೇಷವಿತ್ತು. ಅಂತೆಯೇ ವಿದ್ಯಾರ್ಥಿಗಳು ತೇರ್ಗಡೆಹೊಂದಿ ಹೊರಬೀಳುವ ಮುಂದೆ ತಮ್ಮೊಡನೆ ಯಾವ ತರದ ಪುಸ್ತಕಗಳನ್ನೂ ಒಯ್ಯಬಾರದೆಂದು ಅವರಿಗೆ ಕಟ್ಟಪ್ಪಣೆ ಯಿತ್ತು. ಮಿಥಿಲೆಯನ್ನುಳಿದು ನ್ಯಾಯ ಶಾಸ್ತ್ರವನ್ನು ಬೇರೆಕಡೆಗೆ ಕಲಿಯಲು ಇದೊಂದು ಅಡ್ಡಿಯೇ ಸೈ. ಈ ಪ್ರತಿಬಂಧಕವನ್ನು ನಡಿಯಾದ ರಘುನಾಥ ಶಿರೋಮಣಿಯು ದೂರಮಾಡಿದನು.

ಈ ರಘುನಾಥ ಶಿರೋಮಣಿಯು ವಿದ್ಯಾಪೀಠದ ವ್ಯವಸ್ಥೆಯನ್ನು ಹೊಸದೊಂದು ಪದ್ಧತಿಯಿಂದ ಇಟ್ಟಿದ್ದನು. ನ್ಯಾಯಶಾಸ್ತ್ರದಲ್ಲಿ ನುರಿತವನೇ ನ್ಯಾಯವನ್ನು ಕಲಿಸಲಿಕ್ಕೆ ಅರ್ಹನು. ಇಂಥವನಿಗೆ ವಿದ್ಯಾಪೀಠದಲ್ಲಿ ಒಂದು ಸ್ಥಳವು ದೊರೆಯುವದು. ಇಂಥ ಸ್ಥಳಗಳನ್ನು ದೊರಕಿಸುವವರಲ್ಲಿ ಕೇವಲ ಹೊಸ ಹೊಸ ಗ್ರಂಥಗಳನ್ನು ಬರೆದಿಡುವ ಕುಶಲತೆಯನ್ನಷ್ಟೇ ಗಣನೆಗೆ ತರುತ್ತಿರಲಿಲ್ಲ. ಅದರ ಜೊತೆಗೆ ಸಾಕಷ್ಟು ವಕ್ತೃತ್ವವೂ ಇರಲೇಬೇಕೆಂಬ ನಿರ್ಬಂಧವಿತ್ತು. ದೊಡ್ಡ ದೊಡ್ಡ ಸಭೆಗಳಲ್ಲಿ ತಮ್ಮ ಪ್ರತಿಸ್ಪರ್ಧಿಗಳ ಬಾಯಿ ತೆರೆಯದಂತೆ ಮಾಡುವ ಕುಶಲನಿಗಷ್ಟೇ ನಡಿಯಾ ವಿದ್ಯಾಪೀಠದಲ್ಲಿ ಕಲಿಸುವ ಗೌರವದ ಸ್ಥಳವು ದೊರೆಯುವದು. ಇಷ್ಟೊಂದು ಯೋಗ್ಯತೆಯುಳ್ಳ ಎಷ್ಟೋ ನೈಯಾಯಿಕರು ರಘುನಾಥ ಶಿರೋಮಣಿಯ ತರುವಾಯ ಬೆಳಕಿಗೆ ಬಂದರು. ಗ್ರಂಥ ರಚನಾಶಕ್ತಿಯನ್ನೂ ವಾಕ್ಪಟುತ್ವವನ್ನೂ ಸಮನಾಗಿ ದೊರಕಿಸಿದವರಲ್ಲಿ ರಘುನಾಥ ಶಿರೋಮಣಿಯೇ ಮೊದಲಿನವನು. ಕಡೆಕಡೆಗೆ ಹೆಸರಿಗೆ ಸೀನಿಯರ್ ನೈಯಾಯಿಕರು ಕೆಳಗೆ ಬರೆದಂತೆ—(೧) ಹರಿರಾಮ ತರ್ಕಸಿದ್ಧಾಂತಿ (೧೭೩೦) (೨) ರಾಮನಾರಾಯಣ ತರ್ಕ ಪಂಚಾನನ (೧೭೬೦) (೩) ವಸೂರಾಮನಾಥ (೧೭೭೦); (೪) ಕೃಷ್ಣಕಾಂತ ವಿದ್ಯಾವಾಗೀಶ (೧೭೮೦) (೫) ಶಂಕರತರ್ಕವಾಗೀಶ (೧೮೦೦) (೬) ಶಿವನಾಥ ವಿದ್ಯಾವಾಚಸ್ಪತಿ (೧೮೧೦) (೭) ಕಾಶೀನಾಥ ಚೂಡಾಮಣಿ (೧೮೨೦) (೮) ದಂಡಿ (೧೮೩೦) (೯) ಶ್ರೀರಾಮ ಶಿರೋಮಣಿ (ಪದಾರ್ಥತತ್ವವನ್ನು ಬರೆದಿರುವನು) (೧೦) ಮಾಧವ ತರ್ಕ ಸಿದ್ಧಾಂತನು (೧೮೫೦) (೧೧) ಹರಮೋಹನ ಚೂಡಾಮಣಿಯು; ಇವನು ಸಾಮಾನ್ಯ ಲಕ್ಷಣವೆಂಬ ಗ್ರಂಥವನ್ನು ಬರೆದಿರುವನು. ಮಾಧವತರ್ಕ ಸಿದ್ಧಾಂತಿ, ಮತ್ತು ಪ್ರಸನ್ನ ತರ್ಕರತ್ನ ಇವರ ಸಮಕಾಲೀನನು (೧೮೭೦) ೧೮೫೫ರಲ್ಲಿ ಗೋಲಕನಾಥ ನ್ಯಾಯರತ್ನನೆಂಬ ದೊಡ್ಡ ನೈಯಾಯಿಕನು ಆಗಿಹೋದನು.

೧೮೯೦ ರಲ್ಲಿ ತೀರಿಕೊಂಡ ಪಂಡಿತ ಹರಿನಾಥ ತರ್ಕಸಿದ್ಧಾಂತಿಯು ಸೀನಿಯರ್ ನೈಯಾಯಿಕನಿರದಿದ್ದರೂ ಮೇಲಾದ ಯೋಗ್ಯತೆಯವನು. ಹೀಗೆಯೇ ಮುಂದೆ (೧) ಮಹಾಮಹೋಪಾಧ್ಯಾಯ ಭುವನಮೋಹನ ವಿದ್ಯಾರತ್ನನು, (೨) ಮಹಾಮಹೋಪಾಧ್ಯಾಯ ರಾಜಕೃಷ್ಣ ತರ್ಕಪಂಚಾನನನು. (೩) ಮಹಾಮಹೋಪಾಧ್ಯಾಯ ಯದುನಾಥ ಸಾರ್ವಭೌಮನು, ಮತ್ತು (೪) ಮಹಾಮಹೋಧ್ಯಾಯ ಕಾಮುಖ್ಯನಾಥ ತರ್ಕವಾಗೀಶನು ಇವರೆಲ್ಲರು ಸೀನಿಯರ್ ಶಾಸ್ತ್ರಿಗಳು.

೧೮೯೪ ರಲ್ಲಿ ಕೂಡಿದ ರಾಜವತಿಯ ( ನಡಿಯಾ ) ಸಭೆಯಲ್ಲಿ ಮಹಾಮಹೋಪಾಧ್ಯಾಯ ರಾಜಕೃಷ್ಣ ತರ್ಕ ಪಾಂಚಾನನನೂ, ಯದುನಾಥ ಸಾರ್ವಭೌಮನೂ ವ್ಯಾಖ್ಯಾತರಾಗಿದ್ದರು. ಈರ್ವರೂ ಸವನಾದ ಜಟ್ಟಿಗಳು. ವಿಷಯುಗಳು (೧) ಪುನರ್ಜನ್ಮವಿವಿಯೋ ಹೇಗೆ ? (೨) ನಿರ್ವಾಣವು ಶಕ್ಯವೇ? ಎಷ್ಟೋ ಜನ ಪ್ರೊಫೇಸರರೂ ಪಂಡಿತರೂ ಕೇಳಲು ನೆರೆದಿದ್ದರು. ನಡಿಯಾದ ಮಹಾರಾಜನಿಂದ ಸಭೆಯು ಪ್ರಾರಂಭ

ವಾಯಿತು. ಈ ಕಣದಲ್ಲಿ ಮಹಾಮಹೋಪಾಧ್ಯಾಯ ರಾಜಕೃಷ್ಣ ತರ್ಕ ಪಂಚಾನನು ಯದುನಾಥ ಸಾರ್ವಭೌಮನನ್ನು ಒಗೆದು ಸೀನಿಯರ್ ಪದವಿಯನ್ನು ಪಡೆದನು.

ಇಬ್ಬರೂ ಸವಗಡಿಗಳೇನೋ ನಿಜ. ಯದುನಾಥ ಸಾರ್ವಭೌಮನ ವಿಷಯ ವಿವೇಚನವು ಗೂಢವಾಗಿದ್ದು, ಕೇವಲ ನಿಷ್ಣಾತರಿಗಷ್ಟೆ ತಿಳಿಯುವಂತಿತ್ತು; ಆದರೆ ರಾಜಕೃಷ್ಣತರ್ಕ ಪಂಚಾನನು ತನ್ನ ವಿವೇಚನವನ್ನು ಹಿಂಜಿದ ಅರಳಿಯಂತೆ ಪ್ರತಿಯೊಂದು ಕಠಿಣ ಶಬ್ದವನ್ನು ವಿಂಗಡಿಸಿ ವಿವರಿಸಿ, ಎಲ್ಲರಿಗೂ ತಿಳಿಯುವಂತೆ ಎದುರಾಳಿಯ ವಿವೇಚನವನ್ನು ಸ್ಪಷ್ಟವಾಗಿ ಖಂಡಿಸಿದನು.

ಸ್ಮೃತಿ ವಿಷಯದಲ್ಲಿಯೂ ಒಂದು ಸೀನಿಯರ್ ಸ್ಮಾರ್ತ ಸ್ಥಳವಿತ್ತು. ಇದು ಕಾಯಿದೆಯ ಭಾಗವು. ಇದನ್ನು ಹೊರಡಿಸಿದವನು ರಘುನಂದನನು, (೧೬ನೇ ಶತಮಾನ) ಇವನಿಗೆ ಕಾಯಿದೆಯ ವಿಷಯದಲ್ಲಿ ಅಗಾಧ ಜ್ಞಾನವಿತ್ತು. ಜ್ಯೋತಿಷ ತತ್ತ್ವವನ್ನು ಇವನು ೧೫೬೭ರಲ್ಲಿ ಬರೆದನು. ಇವನ ತರುವಾಯ (೧) ಶ್ರೀಕೃಷ್ಣ ಸಾರ್ವಭೌಮ, (೨) ಶ್ರೀಕೃಷ್ಣ ತರ್ಕಾಲಂಕಾರ, (೩) ಗೋಪಾಲ ನ್ಯಾಯಾಲಂಕಾರ, (೪) ವೈತ್ಯವೀರೇಶ್ವರ, (೫) ದಯಾನಂದ ವಾಚಸ್ಪತಿ, (೬) ವಿರೇಶ್ವರ ನ್ಯಾಯ ಪಂಚಾನನ, (೭) ಕೃಷ್ಣಕಾಂತ ವಿದ್ಯಾವಾಗೀಶ, (೮) ಲಕ್ಷ್ಮೀಕಾಂತ, ನ್ಯಾಯಭೂಷಣ, (೯) ವೃಜನಾಥ ವಿದ್ಯಾರತ್ನ (೧೦) ಮಥುರಾನಾಥ ಪದರತ್ನ, (೧೧) ಲಾಲಮೋಹನ ವಿದ್ಯಾವಾಗೀಶ, (೧೨) ಶಿವನಾಥ ವಾಚಸ್ಪತಿ, (೧೩) ಮಹಾಮಹೋಪಾಧ್ಯಾಯ ಕೃಷ್ಣನಾಥ ನ್ಯಾಯಪಂಚಾನನ, (೧೪) ಯೋಗೇಂದ್ರನಾಥ ಸ್ಮೃತಿ–ತೀರ್ಥ.

ಕೃಷಾನಂದ ಅಗಮವಾಗೀಶನು ತನ್ನ ಅನುಯಾಯಿಗಳೊಡನೆ, ತಾಂತ್ರಿಕ ವಿಷಯವನ್ನು ಬೆಳಕಿಗೆ ತಂದನು.

ನಡಿಯಾದಲ್ಲಿ ಜ್ಯೋತಿಷ್ಯಶಾಸ್ತ್ರಕ್ಕಾಗಿ ಒಂದು ಪೀಠವು ಬಹು ದಿವಸಗಳ ಹಿಂದೆಯೇ ಸ್ಥಾಪಿಸಿದ್ದಿತು. ರಾಮರುದ್ರ ವಿದ್ಯಾನಿಧಿ ಎಂಬ ಗಾರ್ಗ್ಯಗೋತ್ರದ ಜ್ಯೋತಿಷಿಯು ಕ್ರಿ. ಶ. ೧೭೧೪ ರಲ್ಲಿಯೇ ಹುಟ್ಟಿದ್ದನು. ಇವನು ಪಂಚಕೋತದ ಆಸ್ಥಾನ ಪಂಡಿತನಿದ್ದು, ಜ್ಯೋತಿಷ ಸಾರಸಂಗ್ರಹ ಎಂಬ ಗ್ರಂಥವನ್ನು ಬರೆದಿರುವನು.

ಮಹಾರಾಜ ಕೃಷ್ಣರಾಯರ ಕಾಲದಿಂದ ರಾಮರುದ್ರ ವಿದ್ಯಾನಿಧಿಯಾದರೂ ಕೃಷ್ಣನಗರ ರಾಜಮನೆತನದ ಆಸ್ಥಾನ ಪಂಡಿತನಿದ್ದನು. ಇವನು ಹಾಗೂ ಇವನ ಮುಂದಿನವರಾದ, (೧) ರಾಮಕೃಷ್ಣವಿದ್ಯಾಮಣಿ (೨) ಪ್ರಾಣನಾಥ ವಿದ್ಯಾಭರಣ, (೩) ರಾಮಜಯ ಶಿರೋಮಣಿ (೪) ಶ್ರೀದಾಮವಿದ್ಯಾಭೂಷಣ, (೫) ತಾರಣಿ ಚರಣವಿದ್ಯಾವಾಗೀಶ (೬) ದುರ್ಗಾದಾಸ ವಿದ್ಯಾರತ್ನ, (೭) ಪಂಡಿತ ವಿಶ್ವಂಭರ ಜ್ಯೋತಿಷಾರ್ಣವ ಇವರೆಲ್ಲರು ಒಬ್ಬರಿಂದೊಬ್ಬರು ನಡಿಯಾದ ಶೀನಿಯರ ಜ್ಯೋತಿಷಿಗಳಾಗಿದ್ದರು. ಇವರೆಲ್ಲರೂ ಗೃಹಚಕ್ರಗಳನ್ನು ಬರೆದು, ಮುರ್ಶಿದಾಬಾದದ ನವಾಬನಿಗೂ ಈಸ್ಟ ಇಂಡಿಯಾ ಕಂಪನಿಗೂ ಹಾಯಕೋರ್ಟಿಗೂ ಬಂಗಾಲ ಸರ್ಕಾರಕ್ಕೂ ಕಳಿಸಿಕೊಟ್ಟಿರುವರು. ಹಾಯಕೋರ್ಟ ಮೊದಲಾದವುಗಳಿಗೆ ಗೃಹಕುಂಡಲಿಗಳನ್ನು ಕಳಿಸಿಕೊಟ್ಟವರಲ್ಲಿ ಪಂಡಿತ ವಿಶ್ವೇಶ್ವರ ಜ್ಯೋತಿಷಾರ್ಣವನು ಕಡೆಯವನು.

# ಹಿಂದೂಸಂಘಟನ.

“ कंसध्वंसनधूमकेतुरवतु त्वां देवकीनंदनः ” (जयदेव)

( ಲೇಖಕ:—ರಾಧಾಕೃಷ್ಣ )

ಸ್ವಾಮಿ ಶ್ರದ್ಧಾನಂದರ ಭಯಂಕರ ಕೊಲೆಯಾದನಂತರ ಹಿಂದುಸ್ತಾನದ ಜನರಲ್ಲಿ ಹಾಃ ಹಾಃಕಾರವೆದ್ದು ಹಿಂದೂ ಸಂಘಟನದ ಕಾರ್ಯಕ್ಕೆ ಮತ್ತೆ ಎಲ್ಲರೂ ಸಿದ್ಧರಾಗುವ ಕಾಲವು ಬಂದೊದಗಿದೆ. ಗಡ್ಡಕ್ಕೆ ಬೆಂಕೆ ಹತ್ತಿದಾಗ ಬಾವಿ ತೋಡುವ ಪಂಡಿತನಂತೆ ಹಿಂದೂ ಸಮಾಜದ ಸ್ಥಿತಿಯಾಗಿದೆ. ಸ್ವಾಮಿ ಶ್ರದ್ಧಾನಂದರ ಸ್ಮಾರಕಕ್ಕೆಂದು ೧೦-೧೨ ಲಕ್ಷ ದುಡ್ಡು ಕೂಡಿಸಿ ಲಜಪತರಾಯ, ಮದನ ಮೋಹನ ಮಾಲವೀಯ ಮುಂತಾದ ಮುಖಂಡರು ಕಾರ್ಯಮಾಡಲುದ್ಯುಕ್ತರಾಗಿದ್ದಾರೆ. ಆರ್ಯಸಮಾಜವೂ ಜಾಗ್ರುತವಾಗಿ ತನ್ನ ಪ್ರಚಾರವನ್ನು ಮಾಡಹತ್ತಿದೆ. ಡಾ. ಸಾವರಕಾರು ಮಹಾರಾಷ್ಟ್ರದಲ್ಲೊಂದು ‘ ಶ್ರದ್ಧಾನಂದ ’ ಹೆಸರಿನ ವರ್ತಮಾನ ಪತ್ರವನ್ನು ತೆಗೆದು ಅದರ ಮುಖಾಂತರವಾಗಿ ಹಿಂದೂ ಸಂಘಟನ ಕಾರ್ಯದ ಬಗ್ಗೆ ಜನತಾ ಮತವನ್ನು ಹುರಿಗೊಳಿಸಹತ್ತಿದ್ದಾರೆ. ಆದರೆ ಕರ್ನಾಟಕದಲ್ಲಿ ಏನೂ ಆಗಿಲ್ಲವೆಂದರೇನೂ ಅಡ್ಡಿಯಿಲ್ಲ. ಏನೂ ಆಗುವ ಲಕ್ಷಣಗಳೂ ತೋರುವದಿಲ್ಲವೆಂಬದು ಲಜ್ಜಾಸ್ಪದವಾದದ್ದು. ನಮ್ಮ ಕರ್ನಾಟಕದ ಧಾರ್ಮಿಕ ರಚನೆಯೇ ಹಾಗಿದೆ. ಹಿಂದುಸ್ತಾನದ ಎಲ್ಲ ಹಿಂದೂ ಜನರು ಒಕ್ಕಟ್ಟಾದರೂ ಕರ್ನಾಟಕಸ್ಥರು ಒಂದುಗೂಡುವದಸಾಧ್ಯವೆಂದು ನಮ್ಮ ದೃಢವಾದ ನಂಬಿಗೆಯಿದೆ. ಈ ನಂಬಿಗೆಯನ್ನು ಹೋಗಲಾಡಿಸುವ ಪ್ರಯತ್ನವಾದರೂ ಯಾವ ರೀತಿಯಿಂದಲೂ ಯಾವದಿಕ್ಕಿನಿಂದಲೂ ಆಗುವದೋ ನೋಡಬೇಕೆಂದು ಈ ಲೇಖವನ್ನು ಬರೆದಿರುವೆವು.

ನಮ್ಮೊಬ್ಬ ಸನ್ಮಾನ್ಯ ವೈಷ್ಣವ ಗೆಳೆಯರಿಗೆ ನಾನು ಅಂದದ್ದು ನೋಡಿರಿ ! ಸ್ವಾಮಿ ಶ್ರದ್ಧಾನಂದರ ಕೊಲೆಯಾಯಿತು ! ನಮ್ಮ ದುರದೃಷ್ಟ ! ಅವರು ಹೂಂ. ‘ ಅವನೊಬ್ಬ ಆರ್ಯಸಮಾಜದವ.’ ಮುಂದೆ ವಾದವಿವಾದವು ನಡೆಯಲಾರದು. ನಾನು ಸುಮ್ಮನಿದ್ದೆ ಈ ಉತ್ತರದಲ್ಲಿ ನಮ್ಮ [ಕರ್ನಾಟಕದ] ಹಿಂದೂ ಸಮಾಜವು ಏಕೆ ಒಟ್ಟುಗೂಡುವದಿಲ್ಲ—ಲಾರದೆಂಬದರ ಗುಟ್ಟು ಒಡೆದು ಕಾಣುವದು. ಹಿಂದೂ ಸಮಾಜದಲ್ಲಿ ಅಸಂಖ್ಯ ಜಾತಿಗಳಿವೆ. ಬ್ರಾಹ್ಮಣ, ಲಿಂಗಾಯತ, ಮರಾಠಾ, ಬಡಿಗೇರ, ಸಮ್ಮಗಾರ, ಹೊಲೆಯ್ಯ ರಡ್ಡೀ ಕೊಮ್ಮಟಗ, ಶಿಂಪಿ...... ಸಾವಿರಾರು. ಇನ್ನು ಇನ್ನು ಒಂದೊಂದು ಜಾತಿಯಲ್ಲಿ ಸಾವಿರಾರು, ಅವೂ ಒಂದಕ್ಕೊಂದು ವಿರುದ್ಧವಾದಂಥವೂ ಮಾತ್ಸರ್ಯದಿಂದಲೂ ತುಂಬಿ ತುಳುಕುವಂಥವು, ಬ್ರಾಹ್ಮಣರಲ್ಲಿಯೇ ನೋಡಿರಿ ! ದ್ವೈತರು, ಅದ್ವೈತರು, ವಿಶಿಷ್ಟಾ

ದ್ವೈತರು, ಸಾರಸ್ವತರು, ಶೇಣವೀ, ನಂಬುದ್ರಿ, ಸ್ಥಾನಿಕ, ಕೊಂಕಣಸ್ಥ ಕರ್ಹಾಡೇ, ಸವಾಸೇ, ಮುಂತಾದವುಗಳು. ಕರ್ನಾಟಕವನ್ನುಳಿದರೆ ಮತ್ತೆ ಬೇರೆ ಕಡೆಗೆ ಇಷ್ಟು ಜಾತಿಗಳಿಲ್ಲ, ಉತ್ತರದಲ್ಲಿ ಬಹಳ ಕಡಿಮೆ. ಆದ್ದರಿಂದಲೇ ಅಲ್ಲಿ ಒಕ್ಕಟ್ಟು ಹೆಚ್ಚು, ನಮ್ಮಲ್ಲಿ ಕಡಿಮೆ. ಇವೆಲ್ಲ ಸಾವಿರಾರು ಜಾತಿಗಳು ಸ್ವತಂತ್ರವಾದವುಗಳೂ ಪರಸ್ಪರ ವಿರೋಧಿಗಳೂ ಆದ್ದರಿಂದ ಇವರೆಲ್ಲರಲ್ಲಿಯೂ ಇರುವಂಥ ಸಾಮಾನ್ಯ ಗುಣಧರ್ಮವಾವದೂ ಇಲ್ಲ. ಒಬ್ಬ ವೈಷ್ಣವನಿಗೂ ಶಿಂಪಿಗನಿಗೂ ಇರುವ ಸಾಮಾನ್ಯ ಗುಣಧರ್ಮವಾವದು ? ಇವರಿಬ್ಬರೂ ಹಿಂದುಗಳೋ? ಅಹುದು. ಇವರಿಬ್ಬರೂ ಹಿಂದುಗಳೆಂಬು ತೋರಿಸುವಂಥ ಗುಣ ಸಾಮಾನ್ಯವಾವುದು? ಯಾವುದೂ ಇಲ್ಲ. ಈ ಎಲ್ಲ ಜಾತಿಗಳು ಮುಟ್ಟಿಸಿಕೊಳ್ಳದಿದ್ದ ಹೊಲೆಯನೂ ಹಿಂದುವಂತೆ ! ಅಂದರೆ ಇಷ್ಟೇ: ಹಿಂದೂ ಎಂಬ ಶಬ್ದಕ್ಕೆ ಏನೂ ಅರ್ಥವಿಲ್ಲವೆಂದಂತಾಯಿತು. ನಮ್ಮ ಅಂಬೋಣವೂ ಅದೇ ಇದೆ. ಈಗ ಸದ್ಯಕ್ಕೆ ಹಿಂದೂ ಎಂಬ ಧರ್ಮವಿಲ್ಲೇ ಇಲ್ಲ. ಅದು ಇನ್ನೂ ಆಗುವದಿದೆ. ಅದು ಆದ ಮೇಲೆ ಆ ಧರ್ಮವನ್ನು ಹಿಂಬಾಲಿಸುವವರೆಲ್ಲರಿಗೂ ಹಿಂದುಗಳೆಂದು ಹೆಸರು. ಅಲ್ಲಿಯ ವರೆಗೆ ಅವರವರ ಜಾತಿಯೇ ಅವರವರ ಧರ್ಮ.

ಹಿಂದುವು ಯಾರು? ಕುರ್ತಕೋಟಿಯ ಶ್ರೀ ಮಹಾಭಾಗವತರು ಏನೂ ಗುಣಕರ್ಮಗಳ ವ್ಯಾಖ್ಯೆಯನ್ನು ಹೇಳದೆ ತನ್ನನ್ನು ಹಿಂದುವೆಂದು ಯಾರು ಕರೆದುಕೊಳ್ಳುತ್ತಾರೋ ಅವರು ಹಿಂದು ಎಂಬ ತಲೆಬಾಲವಿಲ್ಲದ ವ್ಯಾಖ್ಯೆಯನ್ನು ಹೇಳಿರುವದು. ಅದು ತ್ಯಾಜ್ಯವಾದದ್ದೇ. ಲೋಕಮಾನ್ಯ ಟಿಳಕರು. "**प्रामाण्य बुद्धिर्वेदेषु साधनानामनेकता । उपास्यानामनियमः एतद्धर्मस्य लक्षणम्**" ಎಂದರೆ ವೇದದಲ್ಲಿ ಪ್ರಾಮಾಣ್ಯಬುದ್ಧಿಯುಳ್ಳವನೂ, ಸಾಧನದಲ್ಲಿ ಅನೇಕತೆಯುಳ್ಳವನೂ, ಉಪಾಸ್ಯಗಳಲ್ಲಿ ಅನಿಯಮವುಳ್ಳವನೂ ಹಿಂದುವು" ಎಂದು ವ್ಯಾಖ್ಯೆಯನ್ನು ಮಾಡಿದರು. ಇದ್ದ ಜನರನ್ನೇ ತೆಗೆದುಕೊಂಡು ಅವರಿಗೇ ಏನಾದರೊಂದು ಉಪನಾಮವನ್ನು ಕೊಟ್ಟು ಬಿಟ್ಟುಕೊಟ್ಟರೆ ಅವರಲ್ಲಿ ಒಕ್ಕಟ್ಟೂ, ಒಕ್ಕಟ್ಟಿನಿಂದುಂಟಾಗುವ ಶಕ್ತಿಯೂ ಹೇಗೆ ಬರಬೇಕು. ಲೋಕಮಾನ್ಯರು ಹಿಂದೂ ಜನರಲ್ಲಿ ಯಾವ ಶಕ್ತಿಯನ್ನೂ ತರಲು ಸಮರ್ಥರಾಗಲಿಲ್ಲ. ಬ್ರಹ್ಮೋ ಸಮಾಜದಲ್ಲಿಯೂ ಪ್ರಾರ್ಥನಾ ಸಮಾಜದಲ್ಲಿಯೂ ಸಮತೆ, ಏಕೇಶ್ವರೀಮತ, ಭಕ್ತಿ, ಜಾತಿವಿಹೀನತೆ ಮುಂತಾದ ಕೆಲವು ಸದ್ಗುಣಗಳು ಕಂಡು ಬರುವದಾದರೂ "**मूर्तिपूजा अधमाधमा**" ಎಂದಿವರ ಮತವಿರುವದರಿಂದ ಅದು ಸಾಮಾನ್ಯ ಜನರಿಗೆ ಸೇರುವಂಥದ್ದಿಲ್ಲ. ಆರ್ಯ ಸಮಾಜಿಸ್ಟರು ಪುರಾಣಗಳ ನಿಂದೆ ಮತ್ತು ಮೂರ್ತಿಪೂಜಾವಿರೋಧ ಮುಂತಾದ್ದರಿಂದ ಜನರ ಮನಸ್ಸನ್ನಾಕರ್ಷಿಸಲಿಲ್ಲ. ಇವರಲ್ಲಿರುವದೊಂದು ಕರ್ಮಕಟಕಟಿ. ಆದ್ದರಿಂದ ಇವರೂ ಏಕೀಕರಣವನ್ನು ಮಾಡಲಸಮರ್ಥರಾದರು. ಆದ್ದರಿಂದ ಇಷ್ಟೆಲ್ಲ ಅನುಭವದಿಂದ ಮುಂದೆ ನಾವು ಕಲಿಯುತಕ್ಕದ್ದೇನೆಂದರೆ ಹಿಂದೂ ಧರ್ಮದ ಹೊಸ ಅವತಾರವಾಗಬೇಕಾದರೆ ಈಗಿನ

ಎಲ್ಲ ಜನರನ್ನು ಒಳಗೊಳ್ಳುವಂಥ ಲಕ್ಷಣಗಳನ್ನೂ ಅದರಲ್ಲಿ ಸೇರಿಸಿಕೊಳ್ಳಬೇಕು. ಇಲ್ಲ ದಿದ್ದರೆ ಏಕೀಕರಣವೂ ಸಂಘಟನವೂ ವ್ಯರ್ಥವಾಗುವದೆಂಬದರಲ್ಲಿ ಎಳ್ಳಷ್ಟೂ ಸಂದೇ ಹವಿಲ್ಲ.

ಈ ಜಗತ್ತಿನೊಳಗೆ ಪ್ರಚಲಿತವಿರುವ ಧರ್ಮಗಳೆಂದರೆ, ಕ್ರಿಶ್ಚನ್, ಮುಸಲ್ಮಾನ, ಯಹುದೀ, ಹಿಂದೂ, ಪಾರ್ಸಿ, ಜೈನ, ಬೌದ್ಧ ಮುಂತಾದವುಗಳು. ಇದರಲ್ಲಿ ಹಿಂದೂ ಧರ್ಮವನ್ನಷ್ಟು ಬಿಟ್ಟು, ಉಳಿದ ಧರ್ಮಗಳಲ್ಲಿ ಏಕೀಕರಣವಾಗಲಿಕ್ಕೆ ಸಾಧನಗಳಿವೆ. ಅವಾವವೆಂದರೆ:—(೧) ತತ್ವಜ್ಞಾನ. (೨) ದೇವರು. (೩) ಅವತಾರ. (೪) ಗ್ರಂಥ, (೫) ಆಚರಣೆ. ಇವೆಲ್ಲ ಧರ್ಮಗಳಲ್ಲಿ ದೇವರು ಎಲ್ಲರಿಗೂ ಒಬ್ಬನೇ. ಅವತಾರವೂ ಒಬ್ಬನದೇ. ಕ್ರೈಸ್ತ, ಮಹಮ್ಮದ ಮುಂತಾದವುಗಳು. ಗ್ರಂಥಗಳೂ ಒಂದೇ; ಬಾಯಬಲ, ಕುರಾಣ ಮುಂತಾದವು. ಆಚರಣೆಯೂ ಸಾಮಾನ್ಯತಃ ಒಂದೇ. ಈಗ ನಾವು ಹಿಂದೂ ಎಂದು ಕರೆಯುವಂಥ ಧರ್ಮದಲ್ಲಿ, ಸಾವಿರಾರು ತತ್ವಜ್ಞಾನಗಳು, ಲಕ್ಷಾವಧಿ ದೇವರುಗಳು, ಅಸಂಖ್ಯ ಗ್ರಂಥಗಳು, ಅನೇಕ ಅವತಾರಗಳು. ಆಚರ ಣೆಗೆ ನಿರ್ಬಂಧವೇ ಇಲ್ಲ. ಬೇಕಾದದ್ದು.

ಹಿಂದೂ ಜನರನ್ನು ಒಟ್ಟುಗೂಡಿಸಿ ಏಕೀಕರಣವನ್ನು ಮಾಡುವದಾದರೆ ಮೊದಲು ಎಲ್ಲ ಜಾತಿಗಳನ್ನು ತೆಗೆದುಹಾಕಿ ಹಿಂದೂ ಎಂಬದೊಂದೇ ಜಾತಿಯಾಗತ ಕ್ಕದ್ದು. ಹಿಂದೂ ಎಂದರೆ ತೀರಿತು. ಅವನು ಧರ್ಮದಲ್ಲಿಯೂ ಸಮಾಜದಲ್ಲಿಯೂ ಪೂಜೆ ಪುನಸ್ಕಾರಗಳಲ್ಲಿಯೂ ಸರಿಸಮಾನನು. (ಹೀಗಾಗಬಹುದೇ? ಇದೆಲ್ಲ ಗಾಳಿ ಗೋಪುರ! ಹೌದು ಪುರಾಣವನ್ನಾದರೂ ಕೇಳಿರಿ. ಮುಂದೆ ನೋಡೋಣ). ಧರ್ಮ ವೊಂದೇ. ಹಿಂದೂ ಧರ್ಮ, ತತ್ವಜ್ಞಾನವೊಂದೇ. ಗೀತೆಯಲ್ಲಿ ಹೇಳಿದ ದ್ವೈತಾ ದ್ವೈತ ಸಂಯೋಗ. ದೇವರು ಒಬ್ಬನೇ. ಶ್ರೀಕೃಷ್ಣ ಪರಮಾತ್ಮ, ಶ್ರೀಕೃಷ್ಣನ ಲೀಲೆಗಳನ್ನೂ ವೈಶಿಷ್ಟ್ಯವನ್ನೂ ಹೇಳುವ ಮಹಾಭಾರತವೊಂದೇ ಪುರಾಣ. ಶ್ರೀಕೃಷ್ಣನ ಪೂಜೆಯನ್ನು ಮಾಡುವಾಗ ಸಕಲರೂ ಶಸ್ತ್ರವನ್ನು ಧರಿಸಿಯೇ ಮಾಡತಕ್ಕದ್ದು. ಶಸ್ತ್ರವೇ ಜನಿವಾರ. ಮತ್ತೊಂದು ದಾರದ ಅವಶ್ಯಕತೆಯಿಲ್ಲ. ಎಲ್ಲರಿಗೂ ಸಂಜೆ ಮುಂಜಾನೆ ಮಾಡಬೇಕಾದ ಪ್ರಾರ್ಥನೆ ಈಶಾವಾಶ್ಯೋಪನಿಷತ್ತು. ಜಪಕ್ಕೆ ಗಾಯತ್ರಿ. ಪ್ರತ್ಯಕ್ಷ ದೇವತೆ, ಸೂರ್ಯ, ಭೂಮಾತೆ ಮತ್ತು ಗೋಮಾತೆ. ಇಷ್ಟು ಯಾರು ಹಿಂಬಾಲಿ ಸುತ್ತಾರೆಯೋ ಅವರೆಲ್ಲರೂ ಒಂದು ಧರ್ಮದವರು; ಆರ್ಯರು; ಕೃಷ್ಣ ಧರ್ಮ ದವರು; ಹಿಂದೂ ಜನರು. ಇದು ಸಾಮಾನ್ಯ ರೂಪರೇಷೆ. ಇದನ್ನೆ ಇನ್ನಷ್ಟು ಚರ್ಚಿಸುವಾ.

**ಪ್ರಾರ್ಥನೆ :—** ಹಿಂದೂ ಜನರು ಬಹು ದೇವತಾವಾದಿಗಳಿದ್ದರೂ ಎಲ್ಲರಿಗೂ ಒಬ್ಬನೇ ದೇವರೆಂದು ಅವರಿಗೆ ಗೊತ್ತಿದೆ. ಯಾವನಾದರೊಬ್ಬ ಭಾವಿಕ ಹಿಂದುವನ್ನು ನೋಡಿರಿ. ಸೋಮೇಶ್ವರನನ್ನು ಕಂಡರೂ ನಮಸ್ಕಾರ; ಲಕ್ಷ್ಮೀನಾರಾಯಣನಿಗೂ

ನಮಸ್ಕಾರ. ವಿಠ್ಠಲದೇವರನ್ನು ಕಂಡರೂ ಶಿರಬಾಗುವನು. ಹನುಮಂತನನ್ನು ಕಂಡರೂ ಸಾಷ್ಟಾಂಗವೆರಗುವನು. ಇಷ್ಟೇಕೆ, ಪರಧರ್ಮದವರ ಗುಡಿಗಳ ವಿಧ್ವಂಸವನ್ನು ಕಂಡರೂ ಸಹ ಇವನಿಗೆ ದುಃಖವೆನಿಸುವದು. ಹಟೇಲ ಪಾಚ್ಛಾಸಿನಿಗೆ ಸಕ್ಕರೆಯನ್ನು ಬೀರಿಸುವವರನ್ನೂ, ಅಲ್ಲಾ ಹಬ್ಬದಲ್ಲಿ ಹುಲಿಯಾಗುವವರನ್ನೂ ನಮ್ಮ ಧರ್ಮದಲ್ಲಿ ಕಾಣಬಹುದು. ಇದರ ಇತ್ಯರ್ಥವೇನಂದರೆ, ವೇದ, ಉಪನಿಷತ್ತು, ಗೀತೆಮುಂತಾದ ಧರ್ಮ ಗ್ರಂಥಗಳಲ್ಲಿಯೂ ಅನೇಕ ಸಾಧು ಸಂತರು ತಮ್ಮ ಜೀವನದಲ್ಲಿಯೂ ಏಕೇಶ್ವರೀ ಮತದ ಆಚರಣೆಯನ್ನೇ ಉಪದೇಶಿಸಿ ಮಾಡಿದ್ದು. ಅಂದಮೇಲೆ ದೇವರೊಬ್ಬನೇ.

ಒಬ್ಬನಲ್ಲದೆ ಜಗಕೆ ಇಬ್ಬರುಂಟೇ ಮರುಳೆ ।
ಒಬ್ಬನೇ ಸರ್ವ ಜಗಕೆಲ್ಲ ಕರ್ತಾರ ।
ನೊಬ್ಬನೇ ದೈವ ಸರ್ವಜ್ಞ ॥

ಈ ಸರ್ವಜ್ಞನ ಮಂತ್ರವನ್ನೋದಿ ಯಾವ ಹಿಂದೂವಿಗೂ ವಿಷಾದವೆನಿಸದು. ಮೂಲತಃ ಒಬ್ಬ ದೇವರಿಂದಲೇ ಈ ಎಲ್ಲ ಚರಾಚರಾತ್ಮಕವಾದ ಸೃಷ್ಟಿಯು ಉತ್ಪನ್ನವಾಗಿ, ಆ ದೇವರಿಂದಲೇ ರಕ್ಷಣವಾಗಿ, ಆ ದೇವರಲ್ಲಿಯೇ ಲೀನವೂ ಆಗುವದೆಂದು ಉಪನಿಷತ್ತುಗಳು ಸಾರುತ್ತಲಿವೆ. ಆ ಎಲ್ಲ ಉಪನಿಷತ್ತಿನಲ್ಲಿ ಅತಿ ಶ್ರೇಷ್ಠವಾದ ಈಶೋಪನಿಷತ್ತೇ ಹಿಂದೂ ಜನರ ಪ್ರಾರ್ಥನಾಮಂತ್ರವಾಗಬೇಕೆಂದು ನಮ್ಮ ಅಂಬೋಣವು. ಸಾವಿರಾರು ಉಪನಿಷತ್ತಿನಲ್ಲಿ ಪ್ರಮಾಣಭೂತವಾದಂಥವುಗಳೆಂದರೆ ೧೦ ಉಪನಿಷತ್ತುಗಳು. "ईशकेनकठप्रश्नमुंडमांडूक्यतित्तिरः । ऐतरेयं च छांदोग्यं बृहदारण्यकं तथा" ॥ ಈ ಉಪನಿಷತ್ತುಗಳೆಂದರೆ ವೇದಗಳ ಕೆನೆಯಾಗಿರುವದೆಂದರೇನೂ ಅತಿಶಯೋಕ್ತಿಯಲ್ಲ. ಈ ಉಪನಿಷತ್ತುಗಳಲ್ಲಿ ಈಶೋಪನಿಷತ್ತೇ ಶ್ರೇಷ್ಠವಾದದ್ದು. ವೇದಗಳೆಂಬ ಕಬ್ಬಿನ ತೋಟದ ರಸವನ್ನೆಲ್ಲ ಹಿಂಡಿ ತೆಗೆದು ದಶೋಪನಿಷತ್ತುಗಳಲ್ಲಿ ಸಂಗ್ರಹವಾಯಿತು. ಈ ರಸವನ್ನೆಲ್ಲ ಅಟ್ಟಿಸಿ ಹದಮಾಡಿ, ನಮ್ಮ ಧರ್ಮದ ಸಾರದಂತಿರುವ ಸಕ್ಕರೆಯ ಕರಣೆಯೆಂದರೆ ಈಶೋಪನಿಷತ್ತೇ ಸರಿ; ಸಾವಿರಾರು ಋಷಿಗಳು ಕಟ್ಟಿದ ಜೇನಿನ ತುಪ್ಪವೇ ಉಪನಿಷತ್ತು. ಎಲ್ಲ ಆಚಾರ್ಯರು ಈ ಉಪನಿಷತ್ತಿನ ಮೇಲೆ ಭಾಷ್ಯವನ್ನು ಬರೆದಿರುವರು. ಸದ್ಯಕ್ಕೆ ವಿಶ್ವಸಂಘಟನ ಕಾರ್ಯವನ್ನು ಹದಗೊಳಿಸುತ್ತಿರುವ ರವೀಂದ್ರರು, ಈ ಉಪನಿಷತ್ತನ್ನೇ ತಮ್ಮ ಮಂತ್ರವನ್ನಾಗಿಟ್ಟುಕೊಂಡಿರುವರು. ದೇವರ ಪ್ರತ್ಯಕ್ಷ ದರ್ಶನವಾಗಬೇಕೆಂದು ಪಾಂಡಿಚೇರಿಯಲ್ಲಿ ಘೋರ ತಪಸ್ಸನ್ನೆಸಗುತ್ತಿರುವ ಅರವಿಂದ ಯೋಗಿಗಳೂ ಸಹ, ತಮಗೆ ಕಂಡು ಬಂದ ತತ್ವಗಳೆಲ್ಲವು ಈಶೋಪನಿಷತ್ತಿನಲ್ಲಿಯೇ ಅಡಕವಾಗಿರುವವೆಂದು, ಅದರಮೇಲೆಯೇ ತಮ್ಮ ಮೂಲ ಭಾಷ್ಯವನ್ನು ಬರೆದಿರುವರೆಂಬದು ಜಗತ್ಪ್ರಸಿದ್ಧವಿದೆ. ಲೋಕಮಾನ್ಯವಾದ 'ಗೀತಾರಹಸ್ಯ' ವೆಂಬ ಅಮರ ಗ್ರಂಥವನ್ನು ಬರೆದ ಲೋಕಮಾನ್ಯ ಟಿಳಕರು, ತಮ್ಮ ಕರ್ಮಯೋಗದ ಉಪ

ದೇಶಕ್ಕೆ ಈ ಉಪನಿಷತ್ತನ್ನೇ ಆಧಾರವಾಗಿಟ್ಟುಕೊಂಡು ತಮ್ಮೆಲ್ಲಭಾಷ್ಯವನ್ನು ಬರೆದಿರು ವರೆಂದಮೇಲೆ, ಇದರ ಮಹತ್ವವೆಷ್ಟಿದೆಯೆಂಬದು ಒಡೆದು ಕಾಣುತ್ತಿದೆ. ಇದರಲ್ಲಿ ಮೊದಲು ಪರಮಾತ್ಮನ ಸ್ವರೂಪ ನಿರ್ಣಯ ಮಾಡಿ, ಆ ಮೇಲೆ ಆ ಪರಮಾತ್ಮನನ್ನು ಎಲ್ಲರಲ್ಲಿಯೂ ಕಂಡುಕೊಳ್ಳುವದೂ ತನ್ನಲ್ಲಿಯೂ ಅದೇ ಪರಮಾತ್ಮತತ್ವವು ತುಂಬಿ ಕೊಂಡಿರುವದೆಂದು ಕಾಣುವದೂ ಧರ್ಮದ ಧ್ಯೇಯವೆಂದು ಹೇಳಿ, ಈ ಪರಮಧರ್ಮ ಕ್ಕೂ ವ್ಯವಹಾರ (ಕರ್ಮ) ಕ್ಕೂ ಗಂಟು ಹಾಕಿ, ಐಹಿಕ ಮತ್ತು ಪಾರಮಾರ್ಥಿಕ, ಆಧಿ ಭೌತಿಕ ಮತ್ತು ಆಧ್ಯಾತ್ಮಿಕೋನ್ನತಿಯೇ ಶ್ರೇಷ್ಠವೆಂದು ಹೇಳಿದೆ. ಮತ್ತು ಕಡೆಗೆ ಸತ್ಯಜ್ಞಾನವನ್ನು ದಯಪಾಲಿಸಲಿಕ್ಕೆ (ಪುಷ್ಟಿದಾಯಕನಾದ) ಪೂಷನ್ ಎಂದರೆ ಸಕಲ ಜೀವನಗಳ ಮೂಲಾಧಾರವಾದ ಸೂರ್ಯನ ಬೇಡಿಕೆಯುಂಟು. ಒಂದೇ ಮಾತಿನಲ್ಲಿ ಹೇಳಬೇಕಾದರೆ, ಈ ಉಪನಿಷತ್ತು ಮಂತ್ರವೆಂದರೆ ಸಕಲ ಉಪನಿಷತ್ತುಗಳು ಇದರ ಮೇಲಿನ ಭಾಷ್ಯಗಳು. ಈ ಎಲ್ಲ ಉಪನಿಷತ್ತುಗಳು ಪೂರ್ಣ ಯುಗವನ್ನೇ ಕಲಿಸುತ್ತಿ ರುವವಾದ್ದರಿಂದ "ॐ पूर्णमदः पूर्णमिदं पूर्णात्पूर्ण मुदच्यते । पूर्णस्य पूर्णमादाय पूर्णमेवावशिष्यते । ॐ शांतिः शांतिः शांतिः॥" ಎಂಬ ಶಾಂತಿಯೂ ಈ ಉಪನಿಷತ್ತಿ ಗಿದೆ. ಇದೊಂದು. ಇದಾದ ಮೇಲೆ ಸಂಘಟನಾತ್ಮಕ ಶಾಂತಿಯಿಂದ ಪ್ರಾರ್ಥನೆಯನ್ನು ಮು ಗಿಸಬೇಕು. "ॐ सहनाववतु, सहनौ भुनक्तु, सहवीर्यं करवावहै । तेजस्विनाव धीतमस्तु । मा विद्विषावहै । ॐ शांतिः शांतिः शांतिः॥ ಈಶೋಪನಿಷತ್ತಿನ ಮಂತ್ರ ಗಳು ಹದಿನೆಂಟೇ ಇರುತ್ತವೆ. ಈ ಉಪನಿಷತ್ತು ಮತ್ತು ಈ ಶಾಂತಿಯು ಎರಡೂ ಕೂಡಿ ಐದೇ ಮಿನಿಟುಗಳಲ್ಲಿ ಮುಗಿಯುತ್ತವೆ. ಪ್ರತಿಯೊಬ್ಬ ಹಿಂದುವು ಇದೇ ಪ್ರಾರ್ಥ ನೆಯನ್ನು ಎರಡುಸಾರೆ—ಮುಂಜಾವು ಸಂಜೆ ಮಾಡಬೇಕು. ಯಾಕೆ ಮಾಡಬೇಕೆಂದೂ ಹೇಳಿದ್ದಾಯಿತು. ಇನ್ನು ದೇವರು.

**ದೇವರು:**—ಧರ್ಮದ ಮೂಲವು ತತ್ವಜ್ಞಾನವೇ. ಅದು ಈಶೋಪನಿಷತ್ತಿ ನಲ್ಲಿ ಹೇಳಿದ್ದಾಯಿತು. ದೇವರ ನೈಜಸ್ವರೂಪವೂ ನಿರ್ಗುಣವೂ ಆತ್ಮಸಂಭೂತವೂ ಆಗಿರುವದೆಂದು ನಮ್ಮ ಹಿಂದೂ ಜನರ ಮತ. ಆದರೂ ಉಪಾಸನೆಗಾಗಿ ಯಾವದಾದ ರೊಂದು ಮೂರ್ತಿಯು ಬೇಕೇ ಬೇಕು. ಸಾಮಾನ್ಯ ಜನರಿಗೆ ನಿರ್ಗುಣ ನಿರಾಕಾರನಾದ ಪರಮಾತ್ಮನ ಆಕಲನವು ಸುಲಭವಲ್ಲ. ಸಗುಣನಾದ ಮಾನವನಿಗೆ ಯಾವದಾದ ರೊಂದು ಸಗುಣ ಮೂರ್ತಿಯೇ ಉಪಾಸನೆಗೆ ಬೇಕಾದದ್ದು ಸ್ವಾಭಾವಿಕವೇ ಆಗಿದೆ. ಇಲ್ಲಿಯಂತೂ ಭಕ್ತಿಗೇ ಪ್ರಾಧಾನ್ಯ. "ಯಥಾಭಾವಸ್ತಥಾ ದೇವಃ." ಸಗುಣಮೂರ್ತಿ ಯೆಂದರೊಂದು ಆದರ್ಶ. (Ideal) ಆ ಆದರ್ಶದ ಉಪಾಸನೆಯಿಂದ ಮನುಷ್ಯನು ಆದರ್ಶಭೂತವಾಗುವನು. ಉಪಾಸನೆಯಿಂದಲೇ ಮನುಷ್ಯನ ಗುಣಾವಗುಣಗಳನ್ನೂ ಪರೀಕ್ಷಿಸಬಹುದು. ನಮಗೆ—ಹಿಂದೂಜನರಿಗೆ ಆದರ್ಶವೆಂದರೆ ಶ್ರೀಕೃಷ್ಣಪರಮಾತ್ಮನೇ ಸರಿ. ಅವ್ಯಕ್ತಪರಮಾತ್ಮನ ವ್ಯಕ್ತಾವತಾರಗಳಲ್ಲಿ ಪೂರ್ಣನಾದ ಅವತಾರವೆಂದರೆ, ಶ್ರೀ

ಕೃಷ್ಣನದೇ. ಇದಕ್ಕೆ ಸಾಂಪ್ರದಾಯದ ಆಧಾರವೂ ಉಂಟು. ಈಗ ಜಗತ್ತಿನಲ್ಲಿ ಪ್ರಚಲಿತವಿರುವ (Evolution) ಉತ್ಕ್ರಾಂತಿಯ ತತ್ವವನ್ನು ನಮ್ಮ ಪೂರ್ವಜರು ರೂಪಕದಲ್ಲಿ ಹೇಳಿದರು. ಅದೇ ಅವತಾರ. ಮತ್ಸ್ಯವೆಂದರೆ ನೀರಿನಲ್ಲಿಯೇ ತಿರುಗಾಡುವದೊಂದು ಪ್ರಾಣಿ. ಜೀವವು ಮೊದಲು ಈ ಸ್ಥಿತಿಯಲ್ಲಿತ್ತು. ಕೂರ್ಮವೆಂದರೆ ಮುಂದೆ ಜೀವನ ಈ ಸ್ಥಿತಿಯು ಬದಲಾಗಿ ಕೆಲವಂಶ ನೀರಿನಲ್ಲಿ ಮತ್ತು ಕೆಲವಂಶ ಭೂಮಿಯ ಮೇಲೆ ತಿರುಗಾಡುವದಾಯಿತು. ವರಾಹ, ಬಹಳಂಶ ಭೂಮಿ; ಸ್ವಲ್ಪಾಂಶ ನೀರು. ನರಸಿಂಹರೂಪ, ಅರ್ಧ ಪಶು, ಅರ್ಧ ಮಾನವ. ವಾಮನ, ಅಪೂರ್ಣಮಾನವ. ಪರಶುರಾಮ, ಹುಂಬ ಬ್ರಾಹ್ಮಣ, ಅಸಂಸ್ಕೃತ ಮಾನವ ಆದರೆ ಶರೀರಪೂರ್ಣ ರಾಮ, ಸಂಸ್ಕೃತ ಮಾನವ, ಆದರೆ ಇನ್ನೂ ಅಪೂರ್ಣ, ಯಾಕಂದರೆ ದೃಷ್ಟಿಮನೆಯದು ಸಾಮ್ರಾಜ್ಯದ್ದಲ್ಲ; ಇನ್ನೂ ಅರಸ. ಶ್ರೀ ಕೃಷ್ಣ; ಪೂರ್ಣಾವತಾರಿ ಮಾನವ. ಜೀವನು ದೇವನಾದನು ಈ ಅವತಾರದಲ್ಲಿ. ಶ್ರೀ ಕೃಷ್ಣನಾದ ಮೇಲೆ ಮಾನವನಿಗಾಗುವದೇನೂ ಉಳಿಯಲಿಲ್ಲ. ಮಾನವನ ಪೂರ್ಣಾವಸ್ಥೆ ಇದು. ಶ್ರೀ ಕೃಷ್ಣನ ಚರಿತ್ರದಿಂದಲೇ ಇದನ್ನು ಕಂಡು ಹಿಡಿಯಬಹುದು. ಶ್ರೀ ಕೃಷ್ಣನು ಅರಸನಹುದು. ರಾಜ್ಯವಿಲ್ಲದ ರಾಜ. ಬಡತನದಲ್ಲಿ ಹುಟ್ಟಿ ಬಡತನದಲ್ಲಿಯೇ ಬೆಳೆದು ಬಡವರನ್ನೇ ಕೂಡಿಸಿ ಮದಾಂಧ ರಾಜರನ್ನೆಲ್ಲ ಧ್ವಂಸಮಾಡಿ ಜನತಾ ರಾಜ್ಯವನ್ನು ಸ್ಥಾಪಿಸಿದನು. ಇವನೊಬ್ಬ ಜನರ ಕಲ್ಯಾಣಕಾರಿಯಾದ ಕ್ರಾಂತಿಕಾರಕ. ( Democratic Revolutionest ). ಹಿಂದೂ ಧರ್ಮದಲ್ಲಿಯ ಜನರ ಉಚ್ಚ ನೀಚ ವೃತ್ತಿಗಳನ್ನು ಹಾಕಬೇಕಾಗಿ ಬಂದಿದೆಯಾದ್ದರಿಂದಲೂ ಸಮಾನ ಧರ್ಮ ಪದ್ಧತಿಯಿಂದ ( Democratic ) ಸಂಘಟನವು ಬೇಕಾಗಿದೆಯಾದ್ದರಿಂದಲೂ ಮುಂದೆ ಬರುವ ಧರ್ಮಕ್ರಾಂತಿಯ ಬೀಜಗಳೂ ಉಪದೇಶವೂ ಶ್ರೀ ಕೃಷ್ಣನ ಚರಿತ್ರದಲ್ಲಿಯೇ ಅಡಕವಾಗಿವೆ. ಶ್ರೀ ಕೃಷ್ಣನ ವಿಭೂತಿಯನ್ನು ( Personality ) ಯಾವ ದೃಷ್ಟಿಯಿಂದ ಪರೀಕ್ಷಿಸಿದರೂ ಪೂರ್ಣತೆಯೇ ಕಂಡು ಬರುವಂತಿದೆ. ಶರೀರವೋ! ಕಂಸನಂಥವನ್ನು ಮಲ್ಲ ಯುದ್ಧದಲ್ಲಿ ಧ್ವಂಸಮಾಡಿದವನ ಶರೀರವೆಂಥಹದು. ಶಿಶುಪಾಲನಂಥವನ ಶಿರವನ್ನು ಕತ್ತರಿಸಿದಂಥವನ ಬಾಹುಬಲಕ್ಕೆ ಪರಿಮಾಣವೇ! ಮಲ್ಲಯುದ್ಧದಲ್ಲಿ ಪ್ರವೀಣನೆಂದ ಮಾತ್ರಕ್ಕೆ ಇವನ ಶರೀರದ ಪೂರ್ಣತೆಯನ್ನು ಹೇಳಿದಂತಾಯಿತು. ಇಷ್ಟಾಗಿ ಗದಾಯುದ್ಧ ಪ್ರವೀಣ. ಚಕ್ರಾಯುಧ ಕುಶಲ. ಇವನ ಶರೀರಕಾಂತಿಗೂ ಸೌಂದರ್ಯಕ್ಕೂ ಸಾವಿರಾರು ಗೋಪಿಯರು ಮೆಚ್ಚಿದ್ದರು. ರುಕ್ಮಿಣಿಯು ಇವನ ಸೌಂದರ್ಯಕ್ಕೂ ಸೌರ್ಯಕ್ಕೂ ಮರುಳಾಗಿ ಮನೆಮಾರು ಬಿಟ್ಟು ಈತನನ್ನು ವರಿಸಿದಳು. ಈ ಕ್ಷತ್ರಿಯ ವೀರನ ಅರಸೊತ್ತಿಗೆಯು ಎಲ್ಲ ಅರಸರನ್ನು ಬಿಗಿಸಿದ್ದಿತು. ಪಾಂಡವರ ಅಶ್ವಮೇಧವೂ ಮಹಾಭಾರತ ಯುದ್ಧವೂ ಶ್ರೀ ಕೃಷ್ಣನ ಅಸಾಮಾನ್ಯ ಕಾರ್ಯ ಮತ್ತು ರಾಜನೀತಿಯ ಆದರ್ಶಗಳು. ಇರಬೇಕು ಇದ್ದರೆ ಶ್ರೀ ಕೃಷ್ಣನಂಥ ಒಬ್ಬ ಗೆಳೆಯ,

ಬಾಲ್ಯದ ಗೆಳೆತನಕ್ಕಾಗಿ ಸುದಾಮನಿಗೆ ಬಂಗಾರದ ದ್ವಾರಕೆಯನ್ನೇ ಕಟ್ಟಿಸಿಕೊಟ್ಟನು. ಗೆಳೆತನಕ್ಕಾಗಿ ಪಾರ್ಥನ ಸಾರಥಿಯಾಗಿ ಅವನ ಕುದುರೆಗಳಿಗೆ ನೀರು ಹಣಿಸಿದನು. ಸಾವಿರ ರಾಜ್ಯಕ್ಕೊಡೆಯನಾದ ಶ್ರೀ ಕೃಷ್ಣನು ರಾಜಸೂಯದಲ್ಲಿ ಗೆಳೆಯನಾದ ಧರ್ಮ ರಾಜನ ಮನೆಯ ಎಲೆಗಳನ್ನು ಬಳೆದನು. ಕೃಷ್ಣಾ! ನಿನ್ನ ಗೆಳೆತನವೂ ಅಗಾಧವಾದದ್ದು. ಸುಯೋಧನನಿಂದ ಮಾನಹಾನಿಯನ್ನು ಮುಚ್ಚಿದ ದ್ರೌಪದಿಯ ಅಣ್ಣನು ನೀನೆ. ಪಾಂಡ ವರಂಥ ಗಂಡಂದಿರಿರುವದಕ್ಕಿಂತ ಶ್ರೀ ಕೃಷ್ಣನಂಥ ಅಣ್ಣನಿರುವದು ಒಳಿತೆಂದು ಯಾರಿಗೆ ಅನಿಸಲಿಕ್ಕಿಲ್ಲ. ಗೆಳೆತನದ ದೆಶೆಯಿಂದ ಯುದ್ಧದಲ್ಲಿ ವ್ರತಭಂಗವನ್ನು ಮಾಡಿಯಾದರೂ ಭೀಷ್ಮನನ್ನು ಹೊಯ್ಯುವವರ ದೆಶೆಯಿಂದ ಶ್ರೀ ಕೃಷ್ಣನು ಚಕ್ರವನ್ನು ತೆಗೆದನಂತೆ! ಬಲವಂತರಲ್ಲಿ ಬಲವುಳ್ಳವನೂ ಯುಕ್ತಿವಂತರಲ್ಲಿ ಯುಕ್ತಿಯಾತನೂ ಆದ ಶ್ರೀ ಕೃಷ್ಣನ ಮಹಿಮೆಯನ್ನು ಬಣ್ಣಿಸಲಿಕ್ಕೆ ಮಹಾಭಾರತವನ್ನು ಬರೆಯಬೇಕಾದೀತು! ಇಷ್ಟೆಲ್ಲ ಮಹಿಮೆಗಳೂ ಜಗತ್ತಿನಲ್ಲಿ ಬಡತನದ ಕುರುಹಾದ ಗೋಮಾತೆಯ ಪಾಲನಕ್ಕಾಗಿ "ಸರ್ವಭೂತ ಹಿತೇರತಾಃ" ಎಂಬ ಗೀತೆಯ ತತ್ವವನ್ನು ಆಡಿದವನೂ ಅದರಂತೆ ಮಾಡಿ ದವನೂ ಶ್ರೀ ಕೃಷ್ಣನೇ. ಕೊಳಲೂದುತ್ತ ಗೀತೆಯ ಅಧ್ಯಾಯಗಳನ್ನು, ವಿಶ್ವ ಧರ್ಮದ ಸ್ಥಾಪನೆಗಾಗಿ ಇನ್ನೊಮ್ಮೆ ಶ್ರೀ ಕೃಷ್ಣನು ಎಂದು ಹೇಳುವನೋ ಅವನೇ ಬಲ್ಲ.

ಧರ್ಮ ದೃಷ್ಟಿಯಿಂದ ನೋಡಿದರೆ ಉಪಾಸನೆ ಮಾಡುವಂಥ ಮೂರ್ತಿಯಲ್ಲಿ ತತ್ವಜ್ಞಾನದ ಕುರುಹುಗಳೂ ಅಡಕವಾಗಿರಬೇಕಾಗುತ್ತವೆ. ಆ ದೃಷ್ಟಿಯಿಂದ ನೋಡಿ ದರೂ ನಮ್ಮ ಧರ್ಮದ ತತ್ವಗಳ ದ್ಯೋತಕ ( Symdolc ) ವಾಗಿರುತ್ತದೆಂದು ನನಗನಿಸುತ್ತದೆ. ಶ್ರೀ ಕೃಷ್ಣನು

"ಕಡುನುಮತೆಯ ಸವಿಸಾಗರವು ।
ಕದಲದ ತಿಳಿವಿನ ಆಗರವು ।
ಸದಮಲ ಸೌಂದರ್ಯದ ನಿಧಿಯು" ॥

ಆಗಿರುವನು. ಪ್ರೀತಿ, ಜ್ಞಾನ, ಮತ್ತು ಸೌಂದರ್ಯ (Love knowl edge and Beauty ) ಸ್ವರೂಪನಾಗಿಹವಾದ್ದರಿಂದ ಅವನ ಕುರುಹುಗಳು ಶಂಖ ಚಕ್ರ ಗದಾಪದ್ಮಗಳಾಗಿರುವವು. ಕೊರಳೊಳಗಿನ ಕೌಸ್ತುಭವು ಬೆಳಕ (ಜ್ಞಾನ)ನ್ನು ಸೂಚಿ ಸುತ್ತದೆ. ಪೀತಾಂಬರವು ಪಾವಿತ್ರ್ಯದ ಚಿನ್ಹವಾಗಿರುವದು. ತುಳಸಿಯ ಮಾಲೆಯು ಶುದ್ಧ ತೆಯ ದ್ಯೋತಕವು. ಶಂಖವು ಧೀರ ಗಂಭೀರತೆಯ ಕುರುಹು. ಚಕ್ರವೆಂದರೆ ಏಕೀಕರಣ. (Organization ) ಗದೆಯು ಆಧಿಭೌತಿಕ ಶಕ್ತಿಸ್ವರೂಪವು, ಪದ್ಮವು ಪ್ರೀತಿಯ ನೆಲೆಯು. ಕೊಳಲು ಆನಂದದ ಪರಮಾವಧಿಯು. ಈ ಪ್ರಕಾರವಾಗಿ ಶ್ರೀ ಕೃಷ್ಣ ಪರ ಮಾತ್ಮನು, ಸತ್ಯ, ಶುದ್ಧತೆ, ಪ್ರೀತಿ, ದಯೆ, ಜ್ಞಾನ, ಗಾಂಭಿರತೆ, ಶಕ್ತಿ, ಆನಂದ ಮುಂತಾದ ಎಲ್ಲ ದೈವೀಗುಣಗಳ ತವರುಮನೆಯಾಗಿರುವನೆಂದು ವಿಹಿತವಾಗುತ್ತದೆ.

ಮಾನವನ ಮನಸ್ಸನ್ನು ಮೋಹಿಸಿ ಅವನಿಗೆ ಹುಚ್ಚು ಹಿಡಿಸಿ ಪೂಜಾರ್ಹನಾಗಲಿಕ್ಕೆ ಇಂಥ ಮನೋಹರ ಮೂರ್ತಿಯೂ ಇಷ್ಟು ಸದ್ಗುಣಗಳೂ ಸಾಕು.

ಶ್ರೀ ಕೃಷ್ಣನ ಇನ್ನೊಂದು ವಿಶೇಷವು ಅವರ್ಣನೀಯವಾಗಿರುವದು. ಅದು ಬೇರೆ ಮೂರ್ತಿಗಳಲ್ಲಿಯೂ ಅವತಾರಗಳಲ್ಲಿಯೂ ಇಲ್ಲ. ಅದಾವದೆಂದರೆ ತತ್ವಜ್ಞಾನದ ಸೌಂದರ್ಯದಿಂದ ಅಜರಾಮರವಾದ ಗೀತೆಯು ಈ ಆನಂದ ಮೂರ್ತಿಯ ಸ್ಫೂರ್ತಿದಾಯಕವಾದ ಮುಖದಿಂದಲೇ ಹೊರಟದ್ದು. ಅದು ಜಗತ್ತಿನ ಸಕಲ ಮತದವರಿಗೂ ವಂದ್ಯವಾಗಿರುತ್ತದೆ. ಈ ವಿಶೇಷವು ಇನ್ನೊಂದು ಮೂರ್ತಿಗಿಲ್ಲ. ಆದ್ದರಿಂದಲೇ ಶ್ರೀ ಕೃಷ್ಣನ ಮಹಾತ್ಮ್ಯವು ಮಿಗಿಲಾಗಿರುವದು. ಭಗವದ್ಗೀತೆಯೇ ಹೊಸ ಹಿಂದುಧರ್ಮದ ಗ್ರಂಥವು; ಬೇರೊಂದಿಲ್ಲ. "ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ । ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್"॥ ಗೀತೆಯ ಮಹತ್ವವನ್ನೆಷ್ಟೆಂದು ಹೇಳಬೇಕು. ಎಲ್ಲ ಉಪನಿಷತ್ತಿನ ಸಾರವು ಇದರಲ್ಲಿ ಅಡಕವಾಗಿದೆ. ಈಶೋಪನಿಷತ್ತಿನಲ್ಲಿ ಬೀಜರೂಪವಾಗಿ ಹೇಳಿದ ತತ್ವಗಳ ಮತ್ತು ತತ್ವಜ್ಞಾನದ ಪಾಯಸವೆಂದರೆ ಗೀತೆಯು. ಸಂವಾದರೂಪವಾಗಿದೆಯಾದ್ದರಿಂದ ಓದಿ ತಿಳುಕೊಳ್ಳಲೂ ಕಠಿಣವಾಗಿರುವದಿಲ್ಲ. ಈ ಗೀತೆಯ ಮೇಲೆ ಪ್ರತಿಯೊಂದು ಮತದವರೂ ಪಂಥದವರೂ ಭಾಷ್ಯವನ್ನು ಬರೆದು, ಇದಕ್ಕೆ ಸಲ್ಲಬಹುದಾದ ಬಹುಮಾನವನ್ನು ಅರ್ಪಿಸಿರುವರು. ಸಾರಾಂಶ—ಜ್ಞಾನ, ಕರ್ಮ, ಯೋಗ ಮತ್ತು ಭಕ್ತಿ— ಇವುಗಳ ಮರ್ಮಗಳನ್ನು ಸುಲಭವಾದ ಶೈಲಿಯಲ್ಲಿ ಎಲ್ಲರಿಗೂ ಸುಗಮವಾಗುವಂತೆ ಹೇಳಿದ ಈ ಅಮರಮಣಿಯು ಹಿಂದುಧರ್ಮದ ಪಾರಾಯಣ ಗ್ರಂಥವಾಗುವದವಶ್ಯವು.

ಜಾತಿಯು ಹೋಗಬೇಕು. ಜಾತಿಯು ಒಂದೇ. ಹಿಂದೂ ಪ್ರಾರ್ಥನೆಯು ಒಂದೇ, ಈಶೋಪನಿಷತ್ತು. ಪೂಜೆಯು ಒಬ್ಬ ದೇವರದೇ. ಆ ದೇವರು ಶ್ರೀ ಕೃಷ್ಣಪರಮಾತ್ಮ. ಜಪವು ಒಂದೇ ಮಂತ್ರದ್ದು. ಗಾಯತ್ರೀಮಂತ್ರ. ಸೃಷ್ಟಿಯಲ್ಲಿ ಸೂರ್ಯನು ದೇವರ ಕುರುಳು. ದನಗಳಲ್ಲಿ ಆಕಳೇ ದೇವರು. ವನಸ್ಪತಿಗಳಲ್ಲಿ ತುಲಸೀದೇವತೆ. ಈ ಧರ್ಮವು ವೀರಧರ್ಮವಾಗಬೇಕು. ಸದ್ಯಕ್ಕೆ ಕ್ರಿಶ್ಚನ್, ಶೀಖ, ಮುಸಲ್ಮಾನ ಧರ್ಮಗಳು ತಮ್ಮ ರಕ್ಷಣೆಯನ್ನು ಶಸ್ತ್ರಗಳಿಂದ ಮಾಡಿಕೊಳ್ಳುವಂತೆ ಈ ಧರ್ಮದಲ್ಲಿಯೂ ಸಂರಕ್ಷಣೆಯಿದ್ದದರಿಂದ ಶಸ್ತ್ರವೇ ಯಾವಾಗಲೂ ಪ್ರತಿಯೊಬ್ಬನ ಬಳಿಯಲ್ಲಿರಬೇಕು. ಲಗ್ನ ಮುಂತಾದ ಗಳಲ್ಲಿಯೂ ಸಮಾರಂಭ ಮಹೋತ್ಸವಗಳಲ್ಲಿಯೂ ಕೃಷ್ಣ ಪೂಜೆಯಾದ ಮೇಲೆ ಶಸ್ತ್ರ ಪೂಜೆಯೂ ಇರಬೇಕು. ಕೃಷ್ಣನನ್ನು ಮಧ್ಯದಲ್ಲಿರಿಸಿ ಆವನ ಸುತ್ತಲೂ ಪ್ರೀತಿಯ ರಾಸಕ್ರೀಡೆಯೂ, ಶೌರ್ಯದ ಶಸ್ತ್ರಕ್ರೀಡೆಗಳೂ ಆಗುತ್ತಿರಬೇಕು. ಇಂಥ ವೀರ ಧರ್ಮವು ಹಿಂದುಧರ್ಮವಾಗದ ಹೊರತು ಯಾವ ಉತ್ಕರ್ಷವನ್ನೂ ನಾವು ಹೊಂದುವ ಹಾಗಿಲ್ಲವೆಂಬುದೇ ಸತ್ಯವು.

ಮನಸ್ಸಿನ ಮಂಡಿಗೆ! ಗಾಳಿಯಲ್ಲಿ ಕಟ್ಟಿದ ಗೋಪುರ!! ತಿರುಕನ ಕನಸು!!! ಆಹುದು. ಎಲ್ಲ ಜಾತಿಗಳು ಹೋಗಿ ಒಂದೇ ಧರ್ಮವಾಗುವದೇನೂ ಸಣ್ಣಪುಟ್ಟ ಮಾತಲ್ಲ. ನಾನು ಬರೆದಂಥವು ವಿಚಾರಗಳು. ನನ್ನಲ್ಲಿ ಅಂಥ ಶಕ್ತಿಯಿದ್ದದ್ದಾದರೆ ಈ ಎಲ್ಲ ತತ್ವಗಳನ್ನು ಶಸ್ತ್ರವನ್ನು ಹಿರಿದು ಎಲ್ಲರ ಗಂಟಲೊಳಗೆ ಇಳಿಸುತ್ತಿದ್ದೆನು. ಇವತ್ತಿಲ್ಲ ನಾಳೆ ಏಕೇಶ್ವರೀ ಹಿಂದೂ ಧರ್ಮವನ್ನು ಮುಹಮ್ಮದನಂತೆ ಅಥವಾ ಶ್ರೀ ಕೃಷ್ಣ ಪರಮಾತ್ಮನಂತೆ ಶಸ್ತ್ರವನ್ನು ಹಿರಿದೇ ಇಳಿಸುವವನೊಬ್ಬ ಧರ್ಮಾತ್ಮನ ಅವತಾರವಾಗಬಹುದೆಂದು ನನಗೆ ನಂಬಿಗೆಯಿದೆ. ಇಂಥ ಧರ್ಮಾತ್ಮನು ಹುಟ್ಟದಿದ್ದರೂ ಪರಧರ್ಮಿಯರು ತಮ್ಮ ಭಯಂಕರವಾದ ಆಘಾತಗಳಿಂದ ಈಗಿನ ಹಿಂದೂ ಧರ್ಮದ ತುಂಡು ತುಣುಕುಗಳನ್ನು ಹೆಚ್ಚಲಾರಂಭಿಸಿದರೆಂದರಾದರೂ ನಮಗೆ ಬುದ್ಧಿ ಬಂದು ನಾವೆಲ್ಲರೂ ಒಂದಾಗುವೆವು. ಅದೊಂದು ಕಾಲ! ಹ್ಯಾಗೆ ಏಕೀಕರಣವಾಗುವದೆಂಬದನ್ನು ಯಾರು ಬಲ್ಲರು? ಸದ್ಯಕ್ಕೆ ನಮ್ಮ ಕರ್ತವ್ಯವಿಷ್ಟೇ. ನಮ್ಮ ಧರ್ಮದ ಬೇರೆ ಬೇರೆ ಭಾಗಗಳಲ್ಲಿ ನವಚೈತನ್ಯವುಉಂಟಾಗುವಂತೆ ಏನಾದರೊಂದು ಮಾಡುವದು. ಹೊಲೆಯರಿಂದ ಹಿಡುಕೊಂಡು ಅತಿ ಮಡಿಷ್ಠರಾದ ವೈಷ್ಣವರ ವರೆಗೆ ನಾವೆಲ್ಲರೂ ಒಂದೇ ಎಂಬ ಭಾವನೆಯು ಉಂಟಾಗುವಂತೆ ಏನಾದರೊಂದು ಯುಕ್ತಿಯನ್ನು ಹಾಕುವದು ಅವಶ್ಯವಾಗಿರುವದು. ನಾವು ಮೇಲೆ ಬರೆದದ್ದೊಂದು ಹಂಚಿಕೆ. ಬೇರೆ ಹಂಚಿಕೆಗಳನ್ನಾರೂ ಹೇಳಬಾರದೆಂತಲ್ಲ. ಇವುಗಳನ್ನು ತೆಗೆದುಕೊಳ್ಳಬಾರದೆಂತಲ್ಲ. ಹೇಗಾದರೂ ಆಗಲೊಲ್ಲದೇಕೆ, ಯಾವ ಔಷಧಕ್ಕೆ ಗುಣಬಂದರೂ ಅಷ್ಟೇ, ಯಾವ ವೈದ್ಯನ ಕೈಗೆ ಯಶಸ್ಸು ಬಂದರೂ ಸರಿ, ನಮ್ಮಲ್ಲಿಯ ದೌರ್ಬಲ್ಯವು ಮಾಯವಾಗಿ ನಮ್ಮಲ್ಲಿ ಶಕ್ತಿಯು ಬರಲೆಂದು ಆ ಭಗವಂತನನ್ನು ಬೇಡಿಕೊಳ್ಳುತ್ತೇನೆ.

यत्र योगेश्वरः कृष्णोः यत्र पार्थो धनुर्धरः ।
तत्र श्रीविजेया भूतिर्ध्रुवानीतिर्मतिर्मम ॥

---

# ಪಂಚಮಾಂಕ.

## ಪ್ರಥಮ ದೃಶ್ಯ.

## ಮಂದಿರದ ಹೊರಗೆ ಗದ್ದರಣೆ.

---

**ಪೂಜೋಪಕರಣದೊಡನೆ ರಘುಪತಿ.**

ರಘು:— ದೇವೀ; ಇಷ್ಟು ದಿನಗಳಲ್ಲಿ ಇಂದು ಎಚ್ಚತ್ತೆಯೆಂದು ತೋರುತ್ತದೆ! ಓಹೊ! ರೋಷಹುಹುಂಕಾರವಿದು ನೋಡು!! ತಿಮಿರ ರೂಪಿಣೀ, ಅಭಿಶಾಪವನ್ನಿತ್ತು ನಗರದ ಮೇಲೆ ಹಾಯ್ದು ನಡೆದಿರುವೆಯಾ ? ಅಕೊ, ನಿನ್ನ ಪ್ರಳಯ ಸಂಗಿನಿಯರು ಮೀರಿದ ಹಸಿವೆಯಿಂದ ವಿಶ್ವಮಹಾತರುವನ್ನು ಜೋಲಿ ಹೊಡಿಯುತ್ತಿದ್ದಾರೆ! ಈ ನಿನ್ನ ದೀರ್ಘ ಉಪವಾಸದ ಪಾರಣೆಯನ್ನು ಇಂದು ನೆರವೇರಿಸುವೆ ! ದೇವಿ, ಭಕ್ತರನ್ನು ಸಂಶಯದಲ್ಲಿ ನೂಕಿ ಇಷ್ಟುದಿನವೆಲ್ಲಿದ್ದ ತಾಯೀ? ನಿನ್ನ ಕತ್ತಿಯನ್ನು ನೀನೆತ್ತಬೇಕಲ್ಲದೆ ನಾವೆಷ್ಟರವರು ? ಇಂದು ನಿನ್ನ ಚಂಡೀ ಮೂರ್ತಿಯನ್ನು ನೋಡಿಯಾದ ಆನಂದವನ್ನು ಎಷ್ಟೆಂದು ಹೇಳಲಿ? ಚಿತ್ತವು ಸಾಹಸದಿಂದ ತುಂಬಿತು, ಸಂದೇಹವು ಸರಿದು ಹೋಯಿತು. ಹತಮಾನ ನತಶಿರವಿಂದು ನೂತನ ತೇಜದಿಂದ ಸೆಟೆದು ನಿಂತಿತು! ಅಕೋ? ಕಾಲ ಸಪ್ಪಳು ಕೇಳಿಬರುತ್ತದೆ. ಬಂತು ನಿನ್ನ ಪೂಜೆ! ಜಯ ಮಹಾದೇವಿ!

**ಅಪರ್ಣೆ ಬರುವಳು.**

ದೂರಾಗು ದೂರಾಗು, ಮಾಯಾವಿನೀ ದೂರಾಗು! ಎಲಗೇ ಜಯಸಿಂಹನನ್ನು ಸೆಳೆಯಬೇಕೆನ್ನುವಿ! ಎಲಗೇ ಸರ್ವನಾಶಿನೀ, ಮಹಾಪಾತಕಿನೀ ದೂರಾಗು!

( ಅಪರ್ಣೆ ಹೋಗುವಳು. )

ಇದೇನು ಅಕಾಲ ವ್ಯಾಘಾತವಿದು! ಜಯಸಿಂಹನು ಬಾರದಿದ್ದರೆ! ಹಾಗೆಂದಿಗೂ ಆಗದು! ಅವನ ಸತ್ಯಭಂಗವೆಂದೆಂದಿಗೂ ಆಗದು! ಜಯಮಹಾಕಾಲೀ! ಸಿದ್ಧಿದಾತ್ರೀ! ಜಯ ಭಯಂಕರೀ!!!— ಏನೋ— ಕೇಡು ಸಂಭವಿಸಿದರೆ, ಸೆರೆಯಲ್ಲಿ ಸಿಕ್ಕುಬಿದ್ದರೆ, ಅಥವಾ ರಾಜದೂತರ ಕೈಯಲ್ಲಿ ಸತ್ತುಬಿಟ್ಟರೆ? ಜಯಮಾತೇ, ಅಭಯೇ! ಭಕ್ತ ಸಹಾಯೇ! ಜಯಮಾತೇ ಜಾಗೃತದೇವೀ! ಜಯ ಸರ್ವಜಯೀ! ಜಗದಲ್ಲಿ ಭಕ್ತನನ್ನು ಲೆಯ ದುರ್ನಾಮವು ಪಸರಿಸಬಾರದು! ಶತ್ರುಪಕ್ಷವು ನಿಃಶಂಕ ಕೌತುಕದಿಂದ ನಗಬಾರದು ನೋಡು! ಮಕ್ಕಳಿಗಿರುವ ಮಾತೃ ಅಹಂಕಾರವು ಹುಡಿಯೆದ್ದು ಹಾರಿದರೆ- ತಾಯಿಯೆಂದು ನಿನ್ನನ್ನುಕರೆಯುವವರಾರು? ಅದೋ ಕಾಲಸಪ್ಪಳು! ಜಯಸಿಂಹನೇಸರಿ! ಜಯ ನರಮುಂಡಮಾಲಿನೀ! ಪಾಷಂಡದಲನೀ! ಮಹಾ ಶಕ್ತೀ ಜಯ ಜಯ ಜಯ!!!

**ಜಯಸಿಂಹನು ಅವಸರದಿಂದ ಬರುವನು.**

ಜಯ:—ಇದೆ, ಇದೆ! ಮೊದಲು ನನಗೇ ದಾರಿ ಬಿಡು! ನನ್ನನ್ನೇ ನಾನು ನೈವೇದ್ಯ ಮಾಡುವೆ! ರಾಜರಕ್ತ ಬೆಕೇ ನಿನಗೆ? !! ದಯಾಮಯೀ, ಜಗತ್ಪಾಲಿನೀ, ಮಾತೇ, ನಿನಗೆ ರಾಜರಕ್ತ ಬೇಕೇ? !! ಇಲ್ಲದಿದ್ದರೆ ನಿನ್ನ ನೀರಡಿಕೆ ಯಾತರಿಂದಲೂ ಆರಲಿಕ್ಕಿಲ್ಲವೇ!

ತಕೊಳ್ಳು- ನಾನೂ ರಾಜಪೂತನಿರುವೆ, ನನ್ನ ಅಜ್ಜ ಮುತ್ತಂದಿರು ಅರಸರಿದ್ದರು, ಈಗಲೂ ನನ್ನ ತಾಯಿಯ ಹಿರಿಯರು ರಾಜರಿರುವರು, ಈ ದೇಹದಲ್ಲಿ ರಾಜರಕ್ತವಿದೆ!! ಇದೇ ರಕ್ತವನ್ನೀಯುವೆ! ತಾಯೀ, ಇದೇ (ನಿನಗೆ) ಕೊನೆಯ ರಕ್ತ! ರಕ್ತ ತೃಷಾತುರಳಾದ ನಿನ್ನ ಅನಂತ ರಕ್ತಪಿಪಾಸೆಯನ್ನು ಕೊನೆಗೆ ನನ್ನ ಈ ರಕ್ತವೇ ತೀರಿಸುವದು!

( ಎದೆಯಲ್ಲಿ ಚೂರಿಯನ್ನಿರಿದುಕೊಳ್ಳುವನು. )

ರಘು:— ಜಯಸಿಂಹಾ! ಜಯಸಿಂಹಾ, ನಿರ್ದಯಾ, ನಿಷ್ಠುರಾ!! ಇದೇನು ಸರ್ವನಾಶಮಾಡಿದಿ ???! ಜಯಸಿಂಹಾ! ಅಕೃತಜ್ಞಾ! ಗುರುದ್ರೋಹೀ! ಪಿತೃಮರ್ಮಘಾತೀ! ಸ್ವೇಚ್ಛಾಚಾರೀ !! ಜಯಸಿಂಹಾ, ಕುಲಿಶಕಠಿನಾ! ಎಲೋ ಜಯಸಿಂಹಾ! ನನ್ನ ಏಕಮಾತ್ರ ಪ್ರಾಣವೇ! ಪ್ರಾಣಾಧೀಶನೇ! ನನ್ನ ಜೀವನ ಮಥನ ಸಂಭೂತ ಧನವೇ! ಜಯಸಿಂಹಾ, ವತ್ಸಾ! ಎಲೋ ನನ್ನ ಗುರುವತ್ಸಲನೇ ಮರುಳಿಬಾ! ಮರುಳಿಬಾ! ನಿನ್ನನ್ನು ಬಿಟ್ಟು ನನಗೆ ಏನೂ ಬೇಡ! ಅಹಂಕಾರ, ಅಭಿಮಾನ, ದೇವತಾ, ಬ್ರಾಹ್ಮಣ್ಯ—ಇದ್ದದ್ದೆಲ್ಲಾ ಹೋಗಲಿ! ನೀನು ಬಾ!

**ಅಪರ್ಣಾ ಬರುವಳು.**

ಅಪ:— ನನ್ನ ಹುಚ್ಚುಹಿಡಿಸಿದ ಜಯಸಿಂಹನೆಲ್ಲಿ? ಜಯಸಿಂಹಾ ಜಯಸಿಂಹಾ! ಎಲ್ಲಿ? ಆ ಜಯಸಿಂಹನೆಲ್ಲಿ ???

ರಘು:— ಬಾರೀ ತಾಯೀ, ಮಾತೃಮಯೀ, ನಿನ್ನ ಸುಧಾಕಂಠದಿಂದ ಕರೆ, ನಿನ್ನ ವ್ಯಗ್ರಸ್ವರದಿಂದ ಕರೆ, ನಿನ್ನ ಜೀವದ ಕಸವಿಸಿಯಿಂದ ಕರೆ! ಕರೆ ಈ ಜಯಸಿಂಹನನ್ನು! ತಾಯೀ ಕರೆತಂದು ನೀನೇ ಅವನನ್ನು ತೆಗೆದುಕೊಂಡು ಹೋಗು! ನನಗೇನೂ ಬೇಡ!

( ಅಪರ್ಣೆ ಮೂರ್ಛೆ ಹೋಗುವಳು. )

ರಘು:— ( ಪ್ರತಿಮೆಯ ಪಾದಕ್ಕೆ ತಲೆಗೊಟ್ಟು ) ತಿರುಗಿಕೊಡು!! ತಿರುಗಿಕೊಡು !! ತಿರುಗಿಕೊಡು ತಿರುಗಿಕೊಡು!!

---

## ದ್ವಿತೀಯ ದೃಶ್ಯ.

---

## ಅರಮನೆ.

### ಗೋವಿಂದ, ನಯನರಾಯ.

ಗೋ:— ಈಗಲೂ ಆನಂದಧ್ವನಿಯೇ? ! ನಿರ್ಲಜ್ಜಪ್ರಾಸಾದವು ಈಗಲೂ ದೀಪಾವಳಿಯಿಂದಲಂಕೃತವಾಗಿದೆಯೇ? ! ವಿಜಯತೋರಣಪುಲಕಿತನಗರದಾ ನಂದದ ಉತ್ಕ್ಷಿಪ್ತ ಬಾಹುಯುಗಲದಂತೆ ಇದೀಗ ರಾಜಧಾನಿಯು ಹೊರಬಾಗಿಲಿಗೆ ಹೊರಟದೆ! ಇನ್ನೂ ಪ್ರಾಸಾದವನ್ನು ಬಿಟ್ಟು ಹೊರಬಿದ್ದಿಲ್ಲ—ಸಿಂಹಾಸನವನ್ನು ಬಿಟ್ಟಿಲ್ಲ!! ಇಷ್ಟು ದಿನ ರಾಜನಿದ್ದೆ—ಯಾರಿಗೂ ಉಪಕಾರ ಮಾಡಲಿಲ್ಲವೆ? ಯಾವ ಅವಿಚಾರವನ್ನೂ

ದೂರೀಕರಿಸಲಿಲ್ಲವೆ? ಯಾವ ಅತ್ಯಾಚಾರವನ್ನೂ ಶಾಸನಮಾಡಲಿಲ್ಲವೆ! ಧಿಗ್ಧಿಗ ನಿರ್ವಾಸಿತ ( ಸ್ವದೇಶಭ್ರಷ್ಟ ) ರಾಜನೇ! ನಿನ್ನ ನೀ ವಿಚಾರಿಸಿ ನಿನ್ನ ಶೋಕದಿಂದ ನೀನು ಕಣ್ಣೀರಿಡುವಿ!!– ಮತ್ರ್ಯರಾಜ್ಯವು ಮೃತವಾಯಿತು, ನನ್ನ ರಾಜ ನಾನೀಗ! ಅಂತು ಸಿಂಹಾಸನದಲ್ಲಿ ಮಹೋತ್ಸವವಾಗಲಿಂದು!

## ಗುಣವತಿಯು ಬರುವಳು.

ಗುಣ:— ಪ್ರಿಯತಮ, ಪ್ರಾಣೇಶ್ವರ, ಇನ್ನೇನಿದೆ ನಾಥ! ಈಗಳಂತೂ ದೇವಿಯ ನಿಷೇಧವನ್ನು ಮನಗಂಡಿರಿ! ಪ್ರಭೊ! ಬನ್ನಿರಿ– ಇಂದಿನ ರಾತ್ರಿ ಕೊನೆಯ ಪೂಜೆಯನ್ನು ತೀರಿಸಿ ಸೀತಾರಾಮರಂತೆ ದೇಶತ್ಯಾಗ ಮಾಡುವಾ !

ಗೋ:— ಎಲೌ ಪ್ರಿಯೇ ! ನನಗಿಂದು ಹಿಗ್ಗು ಹಿಡಿಸದ ಹಬ್ಬ ! ರಾಜ್ಯ ಹೋದರೂ ಸರಿ. ತಿರುಗಿ ನಿನ್ನನ್ನು ಕೂಡಿದೆನು! ಬಾರೆನ್ನ ನಲ್ಲೇ! ಜೋಡಿಯಾಗಿ ದೇವಿಯ ಗುಡಿಗೆ ಹೋಗುವಾ! ಬರಿ ಅಕ್ಕರತೆಯಿಂದ, ಹೂವಿನ ಗೊನೆಯಿಂದ, ಬಿಕ್ಕ ಹಿಗ್ಗಿನ ಕಂಬನಿಯಿಂದ, ಕೊನೆಯ ಭೆಟ್ಟಿಯ ಕಕ್ಕುಲತೆಯಿಂದ ಇಂದು ತಾಯಿಯನ್ನು ಪೂಜಿಸುವಾ! ರಕ್ತಬೇಡ, ಹಿಂಸೆಬೇಡ!!

ಗುಣ:— ನಾಥ, ಒಂದಿಷ್ಟು ಭಿಕ್ಕೆ ಹಾಕಬಾರದೇ– ?!

ಗೋ:— ದೇವೀ, ಅದೇನು ಹೇಳು!

ಗುಣ:— ಕಗ್ಗಲ್ಲಾಗದಿರಿ! ಇನ್ನು ರಾಜಗರ್ವವನ್ನು ಬಿಟ್ಟು ಬಿಡಿರಿ! ಮಹಾ ದೇವಿಯ ಮುಂದೆ ನಿಮ್ಮ ಸೋಲನ್ನೊಪ್ಪಿಕೊಳ್ಳದಿದ್ದರೂ– ನನ್ನ ತಾಪವನ್ನು ನೋಡಿ ಯಾದರೂ ಎದೆ ಕರಗಲಿ! ಪ್ರಭೋ, ನಿವೆಂದೂ ನಿಷ್ಠುರರಲ್ಲ! ಯಾರು ನಿಮ್ಮನ್ನು ಕಲ್ಲು ಮಾಡಿದರೋ ಏನೋ! ಯಾರು ನನ್ನ ಸೌಭಾಗ್ಯದಿಂದ ಅಗಲಿಸಿದರೋ ಏನೋ! ಅಯ್ಯೋ! ನನ್ನನ್ನು ರಾಜನಿಲ್ಲದ ರಾಣೀ ಮಾಡಿದರು !!!

ಗೋ:— ಪ್ರಿಯೇ, ಇದೊಂದು ಸಲ ನನ್ನನ್ನು ನೆಚ್ಚು! ನನ್ನ ಕಡೆಗೆ ನೋಡಿ ಎಲ್ಲವನ್ನು ತಿಳಿಯದಂತೆ ತಿಳಿದುಕೊ! ಕಣ್ಣೀರು ನೋಡಿ ತಿಳಿದುಕೊ! ಕಕ್ಕುಲತೆಯಿಂದ ತಿಳಿದುಕೊ! ಹಿಂಸೆಯಿಂದ ಬೇಡ!! ದೇವೀ ಮೋರೆದಿರುವಬೇಡ! ಮತ್ತೆ ನನ್ನನ್ನು ತೊರೆಯಬೇಡ! ಆಸೆಹಚ್ಚಿ ನಿರಾಶೆಮಾಡಬೇಡ! ಹೋಗುವುದೇ ಆದರೆ ಸವಿಸುಖ ದಿಂದ ಹೋಗು!— ಹೋಗಿಬಿಟ್ಟಳು! ಸಂಸಾರವಿದೆಂಥ ಕಠಿನ ನಿಷ್ಠುರವಯ್ಯೋ! ಎಲರೋ ಯಾರಿದ್ದೀರಿ?- ಯಾರೂ ಇಲ್ಲ! ಹೊರಟೆ!! ಸಿಂಹಾಸನವೇ ಬರುವೆನಿನ್ನು! ಹೇ ಪುಣ್ಯಪ್ರಾಸಾದವೇ, ನನ್ನ ಹಿರಿಯರ ತೊಡೆಯೇ, ನಿಮ್ಮ ನಿರ್ವಾಸಿತ ಪುತ್ರನು ನಮಿಸಿ ಹರಕೆ ಬೇಡುವನು! ಬರುವೆನಿನ್ನು !!

# ತೃತೀಯ ದೃಶ್ಯ.

## ಅಂತಃಪುರದ ಬದಿ.

### ಗುಣವತಿ.

ಗುಣ:—ಬಾರಿಸಿರಿ ಬಾರಿಸಿರಿ, ವಾದ್ಯಗಳನ್ನು ಬಾರಿಸಿರಿ—ಇಂದಿನ ರಾತ್ರಿ ಪೂಜೆಯಾಗುವದು ! ಇಂದೆನ್ನ ಪ್ರತಿಜ್ಞೆ ಪೂರೈಸುವದು ! ತನ್ನಿರಿ ಬಲಿಯನ್ನು—ತನ್ನಿರಿ ಆ ಜವಾಕುಸುಮಗಳನ್ನು ! ನೆಟ್ಟಗೆ ನಿಂತುಕೊಂಡಿರಿ? ಆಜ್ಞೆಯನ್ನು ಕೇಳಲಿಲ್ಲವೇ ? ನಾನು ಏನೂ ಅಲ್ಲವೇ ? ರಾಜ್ಯ ಹೋದಷ್ಟಕ್ಕೆ ಕೈಕೆಳಗಿನ ಆಳು ಹೋಳುಗಳನ್ನು ನಡಿಸಿಕೊಳ್ಳುವ ಅರಸಿತನವೂ ಹೋಯಿತೇ? ! ಇಕೋ, ಈ ರತ್ನಕಂಕಣ ! ತಕ್ಕೋ ಈ ವಜ್ರಕಂಠಿ ! ಹಿಡಿಯಿರೀ ಸಕಲಾಭರಣಗಳನ್ನು ! ತಡವಿಲ್ಲದೆ ದೇವೀ ಪೂಜೆಯ ಸಿದ್ಧತೆ ನಡಿಯಲಿ ! ಮಹಾಮಾಯೇ, ಈ ದಾಸಿಯನ್ನು ಕರುಣಿಸು !

---

# ಚತುರ್ಥ ದೃಶ್ಯ.

## ಮಂದಿರ.

### ರಘುಪತಿ.

ರಘು:—ನೋಡಬಾರದೇ ಈ ಕಲ್ಲು ಗುಂಪೆ ಹೇಗೆ ನಿಂತಿದೆ ! ಪರವೆಯಿಲ್ಲದ ಮೂಢರಂತೆ ಬಾಯಿಲ್ಲದೆ, ಕೈಯಿಲ್ಲದೆ, ಕಣ್ಣಿಲ್ಲದೆ, ಕಿವಿಯಿಲ್ಲದೆ, ಜಡ ಪಾಷಾಣಸ್ತೂಪವು ಹೇಗೆ ನಿಂತಿದೆ ನೋಡಬಾರದೇ!!! ನಿನ್ನ ಮುಂದೆ ಸಮಸ್ತವ್ಯಥಿತವಿಶ್ವವು ಅತ್ತತ್ತು ಸಾಯುತ್ತಿದೆ ! ನಿನ್ನ ಪಾಷಾಣ ಚರಣದಲ್ಲಿ ಕೋಮಲ ಹೃದಯಗಳು ಕಳವಳಿಸಿ ಕಳಚಿ ಬೀಳುತ್ತಿವೆ ! ಹಾ ಹಾ ಹಾ ಹಾ !!! ಯಾವ ದಾನವನದೀ ಕ್ರೂರಪರಿಹಾಸವು ಜಗದಲ್ಲಿ ಗಟ್ಟಿಗೊಂಡು ಕೂತಿದೆ??? ! ಜೀವಿಗಳು ತಾಯಿತಾಯಿಯೆಂದು ಕೂಗಿಕೊಂಡಷ್ಟೂ ಈ ನಿರ್ದಯ ವಿದ್ರೂಪವು ಗಹಗಹಿಸಿ ನಕ್ಕು ನಗೆಗೇಡು ಮಾಡುತ್ತದೆ ! ನನ್ನ ಜಯಸಿಂಹನನ್ನು ಉಗುಳಿ ಬಿಸುಟು ! ತಿರುಗಿ ಕೊಡು ! ರಾಕ್ಷಸೀ ಪಿಶಾಚೀ ! (ಜೋಲಿ ಹೊಡೆದು) ಕೇಳಿಸಿತೇ? ಕಿವಿಗಳಿವೆಯೋ? ಏನು ಮಾಡಿದಿಯೆಂಬುದು ಗೊತ್ತಿದೆಯೇ ? ಯಾರ ನೆತ್ತರು ಕುಡಿದಿ ಗೊತ್ತಿದೆಯೇ? ಯಾವ ಪುಣ್ಯಜೀವನದ್ದು—ಯಾವ ಸ್ನೇಹ—ದಯಾ—ಪ್ರೀತಿ—ಪೂರ್ಣ ಮಹಾಹೃದಯದ್ದು ??? ಗೊತ್ತಿದೆಯೆ ?

ನೀನೊಬ್ಬಳೇ ನಿನ್ನ ಮಂದಿರದ ಗದ್ದುಗೆಯ ಮೇಲೆ ಚಿರಕಾಲವಿರು ! ಸರಲಭಕ್ತಿಗೆ ಪ್ರತಿಯಾಗಿ ಗುಪ್ತ ಉಪಹಾಸವೇ ! ನಿನ್ನನ್ನು ಪ್ರತಿದಿನ ಪೂಜಿಸಿದೆ! ಕಾಲಮೇಲೆ ಬಿದ್ದುಕೊಂಡಾಡಿದೆ ! ದಯಾಮಯೀಮಾತೆಯೆಂದು ಕೂಗಿ ಕೂಗಿ ಸತ್ತೆ! ನಿನ್ನ ಹೂರಣವನ್ನೆಂದೂ ಹೊರಗೆ ಹಾಕಲಿಲ್ಲ ! ಇಷ್ಟು ಮಾಡಿದ್ದಕ್ಕೆ ಏನೂ ಬೇಡ !—ಬರಿ—ಆ ನನ್ನ ಜಯಸಿಂಹನನ್ನು ತಿರುಗಿ ಕೊಟ್ಟು ಬಿಡು !

ಯಾರ ಮುಂದೆ ಅಳುವೆ? ದೂರ ದೂರ ದೂರ—ದೂರಗೊಳಿಸು ಈ ಹೃದಯ ದಲನಿಯಾದ ಪಾಷಾಣಿಯನ್ನು ! ಜಗದ ಎದೆಯ ಮೇಲಿನ ಭಾರವೊಮ್ಮೆ ಹಗುರಾಗಿ ಹೋಗಲಿ !

( ದೂರಕ್ಕೆ ಗೋಮತೀ ಜಲದಲ್ಲಿ ಬಿಸಾಡುವನು. )

**ವಾದ್ಯ ದೀವಟಿಗೆಗಳೊಡನೆ ಗುಣವತಿ ಬರುವಳು.**

ಗುಣ:—ಜಯ ಜಯ ಮಹಾದೇವಿ !!! ದೇವಿಯೆಲ್ಲಿ???

ರಘು:—ದೇವಿಯಿಲ್ಲ !

ಗುಣ:—ಗುರುದೇವಾ ! ದೇವಿಯನ್ನು ತಿರುಗಿ ಕರೆದುಕೊಂಡು ಬನ್ನಿರಿ! ಅವಳ ರೋಷಶಾಂತಿಗೊಳಿಸುವೆ ! ತಾಯಿಯ ಪೂಜೆಗೆ ಬಂದಿರುವೆ ! ರಾಜ್ಯವನ್ನು ಪತಿಯನ್ನು, ಎಲ್ಲವನ್ನು ತೊರೆದು ಪ್ರತಿಜ್ಞೆಯೊಂದನ್ನು ಪಾಲಿಸಿರುವೆ ! ದಯಮಾಡಿರಿ! ದಯಮಾಡಿ ಇಂದಿನೊಂದು ರಾತ್ರಿಯ ಮಟ್ಟಿಗಾದರೂ ದೇವಿಯನ್ನು ತಿರುಗಿ ಬರಮಾಡಿರಿ ! ದೇವಿ ಎಲ್ಲಿರುವಳು ?

ರಘು:—ಎಲ್ಲೆಲ್ಲಿಯೂ ಅವಳಿಲ್ಲ ! ಮೇಲಿಲ್ಲ ಕೆಳಗಿಲ್ಲ ಎಲ್ಲಿಯೂ ಇಲ್ಲ ! ಎಂದೂ ಎಲ್ಲಿಯೂ ಅವಳಿರಲಿಲ್ಲ !!!

ಗುಣ:—ಗುರುದೇವಾ ! ದೇವಿಯು ಇಲ್ಲಿ ಇದ್ದಳಲ್ಲವೆ ?

ರಘು:—ಅದಕ್ಕೆ ದೇವಿಯೆನ್ನುವಿಯಾ ? ಜಗದಲ್ಲಿ ದೇವಿಯೆಂಬವಳು ಎಲ್ಲಿಯಾದರೂ ಇದ್ದಿದ್ದರೆ—ಆ ನಿನ್ನ ಪಿಶಾಚಿಗೆ ದೇವಿಯೆಂದು ಕರೆಯುವುದನ್ನು ಅವಳು ಎಂದೂ ಸಹಿಸುತ್ತಿದ್ದಿಲ್ಲ! ಅಕಾರಣವಾಗಿ ಹೃದಯವನ್ನು ವಿದಾರಿಸಿ ಮೂಢ ಪಾಷಾಣದ ಮುಂದೆ ಎಂದೂ ನೆತ್ತರ ಸುರಿಸಗೊಡುತ್ತಿದ್ದಿಲ್ಲ ! ಆ ಪಾಷಾಣಿಗೆ ದೇವಿಯೆನ್ನುತ್ತಾಳೆ ದೇವಿ !!! ಪುಣ್ಯರಕ್ತಪಾನದಿಂದ ಆ ಮಹಾರಾಕ್ಷಸಿಯು ಹೊಟ್ಟೆಯೊಡೆದು ಸತ್ತು ಹೋದಳು !!!

ಗುಣ:—ಗುರುದೇವಾ! ನನ್ನನ್ನು ಕಾಡಬೇಡಿರಿ ! ದಿಟವಾಗಿ ಇನ್ನೊಮ್ಮೆ ಹೇಳಿರಿ—ದೇವಿಯಿಲ್ಲವೇ ???

ರಘು:—ಇಲ್ಲ !

ಗುಣ:—ದೇವಿಯು ಇಲ್ಲವೆ ?

ರಘು:—ಇಲ್ಲ !!

ಗುಣ:—ದೇವಿ ಇಲ್ಲವೇ ಇಲ್ಲವೆ? ಹಾಗಾದರೆ ಯಾರಿದ್ದಾರೆ ?

ರಘು:—ಯಾರೂ ಇಲ್ಲ ! ಏನೂ ಇಲ್ಲ !!

ಗುಣ:—ತಕ್ಕೊಂಡು ಹೋಗಿರಿ ತಕ್ಕೊಂಡು ಹೋಗಿರಿ; ಈ ಪೂಜಾಸಾಹಿತ್ಯವನ್ನೆಲ್ಲ ತಕ್ಕೊಂಡು ಹೋಗಿರಿ ! ನಡೆಯಿರಿ ನಡೆಯಿರಿ ! ತಿರುಗಿ ಹೋಗಿರಿ !! ಬೇಗನೆ ಹೇಳಿರಿ ಮಹಾರಾಜರು ಯಾವ ಹಾದಿಯಿಂದ ಹೋದರು? !!!

( ಹೋಗುವಳು. )

## ಅಪರ್ಣಾ ಬರುವಳು.

ಅಪರ್ಣೆ:—ತಂದೇ !

ರಘು:—ತಾಯೀ, ಏ ತಾಯೀ, ನನ್ನವ್ವಾ ! "ತಂದೇ ! " ಎನ್ನುವಿ !! ಮೂದಲಿಸುವಿಯಾ ?! "ತಂದೇ!" ಆ-ಹಾಹಾ ! ಈ ಪುತ್ರಘಾತಕನನ್ನು ತಂದೆಯೆಂದು ಕರೆಯುತ್ತಿದ್ದವನು, ಕೊನೆಗೆ ನಿನ್ನ ಕಂಠದಲ್ಲಿ ಈ ಸುಧಾಪೂರ್ಣವಾದ ಶಬ್ದವನ್ನಿಟ್ಟು ಹೋದನೇ!! ಆಹಾ ! ಇನ್ನೊಮ್ಮೆ ಹಾಗೆ ಕರೆಯೇ ತಾಯೀ, ಕೇಳುವೆ !

ಅಪ:—ತಂದೇ ! ಈ ಮಂದಿರವನ್ನು ಬಿಟ್ಟು ಬನ್ನಿರಿ ! ಹೋಗುವಾ !

## ಅರ್ಘ್ಯಪುಷ್ಪಾದಿಸಮೇತನಾಗಿ ರಾಜನು ಬರುವನು.

ರಾಜ:—ದೇವಿಯೆಲ್ಲಿ ???

ರಘು:—ದೇವಿಯಿಲ್ಲ !

ರಾಜ:—ಈ ನೆತ್ತರೇನು ?

ರಘು:—ಈ ಪಾಪಮಂದಿರದಲ್ಲಿ ಕೊನೆಯ ಪುಣ್ಯರಕ್ತವಿದು ! ಜಯಸಿಂಹನು ತನ್ನ ನೆತ್ತರು ಸೂರಿಮಾಡಿ ಹಿಂಸಾರಕ್ತ ಶಿಖೆಯನ್ನು ನೊಂದಿಸಿ ಹೋದನು !

ರಾಜ:—ಧನ್ಯಧನ್ಯ ಜಯಸಿಂಹಾ ! ಈ ಪೂಜಾ ಪುಷ್ಪಾಂಜಲಿಯನ್ನು ನಿನಗೆ ಸಮರ್ಪಿಸುವೆನು !!!

ಗುಣ:— ಮಹಾರಾಜ !

ರಾಜ:—ಪ್ರಿಯತಮೇ !

ಗುಣ:—ಇಂದಿಗೆ ದೇವಿಗೀವಿಯೇನೂ ಇಲ್ಲ—ನೀವೇ ನನ್ನ ದೇವರು !

( ನಮಿಸುವಳು. )

ರಾಜ:—ಪಾಪವಿಂದು ಪಲಾಯನ ಮಾಡಿತು ! ದೇವಿಯಿಂದು ತಿರುಗಿ ಬಂದು ಸೇರಿದಳೀ ನನ್ನ ದೇವಿಯಲ್ಲಿ !!!

ಅಪರ್ಣೆ:— ತಂದೇ! ನಡೆಯಿರಿ ಹೋಗುವಾ !

ರಘು:—ಪಾಷಾಣವಿಂದು ಪುಡಿಯಾಗಿ ಹೋಯಿತು ! ಜನನಿಯಿಂದು ಮೂರ್ತಿಮಂತಳಾಗಿ— ಪ್ರತ್ಯಕ್ಷಪ್ರತಿಮೆಯಾಗಿ ಕಾಣಿಸಿಕೊಂಡಳು !! ಜನನೀ ಜನನೀ ಅಮೃತಮಯೀ !!!

ಅಪ:—ತಂದೆ ಬನ್ನೀರಿ ಬನ್ನಿರಿ !!

—ಸಂಪೂರ್ಣ—

# ಮರ್ಕಟ ವಿಚಾರ.

( ಬರೆದವ:— ಮರಪಂಡಿತ ).

ಮಂಗ ಹೇಗೆ ಕುಣಿಯುತ್ತದೆ? ಒಂದು ಮರವೇರುತ್ತಲೆ ಇನ್ನೊಂದಕ್ಕೆ ಹಾರುವದು. ಅಲ್ಲಿಂದ ಇನ್ನೊಂದಕ್ಕೆ ಅಲ್ಲಿಂದ ಮತ್ತೊಂದಕ್ಕೆ. ಎಲ್ಲಿಂದ ಹೊರಟು, ಯಾವ ಹಾದಿಯಿಂದ, ಎಲ್ಲಿಗೆ ಬಂದೆನೆಂಬ ನೆನಪೇ ಅದಕ್ಕಿಲ್ಲ. ಎಲ್ಲಿಂದಲೋ ಹೊರಟ ಎಲ್ಲಿಗೋ ಬಂದು ಅಲ್ಲಾಕುಲ್ಲಿಯಾಗುವುದು ಮಂಗನ ಸ್ವಭಾವ. ಇದಕ್ಕೇ ಅರುವಾಳಿತನವೆನ್ನುವುದು. ಈಗಿನ ಕಾಲದಲ್ಲಿ ಇಂಥ ಅರುವಾಳಿತನದ ಪ್ರಾಬಲ್ಯವೇ ಕಣ್ಣಿಗೆ ಬೀಳುತ್ತದೆ.

ಪ್ರವಾಹದ ದಡದಮೇಲೆ ನಿಂತು ಆಚೆಯ ದಡದಲ್ಲಿ ಗುರಿಯಿಟ್ಟು, ಇಲ್ಲಿಂದ ಅಲ್ಲಿಯ ವರೆಗೆ ಸಾವಧಾನದಿಂದ ಕಟ್ಟುತ್ತ ಸಾಗುವುದು ಸೇತುಬಂಧವಿಚಾರ. ಇದರ ಉಲಿವೇ ಬಹು ಪ್ರದೇಶದಲಿಲ್ಲ. ಗುರಿಯಿಲ್ಲದೆ ಸಿಕ್ಕಂತೆ ಕುಣಿಯುವ ವಿಚಾರವೇ ಕಾಡು ಬೇಗೆಯಂತೆ ಬೆಳೆದು ಬರುತ್ತಿದೆ.

ಹಿಂಡುಗಟ್ಟಿಕೊಂಡು ಮಾತನಾಡುತ್ತ ಕುಳಿತಿರುವವರ ಹತ್ತಿರ ಹೋಗಿ ನೋಡಿರಿ. "ಸಂಸಾರ ಸಾಕಾಯ್ತಪ್ಪಾ!" ಎಂದು ಸುರುವಾದ ಮಾತು. "ಶ್ರೀಕೃಷ್ಣನ ಹಾದರ"ದ ವರೆಗೆ ಬಂದು ನಿಲ್ಲುತ್ತದೆ. ಎಲ್ಲಿ ಇವರ ಸಂಸಾರತಾಪ, ಎಲ್ಲಿ ಆ ಪೂರ್ಣಾವತಾರ ಶ್ರೀಕೃಷ್ಣನ ಹಾದರ! ಗೊತ್ತಿಲ್ಲ, ಗುರಿಯಿಲ್ಲ; ಅಗತ್ಯವಿಲ್ಲ, ಉದ್ದೇಶ್ಯವಿಲ್ಲ. ವಾಹವ್ವಾ!

ಮತಿಯಿಂದಲೇ ಮಾನವ. ಅದರ ಬಳಿಕೆಯೇ ಇಲ್ಲದಿದ್ದರೆ ಮಾನವನಂಥದ್ದೊಂದು ಪಶುವೇಸರಿ. ಮಾನವನಂಥಾದ್ದು ಯಾವ ಪಶುವೆಂಬುದು ಗೊತ್ತಿಲ್ಲವೆ! ಮಂಗ! ಮರ್ಕಟ!!

ಇಂಥವರು ಖಾನೇಸುಮಾರಿಗೆ ಭಾರವೇ ವಿನಾ, ಮನುವಿನ ಮಕ್ಕಳೆಂದು ಹೇಳಿಕೊಳ್ಳುವ ವೀರಾಧಿವೀರರಲ್ಲ.

ಮತಿಯ ಮಾಲಿನ್ಯ ತೊಳೆಯದೆ ಮಾನವನ ಮೇಲ್ಮೆಯಿಲ್ಲ. ಆದ್ದರಿಂದಲೇ ಮರ್ಕಟವಿಚಾರವನ್ನು ಇಷ್ಟೊಂದು ಕುತೂಹಲದಿಂದ ಆದರದಿಂದ ಆತುರತೆಯಿಂದ ಪರಿಶೀಲಿಸಿ ನೋಡಬೇಕಾಗಿದೆ.

ಮರ್ಕಟವಿಚಾರದ ಮಾದರಿಯೊಂದನ್ನು ಹೇಳೋಣವೇ? "ಈಗ ಧ್ಯಾನ ಮಾಡುವದಕ್ಕೆ ಕುಳಿತೆನು. ಧ್ಯಾನದ ಹೊತ್ತಿನಲ್ಲಿ ಬೇರೆ ವಿಚಾರಗಳು ಸುಳಿಯಲೇ ಬಾರದು. ವಿಚಾರವೆಂಬುದು ಬಲುಮಂಗ. ಅಂತೇ ಸಪ್ಪಣ್ಣಪ್ಪನವರು ತಮ್ಮ ಕೃವಲ್ಯದಲ್ಲಿ "ಮನವೆಂಬ ಮರ್ಕಟವ ತಾಳಲಾರೆನು ದೇವ" ಎಂದಿರುವರು. ಸಪ್ಪಣ್ಣಪ್ಪನವರೇನು ಸಾಮಾನ್ಯರೇ? ಇಂಥ ಅಸಾಮಾನ್ಯರ ಆಳಿಕೆಯದೊಂದು ಕಾಲವೇ ಇತ್ತು. ಅದೇಕೆ ಇಂದೂ ಇರಲೇ ಬೇಕು. ಇಲ್ಲದೆ ಜಗವು ಹೇಗೆ ನಡದೀತು! "ಹಿಂದಿನದು ಇಂದೂ ಉಂಟು, ಇಂದಿನದು ಹಿಂದೂ ಇತ್ತು. ಮುಂದಿನದೂ ಇಂದುಂಟು, ಇಂದಿನದೂ ಮುಂದಿರುವದು" ಎಂದು ಬಾಯ್ಬಲ್ಲಿನಲ್ಲಿ ಹೇಳಿದ್ದು ತೀರ ನಿಜ. ಅಯ್ಯೋ! ಬಾಯ್ಬಲ್ಲು ಎಷ್ಟೆಷ್ಟು ಭಾಷೆಗಳಲ್ಲಿ ಆಗಿರುವದಪ್ಪಾ! ಭಾಷೆಗಳೇನು ಒಂದೇ ಎರಡೇ? ಜಗದಲ್ಲಿ ಮೂವತ್ತೆರಡು ನೂರಾ ಇಪ್ಪನ್ನಾಲ್ಕು ಭಾಷೆಗಳುಂಟಂತೆ ಅಬ್ಬಬ್ಬಾ! ಭಾಷಾಭಿಮಾ

ನಿಗಳಿಲ್ಲದಿದ್ದರೆ ಭಾಷೆಗಳು ಉಳಿಯಬಲ್ಲವೇ? ಆದರೆ ಭಾಷಾಭಿಮಾನದ ಜೊಳ್ಳುಮಾತು ಹೇಳಿ, ದೇಶಾಭಿಮಾನವಿಲ್ಲದಿದ್ದರೆ ಎಲ್ಲಾ ವ್ಯರ್ಥ. ದೇಶವಾಸಿಗಳೇ ಅಳಿದರೆ ಇವರ ಭಾಷೆಯನ್ನುಳಿಸುವರಾರು? ಮೂರ್ತಿಮಂತ ಅಭಿಮಾನದೇವತೆಯೆಂದರೆ ಯುರೋಪ ದೇಶವೇ ಸರಿ. ಎಲ್ಲಿ ಆ ಜರ್ಮನಿ, ಎಲ್ಲಿ ಈ ಕರ್ನಾಟಕ? ಕಿಟ್ಟೆಲ್ ಸಾಹೇಬರು ಅಲ್ಲಿಂದಿಲ್ಲಿಗೆ ಬಂದು ಕನ್ನಡ ಕಲಿತು, ಕನ್ನಡಿಗರಿಗೇ ಕನ್ನಡಕಲಿಸುವ ನಿಘಂಟು ಬರೆದು ಹೋದರು. ಆದರೂ ಅವರು ಪಾದ್ರಿಗಳು. ಪಾದ್ರಿಗಳಲ್ಲಿ ಎಲ್ಲಾ ಚೆಲೋದಿದೆ, ಆದರೆ ಒಂದು ಮಾತ್ರ ಕೆಟ್ಟದು. ಪರಧರ್ಮನಿಂದೆಯು ಅವರ ಜನ್ಮಸಿದ್ಧ ಹಕ್ಕಾಗಿ ಬಿಟ್ಟಿದೆ. ಹಕ್ಕು ಹಕ್ಕು ಎನ್ನುತ್ತ ತಿಲಕರೊಬ್ಬರು ಹೋಗಿಯೇ ಬಿಟ್ಟರಲ್ಲಪ್ಪಾ! ಕಲಿಕಾಲದಲ್ಲಿ ತ್ರಿಪಾದಪಾಪವಿದ್ದದ್ದರಿಂದ ಸತ್ಯವಂತರಿಗೆ ಉಜ್ವಳವಿಲ್ಲ. ಏನಪ್ಪಾ ಕಲಿಕಾಲಬಂದು ಈಗೀಗ ನಾಲ್ಕೈದು ಸಾವಿರವರುಷವಾಗಿದೆ. ಇನ್ನೂ "ಚಾರಲಾಖ ಬತ್ತೀಸ ಹಜಾರ" ಆಗಲಿಕ್ಕೇನು ಸ್ವಲ್ಪಕಾಲಬೇಕೆ? ಆದರೂ ಅರವಿಂದ ಮಹರ್ಷಿಗಳೂ ವಿವೇಕಾನಂದರೂ "ಸತ್ಯಯುಗವು ಸನಿಯಾಯಿತೆಂ"ದು ಸಾರಿರುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ! ಆಹಾ ಇವರೇನು ಕಡಿಮೆ ಬುದ್ಧಿವಂತರೇ ? ಅರವಿಂದರು ಹದಿನೆಂಟು ವಯಸ್ಸಿಗೆ ಐಸಿಯಸ್ಸಾದರಂತೆ. ಇಂದು ಎಮ್ಮೆಗಳೂ ಐಸಿಯೆಸ್ಸುಗಳೂ ಹೇರಳವಾಗಿರುವರಾಗಲಿ. ಪರದೇಶದಲ್ಲಿ ಮಡ್ಡಮ್ಮಗಳ ಬಲೆಗೆ ಬೀಳದೆ ತಿರುಗಿ ಬರುವವರೇ ಕಡಿಮೆ. ಯುರೋಪಿನಲ್ಲಿ ಮಡ್ಡಮ್ಮಗಳ ಹಾವಳಿಯು ನಮ್ಮಲ್ಲಿಯ ಮರುಗಿಯ ಪಿಡುಗಿನಂತೆ ಬೆಳೆದು ಬಿಟ್ಟಿದೆಯಂತೆ ! ಏನು ಈ ಸ್ತ್ರೀಸ್ವಾತಂತ್ರ್ಯದ ಗೊತ್ತೆಯೋ ಮಹಾರಾಯಾ! ಹೇಳಲಾಸಲ್ಲ! ಹೌದು ಇದಾದರೂ ಯಾಕೆ ಸರಿಯಲ್ಲ? ಹೆಂಗಸರು ಹಡೆದವರನ್ನು ಬಿಡಬೇಕು, ಒಡಹುಟ್ಟಿದವರನ್ನು ಬಿಡಬೇಕು, ಎಲ್ಲವನ್ನು ಎಲ್ಲರನ್ನು ಬಿಡಬೇಕು! ಇಷ್ಟೆಲ್ಲ ನೀರು ಬಿಟ್ಟು, ಎಲ್ಲಿಯೋ ಹುಟ್ಟಿ ಬೆಳೆದ ಬೋಳಪ್ಪನೊಬ್ಬನಿಗೆ ತಮ್ಮನ್ನು ಸರ್ವಸ್ವ ನೀಡಿಬಿಡಬೇಕಂತೆ! ಇಂಥಾ ಆತ್ಮಯಜ್ಞದ ಫಲವೋ ಹೇಳಲಾಸಲ್ಲ! ಅತ್ತೆಯಕಾಟ, ಗಂಡನ ಹಾರಾಟ ಚೀರಾಟ! ಬೀಡಿಸಿಗರೇಟುಗಳನ್ನು ಆಹುತಿಗೊಳ್ಳುವ ಇವನ ಮುಖವೇದಿಕೆಯ ಮುಂದೆ ಮಲಗಿದವಳಿಗೆ, ಗಟಾರದ ರೊಜ್ಜಿನ ವಾಸನೆಯೇ ಸಕಲಸುಗಂಧ! ಇಂಥಾ ಸುಫಲಗಳನ್ನು ಭೋಗಿಸಬೇಕು! ನರಕಯಾತನೆಯೆಂದರೆ ಇನ್ನಾವುದು? ಯಾವ ಪಾಪಮಾಡಿ ಹೆಣ್ಣು ಹುಟ್ಟಿತೋ ನಾಕಾಣೆ! ಅಲ್ಲವಪ್ಪಾ ಗ್ರಂಥಕರ್ತರ ನಿಷ್ಪಕ್ಷಪಾತವನ್ನಾದರೂ ಎಷ್ಟೆಂದು ಕೊಂಡಾಡಲಿ? ಸ್ತ್ರೀಯರಿಗೆ ಪಾತಿವ್ರತ್ಯವೇ ಭೂಷಣವಂತೆ; ಇದೇನೋ ಒಳ್ಳೆಯದೇ ಆದರೂ ಪುರುಷರಿಗೆ ಸತಿವ್ರತವನ್ನು ಬೋಧಿಸಿ ಇದಕ್ಕೆ ತಪ್ಪಿದರೆ ಗಂಡುಸೂಳೆಗಳೆಂದು ಕುಲದ ಹೊರತಾಗಿಡಬೇಕೆಂದು ಯಾವ ಪುಣ್ಯಾತ್ಮನು ಬರೆದಿದ್ದಾನೆ? ಅಯ್ಯೋ! ಇದೇನಪ್ಪಾ! ಧ್ಯಾನಕ್ಕಾಗಿ ಕುಳಿತವನು ಎಲ್ಲೆಲ್ಲಿಗೆ ಬಂದೆನಪ್ಪಾ! ಹೋಗಲಿ, ಆದದ್ದಕ್ಕೆ ಚಿಂತಿಸಿ ಫಲವಿಲ್ಲ. ಹೊತ್ತು ಬಹಳವಾದ ಹಾಗಿದೆ. ಊಟಕ್ಕೆ ಹೋಗುವಾ! "

ಇಂತಿದು ಮರ್ಕಟವಿಚಾರದ ಬಳ್ಳಿಗೆ ಬಿಟ್ಟ ಫಲ! ಇನ್ನುಳಿದ ವಿಚಾರಗಳನ್ನೂ ನಮ್ಮ ಮರ್ಕಟವಿಚಾರಕ್ಕೆ ತಕ್ಕಂತೆ ಕೊಂಡಾಡುವಾ!

## ಒಂದು ನಿಟ್ಟುಸಿರು!

( ನವಿಲುಗುಂದದ ಗೆಳೆಯ )

ಅರಗಿಳಿಯೆ ! ಮರಳಿ ಬಾರದ ಹಾಗೆ ಮರೆಯಾಗಿ ।
ಪರದೇಶಿಯನ್ನಾಗಿ ನನ್ನನ್ನು ಮಾಡಿದೆಯೆ ! ।
ತಿರುತಿರುಗಿ ತೋಟದಲಿ ನಾ ಕಾಣದಾದೆ ನಿನ್ನಯ ಚೆನ್ನಚೆಲ್ವಿಕೆಯನು ॥ ೧ ॥

ಹೊತ್ತು ಹೊತ್ತಿಗೆ ನನ್ನ ಹತ್ತಿರದಿ ಹಾರಾಡಿ ।
ಮುತ್ತಿನಂತಹ ಮಾತನಾಡಿ ನಗಿಸುತಲಿದ್ದೆ ! ।
ಮತ್ತೆನ್ನ ಮನವನ್ನು ಹೂವಿಗಿಂತಲು ಹಗುರು ಮಾಡಿ । ಮೋದಿಸುತಲಿದ್ದೆ! ॥ ೨ ॥

ತೋಟ ತೋಟಗಳಲ್ಲಿ ತಿರುಗಿ ತನಿವಣ್ಣಿರಲು ।
ತೋಟದಿಂದಲಿ ತಂದು ನಸುಗಡಿದು ನನಗೆ ರಸ- ।
ದೂಟ ಮಾಡಿಸುತಿದ್ದೆ! ರಸವು ಸವಿಯೆನೆ ಕೇಳಿ ಉಲಿಯುತ್ತ ನಲಿಯುತಿದ್ದೆ! ॥ ೩ ॥

ಮುದ್ದು-ಮುದ್ದಾದ ಮಾತುಗಳನ್ನು ಮಾತಾಡಿ ।
ಸದ್ದಿಲ್ಲದಲೆ ನಿನ್ನ ಬಳಿಯಲ್ಲಿ ಬರಮಾಡು- ।
ತಿದ್ದೆ, ಗುರುತಿರದವರ ಗುಂಪಗೂಡಿಸಲರಿಯುತಿದ್ದೆ ನೀ ಗೆಳೆಯರನ್ನು! ॥ ೪ ॥

ನಿನ್ನ ನುಡಿ, ನಗೆಗಡಲು ಪೊಸತರದ ರಸದೊಡಲು! ।
ನಿನ್ನ ನಡೆ, ಗೆಳೆತನದ ತಿರುಳ ತಿಳಿದಂತಹದು! ।
ಬನ್ನ ಬಡುತಿದೆ ಗುಂಪು ನಿನ್ನಿರವ ನೆನಹಿಸುತ ಕಣ್ಣೀರಸುರಿಸುತಿಹುದು ॥ ೫ ॥

---

## ಬರೀ ನಗಚಾಟಿಕೆ.

**ದುರಭಿಮಾನಿರಾಯರು**:— ಯಾರವ ಹೊರಗೆ?

**ಎಟ್ಟಿ ಮೊಚ್ಚೆಗಾರ**:— ದೇವ್ರೂ! ನಾ ನಿಮ್ಮ ಮಗ ಮಚಿಗೇರ!

**ರಾಯರು**: —(ಒಳಗೇ ನೋಂದುಕೊಂಡು) ಯಾತಕ ಬಂದ್ಯೋ? ಸೂಳೇಮಗನೆ!

**ಮೊಚ್ಚೆಗಾರ**: —ಮೊನ್ನೆ ನೀವು ನಾ ಮಾಡಿದ ಜೋಡಿಗೆ ಬಾಯಿ ಹಾಕಿದ್ರಿ! ಇಂದ ಭೀಮರಾಯರು ಬಾಯಿ ಹಾಕ್ಯಾರು! ಅದಕ ಇದನ ನಿಮ್ಮ ಕಿವಿ ನ್ಯಾಗ ಇಟ್ಟು ಅವರಿಗೆ ಕೊಡಬೇಕಂತೇನ್ರಿ! ( ಏಟೋ? ಜೋಡೋ? )

ಆಗ ರಾಯರ ಮೋರೆಯು ಮೊಚ್ಚೆಯಂತಾಯಿತು !

—ಕೃಷ್ಣ

# ವೇಣುಗೋಪಾಲ

## ( ಚಿಕ್ಕ ಕತೆಯೊಂದಿದು )

ಬರೆದವನು "ವಿಜಯ"

೧.

ಚಂದ್ರಮುಖಿಯೊಬ್ಬಳು ಕೈಯಲ್ಲೊಂದು ಪುಷ್ಪಹಾರವನ್ನು ಹಿಡಿದುಕೊಂಡು ಪೂರ್ವಾಭಿಮುಖನಾಗಿ ನಿಂತಿರುವಂತಿದೆ. ಅವಳುಟ್ಟಿರುವುದೊಂದು ಅರಿಷಣ ಬಣ್ಣದ ಸೀರೆ; ಅದರೊಳಗಿನಿಂದ ಎದ್ದು ಕಾಣುತ್ತಿರುವ ನೀಲಿವರ್ಣಮಯ ರವಕೆ; ಬಳುಕುತ್ತಿರುವ ನಡುವಿನಲ್ಲೊಂದು ವಡ್ಯಾಣ; ಕಿವಿಯಲ್ಲೊಂದು ಥಳಥಳಿಸುವ ವಜ್ರದ ಓಲೆ; ಕುಂಕುಮದ ಬೊಟ್ಟು ಹುಬ್ಬಿನ ನಡುವೆ ಎತ್ತಿ ಅಂದವಾಗಿ ಹಚ್ಚಿದೆ.—ಅದೇ ಉದಯಿಸಿದ ಬಾಲಸೂರ್ಯನು ತನ್ನ ಹೊಂಬಣ್ಣದ ಕಿರಣಗಳನ್ನು ಪರ್ವತಾಗ್ರದ ಮೇಲಿನಿಂದ, ಗಿಡ ಮರಗಳ-ಹಚ್ಚನೆಯ ಹುಲ್ಲಿನ-ದೂರದಲ್ಲೊಂದು ಕಾಣುತ್ತಿರುವ ಗ್ರಾಮದ-ಪಕ್ಕದಲ್ಲಿ ಹರಿಯುತ್ತಿರುವ ನದಿಯ—ಮೇಲೆ ಎರಚಿರುವಂತಿದೆ. ನವಿಲೊಂದು ಯುವತಿಯ ಮುಂದೆ ನಿಂತು, ದಿನನಾಥನ ಕಿರಣಗಳ ಸೊಬಗಿಗೆ ಆನಂದಿಸಿ ನಾಟ್ಯವಾಡುತ್ತಿರುವಂತಿದೆ. ಪ್ರಭಾಕರನ ಪ್ರತಿಭೆಯನ್ನು ನೋಡುತ್ತಾ ತಲೆಯನ್ನು ಮೇಲಕ್ಕೆತ್ತಿ ಹಣ್ಣನ್ನು ತಿನ್ನಲು ಮರೆತು ಕುಳಿತಿರುವ ಗಿಳಿಮರಿಯೊಂದು, ಮರದ ರೆಂಬೆಯ ತುದಿಯಲ್ಲಿ ಕಂಡು ಬರುತ್ತಿದೆ. ನದಿಯು ತಿಳಿನೀರು ಅದೇ ಚಲಿಸುತ್ತಿರುವಂತಿದೆ.—ಪಠವು ಮುದ್ದಾಗಿದೆ. ಮುದ್ದಾಗಿ ಚಿತ್ರಿಸಿದುದರಿಂದಲೇ ರಾಘವೇಂದ್ರನಿಗೆ ಆನಂದ, ಆನಂದದ ಭರದಲ್ಲಿ ಮೇಲಕ್ಕೆದ್ದನು; ಎದ್ದು ಕುಣಿಯ ತೊಡಗಿದನು. ಹತ್ತಿರ ತಾನು ಇಟ್ಟಿದ್ದ ಕೆಂಪು ಬಣ್ಣದ ಬಟ್ಟಲು ಉರುಳಿಕೊಂಡು, ಅದರ ಮೇಲೆ ಪಠವು ಮೊಗಚಿಕೊಂಡು ಬಿದ್ದುಬಿಟ್ಟಿತು.

ರಾಘವೇಂದ್ರನು ಪಠವನ್ನು ಮೇಲಕ್ಕೆತ್ತಿ ನೋಡಿದನು. ಪಠವಾದ್ಯಂತವೂ ಕೆಂಪು ವರ್ಣವಾಗಿದ್ದಿತು. ಆದರೇನು! ಪ್ರಾತಃಕಾಲದ ಸೊಂಪು, ಸಾಯಂಕಾಲದ ಇಂಪಾದಂತಾಯಿತು. ಅಷ್ಟೆ! ತನ್ನ ಪಠವು ಹೀಗೆ ಕೆಟ್ಟುಹೋದುದನ್ನು ಕಂಡು ಆತನ ಕಣ್ಣುಗಳಲ್ಲಿ ಎರಡು ಹನಿ ನೀರು ತಟ್ಟನೆ ಇಳಿದು ಗಲ್ಲದ ಮೇಲೆ ಹರಿದು ನಿಂತಿತು. ಮುಖವು ಸಪ್ಪಗಾಯಿತು.

ಅಷ್ಟು ಹೊತ್ತಿಗೆ ಶ್ರೀನಿವಾಸರಾಯರು ಒಳಗೆ ಬಂದರು. ಶ್ರೀನಿವಾಸರಾಯರು ರಾಘವೇಂದ್ರನ ತಂದೆ. ಇವನನ್ನು ನೋಡಿ "ಅಳು ಸೋಮಾರಿ ಅಳು, ಸ್ಕೂಲಿಗೆ ಹೋಗದೆ ಇಲ್ಲೇನು ದಂಟು ಕಡೆಯುತಿದ್ದೀಯೇನೋ?" ಎಂದಂದು ಕೆಳಗೆ ಬಗ್ಗಿ ನೋಡಿದರು.

ನೆಲವೆಲ್ಲಾ ರಕ್ತವರ್ಣವಾಗಿತ್ತು. ಶ್ರೀನಿವಾಸರಾಯರು ಮತ್ತಿಷ್ಟು ರೇಗಿ ರಾಘವೇಂದ್ರನ ಬೆನ್ನಿನ ಮೇಲೆ ಬಲವಾಗಿ ಗುದ್ದಿ, "ಮನೆಯನ್ನೆಲ್ಲಾ ಹಾಳು ಮಾಡು, ಓದಬೇಡ, ಬರೆಯಬೇಡ" ಎಂದು ಬೈದರು.

ಬಾಗಿಲ ಬಳಿ ಯಾರೋ ನಕ್ಕರು. ರಾಘವೇಂದ್ರನು ತಲೆಯೆತ್ತಿ ನೋಡಿದನು. ರಂಗನಾಥ, ಅವನ ತಮ್ಮ, ಬಾಗಿಲ ಬಳಿ ನಿಂತು ನಗುತಲಿದ್ದನು. ದುಃಖದ ಮೇಲೆ ಅವಮಾನ ಬೇರೆ. ತಾನು ಬದುಕಿದ್ದು ವ್ಯರ್ಥವೆಂದಂದುಕೊಂಡು ಕಣ್ಣೀರಿಟ್ಟನು.

"ತಮ್ಮನನ್ನು ನೋಡಿ ನಾಚಿಕೊಳ್ಳಬಾರದೇನೊ, ನಿನಗೆ ವಯಸ್ಸು ಬಂದಿದ್ದೂ ಒಂದೆ, ಕತ್ತೆಗೆ ಬಂದಿದ್ದೂ ಒಂದೆ, ನಿನ್ನ ಬಾಳು ವ್ಯರ್ಥ" ಎಂದು ರೇಗಿದರು.

"ಹಾಗೆಯೇ ಆಗಿದೆ ನನ್ನ ಬಾಳು" ಎಂದಂದುಕೊಂಡು ಅವನು "ಅಪ್ಪಾ, ನಾ..." ಎಂದು ಬಾಯಿತೆರೆದು ಮಾತನಾಡಲು ಪ್ರಯತ್ನಿಸಿದನು. ಶ್ರೀನಿವಾಸರಾಯರು ಮುಖವನ್ನು ತಿರುಗಿಸಿಕೊಂಡು ಅವನ ಮಾತಿಗೆ ಕಿವಿಗೊಡದೆ ತಟ್ಟನೆ ಅಲ್ಲಿಂದ ಹೊರಟುಹೋದರು.

ನೀರು ತುಂಬಿದ ಕಣ್ಣುಗಳನ್ನು ಒರಸಿಕೊಳ್ಳುತ್ತಾ ಅಲ್ಲಿಯೇ ನೆಲದ ಮೇಲೆ ರಾಘವೇಂದ್ರನು ತಲೆ ತಗ್ಗಿಸಿಕೊಂಡು, ಕುಳಿತುಬಿಟ್ಟನು. ಕಣ್ಣೀರು ಕಾಲುವೆಯಾಗಿ ಹರಿದು ಹೋಗುತಲಿದ್ದಿತು.

ಸ್ವಲ್ಪ ಹೊತ್ತಿನ ಮೇಲೆ ರಂಗನಾಥನು ಊಟ ಮಾಡಿಕೊಂಡು ಬಂದು ಸ್ಕೂಲಿಗೆ ಹೊತ್ತಾಗಿದ್ದುದರಿಂದ ಪುಸ್ತಕಗಳನ್ನುಕೋಳಿ ಕೆದರಿದಂತೆ ಕೆದರಿ ಹಾಕಿ, ಒಂದೆರಡು ಪುಸ್ತಕಗಳನ್ನು ತೆಗೆದುಕೊಂಡು, ಆತುರದಿಂದೋಡಿ ಹೋದನು. ಸ್ವಲ್ಪ ಹೊತ್ತಿನ ಮೇಲೆ ಶ್ರೀನಿವಾಸರಾಯರೂ ಆಫೀಸಿಗೆ ಹೊರಟುಹೋದರು. ಅಂದು ರಾಘವೇಂದ್ರನಿಗೆ ಎರಡು ಗಂಟೆಯ ಮೇಲೆ ಊಟ.

೨.

ರಾಘವೇಂದ್ರನ ತಂದೆ ಶ್ರೀನಿವಾಸರಾಯರು, ಶಿವಮೊಗ್ಗೆಯ ತಾಲೂಕ್ ಆಫೀಸಿನಲ್ಲಿ ಹೆಡ್ಮುನಿಷಿಯಾಗಿದ್ದರು. ಹಿರಿಯರಿಂದ ಬಂದ ಆಸ್ತಿಪಾಸ್ತಿಗಳೇನೂ ಅವರಿಗಿದ್ದಿಲ್ಲ. ಸಂಬಳವು ತಿಂಗಳೊಂದಕ್ಕೆ ಮೂವತ್ತೈದು ರೂಪಾಯಿಗಳು ಮಾತ್ರ. ಅದಕ್ಕೆ ಹೆಚ್ಚಿನ ಪ್ರಾಪ್ತಿಗಾಗಿ ಅವರು ಆಶೆ ಪಡುತ್ತಿರಲಿಲ್ಲ. ಇದ್ದುದರಲ್ಲಿಯೇ ಸಂಸಾರವನ್ನು ಸುಖಮಯವಾಗಿ ಸಾಗಿಸಿಕೊಂಡು ಹೋಗುತ್ತಿದ್ದರು. ಮನೆಯಲ್ಲಿನ ಜನರೆಂದರೆ ಅವರು, ಹೆಂಡತಿ ತುಳಸಮ್ಮ, ಮೂವರು ಗಂಡು ಮಕ್ಕಳು, ರಂಗನಾಥನು ಕಿರಿಯವನು. ಹಿರಿಯವನು ರಾಮಚಂದ್ರ. ಈಗ ಅವನು ಬೊಂಬಾಯಿಯಲ್ಲಿ ಬೇರೆ ಸಂಸಾರ ಮಾಡಿಕೊಂಡಿದ್ದನು. ಮನೆಗೆ ಹೆಂಡತಿ ಬಂದ ಕೂಡಲೆ, ಹಡೆದ ತಾಯಿತಂದೆಗಳನ್ನು

ತ್ಯಜಿಸಿ ಬೇರೆ ಹೋಗುವುದು ಆಂಗ್ಲೇಯರ ನಡತೆ. ರಾಮಚಂದ್ರನು ಇಂಗ್ಲೀಷ್ ವಿದ್ಯಾಭ್ಯಾಸಿಯಾದುದರಿಂದ ಹೆಚ್ಚು ಕಡಿಮೆ ಅವರನ್ನು ಅನುಕರಿಸಿದ್ದನು. ಈ ನಡತೆಯು ಈಗಿನ ಕಾಲದ ಇಂಗ್ಲೀಷ್ ವಿದ್ಯಾಭ್ಯಾಸದ ಮಹಿಮೆಯುನ್ನುವುದು ಶ್ರೀನಿವಾಸರಾಯರ ತಲೆಗೆ ಹಿಡಿದಿರಲಿಲ್ಲ. ಮಧ್ಯದವನೆ ರಾಘವೇಂದ್ರ.

ಮಕ್ಕಳಿಗೆ ಯಾವುದರಲ್ಲಿ ಅಭಿರುಚಿ—ತಿಳುವಳಿಕೆ ಇದೆಯೋ ಅದನ್ನು ತಂದೆಯು ಅಭಿವೃದ್ಧಿಪಡಿಸುವುದು. ಆತನ ಕರ್ತವ್ಯ ಮಕ್ಕಳನ್ನು ಪಡೆದುದಕ್ಕೆ ಸಾರ್ಥಕ. ತಮ್ಮ ಮಕ್ಕಳನ್ನು ನಾಳೆ ಸಮಾಜಕ್ಕೆ ಉತ್ತಮರೀತಿಯಿಂದಸೇರಿಸಿ, ಅದನ್ನು ಮುಂದಕ್ಕೆ ತರತಕ್ಕ ವ್ಯಕ್ತಿಯನ್ನಾಗ ಮಾಡಿಸುವುದೊಂದು ಕರ್ತವ್ಯವು ಅವರಿಗೇ ಸೇರಿದುದು. ಮತ್ತು ಅವರ ಜೀವನದ ಮಾರ್ಗವನ್ನು ಬೆಳೆಸುವುದು. ಈ ವಿಷಯಗಳಿಗೆ ಲಕ್ಷ್ಯಕೊಡದೆ ಇದ್ದರೆ ತಮ್ಮ ಮಕ್ಕಳೇ ಹಾಳಾಗುವರು. ಮುಂದೆ ಸಮಾಜದ ಗತಿ ದೇವರೇ ಬಲ್ಲ ! ಹೀಗಾಗಿರುವುದರಿಂದಲ್ಲವೆ ನಮ್ಮೀ ಭಾರತಭೂಮಿಗೆ ಇಂತಹ ದುರ್ದೆಶೆ ಪ್ರಾಪ್ತವಾಗಿರುವುದು!

ಶ್ರೀನಿವಾಸರಾಯರಿಗೆ ತಮ್ಮ ಮಕ್ಕಳಿಗೆ ಇಂಗ್ಲೀಷ್ ವಿದ್ಯಾಭ್ಯಾಸ ಮಾಡಿಸಬೇಕೆಂಬ ಹುಚ್ಚು ಎಲ್ಲರಂತೆ ಹತ್ತಿ, ನ್ಯಾಯವೋ ಅನ್ಯಾಯವೋ ಅಂತೂ ಅವರನ್ನು ಬಲವಂತಪಡಿಸುತಿದ್ದರು. ರಂಗನಾಥನಿಗೆ ಓದುಬರಹದಲ್ಲಿ ಎಷ್ಟು ಅಭಿಲಾಷೆಯೋ, ರಾಘವೇಂದ್ರನಿಗೆ ಚಿತ್ರಬರೆಯುವುದರಲ್ಲಿ ಅಷ್ಟು ಅಭಿರುಚಿ. ಈ ಚಿತ್ರಗಾರನ ಕೆಲಸವು ತಂದೆಗೆ ಸರಿ ಬೀಳದಿದ್ದುದರಿಂದಲೇ ಪಾಪ ! ಅವನು ತಂದೆಯಿಂದ ತಿರಸ್ಕರಿಸಲ್ಪಡುತಿದ್ದನು.

ತುಳಸಮ್ಮನವರಿಗೆ ರಾಘವೇಂದ್ರನ ಮೇಲೆ ಪ್ರೀತಿ ಇರಲಿಲ್ಲವೆಂದಲ್ಲ; ಆದರೆ ಹೆಚ್ಚಾಗಿ ರಂಗನಾಥನ ಮೇಲಿತ್ತು. ಏಕೆ ಗೊತ್ತಿಲ್ಲವೆ ? ಹಿಂದೆ ತ್ರೇತೆಯಲ್ಲಿ ಶುನಶ್ಶೇಫನೆಂಬುವ ಮಗನು ತಂದೆ ತಾಯಿಗಳಿಗೆ ನಡುವಿನ ಮಗನಾಗಿದ್ದನು. ಮುಂದೆ ಹೇಳಲೆ? ನಿಮಗೇನು ಅವನ ಕತೆ ಗೊತ್ತಿಲ್ಲದೆ ಇಲ್ಲ; ಇನ್ನೇತಕ್ಕೆ ಹಾಗಾದರೆ ? ಹೋಗಲಿ ಬಿಡಿ; ನಿಮ್ಮಲ್ಲಿ ಯಾರಿಗಾದರೂ ಗೊತ್ತಿಲ್ಲದಿದ್ದರೆ ನನಗೆ ಬರೆಯಿರಿ, ತಿಳಿಸುತ್ತೇನೆ.

ರಂಗನಾಥನು ಈಗ ಓದುತಿದ್ದುದು ಪ್ರವೇಶ ಪರೀಕ್ಷೆಯಲ್ಲಿ. ಆತನ ಖರ್ಚು ತಂದೆಯ ಸಂಬಳದಲ್ಲಿ ಅರ್ಧವನ್ನು ಪ್ರತ್ಯೇಕ ತೆಗೆದಿಡಬೇಕಾಗಿದ್ದಿತು. ರಾಘವೇಂದ್ರನು ಸ್ಕೂಲಿಗೆ ಹೋಗುತಿದ್ದುದೇನೋ ನಿಜ. ಈಗ ಮಾತ್ರ ಇಲ್ಲ. ಮೇಷ್ಟರು ಏನು ಪಾಠ ಹೇಳುತಿದ್ದರೋ ಅವನಿಗೆ ಗೊತ್ತಿಲ್ಲ. ಗಿಳಿಮರಿಯೊಂದನ್ನು ಸ್ಲೇಟಿನ ಮೇಲೆ ಬರೆದು ಪಕ್ಕದಲ್ಲಿ "ಗಿಳಿ" ಎಂದು ಬರೆದು ಸ್ನೇಹಿತರಿಗೆ ತೋರಿಸಿ ಸಂತೋಷ ಪಡುವುದರಲ್ಲೇ ಕಾಲ ಕಳೆಯುತಿದ್ದನು. ರಾಘವೇಂದ್ರನನ್ನು ಕಂಡರೆ ಜತೆಯವರಿಗೆ ಬಹಳ ಪ್ರೀತಿ,

ಅದು ಹೇಗೋ—ದೇವರ ದಯೆಯಿಂದಲೋ ತಾಯಿ ತಂದೆಗಳ ಪುಣ್ಯದಿಂದಲೋ ತಿಳಿ ಯದು—ಅಂತೂ ಇಂಗ್ಲೀಷ್ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಅವನು ಉತ್ತೀರ್ಣ ನಾದನು. ಆದದ್ದೇ ತಡ ಪುನಃ ಪಾಠಶಾಲೆ ಹೇಗಿದೆಯೋ ಅವನಿಗೆ ಗೊತ್ತಿಲ್ಲ.

ರಾಘವೇಂದ್ರನಿಗೆ ಕಾವ್ಯಗಳನ್ನೋದುವುದರಲ್ಲಿಯೂ ಬಹಳ ಅಭಿಲಾಷೆ. ಮನೆ ಯಲ್ಲಿದ್ದ ಕುಮಾರವ್ಯಾಸಕೃತ ಭಾರತವನ್ನು ಒಳ್ಳೇ ಗಂಭೀರತನದಿಂದ ಓದುತ್ತಿದ್ದನು. ಅದರಲ್ಲಿನ ಸವಿಯನ್ನು ಕಂಡವನಾಗಿದ್ದನು. ಕೆಲವು ಕವಿತೆಗಳನ್ನು ಸ್ವತಃ ಮಾಡಿ ದ್ದನು. ಅವನು ಕವಿತೆಗಳನ್ನು ಬರೆಯಲು ಕುಳಿತನೆಂದರೆ, ಮನೆಯನ್ನೆಲ್ಲಾ ಹರಕು ಕಾಗ ದಗಳಿಂದ ತುಂಬಿ ಬಿಡುತ್ತಿದ್ದನು. ಅದು ಅವನ ಕವಿತೆಯ ಗುಣವನ್ನು ಹೊಗಳಲು ದಶ ದಿಕ್ಕುಗಳಿಗೂ ಹಾರಿಹೋಗಿತ್ತೆನ್ನಬಹುದು.

೩.

ಪ್ರವೇಶ ಪರೀಕ್ಷೆಗೆ ಇನ್ನೇನು ಒಂದು ವಾರ ಉಳಿಯಿತು. ರಂಗನಾಥನು ತನ್ನ ಕೊಠಡಿಯನ್ನು ಬಿಟ್ಟು ಬರುತ್ತಿರಲಿಲ್ಲ. ರಾತ್ರಿ ಹಗಲೂ ಪುಸ್ತಕದ ಮುಂದೆ ಕುಳಿತು ಓದುತ್ತಿರುವುದೇ ಅವನ ದಿನಚರ್ಯೆಯಾಗಿದ್ದಿತು.

ನಾಳೆಯೆ ರಂಗನಾಥನಿಗೆ ಪರೀಕ್ಷೆ. ಎಂದಿಗಿಂತಲೂ ಈ ದಿನ ನಿದ್ರೆ ಇಲ್ಲದೆ ಕಣ್ಣಲ್ಲಿ ಕಣ್ಣಿಟ್ಟುಕೊಂಡು ಓದುತ್ತಾ ಕುಳಿತಿದ್ದನು.

ರಾಘವೇಂದ್ರನು ಅದೇ ಪ್ರಾತಃಕಾಲದ ಸ್ನಾನವನ್ನು ಪರಮಪಾವನವಾದ ತುಂ ಗಾನದಿಯಲ್ಲಿ ತೀರಿಸಿಕೊಂಡು ಮನೆಗೆ ಬಂದನು.

ಅಂದು ಮನೆಯಲ್ಲಿ ಇವರಿಬ್ಬರ ಹೊರತು ಮತ್ತಾರೂ ಇರಲಿಲ್ಲ. ಶ್ರೀನಿವಾಸರಾ ಯರು ಅಂಗಡಿಗೆ ಹೋಗಿದ್ದರು. ತುಳಸಮ್ಮನವರು ಸಿಹಿನೀರಿಗೋಸ್ಕರ ನದಿಗೆ ಹೋಗಿದ್ದರು.

ತಮ್ಮನ ಓದಿಗೆ ರಾಘವೇಂದ್ರನಿಗೆ ನಗು ಬಂದು ಬಿಟ್ಟಿತು. "ಯಾತಕ್ಕೆ ಓದಿಗೆ ಅಳುತ್ತೀಯೋ; ಇಂಗ್ಲೇಂಡಂತೆ, ಇಂಗ್ಲೇಂಡು! ಇಂಡಿಯಾ ದೇಶದ ಚರಿತ್ರೆ ಗೊತ್ತಿಲ್ಲ. ಸುಮ್ಮಗೆ ಬಾಯಿಪಾಠ ಮಾಡಿದರೇನು ಪ್ರಯೋಜನ! ಮೊನ್ನೆ ಅಪ್ಪನನ್ನು 'ಮಹಾತ್ಮಾ ಗಾಂಧಿ, ಯಾರೆಂದಾಗಲೇ ತಿಳಿಯಿತು; ಅಪ್ಪನ ಓದು' ಎಂದು ನಗುತ್ತಾ ನುಡಿದನು.

"ನಿನಗೇನು!" ಎಂದು ಮುಖ ಗಂಟಿಕ್ಕಿಕೊಂಡು ರಂಗನಾಥನಂದನು.

"ನನಗೇನೂ ಇಲ್ಲ ಕಣೋ, ಆ ಹಾಳು ಇಂಗ್ಲೀಷ್ ತಲೆಗೇನೇ ಹತ್ತುವುದಿಲ್ಲ. ಗುಲಾಮಗಿರಿಗೆ ತಯಾರು ಮಾಡುತ್ತೆ ಆ ಓದು. ಅಂಥಾ ಓದಿನಿಂದ ಪ್ರಯೋಜನ

ವೇನು? ಇಲ್ಲಿ ನೋಡು ನಮ್ಮ ಭಾಷೆಯ– ನಮ್ಮ ತಾಯುಮಾತಿನ-ಕನ್ನಡದ ಸವಿಯನ್ನು" ಎಂದು ರಾಘವೇಂದ್ರನು ಗಟ್ಟಿಯಾಗಿ—

ಮೊರೆಯಲೊಲ್ಲವು ತುಂಬಿ ಕುಣಿಯಲೊಲ್ಲವು ನವಿಲ್ ।
ಬೆರೆಯಲೊಲ್ಲವು ಕೋಕಿ ನಡೆಯಲೊಲ್ಲವು ಹಂಸೆ ।
ಕರೆಯಲೊಲ್ಲವು ಪಿಕಂ ನುಡಿಯಲೊಲ್ಲವು ಶುಕಂ ನಲಿಯಲೊಲ್ಲವು ಚಕೋರಿ ।
ನೆರೆಯಲೊಲ್ಲವು ಹರಿಣಿಯೊಲೆಯಲೊಲ್ಲವು ಕರಿಣಿ ।
ಪೊರೆಯಲೊಲ್ಲವು ಚಮರಿ ಮೆರೆಯಲೊಲ್ಲವು ಸಿಂಗ– ।
ಮರರೆ ಜಾನಕಿಯ ಶೋಕಂ ತಮ್ಮದೆಂದಾಕೆಯುಂಗಮಂ ನೋಡಿ ನೋಡಿ ॥

ಎಂದು ಹಾಡಿ "ಇದರ ಅರ್ಥ ನಿನಗೆ ಗೊತ್ತಾಯಿತೇನೋ" ಎಂದು ಕೇಳಿ ನಕ್ಕನು.

ರಂಗನಾಥನಿಗೆ 'ಬೆಕ್ಕಿಗೆ ಚೆನ್ನಾಟ, ಇಲಿಗೆ ಪ್ರಾಣಸಂಕಟ' ದಂತಾಯಿತು. ಅವನ ಓದು ಮುಂದೆ ಸಾಗದೆ "ಏನು ಬಡಬಡಿಸುತ್ತೀಯೋ, ಮೆಲ್ಲಗಾದರೂ ಹಾಡ ಬಾರದೇನೋ, ನನಗೆ ನಾಳೆ ಪರೀಕ್ಷೆ, ಓದಬೇಕು. ಅಪ್ಪ ಬಂದ ಮೇಲೆ ಹೇಳಿ ಬಿಡು ತ್ತೇನೆ ನೋಡು" ಎಂದು ಕೂಗಿಕೊಂಡನು.

"ಮೆಲ್ಲಗೆ ಹೇಳಲೆ ! ಹಾಗಾದರೆ ಈ ಕುಮಾರವ್ಯಾಸನ ಕಾವ್ಯದ ಸೊಬಗನ್ನು ನೋಡು. 'ಶರಧಿ ಚಂದ್ರನ ಧಿಕ್ಕರಿಪಾ......" ಎಂದು ರಾಗವೆತ್ತಿದನು.

ಅಷ್ಟರಲ್ಲಿ ಶ್ರೀನಿವಾಸರಾಯರು ಮನೆಗೆ ಬಂದರು. ರಂಗನಾಥನು ಚಾಡಿಯನ್ನು ಹೇಳಿಯೂ ಹೇಳಿದ.

"ದಾಸಯ್ಯ ಭಿಕ್ಷಕ್ಕಾದರೂ ಹೋಗೋ, ಎದೆ ಸೀಳಿದರೆ ಒಂದಕ್ಷರವಿಲ್ಲ. 'ಕೋತಿ ತಾನು ಕೆಡುವುದಲ್ಲದೆ ಇತರರನ್ನು ಕೆಡಿಸಿದಂತೆ' ಹಾಗೆ ನೀನು ಹಾಳಾಗುವುದ ಲ್ಲದೆ ಅವನನ್ನೂ ಹಾಳುಮಾಡುತ್ತೀಯಾ, ನಿನ್ನ ಬಾಳಿಗೆ ಅಳಬೇಕು" ಎಂದು ಬೈದು, ಯಾವುದೋ ಒಂದು ಪುಸ್ತಕವನ್ನು ಅವನ ಕೈಯಲ್ಲಿ ಕೊಟ್ಟು ಓದುತ್ತಿರುವಂತೆ ಹೇಳಿ ಸ್ನಾನಕ್ಕೆಂದು ಹೊರಟುಹೋದರು. ಅವರು ಮರೆಯಾಗುತ್ತಲೆ ರಂಗನಾಥನು ಅವ ನನ್ನು ಹಾಸ್ಯಮಾಡಿ ನಕ್ಕನು.

ರಾಘವೇಂದ್ರನು ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡು ಓದುವವನಂತೆ ಕುಳಿ ತುಕೊಂಡನು. ಕಣ್ಣಿನಲ್ಲಿ ಹನಿಹನಿಯಾಗಿ ಸುರಿಯುತಿದ್ದ ನೀರನ್ನು ತನ್ನ ಎಡಗೈ ಬೆರ ಳಿನಿಂದ ಮಿಡಿದನು. ಬಾಗಿಲ ಬಳಿ ನಿಂತಿದ್ದ ಇಂದಿರೆಯನ್ನು ನೋಡಲೇ ಇಲ್ಲ.

ಇಂದಿರೆಯು ಪಕ್ಕದ ಮನೆಯ ರಾಮರಾಯರ ಮಗಳು. ಬಹಳ ರೂಪವತಿ, ಇನ್ನೂ ಎಂಟೇ ವರ್ಷ, 'ರಾಘವೇಂದ್ರನನ್ನು ಇಂದಿರೆಯೂ, ಇಂದಿರೆಯು ರಾಘವೇಂದ್ರ ನನ್ನೂ ಒಂದು ಗಳಿಗೆಯೂ ಬಿಟ್ಟಗಲರು.

ಇಂದಿರೆಯು ಸ್ವಲ್ಪ ಹೊತ್ತು ನೋಡಿದಳು, ರಾಘವೇಂದ್ರನು ತಗ್ಗಿಸಿದ ತಲೆಯನ್ನು ಮೇಲಕ್ಕೆತ್ತಲಿಲ್ಲ. ಕೊನೆಗೆ—

" ರಾಘವೇಂದ್ರಾ; ನನ್ನೊಂದಿಗೆ ಮಾತನಾಡುವುದಿಲ್ಲವೇನಪ್ಪಾ, ಹಾಗಾದರೆ ನಾನು ಹೋಗುತ್ತೇನೆ " ಎಂದು ನುಡಿದಳು. ಆದರೆ ಮಾತಿನಂತೆ ನಡತೆಯಲ್ಲಿ ತೋರಿಸಲಿಲ್ಲ.

ರಾಘವೇಂದ್ರನು ತಲೆ ಎತ್ತಿ ನೋಡಿದನು. ವ್ಯಸನವು ಮಾಯವಾಯಿತು, ಅವಳನ್ನು ನೋಡಿದರೆ ಅವನಿಗೆ ಸಂತೋಷ. ಇಂದಿರೆಯು ಕೈಸನ್ನೆಯಿಂದ ಕರೆದಳು.

"ನೀನೆ ಬಾ ಇಂದಿರಾ" ಎಂದು ಹಸನ್ಮುಖದಿಂದ ರಾಘವೇಂದ್ರನು ಕರೆದನು.

ಇಂದಿರೆಯು ಓಡುತ್ತಾ ಬಂದು ರಾಘವೇಂದ್ರನ ತೊಡೆಯ ಮೇಲೆ ಕುಳಿತುಕೊಂಡು ಮುದ್ದಿನಿಂದ "ನನ್ನ ಹತ್ತಿರ ಬಂದು ತಮಾಷೆ ಇದೆ" ಎಂದು ನುಡಿದಳು.

"ಎಲ್ಲಿ ನೋಡೋಣ? "

" ಊ ಹುಂ, ತೋರಿಸುವುದಿಲ್ಲವಪ್ಪಾ, ಬಾಯಿ ತೆರೆದರೆ ನಿನಗೇನೇ ಗೊತ್ತಾಗುತ್ತೆ " ಎಂದು ಕಿರುನಗೆಯಿಂದ ಇಂದಿರೆ ಅಂದಳು.

ರಾಘವೇಂದ್ರನು ಬಾಯಿ ತೆರೆದನು.

ಇಂದಿರೆಯು ನಗುತ್ತಾ ಅವನನ್ನೇ ನೋಡುತ್ತ ಕುಳಿತಿದ್ದಳು.

" ಏಕೆ ?" ಎಂದು ಆಶ್ಚರ್ಯದಿಂದ ಕೇಳಿದನು.

" ಕಣ್ಣನ್ನು ಮುಚ್ಚಲೇ ಇಲ್ಲವಲ್ಲಾ " ಎಂದು ನುಡಿದು ತಾನೇ ರಾಘವೇಂದ್ರನ ಕಣ್ಣನ್ನು ಮುಚ್ಚಿ, ಅವನು ಬಾಯಿ ತೆರೆದ ಕೂಡಲೆ ಪೆಪ್ಪರಮೇಟೊಂದನ್ನು ಬಾಯಿಯಲ್ಲಿ ಹಾಕಿದಳು. ಒಂದು ಕ್ಷಣದಲ್ಲಿ ಪೆಪ್ಪರ್ಮೇಂಟು ಮಾಯವಾಯಿತು. ಸ್ವಲ್ಪ ಹೊತ್ತಿನ ಮೇಲೆ,

" ಇಂದಿರಾ !" ಎಂದು ರಾಘವೇಂದ್ರನು ನುಡಿದನು.

" ಏನು ?" ಎಂದು ಹೇಳಿದಳು.

" ನೀನು ತಿನ್ನಲೇ ಇಲ್ಲವಲ್ಲ? " ಎಂದು ಹೇಳಿದನು.

"ನಾನು ತಿನ್ನದೆ ನಿನಗೆ ಕೊಡುತ್ತೇನೆಯೆ! " ಎಂದು ನುಡಿದು ಕೆನ್ನೆಗೊಂದು ಏಟನ್ನು ಕೊಟ್ಟು ಆತನ ಕೈಯಲ್ಲಿದ್ದ ಪುಸ್ತಕವನ್ನು ಕಿತ್ತು ದೂರ ಬಿಸಾಟದಳು.

" ಅಪ್ಪ ಬೈಯುತ್ತಾನೆಯೆ, ಇಂದಿರಾ ! " ಎಂದು ರಾಘವೇಂದ್ರನು ಕಿರುನಗೆ ನಗುತ್ತಾ ನುಡಿದು ತಟ್ಟನೆ ಎದ್ದು ಹೋಗಿ ಪುಸ್ತಕವನ್ನು ತಂದಿಟ್ಟುಕೊಂಡನು.

" ಎಲ್ಲಿ ರಾಘವೇಂದ್ರ ನನಗೆ ಇವತ್ತು ರೋಜಾ ಹೂವು ಕೊಡಲೇ ಇಲ್ಲ "

" ನನಗೊಂದು ಮುತ್ತು ಕೊಟ್ಟರೆ! "

" ನಿನಗೆ ಮುತ್ತು ಕೊಡುವುದೂ ಇಲ್ಲ. ನೀನು ರೋಜಾನ ಕೊಡಲೂ ಬೇಡ, ನಾನು ಹೊರಟು ಹೋಗುತ್ತೇನೆ " ಎಂದೆದ್ದಳು.

" ನಿನಗಿಲ್ಲವೆ ಇಂದಿರಾ " ಎಂದು ಹೇಳಿ ಪತದ ಮೇಲಿದ್ದ ಹೂವನ್ನು ಅವಳಿಗೆ ಕೊಟ್ಟನು.

"ನನಗೆ ಮುಡಿದುಕೊಳ್ಳುವುದಕ್ಕೆ ಬರುವುದಿಲ್ಲವಪ್ಪಾ, ನೀನೆ ಮುಡಿಸು" ಎಂದು ಇಂದಿರೆಯು ಹೂವನ್ನು ಹಿಂತಿರುಗಿ ಕೊಟ್ಟಳು. ರಾಘವೇಂದ್ರನು ಅಂದವಾಗಿ ಆಕೆಯ ತುರುಬಿಗೆ ಮುಡಿಸಿದನು.

" ಇದೋ ನೀನು ಕೇಳಿದ್ದು " ಎಂದು ನುಡಿದು ಆತನ ಗಲ್ಲದ ಮೇಲೊಂದು ಮುತ್ತನ್ನು ಕೊಟ್ಟು ಇಂದಿರೆಯು ಅಲ್ಲಿಂದೋಡಿ ಹೋದಳು.

ರಾಘವೇಂದ್ರನು ಗಲ್ಲವನ್ನು ಸವರಿಕೊಳ್ಳುತ್ತಾ ಹಾಗೆಯೇ ಗೋಡೆಗೆ ಒರಗಿ ಕುಳಿತುಕೊಂಡು ಕಿಂಚಿತ್ ಸಂತೋಷವನ್ನನುಭವಿಸಿದನು.

## ೪.

ಹಿಡಿದ ಜ್ವರವು ಮೂರು ದಿನಗಳಿಂದ ಶ್ರೀನಿವಾಸರಾಯರನ್ನು ಬಿಟ್ಟಿರಲಿಲ್ಲ. ಬೆಳಿಗ್ಗೆ ಡಾಕ್ಟರು ಬಂದು ದೇಹಸ್ಥಿತಿಯುನ್ನು ನೋಡಿ ಔಷಧಿಗೆ ಯಾರನ್ನಾದರೂ ಕಳು ಹಿಸುವಂತೆ ಹೇಳಿ ಹೋಗಿದ್ದರು. ಜ್ವರವು ಈದಿನ ಅಷ್ಟೇನೂ ಬಂದಿರಲಿಲ್ಲ. ಬರೀ ಜಾಡ್ಯ, ತಲೆದಿಂಬಿನ ಮೇಲೆ ಒರಗಿಕೊಂಡು ಕುಳಿತುಕೊಂಡಿದ್ದರು. ತುಳಸಮ್ಮನವರು ಎದುರಿಗೆ ಕುಳಿತುಕೊಂಡು ಚಿಂತಿಸುತಿದ್ದರು. ಸ್ವಲ್ಪ ಹೊತ್ತಿನ ಮೇಲೆ " ನೀರು " ಎಂದು ರಾಯರು ಕೇಳಿದರು. ತುಳಸಮ್ಮನವರು ಎದ್ದು ಒಳಗೆ ಹೋಗಿ ಕಾದಾರಿದ ನೀರನ್ನು ತಂದು ಸ್ವಲ್ಪ ಕುಡಿಸಿದರು.

ದಾಹವಡಗಿ ಶ್ರೀನಿವಾಸರಾಯರು "ಔಷಧಿಗೆ ಯಾರು ಹೋಗಿದ್ದಾರೆ?" ಎಂದು ಕ್ಷೀಣಸ್ವರದಿಂದ ಕೇಳಿದರು.

" ರಾಘವೇಂದ್ರನು ಹೋಗಿದ್ದಾನೆ. ಈಗ ಬರಬಹುದು " ತುಳಸಮ್ಮನವರು ಉತ್ತರ ಕೊಟ್ಟರು.

" ರಂಗನಾಥನು ಎಲ್ಲಿ ? "

" ಮಹಡಿಯು ಮೇಲೆ ಓದುತ್ತಾ ಕುಳಿತಿರಬಹುದು "

" ಅವನನ್ನು ಸ್ವಲ್ಪ ಕರೆ ! "

ತುಳಸಮ್ಮನವರು ಎದ್ದು ಹೋಗಿ ಕರೆದರು. " ಹೋಗಮ್ಮಾ ನಾನು ಓದ ಬೇಕು " ಎಂದಂದು ಬಿಟ್ಟನು ರಂಗನಾಥ. ಮುಖವನ್ನು ಚಿಕ್ಕದು ಮಾಡಿಕೊಂಡು ಬಂದು ಅವನು ಹೇಳಿದ್ದನ್ನು ತುಳಸಮ್ಮ ಪತಿಗೆ ತಿಳಿಸಿದರು.

" ಹಾಗೆಯೆ ! " ಎಂದು ಶ್ರೀನಿವಾಸರಾಯರು ನಿಟ್ಟುಸುರೊಂದನ್ನು ಬಿಟ್ಟರು.

" ನೀವು ಖಾಯಿಲೆ ಬಿದ್ದಿದ್ದೀರೆಂಬ ಪರಿಜ್ಞಾನವೇ ಅವನಿಗಿಲ್ಲ. ಸ್ವಲ್ಪವಾದರೂ ನಿಮ್ಮನ್ನು ಹೇಗಿದ್ದೀರೆಂದು ವಿಚಾರಿಸಬೇಡವೆ ? ಪಾಪ ! ರಾಘವೇಂದ್ರನನ್ನು ನೋಡಿ, ನಿಮ್ಮಲ್ಲಿ ಎಷ್ಟು ಪ್ರೀತಿ ! ರಾತ್ರಿ ಹಗಲೂ ನಿಮಗೋಸ್ಕರ ಎಷ್ಟು ಕಷ್ಟಪಡುತಿದ್ದಾನೆ. ನಾನೆಷ್ಟೋ ಸಾರಿ ' ನಿದ್ದೆಕೆಡಬೇಡ ಮಲಗಿಕೊ ' ಎಂದರೆ ' ಮಲಗುವುದೇನು ! ಇದ್ದೇ ಇದೆ. +++ಗೆ ದೇವರ ದಯೆಯಿಂದ ಬೇಗ ವಾಸಿಯಾಲಿ ' ಎನ್ನುವನು "

" ಇನ್ನೇನು ಸ್ವರ್ಗಕ್ಕೆ ಮೂರೇ ಗೇಣು ಉಳಿಯಿತು. ಓದುಬರಹವಿಲ್ಲ, ಇದ ನ್ನಾದರೂ ಮಾಡದಿದ್ದರೆ ? " ಎಂದು ನುಡಿದರು.

ಅಷ್ಟು ಹೊತ್ತಿಗೆ ರಾಘವೇಂದ್ರನು ಔಷಧಿಯನ್ನು ತೆಗೆದುಕೊಂಡು ಬಂದನು. ತುಳಸಮ್ಮನವರು ಅದನ್ನು ಬಟ್ಟಲಿಗೆ ಬಗ್ಗಿಸಿ ಪತಿಯ ಕೈಗೆ ಕೊಟ್ಟರು. ಶ್ರೀನಿವಾಸ ರಾಯರು ಅದನ್ನು ಕುಡಿದು, ಕಹಿಗೆ ಮುಖವನ್ನು ವಿಕಾರಮಾಡುತ್ತಾ ಹಾಸಿಗೆಯ ಮೇಲೆ ಮಲಗಿ " ರಾಘವೇಂದ್ರಾ ಸ್ವಲ್ಪ ಹೊದಿಸು " ಎಂದು ಕೈಸನ್ನೆ ಮಾಡಿದರು.

ರಾಘವೇಂದ್ರನು ಹೊದಿಕೆಯನ್ನು ಅಪ್ಪನಿಗೆ ಹೊದಿಸಿ, ತಲೆದಿಂಬನ್ನು ಸರಿಯಾ ಗಿಟ್ಟು, ಗಾಳಿ ಬಡಿಯದಂತೆ ಕಿಡಿಕಿಯ ಬಾಗಿಲನ್ನು ಓರೆಯಾಗಿ ಮುಚ್ಚಿ ಹೊರಗೆ ಬಂದನು.

ಇಂದಿರೆಯು ದುಡು ದುಡು ಮೆಟ್ಟಲನ್ನು ಹತ್ತಿ ಬಂದು " ರಾಘವೇಂದ್ರಾ ಸ್ನಾನಕ್ಕೆ ಬರುವುದಿಲ್ಲವೆ ? " ಎಂದು ಕಿರುನಗೆಯಿಂದ ಕೇಳಿದಳು.

ಇಬ್ಬರೂ ಸೇರಿ ನದಿಯ ಕಡೆಗೆ ಹೊರಟರು.

ಇಂದಿರಾ—ರಾಘವೇಂದ್ರರ ಜತೆಯನ್ನು ಕಂಡು ಮನಸ್ಸಿನಲ್ಲೇ ಸಂತೋಷ ಪಡುತ್ತಾ ರಾಮರಾಯರ ಸತಿಯು ಎಂಜಲೆಲೆಯನ್ನು ಬಿಸಾಡಲು ಮರೆತು ಕಟ್ಟೆಮೇ ಲಿದ್ದ ಕಂಭಕ್ಕೆ ಒರಗಿಕೊಂಡು ನಿಂತು ಬಿಟ್ಟರು. ರಾಮರಾಯರು ಹಿಂದೆ ನಿಂತಿದ್ದು ದನ್ನು ಅವರು ನೋಡಲೇ ಇಲ್ಲ. ಸ್ವಲ್ಪ ಹೊತ್ತಿನ ಮೇಲೆ ರಾಮರಾಯರು " ಸೀತಾ, ಅದೇನು ಅಷ್ಟು ಆಶ್ಚರ್ಯದಿಂದ ನೋಡುತಿದ್ದುದು ? " ಎಂದು ಮುಗಳ್ನಗೆ ನಕ್ಕರು.

ಸೀತಮ್ಮನವರು ಹಿಂತಿರುಗಿ ನೋಡಿ ನಾಚಿಕೆಯಿಂದ "ಏನೂ ಇಲ್ಲ" ಎಂದುತ್ತರ ಕೊಟ್ಟು ಎಲೆಯನ್ನು ಬಿಸಾಟು ತಟ್ಟನೆ ಒಳಗೆ ಹೊರಟು ಹೋದರು. ರಾಮರಾಯರು ಆಫೀಸಿನ ಕಡೆ ಮುಖಮಾಡಿಕೊಂಡು ನಡೆದರು.

ಸ್ವಲ್ಪ ದಿನಗಳಲ್ಲೆ ಶ್ರೀನಿವಾಸರಾಯರಿಗೆ ನೆಮ್ಮದಿಯುಂಟಾಯಿತು. ರಾಘವೇಂದ್ರನು ಪಟ್ಟ ಕಷ್ಟವನ್ನು ಬಹು ಬೇಗ ಮರೆತುಬಿಟ್ಟರು.

ಪ್ರವೇಶ ಪರೀಕ್ಷೆಯ ಫಲಿತಾಂಶವು ಎರಡು ತಿಂಗಳ ಮೇಲೆ ತಿಳಿಯಿತು. ರಂಗನಾಥನು ಉತ್ತೀರ್ಣನಾದನೆಂದು ಕೇಳಿ ತಂದೆತಾಯಿಗಳು ಸಂತೋಷ ಪಟ್ಟು, ಅವನನ್ನು ಕೊಂಡಾಡಿದರೆಂದು ಹೇಳಬೇಕೆ ?

ದಿನಗಳು ಕಳೆದವು. ಒಂದು ದಿನ ರಾತ್ರಿ ಶ್ರೀನಿವಾಸರಾಯರು ಆದೇ ಊಟವನ್ನು ತೀರಿಸಿಕೊಂಡು ಚಾಪೆಯ ಮೇಲೆ ಕುಳಿತುಕೊಂಡು, ಯಾವುದೋ ಒಂದು ಪುಸ್ತಕವನ್ನು ಓದುತಿದ್ದರು. ಪಕ್ಕದಲ್ಲೊಂದು ದೀಪವು ಪ್ರಕಾಶಮಾನವಾಗಿ ಉರಿಯುತಿದ್ದಿತು. ಅಡಿಗೆ ಮನೆಯಲ್ಲಿ ತುಳಸಮ್ಮನವರು ಕೆಲಸ ಮಾಡುತಿದ್ದರು. ಸ್ವಲ್ಪ ಹೊತ್ತಿನ ಮೇಲೆ ಎದುರಿಗಿದ್ದ ಗಡಿಯಾರವು ಒಂಭತ್ತು ಗಂಟೆ ಬಾರಿಸಿತು. "ಏನು ! ರಾಘವೇಂದ್ರನು ಇನ್ನೂ ಊಟಕ್ಕೆ ಬರಲಿಲ್ಲವೆ ?" ಎಂದು ಕೂಗಿದರು ಶ್ರೀನಿವಾಸರಾಯರು.

"ಇಲ್ಲ. ಇನ್ನೂ ಬಂದಿಲ್ಲ" ಎಂಬ ಉತ್ತರವು ಬಂದಿತು.

"ಎಲ್ಲಿ ಹಾಳಾಗಿ ಹೋದನೋ, ರಾತ್ರಿ ಒಂಭತ್ತು ಗಂಟೆಯಾದರೂ ಮನೆಗೆ ಬರಬೇಕೆಂಬ ಯೋಚನೆಯೇ ಇಲ್ಲ. ಎಲ್ಲಿಗೆ ಹೋಗುತ್ತೇನೆಂದ" ಎಂದು ಸಿಟ್ಟಿನಿಂದ ನುಡಿದರು.

"ಇನ್ನೆಲ್ಲಿ ಹೋಗುತ್ತಾನೆ. ಯಾರೋ ತಿಲಕರಂತೆ, ಅವರು ಸತ್ತ ದಿನವಂತೆ, ಉಪನ್ಯಾಸ ಕೇಳುವುದಕ್ಕೆ ಹೋಗಬೇಕೆಂದು ಅಂದುಕೊಳ್ಳುತಿದ್ದ. ಅಲ್ಲಿಗೆ ಹೋಗಿರಬಹುದು" ತುಳಸಮ್ಮನವರು ಒಳಗಿನಿಂದ ನುಡಿದರು.

"ಮಾಡಲಿಕ್ಕೆ ಕೆಲಸವಿದ್ದರೆ ತಾನೆ" ಎಂದು ಅನ್ನುವಷ್ಟರಲ್ಲಿ ಹೊರಗಿನಿಂದ ಯಾರೋ ಬಂದಂತಾಯಿತು. ಶ್ರೀನಿವಾಸರಾಯರು ಆಕಡೆ ತಿರುಗಿ ನೋಡಿದರು. ಬಂದವನು ರಾಘವೇಂದ್ರ.

"ಕತ್ತೆ, ಎಲ್ಲಿ ಹೋಗಿದ್ದೆಯೊ ? ಎಷ್ಟು ಹೊತ್ತಾದರೂ ಮನೆಗೆ ಬರಬೇಕೆಂಬ ಯೋಚನೆಯೇ ಇಲ್ಲ. ಹಾಗೆಯೇ ಹಾಳಾಗಿ ಹೋಗಬಾರದಾಗಿತ್ತೆ ? ತಿಂಡಿಗೆ ಕಾಳಾಗಿ ಏಕೆ ಹುಟ್ಟಿದೆಯೊ ಗೊತ್ತಿಲ್ಲ" ಎಂದು ರೇಗಿದರು.

"ಅಪ್ಪಾ ನಾನು ಹುಟ್ಟಬಾರದಾಗಿತ್ತು. ಅದು ನನ್ನ ತಪ್ಪಲ್ಲ" ಎಂದನ್ನುವುದರೊಳಗೆ ಶ್ರೀನಿವಾಸರಾಯರಿಗೆ ಉರಿಯುವ ಗಾಯದ ಮೇಲೆ ಉಪ್ಪುನೀರೆರಚಿದಂ

ತಾಗಿ ಮೂರ್ಖ ನನ್ನನ್ನು ಅಣಕಿಸುತ್ತೀಯಾ, ಹೊರಟು ಹೋಗು. ಇನ್ನು ನನ್ನ ಮನೆ ಯಲ್ಲಿರಕೂಡದು " ಎಂದು ಗರ್ಜಿಸಿದರು.

" ಅಪ್ಪಾ ಇನ್ನು ಮೇಲೆ ಹಾಗೆ ಮಾಡುವುದಿಲ್ಲ. ಈ ಸಾರಿ ಕ್ಷಮಿಸು " ಎಂದು ರಾಘವೇಂದ್ರನು ಕಾಲಿಗೆ ಬಿದ್ದು ಬೇಡಿಕೊಂಡನು.

ರಾಘವೇಂದ್ರನ ಮಾತನ್ನು ಕೇಳಲಿಲ್ಲ. ರಟ್ಟೆಯನ್ನು ಹಿಡಿದುಕೊಂಡು ದರ ದರನೆಂದು ಅವನನ್ನು ಎಳೆದುಕೊಂಡು ಹೋಗಿ, ಬಾಗಿಲಹೊರಕ್ಕೆ ತಳ್ಳಿ, ದಢೀರೆಂದು ಬಾಗಿಲನ್ನು ಹಾಕಿ ಬಂದು ಕುಳಿತರು.

ಪಾಪ, ಹೆತ್ತ ಕರುಳು ! ತುಳಸಮ್ಮನವರು ಬಾಗಿಲನ್ನು ತೆರೆಯಲು ಬಂದರು. ನಿನ್ನ ಕೆಲಸ ನೀನು ನೋಡಿಕೋ ಹೋಗು. ಅವನು ನನ್ನ ಮಗನಲ್ಲ. ಎಲ್ಲಿಯಾದರೂ ಭಿಕ್ಷೆ ಬೇಡಿ ತಿಂದುಕೊಂಡಿರಲಿ, ರಂಗನಾಥನಂಥ ಒಬ್ಬ ಮಗನೇ ನನಗೆ ಸಾಕು " ಎಂದು ರಾಯರು ಸಂತಾಪದಿಂದ ಹೇಳಿದರು ತುಳಸಮ್ಮನವರು ಹೆದರಿ ಮಾತನಾಡದೆ ಕಣ್ಣೀರಿ ಡುತ್ತಾ ಒಳಗೆ ಹೊರಟು ಹೋದರು.

ರಾಘವೇಂದ್ರನು ಕಟ್ಟೆಯ ಮೇಲೆ ಕುಳಿತು ಬಿಕ್ಕಿ ಬಿಕ್ಕಿ ಅತ್ತನು. ಎಷ್ಟು ಹೊತ್ತು ಅತ್ತರೂ ಪ್ರಯೋಜನವೇನು. ಕಣ್ಣೀರೊರಸಿಕೊಂಡು—" ಹಾ ಕಷ್ಟ, ತಂದೆ ತಾಯಿ ಗಳಿಗೆ ಬೇಡವಾದವನ ಬಾಳು ವ್ಯರ್ಥ. ಇನ್ನು ನಾನಿಲ್ಲಿದ್ದರೇನು ಪ್ರಯೋಜನ, ಅಭಿ ವೃದ್ಧಿಗೆ ಬರಬೇಕು. ಇಲ್ಲದಿದ್ದರೆ ಸಾಯಬೇಕು. ಅಲ್ಲಿಯವರೆಗೂ ನಾನು ಇವರಿಗೆ ಮುಖತೋರಿಸಕೂಡದು " ಎಂದು ತನ್ನಲ್ಲಿ ತಾನೇ ವಿಚಾರಮಾಡಿಕೊಂಡು ಮೆಟ್ಟಲುಗ ಳನ್ನು ಇಳಿದು ಬೀದಿಗೆ ಬಂದು ನಿಂತನು. ನಿಂತು ಕೊನೆಯ ಸಾರಿ ಮನೆಯ ಕಡೆ ತಿರುಗಿ " ಅಪ್ಪಾ ......ಅಮ್ಮಾ......ಕ್ಷಮಿಸಿ......ನಿಮಗೆ ವಂದನೆಗಳಿರಲಿ " ಎಂದು ಉಕ್ಕಿ ಬರುತಿದ್ದ ದುಃಖವನ್ನು ಅಡಗಿಸಿಕೊಂಡು ನುಡಿದನು. ಎರಡು ಹೆಜ್ಜೆ ಮುಂದಿಟ್ಟು ಮತ್ತೊಂದು ಬಾರಿ ಮನೆಯ ಕಡೆಗೂ, ಇಂದಿರೆಯ ಕೋಣೆಯ ಕಡೆಗೂ ನೀರು ತುಂಬಿದ ಕಣ್ಣುಗಳಿಂದ ನೋಡಿ, ಉಸುರ್ಗರೆಯುತ್ತಾ ಕತ್ತಲೆಯಲ್ಲಿ ಹೊರಟು ಹೋದನು.

ಒಳಗೆ ಮಲಗಿದ್ದ ತುಳಸಮ್ಮನವರಿಗೆ ಏನೋ ಸಂಕಟವಾಯಿತು. ತಟ್ಟನೆ ಎದ್ದು ಬಂದು ಬಾಗಿಲವನ್ನು ತೆರೆದು ನೋಡಿದರು, ರಾಘವೇಂದ್ರನಿರಲಿಲ್ಲ.

ಕಣ್ಣಿಗೆ ಕತ್ತಲೆ ಕವಿದಂತಾಗಿ ಅಲ್ಲಿಯೇ ಬಿದ್ದು ಬಿಟ್ಟರು.

ಮರುದಿನವೆಲ್ಲಾ ರಾಘವೇಂದ್ರನು ಮನೆಗೆ ಬರಲೇ ಇಲ್ಲ.

ಶ್ರೀನಿವಾಸರಾಯರಿಗೆ ಅನುಮಾನ ಬಂದು ಊರೆಲ್ಲಾ ಹುಡುಕಿದರು. ಎಲ್ಲಿಯೂ ಅವನ ಪತ್ತೆಯೇ ಇಲ್ಲ. ಎದೆಗೆ ಸಿಡಿಲು ಬಡೆದಂತಾಯಿತು. ಪಶ್ಚಾತ್ತಾಪ ಪಟ್ಟರು.

ದಿನಗಳು ಕಳೆದುವು. ರಾಘವೇಂದ್ರನ ಸುಳಿವೆ ಇಲ್ಲ. ಕೊನೆಗೆ ಶ್ರೀನಿವಾಸರಾ ಯರು ಪತ್ರಿಕೆಯಲ್ಲಿ ಸಮಾಚಾರವನ್ನು ಪ್ರಕಟಿಸಿದರು. ಅದೂ ನಿಷ್ಪ್ರಯೋಜನವಾಯಿತು.

೫.

ಇದೆಲ್ಲಾ ನಡೆದು ಹೋಗಿ ಎರಡು ವರ್ಷವಾಯಿತು. ರಂಗನಾಥನೀಗ ಬಿ. ಎ. ಪರೀಕ್ಷೆಯಲ್ಲಿ ಓದುತಿದ್ದನು. ಮೊದಲಿಗಿಂತಲೂ ಅವನ ವೆಚ್ಚವು ಈಗ ಹೆಚ್ಚಾಗಿದ್ದಿತು. ಮಗನು ಮುಂದೆ ಅಭಿವೃದ್ಧಿಗೆ ಬರುವನೆಂಬ ಆಶೆಯಿಂದ ಹೊಟ್ಟೆ ಬಟ್ಟೆಯನ್ನು ಕಟ್ಟಿ ಅವನಿಗೆ ಹಣವನ್ನು ಕಳುಹಿಸುತಿದ್ದರು.

ಕಷ್ಟಪಡುವವನೊಬ್ಬನಾದರೆ ತಿಂದು ತೇಗುವವನೊಬ್ಬ. ಅದರಂತೀಗ ರಂಗನಾಥನು, ತಂದೆಯಿಂದ ಬಂದ ಹಣವನ್ನು ದುರ್ವ್ಯಸನಗಳಿಗೆ ಹಾಳು ಮಾಡಿ, ಹೆಚ್ಚಾಗಿ ಹಣ ಕಳುಹಿಸಲಿಲ್ಲವೆಂಬ ಕೋಪದಿಂದ ಕಾಗದಗಳನ್ನೇ ಬರೆಯುವುವನ್ನು ಬಿಟ್ಟು ಬಿಟ್ಟನು. ಕೊನೆಗೆ ಅವರಿಗೆ ತಿಳಿಯುದಂತೆ ಮೈಸೂರಿನಲ್ಲೆ ಮದುವೆಯಾಗಿ ಮಾವನ ಮನೆಯಲ್ಲೆ ನಿಂತು ಬಿಟ್ಟನು.

ಶ್ರೀನಿವಾಸರಾಯರಿಗೆ ಇದೊಂದು ಸಮಾಚಾರಗಳೂ ತಿಳಿಯವು, ಪಕ್ಕದ ಮನೆಯ ರಾಮರಾಯರ ತಮ್ಮನು ಮೈಸೂರಿನಿಂದ ಬಂದಾಗ ಸಂಗತಿಗಳನ್ನು ತಿಳಿದು ದುಃಖಪಟ್ಟರು.

ತುಳಸಮ್ಮನವರು ರಾಘವೇಂದ್ರನ ಅಗಲಿಕೆಯಿಂದಲೂ ರಾಮಚಂದ್ರ, ರಂಗನಾಥರ ಚರ್ಯೆಯಿಂದಲೂ, ಯಾವಾಗಲೂ ಉದಾಸೀನರಾಗಿಯೇ ಇರುವರು. ಪಾಶ್ಚಾತ್ತಾಪದಿಂದ ಬೆಂದು ಶ್ರೀನಿವಾಸರಾಯರು ಹಣ್ಣಾಗಿದ್ದರು.

ರಾಘವೇಂದ್ರನ ಅಗಲಿಕೆಯಿಂದ ರಾಮರಾಯರೂ, ಅವರ ಸತಿಯೂ ತುಂಬಾ ವ್ಯಥೆಪಟ್ಟರು. ಇಂದಿರೆಗಂತೂ ಮೂರುನಾಲ್ಕು ದಿನ ಮುಖದ ಮೇಲೆ ಉಲ್ಲಾಸವೆಂಬುದೇ ಇರಲಿಲ್ಲ. ನಿತ್ಯವೂ ಅವನನ್ನು ನೆನಿಸಿಕೊಳ್ಳುವಳು. ನದಿಗೆ ಹೋಗುವಾಗಲೂ ಊಟಮಾಡುವಾಗಲೂ, ತಿಂಡಿ ತಿನ್ನುವಾಗಲೂ ಅವನನ್ನು ನೆನಿಸಿಕೊಳ್ಳದ ದಿನವೇ ಇಲ್ಲ. " ರಾಘವೇಂದ್ರ, ರಾಘವೇಂದ್ರ " ಎಂಬುದೊಂದೇ ಅವಳ ಜಪವಾಗಿ ಹೋಗಿದ್ದಿತು.

ದಿನ ದಿನಕ್ಕೆ ತುಳಸಮ್ಮನವರ ದೇಹ ಸ್ಥಿತಿ ಕೆಡುತ್ತಾ ಬಂದು ಹಾಸಿಗೆಯನ್ನು ಹಿಡಿದು ಬಿಟ್ಟರು. ಶ್ರೀನಿವಾಸರಾಯರಿಗೆ ತಲೆಯ ಮೇಲೆ ಆಕಾಶವೇ ಕಳಚಿಬಿದ್ದಂತಾಯಿತು. ಕೆಟ್ಟಮೇಲೆ ಬುದ್ಧಿ ಬಂದಿತೆಂಬಂತಾಗಿ ಆಗಾಗ್ಗೆ ರಾಘವೇಂದ್ರನ ಗುಣಕ್ಕೆ ಅನಂದಿಸಿ, ಅಂತಹವನಿಗೆ ಒಂದು ಒಳ್ಳೆಯ ಮಾತನ್ನಾದರೂ ಆಡಲಿಲ್ಲನಲ್ಲಾ " ಎಂದು ತಮ್ಮನ್ನು ತಾವೇ ಹಳಿದುಕೊಳ್ಳುವರು.

ಒಂದುದಿನ ರಾಮರಾಯರು ಹತ್ತುಗಂಟೆಗೆ ಊಟ ತೀರಿಸಿಕೊಂಡು ಸೀತಮ್ಮನವರೊಂದಿಗೆ ಹರಟೆ ಹೊಡೆಯುತ್ತಾ ಜಮಖಾನೆಯ ಮೇಲೆ ಕುಳಿತಿದ್ದರು. ಅಂದು ಶನಿವಾರ, ಇಂದಿರೆಯು ಪಕ್ಕದ ಕೊಠಡಿಯಲ್ಲಿ ಕುಳಿತು ಕಸೂತಿ ಹಾಕುತಿದ್ದಳು.

ಹೊರಗೆ ಅಂಚೆಯವನು " ಪೋಸ್ಟ್ ಸಾರ್ " ಎಂದು ಕೂಗಿದನು. ರಾಮರಾಯರು ಎದ್ದು ಹೋಗಿ ನೋಡಿದರು. ಅಂಚೆಯವನು ಒಂದು ಪತ್ರವನ್ನೂ, ಮತ್ತೊಂದು ಕಾಗದ ಸುರುಳಿಯನ್ನೂ ಕೊಟ್ಟು ಹೊರಟು ಹೋದನು.

ಪತ್ರವನ್ನು ಒಡೆದು ನೋಡಿದನು ಅದು ರಾಘವೇಂದ್ರನದಾಗಿದ್ದಿತು. ಆಶ್ಚರ್ಯದಿಂದದನ್ನು ಪತ್ನಿಗೆ ಓದಿ ಹೇಳಿದರು.

ಅದರಲ್ಲಿ...

ಶ್ರೀ

ಪುಣೆ ತಾ॥ ೨-೧೧-೧೯೧೫ ಇಸ್ವಿ

ತೀರ್ಥರೂಪ ಸಮಾನರಾದ ರಾಮರಾಯರಿಗೆ– ಬಾಲಕ ರಾಘವೇಂದ್ರನ ಸಾಷ್ಟಾಂಗ ನಮಸ್ಕಾರಗಳು.

ತಮ್ಮೆಲ್ಲರನ್ನೂ ಅಗಲಿ ಇಲ್ಲಿಗೆ ಬಂದು ಎರಡು ವರ್ಷವಾಯಿತು. ಇಷ್ಟು ದಿನವಾದರೂ ನಿಮಗಾಗಲಿ ತಂದೆಯವರಿಗಾಗಲಿ ಪತ್ರಬರೆಯದೇ ಇದ್ದುದಕ್ಕೆ ಕ್ಷಮಿಸಿ.

ನಾನು ಅಲ್ಲಿಂದ ಹೊರಟವನು ಬೆಂಗಳೂರಿನಲ್ಲಿ ಒಂದು ವರ್ಷ ಚಿತ್ರಕಲೆಯನ್ನು ಅಭ್ಯಾಸಿಸಿದೆನು. ಅಲ್ಲಿಯ ಉಪಾಧ್ಯಾಯರ ಪ್ರೀತಿಗೆ ಪಾತ್ರನಾಗಿ ಪುಣೆಗೆ ಬಂದು ಇಲ್ಲಿಯ ಆರ್ಟ್ ಕಾಲೇಜಿಗೆ ಸೇರಿ ವ್ಯಾಸಂಗವನ್ನು ಪೂರ್ತಿ ಮಾಡಿದೆನು. ಇದೇ ತಿಂಗಳಲ್ಲಿ ಇಲ್ಲಿ ನಡೆದ ಕಲಾ ಪ್ರದರ್ಶನದಲ್ಲಿ ನಾನು ಬರೆದ "ವೇಣುಗೋಪಾಲ" ಎಂಬ ಪಠಕ್ಕೆ ಸಂತೋಷಿಸಿ ಬೊಂಬಾಯಿ ಗವರ್ನರವರ ಪತ್ನಿಯವರು ಬಹುಮಾನವಾಗಿ ಈ ಚಿನ್ನದ ಪದಕವನ್ನು ದಯಪಾಲಿಸಿದರು. ಮತ್ತು ವೇಣುಗೋಪಾಲನ ಪಠವನ್ನು ಒಬ್ಬ ದೊಡ್ಡ ಮನುಷ್ಯನು ಐದು ನೂರು ರುಪಾಯಿಗಳಿಗೆ ಕೊಂಡುಕೊಂಡನು. ಇದೆಲ್ಲವೂ ತಮ್ಮಗಳ ಆಶೀರ್ವಾದದಿಂದ. ಇದರೊಂದಿಗೆ ಪದಕವನ್ನೂ ಚಿತ್ರಪಠದ ಪ್ರತಿಗಳೆರಡನ್ನೂ ಕಳುಹಿಸಿರುತ್ತೇನೆ. ಒಂದನ್ನು ತಂದೆಯವರಿಗೆ ಕೊಡುವುದು. ಆದರೆ ಬರೆದವನ ಹೆಸರನ್ನು ಮಾತ್ರ ತಿಳಿಸಬಾರದೆಂದು ಕೇಳಿಕೊಳ್ಳುತ್ತೇನೆ.

ನಮ್ಮ ಮನೆಯಲ್ಲಿ ಎಲ್ಲರೂ ಕ್ಷೇಮವಾಗಿದ್ದಾರೆಯೆ ಎಂಬುದನ್ನು ತಿಳಿಸುವುದು.

ಇಂದಿರೆಗೆ ನನ್ನ ಆಶೀರ್ವಾದ ಹೇಳುವುದು. ನಾನು ಹೇಳದೆ ಬಂದೆನೆಂದು ಕೋಪಿಸಿಕೊಂಡಿರಬಹುದು. ಸೀತಮ್ಮನವರಿಗೆ ನನ್ನ ನಮಸ್ಕಾರಗಳನ್ನು ತಿಳಿಸುವುದು.

ಇತಿ ತಮ್ಮ ಆಶೀರ್ವಾದದಿಂದ ಬೆಳೆದ

—ರಾಘವೇಂದ್ರ

ಪತ್ರದಲ್ಲಿನ ಸಂಗತಿಯನ್ನು ಕೇಳಿ, ಸೀತಮ್ಮನವರ ಮೋರೆ ಅರಳಿತು, ಪದಕವನ್ನೂ, ಪಠವನ್ನೂ ಕೈಯಲ್ಲಿ ತೆಗೆದುಕೊಂಡು, "ಚೆನ್ನಾಗಿದೆ" ಎಂದು ಹೇಳಿ " ಪಾಪ ಬಹಳ ಕಷ್ಟವನ್ನನುಭವಿಸಿದ ಅವನ ತಂದೆ ತಾಯಿಗಳು ಎಷ್ಟು ಪುಣ್ಯಮಾಡಿದ್ದರೋ" ಎಂದು ನುಡಿದರು.

ಒಳಗಿನಿಂದಲೇ ಇಂದಿರೆಯು ಇವರ ಮಾತುಗಳನ್ನು ಕೇಳಿ ಆನಂದಪಟ್ಟಳು. ತಂದೆಯು ಪತವನ್ನು ತೆಗೆದುಕೊಂಡು ಶ್ರೀನಿವಾಸರಾಯರ ಮನೆಗೆ ಹೋಗುತ್ತಲೆ ಅವಳು ಓಡಿ ಬಂದು "ಅಮ್ಮಾ ಇದಾರು ಬರೆದದ್ದೆ? ಬಹಳ ಚೆನ್ನಾಗಿದೆ" ಎಂದು ಏನೂ ತಿಳಿಯದವಳಂತೆ ಕೇಳಿದಳು.

ಸೀತಮ್ಮನವರು "ನಿನ್ನ ಗಂಡ ಬರೆದಿದ್ದೆ " ಎಂದು ಹಾಸ್ಯಮಾಡಿದರು. ಇಂದಿರೆಯು ನಾಚಿಕೆಯಿಂದ ಒಳಗೆ ಪತವನ್ನು ತೆಗೆದುಕೊಂಡು ಓಡಿಹೋದಳು.

ರಾಮರಾಯರು ಪತವನ್ನು ತೆಗೆದುಕೊಂಡು ಹೋಗಿ ಶ್ರೀನಿವಾಸರಾಯರಿಗೆ ತೋರಿಸಿದರು. ಪತವನ್ನು ನೋಡಿ ಆನಂದಪಟ್ಟರು. ತಮ್ಮ ರಾಘವೇಂದ್ರನು ಇದ್ದಿದ್ದರೆ ಹೀಗೆಯೇ ಬರೆಯುತ್ತಿದ್ದನು. ಎಂದು ನಿಟ್ಟುಸಿರು ಬಿಟ್ಟು "ರಾಮರಾಯರೆ ಈ ಪಠಕ್ಕೇನು ಕೊಟ್ಟರಿ, ನನಗೊಂದು ಬೇಕಾಗಿದ್ದಿತು" ಎಂದು ಅವರು ಕೇಳಿದರು.

"ನನ್ನ ಹತ್ತಿರ ಎರಡಿದೆ, ಒಂದು ತಮ್ಮಲ್ಲಿರಲಿ, ಇದನ್ನು ಬರೆದವನು ಇಲ್ಲಿಗೆ ಇನ್ನೊಂದು ವಾರಕ್ಕೆ ಬರಬಹುದು. ಸಾಧ್ಯವಾದರೆ ಅವನನ್ನು ಕರೆದುಕೊಂಡು ಬರುತ್ತೇನೆ." ಎಂದು ಹೇಳಿ ರಾಮರಾಯರು ಹೊರಟು ಬಂದು ಬಿಟ್ಟರು.

ಅಂದಿನ ದಿನವೇ ಪುಣೆಗೆ ಪತ್ರವನ್ನು ಬರೆದರು. ಅದರಲ್ಲಿ ಅವನ ತಾಯಿಯ ಸ್ಥಿತಿಯನ್ನು ತಿಳಿಸಿದ್ದರು.

ಒಂದು ದಿನ ರಾಮರಾಯರು ಮನೆಯ ಮುಂದೆ ನಿಂತಿದ್ದರು. ಅಂದಿಗೆ ಒಂದು ವಾರವಾಗಿದ್ದಿತು. ರಾಘವೇಂದ್ರನಿಗೆ ಪತ್ರ ಬರೆದು. ಗಾಡಿಯೊಂದು ಬಂದು ಅವರ ಮನೆಯ ಮುಂದೆಯೇ ನಿಂತಿತು. ಅದಾರಿರಬಹುದೆಂದು ರಾಮರಾಯರು ಬೆರಗಾಗಿ ನೋಡುತ್ತಿರುವಲ್ಲಿ, ಬಂಡಿಯೊಳಗಿನಿಂದ ರಾಘವೇಂದ್ರನು ಕೆಳಗಿಳಿದನು. ತಮ್ಮ ಪತ್ರದಂತೆ ರಾಘವೇಂದ್ರನು ಬಂದುದಕ್ಕೆ ಸಂತೋಷವಾಯಿತು.

ರಾಘವೇಂದ್ರನು ಗಾಡಿಯವನಿಗೆ ಬಾಡಿಗೆಯನ್ನು ಕೊಟ್ಟು ಕಳುಹಿಸಿ, ಬಂದು ರಾಮರಾಯರಿಗೆ ವಂದಿಸಿದನು. ಇಬ್ಬರೂ ಸೇರಿ ಮನೆಯೊಳಕ್ಕೆ ನಡೆದು ಜಮುಖಾನೆಯ ಮೇಲೆ ಕುಳಿತುಕೊಂಡರು. ವಳಗಿನಿಂದ ಸೀತಮ್ಮನವರು ಬರಲು ರಾಘವೇಂದ್ರನು ಬೇಗನೆ ಎದ್ದು ನಮಸ್ಕಾರ ಮಾಡಿದನು. ಸೀತಮ್ಮನವರು ಮನಸಾರೆ ಹರಸಿದರು. ಸ್ವಲ್ಪ ಹೊತ್ತು ಮಾತುಕಥೆಗಳನ್ನಾಡುತ್ತಾ ಕುಳಿತಿದ್ದ ನಂತರ ಮನೆಗೆ ಹೋಗಲು ರಾಘವೇಂದ್ರನು ಮೇಲಕ್ಕೆದ್ದನು. ರಾಮರಾಯರೂ ಸಂಗಡಲೆ ಹೊರಟರು.

೬.

ರಾಮರಾಯರೊಂದಿಗೆ ರಾಘವೇಂದ್ರನು ಮನೆಗೆ ಹೋದಾಗ, ಶ್ರೀನಿವಾಸರಾಯರು ಹೆಂಡತಿಗೆ ಗಂಜಿ ಕಾಯಿಸುತಿದ್ದರು. " ಅಪ್ಪಾ " ಎಂದು ಕರೆದ ರಾಘವೇಂದ್ರನ ಧ್ವನಿಯು ಕಿವಿಗೆ ಬಿದ್ದಿತು. ಅವರು ತಟ್ಟನೆ ಎದ್ದು ಹೊರಗೆ ಬಂದು ನೋಡಿದರು. ತಮ್ಮ ಕಣ್ಣನ್ನು ತಾವೇ ನಂಬಲಾರದಾದರು.

“ ಅಪ್ಪಾ, ನಿನ್ನ ಮನಸ್ಸನ್ನು ನೋಯಿಸಿದುದಕ್ಕೆ ಕ್ಷಮಿಸು” ಎಂದಿಷ್ಟೇ ರಾಘವೇಂದ್ರನು ನುಡಿದು, ಉಕ್ಕಿ ಬಂದ ಆನಂದದಿಂದ ಏನೊಂದೂ ತೋರದೆ ತಂದೆಯ ಕಾಲಿನ ಹತ್ತಿರ ಬಿದ್ದು ಬಿಟ್ಟನು.

ಶ್ರೀನಿವಾಸರಾಯರು ಮಗನನ್ನು ಎರಡು ಕೈಗಳಿಂದಲೂ ಮೇಲಕ್ಕೆತ್ತಿ ಶಿರಸ್ಸನ್ನು ಘ್ರಾಣಿಸಿದರು, ಅವರ ಕಣ್ಣಿನಿಂದ ಆನಂದಾಶ್ರುವು ಹರಿದು ಬಂದು ರಾಘವೇಂದ್ರನ ಶಿರದ ಮೇಲೆ ಬಿದ್ದಿತು.

ರಾಮರಾಯರನ್ನು ಕಂಡು ಕೃತಜ್ಞತೆಯಿಂದ “ಸ್ವಾಮಿ, ತಮ್ಮಿಂದ ಈ ದಿನ ಕಳೆದುಕೊಂಡಿದ್ದ ಪುತ್ರನನ್ನು ಪಡೆದೆ, ನಿಮ್ಮ ಉಪಕಾರವನ್ನು ಹೇಗೆ ತೀರಿಸಲಿ” ಎಂದು ಸಂತೋಷಾಧಿಕ್ಯದಿಂದ ನುಡಿದರು.

ನಂತರ ರಾಘವೇಂದ್ರನು ತಾಯಿ ಮಲಗಿದಲ್ಲಿಗೆ ಹೋಗಿ ನಮಸ್ಕಾರ ಮಾಡಿದನು. ತುಳಸಮ್ಮನವರು ಬಾಡಿದ ಕಣ್ಣುಗಳಿಂದ ಮಗನನ್ನು ಪ್ರೇಮದಿಂದ ದೃಷ್ಟಿಸಿ ನೋಡಿದರು. ಮಾತನಾಡಲು ಬಾಯಿಬಾರದೆ ಕಣ್ಣಿನಿಂದ ಗಳಗಳನೆಂದು ನೀರನ್ನು ಹರಿಸಿದರು.

ರಾಘವೇಂದ್ರನು ಪಕ್ಕದಲ್ಲಿ ಕುಳಿತುಕೊಂಡು ಮೈದಡವುತ್ತಾ ಸಮಾಧಾನ ಮಾಡಿದನು. ಖಾಯಿಲೆಯಿಂದ ಸೊರಗಿದ್ದ ತುಳಸಮ್ಮನವರು ಈಗ ಏನೂ ಇಲ್ಲದಂತೆ ಕಂಡರು.

ಅಂದು ಎಲ್ಲರೂ ರಾಮರಾಯರ ಮನೆಯಲ್ಲೇ ಊಟಮಾಡಿದರು.

ಮಧ್ಯಾಹ್ನ ಊಟವಾದ ಮೇಲೆ ರಾಮರಾಯರೂ, ಸೀತಮ್ಮನವರೂ, ರಾಘವೇಂದ್ರನೊಂದಿಗೆ ಮಾತನಾಡುತ್ತಾ ಕುಳಿತುಕೊಂಡಿದ್ದರು. ರಾಘವೇಂದ್ರನು ಮನೆ ಹೊರಟ ಮೊದಲುಗೊಂಡು ನಡೆದ ಕಷ್ಟಸುಖಗಳನ್ನು ತಿಳಿಯ ಹೇಳಿದನು. ಅವರು ಸಂತೋಷಪಟ್ಟರು.

“ನಿನಗೇನಪ್ಪಾ, ರಾಘವೇಂದ್ರಾ! ಈಗ ದೊಡ್ಡವನಾದೆ. ದೊಡ್ಡ ಕೆಲಸ ಮಾಡುತ್ತೀಯೆ, ಕೈ ತುಂಬಾ ಹಣ ಸಂಪಾದಿಸುತ್ತಿ; ಇನ್ನು ಮೇಲೆ ರಾಘವೇಂದ್ರರಾಯರು ಎಂದು ಕರೆಯಬೇಕು ” ಎಂದು ಸೀತಮ್ಮ ನುಡಿದರು.

“ಅಮ್ಮಾ ಅವೆಲ್ಲವೂ ತಮ್ಮ ಆಶೀರ್ವಾದದಿಂದಲೆ; ನಾನು ಯಾವಾಗಲೂ ರಾಘವೇಂದ್ರನೆ! ” ಎಂದು ರಾಘವೇಂದ್ರನು ನಗುತ್ತಾ ನುಡಿದನು.

“ಸ್ವಲ್ಪ ಹೊತ್ತಿನಮೇಲೆ ರಾಘವೇಂದ್ರನು ಜ್ಞಾಪಿಸಿಕೊಂಡು, ಇಂದಿರಾ, ಎಲ್ಲಿ? ಕಾಣಿಸಲೇ ಇಲ್ಲ! ” ಎಂದನು. ಸೀತಮ್ಮನವರು “ ಎಲ್ಲೋ ಒಳಗಿರಬಹುದು” ಎಂದು ನುಡಿದು “ಇಂದಿರಾ ಇಂದಿರಾ” ಎಂದು ಕೂಗಿದರು. ಒಳಗಿನಿಂದ “ಏನಮ್ಮ” ಇಂದಿರೆಯು ಎಂದು ಬಂದು ಬಾಗಿಲ ಬಳಿ ನಿಂತಳು.

ರಾಘವೇಂದ್ರನು ತಲೆಯೆತ್ತಿ ಆಕಡೆ ನೋಡಿದನು. ಅವಳು ಮೊದಲಿನ ಇಂದಿರೆಯಾಗಿರಲಿಲ್ಲ. ಈಗವಳು ಹನ್ನೆರಡು ವರ್ಷದವಳು; ಸೌಂದರ್ಯವತಿ; ಅನವಯವ

ಸುಂದರವಾಗಿ ಬೆಳೆದಿದ್ದವು. ಸ್ವಲ್ಪ ಉದ್ದವಾದ ಮುಖ. ನೇರವಾದ ಮೂಗು, ಚಪಲ ದೃಷ್ಟಿಯ ಕಣ್ಣುಗಳು. ಮುದ್ದಾದ ಬಾಯಿ, ಎಡಬಲಕ್ಕೆ ಗುಲಾಬಿ ಹೂವನ್ನೆರಡನ್ನು ಇಟ್ಟಂತೆ ಕೆನ್ನೆಯ ಬೆಡಗು, ಚೆಂದುಟಿ, ಅಂದವಾಗಿ ಗುಂಡಗೆ ಹಚ್ಚಿದ ಕುಂಕುಮದ ಬೊಟ್ಟು, ನೋಡುವುದಕ್ಕೆ ಅಷ್ಟೇನೂ ಎತ್ತರವಾದ ಹೆಂಗುಸಲ್ಲ. ಮೈಬಣ್ಣವು ಬಂಗಾ ರದಂತೆ ಹೊಳೆಯುತಿದ್ದಿತು. ಪಚ್ಚೆಬಣ್ಣದ ಸೀರೆಯನ್ನುಟ್ಟುಕೊಂಡಿದ್ದಳು. ನೀಳವಾದ ಜುಡಿಯು ಹೆಗಲಮೇಲೆ ಜೋಲಾಡುತಿದ್ದಿತ್ತು.

ರಾಘವೇಂದ್ರನು ಕಣ್ಣುಲುಗಿಸದೆ ನೋಡಿದನು. ಸೀತಮ್ಮನವರು ಸೂಕ್ಷ್ಮ ದೃಷ್ಟಿಯಿಂದ ನೋಡಿದರು. ಅವನ ನೋಟವು ಒಂದು ಮಾದರಿಯಾಗಿದ್ದಿತು. ಇಂದಿ ರೆಯು ನಾಚಿಕೆಯಿಂದ ಮೋರೆಯನ್ನು ಕೆಳಗೆ ಮಾಡಿ "ಯಾತಕಮ್ಮಾ! ನನ್ನನ್ನು ಕೂಗಿದ್ದು" ಎಂದು ಕೇಳಿದಳು.

"ರಾಘವೇಂದ್ರ ಕೇಳಿದ. ಅದಕ್ಕೆ ಕೂಗಿದೆ" ಎಂದು ತಾಯಿಯುತ್ತರಕೊಟ್ಟರು.

"ನನ್ನ ಸಂಗಡ ಮಾತನಾಡುವುದಕ್ಕೆ ನಾಚಿಕೆ ಏನೋ" ಎಂದು ರಾಘವೇಂದ್ರನು ನಕ್ಕುಬಿಟ್ಟನು. ಇಂದಿರೆಯು ಒಂದು ಬಾರಿ ಅವನ ಕಡೆ ನೋಡಿ, ಕಿರುನಗೆನಗುತ್ತಾ ಒಳಗೆ ಓಡಿಹೋದಳು.

"ಈಗ ಬರುತ್ತೇನೆ" ಎಂದು ನುಡಿದು ರಾಘವೇಂದ್ರನು ಎದ್ದು ಹೊರಗೆ ಹೊರಟು ಹೋದನು.

ಅವನ ನಡತೆಯನ್ನು ನೋಡಿ ರಾಮರಾಯರು ನಕ್ಕರು. "ಅದೇನು ನಕ್ಕಿರಿ?" ಎಂದು ಆಶ್ಚರ್ಯದಿಂದ ಸೀತಮ್ಮ ಕೇಳಿದರು. "ಏನೂ ಇಲ್ಲ; ನಮ್ಮ ಇಂದಿರಾನ ರಾಘವೇಂದ್ರನಿಗೆ ಕೊಟ್ಟು ಮದುವೆ ಯಾತಕ್ಕೆ ಮಾಡಿಬಿಡಬಾರದು" "ನಿಜವಾಗಿಯೂ ನಾಡುತ್ತೀರಾ? ನನ್ನ ಮನಸ್ಸಿನಲ್ಲಿದ್ದದ್ದೂ ಅದೇ! ಎಂದು ಆಶಾಪೂರ್ವಕ ದೃಷ್ಟಿಯಿಂದ ಸೀತಮ್ಮ ನುಡಿದರು.

"ಇನ್ನೇನು ಮದುವೆ ಯಾದಂತೆಯೆ" ಎಂದು ರಾಯರು ನಕ್ಕು ಬಿಟ್ಟರು. "ಹಾಸ್ಯ ಮಾಡುತ್ತೀರಿ, ನೀವು" ಎಂದು ಸೀತಮ್ಮ ಎದ್ದು ಹೋಗಿಬಿಟ್ಟರು.

ಇಂದಿರೆಯು ಇವರ ಮಾತುಗಳನ್ನು ಕೇಳಿ ಮನಸ್ಸಿನಲ್ಲೇ ಆನಂದಪಟ್ಟಳು.

೨.

ಇಂದಿರೆಯನ್ನು ರಾಘುವೇಂದ್ರನಿಗೆ ಕೊಡುವುದು ನಿಶ್ಚಯವಾಯಿತು. ಶ್ರೀನಿವಾ ಸರಾಯರು ಮಗನು ಒಪ್ಪಿದರೆ ತನ್ನದೇನೂ ಅಡ್ಡಿ ಇಲ್ಲ. ಎಂದರು. ರಾಘವೇಂದ್ರನು ಒಪ್ಪದಿರುವನೆ? ಲಗ್ನವೂ ಸಾಂಗೋಪಾಂಗವಾಗಿ ನೆರವೇರಿತು. ಲಗ್ನದ ವರ್ಣನೆಯು ಅನವಶ್ಯಕ; ಏಕೆಂದರೆ ಲಗ್ನವನ್ನು ನೋಡದವರಾರು? ಆದರೆ ಇಂದಿರಾ—ರಾಘವೇಂದ್ರರ ಮದುವೆಯಲ್ಲಿ ಒಂದೇ ವಿಶೇಷ, ಲಾಡುಸಮಾರಾಧನೆಯಲ್ಲ! ಬೀಗರಹಾಡಲ್ಲ!! ಉರಟ ಣೆಯ ಕಾಲದಲ್ಲಿ ರಾಘವೇಂದ್ರನು, ತಾನು ಬೊಂಬಾಯಿ ಗವರ್ನರವರ ಪತ್ನಿಯಿಂದ ಬಹುಮಾನವಾಗಿ ಪಡೆದ ಚಿನ್ನದ ಪದಕಕ್ಕೆ ಸರವೊಂದನ್ನು ಮಾಡಿಸಿ ಇಂದಿರೆಯ ಕೊರಳಿಗೆ ಹಾಕಿದನು. ಅಷ್ಟೆ;

ಇದೆಲ್ಲಾ ನಡೆದು ಈಗ ನಾಲ್ಕು ವರ್ಷಗಳಾಗಿ ಹೋಯಿತು. ರಾಘವೇಂದ್ರನು ಪುನಃ ಪೂನೆಗೆ ಹೋಗಲೆ ಇಲ್ಲ. ಆದರೆ ಈಗ ಬೆಂಗಳೂರಿನಲ್ಲಿ ನೆಲಿಸಿರುವನು. ಸ್ವಂತ ಮನೆಯೊಂದನ್ನು ಮಾಡಿಕೊಂಡಿರುವನು. ಹೊರಗಿನ ಗೋಡೆಯ ಮೇಲೆ "ರಾಘವೇಂದ್ರರಾವ್, ಆರ್ಟಿಸ್ಟ (ಚಿತ್ರಗಾರ) ಎಂಬ ಹಲಗೆಯೊಂದು ಕಂಗೊಳಿಸುವುದು.

ತನ್ನನ್ನು ಹೆತ್ತ ತಾಯಿತಂಡೆಗಳನ್ನು ತನ್ನ ಬಳಿಯಲ್ಲೇ ಇಟ್ಟುಕೋಡು ಅವರಿಗೆ ಯಾವ ಕೊರತೆ ಇಲ್ಲದಂತೆ ಪ್ರೀತಿಯಿಂದ ನೋಡಿಕೊಳ್ಳುತಿರುವನು. ಅವರು ನಿತ್ಯವೂ ಅವನ ಗುಣಕ್ಕೆ ಆಶೀರ್ವದಿಸುತಿರುವರು. ಇಂದಿರಾ– ರಾಘವೇಂದ್ರರು ಒಬ್ಬರಿಗೊಬ್ಬರು ಪ್ರೀತಿಸುತಿರುವರೆಂದು ಹೇಳಬೇಕೆ.

ಅವರಿಗೀಗೊಂದು ಮಗು ಹುಟ್ಟಿದೆ. ಆದಕ್ಕೆ ಪ್ರೀತಿಯಿಂದ ಇಂದಿರೆಯು "ವೇಣುಗೋಪಾಲ"ನೆಂದು ಹೆಸರನ್ನಿಟ್ಟಿರುವಳು.

\+ + + + + + +

ಒಂದು ದಿನ ರಾಘವೇಂದ್ರನು ಮಲಗುವ ಮನೆಯ ಕಿಡಿಕೆಯ ಹತ್ತಿರ ನಿಂತು ಹೊರಗಿನ ಪ್ರಕೃತಿಯ ಸೌಂದರ್ಯವನ್ನು ನೋಡುತ್ತಾ ನಿಂತಿದ್ದನು. ಚಂದಿರನ ಕಿರಣಗಳು ಹಾಲು ಚೆಲ್ಲಿದಂತೆ ಬಿದ್ದಿದ್ದುವು. ವೇಣು ಗೋಪಾಲನು ಮಂಚದ ಮೇಲೆ ಆಡುತಿದ್ದನು.

ಇಂದಿರೆಯು ಮೆಟ್ಟಲು ಹತ್ತಿ ಬಂದಳು. ಬಾಗಿಲು ತೆರೆಯಲು ಗಾಳಿಯ ಪ್ರವೇಶವಾಗಿ ಸೊಳ್ಳೆ ಪರದೆಯು ಮಗುವನ್ನು ಚೆನ್ನಾಗಿ ಕಾಣಿಸದಂತೆ ಹೊದಿಸಿತು.

ಇಂದಿರೆಯು ಬಂದವಳು ವೇಣುಗೋಪಾಲೂನನ್ನು ಕಾಣದೆ ಸುತ್ತಲೂ ನೋಡಿದಳು. ಮೂಲೆಯಲ್ಲಿದ್ದ ಮೇಜಿನ ಮೇಲೆ ಮಗು ನಗುತಲಿದ್ದಿತು.

" ಕಂದಮ್ಮಾ ಬಾ, ಇನ್ನೂ ಮಲಗಿಕೊಳ್ಳುವುದಿಲ್ಲವೆ. ಬಾ, ಎಂದು ಪ್ರೇಮದಿಂದ ಎತ್ತಿಕೊಳ್ಳುವುದಕ್ಕೆ ಕೈ ನೀಡಿ, ಎರಡು ಹೆಜ್ಜೆ ಮುಂದಕ್ಕಿಟ್ಟಳು. ವೇಣು ಇನ್ನೂ ನಗುತ್ತಲೆ ಇದ್ದಿತು. ಇನ್ನೂ ಎರಡು ಹೆಜ್ಜೆ ಮುಂದಿಟ್ಟು ಮೇಜಿನ ಬಳಿ ನಿಂತಳು. ರಾಘವೇಂದ್ರನು ನಗುವನ್ನು ಬಿಗಿ ಹಿಡಿಯಲಾರದೆ ಗಟ್ಟಿಯಾಗಿ ನಕ್ಕು ಬಿಟ್ಟನು. ಇಂದಿರೆಯು ಚಮಕಿತಳಾಗಿ ಹಿಂತಿರುಗಿ ನೋಡಿದಳು. ವೇಣುಗೋಪಾಲನು ತಂದೆಯ ಪಕ್ಕದಲ್ಲಿ ಮಂಚದ ಮೇಲೆ ಕುಳಿತು ನಗುತಲಿದ್ದನು. ಆಶ್ಚರ್ಯದಿಂದ ಹಿಂತಿರುಗಿ ನೋಡಿದಳು. ಅಲ್ಲಿಯೂ ಚಿತ್ರಗತ ವೇಣುಗೋಪಾಲು ನಗುತಲಿದ್ದಿತು. ತನ್ನ ಮರುಳುತನಕ್ಕೆ ತನಗೆ ನಗು ಬಂದು ಬಿಟ್ಟಿತು. ಮುಗಳ್ನಗೆ ನಕ್ಕಳು. ಹೊರಗೆ ಕುಮುದ ಬಾಂಧವನು ಹುಸಿನಗು ನಕ್ಕನು. ರೋಹಿಣಿಯು ನಕ್ಕಳು, ಆತನ ಅನುಚರರು ನಕ್ಕರು. ಮಂದಮಾರುತನು ಸುಳಿಸುಳಿರೆಂದು ಬಂದು ನಕ್ಕು ಹೊರಟು ಹೋದನು.

ಇಂದಿರೆಯು ಪ್ರೇಮದಿಂದೊಂದು ಮುತ್ತನ್ನು ತನ್ನ ಮುದ್ದು ಮಗುವಿನ ಬಾಯಿಗೆ ಕೊಟ್ಟಳು. ಅದೇ ಸಮಯವೆಂದು ಆಕೆಯ ಗುಲಾಬಿ ಹೂವಿನಂತೆ ಹೊಳೆಯುತಿದ್ದ ಕೆನ್ನೆಗೆ ಒಂದು—ಒಂದೇ ಒಂದು ಮುತ್ತನ್ನು ರಾಘವೇಂದ್ರನು ಇತ್ತನು.

ಯಾರ ಅದೃಷ್ಟವನ್ನು ಯಾರು ಬಲ್ಲರು ?

**ಶಾಂತಿಃ ಶಾಂತಿಃ ಶಾಂತಿಃ**

ಓಂ ಸಲ್

# ಸ್ವಧರ್ಮ

॥ ಜಯಂ ಭದ್ರಂ ಶುಭಂ ಮಂಗಲಮ್ ॥

ವರ್ಷ.-೩. | ಶಕೆ ೧೮೪೮ ಅಕ್ಷಯ ಸಂ॥-ಫಾಲ್ಗುಣ | ಅಂ.-೧೨.

## ನೋಂಪಿ.

ಹತ್ತೂತ್ತಿ ನಿಟ್ಟಗೆ
ಹೊತ್ತಿಸಿ ಉರಿಯುನು
ನಿತ್ತೆಸು ನಾ ಕಿತ್ತಡಿಯಾಗಿ ॥
ಹತ್ತೂತ್ತಿ ನಿಟ್ಟಗೆ
ಹೊತ್ತಿಸಿ ಉರಿಯುನು
ಕುತ್ತೆನು ನಾ ಮಾಸತಿಯಾಗಿ ॥೧॥

ಪಡೆವರು ಸರಿಯೇ
ಮುಡಿವರು ಸರಿಯೇ
ಬಡಿಸುವೆ ಹರಣವನೆಡೆಯಾಗಿ ॥
ಪಡೆದರು ಸರಿಯೇ
ಮುಡಿದರು ಸರಿಯೇ
ಮುಡಿಸುವೆ ಮೈಮಲ್ಲಿಗೆಯಾಗಿ ॥೨॥

ಮನಸಿನ ಮಾತಿದು
ಮನದಂತಾದರೆ
ಮನುವಿನ ಮಗ ನಾನಾಗುವೆನು ॥
ಮನಸಿನ ಮಾತಿದು
ಮನದಂತಾದರೆ
ಪ್ರನವ ಸುಮಂಗಳೆಯಾಗುವೆನು ॥೩॥

ನೆನಸಿನ ಕೋರಿಕೆ
ಕನಸೇ ಆದರೆ
ತನು ನಿಸಿದಿಗೆಗಲ್ಲಾಗುವದು ॥
ನೆನಸಿನ ಕೋರಿಕೆ
ಕನಸೇ ಆದರೆ
ಮನ ಮಾಸ್ತಿಯ ಕಲ್ಲಾಗುವದು ॥೪॥

ಕಲ್ಲಾದರು ಸರಿ
ಹುಲ್ಲಾದರು ಸರಿ
ಬಲ್ಲಂದದ ಬಳಲಿಕೆ ಸಾಕು ॥
ಕಲ್ಲಾದರು ಸರಿ
ಹುಲ್ಲಾದರು ಸರಿ
ಎಲ್ಲಂದದ ಏಳಿಕೆ ಸಾಕು ॥೫॥

—ಚೆನ್ನಮಲ್ಲ.

ಸವಿ:-[ನೋಂಪಿ=ವ್ರತ; ನಿತ್ತೆನು=ನಿಂತೆನು; ಕಿತ್ತಡಿ=ಋಷಿ; ಕುತ್ತೆನು=ಕುಳಿತೆನು; ನಿಸಿದಿಗೆಗಲ್ಲು=ಪ್ರಾಚೀನ ಕಾಲದಲ್ಲಿ ಜೈನ ಯತಿಗಳು ಪ್ರಾಯೋಪವೇಶನ (ಉಪವಾಸ) ದಿಂದ, ಕೂತು ದೇಹವಿಟ್ಟ ಸ್ಥಳದಲ್ಲಿ ಅವರ ಸ್ಮರಣಾರ್ಥವಾಗಿ ಊರಿಸಿದ ಕಲ್ಲು (ನಿಷೀದ=ಕೂಡು) ; ಮಾಸತಿಗಲ್ಲು=ಪ್ರಾಚೀನ ಕಾಲದ ಪತಿವ್ರತೆಯರು ತಮ್ಮ ಪ್ರಾಣನಾಥರೊಡನೆ ಸಹಗಮನ ಸೇರಿದ ಸ್ಥಳದಲ್ಲಿ ಆ ಮಹಾಸತಿಯರ ನೆನಪಿಗೆಂದು ನಿಲಿಸಿದ ಕಲ್ಲು. ಇವೆರಡೂ ಕರ್ನಾಟಕ ಗತವೈಭವದ ವೈಶಿಷ್ಟ್ಯಗಳು ]

ನಮ್ಮ ಜೀವನವು ಜ್ಯೋತಿರ್ಮಯವಾಗಬೇಕಾದರೆ ಹಾಗೆ ಆಗಲೆಂದು ನಮ್ಮ ಹೃದಯದಲ್ಲಿ ಸಂಕಲ್ಪವುಂಟಾಗಬೇಕು. ಹಾಗೂ ನಮ್ಮ ನಮ್ಮ ಜೀವಿತದಲ್ಲಿ ಅಂಥ ಕೆಲವು ರಸಪ್ರಸಂಗಗಳು ಬಂದೇ ಬರುವವು. ಆ ಪ್ರಸಂಗಗಳ ಹೊಟ್ಟೆಯೊಳಗಿಂದಲೇ ಹೊಸದೊಂದು ಶಕ್ತಿಯು ಹುಟ್ಟಿ ಬರುವದು. ಅಂದಿನಿಂದ ಜೀವನವೇ ಒಂದು ವ್ರತ.

ಹೀಗೆ ವ್ರತಸ್ಥನಾಗಿ ಕವಿಯು ಹಾಡಿದ ಹಾಡಿದು. ಸಂಕಲ್ಪದಿಂದ ಕಲ್ಪಕಶಕ್ತಿ ಹುಟ್ಟುವಾಗ ಹೋಮಾಗ್ನಿಗಳಿಗೆ ಸಮಾನವಾದ ವೀರ್ಯವೂ ಸಾಲದೆ ದಶಾಗ್ನಿಗಳ ವೀರ್ಯ ಉದಯಿಸಲೆಂದು ಆ ವ್ರತಸ್ಥ ಋಷಿಯು ಉದ್ಘೋಷ. ಮಹಾದೇವನ ಮಹಾಸತಿಯಾಗಲೆಂದು ಈ ಋಷಿಯ ಮನೀಷೆ.

ಈ ಹೊತ್ತಿನಲ್ಲಿ ಏನು ಆದೀತೆಂಬುದರ ಅರಿವಿಲ್ಲ. ಮನಸಿನಲ್ಲಿದ್ದಂತೆ ಆಗಿಯೇ ತೀರುವೆನೆಂಬ ಸದಾಗ್ರಹದ ವಿನಾ ಮತ್ತಾವದೂ ಗೊತ್ತಿಲ್ಲ. ಇಂಥ ಆಗ್ರಹ ತೊಟ್ಟಿದ್ದರೂ ಆ ದೇವ ದೇವನ ಮೇಲೆ ಎಲ್ಲ ಭಾರ. ಮಾಡುವದೆಲ್ಲಾ ಆತನಿಗೇ ನೈವೇದ್ಯ.

ಗೆಲವು ಬಂದರಂತೂ ಮುಗಿದೇ ಹೋಯ್ತು. ಸೃಷ್ಟಿಯು ಉಂಟಾಗಲು ಬೇಕಿರುವ ಪುರುಷಶಕ್ತಿಯೂ ಪ್ರಕೃತಿಶಕ್ತಿಯೂ ಇಬ್ಬರೂ ತನ್ನನ್ನು ಹರಿಸುವರೆಂದು ಆ ವ್ರತಸ್ಥನ ವ್ರತಗಾನ.

ಇನ್ನು ಸೋಲುವದೂ ಸಣ್ಣ ಮಾತಲ್ಲ. ಅದೊಂದು ದೊಡ್ಡ ತ್ಯಾಗ. ಹಿಂದಿನ ಕನ್ನಡ ನಾಡಿನ ಯತಿಗಳೂ ಸತಿಯರೂ ತಮ್ಮ ತಮ್ಮ ಪ್ರಾಣದೇವರು ದೊರೆಯಲೆಂದೇ ಹಾಗೆ ಪ್ರಾಣ ತೊರೆದರು. ಪ್ರಾಣ ತೊರೆದದ್ದೊಂದು ಐಹಿಕರೀತ್ಯಾ ಸೋಲೆನಿಸಿದರೂ ಅಂತಃಕರಣದ ರೀತ್ಯಾ ತಮ್ಮತಮ್ಮ ಪ್ರಾಣದೇವರು ದೊರೆತಂತೆಯೇ. ಕನ್ನಡ ನಾಡಿನ ಈ ನಿಸಿದಿಗಲ್ಲುಗಳೂ ಈ ಮಾಸತಿಗಲ್ಲುಗಳೂ, ಸಂಕಲ್ಪದಲ್ಲಿದ್ದದ್ದು ಇಲ್ಲಿ ಸಿಗದಿದ್ದರೆ ಎಲ್ಲಿಸಿಗುವದೋ ಅಲ್ಲಿಂದ ಪಡೆದು ಬರೋಣವೆಂಬದರ ಕುರುಹುಗಳು.

ಹೀಗೆ ಈ ಬಾಳ್ವೆಯ ನೋಂಪಿ(ಜೀವನ ವ್ರತ)ಯು ನೀಗಿ ಬರಬೇಕಾದರೆ ಬೇಕಾದ ಬಳಲಿಕೆ ಬರಲಿ. ಅವೆಲ್ಲವೂ ಬೇಕು. ಕಲ್ಲಾಗಲಿ ಹುಲ್ಲಾಗಲಿ ಎಲ್ಲವೂ ಏಳಿಗೆಯಲ್ಲಿಯೇ ಕೊನೆಗೊಳ್ಳುವವು. ಅಥವಾ, ಜೀವನವ್ರತದ ಸಂಕಲ್ಪದ ಮುಂದೆ ಈ ಬಳಲಿಕೆ ಏಳಿಕೆಗಳಿಗೆ ಬೆಲೆಯಾದರೂ ಎಲ್ಲಿ? ಆ ಸಂಕಲ್ಪಿತ ಧ್ಯೇಯವೊಂದೇ ನಿಜ. ಇಂತಿದು ಬಾಳ್ವೆಯ ನೋಂಪಿಯ ಹಾಡಿನ ಸವಿ.

— ಸವಿದ 'ನಲ್ಮೆಸಾಸ'

# ಹೋಗಿಬರುವೆವು; ಮಮತೆ ಚೆನ್ನಾಗಿರಲಿ.

೧. ದೇವರ ದಯದಿಂದ ಗುಂಪಿನವರು ಕೈಕೊಂಡ ಸ್ವಧರ್ಮವು ಕರ್ನಾಟಕ ಸಮಾಜಪುರುಷನ ಸೇವೆಯನ್ನು ಒಂದು ವರ್ಷ ಮಾಡಿದಂತಾಯಿತು, ಕನ್ನಡ ಸಮಾಜ ಪುರುಷನು ಎಚ್ಚತ್ತು ತನ್ನನ್ನು ತಾನರಿತು ಶಾಂತಿಪುಷ್ಟಿತುಷ್ಟಿಗಳಿಂದ ಕಳೆದುಂಬಿದವನಾಗಿ, ಗತವೈಭವವನ್ನು ಪಡೆದು, ಭಾರತೀಯ ಸಮಾಜಪುರಷನಿಗೆ ಹೊಸ ಹಾದಿಯನ್ನು ತೋರಿಸಬೇಕೆಂಬುದೇ ಸ್ವಧರ್ಮದ ಗುರಿಯು. ಈ ಧೋರಣಕ್ಕನುಸರಿಸಿಯೇ ಸೇವೆ ಮಾಡಲು ಗುಂಪು ಮುಂದಡಿಯಿಟ್ಟಿದೆ. ತನ್ನ ಶಕ್ತಿ ಮೀರಿದ ಉತ್ಸಾಹ ಶಕ್ತಿಗಳಿಂದ ಜನಸೇವೆಯನ್ನು ಮಾಡಿದೆ. ಸ್ವಧರ್ಮವು ಈ ವರ್ಷ ಮಾಡಿದ ಕಾರ್ಯವು ಎಷ್ಟರ ಮಟ್ಟಿಗೆ ನೆರವೇರಿದೆ ಎಂಬುದನ್ನು ವಾಚಕರೇ ವಿಚಾರಿಸಿಕೊಳ್ಳಲಿ. ಮನಸೃಷ್ಟಿಯು ಜಡಸೃಷ್ಟಿಯಿಂದ ಬಹು ದೂರವಿರುವದು. ಮಾನವನು ಮನೋಲೋಕದಲ್ಲಿ ಕಟ್ಟಿದ ಅರಮನೆಗಳು ಜಡಸೃಷ್ಟಿಯಲ್ಲಿ ನಿರ್ಮಾಣವದು ಬಹು ಕಠಿಣವಿದೆ. ಇದು ಪ್ರಕೃತಿಯ ಧರ್ಮವಾಗಿದೆ. ನಾವು ಎಷ್ಟೇ ಉದಾತ್ತ ತತ್ವಗಳನ್ನು ಇಟ್ಟುಕೊಂಡರೂ ಅವುಗಳು ಸಂಪೂರ್ಣವಾಗಿ ನಡೆನುಡಿಗಳಲ್ಲಿ ಒಮ್ಮೆಲೇ ಇಳಿಯುವದು ಕಠಿಣವಿದೆ; ತತ್ವಗಳ ವಿಚಾರವಾಗಬೇಕು, ಧ್ಯಾನವಾಗಬೇಕು, ಆಚಾರವಾಗಬೇಕು, ನಿದಿಧ್ಯಾಸವಾಗಬೇಕು, ಆ ಮೇಲೆ ಸಾಕ್ಷಾತ್ಕಾರವಾಗುವದು. ಈ ರೀತಿಯಿಂದ ಗುಂಪಿನವರು ಈ ವರ್ಷ ಮೊದಲನೇ ಮೆಟ್ಟನ್ನು ಹತ್ತಲು ಯತ್ನಿಸಿರುವರು. "ಕೊಡದೊಳಗೆಷ್ಟು ನಿಲ್ವುದು ಸಮುದ್ರಜಲಂ, ವರಕಾಂಚನಾದ್ರಿ ಕನ್ನಡಿಯೊಳಗೆಷ್ಟು ತೋರ್ಪುದು" ಎಂಬಂತೆ, ಸ್ವಧರ್ಮದ ಉದಾತ್ತವಾದ ತತ್ವರಾಶಿಗಳೆಲ್ಲ ಈ ವರ್ಷ ನಮ್ಮಿಂದ ಪೂರ್ಣವಾಗಿ ಆಗುವದು ಶಕ್ಯವಿಲ್ಲ.

೨. ಗುಂಪಿನವರ ವಿಚಾರಗಳೂ ನಡೆಯುವ ರೀತಿಯೂ ಹೊಸವಿರುವದರಿಂದ ಆ ವಿಚಾರಗಳು ಜನರಿಗೆ ಗಡಚಾಗಿರಬಹುದು. ಜನರ ಮನಃಪ್ರವೃತ್ತಿಯು ಹೊಸ ವಿಚಾರಗಳ ಕಡೆಗೆ ಎಳೆಯಬೇಕೆಂದೇ ಗುಂಪಿನ ಪ್ರಯತ್ನವು. ಸ್ವಧರ್ಮವು ಜನರಿಗೆ ತಿಳಿಯುವದಿಲ್ಲ ತಿಳಿಯುವದಿಲ್ಲವೆಂದೆನ್ನುವ ಮೂಲ ಕಾರಣವು ಇದೇ ಎಂದು ನಮಗೆನಿಸುತ್ತದೆ. ಸದ್ಯದ ಸಾಮಾನ್ಯಸಮಾಜದಲ್ಲಿ ತಾತ್ವಿಕ ವಿಚಾರ ಮಾಡುವ ಶಕ್ತಿಯೇ ಕಡಿಮೆಯಾಗಹತ್ತಿದೆ. ( Light Literature ) ಆಳ ವಿಚಾರಗಳಿಲ್ಲದ (ವಿಚಾರಗಳೇ ಇಲ್ಲದ) ಕತೆ, ಕಾದಂಬರಿ ಮೊದಲಾದವುಗಳನ್ನೇ ಓದುವ ಪ್ರವೃತ್ತಿಯುಂಟಾಗತೊಡಗಿದೆ, ಇದು ಪ್ರಗತಿಯ ಲಕ್ಷಣವಲ್ಲವಾದುದರಿಂದ ಸ್ವಧರ್ಮವು ಹೊಸಹಾದಿಯನ್ನು ಹಿಡಿಯಲು ಹವಣಿಸುತ್ತದೆ. ಈ ವರ್ಷದ ಸ್ವಧರ್ಮದ ವಾಚಕರಿಗೆ ಅದರ ಅನುಭವವು ಬಂದಿರಲು ಸಾಕು. ಸ್ವಧರ್ಮವು, ಅರ್ಥಗರ್ಭಿತಗಳೂ ಹೊಸವೂ ಆದ ಕವಿತೆಗಳನ್ನು ಪ್ರಕಟಿಸಿ, ಅವುಗಳು ಜನಸಾಮಾನ್ಯಕ್ಕೂ ತಿಳಿಯುವಂತೆ ಮಾಡಿ,

ತನ್ನ ವೈಶಿಷ್ಟ್ಯವನ್ನಿಟ್ಟುಕೊಂಡಿದೆ. ಎಲ್ಲ ಜನರಿಗೂ ತಿಳಿಯುವಂತೆ ಉಪನಿಷತ್ತಿನ ವಿಚಾರಗಳು, ಪೂರ್ಣಯೋಗ ಮೊದಲಾದ ತತ್ವಜ್ಞಾನವಿಷಯಗಳನ್ನು ಹೇಳಲು ಯತ್ನಿಸಿದೆ. ( ಶ್ರೀ. ರಾನಡೇ ರಾಮಭಾವುಗಳ ಉಪನಿಷತ್ತುಗಳ ಮೇಲಿನ ಗ್ರಂಥವು ಬೇಗನೆ ಕನ್ನಡದಲ್ಲಿ ಪ್ರಸಿದ್ಧವಾಗುವದು. ಈ ಕಾರ್ಯದಲ್ಲಿ ಗುಂಪಿನವರ ಅಂಗವೂ ಇದೆ.) ಸದ್ಯದ ಸಮಾಜದ ಕೀಳ ತತ್ವಜ್ಞಾನಗಳನ್ನೂ ನೈತಿಕ ಅಧಃಪಾತವನ್ನೂ ಜನರಿಗೆ ತಿಳಿಸಬೇಕೆಂದು ಸುಧಾರಣೆ, ಆಚಾರ ವಿಚಾರ, ಮತಗಳ ಪುನರುಜ್ಜೀವನ, ಸಾಯೋಜ್ಯ ಮೊದಲಾದ ಬರಹಗಳಿಂದ ಯತ್ನಿಸಿದೆ. ಹೀಗೆ ಸಮಾಜಪುರುಷನನ್ನು ಜಾಗ್ರತಗೊಳಿಸುತ್ತ ಅವನು ಒಮ್ಮೆಲೆ ಬೆದರಬಾರದೆಂದೂ, ಇದೇ ವಿಚಾರಗಳನ್ನು ಚಿಕ್ಕ ಮಕ್ಕಳಿಗೆ, ಔಷಧದ ಗುಳಿಗೆಗಳನ್ನು ಸಕ್ಕರಿಯಲ್ಲುರುಳಿಸಿ, ಕೊಡುವಂತೆ, ಕತೆಗಳ ರೂಪದಿಂದ ಕೊಡಲು ಯತ್ನಿಸಿದೆ. ಈ ಉಪಾಯವು ಯಶಸ್ವಿಯಾಗಿದೆ ಎಂದು ಹೇಳಲು ಅಡ್ಡಿಯಿಲ್ಲ. ಯಾಕಂದರೆ ಸ್ವಧರ್ಮದಲ್ಲಿಯ ಕತೆಗಳನ್ನು ಬಿಡಿಯಾಗಿ ಮುದ್ರಿಸಿದ ಸಾವಿರ ಪ್ರತಿಗಳು ಹಾ, ಹಾ ಅನ್ನುವದರಲ್ಲಿ ಮುಗಿದು ನಮಗೆ ಕತೆಗಳು ಬೇಕಾಗಿವೆ, ಕಳಿಸಿ ಕೊಡಿರಿ, ಕಳಿಸಿಕೊಡಿರಿ ಎಂಬ ಜನರ ಬೇಡಿಕೆಯು ಅತ್ಯಂತವಾಗಿದೆ. ಇಷ್ಟೇ ಅಲ್ಲ. ಸ್ವಧರ್ಮವು ಗುಂಪಿನ ವಿಚಾರಗಳನ್ನು ಬೈಲಿಗೆಳೆಯುವ ವಿಸರ್ಜನ ವೆಂಬ ನಾಟಕವನ್ನು ಪ್ರಕಟಿಸಿದೆ. ಅದರ ವಿಸ್ತಾರವಾದ ಪ್ರಸ್ತಾವನೆಯೂ ರವೀಂದ್ರ ಭಾವಪಟವೂ ಹೊಸ ವರುಷದ ಮೊದಲನೇ ಸಂಚಿಕೆಯಲ್ಲಿ ಪ್ರಕಟವಾಗಬಹುದು. ಹೀಗೆ ಸ್ವಧರ್ಮವು ತತ್ವಜ್ಞಾನಗಳಿಂದಲೂ, ಸಮಾಜಪುರುಷನ ವರ್ಣನೆಯಿಂದಲೂ ಹೊಸ ವಿಚಾರಗಳಿಂದಲೂ, ಕತೆ, ಕವಿತೆ, ನಗಚಾಟಿಕೆ, ನಾಟಕಗಳಿಂದಲೂ ಕೂಡಿದ ಸುಮಾರು ೧೨೫ ಲೇಖಗಳಿಂದ ಸಮಾಜಪುರುಷನನ್ನು ಪೂಜಿಸಿದೆ. ಈ ಸೇವೆಯು ಜನಪ್ರಿಯವಾಗಲೆಂದು ದೇವರಲ್ಲಿ ಪ್ರಾರ್ಥಿಸುತ್ತೇವೆ.

೩. ಗುಂಪಿನವರು ತಮ್ಮ ವಿಚಾರಗಳನ್ನು ಸ್ವಧರ್ಮದ ಮೂಲಕ ಹರಡಹತ್ತಿರುವದರಿಂದ ಬೇರೆ ಬೇರೆ ಕಡಿಗೆ ಗುಂಪುಗಳಾಗಹತ್ತಿರುವವೆಂದೂ, ಅವುಗಳು ಗೆಳೆಯ ಗುಂಪಿನ ಸಂಗಡ ಬಳಿಕೆಯನ್ನಿಡಲು ಅಪೇಕ್ಷಿಸುತ್ತಿರುವವೆಂದೂ ತಿಳಿಸಲು ಆನಂದವಾಗುತ್ತದೆ. ಈ ಎಲ್ಲ ಗುಂಪುಗಳ ಸಂಗಡ ಬಳಿಕೆಯನ್ನಿಡಲು ಗೆಳೆಯರ ಗುಂಪು ಆನಂದದಿಂದ ಮುಂದಕ್ಕೆ ಕೈ ಚಾಚುತ್ತಿದೆ. ಅಂತಃಕರಣದ ಎಳೆಗಳಿಂದ ಬೇರೆ ಬೇರೆ ಗುಂಪುಗಳನ್ನು ಒಂದಿಸಿ ಕನ್ನಡ ನಾಡನ್ನೇ ತನ್ನ ಬಳಗದವರನ್ನಾಗಿ ಮಾಡಿ ಕೊಳ್ಳಲು ಗೆಳೆಯರ ಗುಂಪು ಅತ್ಯಂತ ಆತುರ ಉಳ್ಳದಾಗಿದೆ. ಪ್ರತ್ಯಕ್ಷ ಸಂಬಂಧವನ್ನು ಆ ಆ ಗುಂಪುಗಳೊಡನೆ ತರುವದು ಈ ವರ್ಷ ಸಾಧ್ಯವಾಗಲಿಲ್ಲ. ಅವರೆಲ್ಲರೂ ತಮ್ಮ ತಮ್ಮ ಊರುಗಳಲ್ಲಿ ಗೆಳೆತನದಿಂದ ಬೆಳೆಯಬೇಕೆಂದೂ ಮುಂದೆ ಒಂದು ದಿನ ಪ್ರತ್ಯಕ್ಷ ಸಂಬಂಧ ಬಂದೇ ಬರುವದೆಂದೂ ಸೂಚಿಸುತ್ತೇವೆ.

೪. ಕರ್ನಾಟಕ ಮಹಾವಿದ್ಯಾಲಯವು ಈ ಆರು ವರ್ಷ ಮಾಡಿದ ದನ ಸೇವೆಯು ಕನ್ನಡಿಗರಿಗೆ ಗೊತ್ತೇಇದೆ. ರಾಷ್ಟ್ರೀಯತ್ವವನ್ನು ಬೀರುವ, ಪವಿತ್ರಾತ್ಮ

ಣೆಯನ್ನುಂಟು ಮಾಡುವ, ಧೀರ ವೃತ್ತಿಯನ್ನೂ ಪುಷ್ಟದೇಹವನ್ನೂ ನೋಡಲು ಯತ್ನಿ ಸುವ ಉಪಯುಕ್ತವಾದ ಇಂಥ ಒಂದು ಸಂಸ್ಥೆಯು ೨ ಕೋಟಿ ಜನಸಂಖ್ಯೆಯುಳ್ಳ ಕರ್ನಾಟಕದಲ್ಲಿ ವಿದ್ಯಾರ್ಥಿಗಳಿಲ್ಲದೆ ನಿಲ್ಲಿಸಲ್ಪಟ್ಟದ್ದು ಕೇಳಿ ಅತ್ಯಂತ ವ್ಯಸನವಾಗುತ್ತದೆ. ಕನ್ನಡ ಸಮಾಜಪುರುಷನು ಇನ್ನೂ ಎಂಥ ಗಾಢ ನಿದ್ರೆಯಲ್ಲಿರುವನೆಂಬುದು ಇದರಿಂದ ಸ್ಪಷ್ಟವಾಗುತ್ತಿದೆ. ಮಹಾವಿದ್ಯಾಲಯದ ಕಡೆಯ ವರದಿಯು ಈ ಸಂಚಿಕೆಯಲ್ಲಿ ಪ್ರಸಿದ್ಧವಾಗಿದೆ. ಎಲ್ಲರೂ ಓದಬೇಕೆಂದು ಬಿನ್ನವಿಸಿ ಕೊಳ್ಳುತ್ತೇವೆ. ಸ್ವಧರ್ಮವು ನಮಗೆ ಸಾಲಿಯವರಿಂದ ಸಿಕ್ಕಿದ್ದರಿಂದ ಈ ವರದಿಯನ್ನು ಕೊಟ್ಟಿದೆ.

೫. **ಆನಂದದ ಸುದ್ದಿ:—** ನಮ್ಮ ಗುಂಪಿನಲ್ಲೊಬ್ಬರಾದ ಹಲಸಂಗಿಯ ಚೆನ್ನಪ್ಪನವರಿಗೆ ಬೆಂಗಳೂರ ಕಲಾಪ್ರದರ್ಶನದಲ್ಲಿ 'ಉಷೆ'ಯೆಂಬ ಚಿತ್ರಕ್ಕೆ ಮೊದಲ ಮೆಚ್ಚು ಸಿಕ್ಕಿದೆಯೆಂದು ತಿಳಿಸಲು ಸಂತೋಷವಾಗುತ್ತದೆ.

೬. ವಿಸರ್ಜನವನ್ನು ಕನ್ನಡಿಸಿದ್ದಕ್ಕೆ ಶ್ರೀ ರವೀಂದ್ರ ಗುರುದೇವರ ಅಪ್ಪಣೆಯು ಬರಹದಲ್ಲಿ ದೊರೆತಿದೆಯೆಂದು ಶಾಂತಿನಿಕೇತನಸ್ಥರೂ ನಮ್ಮ ಗೆಳೆಯರಲ್ಲೊಬ್ಬರೂ ಆದ ಶ್ರೀ ಕೃಷ್ಣಕುಮಾರರು ಇದೇ ತಂತಿಯನ್ನು ಕಳಿಸಿರುವರು. ಭಾಷಾಂತರದ ಪ್ರಾರಂಭಕ್ಕೆ ನಿಕೇತನದ ಪುಸ್ತಕಭಾಂಡಾರಿ ( Librarian ) ಗಳ ಬಾಯ ಅಪ್ಪಣೆ ದೊರೆತಿತ್ತು. ಈಗ ಸ್ವತಃ ಗುರುದೇವರ ಅಪ್ಪಣೆಯು ದೊರೆತಿದೆ. ವಿಸರ್ಜನದ ವಿಸ್ತೃತ ಪ್ರಸ್ತಾವನೆಯನ್ನು ಮುಂದಿನಸಲ ಬರೆದು ಈ ಕೃತಿಯನ್ನು ಆ ಗುರುದೇವರಿಗೆ ಅರ್ಪಿಸುವದಿದೆ.

೭. ಇನ್ನು ನಮ್ಮ ದುಡ್ಡಿನ ಬಗ್ಗೆಯ ಮಾತುಗಳನ್ನು ಬಣ್ಣದ ಹಾಳೆಯಲ್ಲಿ ಮುದ್ರಿಸಿದೆ. ದಯವಿಟ್ಟು ಓದಬೇಕು.

೮. ಶ್ರೀಕೃಷ್ಣನು ಪಾರ್ಥನನ್ನು ಮುಂದು ಮಾಡಿ, ತಾನೇ ನಿಂದು ನಲಿದಾಡಿ ದಂತೆ, ಗುಂಪಿನವರು ನನ್ನನ್ನು ಮುಂದುಮಾಡಿ, ತಾವೇ ನಿಂದು ನಲಿದಾಡಿದ್ದಾರೆ, ನನ್ನಿಂದ ಸೇವೆಗೈಸಿದ್ದಾರೆ. ಇದಕ್ಕಾಗಿ ಗುಂಪಿಗೆ ಕೃತಜ್ಞನಾಗಿದ್ದೇನೆ. ಗುಂಪಿನ ವಿರಾಟಸ್ವರೂಪಿಯಾದ ಪರಮಾತ್ಮನಿಗೆ ನನ್ನ ಈ ಅಲ್ಪಸೇವೆಯನ್ನು ಅರ್ಪಿಸುತ್ತೇನೆ. ಮುಂದಿನ ವರುಷ ಕೃ. ಶ್ರೀ. ಬೆಟಗೇರಿ ಹಾಗೂ ಹ. ಬ. ಕೊಣ್ಣೂರ ಇವರು ಸಂಪಾದಕರೂ, ನಾನು ಪ್ರಕಾಶಕನೂ, ಬುರ್ಲಿಯವರು ವ್ಯವಸ್ಥಾಪಕರೂ ಆಗಬೇಕೆಂದು ಗುಂಪಿನ ಆಜ್ಞೆ. ಎಂದಿನಂತೆ ಮುಂದಿನ ವರ್ಷವೂ ಎಲ್ಲರೂ ಸಹಾಯಮಾಡಬೇಕೆಂದು ಪ್ರಾರ್ಥನೆಯದೆ.

ವಾಚಕಮಹಾಶಯರೇ! ಹೋಗಿಬರುವೆವು, ಮಮತೆಯು ಚೆನ್ನಾಗಿರಲಿ.

ತಮ್ಮ

ದತ್ತಾತ್ರೇಯ ರಾಮಚಂದ್ರ ಬೇಂದ್ರೆ

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

## ಕರ್ನಾಟಕದ ಕಡುಗಲಿಯಾದ
## ಹಂಪಿಯ ಹನುಮರಾಯನ ಹುರುಪಿನ ತೆರೆಗಳು.

---

### ತೆರೆ ೧.

ಹನುಮಂತನು, ಹುಟ್ಟುತಲೇ ಹಸಿವೆಯ ಬಳಲಿಕೆಯಿಂದ, ಹೊತ್ತಿಗೆ ಹಣ್ಣೆಂದು:—

"ಹೊಟ್ಟೆ ಬಲು ಹಸಿದಿಹುದು ಹಿಂಗಿಸಮ್ಮಾ ತಾಯೆ ! ।
ಕೊಟ್ಟರೂ–ಅಮ್ಮಿಯನ್ನಿಟ್ಟರೂ–ಜೇಂಬೆರಳು, ॥
ಹೊಟ್ಟೆ ತುಂಬದು–,ಹಲ್ಗೆ–ಹತ್ತದದು– ನಾಲಿಗೆಗೆ, ಮುಟ್ಟೆಯೂ–ಮುಟ್ಟದಂತೆ ॥೧॥

"ಕೊಡ ಹಾಲು ಕುಡಿಯಗೊಡು ! ಇಡಿಜೇನು ಚೀಪಗೊಡು !!
ಮಡಲಿಂದ ಬಿಡು, ! ತಡೆಯೆ ! ಹಾರಿಹರಿಯುವೆ ನೋಡು !!
ಮೂಡಣದಿ ಪಾಡಾದ–ತೋರ–ಹಣ್ಣೊಂದುಂಟು! ತೀಗುವೆನು ತಿಂದುಕೊಂಡು! ॥೨॥

"ಕಡಿದಿಲ್ಲ ಗಿಳಿಗಡಣ ! ಮುರಿದಿಲ್ಲ ಮೀಸಲವ !!
ಎಡೆಬಿಡದೆ ಸೊನೆಸೂಸಿ–ಸೂಸಿ ಹರಿದಾಡುವದು !
ಕುಡಿವೆಬಿಡು ! ತಣಿಯಗೊಡು ! ನನಗೆಂದೆ ತೂರಿರುವನಾ ನನ್ನ
ಪ್ರಾಣದೇವ !!" ॥೩॥

ಎಂದು, ಹಸಿದು ಹುರುಪಿನ ಹುರಿವಾಡುತ್ತಿರುವ ಮಗನಿಗೆ, ಹಣ್ಣು ಹಂಪಲ ತರಲೆಂದು, ಬಾಲ ಮಾರುತಿಯ ತಾಯಿಯು ಕಣ್ಮರೆಯಾಗಲು, ಇತ್ತ—

ಎಳೆಗಾಳಿ ಸೋಂಕಿರುವ ಬೂರಲದ ಹೂವಂತೆ !
ಸುಳಿಗಾಳಿ ಎಳೆದೊಯ್ದ ತೆಳು–ಗಾಳಿ ಪಟದಂತೆ !
ಎಳೆಹಸುಳೆ–ಹಾರಿದನು! ಹುರುಪಿಂದ ಹರಿಯುದಕೆ ಹಣ್ಣನು ಪತಂಗದಂತೆ!! ॥೪॥

### ತೆರೆ ೨.

ಸೀತಾಮಾತೆಯು ರಾವಣನ ಸೆರೆ–ಸಿಕ್ಕಿದ್ದು ತಿಳಿದೊಡನೆ ಹನುಮಂತನು ಸಂತಪ್ತನಾಗಿ ಇಂತೆಂದನು: —

"ರಕ್ಕಸನು!–ರಾವಣನು! ಮಿಕ್ಕಿರುವ ರಾಮನನು ।
ಲೆಕ್ಕಿಸದೆ, ಮಾತೆಯನು ಇಕ್ಕಿಹನೆ ಕಟ್ಟಿನೊಳು !
ಕುಕ್ಕಿಸುವೆ ಕಣ್ಣನ್ನು! ಮುಕ್ಕಿಸುವೆ ಮಣ್ಣನ್ನು! ಇಕ್ಕುವೆನು ಕೊಳ್ಳಿಯನ್ನು" ॥೧॥

ಇನ್ನುಳಿದವರು,

"ಮುಂದುಂಟು ಮುನ್ನೀರು, ಮುಂದಾರಿ ಮತ್ತೆಲ್ಲಿ ?

ಮುಂದುಗಾಣುವದೆಂತು? ಬಂದು ನಿಂದುದು ಬನ್ನ !

ಎಂದೆಂದು ಅಡವ ಕೆಡುಗಾಲವಡಿಗೆಯುನು ಶ್ರೀರಾಮ ನೀನೆಲ್ಲಿ ಉಂತೆ! " ॥ ೧ ॥

ಎನುತ ಮರುಗುತ್ತಿರಲು, ಆಗ ಮುಂದಾಳಾದ ಮಾರುತಿಯು ಮುಂದೆ ಬಂದು: —

"ನೀಗಿಸದ ಮಾತೆಂದು ಬಗೆದು ಬಾಡುವಿರೇನು? ॥

ತೂಗಿಸಲು, ನಾ,–ನನ್ನ ಹುರುಪು ಹುರಿಗೊಂಡಿರಲು! ॥

ನೀಗಿತೂಗಿಸಿ–ಕೈಗೆಕೂಡಿಸಲು, ರಾಮನಾ ಮೈಮೆ-ಕಳೆ ಬೆಳಗುತಿರಲು" ॥ ೨ ॥

ಎನು ಅಭಯವನ್ನಿತ್ತರೂ ಕಿವಿಗೊಡದಾಗಲು, ಅವರಿಗೆ ಸ್ವ-ಸ್ಥಿತಿಸ್ಮೃತಿಯನ್ನಿಂತು ಕೊಡುತ್ತಾನೆ: —

"ಹುಟ್ಟುತಲೆ ಹೊತ್ತ ಹಣ್ಣೆಂದು ಹಿಡಿದವ ನಾನು !

ಸಿಟ್ಟು–ನಿಟ್ಟಿಲಿ ಸುಳಿವ ವಾಯುನಂದನ ನಾನು!!

ಕಟ್ಟಿ ಎದೆ ರಾಮನಡಿ ಮುಟ್ಟಿ ಸೆರೆಗಳೆವ ಹೊರೆಹೊರುವ ಕಲಿ ನಾನು! ನಾನೇ ॥ ೩ ॥

"ಕಟ್ಟುನಿಟ್ಟಿನ ಬಾಲ-ಬ್ರಹ್ಮಚಾರಿಯು ನಾನೆ !

ಬಿಟ್ಟಿರದೆ ಭಜಿಪ, ನಿಜ, ರಾಮನಡಿಯಾಳ್ನಾನು !!

ತೊಟ್ಟುಪಣವನ್ನೀಗ ಕಟ್ಟನ್ನು ಕಡಿದೊಗೆವ ಗಟ್ಟಿಗನು ನಾನು ನಾನೇ" ॥ ೪ ॥

ಅಷ್ಟಲ್ಲದೆ ;

"ಗಾಳಿಗುಂಟೇರುವೆನು ! ಕಡಲಗುಂಟ್ಹಾರುವೆನು !!

ತೇಲುವೆನು ಮುಗಿಲೊಳಗೆ!! ಮಾತೆಯನು ಕರತರುವೆ!!

ಮೇಲೊಸಗೆ ಉಸುರದಲೆ, ತಿನಿಸುಣಿಸು ನೀರ್ಕೂಡ ಮುಟ್ಟೆ! ಹುಸಿಯನ್ನು ನುಡಿಯೆ " ॥ ೫ ॥

ಎಂದು ಹನುಮಂತನು ತನ್ನ ಹಿಂದಾಳುಗಳಿಗೆಲ್ಲ ನಿಶ್ಚಲದ ನುಡಿಗೊಟ್ಟು, ಬಲೆಯ ಹೊರಕ್ಕೆ ಬಿದ್ದು ಬಲಿತ ಹಕ್ಕಿಯ ಹಾಗೆ, ಕಣ್ಮುಚ್ಚಿ ಕಣ್ತೆರೆಯುವಷ್ಟರಲ್ಲಿಯೇ ಕಡಲ ಹಾರಿ ಕಣ್ಮರೆಯಾದನು !

## ತೆರೆ ೩.

ಲಕ್ಷ್ಮಣನು ಶಕ್ತಿತಾಕಿ ಮೈಮರೆತು ಬಿದ್ದಿರಲು, ದ್ರೋಣಾಚಲಕ್ಕೆ ಹೋದ ಹನುಮನಿಗೆ ಎಷ್ಟು ಹುಡುಕಿದರೂ ಸಂಜೀವಿನಿಯು ಬೇಗ, ಸಿಗದಾಗಲು:—

"ಉಂಡುಟ್ಟು ಬೆಳೆದ ಮೈ-ಬಾಳಕವ ಬಳಿಸೇಳು !

ಮುಂದೆದಿರುಗಿದ ತೋಳತಿಂಡಿಯನು ತರಿಸೀಳು !!

ಕಂಡಕಂಡವರೆಲ್ಲ, 'ಪುಂಡಕಪಿ ಗಂಡುಗಲಿ !' ಎಂದು ಕೊಂಡಾಡಲೇಳು !! ॥ ೧ ॥

" ನಿಟ್ಟುಸುರ ಬಿಟ್ಟು ಮುಂಗೆಟ್ಟಿರಲು ಹೊತ್ತಿಲ್ಲ !
ಬೆಟ್ಟವನೆ ತಟ್ಟನೇ ಹೊತ್ತೊಯ್ದು ಇಟ್ಟುಬಿಡು ! !
ಕೆಟ್ಟೀತು ಕೆಲಸವದು ! ಸುಟ್ಟೀತು ಸಾಹಸವು ! ಕಟ್ಟಿ ನಡ ನಿಲ್ಲು ಗಡನೇ !! ॥ ೩ ॥
" ಕೆಂಡವನು ಕಣ್ಣೊಳಗು ಕಟ್ಟಿಕೊಳ್ಳುವ ದಿಟ್ಟ !!
ಹಿಂಡಿ ಬಂಡೆಯು, ನೀರನೊಸರಿಸುವ ನೀ, ಹಿಮದ !!
ತುಂಡನ್ನು ಸಹ ತಿಕ್ಕಿ, ಹಿಟ್ಟುಗೊಳಿಸುವ ಜಟ್ಟಿ ! ಬೆಟ್ಟವನ್ನೆತ್ತು ಬೇಗ " !! ॥ ೪ ॥

ಎಂದು, ಆತ್ಮ ಪ್ರೇರಿತನಾಗಿ ಬೆಟ್ಟವನ್ನೇ ತಂದು ರಾಮನಡಿಯ ಬದಿಗಿಡಲು ಜನಸಾಮಾನ್ಯರೆಲ್ಲರೂ ಬಾಯ್ಮೇಲೆ ಕೈಯಿಟ್ಟು,

" ಹರಳುಗಳ ಹಸುಗೂಸು ಹಿಡಿದಾಡುವಂತೆ, ಐ-॥
ಬೆರಳೊಳಗೆ ಹೂಚಂಡು ತೂರಾಡುವಂತೆ, ಮೂ-॥
ತಿರೆಯೊಳಗೆ ಮೆಲ್ಲಾಳಿ ಹೊತ್ತೊಯ್ದು ಹೂಕಂಪ, ಬೀರುತ್ತ ಹೋಗುವಂತೆ ॥ ೫ ॥
" ರಾಮನಡಿಹುಡಿ ಹೊರದ ಪುಡಿಯಾಳು .ಹನುಮಂತ ।
ಆ ಮಿಗಿಲು-ಬೆಟ್ಟವನ್ನೆಂತೆತ್ತಿ ತಂದಿರುವ ? ।
ಮುಮ್ಮೈಯ್ಯ ಸೈಪುಂಟೆ? ಈ ಮೈಯ್ಯ ಬಲಮುಂಟೆ? ರಾಮತೇಜಾಂಶಮುಂಟೆ! " ॥ ೬ ॥
ಎಂದೆಂದು ಹಾಡಿಕೊಂಡರು !

ಕಡುಗೈಮೆಗಳನ್ನು ಕಂಡು, ನಲಿವುದುಃಬಿದ ರಾಘವನು ಮಾತ್ರ ಹನುಮಂತನನ್ನು ಇಂತು ಹಾರೈಸಿದನು ! :—

"ಮಾರುತಿಯೆ! ಮೂಜಗದ ಸತ್ತ್ವಬಲ ಮೂರುತಿಯೆ !!
ತೀರತುಂಬಿಸಲಾರದಿರುವ ಕೊರತೆಗಳನ್ನು, ॥
ಪೂರಿಸಿದೆ ನನಗಾಗಿ; ಹರಸುವೆನು ನಿನಗಾಗಿ—" ಮೆರೆ ಬ್ರಹ್ಮಪಟ್ಟವಾಗಿ ! "

—ಸಂಗಮನಾರಾಯಣ.

॥ ಜಯ ಬಲಭೀಮ ಸಮರ್ಥ ॥

# ಉಪನಿಷತ್ಕಾಲದ ಸಮಾಜಸ್ಥಿತಿ.

( ಜೋಶಿ ಶಂಕರರಾಯರು )

ಆ ಕಾಲಕ್ಕೆ ವಿದರ್ಭ, ವಿದೇಹ, ಕುರು, ಕಾಶಿ, ಮತ್ಸ್ಯ, ಮದ್ರ, ಪಾಂಚಾಲ, ಗಾಂಧಾರ ಮುಂತಾದ ಸಣ್ಣ ದೊಡ್ಡ ನಾಡುಗಳಿದ್ದವು. ಅವುಗಳಿಗೆ ಬೇರೆ ಬೇರೆ ಅರಸರಿದ್ದರು. ಅರಸರ ರಾಜ್ಯವಿಸ್ತಾರಾದಿಗಳಿಂದ ಅವರಲ್ಲಿ ಮೇಲುಕೆಳಗುಗಳೆಂದು ತರಗತಿಗಳಿದ್ದವೆಂದು ರಾಜ, ಸಾಮ್ರಾಟ್ ಇಂಥ ಶಬ್ದಗಳಿಂದ ಸೂಚಿತವಾಗುತ್ತದೆ. ಅರಸೊತ್ತಿಗೆಗೆ ಸುಸಂಘಟಿತ ಸ್ವರೂಪವು ಪ್ರಾಪ್ತವಾಗಿತ್ತು. ರಾಜನ ಕೈಕೆಳಗೆ ಬೇರೆ ಬೇರೆ ಅಧಿಕಾರಿಗಳಿದ್ದರು. ಅರಸರು ತಮ್ಮ ಊರಿಗೆ ಬಂದಾಗ ಅವರಿಗೆ ನೀರುನಿಡಿ, ಊಟಉಪಚಾರಗಳ ಒಳ್ಳೇ ವ್ಯವಸ್ಥೆಯನ್ನಿಡುವುದಕ್ಕೆ ಉಗ್ರ (ಬೇಡ) ರು, ಆಳುಗಳು, ಬಂಡಿಯವರು, ಗ್ರಾಮಾಧಿಕಾರಿ (ಗೌಡ, ಶಾನಭೋಗ)ಗಳು ಸಿದ್ಧರಿರುತ್ತಿದ್ದರು.

ಬಂಗಾರ, ಬೆಳ್ಳಿ, ಕಬ್ಬಿಣ, ತವರು, ಸೀಸು ಧಾತುಗಳನ್ನು ಬಲ್ಲರು. ಇವುಗಳಿಂದ ವಸ್ತುವೊಡವೆ ಮಾಡಿಕೊಳ್ಳುತ್ತಿದ್ದರು. ಟಂಕಣಖಾರದಿಂದ ಬೆಸೆಯುವುದನ್ನು ಬಲ್ಲರು. ಬಂಗಾರ, ಆಕಳು, ಕುದುರೆ, ಹೆಸರಗತ್ತೆ, ದಾಸಿಗಳು ವಸ್ತ್ರಗಳು ಆಗಿನ ವೈಭವದ ವಸ್ತುಗಳಾಗಿದ್ದವು. ಬಂಗಾರದ ನಿಷ್ಕ ಎಂಬ ಒಡವೆ ಮಾಡುತ್ತಿದ್ದರು. ಜನಕನಲ್ಲಿ ಆನೆಯಿದ್ದ ಉಲ್ಲೇಖವಿದೆ. ಜನರು ಬೇಕಾದಾಗ ಅರಿವೆ ಅಂಚಡಿ, ವಸ್ತ್ರಗಳನ್ನು ಹಾಕಿಕೊಂಡು ಶೃಂಗಾರಾಗುತ್ತಿದ್ದರು. ರಥಗಳಿಗೆ ಹೆಸರಗತ್ತೆ (ಅಶ್ವತರಿ) ಗಳನ್ನೂ ಹೂಡುತ್ತಿದ್ದರು; ಇವರಲ್ಲಿ ಅರಸರೂ ಜ್ಞಾನಿಗಳೂ ಕೂಡುತ್ತಿದ್ದರು. ಆಗಿನವರ ಮುಖ್ಯ ಬದುಕು ಆಕಳ ಹಿಂಡು; ಅರಸರಲ್ಲಂತೂ ಸಾವಿರಾವಧಿ ಆಕಳುಗಳ ಹಿಂಡು ಇರುತ್ತಿತ್ತು. ಸಿಂಧೂದೇಶದ ಕುದುರೆಗಳು ಬಹಳ ಬಲಿಷ್ಠವಾದವುಗಳು. ಈ ಉತ್ತಮವಾದ ಕುದುರೆಗಳು ಕಾಲ್ತೊಡನ್ನು (ಸಹಜವಾಗಿ) ಮೇಲೆತ್ತಿ ಬಿಡುತ್ತಿದ್ದವು.

ಆಗಿನ ಕಾಲದಲ್ಲಿ ಬರಗಾಲವಿದ್ದಿಲ್ಲೆಂದು ಹೇಳಲಿಕ್ಕಾಗುವದಿಲ್ಲ. ಕುರು ದೇಶದಲ್ಲಿ ಇಭ್ಯ ಎಂಬ ಅರಸನಿಗೇ ಬೆಳೆಗೇಡಾದ್ದರಿಂದ ತನ್ನ ಊರಲ್ಲಿ ಹೊಲಸು ಉದ್ದು ತಿಂದು ಕಾಲಕಳೆಯುವ ಹೊತ್ತು ಬಂದಿತ್ತು! ಆಗ ಮಿಡಿಚೆ (ಜಿಟ್ಟೆ)ಗಳ ಹೊಡತದಿಂದಲೋ ಉಲ್ಕಾಪಾತದಿಂದಲೋ (ಭಯಂಕರ) ಬರಬಿದ್ದಿತ್ತು. ಉಷಸ್ತಿ ಚಾಕ್ರಾಯಣನೆಂಬ ಬ್ರಾಹ್ಮಣನು ಬರದ ಪೀಡೆಯಿಂದ ಬಳಲಿ ಒಂದು ದಿನ ಅರಸನು ತಿನ್ನು

ತ್ತಿದ್ದ ಹೊಲ್ಲ ಉದ್ದುಗಳನ್ನೇ ಬೇಡಿದನು. ಆದರೆ 'ಅವು ಎಂಜಲದವು ನಿಮಗೆ ಕೊಡ
ಲಿಕ್ಕೆ ಆಗುವದಿಲ್ಲ. ಬೇರೆ ಉದ್ದುಗಳು ನನ್ನಲಿಲ್ಲ' ಎಂದು ಅರಸನು ಹೇಳಿದನು. ಆ
ಪದ್ಧರ್ಮದಲ್ಲಿ ಎಂಜಲ ತಿನ್ನಲಿಕ್ಕೂ ಅಡ್ಡಿಯಿಲ್ಲವೆಂದು ಬೇಡಿಕೊಂಡನು. ಅಂಥ
ನಿಷಿದ್ಧ ಉದ್ದುಗಳನ್ನೇ ತಿಂದು, ಕೆಲವು ಹೆಂಡತಿಗಾಗಿ ಒಯ್ದನು! ಇದರ ಮೇಲಿಂದ
ಆಗಿನ ಭಯಂಕರವಾದ ಬರಗಾಲದ ಕಲ್ಪನೆಯು ಬಾರದಿರದು. ಆ ಕಾಲದಲ್ಲಿ ಜನರಿಗೆ
ದುರ್ಗುಣಗಳ ಗಾಳಿಯೂ ತಗಲಿದ್ದಿಲ್ಲವೆಂದು ಯಾರಾದರೂ ಕಲ್ಪಿಸಿದ್ದರೆ ಅದರಷ್ಟು
ಸುಳ್ಳು ಬೇರೆ ಯಾವ ಮಾತೂ ಇಲ್ಲ. ಲೆತ್ತ (ಜೂಜು) ಗೊತ್ತಿತ್ತು. ಅಣ್ಣತಮ್ಮಂದಿರ
ಜಗಳಾಟ, ಸವತಿಮಕ್ಕಳ ಕಾದಾಟವು ಕಡಿಮೆಯಿದ್ದಿಲ್ಲ.[೧೦] ತಮ್ಮನ್ನು ದ್ವೇಷಿಸುವವರಿಗೂ
ತಾವು ದ್ವೇಷಿಸುವ ಪರರಿಗೂ ಕೇಡಾಗಲೆಂದು ದೇವರಲ್ಲಿ ಬೇಡಿಕೊಳ್ಳುತ್ತಿದ್ದರು.[೧೧] ಕೇಪಾ
ಡಿಗಳ ಕೇಡಾಗಲೆಂದು ದೇವರಲ್ಲಿ ಬೇಡಿಕೊಳ್ಳುವವರು ಪ್ರತ್ಯಕ್ಷ ಆ ಕೇಡಿಗರು ಎದುರಾ
ದಾಗ ಕಡಿದಾಡದೆ ಬಿಡಬಹುದೇ? ಕೃಪಣತನ, ಕಳ್ಳತನ, ಕೊಲೆ, (ಬ್ರಾಹ್ಮಣರಲ್ಲಿ)
ಆಹಿತಾಗ್ನಿ ಇಲ್ಲದಿರುವಿಕೆ, ಹುಂಬತನ, ಹಾದರ, ಭಂಡತನಗಳು[೧೨] ಗೊತ್ತಿಲ್ಲದಿದ್ದರೆ ಇವು
ಗಳ ಉಲ್ಲೇಖವಿರುವ ಕಾರಣವಾದರೂ ಏನು?

ಅರಸರು ತಮ್ಮ ರಾಜ್ಯದಲ್ಲಿ ಶಾಂತಿ ಸುವ್ಯವಸ್ಥೆಗಳನ್ನಿಡುವುದರಲ್ಲಿ ದಕ್ಷರಿದ್ದರು.
ನಾಡಿನಲ್ಲಿ ಕಳವು, ಕೃಪಣತೆ, ಕುಡುಕತನ, ಹಾದರಗಳನ್ನು ಸಂಪೂರ್ಣ ಇಲ್ಲದಂತೆ
ಮಾಡುವುದರಲ್ಲಿ ಅರಸರು ಅಭಿಮಾನಬಡುತ್ತಿನ್ದರು. (ಕಲಿಯುವ ಜಾತಿಯಲ್ಲಿ) ಅವಿ
ದ್ವಾಂಸನು ಒಬ್ಬನೂ ಉಳಿಯದಂತೆ ಎಚ್ಚರಪಡುತ್ತಿದ್ದರು.[೧೩] ಇವುಗಳು ಆಗದಂತೆ ಕಟ್ಟ
ಳೆಗಳನ್ನು ಮಾಡಿದ್ದರು.[೧೪] ತಪ್ಪುಗಾರರು ಯಾರಾದರೂ ಇರುವರೆಂದು ತಿಳಿದೊಡನೆ
ಅವರ ನ್ಯಾಯ ವಿಚಾರಣೆ ಆಗುತ್ತಿತ್ತು. ಅರಸಾಳುಗಳು ತಪ್ಪುಗಾರರನ್ನು ಕೈಗೆ ಕಟ್ಟಿ
ಅಧಿಕಾರಿಗಳ ಮುಂದೆ ನಿಲ್ಲಿಸುತ್ತಿದ್ದರು. ಕೊಡಲಿಯನ್ನು ಕೆಂಪಗೆ ಕಾಸಿ ತಾನು ತಪ್ಪು
ಗಾರನಿಲ್ಲವೆಂದು ಹೇಳುವ ಆರೋಪಿಯು ಕೈಯಿಂದ ಅದನ್ನು ಹಿಡಿಸುತ್ತಿದ್ದರು. ಆತನು
ಅಪರಾಧಿಯಿದ್ದರೆ ಕೈಸುಡುತ್ತಿತ್ತು. ಇಲ್ಲದಿದ್ದರೆ ಅವನಿಗೇನೂ ಆಗುತ್ತಿದ್ದಿಲ್ಲ. ಕೈ
ಸುಟ್ಟರೆ ಅವನನ್ನು ಅಲ್ಲಿಯೇ ಕೊಲ್ಲುವರು. ಕೈಸುಡದಿದ್ದರೆ ಬಿಡುಗಡೆ ಮಾಡುವರು.[೧೫]

ಆ ಕಾಲದಲ್ಲಿ ದೇವರು ವರ್ಣಾಶ್ರಮಗಳು ಪೂರ್ಣಸ್ವರೂಪಗೊಂಡಿದ್ದವು. ಆದರೆ
ಚತುರ್ವರ್ಣಗಳನ್ನು ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರರನ್ನು ಅವ
ಚತುರ್ವರ್ಣ ರವರವರ "ಗುಣಕರ್ಮಾನುಸಾರವಾಗಿ" ಒಮ್ಮೆಲೇ ಹುಟ್ಟಿಸಿರುವ
ನೆಂದು ಭಗವದ್ಗೀತೆಯು ಹೇಳುವ ಸಿದ್ಧಾಂತವು ಉಪನಿಷತ್ತುಗಳಿಗೆ ಮಾನ್ಯವಿಲ್ಲ.
ಮೊಟ್ಟಮೊದಲು ಬ್ರಹ್ಮನೊಬ್ಬನೇ ಇದ್ದನು. ಅವನಿಗೆ ಒಂಟಿಗತನದಲ್ಲಿ ಸೊಗಸೆನಿಸದೆ

ಅವಕ್ಕಿಂತಲೂ ಶ್ರೇಯಸ್ಕರವಾದ ಕ್ಷತ್ರಿಯರ ರೂಪತಾಳಿದನು. ಈ ಬ್ರಹ್ಮನಿಂದಲೆ ದೇವಲೋಕದಲ್ಲಿ ಕ್ಷತ್ರಿಯರೂ ಹುಟ್ಟಿಸಲ್ಪಟ್ಟಿದ್ದಾರೆ. ಆದಕಾರಣ ಕ್ಷತ್ರಿಯರಿಂದ ಶ್ರೇಷ್ಠರಾರೂ ಇಲ್ಲ. ಕ್ಷತ್ರಿಯರನ್ನು ಹುಟ್ಟಿಸಿಯೂ ಬ್ರಹ್ಮನಿಗೆ ತಾನು ಪೂರ್ಣ ವ್ಯಕ್ತನಾದನೆಂದು ಅನಿಸಲೊಲ್ಲದು. ಅದು ಕಾರಣ ದೇವಲೋಕದ ವೈಶ್ಯರಂತೆ ಇಲ್ಲಿಯೂ ವೈಶ್ಯಕುಲವನ್ನು ಹುಟ್ಟಿಸಿದನು. ಇನ್ನೂ ತನಗೆ ಕೊರತೆಯಿದೆಯೆಂದೆನಿಸಿ ದೇವಲೋಕದ ಶೂದ್ರರಂತೆ ಇಲ್ಲಿಯೂ ಆ ಜಾತಿಯನ್ನು ಹುಟ್ಟಿಸಿದನು. ಇದರಿಂದಲೂ ಸಾಕಾಗಲಿಲ್ಲ. ಧರ್ಮವನ್ನುಂಟುಮಾಡಿ ಅದರಿಂದ ಎಲ್ಲವನ್ನೂ ಕಟ್ಟಿದನು. ಆದ್ದರಿಂದ ಧರ್ಮಕ್ಕಿಂತ ಮಿಗಿಲಾದುದು ಆವುದು ಇಲ್ಲ. ಆದಕಾರಣ ಧರ್ಮಬಲದಿಂದ ಬಲಹೀನನೂ ಬಲವಂತನನ್ನು ಗೆಲ್ಲಲು ಅಪೇಕ್ಷಿಸುತ್ತಾನೆ. ಸತ್ಯವೇ ಧರ್ಮ. ಬಳಿಕ ದೇವರಲ್ಲಿ ಬ್ರಾಹ್ಮಣನು ಅಗ್ನಿ ಇರುವಂತೆ ಇಲ್ಲಿ ಬ್ರಾಹ್ಮಣರನ್ನು ಹುಟ್ಟಿಸಿದನು. ಇಂತು ದೇವಲೋಕದ ವರ್ಣಗಳ ಮಾದರಿಯಲ್ಲಿ ಮಾನವಲೋಕದ ವರ್ಣಗಳನ್ನುಂಟು ಮಾಡಿದನು.[೧೩]

ಕ್ಷತ್ರಿಯ ಹಾಗೂ ಬ್ರಾಹ್ಮಣರಲ್ಲಿ ತಮ್ಮ ಶ್ರೇಷ್ಠತೆಯ ಬಗ್ಗೆ ಒಮ್ಮೊಮ್ಮೆ ಸ್ಪರ್ಧೆಯು ಇರುತ್ತಿದ್ದರೂ ಇರಬಹುದು- ಆದರೆ ಉಪನಿಷತ್ತಿನಲ್ಲಿ ಇವರಲ್ಲಿ ಯಾರಾದರೂ ಒಬ್ಬರೇ ತಲೆಗೇರಿ ಕುಳಿತದ್ದು ಕಂಡುಬರುವದಿಲ್ಲ. ರಾಜಸೂಯ ಯಜ್ಞದಲ್ಲಿ ಕ್ಷತ್ರಿಯನಿಗೆ ಮೇಲಿನ ಸ್ಥಾನಕೊಟ್ಟು ಬ್ರಾಹ್ಮಣರು ಕೆಳಗೆ ಕುಳ್ಳಿರುತ್ತಿದ್ದರು. ಆದರೆ ಕ್ಷತ್ರಿಯರು ಬ್ರಹ್ಮನಿಂದಲೇ ಹುಟ್ಟಿದ್ದು, ಬ್ರಹ್ಮನಲ್ಲಿಯೇ ಕೂಡುವರು. ಎಂದು ಹೇಳಿ ಕ್ಷತ್ರಿಯರಿಗೆ ಎಷ್ಟೇ ಏಳ್ಗೆ ಹೊಂದಿದರೂ ವಿನಮ್ರರಾಗಿರಲಿಕ್ಕೆ ಸೂಚಿಸಿದ್ದಾರೆ.[೧೩] ಮೊಟ್ಟ ಮೊದಲು (ಬ್ರಹ್ಮ)ವಿದ್ಯೆಯು ಕ್ಷತ್ರಿಯರಲ್ಲಿಯೇ ಇತ್ತೆಂದೂ ಅವರೇ ಹೆಚ್ಚಿನವರಾಗಿದ್ದರೆಂದೂ ಇದೀಗ ಬ್ರಾಹ್ಮಣರಲ್ಲಿ ನೀನೇ ಮೊದಲಿಗೆ ಅದನ್ನು ಕಲಿಯುವವನು ಎಂದೂ ಆರುಣಿಗೆ ಜಯುವಲಿಯು ಹೇಳಿದ್ದಾನೆ.[೧೪] ಚಿತ್ರಗಾಗ್ರ್ಯಾಯಣಿ ಎಂಬ ಅರಸನಲ್ಲಿ ಆರುಣಿಯು ವಿದ್ಯೆಕಲಿಯುವುದಕ್ಕಾಗಿ ಸಮಿತ್ಪಾಣಿಯಾಗಿ ಶಿಷ್ಯನಂತೆ ಹೋಗಲು 'ಸ್ವಾಮೀ ನೀನು ನಿಜವಾಗಿ ಬ್ರಾಹ್ಮಣರಿಗೆ ಒಪ್ಪುವಂತಿರುವಿ; ಬಾ ಹೇಳುತ್ತೇನೆ' ಎಂದಿದ್ದಾನೆ.[೧೫] ಹೀಗೆ ಒತ್ತಟ್ಟಿಗೆ ಕ್ಷತ್ರಿಯರ ಮಹತ್ವವನ್ನು ಹೇಳಿದೆ. ಕೆಲವೆಡೆಗಳಲ್ಲಿ ಬ್ರಾಹ್ಮಣರಿಂದ ಕ್ಷತ್ರಿಯರು ಕಲಿಯುವ ಪರಿಪಾಠವುಂಟೆಂದು ಹೇಳಿದೆ. ಅಜಾತ ಶತ್ರುವಿನಲ್ಲಿ ವಿದ್ಯೆಗೆ ಹೋದ ಗಾರ್ಗ್ಯನಿಗೆ ಅವನು ಹೀಗಂದಿದ್ದಾನೆ, 'ಬ್ರಾಹ್ಮಣರು ಕ್ಷತ್ರಿಯರಿಂದ ಕಲಿಯುವುದು ತಿರುಮುರುವು.' ಆದರೆ ಮುಂದೆ ಸಂವಾದದಲ್ಲಿ ಗಾರ್ಗ್ಯನ ನೀಂಳಿಸಿ ಆತನಿಗೆ ಬ್ರಹ್ಮಜ್ಞಾನ ಹೇಳಿದ್ದಾನೆ.[೨೦] ಜನಕರಾಜನು ಯಾಜ್ಞವಲ್ಕ್ಯನಲ್ಲಿ, ಬೃಹದ್ರಥನು ಶಾಕಾಯನ್ಯರಲ್ಲಿ ಜಾನಶ್ರುತಿಯು ರೈಕ್ವನಲ್ಲಿ ಹೋಗಿ ಅತ್ಯಂತ ಭಕ್ತಿವಿಶ್ವಾಸಗಳಿಂದ ಅವರ ಶಿಷ್ಯ

ಋಷಿಗಳು ಅಪ್ಪಣೆಮಾಡಿದ್ದಾರೆ. ಜಗತ್ತು ಅಶಾಶ್ವತವು ಎಂದು ವೈರಾಗ್ಯವುಂಟಾಗಿ
ರಾಜ್ಯವನ್ನು, ಸಂಸಾರವನ್ನು ತೊರೆದು ಈ ದೇಹವೆಂದರೆ ಎಲವು, ತೊಗಲು ಕೀವು,
ರಕ್ತ, ಮಾಂಸ, ಮಲಮೂತ್ರಾದಿಗಳಿಂದ ಯುಕ್ತವಾದ ಅತ್ಯಂತ ಹೊಲಸು ಪದಾರ್ಥವು
ಎಂದು ಭೋಗಾದಿಗಳನ್ನು ತಿರಸ್ಕರಿಸಿ ಇಹಲೋಕದ ಸೃಷ್ಟಿ ವ್ಯಾಪಾರಗಳನ್ನು ನಿಂದಿಸಿ
ಬೃಹದ್ರಥನು ಜ್ಞಾನೇಚ್ಛುವಾಗಿ ಗುರುಗಳ ಬಳಿಗೆ ಹೋಗಿದ್ದಾನೆ, ಈ ಒಂದೇ ಉಲ್ಲೇ
ಖವು ಹದಿಮೂರು ಉಪನಿಷತ್ತುಗಳಲ್ಲಿ ಕೂಡ ಇದೆ! ಹೀಗೆ ಉಲ್ಲೇಖವಿರುವ ಈ
ಮೈತ್ರಿ ಉಪನಿಷತ್ತು ಬೌದ್ಧಕಾಲದ ಸುಮಾರಿಗೆ ಆದದ್ದೆಂದೂ, ಹದಿಮೂರರಲ್ಲಿ
ಕೊನೆಯ ಗುಂಪಿಗೆ ಸೇರಿದ್ದೆಂದೂ ಕಾಲ ನಿರ್ಣಯಮಾಡಿದ್ದಾರೆ. ಆದರೆ ಪ್ರಾಚೀನ
ಉಪನಿಷತ್ತುಗಳಲ್ಲಿಯ ಉಲ್ಲೇಖಗಳನ್ನು ನೋಡಿದರೆ ಬೃಹದ್ರಥನ ಮೇಲಿನ ವಿಚಾರ
ಗಳು ಅವೈದಿಕ ವಿಚಾರಗಳು ಅರ್ಥಾತ್ ಆರ್ಯಧರ್ಮ ಬಾಹ್ಯವಿಚಾರಗಳು ಎಂದೇ
ಹೇಳಬೇಕಾಗುತ್ತದೆ. ಕೇವಲ ಸನ್ಯಾಸಮಾರ್ಗದ ವಿಚಾರಕ್ರಮದಿಂದ ನೋಡಿದರೆ
'ಹುಟ್ಟಬಂದದ್ದು ಮಹಾಪಾತಕವಾಯಿತು, ದೇವರೇ ಬೇಗನೆ ಮರಣಕೊಡು' ಎಂದು
ಬೇಡಿಕೊಂಡವಿನಾ ಬೇರೆ ಮಾರ್ಗವಿಲ್ಲ. ಆದರೆ ವಿದ್ಯಾವಿದ್ಯೆಗಳ ಸಮನ್ವಯಕಾರನಾದ
ಈಶ ಉಪನಿಷತ್ತಿನ ಮಹರ್ಷಿಯು ಪ್ರತಿಯೊಬ್ಬ ಮನುಷ್ಯನು (ಮಾಡಿ ಮಾಡಿಸುವವ
ನೆಲ್ಲ ದೇವರೆಂದು ನಂಬಿ) ನೂರು ವರುಷ ಸಂಪೂರ್ಣ ಬದುಕಿರಲಿಕ್ಕೆ ಬಯಸಬೇಕೆಂದು
ಹೇಳಿದ್ದಾನೆ. ಆಗಿನವರು ದೀರ್ಘಾಯುಷಿಗಳಾಗಲಿಕ್ಕೆ ಬಯಸುತ್ತಿದ್ದರು. ತಮಗಾದ
ಬೇನೆ ಬೆಸರಿಕೆಗಳನ್ನು ಕಳೆಯಲಿಕ್ಕೆ (ಆ ಕಾಲದ ಕಲ್ಪನೆಯಂತೆ) ಮಂತ್ರತಂತ್ರಗಳನ್ನು
ಮಾಡಿ ಔಷಧಗಳನ್ನು ಮಾಡಿಕೊಳ್ಳುತ್ತಿದ್ದರು. ಸಂಕಲ್ಪಶಕ್ತಿಯಿಂದ ನಿರೋಗಿಗಳಾಗಿ
ರಲಿಕ್ಕೆ ಯತ್ನಿಸುತ್ತಿದ್ದರು. ಹೀಗೆ ಮಂತ್ರಶಕ್ತಿಯಿಂದ ಮಹೀದಾಸನೆಂಬವನು ೧೧೬
ವರ್ಷ ಬಾಳಿದನೆಂದು ಉಲ್ಲೇಖವಿದೆ. ಈ ಪ್ರಪಂಚದ ವಿಷಯಕ್ಕೆ ಬೇಸರವೂ ತಿರಸ್ಕಾ
ರವೂ ಕಂಡುಬರುವದಿಲ್ಲ. ಆದದ್ದೂ ಆಗುವುದೂ ಎಲ್ಲವೂ ಪರಮಾತ್ಮನ ಅಪೇಕ್ಷೆ
ಯಂತೆ. ವಿಶ್ವವೆಲ್ಲ ಪರಮೇಶ್ವರನ ಇರವು; ವಾಸಸ್ಥಾನವು. ಎಂದು ದೃಢವಾಗಿ ನಂಬಿ
ದ್ದರು. ಈ ವಿಶ್ವವೇ ಒಂದು ಮಹಾಯಜ್ಞಸ್ವರೂಪ, ಜೀವನವೇ ಒಂದು ಯಜ್ಞ
ವೆಂದು ಕಲ್ಪನೆಗಳುಂಟಾದವು. ಇಹಲೋಕದ ಯುಕ್ತವಾದ ಯಾವ ಕರ್ಮವೂ ಪಾಪ
ಮಯವಲ್ಲವೆಂದು ಋಷಿಗಳು ನಿರ್ಣಯಿಸಿದ್ದರು. ವೇದಕಾಲದಂತೆ ಸೃಷ್ಟಿಶಕ್ತಿಗಳಿಗೆ
ತಮ್ಮ ಐಹಿಕ ಸುಖಕ್ಕಾಗಿ ಬೇಡಿಕೊಳ್ಳುವುದು ಈ ಕಾಲದಲ್ಲಿ ಕಂಡುಬರುವದಿಲ್ಲ. ಕೆಲ
ವೆಡೆಗಳಲ್ಲಿ "ನಮ್ಮನ್ನು ಒಳ್ಳೇ ಸುಖಸಮೃದ್ಧವಾದ ದಾರಿಯಿಂದ ಒಯ್ಯಪ್ಪಾ, ಅಗ್ನಿ
ದೇವತೇ" ಎಂಬೀತರದಿಂದಪ್ರಾರ್ಥಿಸಿದ್ದನ್ನು ಕಾಣಬಹುದು. ಅಲ್ಲದೆ ಬಹುತರ ಎಲ್ಲ ಉಪ
ನಿಷತ್ತುಗಳ ಶಾಂತಿಪಾಠ ಮಂತ್ರದಲ್ಲಿ ಮನುಷ್ಯನ ಕಲ್ಯಾಣ ಪ್ರಾರ್ಥನೆಯು ಇದ್ದೇ ಇದೆ.
ಇದನ್ನು (ಬ್ರಹ್ಮನನ್ನು) ತಿಳಿದವನಿಗೆ ಅನ್ನವು ಸಮೃದ್ಧವಾಗಿ ಸಿಗುವದು; ಏಳ್ಗೆಹೊಂದು
ವನು, ಮಕ್ಕಳುಮರಿಹೊಂದುವನು; ಬದುಕು ಬಾಳ್ವೆ ಚನ್ನಾಗಿ ಸಿಗುವನು; ಬ್ರಹ್ಮ
ತೇಜಸ್ವಿಯಾಗುವನು; ಬಹಳ ಕೀರ್ತಿವಂತನಾಗುವನು ಎಂದು ತಿಳಿಯುತ್ತಿದ್ದರು.

ಹೀಗೆ ಇಹ ಹಾಗೂ ಪರಲೋಕಗಳೆರಡರಲ್ಲಿಯೂ ಆನಂದಹೊಂದುವುದಕ್ಕೆ ಹದನರಿತು ಹವಣಿಸುತ್ತಿದ್ದರು.

ಇಂಥವನ ಮಗ, ಅಥವಾ ಇಂಥ ಗೋತ್ರ ಅಂದರೆ ಇಂಥ ಪ್ರಸಿದ್ಧ ಪುರುಷನ ವಂಶಜ ಇಂಥವನೆಂದು ಹೆಸರುಗೊಂಡು ಹೇಳುತ್ತಿದ್ದರು. ಅರುಣಿ ಪುತ್ರ ಶ್ವೇತಕೇತು (ಆರುಣೇಯ ಶ್ವೇತಕೇತು) ಎಂದು ಕರೆಯುತ್ತಿದ್ದರು. ಗೋತಮನ ವಂಶ—ಗೋತ್ರಜನೆಂದು ಗೌತಮನೆಂದೂ ಹೇಳುವದುಂಟು. ತಂದೆಯ ಹೆಸರು ಗೊತ್ತಿಲ್ಲದಿದ್ದಾಗ ಅಥವಾ ಗೊತ್ತಾಗುವ ಸಂಭವವಿಲ್ಲದಾಗ ಇಂಥ ತಾಯಿಯ ಮಗನು ಎನ್ನುತ್ತಿದ್ದರು. ಉದಾ:—ಜಾಬಾಲಸತ್ಯಕಾಮನು. ಅಡ್ಡಹೆಸರುಗಳೂ ಈ ಕಾಲದಲ್ಲಿ ರೂಢವಾಗಿದ್ದವು. ಅಡ್ಡಹೆಸರುಗಳು ಹೆಚ್ಚಾಗಿ ಅವರವರ ಇದ್ದನಾಡಿನ ಮೇಲಿಂದ ಬಂದವುಗಳಾಗಿವೆ. ವೈದರ್ಭಿ ಭಾರ್ಗವ, ವಿದೇಹದ ಜನಕ, ಕಾಶಿ ಅಜಾತ ಶತ್ರು ಮುಂತಾದವು ಇದಕ್ಕೆ ಸಾಕ್ಷಿ. ಗುಣಕ್ರಿಯಾದಿಗಳಿಂದಲೂ ಅಡ್ಡಹೆಸರುಗಳು ಉಂಟಾಗಹತ್ತಿದ್ದವು. ರೈಕ್ವನೆಂಬ ಮುನಿಯು ಶಕಟದಲ್ಲಿ (ಬಂಡಿ) ಯಾವಾಗಲೂ ಇರುತ್ತಿದ್ದನೆಂದು ಆತನಿಗೆ ಸಯುಗ್ವಾ ರೈಕ್ವನೆಂದು ಹೇಳುತ್ತಿದ್ದರು.

ಹೆಸರು ಬರೆವ ರೀತಿ

ಅಗ್ನಿಹೋತ್ರ, ಯಜ್ಞಗಳ ಮಹತ್ವವು ಪೂರಾ ಕಡಿಮೆಯಾಗಿದಿಲ್ಲ. ಆದರೂ ಯಾಂತ್ರಿಕಸ್ವರೂಪದಿಂದ ಅರ್ಥವು ತಿಳಿಯದೆ ಮಾಡಿದ ಯಜ್ಞವು ಬೂದಿಯಲ್ಲಿ ಹೋಮಮಾಡಿದಂತೆ ಎಂದು ಹೇಳಿದ್ದಾರೆ. ಶರೀರದಲ್ಲಿ ಒಳಗೆ ನಡೆವ ಕ್ರಿಯೆಯೇ ಒಂದು ಯಜ್ಞಸ್ವರೂಪವಾಗಿರುವದರಿಂದ ಪ್ರಾಚೀನರು ನಿರರ್ಥಕವೂ ಅಶಾಶ್ವತವೂ ಆದ ಈ ಹೊರಗಿನ ಅಗ್ನಿಹೋತ್ರವನ್ನು ಆಚರಿಸುತ್ತಿದ್ದಿಲ್ಲವೆಂದು ಸಮಾಜದ ತಾತ್ಕಾಲಿಕ ರೂಢಮತಗಳಿಗೆ ಹೆದರಿ ಬೆದರದೆ ಧೈರ್ಯದಿಂದ ಸ್ಪಷ್ಟವಾಗಿ ಹೇಳುವ ಪ್ರಾತರ್ದನ ಮುನಿಯಂಥ ಸ್ವತಂತ್ರ ವಿಚಾರಿಗಳೂ ಆಗಿನಕಾಲಕ್ಕೆ ಇದ್ದರು. (ಕೌ. ೨-೫)

ಯಜ್ಞಗಳು ಹಿಂದೆ ಬೀಳ ಹತ್ತಿದ್ದವು

ಅತಿಥಿ ಸತ್ಕಾರಕ್ಕೆ ಬಹಳ ಮಹತ್ವವಿತ್ತು. ಯಾವ ಕೀಳು ಮನಸ್ಸಿನ ಮನುಷ್ಯನ ಮನೆಗೆ ಬಂದ ಅತಿಥಿಯು, ಬ್ರಾಹ್ಮಣನು ಉಣ್ಣದೆ ಉಳಿದರೆ ಆತನ ಆಪೇಕ್ಷೆಗಳು, ಯಜ್ಞ, ದಾನ ಮೊದಲಾದವುಗಳಿಂದ ಆಗತಕ್ಕ ಫಲಗಳು, ಮಕ್ಕಳು ಮರಿ, ಬಾಳ್ವೆ ಬದುಕು ಮುಂತಾದ್ದೆಲ್ಲ ನಾಶವಾಗಿ ಹೋಗುವುದೆಂದು ತಿಳಿದಿದ್ದರು. ಕೃಪಣತನವು ಪಾಪವೆಂದೆಣಿಸಲ್ಪಡುತ್ತಿತ್ತು. ಗಳಿಸಿದ್ದನ್ನು ಅತಿಥಿ ಸತ್ಕಾರಾದಿ [ಆಗಿನ ಕಾಲಕ್ಕೆ ರೂಢವಿರುವ] ಸಮಾಜ ಧಾರಣೆಗೆ ಅವಶ್ಯವಾದ ಕಾರ್ಯಗಳಿಗೆ ವೆಚ್ಚಮಾಡುವುದೇ ಸಂಗ್ರಹಿಸುವುದರ ಮುಖ್ಯೋದ್ದೇಶವೆಂದು ಅರಿತಿದ್ದರು. ದಾನಮಾಡುವುದು ಪರರ ಒತ್ತಾಯಕ್ಕಲ್ಲ. ಅಥವಾ ಸಮಾಜ

ಅತಿಥಿ ಸತ್ಕಾರ

ರೂಢಿಯು ಅಂಧಪರಂಪರೆಯು ಪಾಲನಕ್ಕೂ ಅಲ್ಲ. ಆನಂದದಿಂದ, ಆದರದಿಂದ, ಭಕ್ತಿ ವಿಶ್ವಾಸಗಳಿಂದ, ಸ್ನೇಹಪೂರ್ಣಬುದ್ಧಿಯಿಂದ ವಿನಯದಿಂದ ಕೊಡಬೇಕೆಂದು ಹೇಳಿದ್ದಾರೆ. ಅರಸರೂ, ಗೃಹಸ್ಥಾಶ್ರಮಿ ಬ್ರಾಹ್ಮಣರೂ ಅತಿಥಿಸತ್ಕಾರದಲ್ಲಿ ಬಹಳ ದಕ್ಷರಾಗಿದ್ದರು. ಬಂದವರಿಗೆ ಕೈಕಾಲು ತೊಳೆಯಲು ನೀರು ಕೊಟ್ಟು, ಕುಳಿತುಕೊಳ್ಳಲು ಆಸನ ಕೊಟ್ಟು, ಕುಶಲ ಪ್ರಶ್ನೆಗಳನ್ನು ಕೇಳುತ್ತಿದ್ದರು. ಅತಿಥಿಯು ಬಂದ ಉದ್ದೇಶವನ್ನು ತಿಳಕೊಂಡು ತಮ್ಮ ಶಕ್ತ್ಯನುಸಾರವಾಗಿ, ಬಂದವನ ಬಯಕೆಯನ್ನು ಪೂರ್ಣಮಾಡುತ್ತಿದ್ದರು. ಅತಿಥಿಸತ್ಕಾರದಲ್ಲಿ ಬಂದವರ ಯೋಗ್ಯತೆಗನುಸರಿಸಿ ತಾರತಮ್ಯಭಾವವು ಕಂಡು ಬರುತ್ತದೆ. ಜೈವಲಿರಾಜನಲ್ಲಿ ಅರುಣಿ ಪುತ್ರ ಶ್ವೇತಕೇತುವು ಹೋದಾಗ ಅರಸನು ವಿಶೇಷ ಆದರ ತೋರಿಸಿಲ್ಲ. ಯಾಕಂದರೆ ಅವನು ಹುಡುಗನು. ಆದರೆ ಸ್ವತಃ ಅರುಣಿಯು ಹೋದಾಗ ಅರ್ಘ್ಯಾಸನಾದಿಗಳನ್ನು ಕೊಟ್ಟು ಸತ್ಕರಿಸಿದ್ದಾನೆ. ಮುಂದೆ ಈ ಅರುಣಿಯು ತಾನು ವಿದ್ಯೆ ಕಲಿಯಬಂದಿರುವೆನೆಂದು ಹೇಳಲು ಅತಿಥಿಯೆಂದು ಮಾಡಿದ ಮರ್ಯಾದೆಯು ಹಿಂದೆ ಬಿತ್ತು. ಅರುಣಿಗೆ ಶಿಷ್ಯನಂತೆ ನಡಕೊಳ್ಳ ಬೇಕಾಯಿತು. [ಬೃ. ೬. ೨. ೧, ೨, ೩, ೪, ೫, ೬, ೭,] ಜಾನಶ್ರುತಿರಾಜನು ಭಕ್ತಿವಿಶ್ವಾಸಗಳಿಂದ ದಾನ ಮಾಡುವವನೆಂದೂ, ಕೊಡಗೈದೊರೆಯೆಂದೂ, ಅತಿಥಿಗಳಿಗಾಗಿ ಯಾವಾಗಲೂ ಬಹಳ ಅಡಿಗೆಯನ್ನು ಸಿದ್ಧವಾಗಿ ಇಟ್ಟಿರುವವನೆಂದೂ ಖ್ಯಾತಿಇತ್ತು. ಹಾಗೂ ಆತನು ಎಲ್ಲಕಡೆಗಳಲ್ಲಿ ಅತಿಥಿಗಳೂ ದಾರಿಕಾರರೂ ಬಂದುಉಂಡು ಹೋಗಲೆಂದು ಅನ್ನಛತ್ರಗಳನ್ನು ಇಟ್ಟಿದ್ದನು. ಮನುಷ್ಯ ಮಾತ್ರರಲ್ಲಿ ವೈಶ್ವಾನರಾತ್ಮನನ್ನು ಅರಿತು [ ಕೂಳಿಲ್ಲದೆ ಬಳಲುತ್ತಿರುವ ] ಚಾಂಡಾಲನಿಗೆ ಒಂದು ವೇಳೆ ಎಂಜಲವನ್ನು ಕೊಟ್ಟರೂ ಅದರಿಂದ ಪಾಪವು ಹತ್ತುವದಿಲ್ಲ. ಯಾಕಂದರೆ ಆತನಲ್ಲಿರುವ ವೈಶ್ವಾನರ ಆತ್ಮನಿಗೇ ಈ ಆಹುತಿಯು ಸಲ್ಲುವುದು. ಎಂದು ತಿಳಿದಿದ್ದರು.

ಒಟ್ಟಿನಲ್ಲಿ ನೋಡಿದರೆ ಉಪನಿಷತ್ಕಾಲದಲ್ಲಿ ವಿದ್ಯೆ ಅಥವಾ ಅವಿದ್ಯೆ, ಸಂಭೂತಿ ಅಥವಾ ಅಸಂಭೂತಿ, ಇಹ ಅಥವಾ ಪರ, ಯೋಗ ಅಥವಾ ಭೋಗ, ವೇದಾಂತ ಅಥವಾ ವ್ಯವಹಾರ ಇವೆರಡರಲ್ಲಿ ಯಾವದೊಂದಕ್ಕೇ ಕೈಹಾಕಿ ತೂಕತಪ್ಪಿ ಉರುಳಿಬಿದ್ದು ಹಾಳಾಗಗೊಡದಂತೆ ಸಮನ್ವಯದ ದಿವ್ಯಮಂತ್ರವನ್ನು ಹೇಳಿ ಆರ್ಯಾವರ್ತವನ್ನೂ ಆರ್ಯರನ್ನೂ ಯಾಜ್ಞವಲ್ಕ್ಯ ಪ್ರಭೃತಿ ಜ್ಞಾನಿಗಳು ಕಾದಿರುವರು. ಭೋಗೈಶ್ವರ್ಯಗಳಲ್ಲಿಯೇ ಆಸಕ್ತರಾಗುವದು ಶುದ್ಧ ಅಜ್ಞಾನವು. ಮಕ್ಕಳುಆಗಬೇಕು ಅವು ಆಗದಿದ್ದರೆ ತನಗೆ ಗತಿಇಲ್ಲವೆಂದು ಜ್ಞಾನಿಯು ಎಂದೂ ತಿಳಿಯಲಾಗದು ಜ್ಞಾನಿಗೆ ಮಕ್ಕಳು ಇಲ್ಲದಿದ್ದರೂ ಅವನಿಗೆ ದುರ್ಗತಿ ಎಂಬುದಿಲ್ಲ. ಇದರಂತೆ ದುಡ್ಡುಕೀರ್ತಿಗಳ ಹುಚ್ಚೂ ತಕ್ಕದ್ದಲ್ಲವೆಂದು ಜ್ಞಾನಿಯು ಭಿಕ್ಷಾವೃತ್ತಿಯಿಂದ ವೈರಾಗ್ಯಶೀಲನಾಗಿ ಆಚರಿಸಬೇಕೆಂದು ಉಪನಿಷತ್ತುಗಳು ಹೇಳುತ್ತವೆ. ಇದರ ಅತಿರೇಕ

ಪನಿಷತ್ಕಾರರ ಗುರಿ

ವಾಗಿ ತೂಕತಪ್ಪಬಾರದೆಂದು ಈ ಲೋಕವನ್ನು ನಿಂದಿಸಲಾಗದೆಂದು ಕಟ್ಟಪ್ಪಣೆ ಮಾಡು ತ್ತವೆ. ಅನ್ನವನ್ನು ಹಳಿಯಲಾಗದೆಂದು ಆಜ್ಞಾಪಿಸುತ್ತವೆ. ಜೀವವನ್ನು ತಿರಸ್ಕರಿಸ ಲಾಗದೆಂದು ಆದೇಶಕೊಟ್ಟಿವೆ. ಇಂತು ಶ್ರೇಯ ಪ್ರೇಯಗಳೆರಡೂ ಸಾಧಿಸುವಂತೆ ತೂಕಹಿಡಿದು ನಡೆಯಲಿಕ್ಕೆ ಹೇಳಿ ಅದೇ ಗುರಿಯನ್ನು ಆಗಿನ ಸಮಾಜದ ಮುಂದೆ ಇರಿ ಸುವ ಮಹಾಕಾರ್ಯವನ್ನು ಉಪನಿಷತ್ತುಗಳು ಮಾಡಿವೆ.

ಆಗಿನ ಕಾಲದಲ್ಲಿ ಚಾರ್ವಾಕಮತವು ಇದ್ದೇ ಇದ್ದಿಲ್ಲವೆನ್ನಲಾಗದು. ಪ್ರಜಾಪ ತಿಯ ಕಡೆಗೆ ದೇವರೂ ಅಸುರರೂ ವಿದ್ಯೆಕಲಿಯಲಿಕ್ಕೆ ಬಂದ ಕಥೆಯು ಛಾಂದೋಗ್ಯ

ದೇಹವಾದಿಗಳು

ದಲ್ಲಿದೆ. ದೇಹವೆಂದರೇ ಆತ್ಮ. ಆದಕಾರಣ ಆತ್ಮಹಿತವೆಂದರೆ ದೇಹ ಸೌಖ್ಯಾದಿಗಳು ಐಹಿಕ ಭೋಗಗಳಿಂದ ಅಂದರೆ ತನ್ನ ಸ್ವಾರ್ಥ ಸಾಧಿಸುವುದರಿಂದಲೇ ಮನುಷ್ಯನ ಹಿತವು ಆಗುತ್ತದೆ. ಆದಕಾರಣ ಇವರು ದಾನಕೊ ಡುವದಿಲ್ಲ. ತ್ಯಾಗವು ಇವರಿಗೆ ಗೊತ್ತಿಲ್ಲ. ವಿಶ್ವಾಸನಂಬಿಗೆಗಳನ್ನು ಇವರು ಅರಿಯರು. ಮನುಷ್ಯರ ಹೆಣಗಳನ್ನು ತಿರಿದಾದರೂ ತಂದು ಅವುಗಳಿಗೆ ವಸ್ತ್ರಾಲಂಕಾರಗಳಿಂದ ಸಿಂಗ ರಿಸುವರು. ಹಾಗೂ ಇದರಿಂದ ಆ ಜೀವಗಳಿಗೆ ಪರಲೋಕವು ಪ್ರಾಪ್ತವಾಗುವುದೆಂದು ತಿಳಿಯುವರು! (ಇಷ್ಟು ಈ ಮೃತದೇಹದ ಮೇಲೂ ಇವರ ಪ್ರೀತಿ.) (ಛಾಂ. ೮. ೮. ಪೂರಾ.)

ಆಗಿನ ಎಷ್ಟೋ ಕಲ್ಪನೆಗಳೂ ನಡತೆಗಳೂ ಇಂದಿನವರಿಂದ ವಿಶೇಷ ಬೇರೆ ಇಲ್ಲ. ಕಷ್ಟನಿವಾರಣೆಗೆ ಅಥವಾ ಇಷ್ಟ ಸಾಧ್ಯಕ್ಕಾಗಿ ಉಪವಾಸಮಾಡಿ ಸತ್ಯಾಗ್ರಹ ಮಾಡುವ

ಹಿಂದಿನ ಕೆಲ ನಡೆಗಳು

ಪದ್ಧತಿಯು ಇತ್ತು. (ಛಾಂ. ೪. ೧೦-೩; ಕಠ ೧-೯ ಹಾಗೂ ಕೌ. ೨-೨). ಕನಸುಗಳಲ್ಲಿ ನಂಬುಗೆಯಿತ್ತು. ಬಿದ್ದ ಕನಸಿನ ಮೇಲಿಂದ ಮುಂದೆ ಕೆಲಸವು ಕೈಗೂಡುವುದೋ ಇಲ್ಲವೋ ಎಂದು ಕಲ್ಪಿಸುತ್ತಿದ್ದರು. (ಛಾಂ. ೫. ೨, ೮). ಹೊಟ್ಟೆಯು ಮಕ್ಕಳಿಲ್ಲದಿದ್ದರೆ ದತ್ತಕ ತಕ್ಕೊಳ್ಳುತ್ತಿದ್ದರು. (ಛಾಂ. ೧, ೧೨, ೧). ಗಾಯನಾದಿ ಲಲಿತ ಕಲೆಗಳಿಗೆ ದೇವ ಜನ ವಿದ್ಯೆ ಎಂದು ಆಗಿನವರು ಕೊಟ್ಟ ಹೆಸರಿ ನಿಂದಲೇ ಅವರಿಗೆ ಲಲಿತ ಕಲೆಗಳು ಬಹಳ ಪ್ರಿಯವಾಗಿರಬೇಕೆಂದು ಕಂಡು ಬರುವದು. ಸಾಮವೇದದ ಮಹಾತ್ಮ್ಯವನ್ನು ಬಹಳ ಹೇಳಿದ್ದಾರೆ. ಜನರಿಗೆ ಗಾಯನವು ಅತಿಶಯ ಸೇರುತ್ತಿತ್ತು. ವೀಣೆಯ ಮೇಲೆ ಹಾಡುತ್ತಿದ್ದರು. ಇದರಿಂದ ಧನಸಂಪಾದನೆಯೂ ಕೀರ್ತಿಯೂ ಚನ್ನಾಗಿ ಆಗುತ್ತಿರಬೇಕು.[೪೯] ಮಕ್ಕಳು ಹುಟ್ಟಿದ ಕೂಡಲೆ ತಾಯಿ ಮೊಲೆ ಹಾಲು ಅಥವಾ ತುಪ್ಪ ನೆಕ್ಕಿಸುತ್ತಿದ್ದರು.[೫೦] ಆಗಿನವರು ಮೀನ ಹಿಡಿಯುವದನ್ನು ಬಲ್ಲರು.[೫೧] ಮಾಂಸಾನ್ನವನ್ನು ತುಪ್ಪದೊಡನೆ ಸುಪುತ್ರೋತ್ಪತ್ತಿಗಾಗಿ ತಕ್ಕೊಳ್ಳಲಿಕ್ಕೆ ಹೇಳಿದೆ![೫೨] ಅದ ರಿಂದ ಇದೇನು ವರ್ಜ್ಯ ವಿಷಯವಾಗಿದ್ದಿಲ್ಲವೆಂದು ಹೇಳಬಹುದು.

ಈ ಕಾಲದಲ್ಲಿ ಶೈವ ವೈಷ್ಣವಾದಿ ಪಂಥಗಳುಂಟಾಗಿ ಜಗಳಾಟಗಳು ನಡೆದಿದ್ದಿಲ್ಲ ವೆಂದು ಹೇಳಬಹುದು. ಶ್ವೇತಾಶ್ವತರವು ಮಾತ್ರ ಶೈವ ಮತಕ್ಕಾಗಿಯೇ ಬರೆದಂತೆ ಇದೆ. ಇದು ಅಪವಾದವು. ಪರಲೋಕ ಅಂದರೆ ಸ್ವರ್ಗದಲ್ಲಿ ಕೈಲಾಸ ವೈಕುಂಠ ಎಂಬ ಮುಂತಾಗಿ ಪಾಲುಮಾಡಿ ಹಂಚಿಕೊಂಬುವ ವಿಚಾರವು ಇನ್ನೂ ಆಗಿನವರ ತಲೆಯಲ್ಲಿ ಸೇರಿದ್ದಿಲ್ಲ.

ಮನುಷ್ಯನ ಮರಣದ ಕಾಲಕ್ಕೆ ಅವನ ಆಪ್ತೇಷ್ಟರೆಲ್ಲ ಸುತ್ತಲೆ ನೆರೆದು ಆತನಿಗೆ ತನ್ನ ಗುರ್ತು ಹತ್ತುವುದೋ ಎಂದು ಕೇಳುತ್ತಿದ್ದರು.[೫೩] ಹೆಣವನ್ನು ಸುಡುತ್ತಿದ್ದರು. (ಛಾಂ. ೫, ೯, ೨.). ಜ್ಞಾನಿಯು ಮಡಿದರೆ ಆತನ ಉತ್ತರಕ್ರಿಯೆಗಳನ್ನು ಮಾಡದಿದ್ದರೂ ಅವನಿಗೆ ದುರ್ಗತಿಯಿಲ್ಲವೆಂದು ತಿಳಿದಿದ್ದರು.[೫೪] ಹೆಂಗಸರ ಮೈಯಲ್ಲಿ ದೇವರೋ, ಗಂಧರ್ವರೋ ಬಂದು ಹಲವು ಅಜ್ಞಾತ ಸಂಗತಿಗಳನ್ನು ಅವರ ಬಾಯಿಂದ ಒಡನುಡಿಸುತ್ತಿದ್ದವು. ಮದ್ರ ದೇಶದಲ್ಲಿ ಪತಂಚಲನೆಂಬ ಬ್ರಾಹ್ಮಣನ ಮಗಳಿಗೂ ಅವನ ಹೆಂಡತಿಗೂ ಒಬ್ಬೊಬ್ಬ ಗಂಧರ್ವನು ಬಡಕೊಂಡ ಉಲ್ಲೇಖವಿದೆ.[೫೫]

ಸಮಾಜದಲ್ಲಿ ತತ್ವಜ್ಞಾನಿಗೆ, ಆಚಾರಶೀಲನಿಗೆ ಬಹಳ ಮಾನಮರ್ಯಾದೆಗಳಿದ್ದವು. ಸಮಾಜದ ಮುಂದಾಳುತನವು ಇಂಥವರ ಕಡೆಗೆ ಇತ್ತು. ಬರಿ ಸಂಸಾರದ ತೊಡಕಿನಲ್ಲಿ ಸಿಗಬಿದ್ದವರು ಸಮಾಜಕ್ಕೆ ಒಳ್ಳೇ ದಾರಿ ತೋರಕರು ಆಗಲಾರರು. ಆದ ಕಾರಣ ಅಂಥ ಜ್ಞಾನನೇತ್ರಗಳಿಲ್ಲದ ಕುರುಡರ ಬೆನ್ನು ಹತ್ತಲಾಗದೆಂದು ಹೇಳಿದ್ದಾರೆ. ತಾನೇ ದಾರಿಯರಿಯದ ಕುರುಡನು. ಮುಂದಿನೇನು ಹಾದಿಗೆ ಹಚ್ಚುವನು?[೫೬] ಸಂಸಾರ ಪಾಶದಲ್ಲಿ ಸಿಕ್ಕವರು ಪ್ರಪಂಚದ ತಿರುಗಣಿ ಮಡುವಿನಲ್ಲಿಯೇ ಸುತ್ತಾಡುವರೇ ಹೊರ್ತು ಆನಂದ ಅಮೃತದ ದಾರಿಗೆ ಹತ್ತಲಾರರು. ಆತ್ಮಜ್ಞಾನವು ಎಲ್ಲಕ್ಕೂ ಶ್ರೇಷ್ಠ. ಆದ ಕಾರಣ ಜ್ಞಾನಿಗಳನ್ನು ಮುಂದಿಟ್ಟುಕೊಂಡು ಅವರ ಹೆಜ್ಜೆಯಲ್ಲಿ ಹೆಜ್ಜೆಯನ್ನಿಕ್ಕುತ್ತ ನಡೆಯುವುದರಲ್ಲಿ ಭೂಷಣವೆಂದು ತಿಳಿಯುತ್ತಿದ್ದರು. ಜ್ಞಾನಿಯು ಸಾಂಸಾರಿಗೆ ಶಪಿಸಿದರೆ ಹಾಗೆ ಆಗುವದೆಂದು ನಂಬುಗೆ ಇತ್ತು.[೫೭] ಬ್ರಹ್ಮಜ್ಞಾನಿಯು ಬಯಸಿದ್ದು ಆಗುವನು; ಆತನಿಗೆ ಬಯಸಿದ್ದು ಸಿಗುವದು ಎಂದು ವಿಶ್ವಾಸವಿತ್ತು.

ಓಂ ಶಾಂತಿಃ ಪುಷ್ಟಿಃ ತುಷ್ಟಿಃ ಚಾಸ್ತು.

---

# ಯಥಾ ಪ್ರಜಾ ತಥಾರಾಜಾ !

(ಲೇ:– ಗೆಳೆಯ)

अराजके हि लोकेऽस्मिन्सर्वतो विद्रुते भयात् ।
रक्षार्थमस्य सर्वस्य राजानमसृजत्प्रभुः ॥

( मनु-७-३. )

ಮನುಷ್ಯನ ಸ್ವಭಾವವು ಒಂದೇ ಇದ್ದದರಿಂದ ಯಾವ ಜನಾಂಗದ ಇತಿಹಾಸ ವನ್ನು ಓದಿದರೂ ಅವೇ ತತ್ವಗಳು ಹೊರಬೀಳುತ್ತವೆ. ಮಾನವ ಜಾತಿಯು ಬಹಳ ಕಾಡುಸ್ಥಿತಿಯಲ್ಲಿದ್ದಾಗ ನೋಡಿದಲ್ಲೆಲ್ಲ ಸ್ವಾರ್ಥದ ಸಾಮ್ರಾಜ್ಯವೇ ಮೆರೆಯುತ್ತಿರ ಬಹುದು. ಈಗೂ ಸಹ ಜಗತ್ತಿನ ಜನಾಂಗಗಳು ಒಬ್ಬರನ್ನೊಬ್ಬರು ಪಚನಮಾಡ ಬೇಕೆಂದು ಶಸ್ತ್ರಗಳಿಂದೊಡಗೂಡಿ ಸಜ್ಜಾಗಿ ಸಂಧಿಯನ್ನು ನೋಡುತ್ತ ಕುಳಿತಿರುತ್ತ ಫೆಂದ ಮೇಲೆ ಸಾವಿರಾರು ವರ್ಷಗಳ ಪೂರ್ವದಲ್ಲಿ ಮಾನವನು ಎಂಥ ಸ್ವಾರ್ಥದ ಕೆಸರಿನಲ್ಲಿ ಹೊರಳಾಡುತ್ತಿದ್ದನೆಂಬುದನ್ನು ಕಲ್ಪನೆಯ ಬಲದಿಂದಲೇ ಕಾಣುವದು ಶಕ್ಯ ವಿದೆ. ಅಪವಾದಗಳನ್ನು ಬಿಟ್ಟುಕೊಟ್ಟರೆ ಈ ಜಗತ್ತು ಸ್ವಾರ್ಥದಿಂದಲೇ ತುಂಬಿರುವ ದೆಂದು ಹೇಳಬೇಕು. ಬಲಾಢ್ಯನಿದ್ದವನು ಬಲಹೀನನನ್ನು ನೆಲಕ್ಕುರುಳಿಸಿ ಅವನ ಸಂಪ ತ್ತನ್ನೆಲ್ಲ ಹೀರಿ ತಾನು ಬಲವಂತನಾಗುವನು. .ಇದು ಜಗತ್ತಿನ ಸ್ವಭಾವ. ಸ್ವಾರ್ಥದಿಂ ದಲೇ ಮನುಷ್ಯನ ಬೆಳವಣಿಗೆ–ಸ್ವಾರ್ಥದಿಂದಲೇ ಮನುಷ್ಯನ ಅಧಃಪತನವಾಗಿದೆ. ಜಗ ತ್ತಿನ ಲಕ್ಷಾವಧಿ ಆಶ್ಚರ್ಯಗಳಲ್ಲಿ ಇದೂ ಒಂದು ಆಶ್ಚರ್ಯ !

ಸಾಮಾನ್ಯ ನೀತಿಯ ಉಪದೇಶದಿಂದಲೇ ಮನುಷ್ಯನು ತನ್ನ ದುರ್ಗಣಗಳನ್ನು ಬಿಡಬಹುದೆಂಬದು ಅನುಭವ ವಿರುದ್ಧವಾದ ಅಶಕ್ಯ ಮಾತು ! ವರ್ಗಗಳಲ್ಲಿಯ ಗಟ್ಟಿ ಮುಟ್ಟ ಹುಡುಗನು ಬಡಹೀನನ ಮಶಿಯನೆಲ್ಲ ತನ್ನ ದೌತಿಯಲ್ಲಿ ಹಾಕಿಕೊಂಡು, ಅವನ ಹೊಸ ಪಾಟಿಯನ್ನು ಕಸಿದುಕೊಂಡು ಅವನ ಟೊಪ್ಪಿಗೆಯನ್ನು ಬಚ್ಚಿಡುವದ ಲ್ಲದೆ, ಅವನು ಕೇಳಬಂದರೆ ಕಪ್ ಕಪಾಳು ಹೊಡೆಯುವದೂ ಉಂಟು, ಶಿಕ್ಷಕರು ಹಗಲು ಹನ್ನೆರಡು ತಾಸು ನೀತಿ ಧರ್ಮದ ಉಪದೇಶ ಮಾಡುವ ವಿದ್ಯೆಯ ತವರುಮನೆ ಯಲ್ಲಿಯ ಸ್ಥಿತಿಯಿದು. ಬರೀ ಉಪದೇಶವಿಷ್ಟೇ ಅಲ್ಲ. ಕೈಯಲ್ಲಿ ರೂಲ ಕಟ್ಟಿಗೆಯನ್ನು ಹಿಡಿದು ಕುಳಿತು ಕಣ್ಣು ಕೆಂಪಗೆ ಮಾಡಿ ಯಮದೂತನಂತೆ ಕುಳಿತಿರುವ ಶಿಕ್ಷಕನ ಎದುರಿ ಗೇನೇ ಇಷ್ಟೆಲ್ಲ ನಡೆಯುತ್ತದೆಂದ ಮೇಲೆ ಶಿಕ್ಷಕರು ಹೊರಗೆ ಹೊರಟು ಹೋದರೆ ! ಶಾಲೆಯಲ್ಲಿ ಸಂತೆ ನೆರೆಯುವದು. ಬೇಕಾದ ವರ್ಗದ ಹುಡುಗರು ಬೇಕಾದ ವರ್ಗದಲ್ಲಿ ನೆರೆಯುವರು. ನಾಲ್ಕು ಟೊಣ್ಣ್ಯಾ ಹುಡುಗರು ಎಲಬಿನ ಹಂದರದವರ ಪುಡಿಪುಡಿ ಮಾಡುವರು. ಕೆಲವರು ಕಾಗದದ ತುಬಾಕಿ ಮಾಡಿ ಧಡಲ್‌ಬಾಜಾ ಮಾಡುವರು.

ಸಿಟ್ಟಿಗೆಬ್ಬಿಸುವರು. ಕಳ್ಳರು ಕನ್ನ ಕೊರೆದು ಕಿಸೆಯೊಳಗಿಂದ ಪೇಟೆ ಕದಿಯುವರು. ಶಿಕ್ಷಕರು ಮನೆಗೆ ಹೋಗಿರುವರೆಂದು ಗೊತ್ತಾದ ಕೂಡಲೇ ಹತ್ತಿಪ್ಪತ್ತು ಹುಡುಗರು ಕೂಡಿ ಗಿಡಮಂಗನಾಟವನ್ನೂ ಆಡಿ ಬಿಡುವರು. ಶಿಕ್ಷಕರ ಉಪದೇಶವು ಮನಸ್ಸಿನಲ್ಲಿ ನಾಟಿದಂಥ ಒಬ್ಬಿಬ್ಬರು ತಮ್ಮ ಅಭ್ಯಾಸವನ್ನು ಬಿಡದೇ ಎರಡನೆಯವರ ಕಡೆಗೆ ನೋಡದೆ ಓದುವದೂ ಉಂಟು! ಒಬ್ಬಿಬ್ಬರು ಮಾತ್ರ! ಇಡೀ ಶಾಲೆಯಲ್ಲಿ. ಈ ನಮ್ಮ ಸಮಾಜವೆಂದರೂ ಒಂದು ಶಾಲೆಯಂತೆಯೇ ಇರುವದು. ಮಿಲ್ಲನೆಂಬ ಇಂಗ್ಲಿಷ ತತ್ವಜ್ಞಾನಿಯು ಸಮಾಜವೆಂದರೆ ಒಂದು ದೊಡ್ಡ ಕೂಸೆಂದು ಹೇಳಿರುವನು. ದೊಡ್ಡ (ಬೆಳೆದ) ಕೂಸಾದ್ದರಿಂದ ಸ್ವಾರ್ಥವೇ ಹೆಚ್ಚು ಸಮಾಜದಲ್ಲಿ. ಪ್ರತಿಯೊಬ್ಬನು ತನ್ನ ಪ್ರತಿಷ್ಠೆಯನ್ನು ಬೆಳೆಸಿಕೊಳ್ಳಲಿಕ್ಕೆ ಪ್ರಯತ್ನಿಸುತ್ತಿದ್ದದರಿಂದ ದಿನಾಲು ಸೆಣದಾಟವು ನಡೆದೇ ಇದೆ. ಜಗತ್ತು ಇರುವವರೆಗೆ ಹೀಗೆಯೇ ನಡೆಯಬೇಕೆಂದು ದೇವರ ಸಂಕಲ್ಪವಿದ್ದಂತೆ ತೋರುತ್ತದೆ. ಈ ದೊಡ್ಡ ಶಾಲೆಯ ಮಾಸ್ತರನಾದ ರಾಜನು ಇಲ್ಲವೆಂದು ಕಲ್ಪನೆ ಮಾಡುವಾ. ಎಷ್ಟು ಗೊಂದಲವೆದ್ದು ಹೋದೀತೆಂಬದನ್ನು ಕಲ್ಪನೆಯಿಂದಲೇ ಕಾಣಬೇಕು. ಬಣ್ಣಿಸಲಳವಲ್ಲ. ಎಲ್ಲ ಕಾಯಿದೆ ಕಾನೂನುಗಳನ್ನು ತೆಗೆದೊಗೆದ ಪಕ್ಷದಲ್ಲಿ ಒಂದೇ ದಿವಸದ ಅನುಭವವು ಸಹ ಅಸಹ್ಯವಾದೀತು! ಒಬ್ಬರಿಗೂ ಸುಖವಾಗಲಿಕ್ಕಿಲ್ಲ. ಶಕ್ತಿಯುಳ್ಳವರು ಅಶಕ್ತರ ಧನಾಪಹರಣವನ್ನೂ ಕಾಂತಾಪಹರಣವನ್ನೂ ಮಾಡಿ, ಅವರನ್ನು ಗುಲಾಮರನ್ನಾಗಿ ಮಾಡಿಯಾರು. ಒಬ್ಬ ಪತಿವ್ರತೆಯಾದರೂ ಈ ಜಗತ್ತಿನಲ್ಲಿ ಉಳಿಯಲಿಕ್ಕಿಲ್ಲ. ಒಬ್ಬರ ಮಚ್ಚೆ ಒಬ್ಬರ ಕಾಲೊಳಗಿರಲಿಕ್ಕಿಲ್ಲ. ಎಲ್ಲಿಯ ವ್ಯಾಪಾರ, ಎಲ್ಲಿಯ ಉದ್ಯೋಗ ಎಲ್ಲಿಯ ಧಂದೆ ಎಲ್ಲಿಯ ಸಾಹಿತ್ಯ ಎಲ್ಲಿಯ ಕುಟುಂಬ ಎಲ್ಲಿಯ ಮಕ್ಕಳು—ಎಲ್ಲವೂ ಹಳ್ಳವನ್ನು ಕೂಡುವದು. ಇಂಥ ದುಃಸ್ಥಿತಿಯು ಪ್ರತಿಯೊಂದು ಸಮಾಜದಲ್ಲಿ ಇತ್ತು. ಇದಕ್ಕೇನೇ ಅರಾಜಕತೆಯೆಂದು ಅನ್ನುವ ರೂಢಿ.

ಈ ಅರಾಜಕತೆಯನ್ನು ಹೋಗಲಾಡಿಸುವದಕ್ಕಾಗಿ ಸಮಾಜದ ಧುರೀಣರು ಏನಾದರೊಂದು ವ್ಯವಸ್ಥೆಯನ್ನು ಮಾಡಬೇಕೆಂದು ತಮ್ಮ ಸಮಾಜದೊಳಗಿನ ಶೂರ ಪುರುಷನನ್ನು ಪಟ್ಟಕ್ಕೇರಿಸಿ—ಅವನೇ ಸೂರ್ಯನೆಂದೂ ಅವನೇ ಚಂದ್ರನೆಂದೂ ಅವನು ದೇವರಿಂದಲೇ ಕಳಿಸಲ್ಪಟ್ಟದ್ದರಿಂದ ಅವನ ಕಟ್ಟಳೆಗಳನ್ನು ಎಲ್ಲರೂ ಮನ್ನಿಸಬೇಕೆಂದೂ—ವಿಚಾರಗಳನ್ನು ಸಮಾಜದಲ್ಲಿ ಹರಡಿಸುತ್ತ, ಸಮಾಜ ವ್ಯವಸ್ಥೆಯ ಪ್ರತಿಯೊಂದು ಅಂಗದ ಸಾಂಗೋಪಾಂಗವಾಗಿ ವಿಚಾರ ಮಾಡಿ ಜಾಣತನದಿಂದ ಕಟ್ಟಳೆಗಳನ್ನೇರ್ಪಡಿಸಿದರು. ಆ ಕಟ್ಟಳೆಗಳೆಂದರೇನೇ ಈ ಧರ್ಮಶಾಸ್ತ್ರವು. ಈ ಧರ್ಮಶಾಸ್ತ್ರದಂತೆ ರಾಜನು ಪ್ರಜೆಗಳನ್ನು ಆಳತಕ್ಕದ್ದು. ಅವರು ಹಾಗೆ ಮಾಡದಿದ್ದರೆ ಅವರು ನರಕಕ್ಕೆ ಹೋಗುವರೆಂದೂ ಪ್ರಜೆಗಳು ಅರಸನಿಗೆ ಕಂದಾಯವನ್ನು ಕೊಟ್ಟು ತಮ್ಮ ಸಂರಕ್ಷಣೆಯ ಖರ್ಚನ್ನು ಅವನು ಪೂರೈಸಬೇಕೆಂದೂ ಅವರು ಕಟ್ಟಳೆಗಳನ್ನು ಮಾಡಿದರು. ಪ್ರಜೆ

ಗಳು ಕಂದಾಯವನ್ನು ಕೊಡದಿದ್ದರೆ ರಾಜನು ದಂಡವನ್ನು ವಿಧಿಸಬೇಕು. ಕಂದಾಯವನ್ನು ತೆಗೆದುಕೊಂಡ ಮೇಲೆ ತಾನು ಅದರ ಉಪಭೋಗವನ್ನೂ ಮಾಡಬೇಕು. ಕಂದಾಯ ಕೊಡುವವರ ರಕ್ಷಣೆಯನ್ನೂ ಮಾಡಬೇಕು.

क्षात्रियस्य पराधर्मः प्रजानामेव पालनम् ।
निर्दिष्ट फलभोक्ता हि राजा धर्मेण युज्यते ॥

" ಕ್ಷತ್ರಿಯನ ಮುಖ್ಯ ಧರ್ಮವೆಂದರೆ ಪ್ರಜೆಗಳ ಪಾಲನವೇ ಸರಿ. ಹೇಳಿದಂಥ ಫಲಗಳನ್ನನುಪಭೋಗಿಸಿ ರಾಜನು ಪ್ರಜೆಗಳ ರಕ್ಷಣೆಯನ್ನು ಮಾಡಿದರೆ ಅವನು ಪುಣ್ಯವನ್ನು ಸಂಪಾದಿಸುವನು." ಈ ಪ್ರಕಾರವಾಗಿ ಪರಸ್ಪರ ಸಂಬಂಧದಿಂದ ಎಲ್ಲರೂ ಸುಖಿಗಳಾಗಬೇಕೆಂದು ಪ್ರಯತ್ನವಾಯಿತು.

ಅರಾಜಕತೆಗಿಂತಲೂ ಈ ವ್ಯವಸ್ಥೆಯು ಎಲ್ಲರಿಗೂ ಸುಂದರವಾಗಿ ಕಂಡಿತು. ಎಲ್ಲರೂ ಹೊಡೆದು ಬಡೆದು ಗೊಂದಲವನ್ನು ಹಾಕುತ್ತಿರುವಾಗ ಆಗುವಂಥ ಅವ್ಯವಸ್ಥೆಯು ಆಗದಿದ್ದರೂ ಅಚ್ಛೆಯ ನಾಯಿ ತಲೆಗೇರಿದಂತೆ ಪ್ರಜೆಗಳಿಂದ ಅಧಿಕಾರವು ಸಿಕ್ಕ ಕೂಡಲೇ ಎಷ್ಟೋ ರಾಜರು ಪ್ರಜೆಗಳನ್ನು ಸುಲಿದು ತಮ್ಮ ಉಪಭೋಗಕ್ಕಾಗಿಯೇ ಕಂದಾಯವನ್ನೆಲ್ಲ ಸೂರಿಮಾಡಹತ್ತಿದರು. ರಾಜರು ಪ್ರಜೆಗಳ ಮಕ್ಕಳನ್ನು ಬೇಕಾದ ಹಾಗೆ ಓಡಿಸಿಕೊಂಡು ಹೋಗಿ ಅಂತಃಪುರಗಳನ್ನು ಕಟ್ಟಹತ್ತಿದರು. (ಇಲ್ಲಿಯ ಸಂಸ್ಥಾನಗಳಲ್ಲಿಯ ಸ್ಥಿತಿಯಿಂದ ಇದನ್ನು ಅರಿಯಬೇಕು.) ಧನವಂತರನ್ನು ಸುಲಿಯಹತ್ತಿದರು. ಸತ್ಯಕ್ಕೆ ಸಾವು ಬಂದಿತು. ಧರ್ಮಶಾಸ್ತ್ರವು ಕಿಚ್ಚು ಕಂಡಿತು. ರಾಜನು ಅಂದದ್ದೇ ವೇದವಾಯಿತು. ರಾಜನು ತೋರಿದ್ದೇ ಪೂರ್ವದಿಕ್ಕು; ಅವನು ಕಟ್ಟಿದ್ದೇ ಪಟ್ಟ; ಈ ಸ್ಥಿತಿಯಿಂದಲೂ ಪ್ರಜೆಗಳಿಗೆ ಸುಖವು ಉಂಟಾಗಲಿಲ್ಲವಾದ್ದರಿಂದ ರಾಜಪಕ್ಷ ಮತ್ತು ಪ್ರಜಾಪಕ್ಷಗಳಲ್ಲಿ ಕದನಗಳಾಗಿ ಕೆಲವೆಡೆಯಲ್ಲಿ ರಾಜರೂ ಗೆದ್ದರು. ರಾಜರು ಗೆದ್ದ ಕೂಡಲೇ ಮತ್ತೆ ಪ್ರಜೆಗಳ ಎದೆಯ ಮೇಲೆ ಗುಂಡಕಲ್ಲನ್ನು ಇಡಲಾರಂಭಿಸಿದರು. ಪ್ರಜೆಗಳು ಗೆದ್ದ ಕೂಡಲೇ ರಾಜನ ತಲೆಹೊಡೆದು ಇನ್ನೊಬ್ಬ ರಾಜನನ್ನು ನಿಯಮಿಸಹತ್ತಿದರು. ಅವನನ್ನು ನಿಯಮಿಸಿ ಅವನು ತನ್ನ ಕರ್ತವ್ಯವನ್ನು ಮಾಡುತ್ತಾನೆಯೋ ಇಲ್ಲವೆಂಬದನ್ನು ನೋಡುವದಕ್ಕಾಗಿ ಮಂತ್ರಿಮಂಡಲವನ್ನು ನೇಮಿಸಿದರು. ಬರಬರುತ್ತ ರಾಜರಲ್ಲಿಯೂ ಮಂತ್ರಿಮಂಡಲದವರಲ್ಲಿಯೂ ಮತಭೇದವೆಸಗಿ ಕದನಗಳಾಗಿ ಪ್ರಜೆಗಳು ರಾಜರನ್ನು ಕೊಂದದ್ದಲ್ಲದೆ ಎಲ್ಲ ಆಳುವಿಕೆಯನ್ನು ತಾವು ನೇಮಿಸಿದ ಕೆಲಜನ ಸಜ್ಜನರಿಂದಲೇ ಆಗುವಂತೆ ಮಾಡಿದರು. ರಾಜನಿಲ್ಲದೆ ಪ್ರಜೆಗಳ ಪ್ರತಿನಿಧಿಗಳಿಂದಲೇ ನಡೆಯುವಂಥ ರಾಜ್ಯಪದ್ಧತಿಯೇ ಮೇಲೆಂದು ಈಗಿನ ಅಕ್ಕರಿಗರ ಮತವದೆ.

ರಾಜನಿಲ್ಲದಲೆ ಪ್ರಜಾಪ್ರತಿನಿಧಿಗಳೇ ರಾಜ್ಯವನ್ನು ಮಾಡುವ ಪದ್ಧತಿಯ ಮಾದರಿಯ ರಾಷ್ಟ್ರವೆಂದರೆ ಅಮೇರಿಕಾರಾಷ್ಟ್ರವೇ ಸರಿ. ಹಿಂದುಸ್ತಾನದ ರಾಜ್ಯಪದ್ಧತಿಯೂ

ಅಮೇರಿಕೆಯ ರಾಜ್ಯಪದ್ಧತಿಯನ್ನು ಹೋಲಬೇಕಾದರೂ ಎಷ್ಟೋ ಸ್ಥಿತ್ಯಂತರಗಳಾಗ ಬೇಕಾಗುವವು. ನಮ್ಮ ಮನೆಗಳಲ್ಲೂ ಶಾಲೆಗಳಲ್ಲೂ ಸಮಾಜಗಳಲ್ಲೂ ಪ್ರಜಾಪ್ರತಿನಿಧಿತ್ವದ ಶಿಕ್ಷಣದ ಪ್ರಸಾರವಾಗುವದರಿಂದಲೇ ಜನರು ತಮ್ಮ ಕಾರಭಾರವನ್ನು ತಾವೇ ನಾಡಿಕೊಳ್ಳಲು ಕಲಿಯುವರು. ನಮ್ಮ ಮನೆಯಲ್ಲಿ ಅಪ್ಪನೇ ರಾಜನು. ಅವನು ಹೇಳಿದಂತೆ ಎಲ್ಲರೂ ಕೇಳಲೇ ಬೇಕು. ಅದು ಮನೆಮಂದಿಯ ಹಿತಕ್ಕೆ ಕಾರಣವಾಗಲಿ ಆಗದಿರಲಿ ಅದು ಎಲ್ಲರಿಗೂ ಸೇರಲಿ ಸೇರದಿರಲಿ, ಮನೆಯಲ್ಲಿಯ ಅಜ್ಜಿಯ ಹಟಕ್ಕೆ ಎಲ್ಲರೂ ಕೆಲೆಬಾಗಬೇಕು. ಆಕೆಯ ಮನಃಪ್ರವೃತ್ತಿಗಳೇ ಮನೆತನದ ಕಾಯದೆಗಳು. ಅತ್ತೆಂದಿರಾಗಲೀ ಮಾವಂದಿರಾಗಲೀ ತಮ್ಮ ಸೊಸೆಂದಿರ ಮತವನ್ನಾಗಲೀ, ಮನಃಪ್ರವೃತ್ತಿಯನ್ನಾಗಲೀ ಎಂದಾದರೂ ಕೇಳುವರೇನು ? ನಮ್ಮ ಸಮಾಜದಲ್ಲಿ ಗಂಡಂದಿರೂ ಸಹ ಹೆಂಡಂದಿರ ಮತವನ್ನು ಕೇಳುವದಿಲ್ಲ. ಎಲ್ಲ ಸ್ವೈರಾಚಾರದ ತವರುಮನೆಯಾದ್ದರಿಂದ ಅತ್ತೆಗೊಂದು ಕಾಲ ಸೊಸೆಗೊಂದು ಕಾಲವೆಂಬ ಗಾದೆಯು ನಮ್ಮಲ್ಲಿ ಉತ್ಪನ್ನವಾಗಿರುತ್ತದೆ. ಯಾವ ಮನೆತನದಲ್ಲಿ ತಮ್ಮದೆಂಬುದೇನೂ ಇಲ್ಲವೋ ಆ ಮನೆತನವು ಇದ್ದರೇನು ಬಿಟ್ಟರೇನು ಎಂಬ ಭಾವನೆಯು ಸೊಸೆಂದಿರಲ್ಲಿ ತಲೆದೋರಿದರೇನಾಶ್ಚರ್ಯ! ರಾಜ್ಯವೆಂದರೆ ಮನೆತನದ ಪ್ರತಿಬಿಂಬವು, ಮನೆಯಲ್ಲಿಯ ಗುಲಾಮರು ರಾಜ್ಯದ ಆಧಾರಸ್ತಂಭರಾಗುವದು ಅಸಂಭವನೀಯವು. ಅದೇ ಮಾತು ನಮ್ಮ ಹುಡುಗರದು. ನಮ್ಮ ಮಠಗಳಲ್ಲಿ ಎಳೇ ಹುಡುಗರ ಜುಟ್ಟವನ್ನು ಕಿತ್ತಿ ಕಿತ್ತಿ 'ಸಹಸ್ರ ಶೀರ್ಷಾ'ದ ಪಾಠವನ್ನು ಕಲಿಸುವ ಶಿಕ್ಷಕರು ಶಿಷ್ಯರು ಪ್ರೌಢರಾದ ಮೇಲೆಯೂ ಏನಾದರೂ ತಮ್ಮ ಪ್ರಶ್ನೆಗಳನ್ನು ಕೇಳಿದರೆ 'ಹುಚ್ಚ ಮುಂಡೇಗಂಡ ಹಾಗೆ ಮಾತಾಡಬಾರದೆ'ಂದು ಹೇಳುವರು. ಹುಡುಗರು ತೆಪ್ಪಗೆ ಬಾಯಿ ಮುಚ್ಚಿಕೊಂಡು ಕೂಡುವರು. ಇಂಗ್ಲಿಷಶಾಲೆಗಳಲ್ಲಿಯೂ ಅದೇ ಸ್ಥಿತಿ. "Clive is the incarnation of God" "Yes Sir." "ಕ್ಲೈವನು ದೇವರ ಅವತಾರನೇ ಸರಿ" "ಹೌದರಿ! ಹೌದು." "ಹಿಂದುಸ್ಥಾನದ ಜನರು ಕಾಡು ಸಂಸ್ಕೃತಿಯವರು" ಇದಕ್ಕೆ ಹೌದು ಎನ್ನದಿದ್ದರೆ ೨ನೇ ಇಯತ್ತೆಯಲ್ಲಿಯೇ ಕೊಳೆಯಬೇಕಾಗುವದು. ಇಂಥ ಸೈಯಾಳುಗಳು ರಾಷ್ಟ್ರದ ಮುಖಂಡರಾಗಿ ಯುರೋಪೀಯರ ಮತಗಳ ಪ್ರತಿಧ್ವನಿಯನ್ನುಮಾಡಹತ್ತುವರು. ಇಂಥ ಗುಲಾಮರು ಮನೆಯಲ್ಲಿಯೂ ಅದೇ ಮಾದರಿಯ ಕಿತ್ತೆಯನ್ನು ಹಾಕಿ ಕೊಡುವರು. ಸಾರಾಂಶ ಅಮೇರಿಕಾ ರಾಷ್ಟ್ರದಂಥ ಪ್ರಜಾಸತ್ತಾತ್ಮಕ ರಾಜ್ಯವ್ಯವಸ್ಥೆಯಾಗಬೇಕಾದರೆ ಪ್ರತಿಯೊಂದು ಹಿಂದೀ ಮನುಷ್ಯನು ಅದರ ತತ್ವಗಳ ಆಚರಣೆಯನ್ನು ಶಾಲೆಯಲ್ಲಿಯೂ ಮನೆಯಲ್ಲಿಯೂ ಪೇಟೆಯಲ್ಲಿಯೂ ಮಾಡಲು ಕಲಿಯಬೇಕು. "ಬೆಣ್ಣೆಯು ಹೇಗೆ" "ಆರು ಆಣೆಗೆ ಸೇರು" "ನಾಲ್ಕು ಆಣೆಗೆ ಸೇರು ಕೊಡಲಿಕ್ಕೆ ನಿನಗೇನು ಧಾಡಿ" ಈ ಸುಶಿಕ್ಷಿತ ರಾವಸಾಹೇಬರ ಉದ್ದಾದ ನಾಲಿಗೆಯನ್ನು ಕಡಿದು ಅವರ ಅಂಗೈಯಲ್ಲಿ ಹಾಕಿಸುವ ಧೈರ್ಯವು ಬಡ ಒಕ್ಕಲಿಗಿತ್ತಿಗೆ ಯಾವ ಕಾಲಕ್ಕೆ ಬಂದೀತೋ ಆ ವೇಳೆಗೆ

ನಾವು ಪ್ರಜಾರಾಜ್ಯಕ್ಕೆ ಪಾತ್ರರಾಗುವೆವು. ಶಿಕ್ಷಕರು ಪರಸಂಸ್ಕೃತಿಯ ಪಾಠಗಳನ್ನು ಕಲಿಯಲು ಒತ್ತಾಯ ಪಡಿಸಿದರೂ ಆ ಉದರಂಭರಿಯಾದ ಶಿಕ್ಷಕನನ್ನೂ, ಆ ಸೆರೆಮನೆಯಾದ ಶಾಲೆಯನ್ನೂ, ಅಲ್ಲಿ ಕಳಿಸಲು ಒತ್ತಾಯಪಡಿಸುವ ತಾಯಿತಂದೆಗಳನ್ನು ತೊರೆದು ಕಾಡು ಕಾಡುಗಳಲ್ಲಿಯಾದರೂ ತಮ್ಮ ಸ್ವಾತಂತ್ರ್ಯವೃತ್ತಿಯನ್ನು ಕಾಯ್ದು ಕೊಳ್ಳುವ ಹುಡುಗರು ಟೊಂಕ ಕಟ್ಟಿಪ ಹೊರತು ನಮಗೆ ಪ್ರಜಾಸ್ವಾತಂತ್ರ್ಯದ ದಿನಗಳು ಕಾಣಲಾರವು. ತನ್ನ ಮನೆಗೆ ತಾನು ಮಹಾರಾಣಿಯೆಂದು ಮನೆತನದ ಹಿತಕ್ಕೆಂದು ಸ್ವಾಭಿಮಾನದಿಂದಲೂ ಎಲ್ಲ ಕೆಲಸಗಳನ್ನು ಕರ್ತವ್ಯಬುದ್ಧಿಯಿಂದ ಮಾಡುವಂಥ ರಣಧೀರ ಪತ್ನಿಯರು ಹುಟ್ಟದಿದ್ದರೆ ನಮ್ಮ ಪ್ರಜಾ ಸ್ವಾತಂತ್ರ್ಯದ ಕನಸು ಕರಗುವದೇ ನಿಜ. ಸಾರಾಂಶ, ಮುಂದೆ ಸಿಗುವ ಪ್ರಜಾಸ್ವಾತಂತ್ರ್ಯದ ತತ್ವಗಳ ಆಚರಣೆಯು ಈಗಿನಿಂದಲೇ ನಡೆಯಬೇಕು. ಇಲ್ಲವಾದರೆ ನಮ್ಮ ಪಾಲಿಗೆ "ರಾಜಾ, ಕಾಲಸ್ಯ ಕಾರಣಮ್ ॥"

---

## ಯದ್ವಾ ತದ್ವಾ ವಿಚಾರ.

(ಬರೆದವನು :—ಮರಪಂಡಿತ)

ಮರ್ಕಟವಿಚಾರದ ಅವ್ವಾಳಿಗಿಂತ ಯದ್ವಾತದ್ವಾ ವಿಚಾರದ ಚಪಲರು ಚುರುಕುಬುದ್ಧಿಯವರು! ಇವರ ಚುರುಕು ಬುದ್ಧಿಯೆಂದರೆ ಎಂಥಾದ್ದೆನ್ನುವಿರಾ? ಚುರುಕು ಹತ್ತಿದಾಗಳೊಮ್ಮೆ ಹಾ ಎನ್ನುವುದು. ಚುರುಕು ಹತ್ತುತ್ತಿರುವವರೆಗೂ ಇವರ ಹಾರಾಟ. ಚುರುಕು ತಪ್ಪಿದರೆ ಮತ್ತೆ ಮಿಸುಕುವುದಕ್ಕೂ ಕೂಡ ಆಣೆ. ಇವರಿಗೆ ಆಗಾಗ ಹೊರಗಿನ ಚುರುಕು ಬೇಕು. ಅದಿಲ್ಲದಿದ್ದರೆ ಇವರು ಇದ್ದಾರೆಯೋ ಇಲ್ಲವೋ ಎಂದು ಗೊತ್ತುಪಡಿಸುವುದೂ ಕೂಡ ಕಷ್ಟ. ಇಂಥ ಚುರುಕುಬುದ್ಧಿಯವರಿಗೆ ಈ ಕಾಲದಲ್ಲಿ ಕೊರತೆಯೇನೂ ಇಲ್ಲವೆಂಬುದು ದಿನದಿನಕ್ಕೂ ಕಾಣುತ್ತಿದೆ. ವ್ಯಾಖ್ಯಾನಕಾರರೊಬ್ಬರು ಬಂದು ವ್ಯಾಖ್ಯಾನ ಹೇಳಿದರೆ ತೀರಿತು! ಎಲ್ಲೆಲ್ಲೂ ಹಾರಾಟ-ಚೀರಾಟ! ಮುಂದೆ ನಾಲ್ಕೇ ದಿನಗಳಲ್ಲಿ ನೋಡಿದರೆ ಎಲ್ಲೆಲ್ಲೂ ಮೂಕು! ಇಂಥ ಸಂಧಿಯಲ್ಲಿ ಇನ್ನೊಬ್ಬ ವ್ಯಾಖ್ಯಾನಕಾರ ಬಂದು ಗಂಟಲು ಹರಕೊಂಡು ಮೇಜು ಮುರಿದು, ಕೈ ನೋಯಿಸಿಕೊಂಡು ಅತ್ತು ಕರೆದು ವ್ಯಾಖ್ಯಾನಕೊಟ್ಟರೆ ತೀರಿತು! ಸಂದಿಗೊಂದಿಗಳಲ್ಲಿ ಬಿದ್ದ ಖಾದೀ ಅರಿವೆಗಳೂ ಮುರಕು ರಾಟಿಗಳೂ ಮತ್ತೆ ಮುಗಿಮುಚ್ಚುವವು! ವಾಹವಾ! ಇದೇ ನೋಡಿರಿ ಆ ದಿವ್ಯವಾದ ಚುರುಕುಬುದ್ಧಿ!

ಒಬ್ಬರನ್ನು ನೋಡಿ ಒಬ್ಬರಂತೆ ಕುಣಿಯುವುದೂ ಕೂಡ ಈ ಚಾಪಲ್ಯವೇ. ಇವರಿಗೆ ಆಧಾರವೆಲ್ಲಾ ಇನ್ನೊಬ್ಬರೇ. ಇವರು ತಮ್ಮ ಸ್ವತಂತ್ರತೆಯನ್ನು ಕಳಕೊಂಡು ಇನ್ನೊಬ್ಬರ ನೆರಳಾಗಿ ಬಿಡುತ್ತಾರೆ. ಹಲವರು ಹಲವು ವಿಧದ ಕಾರ್ಯಗಳಲ್ಲಿ ತೊಡ

ಗಿರುತ್ತಾರೆ. ಆದ್ದರಿಂದ ಈ ಅನುಕರಣಶೀಲರಾದ ಚಪಲಬುದ್ಧಿಗಳು ಒಂದು ಗಳಿಗೆ ಒಬ್ಬರಂತೆ ಇನ್ನೊಂದುಗಳಿಗೆ ಇನ್ನೊಬ್ಬರಂತೆ, ಬೇರೊಂದುಗಳಿಗೆ ಬೇರೊಬ್ಬರಂತೆ ಕುಣಿ ಯಹೋಗಿ, ತಮ್ಮ ಬಾಳುವೆಯಮೇಲೆ ಮಣ್ಣುಹಾಕಿಕೊಳ್ಳುತ್ತಾರೆ. ಇಂಥವರಿಗೆ ಯಾವಾಗಲೂ ಇನ್ನೊಬ್ಬರ ಹುಚ್ಚು ಬಹಳ. ಇದೇ ಇವರ ಗುರುಮಂತ್ರ.

ಭೀಮೂ ಮುಲಕೀಪರಿಕ್ಷೆಗೆ ಹೋಗಿದ್ದ. ಅವರಪ್ಪನು ಮನೆಯಲ್ಲಿ ಮಗನ ಧ್ಯಾನ ದಲ್ಲಿಯೇ ಹೊತ್ತುಹಾಕುತ್ತಿದ್ದಾನೆ. ಏನೋ ಮಗ ಒಮ್ಮೆ ಪರೀಕ್ಷೆಯನ್ನು ಮುಗಿಸಿ ಕೊಂಡು ಮನೆಗೆ ಬಂದ. ತಂದೆಯ ಕುತೂಹಲಕ್ಕೇನು ಸೀಮೆಯೇ! ಮಗನನ್ನು ಕೇಳಿದ:—

"ಪಾಸಾಯಿತೇ?"

"ಇಲ್ಲ"

"ಥೂ ಕುಲನಾಶಕಾ!"

"ಆದೇಕಪ್ಪ! ನೆರೆಮನೆಯ ರಂಗನೂ ನಾಪಾಸಾಗಿದ್ದಾನೆ!"

ಇಲ್ಲಿ ನಗಬೇಕೋ ಅಳಬೇಕೋ ತಿಳಿಯದು! ಹಿಂದೆ ಖಾದೀ ಧರಿಸುತ್ತಿದ್ದವನು ಇಂದು ಖಾದಿಯ ನೆನಪಿಲ್ಲದೆ ತಿರುಗುತ್ತಿರುವುದಕ್ಕೆಲ್ಲಾ ಇಂಥಾ ಕಾರಣವೇ! "ಅಂವಾ ಬಿಟ್ಟಾ, ಇಂವಾ ಬಿಟ್ಟಾ; ಅಂಥವ ಬಿಟ್ಟಾ, ಇಂಥವ ಬಿಟ್ಟಾ" ಎಂಬ ಇತಿಹಾಸವೇ ಇಂಥವರ ಬಾಯಲ್ಲಿರೋದು! ಒಂದರಲ್ಲೇ ಎರಡರಲ್ಲೇ? ಎಲ್ಲದರಲ್ಲೂ ಹೀಗೆಯೇ! ನೆಲ ಗಟ್ಟಿಲ್ಲದೆ ಮನೆಕಟ್ಟಿದಂತೆ ಇಂಥವರ ಬಾಳ್ವೆ. ಇಂದಿನ ಜಗದಲ್ಲಿ ಬಹಳ ಕಾರ್ಯಗಳು ಕೊನೆಗಾಣದಿರುವುದಕ್ಕೆ ಇಂಥ ಚುರುಕು ಬುದ್ಧಿಯೇ ಕಾರಣ.

ಮಾಸಪತ್ರಿಕೆಯೊಂದು ಮನೆಗೆ ಬಂದರೆ ತೀರಿತು. ತಾನೂ ಒಂದು ಲೇಖನವನ್ನಾ ಗಲಿ ಕವಿತೆಯನ್ನಾಗಲಿ ಬರೆಯಬೇಕೆಂಬ ಹಂಬಲ! ಕೂಡಲೆ ಗೀಚುವುದಕ್ಕೆ ಆರಂಭ. ಎಲ್ಲಿಗೋ ಬಂದು ಕೈಕಟ್ಟಾಯಿತು. ಅಲ್ಲಿಗೇ ಸಮಾಪ್ತಿ, ತಿರುಗಿ ಒಮ್ಮೆ ಓದಿ ಯಾವು ದಾದರೊಂದ ತಲೆಕಟ್ಟು (ಶಿರೋಲೇಖ) ಕಲ್ಪಿಸಿದರೆ ಕೃತಾರ್ಥರಾದರು! ಏನು ಬರೆಯ ಬೇಕೆಂಬ ಗುರಿಯಿಲ್ಲ. ಏನೋ ಬರೆದು ಏನೋ ಒಂದು ಹೆಸರಿಟ್ಟು ಬಿಟ್ಟರೆ ಸ್ವರ್ಗ ಮೂರೇ ಗೇಣು! ಇಂಥವರಿಗೇನೂ ಕೊರತೆಯಿಲ್ಲ.

ಹಿಟ್ಟು ಕಲಿಸುವುದೇನೋ ಕಲಿಸುವುದು. ಅಳಕಾದರೆ ಅಂಬಲಿ, ಗಟ್ಟಿಯಾದರೆ ರೊಟ್ಟಿ! ಹರಿದಷ್ಟೇ ಹಳ್ಳ, ನಿಂತಲ್ಲಿಗೇ ತೀರ್ಥ.

ಒಬ್ಬನು ಕಸುವಿನಿಂದೇನೋ ಓಡುತ್ತಿದ್ದಾನೆ. ಆದರೆ ಎಲ್ಲಿಗೆಂದು ಕೇಳಿದರೆ ಸಾತ್ರ ಉತ್ತರವಿಲ್ಲ. ಏನೋ ಕಾಲು ಸೋತು ನಿಂತನು. ಎಲ್ಲಿಗೆ ಹೋಗಬೇಕಾಗಿತ್ತೆಂದು ಕೇಳಿದರೆ ಇಲ್ಲಿಗೇ ಎಂದು ಹೇಳಿ ನಡೆದನು. ಇಂಥವರಿಂದ ಏನಾಗಬಲ್ಲದು!

ಗುರಿಯಿಲ್ಲದ ಗುಂಡಿನಂತೆ ಇವರ ಬಾಳ್ವೆ. ಗುಂಡೇನೋ ಸಾಗುವುದು; ಯಾತಕ್ಕೆ ಬಡಿಯುವ್ರದೆಂಬ ನಿಯಮವಿಲ್ಲ. ಬಡಿಯುವುದೇನೋ ನಿಜ. ಹಕ್ಕಿ ಗುಬ್ಬಿಗೆ ಬಡಿದರೆ ಬೇಟೆ; ಮಂದಿಮಕ್ಕಳಿಗೆ ಬಡಿದರೆ ಕೊಲೆ; ಹಾಗೇ ಹೋಗಿ ಬಿಟ್ಟರೆ ಹೌಸು!

ಯಾವ ಗಿಡದ್ದೋ ಬೇರು ತಂದು, ಯಾತರಮೇಲೋ ಅರೆದು, ಯಾತಕ್ಕೋ ಹಚ್ಚಿದರೆ ಏನಾಗಬೇಕು? ಎಂತಾಗಬೇಕು? ಅಂತಾಗುವುದೋ ಇಂತಾಗುವುದೋ ಯಾರು ಹೇಳಬೇಕು? ಏನಾದರೊಂದು ಆಗುವುದು ಮಾತ್ರ ನಿಜ. ಇಂಥ ಯದ್ವಾತದ್ವಾ ವಿಚಾರದಿಂದ ಯಾರು ಏನಾದಾರು, ಎಂತಾದಾರು ಎಂಬ ನಿಯಮವೇ ಇಲ್ಲ. ಇದುವೆ ಬೆಳೆದರೆ ಸಂದಿಗ್ಧ ವಿಚಾರವಾಗಿ ಮನುಷ್ಯನನ್ನು ಸಿಕ್ಕ ಸಿಕ್ಕ ಸಂದೇಹದಲ್ಲಿ ತಿಕ್ಕಿಮುಕ್ಕಿ ಮಣ್ಣುಪಾಲು ಮಾಡುವುದರಲ್ಲಿ ಸಂದೇಹವಿಲ್ಲ!

---

## ಕೊಡಗಿನ ಬೆಡಗು !

(ಸ್ಮೃತಿಯೊಂದೇ ಸಾಲದೇ ಎಂಬಂತೆ)

(ನೋಹನ ಆಟತಾಳ)

ಬೆಡಗಿನ ಕೊಡಗಿನಲಿ, ನಾ ಹುಟ್ಟಿ ಮಡಿವಂಥ ಪುಣ್ಯವೆನಗೆ
ಬರಲಿ! ॥ಪಲ್ಲ॥

ಕಾವೇರಿ ಜನನಿಯು ತೊಡೆಯ ಮೇಲಾಡುವ ।
ಸಾವಿಲ್ಲದಂತಹ ಸಾರಸವಾಗಿ ॥
ಕಾವೇರಿತಡಿಯಲ್ಲಿ ನೆರಳನ್ನು ಹರಡುವ ।
ನೋವಿಲ್ಲದಂತಹ ವಟವೃಕ್ಷವಾಗಿ ॥ ೧ ॥

ತೋಟದ ತೆಂಗಾಗಿ ನೋಟದ ಹಲಸಾಗಿ ।
ಸೌಸವವನು ಸೂಸಿ ಮೆರೆವೇಲವಾಗಿ ॥
ಕಾಡುಮರದ ಮೇಲೆ ಕಡದಾಗಿ ಬೆಳೆಯುತ್ತ ।
ಮಮತೆಯ ಬೀರುವ ಮರಶೀಗೆಯಾಗಿ ॥ ೨ ॥

ಮುಗಿಲನು ಮುದ್ದಿಸಿ ನಾಡಿನೊಳ್ ಮೆರೆಯುವ ।
ಹಗಲಿರುಳಿಲ್ಲದೆ ಕಲಿಕಾವಲಾಗಿ ॥
ಲೆಕ್ಕವಿಲ್ಲದೆ ಮೃಗ ಹಕ್ಕಿ ಹಂಪಲುಗಳ !
ಧರಿಸುವ ತನುವಿನ ಬಲ್‌ಬೆಟ್ಟವಾಗಿ ॥ ೩ ॥

ನೆಲವನು ತನುವಿಂದ ಹಸುರಾಗಿ ಹಾಸುತ್ತ
ನೋಟವ ತಣಿಸುವ ನೆಲಬಳ್ಳಿಯಾಗಿ ॥
ಕೊಡಗಿನ ತರುಣಿಯು ಕಣ್ಣುಗಳಿಗೆ ಬಂದು ।
ಮಾಟ ಮಾಡುವ ಮರ ಹೂ ಬಳ್ಳಿಯಾಗಿ ॥ ೪ ॥

ಮಲೆಗಳೊಳಗೆ ಮಿಂದು ಇರುಳಿನೊಳ್ ತಿರುಗುತ್ತ ।
ಹುಲಿಯನೆಬ್ಬಿಸಿ ಕೊಂದು ಕಡುವೀರನಾಗಿ ॥
ಆರುತಿಯನು ತಂದು ಪಿಡಿದೆತ್ತಿ ಬೆಳಗುವ ।
ಮೂರುತಿಯನು ಹೊಂದಿ ಬಲು ಧನ್ಯನಾಗಿ ॥ ೫ ॥

ರಣರಂಗದೊಳು ತನ್ನ ಹುಟ್ಟಿನಾಡಿನ ವೈರಿ ।
ಗಣವನ್ನು ಸದೆಯುತ್ತ ರಕ್ತದಿ ಮಿಂದು ॥
ರಕ್ತದ ತುಟಿಯಿಂದ ಹವಳದುಟಿಯು ಕಚ್ಚಿ !
ಸಂತಸಬಡುವಂಥ ಬಡ ಕೊಡಗನಾಗಿ ॥ ೬ ॥

ಬೆಡಗನು ಸುರಿಯುವ ಕೊಡಗಿನ ತರುಣಿಯು ।
ಕುರುಳನು ಕಟ್ಟುವ ತಲೆ ಚೌಕವಾಗಿ ॥
ಶಿರದಲಿ ಕುರುಳಾಗಿ ಮೆರೆಯುವೆ ನಾನೆಂದು ।
ಕೊರಳಲಿ ಹೊಳೆವ ಚಿನ್ನದ ಕಂಠಿಯಾಗಿ ॥ ೭ ॥

ತರುಣ ತರುಣಿಯರ ಹೃದಯದಿ ಸೂಸುವ ।
ಪ್ರೇಮದ ತೊರೆಗಳ ಸಂಗಮವಾಗಿ ॥
ಕಾಮವು ಪ್ರೇಮದ ಮದುವೆಯಾಗಿರುವಂಥ ।
ಸ್ಥಳದ ಮೇಲ್ಮೆರೆಯುವ ಬಿಡದ ಕಟ್ಟಾಗಿ ॥ ೮ ॥

ಮಲೆಗಳ ಬೆಡಗನು ಕುಡಿಯುತ್ತ ಬೆಳೆಯುವ ।
ಕೊಡಗಿನ ಸುಂದರಾಂಗಿಯ ಗರ್ಭವಾಗಿ ॥
ಕೊಡಗಿನ ತರುಣಿಯು ಮೊಲೆಯೊಳು ಸೂಸುವ ।
ತೊರೆಹಾಲು ಕುಡಿಯುವ ಹಸುಬಾಲನಾಗಿ ॥ ೯ ॥

— ಶ್ರೀಧರ.

# ಮಾಗಿ

( ಸಂಕ್ರಾಂತಿಯ ದಿನ ನಾಡ ಉಡಾಳನು ಬರೆದುದು )

(ಮಾಗು=ಪಕ್ವವಾಗು, ಪೂರ್ಣವಾಗು)

೧ 'ಮಾಗಿ' ಯೆಂದು ಈಗಿನ ಕಾಲಕ್ಕೆ ಕನ್ನಡಿಗರ ಹೆಸರು. ಇಂದು ಮಾಗಿ ಯೊಳಗಿನ ಒಂದು ದಿನ. ಸೃಷ್ಟಿಯೊಳಗೆಲ್ಲ ಮೊಳೆತದ್ದು ಬೆಳೆಯಾಗಿರುವದು. ಬೆಳೆದದ್ದೆಲ್ಲ ಸೃಷ್ಟಿಯ ಜೀವ(ನ)ಕಳೆಗಾಗಿ ಮಾಗಿರುವದು. ಇನ್ನು ಮುಂದೆ ಸೃಷ್ಟಿಯು ಸರ್ವೋತ್ತಮನಲ್ಲಿ ಸಾಗುವದು. (ಪ್ರಭವದಲ್ಲಿ ಪ್ರವೇಶಿಸುವದು). ಸಾಗುವ ಮೊದಲು ಸೃಷ್ಟಿಯು ಮಾಗಿರುವದು. ನಾವು ಉಡಾಳರೆಲ್ಲರೂ ಇಂದು ಆತನಲ್ಲಿಯೇ ಗೆಳೆಯ ರಾಗಿ ಸಾಗಬೇಕಾಗಿದೆ. ಆದುದರಿಂದ **ಮೊದಲು ಮಾಗುವಾ, ಮುಂದೆ ಸಾಗುವಾ.**

೨ ಬೆಳೆಯ ನೆಲದೊಳಗಿನ ನಲಿವು, ಹಸುರಿನೊಳಗಿನ ಚೆಲವು, ತೆನೆನಾಳಿನೊ ಳಗಿನ ಒಲವು—ಈ ನಲವು-ಚೆಲವು-ಒಲವು ಮೂರೂ ಮಾಗಿ ಇಂದೊಂದು ಶಾಂತಿ ಮಯ ಕ್ರಾಂತಿಯಾಗಿರುವದು. ಅದೆಂದರೆ ಸೃಷ್ಟಿಯ ಸತ್‌ಸ್ವರೂಪವು. ಈ ಸತ್ ಸ್ವರೂಪಿನ ಪ್ರಣವವೇ ನಮ್ಮ ಉಡಾಳರ ಗುಂಪಿನ ಸರ್ವೋತ್ತಮನು.

೩ ಗುಂಪಿನ ಹೊಳವೇ ಮಾಗಿನ ಕುರುಹು. ಮಾಗುವದು ಗುಂಪು. ಮಾಗಿದುದು ಗುಂಪು. ಮತ್ತು ನಮಗೆಂದು ಈ ಗುಂಪು. ನಮ್ಮೆಲ್ಲರ ತನುವು ಮಾಗಲಿ, ಮನವು ಮಾಗಲಿ; ತನುಮನಗಳೆರಡು ಮಾಗಿದರೆ ಅವೆರಡರ ಗುಂಪು-ಸಾಮ ರಸ್ಯ. ಭಾವನೆಯು ಮಾಗಲಿ, ಬುದ್ಧಿಯು ಮಾಗಲಿ; ಮಾಗಿದರೆ ಅವೆರಡರ ಗುಂಪು. ಹೃದಯವು ಮಾಗಲಿ, ಆತ್ಮವು ಮಾಗಲಿ; ಮಾಗಿದರೆ ಅವೆರಡರ ಗುಂಪು. ಇಂತಹ **ಮಾಗು ಆತನ ಆಗು.**

೪ ಇಂದು ನಾವು ಹುಣ್ಣಿಮೆಯ ತಿಂಗಳರಾಗಬೇಕಾಗಿದೆ. ಹುಣ್ಣಿಮೆಯ ದಿನ ತಿಂಗಳು ಮಾಗುವನು. ಮಾಗಿದ್ದರಿಂದ ಆತನು ಚೆಲುವಾಗಿರುವನು. ಅವನು ಮಾಗಿದುದರಿಂದ ನಾವು ಅವನಿಗೆ ಒಲಿಯುವೆವು; ಅವನಿಂದ ನಲಿಯುವೆವು. ಆತನ ಮಾಗಿನಲ್ಲಿ ಅಲ್ಲವೆ ಆತನ ಚೆಲವು-ನಲಿವು-ಒಲವುಗಳು ? ಆದ್ದರಿಂದ ಪೌರ್ಣಿಮೆಯ ಪೂರ್ಣಚಂದ್ರರಾಗುವಾ. ಒಮ್ಮೆ ತುಂಬದಿಂಗಳರಾದಮೇಲೆ ಲೀಲಾನಂದಕ್ಕೆಂದು ಅಮಾವಾಸ್ಯೆಯೊಳಗೂ ನಾವು ಹೋಗಬಹುದು. **ಆದರೆ ನಾವಿರುವ ಮನೆಯು ಹುಣ್ಣಿಮೆಯು.**

೫ ಇಂದು ನಾವು ಕೃಷ್ಣರಾಗಬೇಕಾಗಿದೆ. ಕೃಷ್ಣನು ಪೂರ್ಣಾವತಾರಿಯೆಂದು ಆರ್ಯರ ಪುರಾತನ ಕಲ್ಪನೆ, ಸನಾತನ ಕಲ್ಪನೆ. ಕೃಷ್ಣನ ಇರವು ಮಾಗಿನ ಇರವು

ಇಂತೆ ಅವನು ಯೋಗಿಯೂ ಉಂಟು, ಭೋಗಿಯೂ ಉಂಟು; ಪೌರಸ್ತ್ಯನೂ ಅಹುದು, ಪಾಶ್ಚಾತ್ಯನೂ ಅಹುದು. ಆತನಲ್ಲಿ ಯೋಗವೂ ಮಾಗಿತ್ತು; ಭೋಗವೂ ಮಾಗಿತ್ತು. ಈ ಮಾಗನ್ನೇ ಅರಿತು ನರೋತ್ತಮನಾಗೆಂದು ತನ್ನ ಗೆಳೆಯ ನರನಿಗೆ ಹಾಡಿ ಕಲಿಸಿರುವನು. ಆದ್ದರಿಂದ ನಾವೆಲ್ಲ ಗೆಳೆಯರು ಮಾಗಿನ ಕೃಷ್ಣರಾಗುವಾ.

---

## ಕೃಷ್ಣೆಗೆ

ನೆಲದೆಂಗುಸೀಯಾಳೆ! ನೆಲದಾಯಿ-ನೊಲೆ-ಹಾಲೆ! ।
ನೆಲಸೋಗೆಗೆಂಬನಿಯೆ! ನೆಲನಿಲಿಂಪರ ಗಂಗೆ! ॥
ನೆಲದ ಚೆಲು-ನಲಿವುಗಳ ತೀರಗಳ ನಡುಹರಿವ ಅಮರರಮೃತದ ಧಾರೆಯೇ! ।
ಸಲಹೆಗಳ ಕಡಲಿಂಗೆ ಕೊಡಹೊರಟ ರಸವಂತಿ! ॥
ಸಲೆ ಸಲುಹೆಗಾರ್ತಿ! ಸಲ್ಲುವಿಯಲ್ಲೆ ಮುದ್ದಾಗಿ! ।
ಚೆಲುಹಾಲುದೆನೆಮುತ್ತುಗಳ ಮುಡಿದ ಮುತ್ತೈದೆ—ಬೆಳವಲದ ಬೈತಲಂತೆ! ॥೧॥

ಬೆಂಗದಿರ-ತಂಗದಿರ ಚಿಕ್ಕೆಗಳ ಚೆನ್ನೆಸೆವ ।
ಬಂಗಾರ-ಹೂಚಟ್ಟು ಕಟ್ಟಿರುವ ತೊಟ್ಟಿಲಲಿ ॥
ಸಿಂಗಾರ-ಸಡಗರದಿ ಕುಳಿತಿರಲು ಜೋಗುಳದ ಪಾಡಿ, ತಂಗಾಳಿ ತೂಗೆ ।
ಇಂಗಿತದ ಇಂಗಿತವು ಕಂಗೊಳಿಸೆ ಕಂಗೊಳಿಸೆ ।
ಭಂಗದಂತಹ ಬೆಡಗು ಮುಂದಮುಂದಕೆ ಬಂದು ।
ಮಂಗಲಾಂಗನೆ! ನಿನ್ನ ಬಲಗೊಂಬೆ ಬಲಗೊಂಬೆಯೆಂದು ಮುದ್ದಾಡಿತೆನ್ನ ॥೨॥

---

## ಬಳಗ

'ಅ' ಕಾರವು ನಾದಮಯ ಜಗತ್ತಿನ ಮೂಲವಿದ್ದಂತೆ, ಅಪ್ಪ, ಅವ್ವ, ಅಜ್ಜ, ಅಮ್ಮ, ಅತ್ತಿಗೆ, ಅಬಚಿ, ಅತ್ತಿ, ಅಕ್ಕ, ಅಣ್ಣ ಈ 'ಅ' ಕಾರದ ಬಳಗವು ಜೀವಮಯ ಜಗತ್ತಿನ ಮೂಲವಿದೆ. ಬಿಡಿಯಾಗಗೊಡದೆ ಬಳಗಗೊಳಿಸುವ ಈ ಹದವು ಮಾನವನ ಮುಮಳಿನಲ್ಲಿ ಹೊಳೆಯಿತು; ಅವನ ಎದೆಮುಗುಳಿಗೆ ತಿಳಿಯಿತು. ಬಿಡಿತನದ ಬಿಕ್ಕಟ್ಟಿನಲ್ಲಿ ಇಡಿತನದ ಒಕ್ಕಟ್ಟು ಪುಟ್ಟಿಸುವ ಹುಟ್ಟೇ ಬಳಗ. ಮನೆತನದೊಳಗಿನ ಮಂದಿ ಜೇನ್ನೊಣಗಳು; ನಚ್ಚಿಯೇ ಜೇನು. ಜೇನು ಇಲ್ಲದಲ್ಲಿ ಹುಟ್ಟಿಲ್ಲ; ಪ್ರೀತಿಯಿಲ್ಲದುದು ಬಳಗವಲ್ಲ.

ಈಗಿನ ಧರ್ಮಗ್ಲಾನಿ ಇಲ್ಲಿ ಇದೆ. ಹಕ್ಕಿಂಗೊಳಗಿನ ಹಸುಗಳಿಗಿಂತ ಒಂದಿಷ್ಟು ಹೇಸಾಗಿರುವೆವು ನಾವು. ಅಥವಾ ನಮಗೆ ದೇವರು ದಯಪಾಲಿಸಿರುವ ಶಕ್ತಿಗಳನ್ನು

ಲೆಕ್ಕಿಸಿ ವಿಚಾರಮಾಡಿದರೆ ನಾವು ಹಕ್ಕೆಯೊಳಗಿನ ಹಸುಗಳಿಗಿಂತ ತುಸು ಕೀಳಾಗಿದ್ದೇವೆವು. ನಾವು ಈ ಶಕ್ತಿಯನ್ನು ಬೀಳುಗೊಳಿಸಿರುವೆವು; ಕೀಳುಗೊಳಿಸಿರುವೆವು; ಹಾಳುಗೊಳಿಸಿರುವೆವು. ಬಳಿಸಿದಂತೆ ಅಳಿಯದೆ ಬೆಳೆಯುವದೆಂದರೆ ಪ್ರೀತಿಯೊಂದೇ. ಪ್ರೀತಿ ಸಾಕ್ಷಾತ್ ಅಮೃತ; ಸಾವಿಲ್ಲದುದು. ಈ ಅಮೃತಸಂಜೀವಿನಿಯು ಸ್ಪರ್ಶವಿಲ್ಲದುದರಿಂದ ಬಳಗವು ಪ್ರೇತಗಳ ಭೂತಗಳ ಸಮೂಹವಾಗಿದೆ. ಪ್ರೀತಿಯಿಲ್ಲದಲ್ಲಿ ಭೀತಿ. ವಿಶ್ವಂಭರನಿಗೆ ಶೂನ್ಯತೆ ಅಸಹ್ಯ.

ಪ್ರೀತಿಯ ಬಿತ್ತಿ ಬೆಳೆಕೊಳ್ಳುವ ಹೊಲವಾಗಬೇಕು ಬಳಗ. ಪ್ರೀತಿಯ ಬೆಳಸು ನಾಡಾಗಬೇಕು ಇಳೆ. ಇದಕ್ಕಾಗಿ ಬಳಗ ಸಾಧನ; ಅಲ್ಲಿಯವರೆಗೆ ಆರಂಭನ ಸಿದ್ಧಿ.

---

## ಬಡತನ

ಭಾಗ್ಯದ ಅಭಾವವು ಬಡತನ. ಅದು ದೇಹಕ್ಕೂ ಬುದ್ಧಿಗೂ ಸಂಬಂಧಿಸಿದೆ. ದೇಹದಾರ್ಢ್ಯಕ್ಕೂ ಕಾಯದ ಕಾಂತಿಗೂ ಸಿರಿಯು ಕಾರಣಳಾದರೆ ಬುದ್ಧಿಯ ಪ್ರಭೆಗೆ ಸರಸ್ವತಿಯೇ ಸೆಲೆಯಾಗಿಹಳು. ಲಕ್ಷ್ಮಿಯ ಲಾಲನೆಯು ಲಯವಾದೊಡನೆ ದೇಹವು ದಾಹದಿಂದ ಬಾಡುವಂತೆ ಶಾರದೆಯ ಒಲವು ತಪ್ಪಿದರೆ ತೇಜವು ತಂಗುತ್ತದೆ.

ಬಡತನಕ್ಕೆ ಬಹು ರೂಪಗಳು. ಸಿರಿಯು ಮರೆಯಾಗುವದರಿಂದ ಬಂದ ಬಡತನವು ಬೇರೆ; ಬುದ್ಧಿಯ ಭಾಂಡಾರವು ಬತ್ತಿಹೋಗುವದರಿಂದ ಬರುವ ಬಡತನವು ಬೇರೆ. ಸ್ಥಿರವಾದ ಮತ್ತು ಹಿರಿದಾದ ಸಿರಿಯಿದ್ದು ಅದರ ಹಿರಿತನವಿಲ್ಲದ ಬಡತನವು ಒಂದುವಿಧ; ಬುದ್ಧಿಯ ಬಲವಾದ ಸೆಲೆಯೇ ತಾನಾಗಿ ಅದರಾಟದ ಒಡೆತನವಿಲ್ಲದ ಬಡತನವು ಇನ್ನೊಂದು ವಿಧ. ಅತ್ತ ಬುದ್ಧಿಯೂ ಬರಿದು, ಇತ್ತ ಸಿರಿಯೂ ಕಿರಿದು ಇಂತಿರುವ ಬಡತನವು ಮತ್ತೊಂದು ವಿಧ. ಆದರೆ ತೇಜವಿಲ್ಲದ ಜೋಲು ಮೋರೆಯೇ ಇವುಗಳಲ್ಲಿಯ ಸಮಾನಧರ್ಮ.

ಸಿರಿಗೆ ಸ್ಥಿರ ಮತ್ತು ಚರ ಎಂಬೆರಡು ಸ್ಥಿತಿಗಳು. ಸರಸ್ವತಿಯು ಗುಪ್ತಳಾಗಿಯೂ ಗೋಚರಳಾಗಿಯೂ ಇರುವಳು. ಸ್ಥಿರಶ್ರೀಯಲ್ಲಿ ಚರಶ್ರೀಯು ಸ್ಥಿರವಾಗಿಯೂ ಚಲವಾಗಿಯೂ ಸಂಚರಿಸುವಳು. ಈ ಚಲಶ್ರೀಯ ಮೂಲಕವೇ ಸಿರಿಯ ನಾಟ್ಯದ ನೋಟಕಳಾಗಿ ಸರಸ್ವತಿಯು ತನ್ನ ಮುಳುಗುವ ಮುಳುಗಿ ಏಳುವ ಅವತಾರದ ಆಟವನ್ನು ಆಡುತ್ತಾಳೆ. ಒಬ್ಬಳು ಕೊಟ್ಟರೆ ಕರಗುವಳು; ಇನ್ನೊಬ್ಬಳು ಕರಗದೆ ಬೆಳೆಯುವಳು.

ಸಾಮಾನ್ಯತಃ ಹಣವು ಕೂಡುತ್ತಲೇ ಗುಣವು ಬಾಡುತ್ತದೆ; ಗುಣವು ಬಾಡುತ್ತಲೇ ಸಿರಿಯು ಮೆಲ್ಲನೆ ಸರಿಯುವಳು. ಇವರಲ್ಲಿ ತಮ್ಮ ಆಟಕೂಟಗಳ ಬಗ್ಗೆ ಕಿವಿ ಮಾತುಂಟು. ಅಕ್ಕತಂಗಿಯರ ಈ ಏಕಾಂತದ ಗುಟ್ಟನ್ನು ಗೊತ್ತು ಹಚ್ಚಿದವನೇ ಜಾಣನು. ಸಿರಿಗೂ ಶಾರದೆಗೂ ಸಂಗಮವಾಗಿರುವದು ಬಹು ವಿರಳ. ಲೀಲೆಗೋಸ್ಕರ

ಅನರ್ಘ್ಯರೂ ಒಂದೆಡೆಯಲ್ಲಿ ಬಲವಾಗಿ ಬೆರೆತರೆ ಅವರ ಗಾಢಾಲಿಂಗನದ ಸೊಬಗೇ ಬೇರೆ. ಸಿರಿಶಾರದೆಯರ ಈ ಅಪ್ಪಿಗೆಯ ಆಟಕ್ಕೆ ಸ್ಥಾನನಾದ ಮಾನವನೇ ಧನ್ಯನು, ದೇಶವೇ ದೊಡ್ಡದು.

ಲಕ್ಷ್ಮೀಸರಸ್ವತಿಯರ ಈ ಆಟವನ್ನು ಹೂಡಿ ಪರಮಾತ್ಮನು ಲೀಲೆಯಲ್ಲಿ ನಲಿದಾಡುವನು. ಇಂದು ಇಂಗ್ಲಂಡದಲ್ಲಿ ಸಿರಿಯನ್ನು ಸೂರೆಗೈದರೆ ಮುಂದೆ ಅಮೇರಿಕೆಗೆ ಅವಳನ್ನು ಅಟ್ಟಿ ಇಂಗ್ಲಂಡವನ್ನು ಬಹುತರ ಬರಿಗೈಯಾಗಿ ಮಾಡುವನು. ಆ ಮೇಲೆ ಅಮೇರಿಕೆಯಿಂದ ಜಪಾನ ಚೀನಗಳಿಗೆ ಒನಪು ಒಯ್ಯಾರಗಳಿಂದಲೂ ಸೆಡವಿನ ಸಡಗರದಿಂದಲೂ ಅವಳು ಬಂದು ಸೇರುವಳು. ಲಕುಮಿಯನ್ನು ಅನಂತವಾದ ಈ ಲೀಲೆಯಲ್ಲಿ ತೊಡಗಿಸಿದಂತೆ ಶಾರದೆಯನ್ನು ಸಹ ಅವನು ಸೂತ್ರದಿಂದ ನಲಿದಾಡಿಸುವನು. ಅವರಿಬ್ಬರ ಆಟಗಳನ್ನು ಕಂಡು ಕುಣಿದಾಡುವನು. ಪರಮಾತ್ಮನು ಭಾರತವನ್ನೇ ತನ್ನ ಪ್ರಿಯತಮವಾದ ಮೆಚ್ಚಿನ ಲೀಲಾಭೂಮಿಯನ್ನಾಗಿ ಮಾಡಿರುವನೆಂದು ತೋರುತ್ತದೆ. ಭರತಖಂಡವು ಅವನಿಗೆ ನಂದನವನವು. ಇಲ್ಲಿ ಅನಾದಿಕಾಲದಿಂದಲೂ ಸಿರಿಸರಸತಿಯರ ಈ ಕ್ರೀಡೆಯು ನಡೆದಿರುವದು.

ವೇದಕಾಲದ ನಮ್ಮ ಬುದ್ಧಿ ವೈಭವಕ್ಕೆ ಅಳತೆಯಿರಲಿಲ್ಲ. ಅಂದು, ಆಳವಾದ ವಿಚಾರಸಾಗರದಲ್ಲಿ ತಳತನಕ ಮುಳುಮುಳುಗಿ ಆತ್ಮಪ್ರೇರಣೆಯ ಪ್ರಾತಿಭಚಕ್ಷುವಿನಿಂದ ಅನಂತವಾದ ತತ್ತ್ವರತ್ನಗಳನ್ನು ದೃಷ್ಟಿಸಿ ಮಂತ್ರದ್ರಷ್ಟರಾಗಿ ಸಚ್ಚಿದಾನಂದದಲ್ಲಿ ಈಜಾಡಿ ಮೈಮರೆತೆವು. ಆದರೆ ಅನಂತಯುಗಗಳ ಸಂದುಕಟ್ಟಿನೊಳಗಿಂದ ಹಾಯ್ದು ಇಂದು ಆ ಪ್ರೇರೇಪಕಪ್ರಾತಿಭದೃಷ್ಟಿಗೆ ಪರಾಙ್ಮುಖರಾಗಿರುವೆವು. ಮೇರೆಯಿಲ್ಲದ ಸಿರಿಯಿಂದ ಮೆರೆದು ಅಖಿಲ ಪ್ರಪಂಚಕ್ಕೆ ನಮ್ಮ ಕಲಾಕೌಶಲ್ಯದಿಂದ ಬೆರಗು ಮಾಡಿ ಬೆರಳು ಕಚ್ಚಿಸಿದ ನಾವು ಇಂದು ದಾರಿದ್ರ್ಯದ ದುಃಖದಲ್ಲಿ ದೋಲಾಯಮಾನರಾಗಿರುವೆವು. ವಿತ್ತ ವಿದ್ಯೆ ವೈದಗ್ಧ್ಯಗಳಿಂದ ರಾಷ್ಟ್ರಗಳ ನಭೋಮಂಡಲದಲ್ಲಿ ಸೂರ್ಯನಂತೆ ವಿರಾಜಮಾನರಾದ ನಾವು ಬಗೆಬಗೆಯ ಬಡತನದ ದಾಹದಲ್ಲಿ ದಗ್ಧರಾಗಿ ಮ್ಲಾನವದನರಾಗಿರುವೆವು. ಗೊತ್ತುಗುರಿಗಳಿಲ್ಲದ ದಾರಿಕಾರರಾಗಿರುವೆವು. ಅಂದಿನ ಸಾಹಿತ್ಯ–ಧರ್ಮ–ಸಂಗೀತ–ಕಲೆಗಳು ಐಸಿರಿಗೊಪ್ಪುವ ಮೈಸಿರಿ ಇವುಗಳು ಈಗ ಬಹುಮಟ್ಟಿಗೆ ಮರೆಯಾಗಿರುವವು. 'ನೀಚೈರ್ಗಚ್ಛತ್ಯುಪರಿ ಚದಶಾ ಚಕ್ರನೇಮಿಕ್ರಮೇಣ' ಎಂಬ ಮಾತು ಹುಸಿಯಲ್ಲ.

ಬಡತನದಲ್ಲಿ ಮನುಷ್ಯನು ಮಿತಿಮೀರಿ ಮಿಡುಕುತ್ತಾನೆ. ಬಡತನವು ಎಷ್ಟೋ ಆಪತ್ತುಗಳ ತವರುಮನೆಯು. ಅದು ಅಶ್ವತ್ಥಾಮನಿಗೆ ಹಸುವಿನ ಹಾಲಿನ ಬದಲು ಹಿಟ್ಟಿನ ಹಾಲನ್ನು ಕುಡಿಸಿತು. ಅದರಿಂದಲೇ ದ್ರೋಣಾಚಾರ್ಯನು ಬೇಸತ್ತು ಕೊನೆಗೆ "ಧಿಗಿಯಂ ದರಿದ್ರತಾ" ಎಂದು ಉಸುರ್ಗರೆದನು. ನಳನು ದರಿದ್ರತೆಯಿಂದ ದಿಗಂಬರ

ನಾವನು. (ಆದರೆ ಅವಧೂತರ ದಿಗಂಬರತ್ವವು ಬಡತನದಿಂದಲ್ಲ; ತ್ಯಾಗದ ತೇಜದಿಂದ). ಬಡತನವು ಹರಿಶ್ಚಂದ್ರನನ್ನು ಪರಿಪರಿಯಿಂದ ಪೀಡಿಸಿತು. ಹಿಂದುಸ್ಥಾನದ ಈ ಶಿಂಶೆ ಶತಮಾನದ ಬಡತನವು ಬ್ರಾಹ್ಮಣನನ್ನು ಶೂದ್ರನನ್ನಾಗಿ ಮಾಡಿದೆ. ಬಡತನವು ಭಾರತ ದೇಶವನ್ನು ಹೆಬ್ಬಾವಿನಂತೆ ಸುತ್ತುಹಾಕಿದೆ. 'ಬಡತನವು ಬೇಕಿದ್ದರೆ ಭಾರತಕ್ಕೆ ಬರ ಬೇಕು.' ಎಂಬ ಹೊಸಗಾದೆ ಉಂಟಾಗುವಂತಿದೆ. ಜೀವಧಾರಣೆಯೇ ಬಿಗಿಯಾದ ಮೇಲೆ ಕಲಾಕೌಶಲ್ಯ ಆತ್ಮಾನಾತ್ಮವಿಚಾರ ಇವುಗಳ ಬೆಳಿಗೆಯಂತೂ ದೂರದ ಮಾತು. ಹಿಂದುಸ್ಥಾನದ ೪ ಕೋಟಿ ಪ್ರಜೆಗಳು ಅನ್ನಅನ್ನವೆಂದು ಹೈರಾಣಾಗಿರುವರು. ಕಲಿಯುಗದಲ್ಲಿ ಪ್ರಾಣವು ಅನ್ನಗತವಾಗಿದೆಯಂತೆ. ಹೊಟ್ಟೆಗಿಲ್ಲದೆ ದೇಹವು ರಕ್ತ ರಹಿತವಾಗಿ ಮಾಂಸ ಮಜ್ಜೆಗಳು ಒಣಗಿಹೋಗಿವೆ. ಕಾರ್ಯಮಾಡಲು ಬೇಕಾದ ಶಕ್ತಿ ಸರ್ವಸ್ವವೂ ನಷ್ಟವಾಗಿದೆ. ಮನುಷ್ಯನ ಬೇರೆ ಬೇರೆ ಅಂಗಗಳ ಮತ್ತು ಶಕ್ತಿ ಗಳ ಸಂಪೂರ್ಣ ಬೆಳವಣಿಗೆಯು ಶರೀರಸಂಪತ್ತಿಯಲ್ಲಿರುವದರಿಂದ ಅಸಾಧ್ಯ ವಾಗಿದೆ. ಸಾಧನವು ಸುದೃಢವಾಗಿರದಿದ್ದರೆ ಸಾಧ್ಯವು ಸಾಧ್ಯವಲ್ಲ. ಈಗ ದೈವ ಳ್ಳವರು ದರಿದ್ರರನ್ನು ದುಡುಕುತ್ತಾರೆ. ಮನಬಂದಂತೆ ಹೆಮ್ಮೆಯಿಂದ ಪಶುಗಳ ಗೋಪ್ಯವ ಆಚರಣೆಯನ್ನು ಮಾಡುತ್ತಾರೆ. ಆದ್ದರಿಂದ ದೇಶದೇಶಗಳಲ್ಲಿ ಕೂಲಿಕಾರರು ಸಂಘಗಳನ್ನು ಮಾಡಿ ಸಂಪತ್ತುಗಾರಿಕೆಯನ್ನು ಸ್ವಾಧೀನಪಡಿಸಿಕೊಳ್ಳಲು ಹೊಂಚು ಹಾಕುತ್ತಿದ್ದಾರೆ. ಕೂಲಿಕಾರರ ಕೈವಾರಿಯಾದ ಲೆನಿನ್ನನು ರಶಿಯಾದೇಶದಲ್ಲಿ ಬಡ ವರ ಉದ್ಧಾರದದೆಶೆಯಿಂದ ಹೆಣಗಾಡಿದನು. ಭರತಭೂಮಿಯಲ್ಲಿ ಮಹಾತ್ಮಾಜಿಯಂಥ ದೀನಬಂಧುಗಳು ಬಡತನದ ಬನ್ನಗಳನ್ನು ಬಡಿಸಲು ಹೋರಾಡುತ್ತಿದ್ದರೆ. ಹಿಂದುಸ್ಥಾ ನದ ಪ್ರತಿಯೊಬ್ಬ ಮನುಷ್ಯನ ಸರಾಸರಿ ಮಾಸಿಕ ಉತ್ಪನ್ನವು ೨ ಇಲ್ಲವೆ ೩ ರೂಪಾಯಿ ಗಳಂತೆ. ಅಂದಬಳಿಕ ಎಷ್ಟು ಜನರು ಕೂಳಿಲ್ಲದೆ ಗೋಳಾಡುತ್ತಿರುವರೆಂಬ ಮಾತು ನಿಚ್ಚಳವಾಗಿ ಕಾಣುವುದು. ಬಟ್ಟೆಯಿಲ್ಲದ ಬಡವರ ಲೆಕ್ಕವೇ ಇಲ್ಲ. ಕನಾಟಕದಲ್ಲಿ ಈ ವರ್ಷ ಭಯಂಕರವಾದ ಬರಗಾಲ. ಸಿರಿಯು ಪಶ್ಚಿಮಕ್ಕೆ ಮುಖಮಾಡಿರುವಳು. ವಸ್ತು ಸ್ಥಿತಿಯು ಇಂತಿರಲು ಭರತಭೂಮಿಯ ಪುತ್ರರು ವಿದೇಶದವರೊಡನೆ ಎಲ್ಲಬಗೆಯ ಮೇಲಾಟಗಳಲ್ಲಿಯೂ ಸಮಾನಸ್ಕಂಧರಾಗಿ ಸೆಡ್ಡುಹೊಡೆದು ಎದುರಾಗುವದೆಂತು? ಪಾಶ್ಚಿಮಾತ್ಯರಿಗೆ ಸಿರಿಯಲ್ಲಿಯೇ ಬಡತನವುಂಟಾಗಿದೆ. ಏಕೆಂದರೆ ಅವರ ಐಶ್ವರ್ಯದ ವಿಲಾಸಲಾಲಸೆಯು ಇನ್ನೂ ಪ್ರಖರವಾಗಿದೆ. ಕರ್ಮವೀರರಾಗಿದ್ದ ನಮ್ಮ ಕ್ರತುಶಕ್ತಿಯು ಇಂದು ಬಡತನದಿಂದ ಕಕ್ಕಾಗಿ ಹೋಗಿದೆ. ಪ್ರಾಚೀನಕಾಲದ ನಮ್ಮ ಆ ಪ್ರಚಂಡ ಕಾರ್ಯಶಕ್ತಿಯನ್ನೂ ಪ್ರಗಲ್ಭವಾದ ವಿಚಾರಶಕ್ತಿಯನ್ನೂ ನಾವು ಸಂಪಾದಿ ಸಬೇಕು. ಸಿರಿಯೂ ಸರಸ್ವತಿಯೂ ಚಕ್ಕಂದದಿಂದ ನಲಿದಾಡಿ ಪರಸ್ಪರರನ್ನು ಎಂದೂ ಅಗಲಲಾರದ ಸ್ಥಿತಿಯಲ್ಲಿ ಗಾಢವಾಗಿ ಅಪ್ಪಿಕೊಳ್ಳಲಿ. ಭಾರತವರ್ಷವು ಅಧ್ಯಾತ್ಮದ ಲ್ಲಿಯೂ ಭೌತಿಕಶಾಸ್ತ್ರಗಳಲ್ಲಿಯೂ ಮೇಲ್ಮೆಯಿಂದ ಮಿನುಗಿದಂತೆ ಇಂದೂ ಮಿನುಗಲಿ.

ಈ ಕನಸನ್ನು ಕಣ್ಣಾರೆ ಕಾಣಲು ನಾವು "ಸಂಘಂ ಶರಣಂ ಗಚ್ಛಾಮಃ—ಸತ್ಯಂ ಶರಣಂ ಗಚ್ಛಾಮಃ" ಎಂದು ಉದ್ಘೋಷಿಸುವಾ. ಮತ್ತು ಬಡತನದಲ್ಲಿಯೇ ಬೀಜಗೊಂಡ ಒಡಕುಗಳನ್ನು ಬೇರುಸಹಿತ ಕಿತ್ತಿಹಾಕಿ ಸಹೃದಯರಾಗಿ ಬೆರೆಯುವಾ. ಪರಸ್ಪರರನ್ನು ಗಾಢವಾಗಿಯೂ ಗೂಢವಾಗಿಯೂ ತಿಳಿದು ಬೆಳೆಯುವಾ. ಎಲ್ಲ ಬಗೆಯ ಬಡತನವು ಇದರಿಂದ ಹಿಂಗುವದು. ಇದು ನಿಜ.

—ಗೋ।

---

## ವಿಚಾರ

ಕನ್ನಡಿಗರು ವಿಚಾರಕ್ಕೂ ವಿಚಾರೋತ್ಪಾದಕ ಕೇಂದ್ರಿಯಕ್ಕೂ 'ಬಗೆ' ಎಂಬ ಒಂದೇ ಹೆಸರನ್ನು ಇಟ್ಟಿರುವರು. ಬಗೆಗಳನ್ನು ತೋರ್ಪಡಿಸಲಿಕ್ಕೂ ಬೇರ್ಪಡಿಸಲಿಕ್ಕೂ ನಮ್ಮ ಬಗೆ ಬಗೆಯುವದು. ಬಗೆಯೆಂದರೆ ಜಾತಿ; ಬಗೆಯೆಂದರೆ ರೀತಿ. ರೀತಿ ಜಾತಿಗಳ ಅನೇಕತ್ವವನ್ನು ವಿಂಗಡಿಸಿ ತೋರಿಸುವದೇ ಬಗೆ. ಶಿವಜೀವರ ಸಂಬಂಧದಂತೆ, ಬಗೆ ಹುರುಳುಗಳ ಸಂಬಂಧವಿರುವದು. ಹುರುಳೊಂದು; ಬಗೆ ಬೇರೆ. ಶಿವನೊಬ್ಬ; ಜೀವ ಹಲವು. ಬಗೆಗಳೆಂದರೆ ಹುರುಳಿನ ಕದಿರುಗಳು. ಈ ಕದಿರುಗಳಿಂದಲೇ ಹುರುಳಿನ ಬೆಳಕು ಹರಡುವದು. ಹುರುಳು ಉಗಮ; ವಿಚಾರವು ಪ್ರವಾಹ.

ಒಳಗಿಲ್ಲವ ಹೊರಗಿಲ್ಲ. ಒಡಲು ಕಂಡರೂ ಜೀವಕಾಣದು. ಮಾತು ಕೇಳಿಸಿದರೂ ತಿಳಿವು ತೋರದು. ತೋರುವುದರ ಹಿಂದೆ ತೋರದ್ದೊಂದಿದೆ. ಹುರುಳಿನಿಂದ ವಿಚಾರ; ವಿಚಾರದಿಂದ ವ್ಯವಹಾರ—ಆಚಾರ. ವ್ಯವಹಾರದ ಜೀವ ವಿಚಾರ; ವಿಚಾರದ ಆತ್ಮತತ್ತ್ವ ಹುರುಳು. ದೇಹಾತ್ಮಗಳ ಸಂಗಮಭೂಮಿಯಾದ ಜೀವದಂತೆ, ತತ್ತ್ವ ಮತ್ತು ವ್ಯವಹಾರಗಳಿಗೆ ವಿಚಾರವು ಸೇತುವಾಗಿದೆ. ಈ ಸೇತುವಿನಿಂದಲೇ ತತ್ತ್ವಗಳು ವ್ಯವಹಾರದಲ್ಲಿ ಅವತರಿಸುವವು. ಈ ಸೇತುವಿನಿಂದಲೇ ವ್ಯವಹಾರದ ಉಚ್ಚಾರವು ತತ್ತ್ವರೂಪದಲ್ಲಾಗುವದು. ತತ್ತ್ವ ವ್ಯವಹಾರಗಳ ಪರಸ್ಪರ ಪರಾಙ್ಮುಖತೆಗೆ ವಿಚಾರಲೋಪವೇ ಕಾರಣವು.

ಗಿಡಕ್ಕೂ ಬಿತ್ತಿಗೂ ಇದ್ದ ಹತ್ತುಗಡಿಯೇ ವ್ಯವಹಾರಕ್ಕೂ ವಿಚಾರಕ್ಕೂ ಇರುವದು. ವ್ಯವಹಾರದಲ್ಲಿ ಅಂಕುರಿಸಿದ ಅಥವಾ ಅಂಕುರಿಸಲಾರದ ವಿಚಾರವು ನಾಶಹೊಂದುವದು. ವಿಚಾರದಿಂದಲೇ ವ್ಯವಹಾರವು ಹುಟ್ಟಿದರೂ ವ್ಯವಹಾರದಿಂದಲೇ ವಿಚಾರವು ಸಫಲವಾಗುವದು. ಹುರುಳು ಕಾಣದವನಿಗೆ ವಿಚಾರಗಳು ತೋರವೆಂದೂ ವಿಚಾರ ತೋರದವರಿಗೆ ವ್ಯವಹಾರವು ನೀಗದೆಂದೂ ನನ್ನ ಮತ.

—ದತ್ತ

---

# ಭಾಗವತ ಧರ್ಮದೀಕ್ಷೆ

(ಭಾಗವತದಿಂದ)

ಅರಿವಿನಿಂದಲೇ ಇರವು. ಅರಿವ ದೊರಕಿಸಲು ನಿಜವಾದ ನೆರವೆಂದರೆ ನರತನುವು. ನರತನುವು ಅಪರೂಪವಾದ್ದರಿಂದ ಮರುಳತನಕ್ಕೆ ಈಡುಮಾಡದೆ ಪರತತ್ತ್ವವನ್ನು ಅರಿಯಲು ಯತ್ನಿಸಬೇಕು. ಅದರ ವಿಪರಿಣಮಿಸುವ ಅವಸ್ಥೆಗಳಲ್ಲಿ ಚಿಕ್ಕಂದೇ ಮುಖ್ಯದು. ಚಿಕ್ಕಂದೇ ಸಕಲವಿಧಸಂಸ್ಕಾರಕ್ಷೇತ್ರವು. ಚಿಕ್ಕಂದಿನ ಚೊಕ್ಕತನವು ಉಚ್ಚಪ್ರತೀಯದು. ಅದರಿಂದ ಬಲ್ಲಿದನು ಚಿಕ್ಕಂದಿನಲ್ಲಿಯೇ ಭಾಗವತ ಧರ್ಮದೀಕ್ಷೆಯನ್ನು ಸ್ವೀಕರಿಸಬೇಕು, 'ಕೌಮಾರೇ ಆಚರೇತ್ ಪ್ರಾಜ್ಞಃ ಧರ್ಮಾನ್ ಭಾಗವತಾನ್ ಇಹ.'

ನರನು ನಾರಾಯಣನ ಅಡಿಯಲ್ಲಿ ಆತ್ಮದ ಮುಡುಪನ್ನು ಇಡುವದೇ ಭಾಗವತ ಧರ್ಮದ ತಿರಳು. ಭಾಗವತರಾಗಿ ಬಾಳಿವರೇ ಬಾಳ್ವೆ. ಇಲ್ಲದಿದ್ದರೆ ಅಲ್ಲದ ಹರಕ ಇರವು. ಇಂಥ ಬಣಗು–ಬಾಳ್ವೆಯವರೇ ಬಹಳ. ಬಾಳ್ವೆಯನ್ನುಂಡು ಬಾಳ್ವೆಯ ತಿರುಳು ಕಂಡವರು ಬಟ್ಟಿನ ಮೇಲೆ ಎಣಿಸುವಷ್ಟು ಇರುವರು.

ದೇಹಿಗಳಿಗೆ ದೈವ–ದೇಹಯೋಗದಿಂದ ಐಂದ್ರಿಯಿಕ ಸುಖದುಃಖಾಗಮನವು ಸಹಜ. ಹುಸಿಸೊಗದ ಸಲುವಾಗಿ ಹೆಣಗುವದು ಜೀವಿತವನ್ನು ಜೊಳ್ಳುಮಾಡಿಕೊಂಡಂತೆ. ಬಣಗುಬಾಳ್ವೆಗಾರರಾಗಿ ಆಸಕ್ತಿಯಿಂದ ಬದ್ಧರಾದ ಮೇಲೆ ಆತ್ಮೋದ್ಧರಣದ ಸ್ಮರಣ ಕೂಡ ಆಗುವ ಬಗೆ ಹೇಗೆ? ದುಡ್ಡಿಗಾಗಿ ಗುಡ್ಡದಂಥ ಸಂಚು ಹಂಚಿಕೆ ಹಾಕುವವರು ಅಂತರ್ಮುಖರಾಗುವದೆಂತು? ಕಲತ್ರ–ಪುತ್ರ–ಮಿತ್ರ–ಕ್ಷೇತ್ರಸಂಬಂಧವನ್ನು ಆಂತರಂಗಿಕ ಸ್ನೇಹದಿಂದ ಪೋಷಿಸದೆ ಬಹಿರಂಗೋಪಚಾರದ ಮಣ್ಣಿನಿಂದ ಮೆತ್ತಲು ಅಂತರಂಗಸ್ಥ ನಾರಾಯಣನು ಮೆಚ್ಚುವದೆಂತು? ಆದ್ದರಿಂದ ವಿಷಯಾತ್ಮಕರ ಪಾಲಾಪೂಮಾಡಿ ಈಶ್ವರಾಭಿಮುಖರಾಗಬೇಕು. ಈಶ್ವರನನ್ನು ಸಂತೋಷಿಸುವದು ಅಷ್ಟು ಕಷ್ಟದ ಮಾತಲ್ಲ. ಅವನೇ ಎಲ್ಲನು. ಎಲ್ಲವೂ ಅವನು. ಅವನೇ ಚಲುವು. ಅವನೇ ಒಲವು. ಅವನೇ ನಲಿವು. ಅವನೇ ಬಲವು. "ಸರ್ವಭೂತೇಷು ಸೌಹಾರ್ದಂ ಕುರುತ ಯಯಾ ತುಷ್ಯತಿ ಅಧೋಕ್ಷಜಃ" ಇದೇ ಧರ್ಮವು.

ಹೃದಯದಲ್ಲಿ ಪ್ರೇಮದ ಸೆಲೆಯಿದೆ, ಅದರ ಮುಖವನ್ನು ತೆರೆಯಬೇಕು. ಅಂದರೆ ಸೌಹಾರ್ದಸರಿತ್ತು ಹರಿಯುವದು. ಇದೇ ಜಲದಿಂದ ನಾರಾಯಣನ ಪಾದಾಭಿಷೇಕವನ್ನು ಮಾಡಿ ಆತ್ಮಪುಷ್ಪವನ್ನೇರಿಸಬೇಕು, ಇದೇ ಭಾಗವತಧರ್ಮದೀಕ್ಷಾವಿಧಿಯು.

—ಚಿದಂಬರ

-: ಓಂ :-

# ಬಿಡುಗಡೆ

( ರವೀಂದ್ರರ ಒಂದು ಚಿಕ್ಕ ಕತೆ )

ಅರಮನೆಯಲ್ಲಿ ಕಳವಾಗಿದೆ ಎಂದು ಊರ ತುಂಬೆಲ್ಲ ಸುದ್ದಿ. ಕಳ್ಳನನ್ನು ಹುಡುಕಲೇ ಬೇಕು; ಇಲ್ಲವಾದರೆ ಕಾವಲಗಾರರ ಮೇಲೆ ಸೇಚು ಬರುವದು.

ಊರ ಹೊರಗಿನ ಒಂದು ಹಾಳು ಗುಡಿಯಲ್ಲಿ ವಜ್ರಸೇನನೆಂಬೊಬ್ಬ ಬೇರೂರ ವ್ಯಾಪಾರಸ್ಥನು ತನ್ನ ಸರಕುಗಳನ್ನೆಲ್ಲ ಕಳ್ಳರಪಾಲಿಗೀಡುಮಾಡಿ ಮಲಗಿಕೊಂಡಿದ್ದನು. ಅರಮನೆಯ ಕಾವಲುಗಾರರು ಇವನನ್ನೇ ಕಳ್ಳನೆಂದು ಆರೋಪಿಸಿ ಸೆರೆಮನೆಗೆ ಎಳೆದೊಯ್ಯುತ್ತಿದರು.

ನಡು ಹರೆಯದವಳಾದ ಶ್ಯಾಮಸುಂದರಿಯು ಬೆಡಗಿನಿಂದ ತನ್ನ ಮನೆಯ ಪಡಸಾಲೆಯಲ್ಲಿ, ಹೋಗುವ ಹಾದಿಕಾರರನ್ನು ನೋಡುತ್ತ ಸುಮ್ಮನೇ ಕುಳಿತಿದ್ದಳು, ಒಮ್ಮೆಲೆ ಬೆಚ್ಚಿಬಿದ್ದು ತನ್ನ ದಾಯಿಯನ್ನು ಕರೆದು "ಅಯ್ಯೋ! ಸುರರನ್ನು ಕೂಡ ಜಯಿಸುವ ಸೌಂದರ್ಯದಿಂದ ಶೋಭಿಸುವ ಈ ನವಯುವಕನನ್ನು ಸಾಮಾನ್ಯ ಕಳ್ಳರಂತೆ ಸೆರೆಮನೆಗೆ ಎಳೆದೊಯ್ಯುತ್ತಿರುವರಲ್ಲ. ಇವನು ಯಾರಿರಬಹುದು? ನಾನು ಹೇಳಿದೆನೆಂದು ಆ ಕಾವಲುಗಾರರಿಗೆ ಹೇಳಿ ಇತ್ತ ಅವನನ್ನು ತರಹೇಳು." ಅಂದಳು.

ಆ ಕಾವಲುಗಾರರ ಹಿರಿಯನು ಆ ಸೆರೆಯಾಳಿನೊಂದಿಗೆ ಶ್ಯಾಮಸುಂದರಿಯ ಬಳಿಗೆ ಬಂದು—'ತಾಯೀ ತಮ್ಮ ಆಜ್ಞೆಯು ಹೊತ್ತಿಲ್ಲದ ಹೊತ್ತಿನಲ್ಲಾಗಿದೆ. ನಾನೀಗ ಬೇಗ ದೊರೆಯ ಬಳಿಗೆ ಹೋಗಲೇಬೇಕಾಗಿದೆ.'

ವಜ್ರಸೇನನು ಬಾಗಿದ ಮೊಗವನ್ನು ಮೇಲೆತ್ತಿ ಒಮ್ಮಿಂದೊಮ್ಮೆ 'ಏನು ಇದೆಂಥ ಕವ್ವುಳುಸುನ ನಿಮ್ಮದು ತಾಯಿ, ಹಾದೀಹೋಗುವವನನ್ನು ಒಳಗೆ ಕರೆತಂದು ನಿನ್ನ ಕಪ್ರಿರ ಲವಲವಿಕೆಗಾಗಿ ನನ್ನನ್ನು ಹೀಯಾಳಿಸುವದೇ!'

'ನಿಮ್ಮನ್ನು ಹೀಯಾಳಿಸಲೇ! ನಾನೀಗಲೇ ನನ್ನ ಈ ಬೆಡಗಿನ ಆಭರಣಗಳ ಬದಲು ನಿಮ್ಮ ಈ ಬೇಡಿಗಳನ್ನಿಟ್ಟುಕೊಳ್ಳಬಹುದಾಗಿತ್ತು' ಹೀಗೆಂದು ಸುಂದರಿ ಅಂದಳು. ಆ ಮೇಲೆ ಆ ಕಾವಲುಗಾರರ ಹಿರಿಯನನ್ನು ಕುರಿತು ನನ್ನ ಈ ಭಾಗ್ಯವನ್ನೆಲ್ಲ ತಕ್ಕೊಂಡು ಇವನನ್ನು ಬಿಟ್ಟುಬಿಡು ಅಂದಳು.

ಅವನದಕ್ಕೆ ತಲೆಬಾಗಿ 'ದೊರೆಯ ಕೋಪವನ್ನು ತಗ್ಗಿಸಲು ನಮಗೆ ಅಪರಾಧಿಯು ಬೇಕೇಬೇಕು.' ಎಂದು ಅಂದನು.

‘ ಸೆರೆಯಾಳಿನ ಬಿಡುಗಡೆಗಾಗಿ ನನಗೆರಡು ದಿನದ ಅವಕಾಶವನ್ನಾದರೂ ಕೊಡು ’ ಎಂದು ಸುಂದರಿಯು ಹಟ ಹಿಡಿದಳು. ಅದಕ್ಕವನು ಮುಗುಳುನಗೆ ನಕ್ಕು ‘ ಆಗಲಿ ’ ಎಂದನು.

ಎರಡನೆಯದಿನದ ರಾತ್ರಿಯ ಭಜನೆಯನ್ನು ವ್ರಜಸೇನನು ಸೆರೆಮನೆಯಲ್ಲಿಯೇ ಮುಗಿಸಿ ತನ್ನ ಕಡೆಯ ಕಾಲವನ್ನು ಎದುರು ನೋಡುತ್ತ ಕುಳಿತಿದ್ದನು. ಅಷ್ಟರಲ್ಲಿ ಸೆರೆಮನೆಯ ಬಾಗಿಲು ತೆರೆದು ಒಬ್ಬ ತರುಣಿಯು ಕೈಯಲ್ಲಿ ದೀಪ ತಕ್ಕೊಂಡು ಬಂದು ಅಲ್ಲಿಯ ಆಳಿಗೆ ಅವನ ಬೇಡಿಯನ್ನು ಬಿಚ್ಚ ಹೇಳಿದಳು. ಕೂಡಲೆ ಅವನು ಬಿಚ್ಚಿದನು.

“ ಕಗ್ಗತ್ತಲೆಯಾದೊಡನೆ ನಸುಕು ತನ್ನ ಬೆಳ್ಳೀ ಚಿಕ್ಕೆಯನ್ನು ತಕ್ಕೊಂಡು ಬರು ವಂತೆ, ಕರುಣಾಮಯಿೞ ನೀನು ಅಂಥ ಸಿನ್ನ ದೀಪ ತಕ್ಕೊಂಡು ಬಂದೆ ” ಎಂದು ಅವನು ಅಂದನು.

‘ ನಿಸ್ಸಂಶಯವಾಗಿ ಕರುಣಾಮಯಿೞ’ ಎಂದು ಸುಂದರಿಯು ಅಂದು ಕೊಳ್ಳದೆ ನಕ್ಕುಬಿಟ್ಟಳು. ಆಗ ಅವಳ ಕಣ್ಣುಗಳೆರಡೂ ನೀರಿನಿಂದ ತುಂಬಿ ಬಿಟ್ಟವು. ಅವಳು ಗದ್ಗದ ಸ್ವರದಿಂದ, ‘ ಈ ಸೆರೆಮನೆಯ ಯಾವ ಗೋಡೆಯ ಕಲ್ಲೂ ಈ ಹೆಣ್ಣು ಹೃದ ಯದಷ್ಟು ಕಠಿಣವಾಗಿರುವದಿಲ್ಲ. ’ ಹೀಗೆಂದವಳೇ ಅವನ ಕೈಹಿಡಿದು ಸೆರೆಮನೆಯ ಹೊರಕ್ಕೆ ಎಳೆದೊಯ್ದಳು.

( ಅರುಣೋದಯವಾಯಿತು. ) ವರುಣ ನದಿಯ ಮೇಲೆ ಸೂರ್ಯನು ಕಾಣ ಹತ್ತಿದನು. ದಂಡೆಯಲ್ಲಿ ಒಂದು ಡೋಣಿಯು ನಿಂತಿತ್ತು. “ ನನ್ನೊಡನೆ ಹಡಗ ಹತ್ತು ” ಎಂದು ಸುಂದರಿಯು ಆ ಯುವಕನಿಗೆ ಅಂದಳು. ನಾನಿಂದು ಎಲ್ಲ ಬಂಧನ ಗಳನ್ನು ಕಡೆದುಕೊಂಡು ನಿನ್ನೊಡನೆ ಡೋಣಿಯ ಲ್ಲಿ ಹೊರಟಿರುವೆನೆಂದು ಅವಳು ಅವನಿಗೆ ಹೇಳಿದಳು.

ಡೋಣಿಯು ವೇಗವಾಗಿ ಸಾಗಿತು. ಚಿಕ್ಕೆಗಳು ಅಕ್ಕರದಿಂದ ಹಾಡತೊಡ ಗಿದವು. ಆಗ ವಜ್ರಸೇನನು ಅವಳನ್ನು ಕುರಿತು ‘ ಪ್ರಿಯೆ ನನ್ನ ಬಿಡುಗಡೆಗಾಗಿ ಆದಾವ ಎಣಿಕೆಯಿಲ್ಲದ ಐಶ್ವರ್ಯವನ್ನು ಕೊಟ್ಟಿರುವೆ ಹೇಳು ’ ಎಂದು ಅಂದನು.

‘ ಛೀ ಈಗ ಬೇಡ ‘ ಎಂದು ಶ್ಯಾಮಸುಂದರಿ ಅಂದಳು.

ಸಂಜೆಯಾಯಿತು. ಹಳ್ಳಿಯ ಹೆಣ್ಣುಮಕ್ಕಳು ಬಟ್ಟೆಗಳನ್ನೆಲ್ಲ ನದಿಯಲ್ಲಿ ಒಗೆದು ಕೊಂಡು ನೀರು ತುಂಬಿಕೊಂಡು ತಮ್ಮ ತಮ್ಮ ಮನೆಗೆ ಹೋದರು. ದಿನದ ಎಲ್ಲ ವ್ಯಾಪಾರಗಳೂ ಕಟ್ಟಾದವು. ಸುತ್ತಲೂ ಶಾಂತತೆಯು ಸೂರಿಯಾಯಿತು.

ಸಂಜೆಯ ಪ್ರಶಾಂತವಾದ ಹೊತ್ತಿನಲ್ಲಿ ಶ್ಯಾಮಸುಂದರಿಯ ಮೋರಿಯ ಮೇಲಿನ ತೆರೆ ( ಬುರುಕಿ ) ಯ ಸೆರಗು ಕೆಳಗೆ ಜರಿಯಿತು. ವಜ್ರಸೇನನು ಅವಳ ಕಿವಿಯಲ್ಲಿ ‘ ನೀನು ಹೀಗೆ ನನ್ನನು ಆಜನ್ಮಬದ್ಧನನ್ನಾಗಿ ಮಾಡಲಿಕ್ಕೆ ಆ ಗಳಿಗೆ ಬಾಳುವ ಬಂಧನ

ದಿಂದ ಬಿಡುಗಡೆ ಮಾಡಿದೆ. ಇನ್ನಾದರೂ ಅದು ಹೇಗಾಯಿತೆಂಬುದನ್ನು ಹೇಳು ' ಎಂದು ಅಂದನು. ಅದಕ್ಕೆ ಆ ತರುಣಿಯು ಮೋರೆಯ ಮೇಲೆ ಸೆರಗೆಳೆದುಕೊಂಡು " ನನ್ನಿಗನೇ ಈಗ ಬೇಡ " ಅಂದಳು.

ಹಗಲು ಹೋಗಿ ಸಂಜೆಯಾಯಿತು. ತಂಗಾಳಿಯು ತಣ್ಣಗಾಯಿತು. ನೀರಿನ ಮೇಲ್ಭಾಗಕ್ಕೆ ಬಿದಿಗೆಯ ಚಂದಿರನು ಕಾಣಹತ್ತಿದನು.

ಸುಂದರಿಯು ಆ ಯುವಕನ ಭುಜದ ಮೇಲೆ ತಲೆ ಇಟ್ಟು ಕತ್ತಲಲ್ಲಿ ಕೂತಿದ್ದಳು. ಅವಳ ಕೂದಲು ಅವನ ಕೈಗುಂಟ ಬಿದ್ದಿತ್ತು.

' ನನ್ನಿಗನೇ, ನಿನಗಾಗಿ ನಾನು ಕಠಿಣ ಕೆಲಸವನ್ನು ಮಾಡಿರುವೆನು. ಅದನ್ನೀಗ ಹೇಳುವದೆಂದರೆ ಅದಕ್ಕೂ ಕಠಿಣವಾದದ್ದು. ಆದರೂ ಸ್ವಲ್ಪದರಲ್ಲಿಯೇ ಹೇಳಿ ಮುಗಿಸುವೆನು. ನಿನ್ನ ಅಪರಾಧವನ್ನು ತನ್ನ ತಲೆಯಮೇಲೆ ತಕ್ಕೊಂಡು, ನನಗೆ ನಿನಗಾಗಿ ತನ್ನ ಜೀವದಾನವನ್ನು ನನ್ನ ಸಂಗಮೋತ್ಸುಕನಾದ ಆ 'ಮೋಹನ' ನು ಮಾಡಿದನು. ಚನ್ನಿಗನೇ ನಿನ್ನ ನನ್ನಿಗಾಗಿಯೇ ಈ ನನ್ನ ದೊಡ್ಡ ತಪ್ಪಿತವಾಗಿದೆ. ಎಂದು ಸುಂದರಿಯು ಮೆಲ್ಲಗೆ ಹೇಳಿದಳು.

ಮಾತು ಮುಗಿಯುವಷ್ಟರಲ್ಲ ಬಿದಿಗೆಯ ಚಂದಿರನು ಮುಳುಗಿದನು. ಲೆಕ್ಕ ವಿಲ್ಲದ ಹಕ್ಕಿಗಳ ನಿದ್ದೆಯಿಂದ ರಾತ್ರಿಯು ತಣ್ಣಗಾಗಿದ್ದಿತು.

ಸಂದರಿಯ ಅಪ್ಪುಗೆಯಿಂದ ಆ ತರುಣನ ಕೈ ಮೆಲ್ಲಗೆ ಕೆಳಗಿಳಿಯಿತು. ಅವರ ಸುತ್ತಲಿನ ಶಾಂತತೆಯು ಆಣೆಕಲ್ಲಿನಂತಾಯಿತು.

ಕೂಡಲೆ ತರುಣಿಯು ಆ ತರುಣನ ಕಾಲುಗಳನ್ನು ಗಟ್ಟಿಯಾಗಿ ಹಿಡಿದು ' ಚೆನ್ನಿಗನೇ ಮನ್ನಿಸು ಎನ್ನಪರಾಧವನು ; ತಪ್ಪಿಗೆ ತಕ್ಕ ದಂಡನೆ ಮಾಡಲು ನನ್ನ ದೈವಕ್ಕೆ ಬಿಟ್ಟುಬಿಡು.' ಎಂದು ಆರ್ತಸ್ವರದಿಂದ ಅಂದಳು.

ವಜ್ರಸೇನನು ತನ್ನ ಕಾಲುಗಳನ್ನು ಕೊಸರಿಕೊಂಡು ' ಪಾಪದ ಬೆಲೆಗೆ ಬಂದಿ ತಲ್ಲವೇ ನನ್ನ ಈ ಬಾಳುವೆಯು ! ನನ್ನ ಉಸಿರೆಲ್ಲ ಈಗ ಅರಿಷ್ಟವಾಗಿದೆ.' ಹೀಗೆಂದನು.

ಅವನು ತಟ್ಟನೆ ಎದ್ದು ದೋಣಿಯೊಳಗಿಂದ ಕೆಳಗಿಳಿದು ಅಡವಿಯನ್ನು ಹೊಕ್ಕನು. ಹಾದಿ ಇರುವವರೆಗೆ ಹೋಗೇಹೋದನು. ಸಾಗಿದನು. ಕಡೆಗೆ ದಟ್ಟವಾದ ಗಿಡಬಳ್ಳಿಗಳಿಂದ ತಡೆದವನಾಗಿ ಮುಂಗಾಣದೆ ನಿಂತುಬಿಟ್ಟನು.

ದಣಿದು ಕೆಳಗೆ ಕುಳಿತುಕೊಂಡನು. ಆದರೆ ಕಗ್ಗತ್ತಲೆಯಲ್ಲಿ ಮುಗ್ಗರಿಸುತ್ತ ಆ ಕಾಡುದಾರಿಯಲ್ಲಿ ಸಾಗಿ ಅವನ ಹಿಂದೆಯೇ ಬಂದು ನಿಂತ ಆ ನಿಶಾಚರಿಯಾವುದು ?

"ನೀನು ನನ್ನನ್ನು ಬಿಡುವದಿಲ್ಲವೇ?" ವಜ್ರಸೇನನು ಗಟ್ಟಿಯಾಗಿ ಒದರಿದನು.

ಮರುಚಣದಲ್ಲಿ ಅವಳು ಒಮ್ಮಿಂದೊಮ್ಮೆ ಅವನ ಮೈ ಮೇಲೆ ಬಿದ್ದು ತನ್ನ ಹರವಿದ ಕೂದಲದಿಂದಲೂ ಜೋಲುವ ಸರಗಳಿಂದಲೂ ಮುದ್ದುಗಳ ಮಳೆಗಳಿಂದಲೂ ಅವನನ್ನು ಮುತ್ತಿಬಿಟ್ಟಳು.

ನೀರುಗಳಿಂದ ತುಂಬಿದ ಕಣ್ಣುಗಳಿಂದ ಅವನನ್ನು ನೋಡುತ್ತ ಕುಂಠಿತ ಸ್ವರದಿಂದ ಅವಳು ಅಂದಳು—"ಇಲ್ಲ. ನಾನೆಂದಿಗೂ ನಿನ್ನನ್ನು ಬಿಡುವದಿಲ್ಲ. ನಾನು ನಿನಗಾಗಿ ಮಹಾಪಾಪವನ್ನು ಮಾಡಿರುವೆನು. ನಿನ್ನಿಷ್ಟವಾದರೆ ನಿನ್ನ ಕೈಯಿಂದಲೇ ಇವಳನ್ನು ಕೊಂದು ಬಿಡು."

ಆ ಶಾಂತ ಕಗ್ಗತ್ತಲೆಯು ವನವನ್ನೆಲ್ಲ ನಡುಗಿಸಿ ಬಿಟ್ಟಿತು. ಗಿಡಗಳ ಶಾಖಾಳಕ್ಕಿಳಿದ ಆ ಜಡಿ ಬೇರುಗಳಲ್ಲಿ ಕೂಡ ಭಯವು ತುಂಬಿತು. ಆ ರಾತ್ರಿಯಲ್ಲಿ ಒಂದೇ ಒಂದು ನಿಟ್ಟುಸುರು ಬಿಟ್ಟು ಒಂದು ದೇಹವು ಒಣಗಿದ ಎಲೆಗಳ ಮೇಲೆ ಬಿದ್ದುಬಿಟ್ಟಿತು.

ದೂರಿರುವ ಗುಡಿ-ಗೋಪುರಗಳ ಮೇಲೆ ಸೂರ್ಯನ ಕಿರಣಗಳು ಬೆಳಗಹತ್ತಿದವು. ಆಗ ವಜ್ರಸೇನನು ಕಾಡಿನಿಂದ ಹೊರಬಿದ್ದನು. ಆ ಉರಿವ ಬಿಸಿಲಲ್ಲಿ ಜನಗಳಿಗೆ ಕೂಡ ತೆರವಿಲ್ಲದೇ ನದಿಯ ದಂಡೆಯ ಮೇಲಿನ ಉಸುಬಿನಲ್ಲಿ ಅವನು ಹುದಾಡಿದನು.

ಸಂಜೆಯಾಗುತಲೆ ಅವನು ಮುಂಗಾಣದವನಾಗಿ ಅರಿಯದೇ ದೋಣಿಗೆ ಹೋದನು. ಅಲ್ಲಿ ಅವನ ಹಾಸಿಗೆಯಲ್ಲಿ ಒಂದು ಬಳೆಯು ಬಿದ್ದಿತ್ತು. ಅದನ್ನವನು ಎತ್ತಿಕೊಂಡು ತನ್ನ ಎದೆಗೆ ನೋವು ಮಾಡುವವರೆಗೆ ಒತ್ತಿಕೊಂಡನು. ಅಲ್ಲಿಯೇ ಮೂಲೆಯಲ್ಲಿ ರಾಶಿಯಾಗಿ ಬಿದ್ದ ರೇಶಿಮೆಯ ಬಟ್ಟೆಗಳಲ್ಲಿ ಅವನು ಬಿದ್ದುಕೊಂಡನು. ಅವರ ಮಡಿಕೆಗಳಲ್ಲಿ ಹುದುಗಿಕೊಂಡನು. ಮೃದುಸ್ಪರ್ಶದಿಂದಲೂ ಘಮಘಮಿಸುವ ಸುವಾಸನೆಯಿಂದಲೂ ಮೈಮರೆತವನಾಗಿ ಯಾವದೋ ಒಂದು ವ್ಯಕ್ತಿಯ ನೆನಪು ಮಾಡಿಕೊಳ್ಳುವದರಲ್ಲಿ ತಲ್ಲೀನನಾದನು.

ಕತ್ತಲೆಯು ಕವಿಯಹತ್ತಿತು. ಚಂದಿರನು ಗಿಡಗಳಲ್ಲಿ ಮರೆಯಾದನು. ವಜ್ರಸೇನನು ಎದ್ದು ನಿಂತು ಕಾಡಿನಕಡೆಗೆ ಎರಡೂ ಕೈಗಳನ್ನು ಚಾಚಿ, 'ಬಾ, ಬಾರೆನ್ನ ನಲ್ಲೆ!' ಎಂದು ಗಟ್ಟಿಯಾಗಿ ಒದರಿದನು.

ಕೂಡಲೇ ಕತ್ತಲೊಳಗಿಂದ ಒಂದು ಆಕಾರವು ನೀರಿನ ದಂಡೆಗೆ ಹೊರಬಂದು ನಿಂತುಬಿಟ್ಟಿತು.

'ಬಾ, ಬಾರೆನ್ನ ನಲ್ಲೆ'

'ನನ್ನಿಗನೇ ನಾನು ಬಂದಿರುವೆ- ನಿನ್ನ ಕೈಗಳು ನನ್ನನ್ನು ಕೊಲ್ಲಲು ಹಿಂಜರಿವವು. ನಾನಿನ್ನೂ ಇರುವದೇ ನನ್ನ ದೈವದಲ್ಲಿದೆ!'

ಶ್ಯಾಮಸುಂದರಿಯು ಬಂದು ಆ ತರುಣನ ಎದುರಿನಲ್ಲಿ ನಿಂತು ಬಿಟ್ಟಳು. ಅವನು ಅವಳ ಮೋರೆಯನ್ನು ನೋಡಿ ಬಿಗಿಯಾಗಿ ಅಪ್ಪಲು ಮುಂದಕ್ಕೆ ಬಂದು—ಒಮ್ಮಿಂದೊಮ್ಮೆ ಬೆಚ್ಚಿ ಅವಳನ್ನು ಬಿಟ್ಟು 'ಯಾಕೆ, ನೀನು ತಿರುಗಿ ಬಂದುದು ಯಾಕೆ' ಎಂದು ಕೂಗಿದನು.

ಅವನು ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡು ಅವಳ ಕಡೆಗೆ ಬೆನ್ನು ಮಾಡಿ "ಹೋಗು, ಇಲ್ಲಿಂದ ಹೋಗು. ನನ್ನನ್ನು ಬಿಟ್ಟು ಹೋಗು" ಎಂದಂಪನು.

ಅರೆ ನಿಮಿಷದವರೆಗೆ ಆ ತರುಣಿಯು ದಂಗುಬಡಿದು ನಿಂತು ಆ ಮೇಲೆ ಅವನ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡಳು. ಮತ್ತೆ ಮೇಲೆದ್ದು ನಿದ್ರೆಯಲ್ಲಿ ಕನಸು ಕರಗಿ ಹೋಗುವಂತೆ ಅವಳು ಆ ನದಿಯ ದಂಡೆಯ ಕಾಡಿನಲ್ಲಿ ಕಾಣದಾದಳು. ವಜ್ರಸೇನನು ತನ್ನಲ್ಲಿಯೇ ಕೊರಗಿಕೊಂಡು ದೋಣಿಯಲ್ಲಿ ಕುಳಿತನು.

—ಶೀಷ (ಶಾಂತಿನಿಕೇತನ)

---

## ಪುಸ್ತಕ ಪರಿಚಯ.

ಕಾಣಿಕೆ:—(ಮಂಗಳೂರಿನ ಕಡೆಂಗೋಡ್ಲು ಶಂಕರಭಟ್ಟರಿಂದ ರಚಿತವಾಗಿ ಬಾಲಸಾಹಿತ್ಯಮಂಡಲ ಲಿಮಿಟೆಡ್ ಇವರಿಂದ ಪ್ರಕಾಶಿಸಲ್ಪಟ್ಟಿದೆ. ಕ್ರಯ ೩೬ಣೆ) ೧೮ ಭಾವಗೀತೆಗಳನ್ನುಳ್ಳ ೩೦ ಪುಟದ ಈ ಕಾಣಿಕೆಯನ್ನು ಸಂತೋಷದಿಂದ ಕನ್ನಡಿಗರೆಲ್ಲರೂ ಸ್ವೀಕರಿಸುವರೆಂದು ನಮ್ಮ ಭಾವನೆ. ಇಂದಿನ ಕರ್ನಾಟಕದ ನೂತನ ಭಾವಗೀತಿ ಪ್ರಪಂಚದಲ್ಲಿ ದಕ್ಷಿಣಕನ್ನಡದ ಹೃದಯವನ್ನು ಇಲ್ಲಿ ಕಾಣುತ್ತೇವೆ. ಮಂಗಳೂರಿನ ಮಂಜುಲ ಕನ್ನಡವು ಕಂಗೊಳಿಸುತ್ತಿದೆ. 'ಹಳೆಯ ನೆನಹು'ನಲ್ಲಿ ವಾತ್ಸಲ್ಯದ ಕೋಡಿಯೊಡೆದಿದೆ. 'ಮರವಿ'ನಲ್ಲಿ 'ಜಗವನಾಂ ಮರೆದಪೆನು ಜಗವೆನ್ನ ಮರೆತಿರಲಿ' ಎಂಬ ವೀರನಿರಾಶೆಯು ಮನೋಹರವಾಗಿದೆ. ಆದರೆ ಒಂದು ಮಾತು; ನಮ್ಮ ಕಿಡಿಗೇಡಿ ಬುದ್ಧಿಗೆ 'ಹೆತ್ತ ಮಕ್ಕಳ ಮೇಲೆ ಮಾತೆಗಿಹಮಮತೆಯನು ಮನನೆಂಬ ಮಾನದಿಂದಳೆಯಬಹುದೇ' ಎಂಬ ಮೊದಲಾದ ಕಡೆಗೆ ಪದ್ಯವೆಲ್ಲಾ ತೀರ ಗದ್ಯವಾಗಿ ಬಿಟ್ಟಿದೆಯೆಂದು ತೋರಿತು. 'ಪದ್ಯಂ ವದ್ಯಂ ಗದ್ಯಂ ಹೃದ್ಯಂ' ಎಂದು ಸಾರಿದ ದಕ್ಷಿಣಕನ್ನಡದ ಕವಿಯ ಮಾತಿನಿಂದಲೇ ಸಮಾಧಾನ ಹಚ್ಚಿಕೊಂಡೆವು. ಹೆಚ್ಚಿನ ವಿಮರ್ಶೆಯನ್ನು ಮತ್ತೊಮ್ಮೆ ಸಾವಕಾಶವಾಗಿ ಮಾಡಬೇಕೆಂಬ ಇಚ್ಛೆಯಿದೆ.

ಪ್ರಾಣಿದಯೆ:—(ಪ್ರಾಣಿದಯಾಜ್ಞಾನಪ್ರಸಾರಕ ಸಂಘ, ದಾವಣಗೇರಿ, ಪ್ರಾಣಿದಯಾ ಪ್ರಚಾರಕ ಸಂಘ ತುಮಕೂರ, ಶ್ರೀ ಗೋರಕ್ಷಕ ಮಂಡಲಿ ಬೆಂಗಳೂರ ಸಿಟಿ ಇವುಗಳ ಆಶ್ರಯದಲ್ಲಿ ಹೊರಡುವ ಸಚಿತ್ರ ಮಾಸಪತ್ರಿಕೆ; ಸಂಪಾದಕ, ಗುಂಡೂರಾವ ಖಾಪ್ರಿ, ಚಿಕ್ಕಪೇಟೆ ಬೆಂಗಳೂರ ಸಿಟಿ. ಚಂದಾ ೦-೮-೦. ಪೋಷಕಾದಿ ವರ್ಗ

ಜೇರೆ! ಈ ನೂತನ ಚಕ್ರಾಧಾದಿಯಲ್ಲಿ 'ಪ್ರಾಣಿದಯೆ'ಯು ಪ್ರಭವಿಸಿ ಕನ್ನಡಿಗರಲ್ಲೆಲ್ಲಾ ದಯೆಯ ಪ್ರಾಣಪ್ರತಿಷ್ಠೆ ಮಾಡಹೊರಟದ್ದಕ್ಕೆ ನಾವು ಹಿರಿಹಿರಿ ಹಿಗ್ಗುತ್ತಿದ್ದೇವೆ. 'ಇದನ್ನು ಓದಿದವರೆಲ್ಲ ಸದಯರಾಗುವಂತೆ' ಹಾಡಿದ ಹಾಡೊಂದು ರಮಣೀಯವಿದೆ. ನಾಲ್ವಡಿ ಶ್ರೀಕೃಷ್ಣರಾಜೇಂದ್ರ ಭೂಪಾಲರವರ ಆಳ್ವಿಕೆಯಲ್ಲಿ ಕನ್ನಡಿಗರು ಹೇಗಿರಬೇಕೆಂಬದನ್ನು ಸರ್ವಮಾನ್ಯ ಶತಕದ ಗ್ರಂಥಕರ್ತರೂ ಆಂಧ್ರ ಕರ್ನಾಟಕ ಕವಿತಾಧುರೀಣರೂ ಆದ ಶ್ರೀ. ಆದಿ ಪೂಡಿ ಸೋಮನಾಥರಾಯರವರು ಹಾಡಿದ ಹಾಡಿದು. ಮಾದರಿಗೆ ಕೆಲನುಡಿಗಳನ್ನು:—

"ತುಳುಕದೆ ಗರ್ವದಿಂ ತುಂಬಿದ ಕೊಡದಂತೆ ಶಾಂತಿಯಿಂದೊಪ್ಪಲಿ ಕನ್ನಡಿಗರು।
ಗೊನೆಯಿಂದ ಬಗ್ಗಿದ ಕದಳಿಕಾದ್ರುಮದಂತೆ ವಿನಯದಿಂ ಬಗ್ಗಲಿ ಕನ್ನಡಿಗರು।
ಧೀರರಾಗಿರ್ದು ತಾಂ ಬಡವರ್ಗೆ ಕರಗಲಿ ಮಂಜಿನ ಗಡ್ಡೆಯೊಲ್ ಕನ್ನಡಿಗರು"

ಎಂಥ ಕರುಣಾಮಯ ಹಾಡಿದು! ಕನ್ನಡಿಗರು ಇದರಂತೆ ಆಗಲಿ ಮಾತ್ರ. 'ಪ್ರಾಣಿದಯೆ'ಯು ಈ ಕಾರ್ಯವನ್ನು ಮಾಡಿ ಕರ್ನಾಟಕಕ್ಕೆ ಕೀರ್ತಿ ತರಲಿ. ಮಹಾತ್ಮಾ ಗಾಂಧಿಯವರ ಈಗಿನ ಯುಗಕ್ಕೆ ತಕ್ಕ ಕಾರ್ಯವಿದು. ಈ ಸಂಚಿಕೆಯಲ್ಲಿ ಇದುವರೆಗೆ ಸಂಘಗಳು ಮಾಡಿದ ಕಾರ್ಯ—ಹಿರಿಯುಣ ಜಾತ್ರೆ ಮೊದಲಾದ ಸ್ಥಳದಲ್ಲಿ ಪ್ರಾಣಿಹಿಂಸೆಯನ್ನು ನಿಲ್ಲಿಸಿದ ಕಾರ್ಯ—ಓದಿ ಆನಂದವಾಯ್ತು. ನಮ್ಮ ಹುಬ್ಬಳ್ಳಿಯ ಜೀವದಯಾ ಪ್ರಚಾರಕ ಮಂಡಲಿಯವರೂ ಸಂಘಗಳೊಡನೆ ಕೂಡಿ ಕೆಲಸ ಮಾಡಿದರೆ ಹೆಚ್ಚು ಒಳ್ಳೆತಾಗುವದು. 'ಸ್ವಧರ್ಮ'ದಲ್ಲಿ ಬಂದ 'ವಿಸರ್ಜನ'ದಂಥ ನಾಟಕ ವಾಙ್ಮಯವನ್ನು ಈ ಪತ್ರಿಕೆಯು ಹುಟ್ಟಿಸಿದಲ್ಲಿ ಹೆಚ್ಚು ಆಕರ್ಷಕವಾಗುವದೆಂದು ನಮ್ಮ ಸೂಚನೆ.

**ದೇವಗಿರಿಯ ಮಾಲತೀಶ ಮಂದಿರದ ೧೦ನೇ ವರದಿ:**— ಮುತ್ತಹರ ರಾಮಚಂದ್ರ ಶಿವಪೂಜಿಯವರು ಸಂಸ್ಥೆಯ ಆಧಾರಸ್ತಂಭರಾಗಿರುವರು. ಇವರು ಮಾಡುವ ಅರವಟ್ಟಿಗೆಯಂಥ ಪರೋಪಕಾರದ ಕಾರ್ಯವನ್ನು ನಾವು ಬೇರೇ ಹೊಗಳಬೇಕೇ? ಎಲ್ಲರೂ ಈ ಸಂಸ್ಥೆಗೆ ಸಹಾಯಮಾಡಬೇಕು. ಪುಸ್ತಕದ ಕಡೆಗೆ ಸ್ತೋತ್ರರೂಪವಾದ ಪದ್ಯಗಳೂ ಇವೆ. ಯೋಗ್ಯವೇ ಸರಿ.

**ನಂದಿನೀ**:—(ಗೋಕರ್ಣದ ನಾರಾಯಣಶಾಸ್ತ್ರೀ ಭಡತಿ ಇವರು ಸಂಪಾದಕರು. ಈ ಮಾಸಪತ್ರಿಕೆಗೆ ೨ ರೂ. ಚಂದಾ ವರ್ಷಕ್ಕೆ) ಉತ್ತರ ಕನ್ನಡದಲ್ಲಿ ಮಾಸಪತ್ರಿಗಳು ಈ ಒಂದೆರಡು ವರ್ಷದಲ್ಲಿ ಹುಟ್ಟಹತ್ತಿವೆ. ಆನಂದದ ಸುದ್ದಿ. ೨ನೇ ವರ್ಷದ ೪ನೇ ಸಂಚಿಕೆಯಿದು. ಇದರಲ್ಲಿ 'ಪ್ರಾಚೀನ ಕಾಲದ ಶೂದ್ರನು' ಎಂಬ ಬರಹವೂ 'ಸೂರ್ಯ ನಮಸ್ಕಾರ'ವೆಂಬ ಬರಹವೂ ವಾಚನೀಯವಾಗಿವೆ. 'ಗೃಹವೈದ್ಯ'ದ ಭಾಗವಂತೂ ಸರ್ವಜನಹಿತಕಾರಿಯಾಗಿದೆ. ನಂದಿನಿಯು ತನ್ನ ತಾಯಿಯಾದ ಉತ್ತರ ಕನ್ನಡದ ಪ್ರಾಚೀನ–ಅರ್ವಾಚೀನ ಜೀವನವೆಂಥದೆಂಬದನ್ನು ಹೇಳುವ ಸರ್ವ ವಿಷಯಕ ಲೇಖನಗಳನ್ನು ಕೊಡುವಳೆಂದು ತಿಳಿದು ಈ ಅಕ್ಕನನ್ನು ಅಕ್ಕರತೆಯಿಂದ ನಮ್ಮ ಮನೆಗೆ ಬರಮಾಡಿಕೊಂಡಿದ್ದೇವೆ.

(೪೫ನೇ ಪುಟದಲ್ಲಿ ನೋಡಿರಿ)

# ಕರ್ನಾಟಕ ಮಹಾವಿದ್ಯಾಲಯ ಧಾರವಾಡ

## ೭ನೇ ವರುಷದ ವರದಿಯು.

ದೇವರದಯದಿಂದ ಈ ವರ್ಷ ಶಾಲೆಯು ಬದುಕಿ ಬಾಳಿತೆಂದು ಆನಂದವಾಗುತ್ತದೆ. ಕ್ಷಯರೋಗಿಯು ಮರಣದ ಬಾಗಿಲಲ್ಲಿರುವನೆಂದು ಅರಿತಿದ್ದರೂ ಅವನ ಆಪ್ತರು ಅವನನ್ನು ಉಳಿಸಿಕೊಳ್ಳಲು ಯತ್ನಿಸುವಂತೆ, ಎಲ್ಲರೂ ಬೇಡಬೇಡವೆಂದರೂ ಸಂಸ್ಥೆಯ ಮೇಲಿನ ಮೋಹದಿಂದ ಅದನ್ನು ಇದೊಂದು ವರ್ಷವಾದರೂ ಉಳಿಸಬೇಕೆಂದು ಮುಂದಕ್ಕೆ ಹೆಜ್ಜೆಯನ್ನಿಟ್ಟೆವು. ಜನರಿಂದ ಅಲ್ಪಸ್ವಲ್ಪ ಸಹಾಯದೊರೆತು ಅಂತೂ ಇಂತೂ ಈ ವರ್ಷವು ಪಾರುಗಂಡಿತೆಂದು ಹೇಳಲು ಆನಂದವಾಗುತ್ತದೆ.

ನಮ್ಮ ಶಾಲೆಯಿಂದ ಜನರಿಗೆ ನಿಜವಾಗಿಯೂ ಉಪಯೋಗವಾಗಿದೆಯೆಂದೂ ವಾಗುತ್ತದೆಯೆಂದೂ ನಮ್ಮ ದೃಢವಾದ ಶ್ರದ್ಧೆ. ಉಪಯೋಗವಾಗುವದೆಂದು ಜನರಿಗೂ ಅನುಭವ. ನಮ್ಮ ಶಾಲೆಯ ವಿದ್ಯಾರ್ಥಿಗಳು ಸರಕಾರಿ ನೌಕರಿಯನ್ನು ಮಾಡಲು ಅವರ ದೃಷ್ಟಿಯಿಂದ ಯೋಗ್ಯರಾಗದಿದ್ದರೂ, ಗಟ್ಟಿಗರೂ ನೀತಿವಂತರೂ ಸ್ವತಂತ್ರವೃತ್ತಿಯುಳ್ಳವರೂ ಆಗುವರೆಂದು ಎಷ್ಟೋ ಜನರು ಆಡಿ ತೋರಿಸಿರುವರು. ಅದರಂತೆ ಜನರಿಗೆ ಅನುಭವವೂ ಬಂದಿದೆ. ಉಳಿದ ಶಾಲೆಗಳಿಗೆ ಹೋಗುವದರಿಂದ ತಮ್ಮ ಮಕ್ಕಳು ದುಶ್ಚಟವುಳ್ಳವರೂ, ಸ್ವೇಚ್ಛಾಚಾರಿಗಳೂ, ರೋಗಿಷ್ಠರೂ ಆಗುವರೆಂಬುದು ಎಲ್ಲರಿಗೂ ಮನವರಿಕೆಯಾಗಿದೆ. ಹೀಗಿದ್ದರೂ ನೌಕರಿಯ ಮೋಹದಿಂದಲೇ ಆಗಲಿ, ತಮ್ಮ ಹಿತವು ಯಾವದೆಂಬುದು ತಿಳಿಯದೆ ಇರುವದರಿಂದಾಗಲಿ, ಅಥವಾ ಹೊಸ ದಾರಿಯನ್ನು ತುಳಿಯಲು ಧೈರ್ಯವಿಲ್ಲದ್ದರಿಂದಾಗಲಿ ನಮ್ಮ ಶಾಲೆಗೆ ತಮ್ಮ ಮಕ್ಕಳನ್ನು ಕಳಿಸಲು ಒಲ್ಲರು. ಹೀಗಿರುವದರಿಂದಲೇ ನೀತಿವಂತರನ್ನು ಮಾಡುವ ಕಾರ್ಯವೂ ಅವರಲ್ಲಿ ರಾಷ್ಟ್ರೀಯತ್ವವನ್ನು ಬಿತ್ತುವ ಕಾರ್ಯವೂ ಅತ್ಯಂತ ಅವಶ್ಯವೆಂದೂ, ಕರ್ತವ್ಯವೆಂದೂ, ನಮ್ಮ ಅಂತಃಕರಣವು ಸಾರಿ ಸಾರಿ ಹೇಳುತ್ತಿದೆ. ಆದರೆ ಮಾಡುವದೇನು ? ನಮ್ಮ ಮುಖಂಡರಿಗೆ ಈ ಮಾತು ಬಿಂಬಿಸಲೊಲ್ಲದು. ಅವರು ಪ್ರತ್ಯಕ್ಷವಾಗಿ ರಾಷ್ಟ್ರೀಯ ಶಿಕ್ಷಣವು ಬೇಡವೆಂದು ಹೇಳದಿದ್ದರೂ, ಸಹಾಯ ಮಾಡುವದನ್ನು ಬಿಟ್ಟಿರುವರು. ಅನುವು ದೊರೆತಾಗ ತಮ್ಮ ವಿಚಾರಗಳನ್ನು ಜನರ ಮುಂದೆ ಇಡುತ್ತಿರುವರು. ಇದರಿಂದ ಕರ್ನಾಟಕದಲ್ಲಿ ರಾಷ್ಟ್ರೀಯ ಶಿಕ್ಷಣದ ಮೇಲೆ ಭಯಂಕರ

ಪರಿಣಾಮವಾಗಿ ಆ ಕಾರ್ಯವನ್ನು ಕೈಕೊಂಡ ಜನರು ಜನರಿಂದಲೂ ಮುಖಂಡರಿಂದಲೂ ಭಂಗಿತರಾಗಿ ನಿರಾಶರಾಗುವದು ಸ್ವಾಭಾವಿಕ. ಅದರೂ ಈ ವರ್ಷ ನಾವು ನಾನಾ ರೀತಿಯಿಂದ ಪ್ರಯತ್ನಿಸಿದೆವು. ನೀವು ಬೇರೆ ಶಾಲೆಗಳಿಗೆ ಮುಂದೆ ವಿದ್ಯಾರ್ಥಿಗಳನ್ನು ಕಳಿಸಿದರೂ ಅಡ್ಡಿಯಿಲ್ಲ. ೫ ವರ್ಷವಾದರೂ ನಮ್ಮಲ್ಲಿಡಿರೆಂದು ಜನರಿಗೆ ಬೇಡಿಕೊಂಡೆವು. ನಾವು ಅರೆಹೊಟ್ಟೆಯಿಂದಾದರೂ ದುಡಿಯುವೆವೆಂದೆವು. ಬಡ ವಿದ್ಯಾರ್ಥಿಗಳಿಗೆ ಪುಕ್ಕಟೆಯಾಗಿ ಅನ್ನವನ್ನಿಕ್ಕೆವು. ಎಲ್ಲವೂ ಬೋರ್ಗಲ್ಲಮೇಲೆ ಮಳೆಗರೆದಂತಾಯಿತು. ಶ್ರೀಮಂತರಿಗೂ ದೇಸಾಯಿ-ದೇಶಪಾಂಡೆಯವರಿಗೂ, ನಿಮಗಂತೂ ನೌಕರಿಯ ಆಶೆಯಿಲ್ಲ. ನಿಮ್ಮಲ್ಲಿ ಬಹುಜನ ಸಮಾಜವು ದುಷ್ಟಟಗಳಿಗೆ ಈಡಾಗುತ್ತಿರುವದು. ದಯಮಾಡಿ ನಮ್ಮ ಶಾಲೆಗೆ ವಿದ್ಯಾರ್ಥಿಗಳನ್ನು ಕಳಿಸಿಕೊಡಿರೆಂದು ಸೆರಗೊಡ್ಡಿ ಬೇಡಿಕೊಂಡೆವು. ಆದರೆ ಎಲ್ಲವೂ ನೀರಮೇಲೆ ಗೆರೆ ಕೊರೆದಂತೆ. ಹಿಂದೆ ಧಾರವಾಡದಲ್ಲಿಯು, ವತನದಾರರು ತಮ್ಮ ವಿದ್ಯಾರ್ಥಿಗಳನ್ನು ಕಳಿಸಿದ್ದರೆ ತಾವು ಸ್ವತಂತ್ರ ವೃತ್ತಿಯವರೆಂದು ಹೇಳಿಕೊಳ್ಳುವ ವಕೀಲರು ತಮ್ಮ ಮಕ್ಕಳಲ್ಲೊಬ್ಬೊಬ್ಬರಂತೆ ಕಳಿಸಿದ್ದರೆ ನಮ್ಮ ಶಾಲೆಯಲ್ಲಿ ೧೦೦ ಜನ ವಿದ್ಯಾರ್ಥಿಗಳು ಸಹಜವಾಗಿ ಇರಬಹುದಾಗಿತ್ತು. ಆದರೆ ಮಾಡುವದೇನು ? ಯಾರೂ ಮನಸ್ಸಿನ ಮೇಲೆ ತೆಗೆದುಕೊಳ್ಳಲಿಲ್ಲ. ಎಲ್ಲರೂ ತಮ್ಮ ಮಕ್ಕಳು ಅನೀತಿವಂತರಾದದ್ದು ಕಂಡು ದುಃಖಬಡುತ್ತಾರೆ. ಜನರ ಈ ಸ್ಥಿತಿಯನ್ನು ಕಂಡು ನಮ್ಮ ಅಂತಃಕರಣವು ತಳಮಳಗೊಳ್ಳುತ್ತದೆ. ಮಾಡುವದೇನು ? ಈ ಕಾರ್ಯವನ್ನು ನೆರವೇರಿಸಲು ಶಕ್ತಿಯನ್ನು ಕೊಡಲೂ, ರಾಷ್ಟ್ರೀಯ ಶಿಕ್ಷಣದಲ್ಲಿ ಈಗಿದ್ದಕ್ಕಿಂತ ಹೆಚ್ಚು ವಿಶ್ವಾಸವನ್ನು ನಮಗೀಯಲೂ, ದೇವರಲ್ಲಿ ಪ್ರಾರ್ಥಿಸುವದರ ಹೊರ್ತು ನಮ್ಮಲ್ಲಿ ಯಾವ ಶಕ್ತಿಯೂ ಉಳಿದಿಲ್ಲ. ಇಷ್ಟು ಮಾತ್ರ ನಿಜ. ಇಂದಿಲ್ಲ ನಾಳೆ ಈ ಕಾರ್ಯವು ಆಗಬೇಕೆಂದು ನಮ್ಮ ಮನಸ್ಸು ಕುದಿಯಹತ್ತಿದೆ. ಈ ಕಾರ್ಯಕ್ಕಾಗಿ ನಾವು ಬೇರೆ ಬೇರೆ ರೀತಿಯಿಂದ ಪ್ರಯತ್ನಿಸುವವರು ಮಾತ್ರ.

### ಬೌದ್ಧಿಕ ಶಿಕ್ಷಣ.

ಪ್ರತಿವರ್ಷದಂತೆಯೇ ಈ ವರ್ಷ, ಕರ್ನಾಟಕ ರಾಷ್ಟ್ರೀಯ ಶಿಕ್ಷಣಸಮಿತಿಯ ಅಭ್ಯಾಸ ಕ್ರಮದಂತೆ, ಅಭ್ಯಾಸವು ಜರುಗಿದೆ. ದುರ್ದೈವದ ಸಂಗತಿಯೆಂದರೆ ಶಾಲೆಯಲ್ಲಿಯೇ ೧೫ ಜನ ವಿದ್ಯಾರ್ಥಿಗಳು ೨-೩-೫ನೇ ಈಯತ್ತೆಗಳು ಮಾತ್ರ ನಡೆದವು. ಉಳಿದವುಗಳಿಗೆ ವಿದ್ಯಾರ್ಥಿಗಳಿಲ್ಲದೆ ಶರಣುಹೊಡೆಯಬೇಕಾಯಿತು. ಇದ್ದ ವಿದ್ಯಾರ್ಥಿಗಳ ಅಭ್ಯಾಸವು ಚೊಕ್ಕಾಗಿರುವದೆಂದು ಅಭಿಮಾನದಿಂದ ಹೇಳುವೆವು.

### ಶಾರೀರಕ ಶಿಕ್ಷಣ.

ವಿದ್ಯಾರ್ಥಿಗಳು ದಿನಾಲು ತಪ್ಪದೆ ವ್ಯಾಯಾಮ ಮಾಡುವರು. ಆಟಗಳನ್ನಾಡುವರು. ಅನೇಕ ಸಲ ಈಸಲಿಕ್ಕೆ ಕರೆದುಕೊಂಡು ಹೋಗಿ ೫ ಜನರಿಗೆ ಈಸು ಕಲಿಸಿದೆ

## ಧಾರ್ಮಿಕ ಶಿಕ್ಷಣವೂ ಆಶ್ರಮವೂ.

ನಮ್ಮ ಶಾಲೆಯ ಕಾರ್ಯಕ್ರಮವೇ ಧಾರ್ಮಿಕ ಜೀವನವಾಗಿದೆ. ತಣ್ಣೀರು ಸ್ನಾನ, ಸಂಧ್ಯಾವಂದನ, ಮಧುಕರಿ, ತ್ರಿಸುಪರ್ಣ ಪಠಣ, ರಾಮರಕ್ಷಾಸ್ತೋತ್ರ, ಭಾರತ ಮಾತೆಯ ಸ್ತೋತ್ರ, ಮೊದಲಾದವುಗಳು ತಮ್ಮ ಪರಿಣಾಮವನ್ನು ತಿಳಿಯಗೊಡದೆ ವಿದ್ಯಾರ್ಥಿಗಳ ಮೇಲೆ ಮಾಡಿರುವವು. ಸುತ್ತುಮುತ್ತಲಿನ ವಾತಾವರಣದಲ್ಲಿ ಕಂಡು ಬರುವ ವ್ಯಸನಗಳೂ ಚಟಗಳೂ, ನಮ್ಮ ವಿದ್ಯಾಲಯದಲ್ಲಿ ಆಹಾರವು ಸಿಗದೆ ಮಾಯ ವಾಗಿರುವವು. ೧೫ ಜನ ವಿದ್ಯಾರ್ಥಿಗಳಿದ್ದರೂ, ನಿಷ್ಕಲಂಕವಾದ ಅವರ ವೃತ್ತಿಯು, ಧಾರವಾಡದಲ್ಲಿಯ ಎಲ್ಲ ವಿದ್ಯಾರ್ಥಿಗಳಲ್ಲಿಯೂ ಮೇಲು ಸ್ಥಾನವನ್ನು ಪಡೆಯುವದೆಂದು ಅಭಿಮಾನದಿಂದ ಹೇಳಬಲ್ಲೆವು.

## ಆಭಾರ ಪ್ರದರ್ಶನ.

ಶ್ರೀ. ರಂಗರಾವ ದಿವಾಕರ, ರಾಮರಾವ ಹುಕ್ಕೇರಿ ಮಾಸ್ತರರು ಈ ವರ್ಷ ಬಂದು ಸಹಾಯ ಮಾಡದಿದ್ದರೆ ಶಾಲೆಯು ಇಲ್ಲಿಯವರೆಗೆ ಜೀವದಿಂದ ಉಳಿಯುವದೇ ಶಕ್ಯವಿದ್ದಿಲ್ಲ. ಇಂಥ ವೇಳೆಯಲ್ಲಿ ಅವರು ಕೈಕೊಟ್ಟದ್ದಕ್ಕಾಗಿ ಅವರ ಉಪಕಾರವನ್ನೆಷ್ಟು ಮನ್ನಿಸಿದರೂ, ಸ್ವಲ್ಪೇಯಿದೆ. ಶ್ರೀ. ಗಣಪತರಾವ ಸೇವಡೆಯವರು ಆಶ್ರಮಕ್ಕೆ ೧೦೦ ರೂ. ಕೊಟ್ಟದ್ದಕ್ಕಾಗಿ ಅವರ ಆಭಾರಮನ್ನಿಸುತ್ತೇವೆ. ಕ. ಪ್ರಾ. ಕಾಂಗ್ರೇಸ ಕಮಿಟಿಯವರಿಗೂ, ದೇ. ಭ. ಗಂಗಾಧರರಾಯರಿಗೂ, ಶಾಲೆಯು ಚಿರಕಾಲ ಋಣಿ ಯಾಗಿದೆ. ಹಣಮಂತರಾವ ದೇಶಪಾಂಡೆ ಹಳೇಹುಬ್ಬಳ್ಳಿಯವರು ಬಡ ವಿದ್ಯಾರ್ಥಿಗ ಳಿಗೆ ೫೦ ರೂಪಾಯಿ ಕೊಟ್ಟು, ಸಹಾಯ ಮಾಡಿದ್ದಕ್ಕಾಗಿ ಅವರ ಆಭಾರಮನ್ನಿಸು ತ್ತೇವೆ. ವ್ಯಾಸರಾವ ಜೋಸಿ, ದತ್ತಪ್ಪ ದೇಶಪಾಂಡೆಯವರ ಉಪಕಾರವೂ ಅತ್ಯಂತ ವಾಗಿದೆ. ಮಧ್ವರಾವ ಕಬ್ಬೂರರವರು ಲೆಕ್ಕವನ್ನು ಪರೀಕ್ಷಿಸಿದಕ್ಕಾಗಿ ಅವರ ಆಭಾರ ವನ್ನು ಮನ್ನಿಸುತ್ತೇವೆ. ನಮಗೆ ಸಹಾಯ ಮಾಡಿದ ಎಲ್ಲ ಮಹನೀಯರಿಗೂ ನಮ್ಮ ನಮ್ರಪೂರ್ವಕವಾದ ವಂದನೆಗಳು.

## ಕರ್ನಾಟಕ ಮಹಾವಿದ್ಯಾಲಯವು ೬ ವರ್ಷಗಳಲ್ಲಿ ಮಾಡಿದ್ದೇನು?

ಮಹಾವಿದ್ಯಾಲಯವು ಈ ಅತ್ಯಲ್ಪ ಅವಧಿಯಲ್ಲಿ ಮಾಡಿದ ಜನಸೇವೆಯನ್ನು ವಾಚ ಕರು ಕೆಳಗಿನ ಸಂಗತಿಗಳನ್ನೋದಿ ತಿಳಿಯಬೇಕೆಂದು ಬೇಡಿಕೊಳ್ಳುತ್ತೇವೆ.

ಈ ವಿದ್ಯಾಲಯವು ೪೦೦ ಜನ ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯ ವಿಚಾರಗಳನ್ನು ಬಿತ್ತಿದೆ. ಅವುಗಳ ಮೊಳಕೆಗಳು ವಿದ್ಯಾರ್ಥಿಗಳು ಈ ಶಾಲೆಯನ್ನು ಬಿಟ್ಟು ಬೇರೆ ಶಾಲೆಗಳಿಗೆ ಹೋಗಿದ್ದರೂ ಅವರಲ್ಲಿ ಅವು ಬೆಳೆಯತೊಡಗಿರುವವೆಂಬುದನ್ನು ಅವರ ತಂದೆತಾಯಿಗಳೇ ಅನುಭವದಿಂದ ಹೇಳುತ್ತಿರುವರು. ಇರಲಿ. ಪ್ರತ್ಯಕ್ಷವಾಗಿ ಎಷ್ಟು ಜನರು ಕಾರ್ಯೋನ್ಮುಖರಾಗಿರುವರೆಂಬದನ್ನು ನೋಡೋಣ.

**ನೇಗಿ:**—ನಮ್ಮ ವಿದ್ಯಾಲಯದಲ್ಲಿ ೫೦ ಜನರು ನೇಗಿಯನ್ನು ಸಂಪೂರ್ಣವಾಗಿ ಕಲಿತು ಹೊರಬಿದ್ದಿರುವರು; ಅವರಲ್ಲಿ ಪ್ರತ್ಯಕ್ಷವಾಗಿ ೮ ಜನರು ಅದೇ ಉದ್ಯೋಗದಿಂದ ತಮ್ಮ ಹೊಟ್ಟೆಯನ್ನು ತುಂಬಿಕೊಳ್ಳುತ್ತಿರುವರು. ಅವರಲ್ಲಿಯ ಟ. ಜಿ. ಕುಲಕರ್ಣಿ, ವಡವೀ ಇವರು ಕಾಂಗ್ರೇಸದ ಖಾದೀ ಕೇಂದ್ರಗಳನ್ನೇ ನಡಿಯಿಸುತ್ತಿರುವದು ಪ್ರಸಿದ್ಧವಿದ್ದು ಸ್ವತಂತ್ರವೃತ್ತಿಯುಳ್ಳವರಾಗಿ ರಾಷ್ಟ್ರೀಯ ಜೀವನಕ್ಕೆ ಪೋಷಕರಾಗುತ್ತಿರುವರು.

**ಸಿಂಪಿಯ ವರ್ಗ:**—ಈ ವರ್ಗದಲ್ಲಿ ೩೦ ಜನರು ಕಲಿತಿರುವರು. ಅವರಲ್ಲಿ ಪ್ರತ್ಯಕ್ಷವಾಗಿ, ೧೦ ಜನರು ಅದೇ ಉದ್ಯೋಗದಿಂದ ಹೊಟ್ಟೆ ತುಂಬಿಕೊಳ್ಳುತ್ತಿರುವರು. ಧಾರವಾಡದಲ್ಲಿಯೇ ೫–೬ ಜನರಿದ್ದದ್ದು ಧಾರವಾಡಸ್ಥರಿಗೆ ಗೊತ್ತಿದೆ. ತಿಂಗಳಿಗೆ ೩೦–೩೫ ರೂಪಾಯಿಗಳನ್ನು ಘಳಿಸುತ್ತಿರುವರು.

**ಬಡಿಗತನ:**—ಈ ವರ್ಗದಲ್ಲಿ ೧೫ ಜನರು ಕಲಿತು ಹೊರಬಿದ್ದಿರುವರು.

**ವೈದ್ಯಕಿ:**—ನಮ್ಮ ವಿದ್ಯಾಲಯದ ಪ್ರವೇಶಪರೀಕ್ಷೆಯಲ್ಲಿ ತೇರ್ಗಡೆಹೊಂದಿ ವೈದ್ಯಕಿಯ ಪ್ರಾಥಮಿಕ ಶಿಕ್ಷಣವನ್ನು ಪಡೆದು ಮುಂಬಯಿಯ ನ್ಯಾಶನಲ್ ಮೆಡಿಕಲ್ ಕಾಲೇಜದಲ್ಲಿಯೂ ಮೈಸೂರಿನ ಆಯುರ್ವೇದ ಕಾಲೇಜದಲ್ಲಿಯೂ, ವಿದ್ಯಾರ್ಥಿವೇತನಗಳನ್ನು ಪಡೆದು ೧೨ ಜನರು ಅಭ್ಯಾಸಮಾಡುತ್ತಿರುವರು. ಅವರಲ್ಲಿ ಮೂರು ಜನರು ಆಯುರ್ವೇದ ದವಾಖಾನೆಗಳನ್ನು ಹಾಕಿ ಹೊಟ್ಟೆತುಂಬಿಕೊಂಡು ಸ್ವಾತಂತ್ರ್ಯವೃತ್ತಿಯಲ್ಲಿರುವರು.

ಇದಲ್ಲದೆ ನಮ್ಮ ವಿದ್ಯಾಲಯದಲ್ಲಿಯೇ ಪ್ರವೇಶಪರೀಕ್ಷೆಯಲ್ಲಿ ತೇರ್ಗಡೆಹೊಂದಿ ಬಾಬೂ ಭಗವಾನದಾಸರ ಕಾಶೀ ವಿದ್ಯಾಪೀಠದಲ್ಲಿ ೪ ಜನರು ಬಿ. ಎ. ತರಗತಿಯಲ್ಲಿಯೂ ರವೀಂದ್ರನಾಥ ಟಾಗೋರರವರ ಶಾಂತಿನಿಕೇತನದಲ್ಲಿ ೫ ಜನರು ಬಿ. ಎ. ತರಗತಿಯಲ್ಲಿಯೂ, ಪುಣೇ ಟಿಳಕ ರಾಷ್ಟ್ರೀಯ ವಿದ್ಯಾಲಯದಲ್ಲಿ ೫ ಜನರೂ ಗುಜರಾಥ ವಿದ್ಯಾಪೀಠದಲ್ಲಿ ಇಬ್ಬರು ಉಚ್ಚತರಗತಿಯಲ್ಲಿಯೂ, ಒಬ್ಬರು ಮದ್ರಾಸದ ಸಂಸ್ಕೃತ–ವೇದಾಂತ-ಶಿರೋಮಣಿ ಪರೀಕ್ಷೆಯಲ್ಲಿಯೂ, ಓದುತ್ತಿದ್ದು ತಮ್ಮ ಅಭ್ಯಾಸವನ್ನು ಮುಗಿಸಿದನಂತರ ಈ ಎಲ್ಲ ಜನರು ರಾಷ್ಟ್ರಕಾರ್ಯಕ್ಕೆ ನಿಲ್ಲುವಲ್ಲಿ ಸಂಶಯವಿಲ್ಲ, ಯಾಕಂದರೆ ಇವೆಲ್ಲವುಗಳು ಸ್ವತಂತ್ರವಾದ ರಾಷ್ಟ್ರೀಯ ಸಂಸ್ಥೆಗಳು.

ಇಷ್ಟೇ ಅಲ್ಲ. ಪ್ರತ್ಯಕ್ಷವಾಗಿ ರಾಷ್ಟ್ರಕಾರ್ಯಕ್ಕೆ ಹತ್ತಿದ ಜನರನ್ನಷ್ಟು ನೋಡಿರಿ. ನಮ್ಮ ಶಾಲೆಯಿಂದಲೇ ಉತ್ತೀರ್ಣರಾಗಿ ಹೊರಬಿದ್ದ ೩ ಜನ ವಿದ್ಯಾರ್ಥಿಗಳು ಮಂಗಳೂರಜಿಲ್ಹೆಯಲ್ಲಿ ರಾಷ್ಟ್ರೀಯ ಕಾರ್ಯ ಕೈಕೊಂಡು ಸ್ವತಂತ್ರರೀತಿಯಿಂದ ಶಾಲೆಗಳನ್ನು ನಡಿಸುತ್ತಿರುವರು. ಒಬ್ಬರು ಶಿವಯೋಗಮಂದಿರದಲ್ಲಿ ಶಿಕ್ಷಣ ಕಾರ್ಯವನ್ನು ಕೈಕೊಂಡಿರುವರು. ಜೋಸಿ, ಎಂಬೊಬ್ಬ ಕುದುರು ಬುದ್ಧಿಯವರು (ತೀಕ್ಷ್ಣ) ಒಂದು

ಕಾಲಕ್ಕೆ ಕಾನಡಾಧುರೀಣದಂಥ ವೃತ್ತಪತ್ರವನ್ನು ನಡೆಯಿಸಿ, ಲೋಕಪ್ರಿಯ ಮಾಡಿದ್ದು ಕಾರವಾರ ಜಿಲ್ಲೆಯ ಜನರಿಗೆ ಗೊತ್ತೇ ಇದೆ. ಆದರೆ ನಮ್ಮ ದುರ್ದೈವದಿಂದ ಅವರು ಮೃತಿಯನ್ನೈದಿದರು- ಲೋಣಾವಳದ ಯೋಗಾಶ್ರಮವನ್ನು ವ್ಯವಸ್ಥೆಗೊಳಿಸುತ್ತಿರುವ ಶ್ರೀ. ಟೇಂಗ್ಸೆಯವರೂ ನಮ್ಮಲ್ಲಿ ಉತ್ತೀರ್ಣರಾದವರೇ. ಮೈಸೂರ ಸೀಮೆಯಲ್ಲಿ ನಂಜುಂಡಯ್ಯ ವೊದಲಾದ ೪ ಜನರು ಪ್ರತ್ಯಕ್ಷವಾಗಿ ರಾಷ್ಟ್ರೀಯ ಕಾರ್ಯವನ್ನು ಕೈಕೊಂಡಿರುವರು. ಕೊಡಗಿನಲ್ಲಿ ಸುಬ್ಬರಾಯರೆಂಬುವವರು ರಾಷ್ಟ್ರೀಯ ಕೆಲಸವನ್ನೇ ಕೈಕೊಂಡಿರುವರು. ಸ್ವಯಂಸೇವಕ ಚಳವಳಿಯಲ್ಲಿ ಪ್ರಸಿದ್ಧಿಯನ್ನು ಹೊಂದಿರುವ ರಾಮಚಂದ್ರರಾವ ಕರಗುದರಿಯವರೂ ರಂಗನಾಯಕರೂ ನಮ್ಮ ಶಾಲೆಯವರೇ.

ಹೀಗೆ ಧಾರವಾಡ ರಾಷ್ಟ್ರೀಯ ಮಹಾವಿದ್ಯಾಲಯವು ಈ ಅತ್ಯಲ್ಪ ಅವಧಿಯಲ್ಲಿ ೧೫ ಜನ ರಾಷ್ಟ್ರಕಾರ್ಯವನ್ನು ಕೈಕೊಂಡಂಥ ರಾಷ್ಟ್ರಸೇವಕರನ್ನೂ ಸುಮಾರು ೩೦ ಜನ ಸ್ವತಂತ್ರತೆಯಿಂದ ಜೀವಿಸುವ ಜನರನ್ನೂ ೧೫—೨೦ ಜನ ಪದವೀಧರರಾದ ರಾಷ್ಟ್ರಸೇವಕರನ್ನು ಉಂಟು ಮಾಡಿದೆ. ಈ ಅತ್ಯಲ್ಪ ಸೇವೆಯನ್ನು ಪರಮಾತ್ಮನ ಚರಣಾರವಿಂದಗಳಿಗೆ ಅರ್ಪಿಸುತ್ತೇವೆ.

ಹೀಗೆ ಉಪಯುಕ್ತವಾದ ಈ ಸಂಸ್ಥೆಯು, "ಅತ್ತಲಿಂದ ಬಂದೇವಮ್ಮ ಮುತ್ತಿನ ಸೇರಿ ಹೊಡದೇವಮ್ಮ, ಪಾಪೀ ಕೈಯಲ್ಲಿ ಸಿಕ್ಕೇವಮ್ಮ, ಪರದೇಶಾಗಿ ಹೋದೇವಮ್ಮ," ಎಂದು ಮಲ್ಲಿಗೆಯ ಮೊಗ್ಗೆಗಳು ಮರಮರನೆ ಮರುಗಿ ಮಾಯವಾಗುವಂತೆ ಸಮಾಜದ ಕೈಯಲ್ಲಿ ಸಿಕ್ಕು ಘಾಸಿಯಾಗಿ ಈ ವರ್ಷ ನಮ್ಮ ಶಾಲೆಯು ಮಾಯವಾಯಿತೆಂದು ತಿಳಿಸಲು ಅತ್ಯಂತ ವ್ಯಸನವಾಗುತ್ತದೆ.

## ಶಾಲೆಯ ಸಾಧಾರಣ ಮಂಡಲದ ನಿರ್ಣಯ.

ಶಾಲೆಯ ಆರ್ಥಿಕ ಸ್ಥಿತಿಯು ಅತ್ಯಂತ ಕಠಿಣವಿದ್ದದರಿಂದಲೂ, ವಿದ್ಯಾರ್ಥಿಗಳ ಸಂಖ್ಯೆಯು ಅತ್ಯಲ್ಪವಾದ್ದರಿಂದಲೂ ಪರಿಸ್ಥಿತಿಯು ಅನುಕೂಲವಿಲ್ಲದ್ದರಿಂದಲೂ ಕ. ಮ. ವಿದ್ಯಾಲಯವು ಈ ವರ್ಷದಿಂದ ನಿಲ್ಲಿಸಲ್ಪಟ್ಟಿದೆ.

ಕಾರ್ಯದರ್ಶಿ,

ಗೋವಿಂದಾಚಾರ್ಯ ಗುತ್ತಲ.

## ೧೮೪೮ನೇ ಶಾಲಿವಾಹನ ಶಕೆಯ ಕ್ಷಯ ಸಂವತ್ಸರದ ಆಯವ್ಯಯಗಳ ವಿವರಣೆ.

| ಖಾತೆ | | |
|---|---|---|
| ೧. ವರ್ಗಣಿಯ ಖಾತೆ | ೧೭೮೭- ೫-೦ | |
| ಶ್ರೀ, ಗಂಗಾಧರರಾಯರ ಕಾಣಿಕೆ | ೩೦೦- ೦-೦ | |
| ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಕಮಿಟಿಯ ಸಹಾಯವು | ೬೦೦- ೦-೦ | |
| ೨. ಬಡಿಗ ವರ್ಗ ಖಾತೆ | ೨- ೮-೦ | |
| ೩. ವಸ್ತು ಸಂಗ್ರಹ ಖಾತೆ | ೩೦-೧೨-೦ | |
| ೪. ಫೀ ಖಾತೆ | ೨೩೩- ೦-೦ | |
| ೫. ಬಾಡಿಗೆಯ ಖಾತೆ | ೧೫೪- ೦-೦ | ೫೯೨- ೪-೦ |
| ೬. ನೇಗಿಯ ಖಾತೆ | ೩೭- ೪-೦ | |
| ೭. ಪುಸ್ತಕ ಖಾತೆ | | ೨-೧೩-೦ |
| ೮. ಪ್ರವಾಸ ಖಾತೆ | | ೧೮೭- ೧-೬ |
| ೯. ಮುದ್ರಣ ಖಾತೆ | | ೧೪- ೨-೦ |
| ೧೦. ಆಶ್ರಮ ಖಾತೆ | ೮೫- ೬-೮ | ೧೧೩- ೯-೦ |
| ೧೧. ಟಪಾಲ ಖಾತೆ | | ೭-೧೪-೦ |
| ೧೨. ಮುನಿಸಿಪಾಲಿಟಿ ಖಾತೆ | | ೩- ೧-೦ |
| ೧೩. ಬಡ್ಡೀ ಖಾತೆ | ೦- ೬-೬ | |
| ೧೪. ಕಮಿಶನ್ನ ಖಾತೆ | ೧೨- ೦-೦ | ೧- ೦-೦ |
| ೧೫. ಪಗಾರ ಖಾತೆ | | ೨೫೩೩- ೧-೩ |
| ೧೬. ಸ್ವಧರ್ಮ ಖಾತೆ | ೧೬೬- ೫-೧೦॥ | ೭೫- ೨-೬ |
| ೧೭. ಟಿಳಕ ಸ್ಮಾರಕ ನಿಧಿಯ ಸ್ಥಿರಬ್ಯಾಂಕ | ೫೦೦- ೦-೦ | ೫೦೦- ೦-೦ |
| ೧೮. ಚಿಲ್ಲರಖಾತೆ | | ೩೭-೧೩-೯ |
| ೧೯. ಹಿಂದಿನಶಿಲ್ಕು (೯೯೬-೧೩-೯॥) ಪೈಕಿ ೫೦೦-೦-೦ ಟಿಳಕ ಸ್ಮಾ. ನಿಧಿ ಮತ್ತು ೧೯೬-೧೩-೯॥ „ರೋಖ ಶಿಲ್ಕು ಟಿಳಕನಿಧಿಯು ಸ್ಥಿರಬ್ಯಾಂಕಿನಲ್ಲಿದ್ದು, ಆ ಖಾತೆಗೆ ಜಮೆ ತೋರಿಸಿದೆ.) | ೧೯೬-೧೩-೯॥ | |
| | | ೪೦೬೫-೧೨-೦ |
| | | ೩೮-೧-೧೦ |
| | ೪೧೦೩-೧೩-೧೦ | ೪೧೦೩-೧೩-೧೦ |

೧೪. ಸಂಕಲ್ಪ:— ಇದೊಂದು ಸಾಧನ ಮಾರ್ಗದ ಭಾವಗೀತೆ.

೧೫. ರವೀಂದ್ರರ ಉಪದೇಶ:— ಧರ್ಮ ಬಂಧನಗಳಿಂದ ಜಗತ್ತಿನ ಬೇರೆ ಬೇರೆ ಭಾಗಗಳನ್ನು ಹತ್ತುಕಡೆಯಲ್ಲಿರಿಸುವದು, ಏಶಿಯಾ ಖಂಡದ ಸನಾತನ ಸ್ಫೂರ್ತಿ.

೧೬. ಶ್ರೇಯಮೂ ಪ್ರೇಯಮೂ:— ಇಂದ್ರಿಯಗಳಿಗೆ ಪ್ರಿಯವಾಗಿರುವ ಪ್ರೇಯೋ ಮಾರ್ಗವನ್ನು ಬಿಟ್ಟು ಆತ್ಮಕ್ಕೆ ಕಲ್ಯಾಣಕರ ವಾದ ಶ್ರೇಯೋ ಮಾರ್ಗವನ್ನು ಹಿಡಿಯುವದೇ ಆರ್ಯ ಧರ್ಮದ ತಿರುಳೆಂದು ವಿವೇಚಿಸುವ ಲೇಖನ.

೧೭. ಅಭಯ ಯಾಚನೆ:— ಸಾಧನ ಮಾರ್ಗದಲ್ಲಿಯ ಒಂದು ಭಾವಗೀತೆ.

೧೮-೧೯. ಮೊಟ್ಟ ಮೊದಲು ಮೂಸಿದ ಮಲ್ಲಿಗೆಗಳು. ಮೆಚ್ಚು. | ಕವಿ ರವೀಂದ್ರರ Cresent Moon (ಶಿಶು ಕಾವ್ಯ) ದೊಳಗಿನ ಎರಡು ಗೀತಿಗಳು.

---

## ಗೆಳೆಯರ
## ಗುಂಪಿನವರ ಕಡೆಗೆ ದೊರೆಯುವ ಪುಸ್ತಕಗಳು.

| | |
|---|---|
| ಶ್ರೀಅರವಿಂದ ಘೋಷರ ಚರಿತ್ರೆ | ೦—೧೨—೦ |
| ಶ್ರೀಸುರೇಶ್ವರಾಚಾರ್ಯರ ಚರಿತ್ರೆ | ೧— ೪—೦ |
| ಕಾವ್ಯ ಕಲ್ಪಲತಾ ಭಾಗ ೧ | ೧— ೦—೦ |
| ,, ,, ೨ | ೦—೧೨—೦ |
| ,, ,, ೩ | ೦— ೮—೦ |
| ,, ,, ೪ | ೦— ೬—೦ |
| ಪ್ರತಿಭೆ ( ಕಾವ್ಯಚರ್ಚೆ ) | ೦— ೪—೦ |
| ಕೃಷ್ಣಾಕುಮಾರಿ ( ಚಿಕ್ಕ ಕಾವ್ಯ ) | ೦— ೩—೦ |
| ನಾಡಿನ ಹಾಡುಗಳು | ೦— ೦—[illegible] |
| ನೌಕಾಕ್ರೀಡನ ( ಚಿಕ್ಕ ಕಾವ್ಯ ) | ೦— ೧—೦ |
| ಅಭಿನವ ಅಭಿಮನ್ಯು (ಚಿಕ್ಕಕತೆ) | ೦— ೦—೩ |
| ಮಧ್ಯಮ ವ್ಯಾಯೋಗ ( ನಾಟಕ ) | ೦— ೩—೦ |
| ಭಾವಗೀತೆ | ೧— ೦—೦ |
| ರಮೆ ಉಮೆಯರ ಸಂವಾದ | ೦— ೩—೦ |

ಗುಂಪಿನ ಅಥವಾ ಸ್ವಧರ್ಮದ ವಿಷಯವಾದ ಎಲ್ಲ ಪತ್ರವ್ಯವಹಾರವನ್ನೂ ಹಣದ ವ್ಯವಹಾರವನ್ನೂ ಕೃ. ಶ್ರೀ. ಬೆಟಿಗೇರಿ 'ಸ್ವಧರ್ಮ' ಕಾರ್ಯಾಲಯ ಧಾರವಾಡ. ಇವರೊಡನೆ ಮಾಡಬೇಕು.

---

ಶಿಲಾಲೇಖಗಳನ್ನೋದಬಿಚ್ಛಿಸುವವರು ಅವಕ್ಕೆ ಸಾಕಷ್ಟು ಬೇಕಾದ ಸಂಗತಿಗಳನ್ನು ೩ ದುಡ್ಡಿನ ತಿಕೀಟುಗಳನ್ನು ಕಳಿಸಿ ಪಡೆಯಬಹುದು.

ವಿಳಾಸ: —ಚೆನ್ನಮಲ್ಲಪ್ಪ ಗಲಗಲಿ.
ಗೆಳೆಯರ ಗುಂಪು—ಹಲಸಂಗಿ.

---



---


Printed by M. K. Joshi at the K. P. Works, Dharwar.
Published by B. V. Burli at the Karnatak Mahavidyalaya
Malmaddi Dharwar.

ಗಳೆಯರ ಗುಂಪಿನ

ಓಂ ನಲ್

# ಸ್ವಧರ್ಮ

॥ ತನ್ನ ತಾನರಿವಡೆ ತನ್ನರಿವೇ ಗುರು ॥


ಪುಸ್ತಕ ೪ ಪ್ರಭವ ಸಂ॥ ಚೈತ್ರ ಸಂಚಿಕೆ ೧

೧೮೪೯



ಸಂಪಾದಕರು:

ಕೃಷ್ಣ ಶ್ರೀನಿವಾಸ ಬೆಟಗೇರಿ

ಹನುಮಂತ ಬಳವಂತ ಕೊಣ್ಣೂರ, ಬಿ.ಎ.



ವಾರ್ಷಿಕ ಚಂದಾ ರೂ. ೩ ಬಿಡಿ ಸಂಚಿಕೆಗೆ ಆಣೆ ೪

ವ್ಹಿ. ಪಿ. ವೆಚ್ಚ ಬೇರೆ

# ವಿಷಯ-ಪರಿಚಯ

೧. ನಸುಕು:—ನಿಶಾಗರ್ಭವಲ್ಲಿಯೂ ಪ್ರಭಾತದ ಸೂಚನೆಯನ್ನು ಸಾರು ಕವಿತೆ.

೨. ಸವಿ :—ಮೇಲಣ ಕವಿತೆಯದು.

೩. ಪ್ರಶಾಂತಪ್ರಹ್ಲಾದ:—ಪ್ರಹ್ಲಾದನು ವ್ಯಷ್ಟಿವಾದಿಯಲ್ಲ, ಸಮಷ್ಟಿವಾದಿ ಸಂಘಮೋಕ್ಷದ ಪುರಸ್ಕರ್ತನು ಎಂಬುದನ್ನು ಭಾಗವತದ ಭಾಷೆ ದಲೇ ಪ್ರತಿಪಾದಿಸಿದೆ.

೪. ಸಂದಿಗ್ಧವಿಚಾರ:— ಎರಡೂ ದಂಡೆಯ ಮೇಲೆ ಕೈಯಿಟ್ಟು ಸಾಗುವ ಮನಶ್ಚಿತ್ರವನ್ನು 'ಮರಪಂಡಿತ'ನು ಮಾರ್ಮಿಕವಾಗಿ ರೂಪಿಸಿದ್ದಾನೆ.

೫. ಕಂಬನಿ: —(ಕವಿತೆ) ಇದು ನಿಜವಾಗಿಯೂ ಒಂದು ಕಂಬನಿ. ಕವಿ ಅಂತರ್ಮುಖನಾಗಲಾರ. ಪುತ್ರವಿಗಹತಪ್ತನಾದ ತಂದೆಯು ಮತ್ತೇ ಮಾಡಬಲ್ಲ ? ಆತನ ಶೋಕವೇ ಶ್ಲೋಕವಾಗಿ ಬಂದಿದೆ.

೬. ಗೆಳೆತನದ ಗರ್ಭಗುಡಿಯಲ್ಲಿ: —ಗೆಳೆಯರ ಗುಂಪನ್ನು ಈಗಿನ ಸ್ಥಿ ತಂದ ಚಿಕ್ಕ ಬಳಗಗಳಲ್ಲೊಂದರ ಹಿರಿಯನಾದ 'ಚಿದಂಬರ'ನ (ಆತ ದಿ ಗತನಾಗಿ ೩ ವರುಷಗಳಾದವು) ನೇತೃತ್ವದಲ್ಲಿ ಹೊರಡುತ್ತಿದ್ದ "ತಿಳಿ ವೆಂಬ ಕೈಬರಹದ ತಿಂಗಳ ಹೊತ್ತಿಗೆಯಲ್ಲಿನ ಸ್ಫುಟಲೇಖ. ಗೆಳೆತನ ಲ್ಲಿಯ ಶ್ರದ್ಧೆಯನ್ನು ಬೆಳಗಿಸುವ ಬರಹ.

೭. ಇರುಳಿನಲ್ಲಿ: —( ಕಥೆ ) ಪ್ರಥಮವಿವಾಹದ ಪ್ರಣಯಸ್ಮೃತಿಯ ಮತ್ತೆ ಮದುವೆಯಾದವನೊಬ್ಬನ ಹಳವಂಡವನ್ನು ಬಣ್ಣಿಸಿ ವಿಕಸ ವನ್ನು ವ್ಯಂಗ್ಯವಾಗಿ ಗೌರವಿಸುವ ರವೀಂದ್ರರ ಒಂದು ಕಥೆ.

೮. ಕನಿಕರ: — (ಕವಿತೆ) ಓರ್ವ ಬಾಲವಿಧವೆಯ ದುಃಸ್ಥಿತಿಯನ್ನು ಚಿತ್ರಿ

೯. ವಿಭೂತಿವಿಚಾರ:— ಪರಿಸ್ಥಿತಿಯಿಂದ ಮಾರ್ಪಟ್ಟೊ ವಿಭೂತಿಯು ತಿಯ ಪ್ರಭುವು ಹೇಗಿರುವನೆಂಬುದೇ ಈ ಲೇಖನದ ವಿಷಯವಾ

೧೦. ವಿಸರ್ಜನದ ಪ್ರಸ್ತಾವನೆ.

೧೧. ಅಕ್ಕರತೆ:— ಒಂದು ಚಿಕ್ಕ ನಿಬಂಧ.

೧೨. ಪುಸ್ತಕಪರಿಚಯ.

೧೩. ಮೊದಲಿನ ಮೂರು ಮಾತುಗಳು: —ನಮ್ಮ ಶ್ರದ್ಧೆಯ ಪುನರುಚ್ಚಾ

೧೪. ಕಾರ್ಯದರ್ಶಿಗಳ ವಿಜ್ಞಾಪನೆಯು, ಗುಂಪಿನ ಹೊಸ ಪುಸ್ತಕ ಇತ್ಯಾದಿ.

ಓಂ ಸತ್

# ಸ್ವಧರ್ಮ

॥ ಜಯಂ ಭದ್ರಂ ಶುಭಂ ಮಂಗಲಮ್ ॥

ವರ್ಷ.-೪ | ಶಕೆ ೧೮೪೯ ಪ್ರಭವ ಸಂ॥-ಚೈತ್ರ | ತಿಂ.-೧.

## ನಸುಕು!

"ಜಗಕೆಲ್ಲ ಬಿದ್ದಿತ್ತು ಇಷ್ಟುಹೊತ್ತಿರುಳೆಂಬ ಕಂಪಾದುದೊಂದು ಕನಸು ॥
ಹಗಲಿನ್ನು ಬಂದು ಬೆಳಕಿನ ಸೊಬಗು ಬೆಳಗುವದು—ಕನಸು ಆಗುವದು ನನಸು ॥೧॥

ಕನಸು ಕನಸೆಂದು ಕಂಗಳರು ಕನಕರಿಸುವರು ಕನಸು ಕನಸಾಗಬಹುದೇ ?॥
ಜನಿಸದಿರೆ ಕನಸಿನೊಳು ನನಸು, ನನಸಿನ ಜಗವು ಕನಸಾಗಿ ಸಾಗಬಹುದೇ? ॥೨॥

'ಕನಸು ನನಸಿನ ಕಸುಕು, ನನಸು ಕನಸಿನ ನಸುಕು' ಎಂಬ ಸವಿಗವನವನ್ನು ।
ಇನಿದಾಗಿ ಕಟ್ಟುತಿಹ ಕವಿಯಾಗಿ ಒಪ್ಪುವವು ಬೆಳಗುಮುಂಜಾವು ಮುನ್ನ ॥೩॥

ಚಿಕ್ಕಿಯಾಗಿರುಳೆಲ್ಲ ಮುಗಿಲಲ್ಲಿ ನಗೆಮೊಗದಿನಾಟವನ್ನಾಡಿ ದಣಿದು ॥
ಹಕ್ಕಿಯಾಗೀಗ ಹಾಡುವನು ಇಂಪಾಗಿ ದೇವನು ತಾನೆ ಮನದಿ ತಣಿದು ॥೪॥

ಅಂದಲರ ಕಂಪಿನಿಂ ತಣ್ಣೆಲರ ತಂಪಿನಿಂ ಪಾಡುಗಳ ಪೆಂಪಿನಿಂದ ॥
ಕೆಂದಳಿರ ಕೆಂಪಿನಿಂ ಸೊಬಗೊಗೆವ ಸೊಂಪಿನಿಂ ಮೈದೋರ್ವಲಂಪಿನಿಂದ ॥
ಒಪ್ಪಾಗಿ ಚಿಗುರುತಿಹ ಮೂಡಲದ ಬೆಳಕಿನೊಳು ಸೊಗಸುಳ್ಳ ಮನದಲಿಂದು ॥
ಒಪ್ಪುತಿರುವದು ಬೆಳಗುಮುಂಜಾವು ನುಣ್ಪುಳ್ಳ ಬೆಳಕಸೇರಿಂದ ಮಿಂದು ॥೫+೬॥

ಚೊಕ್ಕಟವದೆಂತಹದೊ! ಈ ಬಗೆಯು ಬೆಳಗುಮುಂಜಾವಿನಾ ಸೊಬಗು-ಸೊಗಸು ॥
ಅಕ್ಕ ನಸುಕೇ! ಅಕ್ಕರದಿ ನಕ್ಕು ನನ್ನಯಂತಃಕರಣದಲ್ಲಿ ಒಗಿಸು. ॥೭॥

—ಸಲ್ಲ

**ಸವಿ** :—ಈ ಕವಿತೆಯು ಒಂದು ತಕ್ಕಡಿಯಂತಿದೆ. ಮೊದಲಿನ ಆರು ಸಾ ಗಳಲ್ಲಿಯೂ ಕಡೆಯ ಆರು ಸಾಲುಗಳಲ್ಲಿಯೂ ಸಮಾನ ಮನೋಹರತೆಯುಳ್ಳ ಒಂದೊಂದು ರೂಪಕವಿದೆ. ಇವೇ ಎರಡು ಪರಡಿಗೆಗಳು. ಮಧ್ಯದ ಎರಡು ಸಾಲುಗಳು ಒಂದು ದಂಡಿಗೆಯಂತಿವೆ. ಇವುಗಳಲ್ಲಿ ಒಂದನೆಯದು ಮೊದಲ ಆರು ಸಾಲುಗಳ ಕಡೆಗೆ ಒಲವುಳ್ಳದ್ದೂ ಎರಡನೆಯದು ಕಡೆಯ ಆರು ಸಾಲುಗಳ ಕಡೆಗೆ ಒಲವುಳ್ಳವ್ದೂ ಇದೆ. ಹೀಗಾಗಿ ಸಮತೂಕವಾಗಿದೆ.

ಮೊದಲ ಆರು ಸಾಲುಗಳಲ್ಲಿ 'ನಸುಕ' ನ್ನು ಕವಿಯೆಂದೂ ಎರಡನೆಯ ಆರು ಸಾಲುಗಳಲ್ಲಿ ಒಬ್ಬ ಸ್ತ್ರೀಯೆಂದೂ ರೂಪಿಸಿದೆ. ಮಧ್ಯದ ಎರಡು ಸಾಲುಗಳಲ್ಲಿ ಪ್ರಕಾಶಮಯನಾದ ಪರಮಾತ್ಮನು ರಾತ್ರಿಯಲ್ಲೆಲ್ಲ ಲಕ್ಷೋಪಲಕ್ಷ ಚಿಕ್ಕೆಗಳಲ್ಲಿ ಆಡಿ, ಬೆಳಗಿನಲ್ಲಿ ಅದೇ ಆನಂದಮಯನಾದ ಪರಮಾತ್ಮನು ಲಕ್ಷೋಪಲಕ್ಷ ಹಕ್ಕಿಗಳಲ್ಲಿ ಹಾಡುತ್ತಿಹನೆಂದು ಕವಿಯು ಹೇಳುತ್ತಾನೆ. ಲೆಕ್ಕವಿಲ್ಲದ ಚಿಕ್ಕೆಗಳಿಂದ ತುಂಬಿದ ವಸಂತಮಾಸದೊಳಗಿನ ರಾತ್ರಿಯು ಅಪರಂಪಾರವಾದ ಬೆಳಕಿನ ಪ್ರಸ್ತಾವನೆಯಂತಿರುವದೆಂದೂ, ರಾತ್ರಿಗೂ ಹಗಲಿಗೂ ವಿರೋಧವಿಲ್ಲೆಂದೂ ಹಾಗೆ ಕಾಣುವವರು ಕುರುಡರೆಂದೂ ಕವಿಯನ್ನುತ್ತಾನೆ. ಹಳವಂಡದಿಂದುಂಟಾದ ಕನಸುಗಳು ಬೇರೆ; ಮುಂದೆ ಮೈದೋರುವ ಸತ್ಯದ ಮೊದಲು ಕಾಣುವ ನೆರಳಂತಿರುವ ಕನಸುಗಳು ಬೇರೆ. ಸತ್ಯದ ಮೇಲೆ ಸತ್ಯದ ಪರಿಗಳಿವೆ. ಒಂದು ಸತ್ಯದಿಂದ ಇನ್ನೊಂದು ಸತ್ಯಕ್ಕೆ ಹೋಗುವ ಹಾದಿಯು ದಿವ್ಯದೃಷ್ಟಾಂತಗಳದು. ಈ ಸತ್ಯವು (ನನಸು) ದೃಷ್ಟಾಂತಗಳ (ಕನಸು) ನಸುಕಿದ್ದಂತೆ; ಮತ್ತು ಈ ದೃಷ್ಟಾಂತಗಳ ಪರಿಪಾಕವೇ ಮುಂದಿನ ಸತ್ಯದರ್ಶನ. ಹೀಗೆ ಕವನವನ್ನು ಕಟ್ಟಿದ್ದಾನೆ. "ನಸುಕಿ"ನ ಕವಿಯು ರಾತ್ರಿಯನ್ನು ಕುರಿತು, ಮೂಗಿಗೆ ಕಂಪಾಗಿಯೂ, ಮೈಗೆ ತಂಪಾಗಿಯೂ, ಕಿವಿಗೆ ಇಂಪಾಗಿಯೂ, ಕಣ್ಣಿಗೆ ಕೆಂಪುಕೆಂಪಾಗಿಯೂ ಅಂತೂ ಇಂದ್ರಿಯಮುಖವಾಗಿ ಮನದ ಮನೆಯಲ್ಲಿ ಮೈದೋರುವ ಚೆಲುವಿಕೆಯೇ ಮೂಡಲ ಬೆಳಕೆಂಬ ಗಿಡದ ಬುಡದಲ್ಲಿ ಮಿಂದು ಮಡಿಯಾಗಿ ಅಕ್ಕನಂತೆ ನಿಂತಿರುವಳೆಂದು ನಸುಕನ್ನು ಕಂಡು ಸಹೋದರಭಾವವನ್ನು ಅನುಭವಿಸಿದ ಕವಿಯು ವರ್ಣಿಸುತ್ತಾನೆ.

———

ಶ್ರೀಮದ್ಭಗವದ್ಭಕ್ತ

# ಪ್ರಶಾನ್ತ ಪ್ರಹ್ಲಾದ

ಕೇವಲಾನುಭವಾನಂದಸ್ವರೂಪೋ ಪರಮೇಶ್ವರಃ ॥

—ಪ್ರಹ್ಲಾದ (ಭಾಗವತ, ೭ನೇಸ್ಕಂಧ ೬ನೇ ಅಧ್ಯಾಯ, ೨೩ನೇ ಶ್ಲೋಕ)

ಅನಿಸಿಕೆಯ ಸೊಗಸೆ ಆತ ॥

—ಪ್ರಹ್ಲಾದ.

ಈ ವಿಷಯವನ್ನು ಬರೆಯುವದಕ್ಕೊಂದು ಕಾರಣವು ಉಂಟಾಯ್ತು. ಶ್ರೀ-ಮನ್ನೃಪಶಾಲಿವಾಹನ ಶಕೆ ೧೮೪೮ ಮಾಘ ಬ. ೮. (೨೫–೨–೨೭)ಯ ದಿವಸ ಒಂದು ಕನಸು ಬಿದ್ದಿತ್ತು, ಶಾಂತಿನಿಕೇತನದಲ್ಲಿ. ಕನಸಿನಲ್ಲಿ ನಾವು ಕೆಲವು ಗೆಳೆಯರು ಕೂಡಿ ಯಾವದಾದರೂ ಧರ್ಮಗ್ರಂಥವನ್ನು ಓದಬೇಕೆಂದು ವಿಚಾರಿಸುತ್ತಿದ್ದೆವು. ಆಗ್ಗೆ ಒಬ್ಬ ಮಹಾಪುರುಷನಾವನೋ ಬಂದು 'ಶ್ರೀಮದ್‌ಭಾಗವತದಲ್ಲಿ ಸಪ್ತಮ ಸ್ಕಂಧದಲ್ಲಿ ಪ್ರಹ್ಲಾದಚರಿತ್ರೆಯುಂಟು; ಅದನ್ನು ಓದಿರಿ' ಎಂದು ಹೇಳಿಹೋದಂ ತಾಯ್ತು. ಆ ಪ್ರಕಾರವಾಗಿ ಗೆಳೆಯ ಕೃಷ್ಣ ಓದಲಿಕ್ಕೆ ಹತ್ತಿದ; ನಾವೆಲ್ಲ ಕೇಳುತ್ತಿದ್ದೆವು. ಅಷ್ಟರಲ್ಲೇ ಎಚ್ಚರಾಯ್ತು. ನನ್ನ ತಾಯಿ ಪ್ರಹ್ಲಾದರಾಯರ ಅವತಾರವಾದ ಶ್ರೀ-ರಾಯರಿಗೆ ನಡಕೊಂಡು ನಿನ್ನನ್ನು ಪಡೆದೆ ಎಂದು ಆಗಾಗ್ಗೆ ಹೇಳುವದೂ ನನಗೆ ನೆನ ಪಾಗಿ ಒಂದು ಬಗೆಯ ಅಭಿಮಾನಾನಂದವಾಯ್ತು.

ಮರುದಿನ ಪುಸ್ತಕಾಲಯಕ್ಕೆ ಹೋಗಿ ಭಾಗವತವನ್ನು ತಂದು ತೆಗೆಯಲಾಗಿ ಸಪ್ತಮ-ಸ್ಕಂಧದಲ್ಲೇ ಪ್ರಹ್ಲಾದಚರಿತ್ರೆಯಿತ್ತು. ಹೇಳುವ ಮಾತೆಂಪರೆ ಕನಸಿನಲ್ಲಿ ಕೇಳುವದಕ್ಕಿಂತ ಮೊದಲು ಪ್ರಹ್ಲಾದಚರಿತ್ರೆ ಭಾಗವತದ ಯಾವ ಸ್ಕಂಧದಲ್ಲಿ ಬರು ವದೆಂಬುದೇ ನನಗೆ ಗೊತ್ತಿರಲಿಲ್ಲ. ಸಂಸ್ಕೃತಭಾಗವತವನ್ನೇ ನಾನು ತೆಗೆದು ನೋಡಿ ರಲಿಲ್ಲ. ನನಗಿದು ಅತ್ಯಾಶ್ಚರ್ಯವನ್ನುಂಟುಮಾಡಿತು. ಇಡೀ ಸ್ಕಂಧವನ್ನು ಓದಿ ಮುಗಿ ಸಿದೆ. ಓದುವ ಕಾಲಕ್ಕೆ ಪ್ರಹ್ಲಾದನಂಥ ಭಗವದ್ಭಕ್ತ ರಸಪುರುಷನನ್ನು ವೇದವ್ಯಾಸ ಮುನಿಗಳು ಹೇಗೆ ಚಿತ್ರಿಸಿರುವರೆಂಬದನ್ನು ನೋಡಿ ಅಂತಃಕರಣವು ಆ ಪ್ರಶಾಂತ ಪುರು ಷನ ಪಾದತಲದಲ್ಲಿ "ಓಂ ನಮೋ ಗುರವೇ" ಎಂದು ಉದ್ಗಗತೆಗೆಯದಿರಲಿಲ್ಲ.

ಮೊತ್ತಮೊದಲು ನಾಲ್ಕನೇ ಅಧ್ಯಾಯದಲ್ಲಿ ಶ್ರೀ ಹರಿಯ ಹೃದಯಸಂಕಲ್ಪವನ್ನು ಕಂಡರೆ ಪ್ರಹ್ಲಾದನಿಗೋಸುಗ ಆತ ಎಷ್ಟು ಪಕ್ಷಪಾತಿಯಿರುವನೆಂಬದು ತಿಳಿದು ಬರು ತ್ತದೆ. ಶ್ರೀ ಹರಿಯು ದೇವತೆಗಳಿಗೆ ಹೇಳುವದೇನಂದರೆ:—

"ಯದಾ ದೇವೇಷು ವೇದೇಷು ಗೋಷು ವಿಪ್ರೇಷು ಸಾಧುಷು ॥
ಧರ್ಮೇ ಮಯಿ ಚ ವಿದ್ವೇಷ ಸ ವಾ ಆಶು ವಿನಶ್ಯತಿ ॥

ನಿರ್ವೈರಾಯ ಪ್ರಶಾಂತಾಯ ಸ್ವಸುತಾಯ ಮಹಾತ್ಮನೇ ॥
ಪ್ರಹ್ಲಾದಾಯ ಯದಾದ್ರುಹ್ಯೇತ್ ಹನಿಷ್ಯೇಽಪಿ ವರೋರ್ಜಿತಮ್ ॥

ಗೋದೇವದ್ವಿಜಾಂತರ್ಗತ ವೇದಧರ್ಮದ್ವೇಷಿಯಾದ ಹಿರಣ್ಯಕಶಿಪುವು ಬೇಗನೇ ಅಳಿದು ಹೋಗುವನೆಂದು ಮೊದಲು ಹೇಳುವ. ಆದರೆ ಇಷ್ಟಕ್ಕೇ ನಿಲ್ಲದೆ ಪ್ರಹ್ಲಾದನನ್ನು ಪೀಡಿಸಿದ ಕ್ಷಣವೇ ಆತನನ್ನು ಕೊಲ್ಲುವೆನು. ಸಾವನ್ನು ಹೆದರಿಸಿಕೊಳ್ಳುವಂಥ ವರವು ಅವನಿಗೆ ಸಿಕ್ಕಿದ್ದರೂ ಚಿಂತೆಯಿಲ್ಲ. ನನ್ನ ಆ ಪ್ರಹ್ಲಾದನಿಗೆ ಬಾಧೆ ಬಂದಲ್ಲಿ ಯಾವ ಮಾತನ್ನೂ ಲೆಕ್ಕಿಸದೆ ಆ ಧರ್ಮದ್ವೇಷಿಯನ್ನು ಕೊಂದುಬಿಡುವೆನು." ಎಂದು ದೇವದೇವನ ಸಂಕಲ್ಪ.

ಪ್ರಹ್ಲಾದಚರಿತ್ರೆಯೆಂದರೆ ದೇವದೇವನೇ ತನ್ನಷ್ಟಕ್ಕೆ ತಾನೆ ಒಂದು ಒಡೆಯಲಾಗದ ಒಗಟವನ್ನು ಹಾಕಿಕೊಂಡು ಕಡೆಗೆ ತಾನೇ ಒಡೆದು ತೋರಿಸಿಕೊಂಡಂತೆ ಇದೆ. ಸೃಷ್ಟಿಕರ್ತ ಬ್ರಹ್ಮಸ್ವರೂಪನಾಗಿ ತಾನೆ ಒಂದು ಒಗಟನ್ನು ಹುಟ್ಟಿಸಿದ. ಅದನ್ನು, ಒಡೆಯಲು ಬಲು ಬಿಗಿಹೋಗುವಂತೆ ಬೆಳೆಸಿದ. ಕಡೆಗೆ ರುದ್ರಸ್ವರೂಪನಾಗಿ ತಾನೇ ಅದನ್ನು ಒಡೆದುಬಿಟ್ಟ. ಹಿರಣ್ಯಕಶಿಪುವಿನ ಸಾವಿನ ಕಟ್ಟಳೆಗಳಾದರೋ, ಧೂರ್ತತೆಯಿಂದ ಕೇಳಿದವುಗಳೆಂಬದರಲ್ಲಿ ಸಂಶಯವಿಲ್ಲ. ನೆಲದ ಮೇಲೆ ಸಾಯಬಾರದು ಮುಗಿಲಮೇಲೆ ಸಾಯಬಾರದು ಎಂದು ರಕ್ಕಸ ವರ ಕೇಳಿದ್ದರೆ, ಹೊಸ್ತಿಲಲ್ಲಿ ತನ್ನ ತೊಡೆಯ ಮೇಲೆ ಕೊಲ್ಲುವೆನೆಂದ. ನರರಿಂದ ಸಾಯಬಾರದು ಪಶುಗಳಿಂದ ಸಾಯಬಾರದೆಂದರೆ ನೃಸಿಂಹನಾಗಿ ಕೊಲ್ಲುವೆನೆಂದ. ನಮಗೆ ಒಡೆಯದ ಒಗಟು ಆ ದೇವನಿಗೂ ಒಡೆಯಲಸಾಧ್ಯವೇ ? ಈ ಹೊತ್ತಿನಲ್ಲಿ ನಮ್ಮ ಈಗಿನ ಮಹಾತ್ಮಾ ಗಾಂಧಿಯವರ ನೆನಪಾಗುತ್ತದೆ. ಸತ್ಯಾಗ್ರಹಕ್ಕೆ ಐತಿಹಾಸಿಕ ಪುರುಷನನ್ನು ತೋರಿಸಿರೆನ್ನಲಾಗಿ ಗಾಂಧಿಜಿಯವರು ಪ್ರಹ್ಲಾದನನ್ನು ಕೈಮಾಡಿತೋರಿಸಿದರು. ಪ್ರಹ್ಲಾದನ ಅವತಾರಸ್ವರೂಪರೆಂದು ಮಹಾತ್ಮರು ಕಾಣುವರು. ಆಂಗ್ಲಸರಕಾರವು ಬ್ರಹ್ಮನಲ್ಲಿ ನೆಲದಮೇಲೆ ಸಾಯಬಾರದು ಎಂದರೆ, ಭಾರತೀಯರು ಭೂಮಿಯುದ್ಧಮಾಡಿ ಸೋಲಿಸಬಾರದು. ನೀರಿನಲ್ಲಿ ಸಾಯಬಾರದು ಎಂದರೆ ಭಾರತೀಯರಿಗೆ ಜಲಯುದ್ಧ ಮಾಡಲು ಬರುವಂತಿಲ್ಲ ಈ ಪ್ರಕಾರವಾಗಿ ವರಬೇಡಿಕೊಂಡಂತೆ ಕಂಡರೂ ಸತ್ಯಾಗ್ರಹವೆಂಬ ನೃಸಿಂಹಸ್ವರೂಪವು ಹಿರಣ್ಯಕಶಿಪುವಿಗಿಂತ ಧೂರ್ತವಾದ ಸಾಮ್ರಾಜ್ಯವನ್ನು ರಸಾತಲಕ್ಕಿಳಿಸದೆ ಬಿಡುವದಿಲ್ಲವೆಂಬುವದರಲ್ಲಿ ಸಂಶಯವಿಲ್ಲ. History repeats itself 'ಹಿಂದಿನದು ಇಂದಿನದು ಮುಂದಿನದೂ ಸರಿ' ಎಂಬ ಮಾತು ಸುಳ್ಳೇ ಬಂದಿಲ್ಲ; ಇರಲಿ.

ಶ್ರೀಹರಿಯು ಪ್ರಹ್ಲಾದ ಪಕ್ಷಪಾತಿಯೆಂಬದನ್ನು ಗೀತೆಯಲ್ಲೂ ನೋಡಬಹುದು. ವಿಭೂತಿಯೋಗದಲ್ಲಿ, ಶ್ರೀ ಕೃಷ್ಣನು—

"ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ"

—೩೦. ಅ. ೧೦.

ಎಂದು ಹೇಳುತ್ತಾನೆ. ಊರ್ಜಿತ, ಸತ್ತ್ವವಂತ ವಿಭೂತಿಗಳೆಲ್ಲಾ ದೇವಾಂಶರು ಎಂಬ ಗೀತಾವಾಕ್ಯದಂತೆ ಪ್ರಹ್ಲಾದನಾದರೂ ದೇವಾಂಶನೆಂಬುವವರಲ್ಲಿ ಸಂದೇಹವಿಲ್ಲ. ಸತ್ಯಧರ್ಮರತರಾದ ರಸಪುರುಷರೆಲ್ಲ ಆತನ ಅಂಶದಿಂದಲೇ ಜನಿಸುವರೆಂಬ ಜಗತ್ತಿನ ಮಾತು ಯಥಾರ್ಥವಾಗಿಯೇ ಇದೆ.

ನಮ್ಮ ಪುರಾಣಪುರುಷರಲ್ಲಿ ಬಾಲ್ಯದಲ್ಲಿಯೇ ಭಗವದ್ಭಕ್ತಿಪ್ರೇರಿತರಾಗಿ ಜೀವನವನ್ನು ಸಾಗಿಸಿದವರಲ್ಲಿ ಪ್ರಹ್ಲಾದ ಮತ್ತು ಧ್ರುವ ಇವರಿಬ್ಬರು ಪ್ರಮುಖಪುರುಷರು. ಇಬ್ಬರೂ ಪ್ರೇರಣಾಪುರುಷರು. ಇಬ್ಬರೂ ಧ್ರುವರು; ಇಬ್ಬರೂ ಪ್ರಹ್ಲಾದರು. ಇಬ್ಬರ ತಾಯಂದಿರೂ ದೇವಭೀರುಗಳು. ಇಬ್ಬರ ತಂದೆಗಳೂ ನೇವನೀತಿಧರ್ಮದ್ವೇಷಿಗಳು. ಪ್ರಹ್ಲಾದನು ಗರ್ಭದಲ್ಲಿದ್ದಾಗ ನಾರದರು ಉಪದೇಶಮಾಡುವರು. ಧ್ರುವನು ಅರಣ್ಯಕ್ಕೆ ಹೊರಟಾಗ ನಾರದರು ಉಪದೇಶ ಮಾಡುವರು. ಇವರಿಬ್ಬರ ಜೀವನದಲ್ಲಿ ಎಷ್ಟೋ ಸಾಮ್ಯಗಳಿವೆ. ಇವರಿಬ್ಬರ ಜೀವನಗಳಲ್ಲಿನ ಸಾಮ್ಯವೈಷಮ್ಯಗಳನ್ನು ಹೇಳುವೆಂದರೆ ಅದೊಂದು ದೊಡ್ಡ ವಿಷಯುವೇ ಆಗುವದು. ಆ ವಿಷಯುವನ್ನು ಇಲ್ಲಿ ತೆಗೆಯುವದು ವಿಷಯಾಂತರವೂ ಆಗುವದು. ಆದರೂ ಅವರಲ್ಲಿ ಒಂದು ಮಹತ್ತ್ವವಾದ ವೈಷಮ್ಯವಿರುವದೆಂಬದನ್ನು ಹೇಳಿಬಿಡುವೆನು. ಧ್ರುವನು ವ್ಯಷ್ಟಿವಾದಿ (Individualist); ಪ್ರಹ್ಲಾದನು ಸಮಷ್ಟಿವಾದಿ (Socialist). ಧ್ರುವನ ಚಿತ್ರವೆಂದರೆ:—ಏಕಾಕಿಯಾಗಿ ದೇವನನ್ನು ನೋಡೇತೀರೇನೆಂಬ ಬಾಲ್ಯಕ್ಕೆ ಒಪ್ಪುವಂಥ ಹಠಯೋಗವಾದಸ್ಥನಾದ ಭಾವನಾಮಯ ಬಾಲಕನು. ಪ್ರಹ್ಲಾದನ ಚಿತ್ರವೆಂದರೆ—ತನ್ನ ಗೆಳೆಯರೊಡನೆ ದೇವನನ್ನು ಹಾಡಿಕೊಂಡಾಡಬೇಕೆಂಬ. ಚಿಕ್ಕಂದಿಗೆ ತಕ್ಕ ನಿಶ್ಚಲವಾದವುಳ್ಳವನಾಗಿ ಶ್ರದ್ಧಾಮಯ ಬುದ್ಧಿಯೋಗದಿಂದೊಡಗೂಡಿದ ಪ್ರಶಾಂತ ಅಂತಃಕರಣದ ಬಾಲಕನು. ಧ್ರುವನು ಬಿಡಿಯಾಗಿ ಬಿಡುಗಡೆ ಹೊಂದಬೇಕೆಂದ. ಪ್ರಹ್ಲಾದನು ಇಡಿಯಾಗಿ ಬಿಡುಗಡೆಹೊಂದಬೇಕೆಂದ. ಪ್ರಹ್ಲಾದನು ತನ್ನಷ್ಟಕ್ಕೆ ತಾನೆ ಭಕ್ತನಾಗಿರುವದರಲ್ಲಿ ಸಮಾಧಾನ ಹೊಂದಲಿಲ್ಲ. ತಂದೆಯನ್ನು ದೇವಮಾರ್ಗಕ್ಕೆ ತರಲು ಪ್ರಯತ್ನಿಸಿದ. ಪುರೋಹಿತನನ್ನು ತನ್ನ ಮಾರ್ಗಕ್ಕೆ ಒಲಿಸಿಕೊಳ್ಳಲು ಪ್ರಯತ್ನಿಸಿದ. ಇವರಿಬ್ಬರನ್ನೂ ಒಳ್ಳೇ ಯುಕ್ತಿವಾದಗಳಿಂದ ಗೆಲ್ಲಬಯಸುವನು. ಆದರೆ ಇವರಿಬ್ಬರೂ ಹಿರಿಯರು, ಈ ಹುಡುಗನು ಇತ್ತಂಡವಾದಿಯೆಂದು ಅಂದು ಬಿಡುವರು. ತಂದೆಯಂತೂ ಹಿಂಸಾಮಾರ್ಗವನ್ನೇ ಅವಲಂಬಿಸಿ ಚಿತ್ರವಿಚಿತ್ರವಾದ ಹಿಂಸೆಯನ್ನು ಕೊಡಹತ್ತುವನು. ಆದರೆ ಭಗವನ್ನಾರದರು ಅನ್ನುವಂತೆ:—

> ಸರ್ವಭೂತಾತ್ಮಭೂತಂ ತಂ ಪ್ರಶಾಂತಂ ಸಮದರ್ಶನಂ ।
> ಭಗವತ್ತೇಜಸಾ ಸ್ಪೃಷ್ಟಂ ನಾಶಕ್ನೋದ್ಧಂತುಮುದ್ಯಮೈಃ ॥

ಎಲ್ಲರಲ್ಲೂ ತನ್ನನ್ನೇ ಕಾಣುವ 'ಆತನ' ಬೆಳಕಿನಿಂದ ಬೆಳೆದ ಆ ಮಗುವನ್ನು ಕೊಲ್ಲಲು ಯಾರಿಂದಲೂ ಆಗಲಿಲ್ಲ.

ಇಷ್ಟಾದರೂ ಆ 'ಪ್ರಿಯಸುಹೃತ್ತಮ'ನು ತನ್ನ ಹೃದಯವಾಣಿಯನ್ನು ಬೇರೆ ಮಾಡಲಿಲ್ಲ. 'ಈ ಹಿರಿಯರು ತನ್ನ ಮಾತು ಕೇಳದಿದ್ದರೆ ಅಷ್ಟೇ ಹೋಯ್ತು. ನನ್ನ ಓರಿಗೆಯ ಗೆಳೆಯರಲ್ಲಿ ಈ ದೇವ ಪ್ರೀತಿಯ ಸೆಲೆಯನ್ನು ನೆಲೆಗೊಳಿಸೋಣ'ವೆಂದು ಆತ ಬಗೆಯುವ. ತನ್ನೋರಿಗೆಯ ಎಲ್ಲ ಗೆಳೆಯರನ್ನೂ ಕಲೆಹಾಕುವ. ಅವರಿಗೆ ಅನೇಕ ಬಗೆಯಿಂದ ತಿಳಿಹೇಳುವ. ಇಲ್ಲಿ ಪ್ರಹ್ಲಾದನ ಸಂಘವೋಕ್ಷದ ಕಲ್ಪನೆ ತಿಳಿಯಾಗಿ ಕಂಡು ಬರುವದು. ತಾನೊಬ್ಬನೇ ಭಕ್ತಿವಂತನಾಗುವದರಲ್ಲಿ ಅವನಿಗೆ ಶ್ರೇಯಸ್ಸು ತೋರಿ ಬರಲಿಲ್ಲ. ತನ್ನಗೆಳೆಯರನ್ನೊಡಗೊಂಡು 'ಆತ'ನನ್ನು ಪೂಜಿಸಬೇಕೆಂದು ಆತನ ಹೃದಯ ಹಂಬಲಿಸುತ್ತಿತ್ತು. ತನ್ನಗೆಳೆಯರೊಡನೆ ಆತನು ಮಾಡುವ ಸಂವಾದವು ಬಹಳೇ ರಮ್ಯವಾಗಿದೆ. ಎಳೆಯರ ಎದೆಗೂ ತಲೆಗೂ ಹತ್ತುವಂತೆ ಅವನು ಎಲ್ಲ ಮಾತುಗಳನ್ನೂ ಹೇಳುವನು. ಪ್ರಹ್ಲಾದನ ರಸವಾಣಿಯು ಇಂತು ಮೊದಲಾಗುವದು:—

"ಕೌಮಾರ ಆಚರೇತ್ ಪ್ರಾಜ್ಞೋ ಧರ್ಮಾನ್ ಭಾಗವತಾನಿಹ"

"ಗೆಳೆಯರೇ ನಾವೆಲ್ಲಾ ಚಿಕ್ಕಂದಿನಲ್ಲೇ ಆತನನ್ನು ಪ್ರೀತಿಸಬೇಕು ಧರ್ಮಾಧರ್ಮವೆಂದು ನಾವು ಹೆದರುವ ಕಾರಣವಿಲ್ಲ. ಚಿಕ್ಕಂದಿನೊಡನೆ ನಮ್ಮ ತಾಯಿಯನ್ನು ನಾವು ಪ್ರೀತಿ ಸುವಂತೆ ದೇವರನ್ನೂ ಪ್ರೀತಿಸಿದರಾಯಿತು. ಇದೇ ಧರ್ಮ; ಇದೇ ಭಾಗವತ ಧರ್ಮ" ಎಂಬುದೇ ಪ್ರಹ್ಲಾದನ ವಾದ. ಆ ಹೊತ್ತಿಗೆ ಆ ಗೆಳೆಯರು "ಅಲ್ಲೋ! ಪ್ರಹ್ಲಾದಾ! ಇಷ್ಟೆಲ್ಲಾ ನೀನು ಹೇಳುತ್ತೀ ನಿಜ. ಆದರೆ ಇದನ್ನು ನಿನಗಾರು ಹೇಳಿದರು? ನಮ್ಮಂಥ ಹಸುಮಕ್ಕಳಿಗೆ ಆ ದೇವರು ತಿಳಿದು ಬರುವದಾದರೂ ಹೇಗೆ? ಎಂದು ಪ್ರಶ್ನಿಸುವರು. ಆ ಗೆಳೆಯರ ಗೆಳೆಯ ಹೌರಗೆ ತನ್ನ ಗೆಳೆಯರನ್ನು ರಮಿಸಿ ತನ್ನ ಹಾದಿಗೆ ತರುವನು. ತನಗೆ ಹೇಗೆ ತಿಳಿಯಿತೆಂಬುದಕ್ಕೆ ಅವನು ಪ್ರತ್ಯಕ್ಷ ಸಂಗತಿಯೊಂದನ್ನೇ ಹೇಳಿಬಿಡುವನು. ಶ್ರೀ ನಾರದ ಮುನಿಗಳು ತನ್ನ ತಾಯಿ ಬಸುರಿದ್ದಾಗ ಆಕೆಯ ಬಳಿ ಬಂದು ಭಕ್ತಿಧರ್ಮೋ ಪದೇಶ ಮಾಡಿದರೆಂದೂ

ತತ್ತು ಕಾಲಸ್ಯ ದೀರ್ಘತ್ವಾತ್ ಸ್ತ್ರೀತ್ವಾನ್ಮಾತುಸ್ತಿರೋದಧೇ ॥
ಋಷಿಣಾನುಗ್ರಹೀತಂ ಮಾಂ ನಾಧುನಾಪ್ಯಜಹಾತ್ ಸ್ಮೃತಿಃ ॥

ಆ ಋಷಿಗಳು ತನ್ನನ್ನು ಬಲವಾಗಿ ಹರಿಸಿದ್ದರಿಂದ, ಆ ನೆನಪು ಇನ್ನೂ ತನಗೆ ಇರುವ ದೆಂದೂ ಹೇಳುವನು. ಇಷ್ಟಕ್ಕೇ ಆತನು ನಿಲ್ಲದೆ,

ಭವತಾಮಪಿ ಭೂಯಾನ್ಮೇ ಯದಿ ಶ್ರದ್ದಧತೇ ವಚಃ ।
ವೈಶಾರದೀ ಧೀಃ ಶ್ರದ್ಧಾತಃ ಸ್ತ್ರೀಬಾಲಾನಾಂ ಚ ಮೇ ಯಥಾ ॥

'ಗೆಳೆಯರೇ ನನಗೆ ತಿಳಿದಷ್ಟು ನನ್ನಂತಿರುವ— ನನ್ನ ಓರಿಗೆಯವರೇ ಆದ—ನನ್ನ ಗೆಳೆಯರೇ ಆದ ನಿಮಗೆಲ್ಲಾ ತಿಳಿಯುವದು. ಇದರಲ್ಲಿ ಯಾವ ಸಂಶಯವೂ ಇಲ್ಲ. ನನ್ನೀ ಮಾತನ್ನು ನೀವು ನಂಬಿದರೆ ನಿಮಗೆಲ್ಲ ವಿಶಾಲವಾದ ಬುದ್ಧಿಬಲವುಂಟಾಗಿ

ಶ್ರದ್ಧಾಬಲವೂ ಉಂಟಾಗುವದು. ದೇವದೇವನಲ್ಲಿ ಅಚ್ಚಳಿಯದ ನೆಚ್ಚಿಗೆಯುಳ್ಳವರು ನಾವಾಗುವೆವು. ಬೇಕಾದಷ್ಟು ಹೆಣ್ಣು ಮಕ್ಕಳಿಗೂ ಇದು ಸಾಧ್ಯ; ನಮ್ಮಂಥ ಬೇಕಾದ ಚಿಕ್ಕಮಕ್ಕಳಿಗೂ ಇದು ಸಾಧ್ಯ. ಆದ್ದರಿಂದ ನನ್ನಂತೆ ನೀವೂ ಎಲ್ಲ ಜಗತ್ತಿನ ಗೆಳೆಯರಾಗಿರಿ. ನಾವೆಲ್ಲಾ ಆತನನ್ನು ನಮ್ಮ ಹೃನ್ಮಂದಿರದಲ್ಲಿ ಪೂಜಿಸೋಣ" ಎಂಬದಾಗಿ ಹೇಳುವನು.

'ನನ್ನಂತೆ ನೀವೂ ಆಗುವಿರಿ' ಎಂಬ ಮಾತು ಬೇಗನೇ ಆ ಗೆಳೆಯರಿಗೆ ಮನಗಾಣದ ಹಾಗಾಯ್ತು. ಭಕ್ತಿಯೆಂದರೆ ಒಂದು ಭೂತವಿದ್ದಂತೆ; ಅದನ್ನು ನಾವು ಹೊಂದುವದು ಬಲು ಪ್ರಯಾಸವೆಂದು ಅವರ ವಾದ. ಆಗ ಪ್ರಹ್ಲಾದನು ಪ್ರಶಾಂತಮನಸ್ಕನಾಗಿ

" ಕೇವಲಾನುಭವಾನಂದಸ್ವರೂಪೋ ಪರಮೇಶ್ವರಃ "

"ಗೆಳೆಯರೇ ನಮ್ಮ ನಮ್ಮ ಹೃದಯಗಳು ಎಷ್ಟೇ ಎಳಕವಾಗಿರಲಿ ಈ ಎಳೆ ಎದೆಗಳಲ್ಲಿ, ದೇವನನ್ನು ಕುರಿತು ಏನೇನು ಹೇಗೆ ಹೇಗೆ ಅನಿಸಬಲ್ಲುದೋ ಹಾಗೆ ಹಾಗೆಯೇ ನಮಗನಿಸಿದ್ದೇ ದೇವರ ಸ್ವರೂಪವು. ನಮ್ಮ ಚಿಕ್ಕಂದಿಗೆ ತಕ್ಕಂತೆ ನಮಗನಿಸುವದು. ನಮ್ಮ ಅನಿಸಿಕೆಯು ತಕ್ಕಂತೆ ನಮಗೆ ಸೊಗಸಾಗುವದು. ಈ ಸೊಗಸೇ ಪರಮೇಶ್ವರನು. ಈ ಸೊಗಸಿನಲ್ಲೇ ಆತನು ಒಡಮೂಡುವನು. ಆದ್ದರಿಂದೆ ನಾವು ಎಳೆಯರಿದ್ದೇವೆಂದು ಇಷ್ಟೇ ನೆವತೋರಿಸಿ ಆ ಪರಮದಯಾಲುವನ್ನು ನಮ್ಮಲ್ಲಿ ಅನಿಸಿಕೊಳ್ಳುವದನ್ನು ಬೀಸಾಡಿ ಎಸೆಯೋಣ ಬೇಡ" ಎಂಬದಾಗಿ ಸಮಾಧಾನ ಹೇಳುವನು.

ಹರಿಃಸರ್ವೇಷು ಭೂತೇಷು ಭಗವಾನಾಸ್ತ ಈಶ್ವರಃ

"ಗೆಳೆಯರೇ ದೇವರು ಎಲ್ಲಿ ನೋಡಿದಲ್ಲಿ ಇರುವ. ನಾವದನ್ನು ಅನಿಸಿಕೊಳ್ಳಬೇಕಷ್ಟೇ' ಹೀಗೆಂದಕೂಡಲೇ ಗೆಳೆಯರು 'ಪಲ್ಲಾ ನಾವು ಮಾಡಬೇಕಾದದ್ದಾದರೂ ಏನು! ಇನ್ನಿಷ್ಟು ಸ್ಪಷ್ಟಮಾಡಿ ಹೇಳು' ಎನ್ನುವರು. ಕೂಡಲೇ ಆತ

ತಸ್ಮಾತ್ ಸರ್ವೇಷು ಭೂತೇಷು ದಯಾಂ ಕುರುತ ಸೌಹೃದಂ ।
ಆಸುರಂ ಭಾವಮುನ್ಮುಚ್ಯ ಯಯಾ ತುಷ್ಯತ್ಯಧೋಕ್ಷಜಃ ॥

"ಗೆಳೆಯರೇ ಎಲ್ಲವನ್ನು ನಾವು ಪ್ರೀತಿಸೋಣ. ನಮ್ಮಲ್ಲಿಯ ತಾಮಸಸ್ವಭಾವವನ್ನು ಬಿಟ್ಟು ಕೊಡುವದು ಮೊದಲನೆ ಕೆಲಸ. ಅಂದರೇ ದೇವರು ನಮಗೊಲಿಯುವನು" ಎಂದನ್ನುವ.

ಆ ಮೇಲೆ ದೇವರನ್ನು ಪ್ರೀತಿಸುವ ನವರೀತಿಗಳನ್ನು ತಾನೇ ಮತ್ತಿಷ್ಟು ಸುಲಭ ಮಾಡಿಕೊಡಬೇಕೆಂದು ಹೇಳುವ—

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಮ್ ॥

ಎಂಬದಾಗಿ ಗಿಳಿಗೆ ಹೇಳುವಂತೆ, ಹಗುರಾದ ತಿಳಿತಿಳಿಯಾದ ನುಡಿಯಲ್ಲಿ ಉಪ ದೇಶಿಸುವನು. ಈ ನವಮಾರ್ಗಗಳಲ್ಲಿ ಬೇಕಾದ್ದನ್ನು ನಾವು ಮಾಡಬಹುದು. ನಮಗೆ ಶಕ್ಯವಿದ್ದುದನ್ನು ಮಾಡಬೇಕೆಂದೇ ಆತನ ಉದ್ದಿಷ್ಟ. ಈ ಬಗೆಯಾಗಿ ಭಕ್ತಿಪ್ರಯೋಗ ವನ್ನು ತನ್ನ ಗೆಳೆಯರಿಗೆ ಹೇಳುವನು. ಕಡೆಗೆ ಸಾರಿಸಾರಿ ಸಕಲವಿಶ್ವವೂ ಅಚ್ಯುತಮಯ ವೆಂಬವನ್ನು ಇಂತು ಹೇಳುವ :—

> ದೈತೇಯಾ ಯಕ್ಷರಕ್ಷಾಂಸಿ ಸ್ತ್ರಿಯಃ ಶೂದ್ರಾ ವ್ರಜೌಕಸಃ ॥
> ಖಗಾ ಮೃಗಾಃ ಪಾಪಜೀವಾಃ ಸನ್ತಿ ಹ್ಯಚ್ಯುತತಾಂ ಗತಾಃ ॥

ಸ್ತ್ರೀಶೂದ್ರರೂ ಪಶುಪಕ್ಷಿಗಳೂ, ಪಾಪಜೀವಿಗಳೆಂದು ಯಾರಿಗೆ ಅನ್ನುತ್ತಾರೋ ಅವರೂ ಅಚ್ಯುತಸ್ವರೂಪರೆಂದು ಹೇಳಿ ಈ ಭಕ್ತಿಮಾರ್ಗವು

> ನಾಲಂ ದ್ವಿಜತ್ವಂ ದೇವತ್ವ ಮೃಷಿತ್ವಂ ವಾಽಸುರಾತ್ಮಜಾಃ।
> ಪ್ರೀಣನಾಯ ಮುಕುಂದಸ್ಯ ನ ವೃತ್ತಂ ನ ಬಹುಜ್ಞತಾ ॥

ಸಕಲ ಮಾರ್ಗಗಳಲ್ಲೂ ಶ್ರೇಷ್ಠವಾದುದು. ಮುಕುಂದನನ್ನು ಪ್ರೀತಿಸಲು ಬ್ರಾಹ್ಮಣ ರಾದರೆ ಸಾಕಿಲ್ಲ. ಋಷಿಗಳಾದರೆ ಸಾಕಿಲ್ಲ. ದೇವತೆಗಳಾದರೂ ಸಾಕಿಲ್ಲ. ಇವ ನ್ನೆಲ್ಲಾ ಮೀರಿದ್ದಾಗಿ ಭಕ್ತನ ಮಹತಿಯಿದೆಯೆಂದು ತನ್ನ ಗೆಳೆಯರಾದ ದೈತ್ಯಪುತ್ರ ರಿಗೆ ಹೇಳುವನು. ಹೀಗೆ ತನ್ನ ಗೆಳೆಯರನ್ನು ಮನಗಾಣಿಸಿ, ಅವರೊಡನೆ ಹರಿಯನ್ನು ಹಾಡುಗಳಿಂದ ಸಂತೈಸಹತ್ತುವನು. ಇಂತು ಪ್ರಹ್ಲಾದನ ಸಮುಷ್ಟಿಪ್ರೇಮವಾದವನ್ನು ನಾವು ಚನ್ನಾಗಿ ಕಾಣಬಹುದು. ಪ್ರಹ್ಲಾದನು ತಾನು ಸ್ವತಃ ದೈತ್ಯನಿದ್ದು ದೈತ್ಯಬಾಲಕರನ್ನು ದೇವಮಾರ್ಗಕ್ಕೆ ತರುವ ಅವನ ಈ ರೀತಿಭಾತಿಗಳನ್ನೆಲ್ಲಾ ನೋಡಿದರೆ, ತಮೋಜೀವಿಗಳು ತ್ರಿಕಾಲದಲ್ಲಿಯೂ ತಮೋವ್ರತರೆಂಬ ಮೊದಲಾದ ಈಗಿನ ವೈಷ್ಣವ ಸಿದ್ಧಾಂತವನ್ನು ನಂಬಲಿಕ್ಕೆ ಮನಸ್ಸು ಎಂದಿಗೂ ಒಡಂಬಡದು. ತನ್ನ ಸರ್ವಕಾರ್ಯ ವನ್ನೂ ಆತ ಪ್ರಶಾಂತನಾಗಿಯೇ ಮಾಡುವನೆಂಬದು ಲಕ್ಷ್ಯದಲ್ಲಿಡತಕ್ಕದ್ದಾಗಿದೆ.

ಪ್ರಹ್ಲಾದನು ಎಷ್ಟೇ ವಿನಯಾನ್ವಿತನಾದರೂ ಯಾರಿಗೂ ಹೆದರುವವನಲ್ಲ; ಸ್ಪಷ್ಟ ವಾದಿ. ತನ್ನ ತಂದೆಗಂತೂ ಆತ ಹೆದರಲಿಲ್ಲವೆಂಬದು ಕಂಡ ಮಾತೇ. ಆದರೆ ಆತ ತನ್ನ ದೇವನಾದ ನೃಸಿಂಹನಿಗೂ ಹೆದರಲಿಲ್ಲ. ಸಕಲ ದೇವತೆಗಳೂ ಶ್ರೀಲಕ್ಷ್ಮಿಯೂ ಹಿಂದೆ ನಿಂತೇ ಆ ದೇವನನ್ನು ಕೊಂಡಾಡಿದರು. ಈತ ಮಾತ್ರ ನೆಟ್ಟಗೆ ಆ ನೂತನ ದೇವನ ಬಳಿಗೆ ಹೋಗಿ,

> ನಾಹಂ ಬಿಭೇಮ್ಯಜಿತ ತೇಽತಿಭಯಾನಕಾಸ್ಯ- ।
> ಜಿಹ್ವಾರ್ಕನೇತ್ರಭ್ರುಕುಟೀರಭಸೋಗ್ರದಂಷ್ಟ್ರಾತ್ ॥
> ಆನ್ತ್ರಃ ಸ್ರಜಃ ಕ್ಷತಜಕೇಸರ ಶಂಕುಕರ್ಣಾ- ।
> ನ್ನಿರ್ಹ್ರಾದಭೀತದಿಗಿಭಾದರಿಭಿನ್ನಖಾಗ್ರಾತ್ ॥

'ದೇವನೇ ನಾನೇನೂ ನಿನ್ನ ಈ ಉಗ್ರಸ್ವರೂಪಕ್ಕೆ ಹೆದರುವವನಲ್ಲ. ನಿನ್ನ ಕರುಣೆ ಮಾತ್ರ ಅಖಂಡವಾಗಿರಲಿ' ಎಂದು ದೇವರ ಸ್ತೋತ್ರಮಾಡುವ. ಆದರೆ ಅವನ ನಿರ್ಲೋಭ ಸ್ವಭಾವಾದಿತ್ವವು ಇನ್ನೂ ಮುಂದೆ ಕಂಡುಬರುವಂತಿದೆ. ದೇವನು 'ಪ್ರಹ್ಲಾದಾ! ನಿನಗೆ ನಾನು ಮೆಚ್ಚಿದ್ದೇನೆ ವರವನ್ನು ಬೇಡಿಕೋ—'ಪ್ರಹ್ಲಾದಭದ್ರ ಭದ್ರಂತೇ ಪ್ರೀತೋಹಂ ತೇಽಸುರೋತ್ತಮ । ವರಂ ವೃಣೀಷ್ವಾಭಿಮತಂ ಕಾಮಪೂರೋಽಸ್ಮ್ಯಹಂ ನೃಣಾಂ' ಎಂದು ತನ್ನನ್ನು ತಾನೇ ಹೊಗಳಿಕೊಳ್ಳುವ. ದೇವದೇವನಿಗೂ ಹೆದರದ ಆ ಭಕ್ತ ಮೃದುವಾಗಿ ಆತನ ಕೇಳಿಕೆಯನ್ನು ಅಲ್ಲಗಳೆಯುವದು ಹೇಗೆಂದರೆ—

ಮಾ ಮಾಂ ಪ್ರಲೋಭಯೋತ್ಪತ್ತ್ಯಾಸಕ್ತಂ ಕಾಮೇಷು ತೈರ್ವರೈಃ ॥

"ದೇವನೇ ಈಪ್ರಕಾರವಾಗಿ ನನ್ನನ್ನು ಏಕೆ ಲೋಭಿಯನ್ನು ಮಾಡುವಿ ? ನಿನ್ನೀ ವರಲಾಭಲೋಭವೇನೂ ನನಗೆ ಬೇಕಿಲ್ಲ. ನಿನ್ನ ಪಾದಸೇವೆ ನನ್ನ ಮೀಸಲ ಸೊತ್ತಾಗಿದೆ. ನನಗೇನೂ ಬೇಕಿಲ್ಲ." ಹೀಗೆ ನಿಷ್ಕಾಮಸೇವಾಭಕ್ತಿಯನ್ನು ವ್ಯಕ್ತಮಾಡುವನು. ಮುಂದೆ ಆತ ಹೇಳುವದೂ ಮನನೀಯವಿದೆ. ಏನು ಲೋಭಿಸಿ 'ಏನು ಮಾಡುವದು ! ನಾವು ಭಾವಿಸಿದಂತೆ ಭವವಾಗುವದು'. ಇಂತು ಅವನನ್ನುವನು—

ಯಸ್ಮಿನ್ ಯತೋಽಯರ್ಹಿ ಯೇನ ಚ ಯಸ್ಯ ಯಸ್ಮಾತ್ ।
ಯಸ್ಮೈ ಯಥಾ ಯದುತ ಯಸ್ತ್ವಪರಃ ಪರೋ ವಾ ॥
ಭಾವಃ ಕರೋತಿ ವಿಕರೋತಿ ಪೃಥಕ್ ಸ್ವಭಾವಃ ।
ಸಂಚೋದಿತಸ್ತದಖಿಲಂ ಭವತಃ ಸ್ವರೂಪಮ್ ॥

"ಎಲ್ಲವೂ ನೀನೇ ಆಗಿರುವಿ. ಪ್ರಚೋದಿಸುವವನು ನೀನೇ. ನಿನ್ನಿಷ್ಟವೇ ಇಷ್ಟ"ಎಂದು ಆ ಭಕ್ತನು ದೇವರಲ್ಲಿ ಅರಿಕೆಮಾಡಿಕೊಳ್ಳುವನು.

ಇಷ್ಟೆಲ್ಲಾ ಆತನ ಪ್ರಾರ್ಥನೆಯಾಯ್ತು ನಿಜ. ಹಡೆದ ತಂದೆಯನ್ನು ಕೊಲ್ಲಿಸಿದ ಕೊಲೆಪಾತಕಿಯಾದ ಈ ಮಗನ ಹೆಚ್ಚುಗಾರಿಕೆಯೆಲ್ಲಿ ! ಎಂದು ನಾವು ವಾದಿಸಬಹುದು. ಆದರೆ ಪ್ರಹ್ಲಾದನ ಪಿತೃಪರಾಯಣತೆಯನ್ನು ಬಲ್ಲವರೇ ಬಲ್ಲರು. ಆತನು ತನಗೊದಗಿದ ನೋವುಗಳನ್ನೆಲ್ಲಾ ದೇವಸ್ವರೂಪವೆಂದು ಭಾವಿಸಿದುದು ಯಾರಿಗಾಗಿ ? ತನ್ನ ತಂದೆ ಅನ್ಯಾಯವಾಗಿ ದೇವನನ್ನು ಭ್ರಾತೃಘಾತಕನೆಂದು ಹೀಯಾಳಿಸುವನಲ್ಲಾ ಎಂದು ಅವನ ಹೃದಯವು ನೊಂದು ಆ ನೋವುಗಳನ್ನೆಲ್ಲ ಸಹಿಸಿಕೊಂಡ. ಅವನು ನೊಂದದ್ದು ತನ್ನ ತಂದೆಗಾಗಿ. ದೇವರಲ್ಲಿ ಅವನು ಏನಾದರೂ ಬೇಡಿದ್ದರೆ ತನ್ನ ತಂದೆಯನ್ನು ಪವಿತ್ರಗೊಳಿಸಬೇಕೆಂದೇ. ತನಗಾಗಿ ಆತ ಏನೂ ಕೇಳಿಕೊಳ್ಳಲಿಲ್ಲ. ದೇವರಂಥ ದೇವರು ಕೂತು ವರಬೇಡಿಕೋ ಎಂದರೆ ಆ ಪುತ್ರ ' ನನಗೇಕೆ ಅದೆಲ್ಲಾ ? ' ಎಂದು ಅಲ್ಲಗಳೆದುಬಿಟ್ಟು ಕಡೆಗೆ ತಂದೆಯ ಹಣೇಬರಹ ಹೀಗಾಯಿತಲ್ಲಾ ಎಂದು ಕಡು ನೊಂದು—

ತಸ್ಮಾತ್ ಪಿತಾ ಮೇ ಪೂಯೇತ್ ದುರಂತಾದ್ದುಸ್ತರಾದಘಾತ್ ।

ಎಂದು ಶ್ರೀ ಹರಿಯಲ್ಲಿ ಆತ ಪ್ರಾರ್ಥಿಸುವ. ಹರಿಯಾದರೂ ಅದಕ್ಕೆ ಒಪ್ಪಿ "ಮಗುವೆ ! ನೀನು ಹುಟ್ಟಿದ್ದರಿಂದಲೇ ಅವನ ಹೊಟ್ಟೆ ಪವಿತ್ರವಾಗಿದೆ, ನೀನೇನು ಚಿಂತಿಸುವ ಕಾರಣವಿಲ್ಲೆಂದು" ಹೇಳುವನು.

ತ್ರಿಸ್ಸಪ್ತಭಿಃ ಪಿತಾ ಪೂತಃ ಪಿತೃಭಿಃ ಸಹತೇಽನಘ ॥
ಯತ್ಸಾಧೋಽಸ್ಯ ಗೃಹೇ ಜಾತೋ ಭವಾನ್ ವೈ ಕುಲಪಾವನಃ ॥

ಇಂತು ಪ್ರಹ್ಲಾದನ ಪಿತೃಪರಾಯಣತೆಯೂ ದೇವಪರಾಯಣತೆಯೂ ನೂತನವಾಗಿ ಅವತರಿಸಬೇಕಾದ ದೇವದೇವನಲ್ಲಿ ಕೊನೆಗಂಡವು. ಶ್ರೀಮನ್ನಾರದ ಮುನಿಗಳಂತೆ ಆ ಭಗವದ್ಭಕ್ತ ಪ್ರಶಾಂತ ಪ್ರಹ್ಲಾದನನ್ನು ಇಂತು ಪಾಡಿ ವಂದಿಸುವ:—

" ಬ್ರಾಹ್ಮಣಃ ಶೀಲಸಂಪನ್ನಃ ಸತ್ಯಸಂಧೋ ಜಿತೇಂದ್ರಿಯಃ ।
ಆತ್ಮವತ್ ಸರ್ವಭೂತಾನಾಮೇಕಃ ಪ್ರಿಯಸುಹೃತ್ತಮಃ ॥

ಎಲ್ಲರ ಜೀವದ ಗೆಳೆಯನಾದ ಪ್ರಹ್ಲಾದನೇ ನಿನಗೆ ನನ್ನದಿದೊಂದು ಪ್ರೇಮ ಪ್ರಣಾಮ.

**॥ ಏ-। ಕಾಂತದೊಳಿಂತು ಸಂತಯಿಸುವಂತಃಕರಣದ ಸಂತನೇ ನಮೋ ॥**

—ಪ್ರಹ್ಲಾದ.

---

## ಸಂದಿಗ್ಧ ವಿಚಾರ.

ಸಂದಿಗ್ಧ ವಿಚಾರದ ಪ್ರಾಬಲ್ಯವು ಅಸ್ಥಿರಬುದ್ಧಿಯವರಲ್ಲಿ ಕಾಣುತ್ತದೆ. ಇಂಥವರು ಸ್ಥಿರವಾಗಿ ಯಾವದನ್ನೂ ಹಿಡಿದುಕೊಳ್ಳರು; ಯಾವದನ್ನೂ ಗಟ್ಟಿಯಾಗಿ ಹೇಳರು. ಎರಡೂ ದಡದ ಮೇಲೆ ಕೈಯಿಡಹೋಗಿ ಯಾವುದೂ ನಿಲುಕದೆ ನಡುವೆಯೇ ಬಿದ್ದು ತ್ರಿಶಂಕುವಿನ ಸ್ವರ್ಗಸುಖವನ್ನು ಅನುಭವಿಸುವರು. ಇವರು ಯಾವುದಕ್ಕೂ ಹೌದೆನ್ನರು, ಯಾವುದಕ್ಕೂ ಅಲ್ಲವೆಂದೂ ಅನ್ನರು. ಏನೋ ಎರಡೂ ನಿಜವಾಗಿರುವಂತೆಯೇ ಕಾಣುತ್ತದೆಂದು ಹುಬ್ಬು ಹಿಗ್ಗಿಸಿದರೆ ತೀರಿತಿವರ ಕೆಲಸ. ಧರ್ಮದಲ್ಲಿ, ಕರ್ಮದಲ್ಲಿ ಎಲ್ಲೆಲ್ಲಿಯೂ ಈಗ ಇಂಥ ಕುಂಟುವ ಅಭಿಪ್ರಾಯದವರೇ ಹೆಚ್ಚು. ಇತ್ತ ನಾಸ್ತಿಕರೂ ಅಲ್ಲ, ಅತ್ತ ಆಸ್ತಿಕರೂ ಅಲ್ಲ. ಇಂಥವರದು ಅಜ್ಞೇಯವಾದವಂತೆ. ಇದರಿಂದ ಜನರಲ್ಲಿ ಮೋರೆ ಕೆಡಿಸಿಕೊಳ್ಳುವ ಪ್ರಸಂಗವೇನೋ ಬರುವದಿಲ್ಲ, ನಿಜ. ಆದರೆ ಎಲ್ಲರೂ ಇಂಥವರೇ ಆದರೆ ಜಗದಲ್ಲಿ ನ್ಯಾಯುವೆಂಬುದೇ ಉಳಿಯುವ ಹಾಗಿಲ್ಲ. ಈ ದೌರ್ಬಲ್ಯವೇ ಬೆಳೆಯುತ್ತ ಬಂದ ಹಾಗೆಲ್ಲಾ ಭೀತಿಯೇ ಭೂತವಾಗಿ ಎಲ್ಲದರಲ್ಲೂ ಸಂಕೋಚವು ಮೈಯೆತ್ತಿ ನಿಲ್ಲುವದು. ವಿಕಾಸವೆಂಬುದು ಪುರಾಣೇತಿಹಾಸಗಳಲ್ಲಿ ಮನೋರಂಜನ

ಸಾಧನವಾಗಿ ಮಾತ್ರ ನಿಂತು ಬಿಡುವದು. ಮನುಷ್ಯನು ಈ ಸಂದಿಗ್ಧವಿಚಾರವನ್ನಂಟಿಕೊಂಡು ಬಾಳಲೇ ಆರನು. ಒಮ್ಮಿಲ್ಲವೊಮ್ಮೆ ಸಂದೇಹದ ಪರದೆಯನ್ನು ಹಾರಿಸಿಕೊಂಡು ಉದಾಸೀನ ವೃತ್ತಿಯನ್ನು ಮೆಟ್ಟ ನಿಲ್ಲಲೇಬೇಕಾಗುವದು.

ಹಾದೀ ಹಿಡಿದು ಹೊರಟಿರುವಾಗ ನಾಯಿಯೊಂದು ಕಚ್ಚಬಂದರೆ ಏರಿಹೋಗಬೇಕೋ, ಹಾರಿಹೋಗಬೇಕೋ ? ಎರಡರಲ್ಲೊಂದು ಮಾಡಲೇಬೇಕಾಗುವದು. ಇಲ್ಲಿ ಕೂಡ ತಮ್ಮ ಯಾವದಾದರೂ ಸರಿಯೆಂಬ ಸಂದಿಗ್ಧವಿಚಾರವನ್ನು ನಂಬಿದರೆ ಮೈಹರಿಸಿಕೊಂಡು ಬಳಲಬೇಕಾಗುವದು.

ಸಂದೇಹವಾದಿಗಳು ಬಹಳ ಮಟ್ಟಿಗೆ ಆಂತರಿಕವಾಗಿ ಯಾವದಾದರೊಂದು ಒಪ್ಪಿಕೊಂಡವರಾಗಿರುತ್ತಾರೆ. ಹೊರಗೇನೋ ಭಯದಿಂದ, ಅಧೈರ್ಯದಿಂದ, ಅಥವಾ ಯಾಕೆ ಬೇಕೆಂದು ಈ ಉಭಯಸಮ್ಮತಿಯನ್ನು ಸೂಚಿಸುತ್ತಿರುತ್ತಾರೆ. ಇವರ ಕೃತಿಯ ಮೇಲಿಂದ ಇವರ ಸಂದೇಹವನ್ನು ಯಾವದೊಂದು ದಡಕ್ಕೆ ಮುಟ್ಟಿಸಲಿಕ್ಕೆ ಬರುವಂತಿರುತ್ತದೆ. ಹೇಗೆನ್ನುವಿರೋ ?

ಇಂದು ಶಿವರಾತ್ರಿ ಇಲ್ಲವೆ ಏಕಾದಶಿಯೆಂದು ತಿಳಿಯುವಾ. ಈಗ ಎರಡು ಪಕ್ಷಗಳಲ್ಲಿ ಒಂದು ಗೋಜು ಬಿದ್ದಿದೆ. "ಇಂಥ ದಿನಗಳಲ್ಲಿ ಉಣ್ಣಬೇಕೋ ಉಣ್ಣಬಾರದೋ! ಉಣ್ಣಬೇಕಾದರೆ ಯಾಕೆ ಉಣ್ಣಬೇಕು ? ಉಣ್ಣಬಾರದಾದರೆ ಯಾಕೆ ಉಣ್ಣಬಾರದು ? ಇಲ್ಲಿ ಸಂದೇಹವಾದಿ ಹೀಗೆ ಹೇಳಬಹುದು.—ಏನೆಂದರೆ—"ಯಾವದನ್ನೂ ಹೇಳಲಿಕ್ಕೆ ಬರುವ ಹಾಗಿಲ್ಲ. ಎರಡೂ ವಿಚಾರಗಳಲ್ಲಿಯೂ ತಥ್ಯಾಂಶವಿದೆ. ಆದರೆ ನಿರ್ಣಯಿಸುವುದು ಅಸಾಧ್ಯ". ಸಂದೇಹಿಯು ನಿಜವಾದ ವಿಚಾರವನ್ನು ಕಂಡುಕೊಳ್ಳುವ ಸುಯೋಗವು ಸ್ವಲ್ಪ ಹೊತ್ತಿನಲ್ಲಿಯೇ ಪ್ರಾಪ್ತವಾಗುವಂತಿದೆ. ಏನೆಂದರೆ, ಇವನು ಮನೆಗೆ ಹೋಗಿ ಊಟ ಮಾಡುವನೋ ಇಲ್ಲವೋ ನೋಡಿದರೆ ತಿಳಿದು ಹೋಗುವದು. ಇಂಥವರು ಬಹಳ ಮಟ್ಟಿಗೂ ಉಪವಾಸ ಮಾಡುವವರಲ್ಲ. ಇವರು ನಿಶ್ಚಯವಾಗಿಯೂ ಪೂರ್ವಪಕ್ಷದವರೇ. ಇಂಥ ಅಜ್ಞೇಯವಾದಿಗಳೂ ಕೂಡ ಆಂತರಿಕವಾಗಿ ನಾಸ್ತಿಕರಾಗಿಯೇ ಇರಲಿಕ್ಕೆ ಬೇಕು. ಸಾಲೆಯಲ್ಲಿ ವಿದ್ಯಾರ್ಥಿಗಳಿಗೆ ಏನಾದರೊಂದು ಪ್ರಶ್ನೆಮಾಡಿದ್ದಕ್ಕೆ ಮೂರು ಬಗೆಯ ಉತ್ತರಗಳು ಸಿಕ್ಕಬಹುದು. ಕೆಲವರು ಸರಿಯಾಗಿ ಉತ್ತರ ಹೇಳುವವರು. ಕೆಲವರು ಇದನ್ನು ನಾವು ಕಲಿತೇ ಇಲ್ಲ, ನಮಗೆ ಬಾರದು ಎನ್ನುವರು. ಇನ್ನು ಮಧ್ಯಮ ಪುರುಷರು ಹೇಳುವ ವಿಧ ಬೇರೆ. "ಕಲಿತಿದ್ದೆನು, ಆದರೆ ಈಗ ಮರೆತಿದೆ." ವಾಹವಾ ! ಕಲಿಯದಿದ್ದವನಿಗೂ ಕಲಿತು ಮರೆತೆನೆನ್ನುವವನಿಗೂ ಏನು ವ್ಯತ್ಯಾಸ ? ಕಲಿಯದವನಿಗಿಂತ ದಡ್ಡನೆಂದರೆ ಈ ಮಧ್ಯಮ ಮಹಾಪುರುಷನೆ !! ಇದೀಗ ಒಂದುಬಗೆಯು ಚಮತ್ಕಾರವಾದ ಸಂದಿಗ್ಧವಿಚಾರ.

## ಕಂಬನಿ.

—(೧)—

(ಕೂಸನ್ನು ಕಳಕೊಂಡು ಕೊರಗುವ ತಂದೆಯ ಉದ್ರೇಕವಿದು)

ಹೇವ ಹಿಮ್ಮೆಟ್ಟಿಹುದು ।
ಜೀವ ಜಡವಾಗಿಹುದು ॥
ನೋವು ಸಾಕಾಗಿಹುದು ।
ಸಾವು ಬೇಕಾಗಿಹುದು ॥ ೧ ॥

ಜಡಿಯೆ ಸಿಡಿಲಿನ ಮಳೆಯು ।
ಕಡಿದು ಬಿದ್ದಿತು ಸುಳಿಯು ॥
ಮೊಗ್ಗೆಯರಳಲೆ ಇಲ್ಲ।
ಸುಗ್ಗಿಯಾಗಲೆ ಇಲ್ಲ ॥ ೨ ॥

ಎಲರ ನಾಡಿನ ಸುದ್ದಿ ।
ತಿಳಿದು ಹೇಳುವರಾರು ॥
ಉಲುವು ಬರುತಿವೆ ನಿನ್ನ ।
ಚೆಲುವನರುಹುವರಾರು ॥ ೩ ॥

ಮನದೊಳಗೆ ಮರುಗೇಕೆ ? ।
ನೆನಹಿನೊಳು ನೋವೇಕೆ ? ॥
ಬಂದ ಒಡವೆಯು ನೋಡೆ ।
ಎಂದಾರೆ ಅಡಗುವದೆ ॥ ೪ ॥

ಎಂದು ಒಳಗಿಂದೊಳಗೆ ।
ಒಂದು ನುಡಿ ಏಳುವುದು ॥
ಅಂದರೂ ಮಿಡುಕಿಹುದು ।
ಬಂಧನವು ಬಿಗಿದಿಹುದು ॥ ೫ ॥

ಏನು ಮಾಡಿವರೇನು ।
ಏನು ನುಡಿವರೆ ಏನು ॥
ನಿನ್ನ ಮೀರುವರಿಲ್ಲ ।
ಅನ್ಯ ಶರಣರು ಇಲ್ಲ ॥ ೬ ॥

ನಿನ್ನ ಲೀಲೆಯು ಗುಟ್ಟು ।
ಬನ್ನ ಬಡಿಸುತಲಿಹುದು ॥
ಕಣ್ಣು ಮುಚ್ಚಿಕೆಯಾಟ ।
ಇನ್ನು ಸಾಕೆಲೊ ದೇವ ॥ ೭ ॥

—ರಾಮದಾಸ

---

## " ಗೆಳೆತನದ ಗರ್ಭಗುಡಿಯಲ್ಲಿ "

ಗೆಳೆಯರ ಎದೆಯ ಗರ್ಭಗುಡಿಯಲ್ಲಿ ಗೂಢವಾಗಿರುವ ಅವ್ಯಕ್ತ ಮೂರ್ತಿಯ ದರ್ಶನವನ್ನು ತೆಗೆದುಕೊಳ್ಳಬೇಕೆಂಬ ಉತ್ಕಟವಾದ ಉಬ್ಬಿನ ಹಂಬಲದ ಬೆಂಬಲದಿಂದ ಹಲವು ಸಲ ಹೆಬ್ಬಾಗಿಲದ ಮುಂದೆ ನಿಂತು ನಿಂತು ಹಿಂದಿರುಗುತ್ತಿದ್ದೆನು. ಆದರೆ ಇಂದು ಹಿಂಜರಿಯದೆ ಧ್ಯಾನಿಸಿದೆನು. ಬಾಗಿಲವು ಮರೆಗಡಗಿತು. ನನ್ನ ಇಚ್ಛೆಯ ತಪಕ್ಕೂ ತಕ್ಕ ಫಲವು ದೊರೆತಂತಾಯಿತು. ಆ ಅವ್ಯಕ್ತಮೂರ್ತಿಯು ನವನವವಾದ ವಿವಿಧತೆಯಿಂದ ತನ್ನ ರೂಪವನ್ನು ಪ್ರತಿಗರ್ಭಮಂದಿರದಲ್ಲಿ ಪಡೆದಿದ್ದರೂ, ಆತನ್ನ ಮುಖ ಅವ್ಯಕ್ತರೂಪದ ಪ್ರತಿಬಿಂಬದ ಒಂದೇ ಒಂದು ಆಭಾಸವು ತಗಲಿ, ಎಲ್ಲರ ಅಂತಃಕರಣದ ತುಳುಕುತುಳುಕುವ ಹಣ್ಣಿನಲ್ಲಿ ಒಂದೇ ಒಂದು ರಸದ ಸ್ವಾದವು ಸಮತೆಯು

ಭಾವದಿಂದ ಬೆರತಿತ್ತೆಂದು ಹೇಳಲು ನಾಲಿಗೆಯು ಚಟ್ಟನೇ ಎದ್ದು, ಕೈಯಿಂದ ಹಾಗೆ ಬರೆಸಿಬಿಟ್ಟಿತು. ಎಲ್ಲರ ಗುಟ್ಟುಗಳು ಮತ್ತೊಂದು ಯಾವದೋ ಅಗಾಧವಾದ ಗುಟ್ಟಿನ ವಿವಿಧ ಬಣ್ಣಗಳೆಂದು ಎದೆಯು ಕಣ್ಣಿಗೆ ಕಾಣಹತ್ತಿದೆ. ಎಲ್ಲರ ಅಂತಃಕರಣ ಪ್ರವೃತ್ತಿಗಳು ಒಂದು ತತ್ತ್ವದೀಪದ ಕಿರಣಗಳೆಂದು ಅನಿಸಹತ್ತಿದೆ.

ಇದೇ ಶುಭವು. ಸಬಲಸಹಕಾರದ ಸೂಕ್ಷ್ಮ ಸ್ವಭಾವದ ಶುಭವು. ಇಂದು ಕಾಲನ ಇತಿಹಾಸದಲ್ಲಿ ಶುಭಪುಟಗಳು ಓದಲಿಕ್ಕೆ ಸಿಗುವದೆಂದು ಅನಿಸಹತ್ತಿದೆ. ಎಲ್ಲಿಯೋ, ಎತ್ತಕಡೆಯೋ, ಮಂಗಲ ವೇದಪಾಠಗಳ ಘೋಷಗಳು ನಡೆದಿರುವವೆಂದು ಮಸಕಾಗಿ, ಮಬ್ಬಾಗಿ ಕೇಳಿಸಿದಂತೆ, ಕಿವಿಯು ಗುಂಯ್ ಗುಂಯ್ ಎಂದೆನ್ನಹತ್ತಿದೆ. ಅವುಗಳನ್ನು ಪೂರ್ಣ ಕೇಳಬೇಕೆಂದು ಎಲ್ಲರ ಮನಸ್ಸು ಹಾತೊರೆಯುಹತ್ತಿದೆ. ಯಾರೂ ಇನ್ನೂ ಧ್ವನಿಯೇಳುವ ದಿಕ್ಕಿನ ಬೆನ್ನು ಹತ್ತಿಲ್ಲ; ಓಡಹತ್ತಿಲ್ಲ; ಏಳುವ ಹುರುಪಿನಲ್ಲಿಲ್ಲ; ಹೊರಡುವದರಲ್ಲಿ ಸಜ್ಜಾಗಿಲ್ಲ; ಆದರೇನಾಯಿತು? ಇಷ್ಟೇ ಶುಭವು. ಯಾಕಂದರೆ ಆ ಧ್ವನಿಯು ಮುಂದೆ ಒಮ್ಮೆ ತನ್ನ ಅಗತ್ಯವನ್ನು ಧ್ವನಿತಮಾಡಿದರೆ ತೀರಿತು. ಆ ಧ್ವನಿಯ ವಿಚಾರದ ಸಮಾಧಿಯಲ್ಲಿಯೇ ರತರಾಗುವರು. ಅಂದಮೇಲಂತೂ ಸತ್ಯವಾಗಿ 'ಶುಭ' ವೆಂದು ಉಚ್ಚರಿಸುವೆನು.

— 'ಚಿದಂಬರ'.

---

## ಇರುಳಿನಲ್ಲಿ

(ರವೀಂದ್ರರ ಒಂದು ಚಿಕ್ಕಕತೆ)

'ವೈದ್ಯರೇ ! ವೈದ್ಯರೇ !'

ಕಟ್ಟಿರುಳಿನಲ್ಲಿ ಸದ್ದಿಲ್ಲದೆ ನಿದ್ದೆ ಮಾಡುತ್ತಿದ್ದ ನಾನು ಒಮ್ಮಿಂದೊಮ್ಮೆ ಬೆಚ್ಚಿಬಿದ್ದೆನು. ಕಣ್ತೆರದು ನೋಡಲಾಗಿ ನಮ್ಮ ವತನದಾರ ವಿರೂಪಾಕ್ಷಪ್ಪನವರೆಂದು ಕಂಡುಬಂತು. ಚಟ್ಟನೆ ಹಾಸಿಗೆಯಿಂದ ಎದ್ದು ಅಲ್ಲಿದ್ದ ಹರಕು ಕಂಬಳಿಯನ್ನೊಂದು ಹಾಸಿ ಅದರ ಮೇಲೆ ಅವರನ್ನೂ ಕೂಡಿಸಿ ಕುತೂಹಲದಿಂದ ಅವರ ಮೋರೆಯುಕಡೆಗೆ ನೋಡುತ್ತ ನಾನೂ ಕುಳಿತೆನು. ಆಗ ಹೊತ್ತು ನೋಡಿದೆನು; ಎರಡೂವರೆಯಾಗಿ ಹೋಗಿತ್ತು.

ವಿರೂಪಾಕ್ಷಪ್ಪನವರ ಮುಖವು ಬಾಡಿತ್ತು. ತಮ್ಮ ದೊಡ್ಡ ಕಣ್ಣುಗಳನ್ನೂ ಪೂರ್ಣವಾಗಿ ತೆರದು ನನ್ನನ್ನು ದಿಟ್ಟಿಸಿ ನೋಡಿ 'ಈ ಇರುಳಿನಿಂದ ಮತ್ತೆ ಅದೇ ರೀತಿಯಾಗಿ ಕಾಟವು ಪ್ರಾರಂಭವಾಗಿದೆ., ನಿಮ್ಮ ಔಷಧದ ಪರಿಣಾಮವು ಏನೂ ಆಗಲಿಲ್ಲ.' ಎಂದು ಅಂದರು.

ನಾನು ತುಸು ಹಿಂದು ಮುಂದು ನೋಡುತ್ತ 'ನೀವು ಮತ್ತೆ ಕುಡಿಯಲಿಕ್ಕೆ ಹತ್ತಿ ದಂತೆ ಕಾಣುತ್ತದೆ." ಅಂದೆನು. ಅದಕ್ಕವರು ಸಿಟ್ಟಿನಿಂದ ರೇಗಿ 'ನೀವು ತಪ್ಪುವದು ಅಲ್ಲ. ನಿಮಗೊಂದು ಭ್ರಮ. ಕುಡಿಯುವದೇ ಇದರ ಕಾರಣವಲ್ಲ. ಇದರ ಕಾರಣ ಮೊದ ಲಿನಿಂದ ತಿಳಕೊಳ್ಳಬೇಕಾದರೆ ನಾನು ಹೇಳುವ ಈ ಕತೆ ಕೇಳಿರಿ. ಇದನ್ನು ಕೇಳದ ಹೊರತು ನಿಮಗೆ ತಿಳಿಯಲಾರದು.' ಎಂದರು.

ಮಾಡದಲ್ಲಿ ಕಲ್ಲೆಣ್ಣಿಯ ದೀಪವೊಂದು ಮಂದವಾಗಿ ಉರಿಯುತ್ತಿತ್ತು. ಅದನ್ನು ತುಸು ಏರಿಸಿದೆನು. ದೀಪವು ದೊಡ್ಡದಾಗುತ್ತಲೇ ಅದರೊಡನೆ ಹೊಗೆಯೂ ಬರಹ ತ್ತಿತು. ಬೆಳಕೂ ತುಸು ಹೆಚ್ಚಾಯಿತು. ನಾನು ಹೊತ್ತುಕೊಂಡ ಕಂಬಳಿಯನ್ನು ಮೈ ತುಂಬ ಮುಚ್ಚಿಕೊಂಡು ಅಲ್ಲೇ ಇದ್ದ ಪೆಟ್ಟಿಗೆಯ ಮೇಲೆ ವರ್ತಮಾನ ಪತ್ರಗಳನ್ನು ಹರವಿ ಅದರ ಒಂದು ತುದಿಯ ಮೇಲೆ ಕೂತೆನು. ವಿರುಪಾಕ್ಷಪ್ಪನವರು ತಮ್ಮ ಕತೆ ಯನ್ನು ಹೇಳಹತ್ತಿದರು:—

"ನನ್ನ ಮೊದಲಹೆಂಡತಿಯು ತೀರ ಸೋತವಳಿದ್ದಳು. ಆದರೆ ನನಗಾಗ ಅಷ್ಟು ವಯಸ್ಸು ಆಗಿದ್ದಿಲ್ಲ. ಆಗ ನಾನು ರಸಿಕನಾಗಿದ್ದುದು ಸ್ವಾಭಾವಿಕವೇ ಸರಿ. ಇದಲ್ಲದೆ ಕಾವ್ಯ ಶಾಸ್ತ್ರ ಮೊದಲಾದವುಗಳ ಅಭ್ಯಾಸವನ್ನೂ ಮಾಡಿ ಮುಗಿಸಿದ್ದೆ. ಈ ವಿಷಮವಿವಾಹದ ಹೆಂಡತಿಯು ನನಗೆ ಸರಿ ಬರಲಿಲ್ಲ. ಇದರ ಮೇಲೆ ಕಾಲಿದಾಸನ ಈ ಶ್ಲೋಕವು ಯಾವಾಗಲೂ ನೆನಪಾಗುತ್ತಿತ್ತು.

ಗೃಹಿಣೀ ಸಚಿವಃ ಸಖೀ ಮಿಥಃ ।
ಪ್ರಿಯಶಿಷ್ಯಾ ಲಲಿತೇ ಕಲಾವಿಧೌ ॥

ಆದರೆ ನನ್ನ ಹೆಂಡತಿಗೆ ಇದಾವದೂ ಮನಸ್ಸಿಗೆ ಬರುತ್ತಿದ್ದಿಲ್ಲ. ನಾನು ಎಂದಾ ದರೊಮ್ಮೆ ಅವಳೊಡನೆ ಸರಸಸಲ್ಲಾಪಗಳನ್ನು ಆಡಹೋದರೆ ಅವಳು ನಗೆ ಮಾಡಿ ನನ್ನನ್ನು ಎಬ್ಬಿಸಿ ಬಿಡುತ್ತಿದ್ದಳು. ಗಂಗೆಯ ನೀರಿನಲ್ಲಿ ಇಂದ್ರನ ಐರಾವತವು ಹೋದೊ ಡನೆ ಹೆಚ್ಚು ಒಪ್ಪಾಗಿ ಕಾಣುವಂತೆ ನನ್ನ ಹೆಂಡತಿಯ ನಗೆಮೊಗವನ್ನು ನೋಡಿ ನನಗೆ ಕಾವ್ಯಸ್ಫೂರ್ತಿಯಾಗುತ್ತಿತ್ತು. ಆದರೆ ಇದೆಲ್ಲವೂ ಒಂದೇ ಒಂದು ನಿಮಿಷದಲ್ಲಿ ಮಾಯವಾಗಿ ಹೋಗುತ್ತಿತ್ತು.

ಹೀಗಿರತಿರಲು ಒಮ್ಮಿಂದೊಮ್ಮೆ ವಿಷಮಜ್ವರದಿಂದ ಪೀಡಿತನಾದೆನು. ನನ್ನ ಬಣ್ಣವು ಬಾಡಹತ್ತಿತು. ದನಿಯು ಸೆಳೆಯಹತ್ತಿತು. ಕಡೆಗೆ ಸೊರಗಿ ಸೊರಗಿ ಎಲುವಿನ ಹಂದರದಂತೆ ಕಾಣಹತ್ತಿದೆನು. ಬದುಕುವ ಆಶೆ ಉಳಿಯಲಿಲ್ಲ. ಔಷಧಕೊ ಡುತ್ತಿದ್ದ ಡಾಕ್ಟರರು ನಿರಾಶೆಯವರಾಗಿ ನನ್ನನ್ನು ಕೈಬಿಟ್ಟರು. ಈ ಹೊತ್ತಿಗೆ ಸರಿ ಯಾಗಿ ಒಬ್ಬ ಬ್ರಹ್ಮಚಾರಿಯು ಯಾವ ಕಾರಣದಿಂದಲೋ ನನ್ನ ಬಳಿಗೆ ಬಂದು ನನ್ನನ್ನು ನೋಡಿ ಆಕಳ ತುಪ್ಪದಲ್ಲಿ ಒಂದು ಔಷಧವನ್ನು ಮಾಡಿ ನನಗೆ ತಕ್ಕೊಳ್ಳಲು ಕೊಟ್ಟನು. ಅಂದಿನಿಂದ ನಾನು ನೆಟ್ಟಗಾಗಹತ್ತಿದೆನು.

ನಾನು ಬೇನೆ ಬಿದ್ದಾಗ ನನ್ನ ಹೆಂಡತಿ ಹಗಲಿರುಳು ಒಂದೇ ಸವನೆ ನಡುವೆ ಬಿಡುವಿಲ್ಲದೆ ಆರೈಕೆ ಮಾಡುತ್ತಿದ್ದಳು. ಅವಳು ಮೊದಲೇ ಹೆಂಗಸು, ಮೇಲೆ ಒಬ್ಬೊಂಟಿಗಳು. ತನ್ನ ಅತ್ಯಂತ ಭಕ್ತಿಯಿಂದಲೂ ಉಜ್ಜ್ವಲವಾದ ವ್ಯಾಕುಲತೆಯಿಂದಲೂ ಬಾಗಿಲ ಬಳಿಗೆ ಬಂದ ಯಮದೂತರನ್ನು ಹೊಡೆದೋಡಿಸಲು ಹೆಣಗುತ್ತಿದ್ದಳು. ತನ್ನೆಲ್ಲ ಮರುಕದಿಂದಲೂ ಒಮ್ಮನಸ್ಸಿನಿಂದಲೂ ವಿಶ್ವಪ್ರಯತ್ನದಿಂದಲೂ ಅವಳು ನನ್ನ ಆ ಅಯೋಗ್ಯ ಜೀವನವನ್ನು ತಾಯಿ ತನ್ನ ಕೂಸನ್ನು ಮಡಿಲಲ್ಲಿ ಬಚ್ಚಿಡುವಂತೆ ಬಚ್ಚಿಟ್ಟಿದ್ದಳು. ನಿದ್ದೆ ಇಲ್ಲ; ಊಟವಿಲ್ಲ; ಆಗವಳಿಗೆ ಬೇರೆಯಾವವರ ಮೇಲೂ ಮನಸ್ಸಿರಲಿಲ್ಲ. ಬೇರೆ ಏನನ್ನೂ ಕಣ್ಣೆತ್ತಿ ನೋಡುತ್ತಿರಲಿಲ್ಲ.

ಬೇಟೆ ಸಿಗದ ಹುಲಿಯಂತೆ ಯಮನು ನನ್ನನ್ನು ಬಿಟ್ಟು ಹಾಗೇ ಹಿಂತಿರುಗಿ ಹೋಗಬೇಕಾಯಿತು. ಆದರೆ ಹೋಗುವಕಾಲಕ್ಕೆ ನನ್ನ ಹೆಂಡತಿಗೆ ತನ್ನ ಪಂಜರದಿಂದ ಒಂದು ಹೊಡತ ಹಾಕದೇ ಬಿಡಲಿಲ್ಲ.

ಆಗ ನನ್ನ ಹೆಂಡತಿಯು ಬಸುರಾಗಿದ್ದಳು. ತುಸು ದಿನಗಳಲ್ಲಿಯೇ ಅವಳು ಸತ್ತ ಮಗುವೊಂದನ್ನು ಹೆತ್ತಳು. ಅಂದಿನಿಂದ ಅವಳು ನೆಲಹಿಡಿದಳು. ಅತ್ಯಂತ ಲಕ್ಷ್ಯಪೂರ್ವಕವಾಗಿ ನಾನು ಅವಳ ಆರೈಕೆಯನ್ನು ಮಾಡಹತ್ತಿದೆನು. ಇದು ಅವಳ ಮನಸ್ಸಿಗೆ ಬರಲಿಲ್ಲ. ' ಏನಿದು ಹೀಗೇಕೆ ಮಾಡುವಿರಿ. ಜನರೇನು ಅನ್ನಬಹುದು? ಹಗಲು ರಾತ್ರಿ ನನ್ನ ಕೋಣೆಯಲ್ಲಿರುವದೇನೂ ಅಗತ್ಯವಿಲ್ಲ.' ಎಂದನ್ನುತ್ತಿದ್ದಳು.

ನಾನು ರಾತ್ರಿಯಲ್ಲಿ ಅವಳು ಜ್ವರಬಂದು ಮಲಗಿದ ಕೋಣೆಯೊಳಗೆ ಹೋಗಿ ನನ್ನ ನೆವಮಾಡಿ ಅವಳಿಗೆ ಗಾಳಿಯನ್ನು ಹಾಕುತ್ತ ಕುಳಿತೆನೆಂದರೆ ಅವಳಿಗೆ ಮತ್ತಿಷ್ಟು ವ್ಯಥೆಯಾಗುತ್ತಿತ್ತು. ಎಂದಾದರೊಂದು ದಿನ ಅವಳ ಆರೈಕೆಯಲ್ಲಿ ಹೊತ್ತಾಗಿ ನನ್ನ ಊಟವು ದಿನದಕಿಂತ ತುಸು ತಡವಾದರೆ ಅವಳಿಗದು ಇಲ್ಲದಸಲ್ಲದ ಸಾವಿರಾರು ವಿಚಾರಗಳಿಗೆ ಎಡೆಯಾಗುತ್ತಿದ್ದಿತು. ನಾನು ಅವಳಿಗೆ ಏನು ತುಸು ಮಾಡಿದರೂ ಅದು ವಿಪರೀತವೇ ಆಗುತ್ತಿತ್ತು. ಅವಳು ನನಗೆ ' ಗಂಡಸರು ಹೀಗೆ ಮಾಡುವದು ಸರಿಯಲ್ಲ ' ಎಂದನ್ನುತ್ತಿದ್ದಳು.

ನೀವು ನಮ್ಮ ಆ ದೊಡ್ಡ ಮನೆಯನ್ನು ನೋಡಿರಬಹುದು. ಮನೆಯ ಮುಂದೇ ತೋಟ. ಅದರಾಚೆಗೆ ಗಂಗೆಯು ಹರಿಯುತ್ತಿರುವಳು. ನಮ್ಮ ಆ ಅಂದವಾದ ಮನೆಯ ತೆಂಕಣಕ್ಕಿರುವ ನಮ್ಮ ಮಲಗುವ ಕೋಣೆಯ ಬದಿಯಲ್ಲಿ ನನ್ನ ಹೆಂಡತಿಯು ತನ್ನ ಬಯಕೆಯಂತೆ ಒಂದು ತೋಟವನ್ನು ಮಾಡಿದ್ದಳು. ಅದರ ಸುತ್ತು ಹಾಲಬಳ್ಳಿಯನ್ನು ಹಚ್ಚಿದ್ದಳು. ಉಳಿದ ಎಲ್ಲ ಭಾಗಕ್ಕಿಂತಲೂ ಹೆಚ್ಚು ರಮ್ಯವಾಗಿಯೂ ಸ್ವಚ್ಛವಾಗಿಯೂ ಇರುವ ಭಾಗವೆಂದರೆ ಅದೇ. ಅರ್ಥಾತ್ ಅಲ್ಲಿ ಸುವಾಸನೆಗಿಂತ ಬಣ್ಣದ ಬೆಡಗೂ ಹೂವುಗಳಿಗಿಂತ ಎಲೆಗಳ ವೈಚಿತ್ರವೂ ಇರಲಿಲ್ಲ. ಮೇಜಿನ ಮೇಲೆ ಹೂ

ಹಂಡೆಯಲ್ಲಿ ಕೃತ್ರಿಮ ಮೀನಗಳು. ಅದರಮೇಲೆ ಉದ್ದವಾಗಿ ಬರೆದ ಹೆಸರುಗಳು ಕಾಣಬರುತ್ತಿರಲಿಲ್ಲ. ಮಲ್ಲಿಗೆ, ಪಾರಿಜಾತ, ಸಂಪಿಗೆ ಶಾವಂತಿಗೆ ಹೂವುಗಳ ಸುಮಳಿ. ಎಲ್ಲಬಗೆಯ ಗುಲಾಬಿಯ ಹೂವುಗಳೂ ಇದ್ದವು. ಬೆಡಗಿನಿಂದ ಬೆಳೆದ ಬಕುಲ ಗಿಡದ ಬುಡದಲ್ಲಿ ಬೆಳ್ಳಗೆ ಬೆಳ್ಳಿಯಂತೆ ಬೆಳಗುವ ಸಂಗಮರವರೀ ಕಲ್ಲಿನ ಒಂದು ಗದ್ದುಗೆ ಇದ್ದಿತು. ನನ್ನ ಹೆಂಡತಿಯು ನೆಟ್ಟಗಿದ್ದಾಗ ಆ ಕಲ್ಲಿನ ಮೇಲೆ ದಿನಾಲು ಎರಡೂ ಹೊತ್ತು ಬಟ್ಟೆ ಒಗೆಯುತ್ತಿದ್ದಳು. ಬೇಸಿಗೆಯಲ್ಲಿ ಅವಳ ಎರಡೂ ಹೊತ್ತಿನ ಸ್ನಾನವು ಅದರ ಮೇಲೆಯೇ. ಕೆಲಸವನ್ನು ಮುಗಿಸಿಕೊಂಡು ವಸಂತಋತುವಿನಲ್ಲಿ ಸಂಜೆಯ ಹೊತ್ತಿನಲ್ಲಿ ತಂಗಾಳಿಯಲ್ಲಿ ಕುಳಿತುಕೊಳ್ಳುವದು ಅದೇ ಕಲ್ಲ ಮೇಲೆ. ಅಲ್ಲಿ ಕುಳಿತುಕೊಂಡು ಗಂಗೆಯಲ್ಲಿ ಹರಿದಾಡುವ ಹಡಗಗಳನ್ನು ತಾನು ನೋಡುತ್ತಿದ್ದಳು. ಆದರೆ ಹೆರಗಿಗೆ ಮಾತ್ರ ತಾನು ಕಾಣಿಸುತ್ತಿರಲಿಲ್ಲ.

ಬಹಳ ದಿನಗಳಿಂದ ಹಾಸಿಗೆಯನ್ನೇ ಹಿಡಿದಿದ್ದ ಅವಳಿಗೆ ಒಮ್ಮೆ ಚೈತ್ರಮಾಸದ ಶುಕ್ಲಪಕ್ಷದ ಬೆಳದಿಂಗಳಿನಲ್ಲಿ ತನ್ನ ತೋಟದೊಳಗೆ ಕೂಡಬೇಕೆಂಬ ಬಯಕೆಯಾಯಿತು. 'ಮನೆಯಲ್ಲಿ ಸುಮ್ಮನೇ ಕೂತು ಕೂತು ಬೇಸರ ಬಂದಿದೆ. ಇಂದೊಮ್ಮೆ ನನ್ನ ತೋಟದೊಳಗೆ ಹೋಗಿ ಕೂಡುವೆನು' ಆಕೆ ಹೀಗೆಂದಳು.

ನಾನೇ ಅವಳನ್ನು ಜೋಕೆಯಿಂದ ಎಬ್ಬಿಸಿ ಮೆಲ್ಲಮೆಲ್ಲನೆ ಕರೆದುಕೊಂಡು ಬಂದು ಬಕುಲಗಿಡದ ಕೆಳಗಿನ ಕಲ್ಲಿನ ಕಟ್ಟೆಯಮೇಲೆ ಮಲಗಿಸಿದೆನು. ನನ್ನ ತೊಡೆಯನ್ನೇ ಅವಳಿಗೆ ತಲೆದಿಂಬಾಗಿ ಕೊಡಬೇಕೆಂದು ಮಾಡಿದೆನು. ಆದರೆ ಅದು ಅವಳ ಮನಸ್ಸಿಗೆ ಬಾರದ್ದರಿಂದ ಒಳಗಿನದೊಂದು ತಲೆದಿಂಬನ್ನು ತಂದು ಅವಳ ತಲೆಯ ಬುಡದಲ್ಲಿಟ್ಟೆನು.

ಅರೆಅರಳಿದ ಎರಡು ಮೂರು ಬಕುಲ ಮೊಗ್ಗೆಗಳು ಅವಳ ಮೋರೆಯಮೇಲೆ ಉದುರಿದವು. ಗಿಡದ ಹರಿಗಳ ನಡುವೆ ಹಾದು ಬಂದ ಚಂದ್ರನ ಕಿರಣಗಳು ಅವಳ ಬಾಡಿದ ಮುಖದ ಮೇಲೆ ಬೆಳಕನ್ನುಂಟು ಮಾಡಿದವು. ಸುತ್ತೆಲ್ಲ ಶಾಂತತೆಯು ಹಬ್ಬಿಕೊಂಡಿತ್ತು. ನಾನು ಅವಳ ಹತ್ತಿರವೇ ಕುಳಿತುಕೊಂಡು ಮಬ್ಬುಗತ್ತಲೆಯಲ್ಲಿ ಅವಳ ಬಾಡಿದ ಮೋರೆಯ ಕಡೆಗೆ ನೋಡಿದೆನು. ನೋಡ ನೋಡಲಾಗಿ ನನ್ನ ಎರಡೂ ಕಣ್ಣುಗಳು ನೀರಿನಿಂದ ತುಂಬಿಕೊಂಡವು.

ಮೆಲ್ಲಮೆಲ್ಲಗೆ ಅವಳ ಹತ್ತಿರಹತ್ತಿರ ಹೋಗಿ ಜ್ವರದಿಂದ ಸುಡುತ್ತಿದ್ದ ಅವಳ ಸೊರಗಿದ ಅಂಗೈಯನ್ನು ನನ್ನ ಎರಡೂ ಕೈಗಳಿಂದ ಗಟ್ಟಿಯಾಗಿ ಹಿಡಿದುಕೊಂಡೆನು. ಅದಕ್ಕವಳು ಏನೂ ಅನ್ನಲಿಲ್ಲ. ತುಸು ಹೊತ್ತು ಹಾಗೇ ಸುಮ್ಮನೇ ಕುಳಿತುಕೊಂಡೆನು. ನನ್ನ ಅಂತಃಕರಣವು ಉಕ್ಕೇರಿ ಬರಹತ್ತಿತು. ಆಗ ನಾನು 'ನನ್ನ ಮೇಲಿನ ನಿನ್ನ ಮರುಕವನ್ನು ನಾನೆಂದಿಗೂ ಮರೆಯಲಾರೆ' ನೆಂದು ಮೆಲ್ಲಗೆ ನುಡಿದೆನು.

ಮರುಚಣದಲ್ಲಿಯೇ ನಾನಿದನ್ನು ಅನ್ನಬೇಕಾಗಿದ್ದಿಲ್ಲವೆಂದು ನನಗೆ ಅನಿಸಿತು. ನನ್ನ ನಲ್ಲೆಯು ಮುಗುಳುನಗೆ ನಕ್ಕಳು. ಆ ನಗೆಯಲ್ಲಿ ನಸುಲಜ್ಜೆಯೂ ಹುಸು ದುಃಖವೂ ಸ್ವಲ್ಪ ಅವಿಶ್ವಾಸವೂ ಬೆರೆತುಕೊಂಡಿದ್ದವು. ಅಲ್ಲದೆ ಅವಳ ಮನಸ್ಸಿನಲ್ಲಿ ಪರಿಹಾಸ್ಯದ ಪರೆಯೂ ಇತ್ತೆಂಬು ಕಂಡು ಬಂದಿತು. ನನ್ನ ಮಾತಿಗೆ ಮರುಮಾತನ್ನೇನೂ ಅವಳು ಕೊಡದಿದ್ದರೂ ನಾನು ಅವಳನ್ನು ಮರೆಯದಿರುವದು ಸರಿಯಲ್ಲವೆಂದೂ ಹಾಗೆ ಅವಳ ಮನಸ್ಸಿನಲ್ಲಿದ್ದಿಲ್ಲವೆಂದೂ ಅನ್ನುವಂತೆ ನನಗೆ ಆ ನಗೆಯಿಂದ ಕಂಡುಬಂದಿತು.

ಅವಳ ಈ ಕೊಂಕುನಗೆಗೆ ಹೆದರಿಕೊಂಡೇ ನಾನು ಅವಳೊಡನೆ ಯಾವ ನಲ್ಮೆಯ ಬಳಿಕೆಯನ್ನೂ ಮಾಡಿರಲಿಲ್ಲ. ಅವಳಿಲ್ಲದಾಗ ಅವಳೊಡನೆ ಆಡಬೇಕೆಂದು ಮಾಡಿಕೊಂಡ ಮಾತುಗಳೆಲ್ಲ ಅವಳ ಎದುರಿಗೆ ಹೋದಕೂಡಲೇ ಮರೆತು ಹೋಗುತ್ತಿದ್ದವು.

ಇಂಥ ಹೊತ್ತಿನಲ್ಲಿ ಮಾತನಾಡುವದೆಂದರೆ ಆಗದ ಮಾತು. ಆ ನಗೆಯಮೇಲೂ ತರ್ಕವಿತರ್ಕವಾಗಲಿಲ್ಲ. ಅಲ್ಲದೆ ನಗೆಗೆ ಯಾವಾಗಲೂ ತರ್ಕವಿಲ್ಲ. ಚಂದಿರನು ಮೇಲಕ್ಕೆ ಏರುತ್ತ ಏರುತ್ತ ಬೆಳದಿಂಗಳೂ ಹೆಚ್ಚಾಗಹತ್ತಿತು. ಕೋಗಿಲೆಯೊಂದು ಕೂಗಿ ಕೂಗಿ ಅದರಲ್ಲಿಯೇ ಉನ್ಮತ್ತವಾಯಿತು. ನಾನು ಸುಮ್ಮನೇ ಕುಳಿತುಕೊಂಡು ಮನದಲ್ಲಿಯೇ 'ಇಂಥ ಬೆಳದಿಂಗಳ ಇರುಳಿನಲ್ಲಿ ಕೋಗಿಲೆಯು ಒಂಟಿಯಾಗಿರುವದೇ?' ಎಂದಂದುಕೊಂಡೆನು.

'ಮಾಡಬೇಕಾದದ್ದೆಲ್ಲವನ್ನೂ ಮಾಡಿ ಮುಗಿಸಿ, ಮನಮುಟ್ಟಿ ಆರೈಕೆಯನ್ನು ಅನೇಕ ದಿನಗಳ ವರೆಗೆ ಮಾಡಿದರೂ ನನ್ನ ಹೆಂಡತಿಯು ಬೇನೆಯು ಗುಣವಾಗುವ ಲಕ್ಷಣವು ಕಂಡುಬರಲಿಲ್ಲ. ವೈದ್ಯರು ಹವೆ ಬದಲಿಸಲು ಹೇಳಿದ್ದರಿಂದ ನಾನು ಅವಳನ್ನು ಬೇರೂರಿಗೆ ಕರೆದುಕೊಂಡುಹೋದೆನು."

ಇಷ್ಟು ಹೇಳಿದವರೇ ವಿರುಪಾಕ್ಷಪ್ಪನವರು ಒಮ್ಮಿಂದೊಮ್ಮೆ ಸುಮ್ಮಗಾದರು. ಏನೋ ಬೇಕಾದವರಂತೆ ನನ್ನ ಮೋರೆಯಕಡೆಗೆ ನೋಡಿದರು. ಮರಳಿ ಎರಡೂ ಕೈಗಳಲ್ಲಿ ತಮ್ಮ ತಲೆಯನ್ನಿಟ್ಟುಕೊಂಡು ವಿಚಾರಮಾಡತೊಡಗಿದರು. ನಾನೂ ಸುಮ್ಮನೇ ಕುಳಿತುಕೊಂಡೆನು. ದೀಪವು ಮಂದವಾಗಿ ಉರಿಯುತ್ತಿದ್ದಿತು. ಸುತ್ತೆಲ್ಲ ಶಾಂತವಾಗಿದ್ದದರಿಂದ ಗುಂಯಿಗೂಡುವ ಗುಂಗಾಡಿಗಳ ಶಬ್ದವು ಸ್ಪಷ್ಟವಾಗಿ ಕೇಳುತ್ತಿತ್ತು. ಒಮ್ಮಿಂದೊಮ್ಮೆ ಮೌನವನ್ನು ಮುರಿದು ವಿರುಪಾಕ್ಷಪ್ಪನವರು ಮುಂದೆ ತಮ್ಮ ಕತೆಯನ್ನು ಹೇಳತೊಡಗಿದರುಃ—

"ಅಲ್ಲಿ ಭಿಷಗ್ವರ ಭೀಮರಾಯರು ನನ್ನ ಹೆಂಡತಿಗೆ ಔಷಧ ಕೊಡಹತ್ತಿದರು. ಕೆಲವು ದಿನಗಳು ಹೀಗೇ ಸಾಗಿರಲು ವೈದ್ಯರು 'ನೆಟ್ಟಿಗಾಗುವ ಬೇನೆ ಇದಲ್ಲವಾದ್ದರಿಂದ ನಿಮ್ಮ ಹೆಂಡತಿಯು ಕಡೆತನಕ ಹೀಗೆಯೇ ಅನುಭೋಗಿಸಬೇಕೆಂ"ದು ನನ್ನೆದುರಿನಲ್ಲಿ ಹೇಳಿದರು.

ಒಂದು ದಿನ ನನ್ನ ಹೆಂಡತಿಯು ಅಂದಳು 'ಬೇನೆಯಂತೂ ಗುಣವಾಗುವ ಆಶೆ ಉಳಿಯಲಿಲ್ಲ. ಅಲ್ಲದೆ ನಾನು ಬೇಗ ಸಾಯುವಂತೆಯೂ ಕಂಡುಬರುವದಿಲ್ಲ. ಹೀಗೆಯೇ ಈ ಜೀವಂತ ಸಾವನ್ನು ಕಟ್ಟಿಕೊಂಡು ನೀವು ಕೊರಗುವದೇಕೆ? ನನ್ನಷ್ಟಕ್ಕೆ ನನ್ನನ್ನು ಬಿಟ್ಟು ನೀವು ಬೇರೆ ಮದುವೆಯನ್ನು ಮಾಡಿಕೊಳ್ಳಬಾರದೇ? '

ಹೀಗಂದ ಅವಳ ಮಾತಿನಲ್ಲಿ ಹೆಚ್ಚಿನ ಬಂಟತನವೂ ಇರಲಿಲ್ಲ; ಅವ್ಯವಹಾರಿಕ ತನವೂ ಇರಲಿಲ್ಲ.

ನಾನು ನಗುವ ಬಾರಿ ಈ ಸಾರೆ ಬಂದಿತು. ಆದರೆ ನನಗೆಲ್ಲಿ ಬರಬೇಕು ಅವಳಲ್ಲಿದ್ದಷ್ಟು ಸಹನಶೀಲತೆಯು ! ಸಭೆಯಲ್ಲಿ, ಮುಖ್ಯವಾಗಿ ಮಾತಾಡುವವನಂತೆ ನಾನು ಗಂಭೀರನಾಗಿ ನನ್ನ ವ್ಯಾಖ್ಯಾನವನ್ನು ಪ್ರಾರಂಭಿಸಿದೆ. ' ಎಲ್ಲಿಯವರೆಗೆ ಈ ನನ ದೇಹದಲ್ಲಿ ಜೀವವಿರುವದೋ...'

ಅವಳು ನನ್ನನ್ನು ತಡೆದು 'ಬೇಡ, ಮುಂದೆ ಮಾತನಾಡುವದೇ ಬೇಡ. ನಿಮ್ಮ ಕತೆಯನ್ನು ನಾನು ಮುಂದೆ ಕೇಳುವದೇ ಬೇಡ' ಎಂದಂದಳು.

ನಾನು ನನ್ನ ಸೋಲನ್ನು ಒಪ್ಪಿಕೊಳ್ಳದೆ ಹಾಗೇ ಸಾಗಿದೆನು. ' ಈ ನನ್ನ ಅಂಗಸೌಖ್ಯವು ಮತ್ತಾರಿಗೂ ಸಿಗುವ ಸಂಭವವಿಲ್ಲ''

ಕೇಳಕೇಳುತ್ತ ನನ್ನ ಹೆಂಡತಿಯು ಕೊಳ್ಳನೆ ನಕ್ಕುಬಿಟ್ಟಳು. ನನ್ನೊಳಗೆ ಮಾತ್ರ ಬಹಳ ಗಡಿಬಿಡಿಯಾಗಹತ್ತಿತು.

ನಾನಾಡಿದ ಮಾತಿನ ಮರ್ಮವನ್ನು ನಾನಾ ಗ ತಿಳಿದುಕೊಂಡೆನೋ ಇಲ್ಲವೋ ನನಗೆ ಗೊತ್ತಿಲ್ಲ; ಆದರೆ ನನ್ನೊಳಗೇ ಉಳಿಯುವ ಆಶೆಯಿಲ್ಲದ ರೋಗಿಯ ಸೇವೆ ಮಾಡುವದರಲ್ಲಿ ನನಗೆ ಬೇಸರವುಂಟಾಗಿರು ವದೆಂದು ಅನಿಸಹತ್ತಿದೆ. ಎಂಬದು ಮಾತ್ರ ಈಗ ನೆನಪಿಗೆ ಬರುತ್ತದೆ. ಆ ದಿನವೇ ನಮ್ಮ ಪ್ರೇಮಬಂಧನವು ಕಡಿಯ ಬಹುದೆಂಬ ಕಲ್ಪನೆಯು ಕೂಡ ನನಗಾಗ ಇರಲಿಲ್ಲ. ಮತ್ತು ಕಡೆತನಕ ರೋಗಿಯ ಸೇವೆಯನ್ನು ಮಾಡಬೇಕಾಗಬಹ ುದೆಂಬ ಕಲ್ಪನೆಯೂ ಬರಲಿಲ್ಲ.

ನನ್ನ ಆರೈಕೆಯಲ್ಲಿ ಹೀಗೆ ಮನದೊಳಗೆ ಗಡಿಬಿಡಿ ಇದೆ ಎಂಬದನ್ನು ಅವಳಾಗಲೇ ತಿಳಿದುಕೊಂಡಿದ್ದಳು. ಆಗ ನನಗೆ ಹೀಗೆ ಅನಿಸಿತ್ತೊ ಇಲ್ಲವೋ ಈಗ ಮಾತ್ರ ನಾನು ನನ್ನ ಹೆಂಡತಿಯು ನನ್ನ ಮನವನ್ನು ಒತ್ತಕ್ಕರಗಳಿಲ್ಲದ ಚಿಕ್ಕನುಕ್ಕಳ ಹೊತ್ತಿಗೆಯನ್ನು ನಡುವೆ ನಿಲ್ಲದೆ ಓದುವಂತೆ ಓದಿದ್ದಳೆಂದು ಎದೆ ತಟ್ಟಿ ಹೇಳಬಹುದು. ಅದಕ್ಕಾಗಿಯೇ ನಾನು ಗಂಭೀರನಾಗಿ ಮಾತಾಡುತ್ತ ಕುಳಿತ ವೇಳೆಯಲ್ಲಿ, ಅವಳು ಒಮ್ಮೊಮ್ಮೆ ಸಹಜವಾಗಿ ನಕ್ಕುಬಿಡುತ್ತಿದ್ದಳು. ನನಗೆ ಕೂಡ ತಿಳಿಯದ ನನ್ನ ಎಲ್ಲ ಬಗೆಯನ್ನು ಅವಳು ತಿಳಿದುಕೊಳ್ಳುತ್ತಿದ್ದಳೆಂಬದು ಈಗ ನನ್ನ ನೆನಪಿಗೆ ಬಂದಕೂಡಲೆ ನಾಚಿಕೊಂಡು ನಾನಿನ್ನು ಇರಬಾರದೆಂದು ಕೂಡ ಈಗ ನನಗೆ ಅನಿಸುತ್ತದೆ.

ನಾನೂ ವೈದ್ಯ ಭೀಮರಾಯರೂ ಒಂದೇ ಬಗೆಯವರು. ನಾನು ಹೆಚ್ಚು ಕಡಿಮೆ ಅವರ ಮನೆಯಲ್ಲಿಯೇ ಇದ್ದೆನು. ನನಗೆ ಅವರಲ್ಲಿಯ ಔತಣವು ಬಹಳವಾಗಿ ಇದ್ದೇ ಇರುತ್ತಿದ್ದವು. ಕೆಲದಿನ ಅವರ ಮನೆಗೆ ಹೋಗಿ ಬರುವದು ನಡೆದದ್ದರಿಂದ ಸ್ವಾಭಾವಿಕವಾಗಿ ಅವರ ಮಗಳ ಗುರುತು ನನಗಾಗಹತ್ತಿತು. ಆಕೆಯ ಮದುವೆ ಯಿನ್ನೂ ಆಗಿರಲಿಲ್ಲ. ವಯಸ್ಸು ಸುಮಾರು ಹದಿನೈದು ಮೀರಿರಬಹುದು. ವೈದ್ಯರ 'ತಮ್ಮ ಕುಲದಲ್ಲಿ ಅವಳಿಗೆ ಯೋಗ್ಯನಾದ ವರನು ಸಿಕ್ಕಿಲ್ಲವೆಂದು ಮದುವೆ ನಿಂತಿದೆ. ಎಂದು ನನ್ನೆದುರಿನಲ್ಲಿ ಆಡಿ ತೋರಿಸಿದರು. ಆದರೆ ಅವಳಲ್ಲಿ ಏನೋ ಕುಂದು ಇರು ವದೆಂಬ ಸುದ್ದಿ ಹಬ್ಬಿತ್ತು.

ಆದರೆ ನನಗಾವ ಕುಂದುಗಳೂ ಅವಳಲ್ಲಿ ಕಂಡುಬರಲಿಲ್ಲ. ಅವಳೆಷ್ಟು ಚಂದ ವಾಗಿದ್ದಳೋ ಅಷ್ಟು ಜಾಣಳಿದ್ದಳು. ಜಾಣಳಿದ್ದಳೆಂದೇ ನಾನು ಅವಳೊಡನೆ ಅನೇಕ ವಿವಿಧ ವಿಷಯುಗಳ ವಿಚಾರವಿನಿಮಯವನ್ನು ಮಾಡುತ್ತ ಕುಳಿತುಕೊಳ್ಳುತ್ತಿದ್ದೆನು. ಮಾತಿನಲ್ಲಿ ಮೈಮರೆತ ನಾನು ರಾತ್ರಿ ಬಹಳ ತಡಮಾಡಿ ಮನೆಗೆ ಬರುತ್ತಿದ್ದೆನು. ಇದ ರಿಂದ ಎಷ್ಟೋ ಸಲ ನನ್ನ ಹೆಂಡತಿಯ ಔಷಧದ ವೇಳೆಯು ತಪ್ಪಿ ಹೋಗುತ್ತಿತ್ತು. ಅವಳು 'ವೈದ್ಯರ ಮನೆಗೆ ಹೋಗಿದ್ದಿರೇನು?' ಎಂದಿಷ್ಟೇ ಕೇಳುತ್ತಿದ್ದಳಲ್ಲದೆ ಅದರ ಕಾರಣವನ್ನೇನು ಕೇಳುತ್ತಿರಲಿಲ್ಲ.

ಮರುಭೂಮಿಯಲ್ಲಿ ಮೃಗಜಲವು ಮತ್ತೆ ಕಾಣಹತ್ತಿತು. ಅಲ್ಲಿ ನೀರಡಿಕೆ ಹಿಡಿಸಲಾರದಷ್ಟು; ನೀರೂ ಬೇಕಾದಷ್ಟು ಆದರೆ ಹೋಗಿ ಕುಡಿಯುವಂತಿರಲಿಲ್ಲ.

ಆ ರೋಗಿಯ ಮನೆಯು ನನಗೆ ಹಾಳು ಸ್ಮಶಾನವಾಯಿತು. ಆದ್ದರಿಂದ ಅವಳ ಆರೈಕೆಯಲ್ಲಿಯೂ ಹೊತ್ತಿಗೆ ಔಷಧ ಕೊಡುವದರಲ್ಲಿಯೂ ಅಲಕ್ಷ್ಯವಾಗಹತ್ತಿತು

ವೈದ್ಯರೂ ಅವಳ ಬೇನೆ ಗುಣವಾಗುವ ಸಂಭವವಿಲ್ಲವೆಂದೂ ಈ ಪಕ್ಷದಲ್ಲಿ ಅವಳು ಬೇಗ ಹೋಗುವವೇ ಲೇಸೆಂದೂ ನನ್ನೆದುರಿನಲ್ಲಿ ಆಡುತ್ತಿದ್ದರು. ಯಾಕಂದರೆ ಬದುಕಿರುವದರಿಂದ ಅವಳಿಗಂತೂ ಸುಖವೇ ಇಲ್ಲ. ಅಲ್ಲದೆ ಹೆರರೂ ಅವಳ ಸಂಗಡ ಗೋಳ್ಯಾಡಬೇಕು.

ಸಾಮಾನ್ಯವಾಗಿ ಸಾವಿನ ವಿಷಯಕ್ಕೆ ಈ ಬಗೆಯಾಗಿ ಮಾತಾಡಿದರೆ ತಡೆದು ಕೊಳ್ಳಬಹುದು. ಆದರೆ ನನ್ನ ಹೆಂಡತಿಯ ನೋಟವು ಕಣ್ಣೆದುರಿನಲ್ಲಿ ಕಟ್ಟಿದರೆ ಈ ಮಾತನ್ನು ಆಡಬಾರದೆಂದೇ ನನಗೆ ಅನಿಸುತ್ತಿತ್ತು. ಆದರೆ ಸಾವು ಹುಟ್ಟುಗಳನ್ನು ನೋಡಿ ನೋಡಿ ದಡ್ಡ ಬಿದ್ದು ವೈದ್ಯರು ಹೀಗೆ ಅನ್ನುವದು ಸ್ವಾಭಾವಿಕ.

ಒಂದಾನೊಂದು ದಿನ ನಾನು ರೋಗಿಯ ಕೋಣೆಯ ಪಕ್ಕದ ಕೋಣೆಯಲ್ಲಿಯೇ ಕುಳಿತಾಗ ನನ್ನ ಹೆಂಡತಿಯು ವೈದ್ಯರ ಮುಂದೆ ಹೀಗನ್ನುವದನ್ನು ಕೇಳಿದೆನು. 'ನೀವು ಹೀಗೆ ಇಲ್ಲದ ಎಲ್ಲ ಔಷಧವನ್ನು ಬದುಕುವ ಆಶೆಯಿಲ್ಲದ ನನಗೆ ಕುಡಿಯಲು ಕೊಡು

ವಿರೇಕೆ? ನನ್ನ ಜೀವವೇ ಬೇನೆಯಾಗಿರುವಾಗ ಅದನ್ನು ಹೊರಗೆ ಹಾಕುವದೆಂದರೆ ನನಗೆ ಗುಣ ಮಾಡಿದಂತಲ್ಲವೇ? ಹಾಗಾಗುವಂತೆ ಯಾವದಾದರೊಂದು ಔಷಧವನ್ನು ಕೊಡಬಾರದೇ?'

ವೈದ್ಯರದಕ್ಕೆ 'ಛೀ ಹೀಗೆಂದಿಗೂ ಅನ್ನಕೂಡದು' ಎಂದು ಅಂದರು. ಈ ಮಾತನ್ನು ಕೇಳಿ ನನ್ನೆದೆಗೆ ಸಿಡಿಲು ಬಡಿದಂತಾಯಿತು. ಇದನ್ನು ಕೇಳಿದ ನನಗೆ ಆಯಕಟ್ಟಿನಲ್ಲಿ ಕುಟ್ಟಿದಂತಾಯಿತು. ವೈದ್ಯರು ಹೊರಟು ಹೋದಮೇಲೆ ನಾನು ಆ ಕೋಣೆಯೊಳಗೆ ಹೋಗಿ ಅವಳ ಹಾಸಿಗೆಯ ಮೇಲೆ ಕುಳಿತುಕೊಂಡು ಅವಳ ಹಣೆಯ ಮೇಲೆ ಮೆಲ್ಲಮೆಲ್ಲನೆ ಕೈಯಾಡಿಸಹತ್ತಿದೆನು. ಅವಳು 'ಈ ಮನೆಯಲ್ಲಿ ಬಹಳ ಸೆಕೆ ಇದೆ. ನೀವು ಹೊರಗೆ ಹೋಗಿರಿ ನೀವು ಹೊರಗೆ ಹೋಗುವ ಹೊತ್ತಾಗಿದೆಯಲ್ಲವೇ? ತುಸು ಹೊರಗೆ ಅಡ್ಡಾಡಿ ಬರದಿದ್ದರೆ ಸಂಜೆಗೆ ಹೊಟ್ಟೆ ಹಸಿಯುವದೆಂತು?' ಎಂದು ಅಂದಳು.

ನಾನು ಹೊರಗೆ ಹೋಗುವದೆಂದರೆ ವೈದ್ಯರ ಮನೆ . ನಾನೇ ಅವಳಿಗೆ, ಹಸಿವೆಯಾಗಿ ಆರೋಗ್ಯದಿಂದಿರಬೇಕಾದರೆ ತುಸು ವ್ಯಾಯಾಮವು ಅವಶ್ಯವೆಂದು ತಿಳಿಸಿ ಹೇಳಿದ್ದೆನು. ಅಂದಿನಿಂದ ಅವಳು ನನ್ನ ವ್ಯಾಯಾಮದ ವಿಷಯವಾಗಿ ಬಲು ಎಚ್ಚರದಿಂದಿದ್ದಳೆಂದು ನಾನು ಈಗ ತಡೆಯಿಲ್ಲದೇ ಹೇಳಬಹುದು. ನಾನು ಹುಚ್ಚ; ನಿಜವಾಗಿಯೂ ಆಕೆ ಹೀಗನ್ನಬಹುದೆಂದು ಆಗ ತಿಳಿದುಕೊಂಡಿದ್ದೆನು.

ಇಷ್ಟು ಮುಗಿಸಿ ವಿರುಪಾಕ್ಷಪ್ಪನವರು ಮತ್ತೆ ಸುಮ್ಮನಾದರು. ಎರಡು ಕೈಗಳಿಂದ ತಮ್ಮ ತಲೆಯನ್ನು ಹಿಡಿದುಕೊಂಡು ವಿಚಾರಮಾಡುತ್ತ ಕುಳಿತರು. ತುಸು ಹೊತ್ತಾದ ಮೇಲೆ 'ಕುಡಿಯಲು ನೀರುಕೊಡಿರಿ' ಎಂದು ಕೇಳಿದರು. ನೀರು ಕುಡಿದು ಮತ್ತೆ ಕತೆಯನ್ನು ಪ್ರಾರಂಭಿಸಿದರು.

"ಒಂದುದಿನ ವೈದ್ಯರ ಮಗಳು ಮನೋರಮೆಯು ನನ್ನ ಹೆಂಡತಿಯನ್ನು ನೋಡುವ ಇಚ್ಛೆಯನ್ನು ತೋರಿಸಿದಳು. ಇದರ ಕಾರಣ ಏನಿತ್ತೆಂಬದು ಈಗ ನನಗೆ ಚನ್ನಾಗಿ ನೆನಪಿನಲ್ಲಿಲ್ಲ. ಆದರೆ ಬೇಡವೆಂದು ಹೇಳಬೇಕೆಂದೇನೂ ನನ್ನ ಮನಸ್ಸಿನಲ್ಲಿರಲಿಲ್ಲ. ಅವಳೊಮ್ಮೆ ಇಳುಹೊತ್ತಿನಲ್ಲಿ ನಮ್ಮ ಮನೆಗೆ ಬಂದುಬಿಟ್ಟಳು.

ಅಂದು ನನ್ನ ಹೆಂಡತಿಯ ಮೈಯ್ಯಲ್ಲಿ ದಿನದಕಿಂತಲೂ ಬೇನೆಯು ತುಸು ಹೆಚ್ಚಾಗಿತ್ತು. ತೆಪ್ಪಗೆ ಹಾಸಿಗೆಯ ಮೇಲೆ ಬಿದ್ದುಕೊಂಡಿದ್ದಳು. ನಡುನಡುವೆ ತನ್ನ ಕೈಯನ್ನು ಅತ್ತಿತ್ತ ಒಗೆದಾಡುತ್ತಿದ್ದಳು. ಮುಖವು ಕಪ್ಪಿಟ್ಟಿತ್ತು. ಇದರಿಂದ ಅವಳ ವೇದನೆಯು ಎಷ್ಟಿತ್ತೆಂಬುದು ಸ್ಪಷ್ಟವಾಗುವಂತಿದ್ದಿತು. ಮನೆಯಲ್ಲಿ ಯಾವಗೊಂದಲವೂ ಇಲ್ಲದೆ ಶಾಂತವಾಗಿದ್ದಿತು. ನಾನು ಸುಮ್ಮನೇ ಹಾಸಿಗೆಯ ಹತ್ತಿರವೇ ಕುಳಿತಿದ್ದೆ. ಅಂದು ನಾನು ಹೊರಗೆ ಹೋಗದೆ ತಡೆದು ಕುಳಿತುಕೊಂಡಿದ್ದೆ. ಹೊರಗೆ ಹೋಗೆಂದು ಹೇಳುವಷ್ಟು ಶಕ್ತಿಯು ಅವಳಲ್ಲಿ ಉಳಿದಿರಲಿಲ್ಲವೆಂಬಂತೆ ಕಂಡುಬಂತು. ಅಥವಾ ಇಂಥ ಕಠಿಣಕಾಲ

ವಲ್ಲಿ ನಾನು ಅವಳ ಬಳಿಯುಲ್ಲಿರಬೇಕೆಂಬ ಬಯಕೆ ಇದ್ದರೂ ಇರಬಹುದು. ಅವಳ ಕಣ್ಣುಗಳು ಕುಕ್ಕಬಹುವೆಂದು ದೀಪವನ್ನು ಮರೆಮಾಡಿ ಬಾಗಿಲ ಬಳಿಯಲ್ಲಿ ಇಟ್ಟಿತ್ತು. ಕೋಣೆಯೊಳಗೆ ಮಬ್ಬು ಕತ್ತಲೆ; ಮೇಲೆ ನಿಶ್ಶಬ್ದ. ನಡನಡುವೆ ತನ್ನ ಬೇನೆಯು ಹಗುರಾಗಲೆಂದೋ ಏನೋ ನನ್ನ ಹೆಂಡತಿಯು ಬಿಡುತ್ತಿರುವ ನಿಟ್ಟುಸುರು ಕೇಳಿಸು ತ್ತಿತ್ತು.

ಈ ಹೊತ್ತಿನಲ್ಲಿ ಮನೋರಮೆಯು ಬಾಗಿಲ ಬಳಿಗೆ ಬಂದು ನಿಂತಳು. ದೀಪದ ಒಂದೆರಡು ಕಿರಣಗಳು ಅವಳ ಮೋರೆಯ ಮೇಲೆ ಬಿದ್ದವು. ಕತ್ತಲೆಯಲ್ಲಿ, ಒಮ್ಮಿಂ ದೊಮ್ಮೆ ಬೆಳಕು ಕಂಡಿದ್ದರಿಂದ ಅವಳು ತುಸುಹೊತ್ತು ಏನೂ ಕಾಣದೇ ಹಾಗೇ ಬಾಗಿಲ ಬಳಿಯುಲ್ಲಿ ನಿಂತುಬಿಟ್ಟಳು.

ನನ್ನ ಹೆಂಡತಿಯು ಬೆಚ್ಚಿಬಿದ್ದು ಹೆದರಿ ನನ್ನನ್ನು ಗಟ್ಟಿಯಾಗಿ ಹಿಡಿದುಕೊಂಡು "ಯಾರವರು?" ಎಂದು ನನ್ನನ್ನು ಕೇಳಿದಳು. ತೀರ ಬಲಹೀನಳಾದ ಆಕೆಯು ಗುರು ತಿಲ್ಲದ ಮೋರೆಯನ್ನು ನೋಡಿದೊಡನೆ ಗಾಬರಿಗೊಂಡು ನನ್ನನ್ನು ಎರಡು ಮೂರು ಬಾರೆ ಮೆಲ್ಲಮೆಲ್ಲನೆ ಪ್ರಶ್ನೆಮಾಡಿದಳು. 'ಯಾರವರು? ಅಕೋ, ಯಾರವರು?'

ನಾನು ಮೊದಲು ಹೆದರುತ್ತ ಹೆದರುತ್ತ 'ನನಗೆ ಗೊತ್ತಿಲ್ಲ'ವೆಂದು ಹೇಳಿದೆನು. ಆದರೆ ಮರುಚಣದಲ್ಲಿಯೇ ನನಗಾರೋ ಹೊಡೆದಂತೆ ಭಾಸವಾಗಿದ್ದರಿಂದ ನಾನು ಕೂಡಲೇ ತಿದ್ದಿಕೊಂಡು "ಏನು ವೈದ್ಯರ ಮಗಳಲ್ಲವೆ?" ಎಂದು ಅಂದೆನು.

ಹೆಂಡತಿಯು ನನ್ನ ಮೋರೆಯ ಕಡೆಗೆ ಒಮ್ಮೆ ನೋಡಿದಳು. ನನಗೆ ಮಾತ್ರ ಅವಳ ಮೋರೆಯ ಕಡೆಗೆ ನೋಡುವದಾಗಲಿಲ್ಲ. ಆ ಮೇಲೆ ಅವಳು ಮನೋರಮೆಯ ಕಡೆಗೆ ನೋಡಿ 'ಒಳಗೆ ಬರಬೇಕು' ಎಂದು ಅವಳನ್ನು ಕರೆದು ನನಗೆ ದೀಪ ತೋರಿಸ ಹೇಳಿದಳು.

ಮನೋರಮೆಯು ಒಳಗೆ ಬಂದು ಕುಳಿತುಕೊಂಡಳು. ರೋಗಿಯೊಡನೆ ಮೆಲ್ಲನೆ ಮಾತಾಡಹತ್ತಿದಳು. ಹೀಗೆ ಮಾತಾಡುತ್ತ ಅವರು ಕುಳಿತಿರಲು ವೈದ್ಯ ಭೀಮರಾಯರು ಒಳಗೆ ಬಂದರು.

ಅವರು ತಮ್ಮ ಸಂಗಡ ಬೇರೆ ಬೇರೆ ಔಷದಧ ಎರಡು ಭರಣಿಗಳನ್ನು ತಂದಿ ದ್ದರು. ಆ ಎರಡೂ ಭರಣಿಗಳನ್ನು ಹೊರಗೆ ತೆಗೆದಿಟ್ಟು ನನ್ನ ಹೆಂಡತಿಗೆ "ಈ ನೀಲ ಭರಣಿಯೊಳಗಿನ ಔಷಧವು ಮೇಲೆ ಹಚ್ಚಲಿಕ್ಕೆ; ಮತ್ತೊಂದರೊಳಗಿನದು ಒಳಗೆ ತಕ್ಕೊಳ್ಳಲಿಕ್ಕೆ. ನೋಡಿರಿ, ಔಷಧಗಳನ್ನು ಬದಲಿಸ ಬೇಡಿರಿ. ಈ ಔಷಧವು ಬಹಳ ವಿಷಕಾರಿಯಾಗಿರುತ್ತದೆ." ಎಂದು ಹೇಳಿದರು. ನನಗೂ ಹೇಳಿ ಎಚ್ಚರಿಸಿ ಆ ಔಷಧ ಗಳನ್ನು ಹಾಸಿಗೆಯ ಹತ್ತಿರವೇ ಇದ್ದ ಪೆಟ್ಟಿಗೆಯ ಮೇಲೆ ಇಟ್ಟು ಹೊರಟರು. ಹೋಗುವಾಗ್ಗೆ ತಮ್ಮ ಮಗಳನ್ನೂ ಕರೆದರು.

ಅದಕ್ಕೆ ಮನೋರಮೆಯು 'ಅಪ್ಪಾ ನಾನಿಲ್ಲಿ ನಿಲ್ಲಬಾರದೇಕೆ? ಇಲ್ಲಿ ಆಕ್ಕತೆ ಮಾಡಲು ಬೇರೆ ಹೆಂಗಸರಾರೂ ಇದ್ದಂತೆ ಕಾಣುವದಿಲ್ಲ.' ಎಂದಳು.

ನನ್ನ ಹೆಂಡತಿಯು ಇದನ್ನು ಕೇಳಿ ಕಳವಳಬಟ್ಟು ಎದ್ದು ಕೂತುಕೊಂಡು 'ಬೇಡ ನೀವು ಶ್ರಮ ತಕ್ಕೊಳ್ಳುವದು ಬೇಡ ನನ್ನ ಒಬ್ಬ ಮುದುಕಿಯು ತಾಯಿಯಂತೆ ನನ್ನನ್ನು ನೋಡುತ್ತಿರುವಳು. ' ಎಂದಳು.

ವೈದ್ಯರು ನಗುತ್ತ ಅಂದರು 'ನಿನಗೇ ಒಬ್ಬ ಸೇವಕರು ಬೇಕಿರಲು ನೀನು ಬೇರೆಯ ವರ ಸೇವೆ ಏನು ಮಾಡುವಿ?'

ವೈದ್ಯರು ತಮ್ಮ ಮಗಳೊಂದಿಗೆ ಹೋಗಲುದ್ಯುಕ್ತರಾದರು. ಆಗ ನನ್ನ ಹೆಂಡ ತಿಯು "ವೈದ್ಯರೇ ಇವರು ಬಹಳ ಹೊತ್ತಿನವರೆಗೆ ಮನೆಯಲ್ಲಿಯೇ ಹುಗಿದುಕೊಂಡು ಕೂತಿರುವರು. ಇವರನ್ನೂ ತಿರುಗಾಡಲು ಹೊರಗೆ ಕರೆದುಕೊಂಡು ಹೋಗುವಿರಾ?" ಅಂದಳು.

ವೈದ್ಯರು ನನ್ನನ್ನು 'ಬನ್ನಿರಿ. ನದಿಯ ದಂಡೆಯಮೇಲೆ ತುಸು ತಿರುಗಾಡಿ ಬರೋಣ ವಂತೆ' ಎಂದು ಕರೆದರು.

ನಾನು ತುಸು ಹಿಂದುಮುಂದು ನೋಡಿ ಒಪ್ಪಿದೆನು. ವೈದ್ಯರು ಹೋಗುವಾಗ್ಗೆ ಮತ್ತೊಮ್ಮೆ ಔಷಧದ ಬಗ್ಗೆ ನನ್ನ ಹೆಂಡತಿಯನ್ನು ಎಚ್ಚರಿಸಿ ಹೊರಟರು. ನಾನು ಅವರ ಹಿಂದೇ ಹೋದೆನು.

ಆದಿನ ನಾನು ವೈದ್ಯರ ಮನೆಯಲ್ಲಿಯೇ ಊಟಮಾಡಿದೆನು. ತಿರುಗಿ ಬರಲು ಕತ್ತಲಾಯಿತು. ತಿರುಗಿ ಬಂದು ನೋಡಲಾಗಿ ನನ್ನ ಹೆಂಡತಿಯು ಬಹಳ ಚಡಪಡಿ ಸುತ್ತಿದ್ದಳು. ನಾನು ಬಹಳ ನೊಂದುಕೊಂಡು "ಏನು ನಿನ್ನ ನೋವು ಹೆಚ್ಚಾಗಿದೆಯೆ?" ಎಂದು ಕೇಳಿದೆನು.

ಅವಳಿಗೆ ಉತ್ತರ ಕೊಡುವದಾಗಲಿಲ್ಲ. ಆಶಾಪೂರ್ಣ ನೋಟದಿಂದ ನನ್ನ ಮೋರೆಯಕಡೆಗೆ ನೋಡಿದಳು. ಆಗವಳ ನಾಲಿಗೆಯು ಒಳಗೆ ಸೆಳೆಯಹತ್ತಿರುವದೆಂದು ನನಗೆ ಕಂಡು ಬಂದಿತು.

ನಾನು ಆಗಿಂದಾಗ ರಾತ್ರಿಯಲ್ಲಿಯೇ ವೈದ್ಯರನ್ನು ಕರಕೊಂಡು ಬಂದೆನು.

ವೈದ್ಯರು ಬಂದ ಎಷ್ಟೋ ಹೊತ್ತಿನವರೆಗೆ ಅವರಿಗೆ ಅದರ ಕಾರಣವು ತಿಳಿಯ ಲಿಲ್ಲ. ಅವರು ಅದರ ಕಾರಣವನ್ನು ಕೇಳಿದರು. "ಔಷಧವನ್ನು ಒಮ್ಮೆ ಹಚ್ಚಿ ತಿಕ್ಕಿ ಲ್ಲವೇ" ಎಂದು ಕೇಳಿದರು.

ಹೀಗೆಂದು, ತಾವೇ ಪೆಟ್ಟಿಗೆಯ ಮೇಲಟ್ಟ ಔಷಧವನ್ನು ನೋಡಲಾಗಿ ಅದರಲ್ಲಿ ಒಂದು ಹನಿಕೂಡ ಔಷಧವಿರಲಿಲ್ಲ.

ವೈದ್ಯರು 'ನೀವು ತಪ್ಪಿ ಈ ನೀಲೀ ಔಷಧವನ್ನು ಕುಡಿದು ಬಿಟ್ಟಿರಲ್ಲ' ಎಂದು ನನ್ನ ಹೆಂಡತಿಯನ್ನು ಕೇಳಲಾಗಿ ಅವಳು'ಹೂ'ಎಂದು ಉತ್ತರಕೊಟ್ಟಳು. ಆ ಔಷಧವನ್ನು ಹೊರಗೆ ಹಾಕಲು ವೈದ್ಯರು ಒಮ್ಮಿಂದೊಮ್ಮೆ ಮನೆಗೆ ಹೋಗಿ ಬೇರೆ ಔಷಧವನ್ನು ತಂದು ಕೊಟ್ಟರು. ನಾನು ಎಚ್ಚರತಪ್ಪಿದಂತಾದ್ದರಿಂದ ಹೋಗಿ ಆ ಹಾಸಿಗೆಯ ಮೇಲೆ ಬಿದ್ದುಬಿಟ್ಟೆನು.

ತಾಯಿಯು ಬೇನೆಜಿದ್ದು ಬಳಲುವ ತನ್ನ ಮಗುವನ್ನು ಎದೆಗೆ ಅವಚಿಕೊಳ್ಳು ವಂತೆ ನನ್ನ ಹೆಂಡತಿಯು ತನ್ನೆದೆಗೆ, ತನ್ನ ಇಂಗಿತವನ್ನೆಲ್ಲ ಹೇಳುವಳೋ ಏನೋ ಅನ್ನು ವಂತೆ, ನನ್ನ ತಲೆಯನ್ನು ಅವಚಿಕೊಂಡಳು. ಅವಳು ಆ ಕರುಣೆಯಿಂದ ಅಪ್ಪಿಕೊಂಡ ಅಪ್ಪುಗೆಯಿಂದಲೇ ನನಗೆ ಮತ್ತೆ ಮತ್ತೆ ಹೀಗೆ ಹೇಳಿದಳು " ಬೇಡ ದುಃಖಿಸಬೇಡಿರಿ. ಆದದ್ದೆಲ್ಲ ಒಳಿತೇ ಆಗಿದೆ. ನಿಮಗೆ ಇದರಿಂದ ಒಳಿತೇ ಆಗುವದು. ನಾನು ಇದನ್ನು ತಿಳಿದುಕೊಂಡೇ ಸುಖದಿಂದ ಸಾಯುವೆನು. "

ವೈದ್ಯರ ಔಷಧದ ಆಟವೇನೂ ಆಗಲಿಲ್ಲ. ಆ ವಿಷವನ್ನು ಹೊರಗೆ ಹಾಕಲು ಹೋದ ಔಷಧವು ಅವಳ ಜೀವವನ್ನು ಹೊರಗೆ ಹಾಕಿ ಬಿಟ್ಟಿತು.

ವಿರುಪಾಕ್ಷಪ್ಪನವರು ಮತ್ತೊಮ್ಮೆ ನೀರು ಕುಡಿದು "ಆ ಬಲು ಸೆಕೆ" ಎಂದವರೆ ಹೊರಗೆ ಒಳಅಂಗಳಕ್ಕೆ ಹೋಗಿ ಅತ್ತಿತ್ತ ತುಸು ಅಡ್ಡಾಡಿ ಮತ್ತೆ ಬಂದು ಕುಳಿತು ಕೊಂಡರು. ನಾನು ನಿಜವಾಗಿ ಹೇಳಬಲ್ಲೆ, ಅವರ ಮನಸ್ಸಿನಲ್ಲಿ ಮುಂದೆ ಹೇಳುವದಿದ್ದಿಲ್ಲ ವೆಂದು. ಆದರೆ ನಾನು ಒಂದು ಮಂತ್ರಾಹಾಕಿ ಅವರ ಕಡೆಯಿಂದ ಹೇಳಿಸಿಕೊಂಡೇ ಬಿಟ್ಟೆ. ಮತ್ತೆ ಅವರು ಹೇಳಹತ್ತಿದರು.

"ಮನೋರಮೆಯನ್ನು ಮದುವೆ ಮಾಡಿಕೊಂಡು ನಾನು ಊರಿಗೆ ಮರಳಿಬಂದೆನು. ನಾನು ಎಂದಾದರೊಮ್ಮೆ ನನ್ನ ಹೊಸ ಹೆಂಡತಿ ಮನೋರಮೆಯೊಡನೆ ಸರ ಸೋಕ್ತಿಯನ್ನಾಡಲು ಅವಳು ನಗದೆ ಗಂಭೀರವಾಗಿ ಕುಳಿತುಕೊಳ್ಳುತ್ತಿದ್ದಳು. ಅವಳ ಮನಸ್ಸಿನಲ್ಲಿ ಯಾವ ಸಂಶಯವಿತ್ತೆಂಬದನ್ನು ನಾನೇನು ಬಲ್ಲೆ ?

ಈ ಹೊತ್ತಿಗೆ ಸರಿಯಾಗಿ ನನಗೆ ಕುಡಿಯುವ ರುಚಿಯು ಹತ್ತಿತು.

ಒಮ್ಮೆ ಶರತ್ಕಾಲದ ಮುಚ್ಚಂಜೆಯೊಳಗೆ ನಾನು ಮನೋರಮೆಯೊಡನೆ ನಮ್ಮ ಮನೆಯ ಮುಂದಿನ ತೋಟದಲ್ಲಿ ಅಡ್ಡಾಡುತ್ತಿದ್ದೆನು. ಸುತ್ತಲೂ ಕತ್ತಲು ಕವಿಯ ಹತ್ತಿತ್ತು. ಹಕ್ಕಿಗಳ ಚಿಲಿಪಿಲಿ ದನಿಯ ಸದ್ದೂ ಇದ್ದಿಲ್ಲ. ದಾರಿಯ ಎರಡೂ ಬದಿಗಿದ್ದ ಗಿಡಗಳು ಮಾತ್ರ ಗಾಳಿಯಿಂದ ಅಲೆದಾಡಿ ತುಸು ಸಪ್ಪಳ ಮಾಡುತ್ತಿದ್ದವು.

ತುಸು ದಣಿದವಳಾಗಿ ಮನೋರಮೆಯು ಆ ಬಕುಲಗಿಡದ ಬುಡದಲ್ಲಿನ ಕಲ್ಲಿನ ಕಟ್ಟೆಯಮೇಲೆ ತನ್ನ ಕೈಯನ್ನೇ ತಲೆದಿಂಬು ಮಾಡಿಕೊಂಡು ಮಲಗಿಕೊಂಡಳು. ನಾನೂ ಅವಳ ಬಳಿಯಲ್ಲಿಯೇ ಕುಳಿತುಕೊಂಡೆನು.

ಕತ್ತಲೆಯು ಹೆಚ್ಚು ಕಪ್ಪಾಗಹತ್ತಿತು. ಮುಗಿಲ ತುಂಬೆಲ್ಲ ಚಿಕ್ಕೆಗಳು ಮುತ್ತಿಕೊಂಡಿದ್ದವು. ಹೆಚ್ಚು ಕತ್ತಲೆಗವಿದಂತೆ ಶಾಂತತೆಯೂ ಸುತ್ತೆಲ್ಲ ಹೆಚ್ಚಾಗಹತ್ತಿತು. ಯಾವ ಸದ್ದಿನ ಸುಳುವೇ ಇರಲಿಲ್ಲ. ಇಂಥ ಶಾಂತವಾದ ಹೊತ್ತಿನಲ್ಲಿ ಕುಳಿತುಕೊಂಡ ನಮಗೆ ಒಮ್ಮಿಂದೊಮ್ಮೆ ಯಾವದೋ ಒಂದು ದನಿಯು ಕೇಳಬಂದಿತು.

ಅಂದು ಸಂಜೆಯ ಮುಂದೆ ನಾನು ತುಸು ಕುಡಿದು ಕೂತಿದ್ದೆನಾದ್ದರಿಂದ ನನ್ನ ಗುಂಗೇ ನನ್ನನ್ನು ನುಂಗಿ ಬಿಟ್ಟಿತ್ತು. ಕತ್ತಲಲ್ಲಿ ತುಸು ಹೊತ್ತು ಕುಳಿತುಕೊಂಡು ಗಿಡದ ಬುಡದಲ್ಲಿ ನೀಲವಸ್ತ್ರವನ್ನು ಉಟ್ಟುಕೊಂಡು ಮಲಗಿದ ಮನೋರಮೆಯನ್ನು ನೋಡಿದೊಡನೆ ನನಗೆ ಯಾವದೋ ಒಂದರ ನೆನಪಾದಂತಾಯಿತು. ಅವಳು ನನಗೆ ಮುಟ್ಟಲು ಬಾರದ ಒಂದು ನೆರಳೆಂದೇ ಭಾಸವಾಯಿತು. ಒಮ್ಮಿಂದೊಮ್ಮೆ ಸುತ್ತೆಲ್ಲ ಗುಂಪಾಗಿ ಕಾಣುತ್ತಿದ್ದ ಗಿಡಗಳಿಗೆ ಬೆಂಕಿಹತ್ತಿದಂತೆ ಭಾಸವಾಗಹತ್ತಿತು. ಆ ಮೇಲೆ ಕೃಷ್ಣಪಕ್ಷದ ಕಳೆ ಇಳಿದ ಚಂದಿರನು ಆ ಗಿಡಗಳ ತಲೆಯ ಮೇಲಿನ ಆಕಾಶವನ್ನು ಏರಹತ್ತಿದನು. ಬೆಳದಿಂಗಳು ಬಿಳಿಯದನ್ನೇ ಹೊತ್ತುಕೊಂಡು ಬಿಳಿಯಕಲ್ಲಮೇಲೆ ಮಲಗಿವ ನನ್ನ ಹೆಂಡತಿಯ ಮೇಲೆ ಬೀಳಹತ್ತಿತು. ಇದನ್ನು ನೋಡಿ ನನ್ನ ಕುತೂಹಲವು ಮತ್ತಿಷ್ಟು ಹೆಚ್ಚಾಯಿತು. ಹತ್ತಿರಕ್ಕೆ ಬಂದು ಒಮ್ಮೆ ಅವಳನ್ನು ಅಪ್ಪಿಕೊಂಡು ಅವಳ ಕೈಹಿಡಿದುಕೊಂಡೇ 'ಮನೋರಮೆ, ನೀನು ನನ್ನನ್ನು ನಂಬುವದಿಲ್ಲ. ಆದರೆ ನಾನು ಮಾತ್ರ ನಿನ್ನ ನನ್ನಿಯನ್ನು ಎಂದೂ ಮರೆಯಲಾರೆನು'

ಈ ಮಾತು ಮುಗಿಸುವಷ್ಟರಲ್ಲಿಯೇ ನಾನು ಮೆಟ್ಟಿಬಿದ್ದೆನು. ಯಾಕೆಂದರೆ ನಾನು ಇದೇ ಸ್ಥಳದಲ್ಲಿಯೇ ಬೇರೊಬ್ಬರೆದುರಿನಲ್ಲಿ ಇದೇ ಪ್ರಕಾರವಾಗಿ ಮಾತಾಡಿದ್ದೆನೆಂಬುದು ನೆನಪಿಗೆ ಬಂದಿತು. ಅಲುಗಾಡದೇ ನಿಂತುಕೊಂಡ ಗಿಡಗಳ ಮೇಲಿಂದಲೂ ಮಿನಗುವ ಚಂದಿರನ ಬುಡದಿಂದಲೂ ದೂರದಿಂದ ಗಂಗೆಯ ಆಚೆಯ ದಂಡೆಯಿಂದ "ಹಾ, ಹಾ," ಎಂದು ಒಂದು ನಗೆಯು ತೇಲಿ ಹೋಯಿತು. ಕರುಳನ್ನೇ ಕೊರೆಯುವಂಥ ಅಥವಾ ಮುಗಿಲನ್ನೇ ಹರಿಯುವಂಥ ಆ ನಗೆಯ ಬಗೆಯನ್ನು ನಾನು ಹೇಳಲಾರೆನು. ನಾನು ಎಚ್ಚರತಪ್ಪಿದವನಾಗಿ ಆ ಕಲ್ಲ ಮೇಲೆ ಬಿದ್ದುಕೊಂಡು ಬಿಟ್ಟೆನು.

ಎಚ್ಚರತ್ತು ನೋಡಲಾಗಿ ನಾನು ನನ್ನ ಹಾಸಿಗೆಯ ಮೇಲೆ ಮಲಗಿಕೊಂಡಿದ್ದೆನು. ಮನೋರಮೆಯು ಮೆಲ್ಲಗೆ ' ಏನು ಆದದ್ದಾದರೂ ಏನು ನಿಮಗೆ ' ಎಂದು ಕೇಳಿದ್ದಕ್ಕೆ ನಾನು ನಡುಗುತ್ತ ' ನೀನು ಕೇಳಲಿಲ್ಲವೇ ಆ ಮುಗಿಲು ಹರಿಯುವ ' ಹಾ, ಹಾ, ಹಾ' ಎಂಬ ನಗುವನ್ನು? ' ಅದಕ್ಕವಳು ನಗುತ್ತ 'ಅಂಥ ನಗುವೇ? ' ನಾನು ಕೇಳಿದ್ದೆಂದರೆ ಹಕ್ಕಿಗಳು ಹಾಡುತ್ತ ಹೋದ ದನಿಯನ್ನು. ನೀವು ಬಲು ಬೇಗ ಮೋಸ ಹೋದಿರಿ. ಅದಕ್ಕೇ ಹೆದರಿಕೊಂಡಿರಿ. "

ಬೆಳಗಾದ ಮೇಲೆ ಅಲ್ಲಿಯೇ ನದಿಯ ದಂಡೆಯ ಮೇಲೆ ಹಾರಾಡುವ ಪಕ್ಷಿಗಳ ಸ್ವರವೆಂದು ಸ್ಪಷ್ಟವಾಗಿ ತಿಳಿಯ ಬಂದಿತು. ಆದರೆ ಸಂಜೆಯಾಗುತಲೆ ಮತ್ತೆ ಸಂಶಯ ಗ್ರಸ್ತನಾದೆನು. ಕತ್ತಲೆಯನ್ನು ಕೊರೆದು ಗಗನವನ್ನೆ ಹರಿವ ಬರುವಂತೆ ಬರುವ ನಗೆಯನ್ನು ನನ್ನ ಬಗೆಯಲ್ಲಿ ಮತ್ತೊಮ್ಮೆ ಕೇಳಿದೆನು. ಕಡೆಗೆ ನನ್ನ ಮತಿಯು ಮನೋರಮೆಯೊಡನೆ ಮಾತನಾಡಲಾರದಷ್ಟು ಕೆಟ್ಟು ಹೋಯಿತು.

ಆ ಮೇಲೆ ಆ ದೊಡ್ಡ ಮನೆಯನ್ನು ಬಿಟ್ಟು ಕೆಲಕಾಲ ಮನೋರಮೆಯೊಡನೆ ನದಿಯೊಳಗೆ ಪ್ರವಾಸವನ್ನು ಮಾಡಹತ್ತಿದೆನು. ವಸಂತಮಾಸದ ತಂಗಾಳಿಯಿಂದ ಹೆದರಿಕೆ ಎಲ್ಲ ಹಾರಿಹೋಗಿ ನನ್ನ ಮನಸ್ಸು ಕೆಲದಿನ ಶಾಂತವಾಗಿದ್ದಿತು. ಈ ಶಾಂತತೆಯು ಅನೇಕ ದಿನಗಳವರೆಗೆ ಹಾಗೇ ಇದ್ದಿತು.

ಗಂಗೆಯೊಳಗಿಂದ ಮುಂದಕ್ಕೆ ಸಾಗುತ್ತ ಸಾಗುತ್ತ ನಡುವಿನ ನದಿಗಳನ್ನು ದಾಟಿ ಪದ್ಮಾ ನದಿಗೆ ಬಂದೆವು. ಭಯಂಕರವಾದ ಈ ನದಿಯು ಒಂದು ಹಾವು ಮಲಗಿಕೊಂಡಂತೆ, ಚಳಿಗಾಲವಾದ್ದರಿಂದ ತೆಪ್ಪಗೆ ಬಿದ್ದುಕೊಂಡಂತೆ ಕಾಣುತ್ತಿತ್ತು. ದಕ್ಷಿಣ ದಿಕ್ಕಿಗೆ ಜನರಿಲ್ಲದ, ಗಿಡಗಳಿಲ್ಲದ, ಉಸುಬಿನ ಬೈಲು. ಉತ್ತರಕ್ಕೆ ಎತ್ತರವಾದ ಗುಡ್ಡಗಳ ಮೇಲಿನ ಗುಂಪುಗುಂಪಾಗಿ ಬೆಳೆದ ಮಾಮರಗಳು ನಿದ್ದೆ ಹೋದಂತೆ ಒಮ್ಮೆ ಸದ್ದಿಲ್ಲದೆಯೂ ಗಾಳಿಯು ಹಾದು ಹೋದಮೇಲೆ ಎಚ್ಚತ್ತು ಅಲೆದಾಡುವಂತೆಯೂ ಅಲೆದಾಡುತ್ತಿದ್ದವು. ಚಿತ್ರವಿಚಿತ್ರವಾಗಿ ಕಾಣುವ ನದಿಯ ದಂಡೆಯ ಭಾಗವು ನದಿಯಲ್ಲಿ ಕಾಲು ಚಾಚಿ ಮಲಗಿಕೊಂಡಂತೆ ಬಹಳ ಮನೋಹರವಾಗಿ ಕಾಣುತ್ತಿದ್ದಿತು.

ಬಿಡಾರ ಬಿಡಲು ಒಪ್ಪುವ ಒಂದು ತಾಣದಲ್ಲಿ ಡೋಣಿಯನ್ನು ದಂಡೆಗೆ ಹಚ್ಚಿ ಅಲ್ಲಿ ಇಳಿದುಬಿಟ್ಟೆವು.

ಒಂದು ದಿನ ಇಳಿಹೊತ್ತಿನಲ್ಲಿ ಹೊಳೆಯಗುಂಟ ನಾವಿಬ್ಬರೂ ತಿರುಗಾಡುತ್ತ ಬಹು ದೂರದವರೆಗೆ ಹೋದೆವು. ಮುಳುಗುವ ಹೊತ್ತಿನ ಹೊಂಬಣ್ಣದ ಕಿರಣಗಳಿಗೆ ಶುಕ್ಲಪಕ್ಷದ ಶುಭ್ರಚಂದಿರನ ಚಿನ್ನದ ಬಿಳಿಯ ಬಣ್ಣವು ಬರಹತ್ತಿತು. ನಾವು ಆಗ ಯಾವುದೋ ಒಂದು ಕನಸಿನ ವನದಲ್ಲಿದ್ದೆವೆಂದು ಅನಿಸಹತ್ತಿತು. ಬೆಳದಿಂಗಳು ತಿಳಿಯಾಗುತ್ತ ಬೆಳಗಹತ್ತಿದಂತೆ, ನನ್ನಲ್ಲಿ 'ಈ ಜನಶೂನ್ಯವಾದ ಆನಂದದ ಭೂಮಿಯ ಜಗತ್ತಿನಲ್ಲಿ ಇರುವವರೆಂದರೆ ನಾವಿಬ್ಬರೇ ಎಂದೂ ಯಾವ ಚಿಂತೆಯೂ ಇಲ್ಲದೆ ಆನಂದೋರ್ಮಿಗಳೊಡನೆ ತೇಲುತ್ತ ತೇಲುತ್ತ ಗುರಿ ಇಲ್ಲದೆ ಹೊರಟರುವೆವೆಂದೂ' ಅನಿಸಹತ್ತಿತು. ಮನೋರಮೆಯು ಮೋರೆಯನ್ನಷ್ಟೇ ಬಿಟ್ಟು ತನ್ನ ಮೈಯನ್ನೆಲ್ಲ ಕೆಂಪು ಶಾಲಿನಿಂದ ಸುತ್ತಿಕೊಂಡು ಸಾಗಿದ್ದಳು.

ಗಂಭೀರ ವಾತಾವರಣವು ಆಳವಾಗುತ್ತ ಸಾಗಿದಂತೆ ಆಳುಅಳತೆಯಿಲ್ಲದ ಎಲ್ಲ ದಿಕ್ಕುಗಳಲ್ಲಿ ಶಾಂತತೆಯೂ ಶುಭ್ರತೆಯೂ ಸೂಸಹತ್ತಿದವು. ಆಗ ಮನೋರಮೆಯು ಮೆಲ್ಲಮೆಲ್ಲನೆ ಮುಸುಕಿನೊಳಗಿಂದ ತನ್ನ ಬಲಗೈಯನ್ನು ಹೊರಗೆ ತೆಗೆದು ನನ್ನ ಎಡ ಗೈಯನ್ನು ಗಟ್ಟಿಯಾಗಿ ಹಿಡಿದುಕೊಂಡಳು. ಅವಳು ನನ್ನ ಹತ್ತಿರ ಬರುಬರುತ್ತ ತನ್ನ ತಾರುಣ್ಯವನ್ನೂ ವೈಮನಸುಗಳನ್ನೂ ಅದೇಕೆ ತನ್ನ ಜೀವಾಳವನ್ನೇ ನನ್ನ ಮೇಲಿಟ್ಟುಬಿಟ್ಟಂತೆ ಅನಿಸಹತ್ತಿತು. ನನ್ನ ಮೈಮೇಲೆ ರೋಮಾಂಚನಗಳೆದ್ದವು; ಎದೆಯು ಉಕ್ಕಿ ಬರಹತ್ತಿತು. ಆಗ ನಾನು ನನ್ನೊಳಗೆ "ಈ ಸುಖದ ಸೊಬಗು ಬೇರೆಯಲ್ಲಿ ಯಾದರೂ ಸಿಕ್ಕೀತೇ?" ಎಂದಂದು ಕೊಂಡೆನು. ನಮ್ಮಂಥ ನಿರಂಕುಶರಾದವರನ್ನು ಹಿಡಿಯುವ ಬೇರೆ ಸ್ಥಳವೆಲ್ಲಿಯಾದರೂ ಇರಬಹುದೇ ? ಆಗ ನಾವು ಮನೆ ಇಲ್ಲ; ಹೊಲ ಇಲ್ಲ; ಬೇರೆ ಬಾಳುವೆಯಿಲ್ಲ. ಬೆಲೆಯುಳ್ಳ ಬದುಕುಗಳಿಲ್ಲ; ತಿರುಗಿ ಹೋಗುವದು ಇಲ್ಲ; ಹೋಗಿ ಮುಟ್ಟುದೂ ಇಲ್ಲ; ಹೀಗೆ ಬಗೆದುಕೊಂಡು ಕೈಯಲ್ಲಿ ಕೈಯಿಟ್ಟುಕೊಂಡು ಹಾದಿ ಇಲ್ಲದಲ್ಲಿ ಗುರಿಯಿಲ್ಲದೆ ಆ ಬೆಳದಿಂಗಳಿನ ಇರುಳಲ್ಲಿ ಉರುಳಿಸಿ ಬಿಟ್ಟ ಸಳಿಯಂತೆ ಉರುಳುತ್ತಿದ್ದೆವು. ಹೀಗೆ ಹೊರಟವರು ನಾವು ಸುತ್ತೆಲ್ಲ ಉಸುಬಿನ ದಿನ್ನೆಗಳಿಂದ ಸುತ್ತುಗಟ್ಟೆ ಒಂದು ಮಡುವಿಗೆ ಬಂದೆವು. ಸದ್ದಿಲ್ಲದೆ ನಿದ್ದೆ ಹೋದ ಈ ಮಡುವಿನೊ ಳಗೆ ಒಮ್ಮಿಂದೊಮ್ಮೆ ಒಂದು ಚಂದ್ರಕಿರಣವು ಸುರಂಗ ಹೊಡೆಯಿತು. ಅಲ್ಲಿ ನಾವು ನಿಂತು ಬಿಟ್ಟೆವು. ಸುಳಿಗಾಳಿಯು ಸುಳಿಯಲ್ಲಿ ಸಿಕ್ಕ ಶಾಲು ಮನೋರಮೆಯ ತಲೆಯ ಮೇಲಿಂದ ಹೆಗಲ ಮೇಲೆ ಬಿದ್ದು ಬಿಟ್ಟಿತು. ಮಜ್ಜಿಗೆಯಲ್ಲಿ ತೇಲುವ ಬೆಣ್ಣೆಯ ಬೆಡಗಿನಂತೊಪ್ಪುವ ಅವಳ ಅರಳಿ ಹೊರಬಿದ್ದ ಮುಖಕ್ಕೊಮ್ಮೆ ಮುದ್ದಿಟ್ಟೆನು.

ಬೇರೆ ಯಾರೂ, ಯಾವ ಸದ್ದೂ ಇಲ್ಲದ ಆ ಉಸುಬಿನ ಬೈಲಲ್ಲಿ ನಿಚ್ಚಳವಾಗಿ ಮೂರು ಬಾರೆ "ಯಾರವರು, ಯಾರವರು, ಯಾರವರು," ಎಂದು ಕೇಳಬಂದಿತು.

ನಾನು ವೆಟ್ಟೆ ಬಿದ್ದೆನು; ನನ್ನ ಹೆಂಡತಿಯೂ ಹೆದರಿ ನಡುಗುತ್ತ ನನ್ನನ್ನು ತೆಕ್ಕೆ ಬಿದ್ದಳು. ಆ ದನಿಯು ಮನುಷ್ಯರದೂ ಅಲ್ಲ. ಮತ್ತಾರದೂ ಅಲ್ಲವೆಂದು ನನಗೆ ಅನಿಸಿತು. ಯಾವ ಸದ್ದೂ ಇಲ್ಲದೆ ನಿದ್ದೆ ಹೋದ ಹಂಸಗಳು ನಮ್ಮ ದನಿ ಕೇಳಿ ಎಚ್ಚತ್ತು ಕೂಗಿದ್ದ ಕೂಗು ಅದು.

ನಾವು ಹೆದರಿದವರಾಗಿ ಗಡಿಬಿಡಿಯಿಂದ ಡೋಣಿಗೆ ಬಂದು ಬಿಟ್ಟೆವು. ಹಾಸಿಗೆ ಯನ್ನು ಹಾಸಿ ಮಲಗಿಕೊಂಡೆವು. ದಣಿದವಳಾದ ಮನೋರಮೆಗೆ ನಿದ್ದೆ ಬೇಗ ಹತ್ತಿತು.

ಆ ಕಟ್ಟಿರುಳಿನಲ್ಲಿ ಯಾರೊ ಒಬ್ಬರು ನಮ್ಮ ಹಾಸಿಗೆಯ ಸಮೀಪಕ್ಕೆ ಬಂದು ಸೊರಗಿ ಕಡ್ಡಿಯಾದ ತಮ್ಮ ಬೆರಳಿನಿಂದ ಮನೋರಮೆಯನ್ನು ನನಗೆ ತೋರಿಸುತ್ತ ನನ್ನ ಕಿವಿಯಲ್ಲಿ 'ಯಾರವರು, ಯಾರವರು, ಯಾರವರು' ಎಂದು ಕೇಳಹತ್ತಿದರು.

ತಟ್ಟನೆ ಹಾಸಿಗೆಯಿಂದ ಎದ್ದು ಕಡ್ಡಿ ಕೊರೆದು ದೀಪ ಹಚ್ಚಿದೆನು. ಗಾಳಿಯಿಂದ ದೋಣಿಯು ದಂಡೆಗೆ ಅಪ್ಪಳಿಸಹತ್ತಿತು. ನನ್ನ ನೆತ್ತಿರವು ಹೆಪ್ಪುಗಟ್ಟಹತ್ತಿತು. ಮೈತುಂಬ ಬೆವರು ಬರಹತ್ತಿತು. ಆಗ 'ಹಾ ಹಾ ಹಾ' ಎಂಬ ನಗೆಯೊಂದು ಆ ಇರುಳಿನಲ್ಲಿ ಪ್ರತಿಧ್ವನಿಸುತ್ತ ಹಾದು ಹೋಯಿತು. ಅದು ನದಿಯನ್ನು ದಾಟಿತು. ಆಚೆಯ ಉಸುಬಿನ ಬೈಲನ್ನು ದಾಟಿತು. ಹಾಗೇ ಮಲಗಿಕೊಂಡ ಎಲ್ಲ ದೇಶ, ಹಳ್ಳಿ ಊರುಗಳನ್ನೂ ದಾಟಿತು, ಅಲ್ಲದೇ ಈ ಲೋಕವನ್ನೇ ದಾಟಿ ಬೇರೆ ಲೋಕವನ್ನು ಸೇರಿ, ಬರಬರುತ್ತ ಕುಗ್ಗುತ್ತ ಕುಗ್ಗುತ್ತ ಕರಗಿಹೋಗಹತ್ತಿತು. ಕರಗಿ ಕರಗಿ ಬರಬರುತ್ತ ಸೂಜಿಯ ತುದಿಯಷ್ಟು ಸಣ್ಣದಾಯಿತು. ನಾನೆಂದೂ ಅಂಥ ನಗುವನ್ನು ಕೇಳಿರಲಿಲ್ಲ. ಇಡೀ ಬ್ರಹ್ಮಾಂಡವೆಲ್ಲ ಆ ನಗೆಯಿಂದಲೇ ತುಂಬಿದಂತಾಯಿತು. ಆ ದನಿಯು ಹೋದಹೋದ ಹಾಗೆಲ್ಲ ಮುಗಿಯದ ಜಗವೊಂದು ನನ್ನೊಳಗೆ ಇದೆಯೆಂದು ಅನಿಸಹತ್ತಿತು. ನನಗೆ ಅದನ್ನು ಸಹಿಸುವದು ಅಸಾಧ್ಯವಾಗಿದೆಯೆಂದು ಕಂಡುಬಂದದ್ದರಿಂದ ದೀಪ ಆರಿಸಿ ಮಲಗಿಕೊಂಡರೆ ತಣ್ಣಗಾಗಬಹುದೆಂದೆನಿಸಿ ಮಲಗಿಕೊಂಡೆನು. ದೀಪವನ್ನು ಆರಿಸಿ ಮಲಗಿಕೊಳ್ಳುವದೇ ತಡ, ಮತ್ತೆ ನನ್ನ ಹಾಸಿಗೆಯ ಹತ್ತಿರದಿಂದಲೇ ಘಕ್ಕಲೆಯೊಳಗೆ ಅದೇ ಸ್ವರದಿಂದ "ಯಾರವರು? ಯಾರವರು? ಯಾರವರು?" ಎಂಬ, ಸ್ವರವು ನನ್ನ ಕಿವಿಯ ಪಟಲಕ್ಕೆ ಬಡಿದು ಪ್ರತಿಧ್ವನಿಸಹತ್ತಿತು. ಅದೇ ದೋಣಿಯಲ್ಲಿ ನನ್ನ ಬಳಿಯಲ್ಲಿದ್ದ ಗಡಿಯಾರವು ತನ್ನ ಮುಳ್ಳನ್ನು ಮನೋರಮೆಯ ಕಡೆಗೆ ಮಾಡಿ 'ಯಾರವರು ಯಾರವರು ಯಾರವರು" ಎಂದು ಅದೇ ಪ್ರಶ್ನೆಮಾಡಹತ್ತಿತು.

ಹೇಳುತ್ತ ಹೇಳುತ್ತ ವಿರುಪಾಕ್ಷಪ್ಪನವರ ದನಿಯು ಕುಗ್ಗಿ ಅವರ ಮುಖವು ಬಾಡಹತ್ತಿತು. ನಾನು ಅವರನ್ನು ಅಗಳಾಡಿಸಿ " ತುಸು ನೀರು ತಕ್ಕೊಳ್ಳಿರಿ " ಎಂದು ಅಂದೆನು. ಆ ಹೊತ್ತಿಗೆ ನನ್ನ ದೀಪವು ಪಕ್‌ಪಕ್ ಎಂದು ಆರಿಹೋಯಿತು. ಹೊರಗೆ ನೋಡುವಷ್ಟರಲ್ಲಿ ಬೆಳಗೇ ಆಗಿತ್ತು. ಹಕ್ಕಿಗಳು ಎಚ್ಚತ್ತು ಉದಯರಾಗ ಮಾಡಹತ್ತಿದವು. ನನ್ನ ಮನೆಯೆದುರಿನ ಹಾದಿಯಿಂದ ಚಕ್ಕಡಿಯೊಂದು ಕಟ್‌ಕಟ್ ಸಪ್ಪಳ ಮಾಡುತ್ತ ಹಾದು ಹೋಯಿತು. ಹೆದರಿಕೆಯೆಲ್ಲವೂ ಹಾರಿಹೋಯಿತು.

ವಿರುಪಾಕ್ಷಪ್ಪನವರ ಮೋರೆಯ ಮೇಲಿನ ಕಳೆಯು ಬದಲಾಗಹತ್ತಿತು. ಯಾವ ಹೆದರಿಕೆಯೂ ಇರಲಿಲ್ಲ. ಹೆದರಿಕೊಂಡು ಆ ಇಡೀ ರಾತ್ರಿ ತನ್ನೊಳಗಿದ್ದದ್ದನ್ನೆಲ್ಲ ಹೇಳಿ ಆಮೇಲೆ ನಾಚಿಕೊಂಡು ನನ್ನೆದುರಿನಲ್ಲಿ ಕೂಡಲಾರದೆ ಹೇಳುವ ಕೇಳುವ ಮಾತನ್ನೆತ್ತದೆ ಒಮ್ಮಿಲೆ ಎದ್ದು ಹೊರಟು ಹೋದರು.

ಅಂದೇ, ಇರುಳಿನಲ್ಲಿ ಬಹಳ ಹೊತ್ತಾದ ಮೇಲೆ ನಿದ್ದೆಹೋಗಿದ್ದ ನಾನು ಮತ್ತೆ ಅದೇ 'ವೈದ್ಯರೇ, ವೈದ್ಯರೇ' ಎಂಬ ಕೂಗಿನಿಂದ ಎಚ್ಚತ್ತೆನು.

— ಶೇಷ (ಶಾಂತಿನಿಕೇತನ).

---

# ಕನಿಕರ

--(೦)--

( ಬಾಲವಿಧವೆಯನ್ನು ಕುರಿತು )

ಏನು ಕೆಡಿಸಿಬಿಟ್ಟೆಯೊ ಛೀ ತೆಗೆ ಬಂಗಾರದ ಪುತ್ಥಳಿಯ ।
ಏನು ಮುಗುಚಿಬಿಟ್ಟೆಯೊ ಛೀ ತೆಗೆ ಸಿಂಗಾರದ ಸೌಂದರ್ಯ ॥೧॥
ಗಂಗೆಯು ಯಮುನೆಯು ನಡವೆ ಹರಿದವೋಲ್ ಬೈತಲೆ ತಲೆಯೆಲ್ಲ! ।
ತಂಗಿಯೆ ನೋಡೀ ಸುಟ್ಟಡವಿಯು ನಡು ಕಾಲದಾರಿ ಎಲ್ಲೆ ॥೨॥
ಮುಂಗುರುಳೆಂಬುವ ಮಿಡಿನಾಗರಗಳು ಒನಿಯುವ ತಾಣೇನು? ।
ಅಂಗನೆ ಬೆಳೆಕೊಯ್ದಾ ಹಕ್ಕಲದಾ ಕೋಲಿಯು ನೆಲವೇನು ॥೩॥
ಭುವಿಯನ್ನುಂಗುಟದಿಂ ಮುಗುಚುತ್ತಿಳಿಮೊಗದಿಂ ಕುಳಿತಿಹಳು ।
ಧವನಂ ಪಾತಾಳದ ತಳದಿರ್ದರು ನೋಡುವಳೆನಿಸುವದು ॥೪॥
ತಟತಟ ಕಂಬನಿ ಸುರಿಯೆ ಸುಗುಣಿ ಮಧ್ಯಾಂಗುಲಿಯಿಂ ಚಿಮುಕೆ ।
ಸ್ಫಟಿಕ ಸರವ ಸರಿಸುತ ಧವನಾಮವ ಜಪಿಸುವಳೆನಲೇಕೆ ? ॥೫॥
ನೀರ ಮುತ್ತುಗಳ ಹಸೆಯ ರಚಿಸಿರಲು ಪತಿಯು ಬಂದನಂದು ।
ನೀರ ಮುತ್ತುಗಳ ಹಸೆಯ ರಚಿಸಿರಲು ಬಂದಾನೇ ಇಂದು ॥೬॥
ಬರುವ ಪತಿಯನರವಿರಿದ ಕಂಗಳಿಂ ನೋಳ್ಪ ನೋಟವೆತ್ತ ।
ಸುರಿವ ಕಂಬನಿಯು ಸರದಿ ಪತಿಯ ಪ್ರತಿಬಿಂಬದ ನೆನವೆತ್ತ ॥೭॥
ಗುಣವ ತೀಡಬೇಕಲ್ಲದೆ ಮೇಲಿನ ವೇಷ ತೀಡೆ ಸರಿಯೆ ।
ಮಣಿದಾ ಕಬ್ಬಾಗಿರ್ದರು ಆದರಾಳ್‌ಸವಿಸು ಸವಿಯೆ ಕಹಿಯೇ ? ॥೮॥
ಕಳಕಳಿಯಿಂ ಕನಕರಿಸಿದೆನಲ್ಲದೆ ಬೇರಿಲ್ಲಿದರಿಂದೆ ।
ಹಳಹಳಿಯಾಯಿತು ತಾಯೆ ನಮಿಸುವೆನು ಪೋಗಿಬರುವೆನೆಂದೆ ॥೯॥

— 'ಪೂತಾತ್ಮ'

# ವಿಭೂತಿ-ವಿಚಾರ

ಕರ್ಮಯೋಗಿಯಾದ ವಿಭೂತಿಯು ತನ್ನ ತಪಃಸಾಮರ್ಥ್ಯದಿಂದ ದಿವ್ಯದೃಷ್ಟಿ, ದಿವ್ಯವಾಣಿ, ದಿವ್ಯಕೌಶಲ್ಯಗಳನ್ನು ಪಡೆದಿರುವನು. ಭಗವಂತನು ಅರ್ಜುನನಿಗೆ ಕರ್ಮಯೋಗವನ್ನು ಕಲಿಸುವದಕ್ಕೆ ಮೊದಲು ತನ್ನ ಸ್ವರೂಪವನ್ನು—ವಿಶ್ವರೂಪವನ್ನು ತೋರಿಸಿದನು. ಇದನ್ನು ನೋಡಲಿಕ್ಕೆ ಅವನ ಚರ್ಮಚಕ್ಷುಗಳು ಅಸಮರ್ಥವಾಗಿರಲು ಅವನಿಗೆ (दिव्यं ददामि ते चक्षुः) ದಿವ್ಯದೃಷ್ಟಿಯನ್ನು ಕೊಟ್ಟನು. ಆ ದಿವ್ಯದೃಷ್ಟಿಯೆಂದರೆ 'A glance, that, into the deepest deep of Beauty' ಕಾರ್ಲಾಯಿಲನು ಅನ್ನುವಂತೆ ಸೌಂದರ್ಯಸಾಗರದ ಕಟ್ಟಕಡೆಯ ಆಳವನ್ನು ಸಹ ಒಂದು ಕಟಾಕ್ಷದಿಂದಲೇ ಹುಡುಕಿ ತೆಗೆಯುವದು. ಮಹಾಕವಿಗಳಿಗೂ ಶ್ರೇಷ್ಠರಾದ ಕಲಾಕೋವಿದರಿಗೂ ಕುಶಲರಾದ ಸಂಗೀತಗಾರರಿಗೂ, ವೀರರಾದ ಕ್ಷತ್ರಿಯರಿಗೂ ಈ ದಿವ್ಯದೃಷ್ಟಿಯಿದ್ದೇ ಇರುವದು. ಇಲ್ಲದಿದ್ದರೆ ಅವರು ಶ್ರೇಷ್ಠರಾಗಲಾರರು. ಕರ್ಮಯೋಗಿಯಾದರೂ ತನ್ನ ಕೈಯೊಳಗಿನ ಜನರಿಗೆ ಅವರು ಎಂದಿಗೂ ನೋಡದವಂಥದೊಂದು ಗುಪ್ತವಾದ ವಸ್ತುವಿನ ಅಂತರಂಗವನ್ನು ತೋರಿಸುವನು. ಇಬ್ಬರ ದೃಷ್ಟಿಗಳೂ ಒಂದಾಗುವವು. ಆದ್ದರಿಂದಲೇ ಇಬ್ಬರ ಕರ್ಮದಲ್ಲಿಯೂ ಮೇಳವಿರುವದು. ಕರ್ಮಯೋಗಿಯು ಈ ದೃಷ್ಟಿಯನ್ನುಂಟುಮಾಡುವದಾದರೂ ತನ್ನ ದಿವ್ಯವಾಣಿಯಿಂದಲೇ 'He flashes out illumination from him, his smiting idiomatic phrases seem to cleave into the very secret of the matter' ಅವನ ವಾಣಿಯಿಂದ ಬರೇ ಬೆಳಕು ಹೊರಹೊಮ್ಮುತ್ತಿರುವದು. ಅವನು "ಕಿರಿದರೊಳು ಪಿರಿದುಮರ್ಥವನ್ನು" ತುಂಬಿ ಮುಂದೆ ಬಂದಿರುವ ವಸ್ತುಗಳ ಅಂತರಂಗವನ್ನೇ ಎಲ್ಲರ ಮುಂದೆ ಬಿಚ್ಚಿಡುವನು. ಇವನ ದಿವ್ಯ ವಾಣಿಯಲ್ಲಿ ಮಾನವ ತರ್ಕವಿರುವದಿಲ್ಲ. ಮಾನವೀಯ ಶಬ್ದಾಡಂಬರವಿರುವದಿಲ್ಲ. ಇಂಥ ದಿವ್ಯಶಕ್ತಿಯುಳ್ಳ ಗ್ರಂಥವೆಂದರೆ ಸಾವಿರಾರು ನಕ್ಷತ್ರಗಳಿಂದ ತುಂಬಿದಂಥಹದೊಂದು ಮಾಲೆಯಂತೆ. ಜೇನಿನ ಹುಟ್ಟಿನಂತೆ ಒಡೆದಲ್ಲಿ ಮಾಧುರ್ಯವೂ, ಸಮುದ್ರದ ಸೌಂದರ್ಯದಂತೆ ನೋಡಿದಲ್ಲಿ ಆನಂದವೂ, ಆಗಸದೊಳಗೆ ಬೆಳಗುವ ಸೂರ್ಯನಂತೆ ಕಂಡಲ್ಲಿ ಬೆಳಕೂ, ಹುಣ್ಣಿಮೆಯ ಚಂದ್ರನಂತೆ ಅಡಿಗಡಿಗೆ ಶಾಂತತೆಯೂ ಇವನ ವಾಣಿಯಲ್ಲಿ ತುಂಬಿರುವವು. ಶ್ರೀಕೃಷ್ಣಪರಮಾತ್ಮನ ಗೀತೆಯಷ್ಟು ಸಣ್ಣ ಧಾರ್ಮಿಕ ಗ್ರಂಥವು ಇನ್ನೊಂದಿಲ್ಲ. ಆದರೂ ಸಕಲಜನರಿಗೆ ಧೈರ್ಯವನ್ನೂ, ಪರಮಾನಂದವನ್ನೂ, ಪರಾಕ್ರಮದ ಸ್ಫೂರ್ತಿಯನ್ನೂ ಸೂರೆಮಾಡುವಂಥ ಗ್ರಂಥವು ಜಗತ್ತಿನ ವಾಙ್ಮಯದಲ್ಲಿ ಇನ್ನೊಂದಿಲ್ಲ. ಇಂಥ ಗ್ರಂಥವು ಯಾರ ಮಸುಕಾದ ಬೆಳಕೋ ಆ ಶ್ರೀಕೃಷ್ಣನು ಹೇಗಿರಬಹುದೆಂಬದನ್ನು ನಾವು ಕಲ್ಪನೆಯಿಂದಲೇ ಕಾಣಬೇಕು. ಕರ್ಮಯೋಗಿಯು

ತನ್ನ ಕರ್ಮದಲ್ಲಿಯೂ ತನ್ನ ದಿವ್ಯತೆಯನ್ನು ಪ್ರಕಾಶಮಾಡಿಯೇ ತೀರುತ್ತಾನೆ. ಲಕ್ಷಾವಧಿ ಜನರ ಕಡೆಯಿಂದ ಆಗದಂಥ ಕೆಲಸಗಳನ್ನು ತನ್ನ ದಿವ್ಯದೃಷ್ಟಿಯಿಂದ ಕಂಡು ಹಿಡಿದು ಕಣ್ಣುಮುಚ್ಚಿ ಕಣ್ಣುತೆಗೆಯುವದರೊಳಗೆ ಅವನು ಮಾಡಿಬಿಡುವನು. "He (Napoleon) never blundered into victory, but won his battles in his head, before he won them on the field." ನೇಪೋಲಿಯನ್ ಬಾದಶಹನು ರಣಾಂಗಣದಲ್ಲಿ ಯುದ್ಧಗಳನ್ನು ಗೆದೆಯುವದಕ್ಕಿಂತ ಮೊದಲು ತನ್ನ ಮಿದುಳಿನಲ್ಲಿ ಮೊದಲು ಗೆದ್ದು ಇಟ್ಟಿರುತ್ತಿದ್ದನಂತೆ. ಎಲ್ಲ ಪರಿಸ್ಥಿತಿಯ ಒಡೆಯನಾದಂಥವನಿಗೆ ಯಾವದು ಅಸಾಧ್ಯ! ಮಹಾತ್ಮರ ದೃಷ್ಟಿಯು ಬಿದ್ದ ಕೂಡಲೇ ವಸ್ತುಗಳ ಸ್ಥಿತಿಯು ಬದಲಾಗುವದು. ಅವನ ಮಿದುಳಿನಲ್ಲಿ ವಿಚಾರವಾದ ಕೂಡಲೇ ಅದರ ಆಚರಣೆಯು ಕೈಯಿಂದ ಆಯಿತೆಂತಲೇ ತಿಳಿಯತಕ್ಕದ್ದು. ಕರ್ಮಯೋಗಿಯು ತನ್ನ ದಿವ್ಯದೃಷ್ಟಿಯಿಂದ ದಿವ್ಯಜ್ಞಾನವನ್ನು ಪಡೆಯುವನು. ದಿವ್ಯಜ್ಞಾನದಿಂದ ತುಂಬಿದಂತೆ ನುಡಿಗಳನ್ನು ನುಡಿಯುವನು. ತನ್ನ ನುಡಿಗಳಂತೆಯೇ ಉಚ್ಚತಮವಾದ ನಡೆಯನ್ನೂ ನಡೆದು ತೋರಿಸುವನು. ಆದ್ದರಿಂದಲೇ ಅವನು ಮುಟ್ಟಿದ ಬೆಂಡು ಬಂಗಾರವಾಗುವದು. ಅವನು ಇದ್ದ ಸ್ಥಳವು ಕ್ಷೇತ್ರವಾಗುವದು. ಅವನು ನುಡಿದ ನುಡಿಗಳು ಜಗತ್ತಿನೊಳಗಿನ ಸರಸಾದ ವಾಙ್ಮಯವಾಗುವದು. ಅವನು ತೋರಿದ್ದೇ ಪೂರ್ವದಿಕ್ಕು; ಅವನು ಕಟ್ಟಿದ್ದೇ ಪಟ್ಟವಾಗುವದು. ಇಷ್ಟೆಲ್ಲ ಕರ್ಮವನ್ನು ಅವನು ನಿಷ್ಕಾಮವಾಗಿ ಅಂದರೆ ತನಗೆ ಏನೂ ಲಾಭವಿಲ್ಲದೆ ಈ ಜಗತ್ತಿನಲ್ಲಿ ನೋಡಿದಲ್ಲೆಲ್ಲ ಪರಮಾತ್ಮನೇ ತುಂಬಿರುವನೆಂಬ ಭಾವನೆಯಿಂದಲೇ ಮಾಡುವನೆಂಬದನ್ನು ಮಾತ್ರ ಮರೆಯಕೂಡದು.

ಈ ಜಗತ್ತೆಂದರೊಂದು ಅಪೂರ್ಣತೆಯು ಮೊಟ್ಟೆಯಾಗಿರುವದು. ಸಾವಿರಾರು ರೋಗಗಳಿಂದ ಪೀಡಿತನಾಗಿರುವಂಥ ರೋಗಿಯ ಉಪಮೆಯನ್ನಾದರೂ ಇದಕ್ಕೆ ಕೊಡಬಹುದು. ಎಲ್ಲ ಅಪೂರ್ಣತೆಯ ಪರಿಣಾಮವು ದುಃಖದಾಯಕವಾದದ್ದು. ಆದ್ದರಿಂದಲೇ ಪ್ರತಿಯೊಬ್ಬ ಮನುಷ್ಯನು ದುಃಖವನ್ನು ಹೋಗಲಾಡಿಸಿ ಸುಖವನ್ನೇ ಬಯಸುತ್ತಿರುವದು. ಶಾಶ್ವತವಾದ ಸುಖವು ಸಿಗಲೆಂದು ದಿನಾಲು ಮಿತಿಮೀರಿ ಪ್ರಯತ್ನ ಬಡುತ್ತಿರುವದು. ಮನುಷ್ಯರೆಲ್ಲರೂ ತಮ್ಮ ತಮ್ಮ ಯೋಗ್ಯತೆಯ ಪ್ರಕಾರ ತಮ್ಮ ತಮ್ಮ ಲೋಕವನ್ನು ನಿರ್ಮಾಣಮಾಡುತ್ತಾರೆ. ಈ ಲೋಕದಲ್ಲಿ ಅವನ ಜೀವನಿರುತ್ತದೆ. ತನಗೆ ದುಃಖವಾದ ಕೂಡಲೇ ಅವನು ತನ್ನ ಮನೋಲೋಕದಲ್ಲಿ ಬಂದು ಆ ದುಃಖವನ್ನು ಹೋಗಲಾಡಿಸುತ್ತಾನೆ. ಕೆಲವರಿಗೆ ದುಃಖದ ಹೊಡತವು ತಗಲಿತೆಂದರೆ ಅವರು ಹರಿಭಜನೆಯನ್ನು ಮಾಡಿ ಅದನ್ನು ಹೋಗಲಾಡಿಸುವರು. ಕೆಲವರು ನಿಸರ್ಗದೇವಿಯ ಸುಂದರವಾದ ಪಾದಕಮಲಗಳಿಗೆ ಶರಣಾಗತರಾಗುವರು. ಕೆಲವರು ಸುರಾದೇವಿಯನ್ನು ಭಜಿಸಿ ದುಃಖಮುಕ್ತರಾಗುವರು. ಈ ಪರಿಯಾಗಿ ಈ ಜಗತ್ತು ಇರುವಲ್ಲಿ

ಮಹಾತ್ಮನು ತನ್ನ ದಿವ್ಯವಾದ ಕಲ್ಪನೆಯ ಸಾಮರ್ಥ್ಯದಿಂದ ಬಂದು ಭವ್ಯವಾದ ಮನೋಲೋಕವನ್ನುಂಟುಮಾಡಿ ತನ್ನ ದಿವ್ಯವಾದ ವಾಣಿಯ ಬಲದಿಂದ ಅದನ್ನು ಲಕ್ಷಾವಧಿ ಜನರಿಗೆ ತೋರಿಸುವನು. ದಿವ್ಯ ಲೋಕವನ್ನು ಅವರಲ್ಲಿ ಉಂಟುಮಾಡುವನು. ಈ ಧ್ಯೇಯದ ಸಲುವಾಗಿ ಕಾರ್ಯವನ್ನು ಮಾಡುತ್ತಿರುವಾಗ ಮನುಷ್ಯನು ತಾನು ಅಮರನಿದ್ದೇನೆಂದು ತಿಳಿದು ಸಕಲ ದುಃಖಗಳನ್ನು ಮರೆತು, ಮರಣವನ್ನು ಸಹ ಮೂದಲಿಸುತ್ತ ಸಂತತವಾದ ಆನಂದದಲ್ಲಿರುವನು. ಇಂಥ ಶಾಶ್ವತವಾದ ಆನಂದವನ್ನುಂಟು ಮಾಡುವವನು ಜಗತ್ತಿನಲ್ಲಿ ಬಂದಕೂಡಲೇ ಅವನ ಬೆನ್ನು ಹಿಡಿಯುವದರಲ್ಲಿ ದುಃಖಿಗಳೇ ಮುಂದಾಗುವರು. ಕೆಲವರಿಗೆ ಸ್ವಾತಂತ್ರ್ಯವಿಲ್ಲದ್ದರಿಂದ ದುಃಖವಾಗಹತ್ತಿರುತ್ತದೆ. ಕೆಲವರಿಗೆ ಸಮಾಜದ ಬಿಗಿಯಾದ ಕಟ್ಟುಗಳ ಬಂಧನದಿಂದ ಅಸಹ್ಯವಾದ ದುಃಖವಾಗಹತ್ತಿರುತ್ತದೆ. ಕೆಲವರಿಗೆ ಧರ್ಮದ ಉತ್‌ಶೃಂಖಲ ಉರುಲಿನಿಂದ ತಲೆನೋವು ಎದ್ದಿರುತ್ತದೆ. ಈ ಪ್ರಕಾರ ಎಲ್ಲರಿಗೂ ಒಂದೊಂದು ವಿಧದ ತಾಪವಾಗಹತ್ತಿರಲು ಮಹಾತ್ಮನು ಬಂದನೆಂದರೆ ಆಧಿಭೌತಿಕ ಆಧಿದೈವಿಕ ಮತ್ತು ಆಧ್ಯಾತ್ಮಿಕ ತಾಪಗಳನ್ನು ಕಿತ್ತುಹಾಕಿ ತನ್ನನ್ನು ಹಿಂಬಾಲಿಸುವವರಿಗೆಲ್ಲ ನಿರತಿಶಯಾನಂದವನ್ನುಂಟು ಮಾಡುವನು.

ದುಃಖಗಳ ಮೂಲವನ್ನು ಹುಡುಕಿ ತೆಗೆಯುವದೇ ಮಹಾತ್ಮನ ಸ್ವಭಾವವಾಗಿರುತ್ತದೆ. ತಜ್ಞನಾದ ವೈದ್ಯನು ರೋಗಿಗಳನ್ನು ಪರೀಕ್ಷೆಮಾಡಿ ವ್ಯಕ್ತವಾದ, ಮೇಲೆ ಮೇಲೆ ಕಾಣುವಂಥ ನೋವುಗಳ ಸಹಾಯದಿಂದ ಅವುಗಳಿಗೆ ಕಾರಣವಾದಂಥ ನಿದಾನವನ್ನು (ಮೂಲಕಾರಣ) ಹುಡಿಕಿ ಅದಕ್ಕೆ ವಿಚಾರ ಮಾಡಿ ಯೋಗ್ಯ ಚಿಕಿತ್ಸೆಯನ್ನು ಮಾಡುವನು. ಔಷಧವು ಬಹಳೇ ಕಹಿಯಾಗಿರುವದರಿಂದ ರೋಗಿಯ ಮನೋಲೋಕದಲ್ಲಿ ಆನಂದಕರವಾದ ಆರೋಗ್ಯದ ಕಲ್ಪನೆಗಳನ್ನು ಹುಟ್ಟಿಸಿ ಆ ಆರೋಗ್ಯದ ಕಲ್ಪನೆಗಾಗಿ ರೋಗಿಯು ಬೇಕಾದ ಕಷ್ಟಗಳನ್ನು ಸಹನಮಾಡುವ ಶಕ್ತಿಯನ್ನು ಹುಟ್ಟಿಸಿ ತನ್ನ ಲೋಕಕಲ್ಯಾಣಕರವಾದ ಕಾರ್ಯವನ್ನು ಮುಗಿಸುವನು. ಅದೇ ಪ್ರಕಾರವಾಗಿ ದುಃಖಪೀಡಿತರಾದ ಜನರನ್ನು ಉದ್ಧಾರ ಮಾಡುವದಕ್ಕೆ ಮಹಾತ್ಮನು ಪರಿಸ್ಥಿತಿಯ ವಿಚಾರವನ್ನು ಮಾಡಿ ಉಪಾಯವನ್ನು ನಡಿಸಹತ್ತಿದನೆಂದರೆ ಜಗತ್ತಿನೊಳಗಿನ ಸಾತ್ವಿಕ ಪ್ರವೃತ್ತಿಗಳು ಅವನ ಮಾರ್ಗವನ್ನನುಸರಿಸುತ್ತವೆ. ಯಾವ ರಾಕ್ಷಸಪ್ರವೃತ್ತಿಯನ್ನು ಬೇರು ಸಹಿತ ಕಿತ್ತಿ ಹಾಕಬೇಕೆಂದು ಮಹಾತ್ಮನ ಪ್ರಯತ್ನವಿರುತ್ತದೆಯೋ ಅದನ್ನು ಹಿಂಬಾಲಿಸುವವರು ಅವನಿಗೆ ಎದುರು ನಿಲ್ಲುವರು. ಆಗ ಮಹಾತ್ಮನ ನಿಜವಾದ ಪರೀಕ್ಷೆಯಾಗುವದು. ಆಗ ಮಹಾತ್ಮನು ರುದ್ರಾವತಾರವನ್ನು ತಾಳಿ ವೀರನೆಂದೆನಿಸಿ ಕೊಳ್ಳುವನು.

"Towords all this internal evil, the man, within the breast assumes a warlike attitude and affirms

his ability to cope singlehanded with the infinite army of enemies. To this military attitude of the soul we give the name of Heroism."

—Emerson

ಈ ಎಲ್ಲ ಬಾಹ್ಯ ದುಃಖಗಳಿಗೆ ಹೃದಯಸ್ಥ ಪುರುಷನು ಎದುರಾಳಾಗಿ ನಿಂತು ಕಾದುವನು. ಮತ್ತು ರಾಕ್ಷಸಪ್ರವೃತ್ತಿಗಳ ಸಕಲ ಸೈನ್ಯವನ್ನು ಬುಡಮೇಲು ಮಾಡಿ ತೋರಿಸುವೆನೆಂಬ ಪಣವನ್ನು ಕಟ್ಟುವನು. ಆತ್ಮದ ಈ ರುದ್ರವೃತ್ತಿಗೆ ನಾವು ವೀರತನ ವೆಂಬ ಹೆಸರನ್ನು ಕೊಡುತ್ತೇವೆ. ಎಂದು ಇಮರ್ಸನ್ನನು ಅಂದಿರುವದು ಯಥಾಯೋಗ್ಯವಾದದ್ದು. ಸರ್ವಜ್ಞ ಕವಿಯು ಹೇಳುವಂತೆ:—

ವಚನದೊಳಗೆಲ್ಲರೂ ಶುಚಿವೀರ ಸಾಧುಗಳು ।
ಕುಚ ಹೇಮಶಸ್ತ್ರಸೋಂಕಿದೊಡೆ ಜಗದೊಳಗೆ ।
ಅಚಲರಾರಯ್ಯ ಸರ್ವಜ್ಞ ॥

ತಂಪು ಕಾಲದೊಳಗೆ ಬಾಯಿಬಡಾಯಿ ಮಾಡುವಂಥ ಉತ್ತರಕುಮಾರರು ಎಲ್ಲಿ ಹೋದರೂ ತುಂಬಿರುವರು. ರಣಾಂಗಣದಲ್ಲಿ ಕೈಗೆ ಕೈಗೆ ಹತ್ತಿದಾಗ ತನ್ನ ಕಾರ್ಯವನ್ನು ಏಕಾಕಿಯಾಗಿ ನಿಂತು ತೋರಿಸುವವನೇ ವೀರನು. ಇಂಥವೀರನು ಕೋಟಿಯುಲ್ಲೊಬ್ಬನು ಸಿಗುವದೂ ಅಪರೂಪ. ಭರ್ತೃಹರಿಯು ತನ್ನ ನೀತಿಶತಕದಲ್ಲಿ ಅಂದಂತೆ:-

प्रारभ्यते न खलु विघ्नभयेन नीचैः ।
प्रारभ्य विघ्नविहता विरमन्ति मध्याः ॥
विघ्नैः पुनपुनरापि प्रतिहन्यमानाः ।
प्रारब्धमुत्तमजना न परित्यजंति ।

ಕಾರ್ಯವನ್ನು ಮಾಡುವಾಗ ಮುಂದೆ ವಿಘ್ನಗಳು ಬರುವವೆಂಬ ಭಯದಿಂದ ನೀಚರಾದವರು ಕಾರ್ಯವನ್ನೇ ಪ್ರಾರಂಭಿಸುವದಿಲ್ಲ. ಸಾಮಾನ್ಯರು ಧೈರ್ಯದಿಂದ ಕಾರ್ಯವನ್ನು ಪ್ರಾರಂಭಿಸಿ ವಿಘ್ನಗಳು ಬಂದಕೂಡಲೇ ರಣಾಂಗಣದಿಂದ ಕಾಲನ್ನು ತೆಗೆಯುತ್ತಾರೆ. ಆದರೆ ಮೇಲಿಂದಮೇಲೆ ವಿಘ್ನಗಳು ಗುಂಪಾಗಿ ಕಾದುತ್ತಿರಲು ಅವುಗಳನ್ನೆಲ್ಲ ಹೊಡೆದೋಡಿಸಿ ತನ್ನ ಕಾರ್ಯವನ್ನು अर्थं वा साधयेत् देहं वा पातयेत् ಎಂಬ ನ್ಯಾಯದಂತೆ ಕೊನೆಗಾಣಿಸುವವನೊಬ್ಬನೇ ಉತ್ತಮನು. ತಾನು ಇಟ್ಟುಕೊಂಡ ಗುರಿಯನ್ನು ಸಾಧಿಸುವ ಕಾರ್ಯದಲ್ಲಿ ಅವನಿಗೆ ಮರಣ ಬಂದರೆ ಅವನಿಗೆ ಪುತ್ರೋತ್ಸವದಷ್ಟು ಆನಂದವಾಗುವದು. "सत्यमेव जयते नानृतम्" ಎಂಬ ವೀರೋಕ್ತಿಯನ್ನೇ ಪಸರಿಸುತ್ತ ಅವನು ಸಾಯುವನು, ಗೆದ್ದರೆ ಈ ಉಕ್ತಿಯನ್ನು ಸತ್ಯವನ್ನಾಗಿ ತೋರಿಸಿಯೇ ಬಿಡುವನು. ಅವನು ತೀರಿದರೆ ಅವನು ತೀರುವದೇ ಇಲ್ಲ; ಅವನ ದೇಹವು ತೀರುವದಷ್ಟೇ. ಅವನ ಆತ್ಮದ ಬೆಳಕು ಸೂರ್ಯಚಂದ್ರರಿರುವವರೆಗೆ ಜಗತ್ತಿನಲ್ಲಿ ಸಂಚರಿ

ಸುತ್ತಿರುವ ರಾಕ್ಷಸವೃತ್ತಿಗಳ ಸಂಗಡ ಕಾದಾಡುತ್ತಲಿರುತ್ತದೆ. ಅವನ ರಕ್ತದ ಬಿಂದುಬಿಂದುವಿನಿಂದ ರೋಮರೋಮಗಳಿಂದ ವೀರರು ಹುಟ್ಟಿ ಅವನು ಹಿಡಿದ ಕಾರ್ಯವನ್ನು ಮುಂದರಿಸಿ ಕಟ್ಟಕಡೆಗೆ ಜಯವನ್ನು ಪಡೆಯುತ್ತಾರೆ. ಶ್ರೀ ರಾಮಚಂದ್ರನು ತನ್ನ ವಂಶದ ಮಾನವನ್ನುಳಿಸುವದಕ್ಕಾಗಿ ತನ್ನ ತಂದೆಯ ವಚನವನ್ನು ಪರಿಪಾಲಿಸುವದಕ್ಕಾಗಿ ಐಶ್ವರ್ಯದಿಂದ ತುಂಬಿ ತುಳುಕುವ ತನ್ನ ರಾಜ್ಯವನ್ನು ತ್ಯಜಿಸಿ ಅಡವಿಯ ಪಾಲಾದನು. ಬಲಿಚಕ್ರವರ್ತಿಯು ವೇಷಧಾರಿಯಾದ ವಿಷ್ಣುವಿಗೆ ತನ್ನ ಸಕಲ ಸಾಮ್ರಾಜ್ಯವನ್ನು ಬಿಟ್ಟು ಪಾತಾಳಕ್ಕಿಳಿದನು. ಶಿಬಿಚಕ್ರವರ್ತಿಯು ಧರ್ಮರೂಪಿಯಾದ ಗಿಡಗಕ್ಕೆ ತನ್ನ ಮಾಂಸದ ಊಟವನ್ನುಣಿಸಿದನು. ಹರಿಶ್ಚಂದ್ರನು ತನ್ನ ಸತ್ಯವ್ರತವನ್ನು ಪಾಲಿಸುವದಕ್ಕೋಸ್ಕರ ಸ್ವಪ್ನದಲ್ಲಿ ದಾನಮಾಡಿದ ರಾಜ್ಯವನ್ನು ತೊರೆದು ಡೊಂಬನ ಆಳಾದನು. ಕರ್ಣನು ತನ್ನ ಕರ್ಣಕುಂಡಲಗಳನ್ನು ಕೃಷ್ಣನಿಗೆ ಕೊಟ್ಟು ತನ್ನ ಪ್ರಾಣವನ್ನು ಬಿಟ್ಟು ಹೆಸರುವಾಸಿಯಾದನು. ಆಧ್ಯಾತ್ಮಿಕ ತತ್ವಗಳು, ನೀತಿಯ ಮರ್ಮಗಳು ಜಗತ್ತಿನಲ್ಲಿ ಉಳಿಯಲೆಂದು ರಾಜ್ಯವನ್ನು ಬಿಟ್ಟವರುಂಟು. ಹೆಂಡರು ಮಕ್ಕಳನ್ನು ತೊರೆದವರುಂಟು. ಪಂಚಪ್ರಾಣಗಳ ಚಿತೆಯನ್ನು ಉರಿಸಿದವರುಂಟು. ನನ್ನಲ್ಲಿಯೂ ದೇವರ ಅಂಶವಿದೆ, ನಾನೂ ಪರಮಾತ್ಮನ ಮಗನಿದ್ದೇನೆ; ಹೊಸ ರಾಜ್ಯವನ್ನು-ದೇವರಾಜ್ಯವನ್ನು-ಸ್ಥಾಪಿಸಲಿಕ್ಕೆ ಬಂದಿರುವನೆಂದು ಸಾರಿದ ಕ್ರೈಸ್ತದೇವನ ಗತಿಯೇನಾಯಿತು ? ಸಾಮಾನ್ಯ ಕಳ್ಳನಂತೆ ಅವನನ್ನು ಬಂಧಿಸಿ ಅವನ ಎದೆ ಕೈಕಾಲುಗಳಲ್ಲಿ ಹಡನಾದ ಮೊಳೆಗಳನ್ನು ಹೊಡೆದು ಅವನನ್ನು ಕೊಂದರು. ಅವನ ರಕ್ತಬಿಂದುವಿನಿಂದ ಮಹಾತ್ಮರು ಹುಟ್ಟಿ ಅವನ ತೇಜೋಜ್ಯೋತಿಯನ್ನು ಇನ್ನೂ ಕಾಯ್ದಿರುವರು. ಅವನು ಅಮರನಾದನು. ಸೂರ್ಯಚಂದ್ರರಿರುವವರೆಗೆ ಅವನಿರುವನು. ಅವನು ಸಾರಿದ ಪ್ರೇಮಧರ್ಮದ ದಿವ್ಯಜ್ಯೋತಿಯು ಜಗತ್ತನ್ನು ಬೆಳಗುವದು. ಆತ್ಮನ ಅಮರತೆಯನ್ನು ಸಿದ್ಧಪಡಿಸುವದಕ್ಕಾಗಿ ಸೊಕ್ರೆಟೀಶ ಸಾಧುವರ್ಯನು ವಿಷವನ್ನು ಸಾವಕಾಶವಾಗಿ ಆನಂದದಿಂದ ಕುಡಿಯಲಿಲ್ಲವೇ ? ದೇಶಕ್ಕಾಗಿ ಜೀವವನ್ನು ಕೊಟ್ಟವರುಂಟು. ಧರ್ಮಕ್ಕಾಗಿ ಮಡಿದವರುಂಟು. ಸ್ವಾತಂತ್ರ್ಯಕ್ಕಾಗಿ ಸತ್ತವರುಂಟು. ಪ್ರತಾಪ, ಹರಿಹರ, ಶಿವಾಜೀ, ಲ್ಯೂಥರ–ಎಷ್ಟೆಂದು ಹೇಳಬೇಕು, ಇವರ ಹೆಸರುಗಳನ್ನು ಬರೆಯುತ್ತ ಹೋದರೆ ಬೆಳಗಾದೀತು. ಇವರೆಲ್ಲರೂ ತಮ್ಮ ತಮ್ಮ ಸುತ್ತಲಿನ ಪರಿಸ್ಥಿತಿಯಲ್ಲಿ ಆಳುತ್ತಿರುವ ರಾಕ್ಷಸಪ್ರವೃತ್ತಿಗಳನ್ನು ಕಿತ್ತುಹಾಕುವದಕ್ಕಾಗಿ ಕಾದಿದರು. ಕೆಲವರು ಮಡಿದರು. ಕೆಲವರು ಉಳಿದರು. ಮಡಿದವರೂ ಉಳಿದವರೂ ಅಮರರಾದರು. ಗ್ರೀಸಪುರಾಣದಲ್ಲಿ ಒಂದು ದೇವತೆಯ ವರ್ಣನೆಯಿರುವದು. ಆಕೆಯ ಹೆಸರು ಸ್ಫಿಂಕ್ಸ ದೇವತೆ ( Sphinx ). ಆಕೆಯು ದಾರಿಯಲ್ಲಿ ನಿಂತು ಹೋಗುಬರುವವರಿಗೆ ಪ್ರಶ್ನೆಗಳನ್ನು ಕೇಳುವಳು. ಪ್ರಶ್ನೆಗಳಿಗೆ ಯೋಗ್ಯ ಉತ್ತರಗಳನ್ನಿತ್ತರೆ ಆಕೆಯು ಸಾಯುವಳು. ಇಲ್ಲದಿದ್ದರೆ ದಾರಿಕಾರನು ಸಾಯುವನು. ಪರಿಸ್ಥಿತಿಯೇ ದೇವತೆಯು; ಪ್ರತಿಯೊಬ್ಬನು ದಾರಿಕಾರನು. ಪರಿಸ್ಥಿತಿಯನ್ನು ದಾಟ

ದರೆ ಮಹಾತ್ಮನಾಗುವನು. ಪರಿಸ್ಥಿತಿಯು ಕೈಗೆ ಸಿಕ್ಕರೆ ಹೇಳಹೆಸರಿಲ್ಲದಂತಾಗುವನು. 'When the spirit is not the master of the world, it is its dupe." ಆತ್ಮವು ಪರಿಸ್ಥಿತಿಯ ಅರಸಾಗದಿದ್ದರೆ ಅದರ ದಾಸನಾಗುವದು. ಮಹಾತ್ಮನ ಪರೀಕ್ಷೆಯ ವೇಳೆಯು ಒಮ್ಮಿಲ್ಲೊಮ್ಮೆ ಹಿವ್ಮೆಟ್ಟಿದನೆಂದರೆ ಅಡಿಯು ಹಿಂದೆ ನರಕ "न चेदिहावेदीत् महती विनष्टिः" "भूतेषु भूतेषु विचित्य धीराः प्रेत्यास्माल्लो कादमृता भवन्ति" ಇಲ್ಲಿಯೇ ನಿಜಸ್ವರೂಪವನ್ನು ಕಂಡುಕೊಳ್ಳುವದು. ಈ ಲೋಕ ವನ್ನು ದಾಟದವರು ಮುಕ್ತರಾಗುವರು, ಅಮರರಾಗುವರು. ಇದು ಬಹಳ ಕಠಿಣ ವಾದದ್ದು. ಉಪನಿಷತ್ತಿನಲ್ಲಿ ಹೇಳಿದಂತೆ ಈ ಮಾರ್ಗವನ್ನು ಕ್ರಮಿಸುವದೆಂದರೆ ಹದನಾದ ಕತ್ತಿಯ ಅಲಗಿನ ಮೇಲೆ ನಡೆದಂತೆಯೇ ಸರಿ. ಆದ್ದರಿಂದಲೇ ಕಂಡ ಕಂಡಲ್ಲಿ ಮಹಾತ್ಮರಿಲ್ಲದಿರುವದು.

ಪರಿಸ್ಥಿತಿಯೇ ಮಹಾತ್ಮರನ್ನು ಬರಮಾಡುವದು. ಮಹಾತ್ಮನು ಪರಿಸ್ಥಿತಿಯ ಮಗು. ಪರಿಸ್ಥಿತಿಯೇ ಪ್ರಧಾನವಾದದ್ದು. ಮನುಷ್ಯನಲ್ಲಿ ಮಾಹಾತ್ಮ್ಯವೆಲ್ಲಿಯದೆಂದು ಕೆಲವರ ಮತ. "ನೆಪೋಲಿಯನ್, ಕ್ರಾಮವೆಲ್ಲ, ಲ್ಯೂಥರ, ಕೃಷ್ಣ, ಶಂಕರ, ಮಧ್ವ ಕಬೀರ ಮುಂತಾದ ಮಹಾತ್ಮರಿಗೆ ಬರೇ ಕವಿಗಳು ಹೆಸರುಗಳನ್ನು ಕಲ್ಪಿಸಿ ವರ್ಣಿಸು ವರು. ಆದರೆ ವಸ್ತುತಃ ಅವರು ಸಾಮಾನ್ಯ ಜನರೇ. ಲಕ್ಷಾವಧಿ ಜನರ ಸಹಾಯವಿಲ್ಲ ದ್ದರೆ, ಸಹಾಯವಿದ್ದೂ ಪರಿಸ್ಥಿತಿಯು ಪ್ರತಿಕೂಲವಿದ್ದರೆ, ಅವರ ಕಡೆಯಿಂದ ಏನೂ ಕೆಲ ಸವಾಗುತ್ತಿದ್ದಿಲ್ಲ. ಶ್ರೀ ಕೃಷ್ಣಪರಮಾತ್ಮನೆಂದರೆ ಕೇವಲ ಕವಿಗಳ ಕಲ್ಪನೆ. ಧರ್ಮ, ಭೀಮ, ಅರ್ಜುನರಂಥ ವೀರರೂ ಏಳಕ್ಷೋಹಿಣೀ ಸೈನ್ಯವೂ ಸಹಾಯಕ್ಕೆ ಇಲ್ಲದಿದ್ದರೆ ಶ್ರೀ ಕೃಷ್ಣನ ಹೆಸರು ಸಹ ಕೇಳಬರುತ್ತಿದ್ದಿಲ್ಲ. ನೇಪೋಲಿಯನ್ನನಿಗೆ ಲಕ್ಷಾವಧಿ ಸೈನ್ಯದ ಬಲವಿದ್ದದರಿಂದ ಅವನು ಎಷ್ಟೋ ರಾಷ್ಟ್ರಗಳನ್ನು ಪಾದಾಕ್ರಾಂತ ಮಾಡಿ ಹೆಸರನ್ನು ಪಡೆದನು. ಇಲ್ಲದಿದ್ದರೆ ಅವನು ಯುದ್ಧಗಳನ್ನೂ ಮಾಡುತ್ತಿದ್ದಿಲ್ಲ; ಜಯ ವನ್ನೂ ಪಡೆಯುತ್ತಿದ್ದಿಲ್ಲ; ಅವನ ಹೆಸರೂ ಮುಂದೆ ಬರುತ್ತಿದ್ದಿಲ್ಲ." ಅಷ್ಟು ಇದ್ದೆಲ್ಲ ನಿಜ. ಒಂದು ಕಾರ್ಯವಾಗುವದಕ್ಕೆ ಸಾವಿರಾರು ಅನಂತ ಕಾರಣಗಳಾಗಿರುತ್ತವೆ. ಆದರೆ ಅವೆಲ್ಲ ಕಾರಣಗಳಿಂದಲೂ ಆಗದಂಥ ಕಾರ್ಯವನ್ನು ಮಾಡುವಂಥದಕ್ಕೆ ಹೆಚ್ಚು ಮಹತ್ವ. ಗುಂಡು ಹೊಡೆಯುವದದೆ, ಬಂದೂಕಿನಲ್ಲಿ ಮದ್ದು ತುಂಬಿದೆ, ಬಂದೂಕು ತೀರ ಹೊಸದು, ಜೋಡು ಲಳಗಿಯುದು. ಇದೆಲ್ಲ ನಿಜ. ಕೇಪಿರದಿದ್ದರೆ ಗುಂಡು ಎಂದೂ ಯಾರನ್ನೂ ಹೊಡೆಯಲಾರದು. ಕೇಪಿದ್ದರೂ ಹೊಡೆಯುವವನೇ ಇಲ್ಲದಿದ್ದರೇನು ಗತಿ ? ಆದ್ದರಿಂದ ಗುಂಡು ತಪ್ಪಿ ಯಾರಿಗಾದರೂ ತಗಲಿದರೆ ಬಂದೂ ಕಿಗೆ ಉರುಲು ದಂಡನೆಯನ್ನು ಯಾರೂ ಕೊಡುವದಿಲ್ಲ. ಅದೇ ಒಬ್ಬ ಮನುಷ್ಯನು ಗುರಿಯಿಟ್ಟು ಹೊಡೆದಿದ್ದರೆ ಅವನೂ ಗುಂಡಿನ ಬಾಯಿಗೆ ತುತ್ತಾಗುವನು. ಪರಿಸ್ಥಿತಿಯೂ ಅನುಕೂಲವಿರಲಿಕ್ಕೆ ಬೇಕು. ಅತಿಶಯ ಉತ್ತಮನಾದ ಗುರಿಗಾರನಿದ್ದಾನೆ. ಉತ್ತಮ

ಸೋಕನಿವೆ. ಆದರೂ ಮದ್ದು ತೊಯ್ದಿದ್ದರೆ ಗುಂಡು ಹಾರಲಾರದು ಕೇಪು ಕಸ
ಕ್ಕೆ ಮದ್ದು ಹೊತ್ತಲಾರದು. ಇಷ್ಟೆಲ್ಲ ಸಾಮಗ್ರಿಗಳಿದ್ದು ಗುಂಡೇ ಒಳಗೆ ಇಲ್ಲದಿ
ಪಕ್ಷದಲ್ಲಿ—ಗಾಳಿಗೆ ಗಾಳಿ ಬಯಲಿಗೆ ಬಯಲು. ಯಾವದಾದರೂ ಕಾರ್ಯವಾಗ
ಬೇಕಾದರೆ ಪರಿಸ್ಥಿತಿಯ ಸಮೂಹವು (ಇದಕ್ಕೇ ವೇದಾಂತದಲ್ಲಿ ದೈವವೆಂದನ್ನುವರು)
ಪುರುಷನಿಗೆ ಅನುಕೂಲವಿರಲೇ ಬೇಕು. ಪರಿಸ್ಥಿತಿಯನ್ನು ಆಳಿದರೆ, ತನ್ನ ಅಂಕಿತದಲ್ಲಿಟ್ಟ
ರೆ, ಕಾರ್ಯವಾಗುವದು. ಪರಿಸ್ಥಿತಿಯು ಪುರುಷನನ್ನು ಆಳಿದರೆ ಕಾರ್ಯಹಾನಿ
ಯಾಗುವದು. ಸಾಮಾನ್ಯರು ಪರಿಸ್ಥಿತಿಗೆ ಬಾಗುವರು. ಮಹಾತ್ಮರು ಪರಿಸ್ಥಿತಿಯ
ಜನಗಳು. ಆದ್ದರಿಂದಲೇ ಪರಿಸ್ಥಿತಿಯಲ್ಲಿ ತುಂಬಿದಂಥ ಆಲಸ್ಯವನ್ನು ತೂರಿ ಧೈರ್ಯ
ದ ಪಟ್ಟಗಟ್ಟುವರು; ಭಯವನ್ನು ತಳ್ಳಿ ನಿರ್ಭಯತೆಗೆ ಪಟ್ಟಾಭಿಷೇಕವನ್ನು ಮಾಡು
ವರು. ಪರಿಸ್ಥಿತಿಯಲ್ಲಿಯೇ ಹುಟ್ಟಿ ಬೆಳೆವ ಮಕ್ಕಳಲ್ಲಿ ಸಾಮರ್ಥ್ಯವಿದ್ದ ಪಕ್ಷದಲ್ಲಿ ಅವರೇ
ಪರಿಸ್ಥಿತಿಯನ್ನು ಮಾರ್ಪಡಿಸುವರು. ಕೆಸರಿನಲ್ಲಿ ಹುಟ್ಟಿದ ಕಮಲಬೀಜವು ಕೆಸರು
ನ್ನು ಕುಡಿದು ಕಮನೀಯವಾಗಿ ಜನರ ಆದರಕ್ಕೆ ಪಾತ್ರವಾಗುವಂತೆ ಮಹಾತ್ಮನು
ಸಾಮಾನ್ಯಜನತೆಯ ಹೊಲದಲ್ಲಿ ಹುಟ್ಟಿದರೂ ಅವರೆಲ್ಲರನ್ನೂ ತನ್ನ ಅಂಕಿತದಲ್ಲಿಟ್ಟು
ತಾ ತನ್ನ ಸಾಮರ್ಥ್ಯದಿಂದಲೇ ಜಗತ್ತಿಗೆ ಫಲರೂಪವಾಗುವನು. ಪರಮ ಪುರು
ಷನು ಪರಿಸ್ಥಿತಿಯ ಪುತ್ರನಾಗಿಯೂ ಪರಿಸ್ಥಿತಿಯ ಪತಿಯಾಗಿಯೂ ಬಾಳುವನು.
ಅವನು ಮಾಡುವ ಎಲ್ಲ ಕಾರ್ಯದ ಮಾಹಾತ್ಮ್ಯವನ್ನು ಪರಿಸ್ಥಿತಿಗೆ ಕೊಟ್ಟರೆ—ಈ
ಮಹಾತ್ಮನಾದರೂ ಏಕೆ ಹುಟ್ಟಿದನು? ಪರಿಸ್ಥಿತಿಯೇ ಎಲ್ಲ ಕೆಲಸವನ್ನು ಮಾಡುತ್ತಿತ್ತು.
ಜನರು ಸಹಾಯಮಾಡಿದರಂತೆ! ಜನರು ಇವನಿಗೆ ಏಕೆ ಸಹಾಯ ಮಾಡಿದರು?
ಚುಂಬಕದ ಕಡೆಗೆ ಲೋಹಕಣಗಳ ಪ್ರವೃತ್ತಿ. ಚುಂಬನ ಮಾಡುವ ಶಕ್ತಿಯೇ
ಮಹಾ ಶಕ್ತಿಯು. "(Carlyle) I said the great man was as
lightning out of Heaven; the rest of men waited
for him like fuel, and then they too would flame." ಮಹಾ
ತ್ಮನು ಆಕಾಶದಿಂದ ಬೀಳುವ ಮಿಂಚು; ಇತರರೆಲ್ಲರೂ ಆ ಮಿಂಚಿನ ಹಾದಿಯನ್ನೇ
ಕಾಯುತ್ತಿದ್ದರು. ಮಿಂಚು ಬಂದಕೂಡಲೆ ಎಲ್ಲರಲ್ಲಿಯೂ ಜ್ವಾಲೆಯು ಉತ್ಪನ್ನವಾಗು
ವದು. ಸಾಮಾನ್ಯ ಜನರೆಲ್ಲರೂ ಮದ್ದಿನ ಕಿಡಿಗಳಿದ್ದಂತೆ. ಕಿಡಿ ಬಿದ್ದರೆ ಸಾಕು. ಎಲ್ಲರೂ
ಸಿಡಿಯುತ್ತ ಹೊಡೆಯುವರು. ಬೆಳಕಿನ ಕಾರಣವು. ಕಿಡಿಯೇ ಹೊರತು ಮದ್ದಿನ ಕಣಗಳಲ್ಲ.
ಆ ಪ್ರಜ್ವಲನವೆಂಬದೊಂದು ಮಹಾತ್ಮನ ಹೆಚ್ಚಿನ ಗುಣವು. ಲಕ್ಷಾವಧಿ ಜನರನ್ನು
ಒಟ್ಟುಗೂಡಿಸಿ ಅವರಿಂದ ತನ್ನ ಗುರಿಯನ್ನು ಸಾಧಿಸುವದೇ ವಿಭೂತಿಯ (Person-
ality) ಲಕ್ಷಣವು. ಲೋಕ ಸಂಗ್ರಹವೆಂಬ ಕಲೆಯನ್ನು ಕಲಿಯದೆ ಸಾಮಾನ್ಯ ಮನು
ಷ್ಯನು ಮಹಾತ್ಮನಾಗಲಾರನು. ಸಕಲ ಜನರನ್ನು ತನ್ನೆದೆಗೆ ಎಳೆದು ಸೆಳೆದುಕೊಳ್ಳ
ಬೇಕಾದರೆ ಅವನು ಎಲ್ಲ ಜನರ ಅಂತರಂಗವನ್ನು ಬಲ್ಲವನಿರಬೇ[illegible] ಮನು

ಇವರ ಜೀವನಶಕ್ತಿಗಳು ಒಂದಾಗಬೇಕು. ಪವಿತ್ರ ಅಂತಃಕರಣದ ಜನರಿಗೆ ಬೇಕಾ
ದೊಂದು ವಸ್ತುವನ್ನು ನೋಡಿ ಅವೇ ವಿಚಾರಗಳು ಅವರ ಹೃದಯದಲ್ಲಿ ಯಾಕೆ ಹರಿ
ಯುವವು? ಅವೇ ವಿಚಾರಗಳು ಬಂದರೆ ಆ ವಿಚಾರಗಳ ಉಗಮಸ್ಥಾನವಾದ ಅವರೆ
ಲ್ಲರ ಹೃದಯದಲ್ಲಿ ಏಕತಾನತೆ (identity) ಇರುವದೆಂತಲೇ ತಿಳಿಯಬೇಕು. ಸಂಗೀ
ತಜ್ಞನು ವ್ಯಕ್ತವಾದ ತಂತಿಗಳನ್ನು ತನ್ನ ಹೃದಯದಲ್ಲಿ ಅಡಗಿರುವ ಗುಪ್ತವಾದ
ಸಂಗೀತತಂತಿಗಳಿಗೆ ಮೊದಲು ಕೂಡಿಸುವನು. ಆ ಮೇಲೆ ಅವನ ಹೃದಯವೂ
ತಂತಿಗಳ ಹೃದಯವೂ ಒಂದಾಗುವದು. ಒಂದಾದರೆ ಹೊರಡುವದು ಅಂದವಾದ
ಸಂಗೀತ, ಅವನ ಹೃದಯದ ಗುಪ್ತಸಂಗೀತದ ಮೈಗೊಂಡ ಸ್ವರಗೊಂಡ ರೂಪವು
ನಮ್ಮ ಕಿವಿಗೆ ಬೀಳುವದು. ಪ್ರತಿಯೊಬ್ಬ ಕಲಾಕೋವಿದನಿಗೆ ಪರಕಾಯಪ್ರವೇಶದ
ಗುಟ್ಟು ಚನ್ನಾಗಿ ಗೊತ್ತಿರಬೇಕಾಗುವದು. ಇಲ್ಲದಿದ್ದರೆ ಕ್ಷಣಕ್ಷಣದಲ್ಲಿ ಬೇರೆ ಬೇರೆ
ರೂಪಗಳ ತದ್ರೂಪವರ್ಣನೆಯನ್ನು—ಚಿತ್ರಗಳನ್ನು ಕೊಡುವದು ಕಲಾವಿದನಿಂದ
ಹೇಗಾದೀತು ? ಸಾಮಾನ್ಯಜನರ ಅಭ್ಯಾಸದಿಂದ ಅವರ ಹೃದಯಗಳಲ್ಲಿ ಹೊಕ್ಕು
ಅಲ್ಲಿ ನಡೆದ ವಿಚಾರಗಳ ಮರ್ಮವನ್ನರಿತು ಆ ವಿಚಾರಗಳನ್ನು ತನ್ನಲ್ಲಿ ಮನನ ನಿದಿ
ಧ್ಯಾಸಗಳಿಂದ ಹದಮಾಡಿಕೊಂಡು, ಎಲ್ಲಿ ಹಿಚಿಕಿದರೆ ಯಾವ ತಂತಿಯು ಯಾವ ಸ್ವರ
ವನ್ನು ಕೊಡುವದೆಂಬ ಜ್ಞಾನದಿಂದ ಸಂಗೀತವನ್ನು ಹೊರಡಿಸುವ ಸಂಗೀತಗಾರನಂತೆ
ಮಹಾತ್ಮನಾದರೂ ತನ್ನ ಸುತ್ತುಮುತ್ತಲಿನ ಜನರ ಸಂಗಡ ಸಾಮರಸ್ಯಸುಖವನ್ನನು
ಭೋಗಿಸಿ ಎಲ್ಲರನ್ನೂ ತನ್ನ ಮನಬಂದಂತೆ ಸೂತ್ರದ ಗೊಂಬೆಗಳಂತೆ ಕುಣಿಸುವನು.
ಮದುವೆಯ ದೃಷ್ಟಿಮೀಲನದಲ್ಲಿ ವಧೂವರರು ಒಬ್ಬರೊಬ್ಬರ ಹೃದಯಗಳನ್ನು ನೋಡು
ವರು. ಸಾಮರಸ್ಯವನ್ನು ಹೊಂದಿ ಒಂದೇ ಒಂದು ನಿಮಿಷದಲ್ಲಿ ಒಂದಾಗಿ ಹೋಗು
ವರು. ಪಾಣಿಗ್ರಹಣವು ಸಾಮಾನ್ಯರಿಗೆ ಕೈಗಳ ಕೂಡಿಕೆಯಾದರೂ ವಧೂವರರಿಗೆ
ಹೃದಯಮೀಲನವಾಗುವದು. ಇಬ್ಬರ ಸುಖವು ಒಂದೇ; ಇಬ್ಬರ ದುಃಖವು ಒಂದೇ.
ಇದೇ ದಾಂಪತ್ಯವು ಮಹಾತ್ಮರಲ್ಲಿಯೂ ಜನತೆಯಲ್ಲಿಯೂ ನೆಲೆಗೊಳ್ಳುವದು. ಈ
ದಾಂಪತ್ಯಸುಖದ ಪರಿಣಾಮವೆಂದರೆ ಮಹಾತ್ಮನ ಜೀವಿತಕಾರ್ಯವು. ಜನತೆಯೇ
ಹೊಲ. ಮಹಾತ್ಮನೇ ಒಕ್ಕಲಿಗ. ಲೋಕಕಲ್ಯಾಣದ ಫಲದ ಬೆಳೆಯನ್ನು ಬೆಳೆಸುವದೇ
ಅವನ ಧ್ಯೇಯ. ಈ ಲಗ್ನವಾಯಿತೆಂದರೆ ಮಹಾತ್ಮನಿಗೆ ಪ್ರಾತಿನಿಧಿಕ (Represent-
ative) ಸ್ವರೂಪವು ಬರುವದು. ಅವನು ತನ್ನ ವ್ಯಷ್ಟಿಯನ್ನು ಸಮಷ್ಟಿಯಲ್ಲಿ ಮುಳು
ಗಿಸಿ, ಕರಗಿದ್ದವರಿಂದ ವ್ಯಷ್ಟಿಯೆಂದರೆ ಸಮಷ್ಟಿ, ಸಮಷ್ಟಿಯೆಂದರೆ ವ್ಯಷ್ಟಿಯಾಗು
ವದು. ಹಾಲಲ್ಲಿ ಸಕ್ಕರೆಯು ಕರಗಿದ ಮೇಲೆ ಹಾಲಾವದು, ಸಕ್ಕರೆಯಾವದು ! ಈ
ಪ್ರಕಾರ ರಾಷ್ಟ್ರವು ಪುರುಷನಲ್ಲಿ ಅವತರಿಸುವದು. ರಾಷ್ಟ್ರದ ಆಕಾಂಕ್ಷೆಗಳೆಂದರೆ ಇವನ
ಆಕಾಂಕ್ಷೆಗಳು. ರಾಷ್ಟ್ರದ ವಿಚಾರಗಳೆಂದರೆ ಇವನ ವಿಚಾರಗಳು. ಇವನೆಂದರೆ ಇವನಲ್ಲ;
ಇವನೆಂದರೆ ರಾಷ್ಟ್ರಪುರುಷನು (Spirit of the nation). ಇವನ ಮಾತಿಗೆ

ರಾಷ್ಟ್ರಶಕ್ತಿಯ ಬೆಂಬಲವಿರುವದು. ಇವನು ಮಾತಾಡಿದ್ದನ್ನು ಎತ್ತಿ ಹಿಡಿಯುವದಕ್ಕಾಗಿ ರಾಷ್ಟ್ರದೊಳಗಿನ ದ್ರೈವುಳ್ಳವರು ಬಿಕ್ಕೆಬೇಡುವರು. ವೀರಮಾತೆಯರು ತಮ್ಮ ಮಕ್ಕಳು ಗಳನ್ನು ಬಲಿಗೊಡುವರು; ಸಾಧುಜನರು ತಮ್ಮ ಪುಣ್ಯದ ವಿನಿಯೋಗವನ್ನು ಮಾಡು ವರು.

ಆ ಕಾಲದಲ್ಲಿ ಪ್ರತಿಯೊಬ್ಬ ಮನುಷ್ಯನು ಧ್ಯೇಯವಾದಿಯಾಗುವನು(Idealist). ಪ್ರತಿಯೊಬ್ಬನಲ್ಲಿ ಗೂಢವಾದ ಕಾವ್ಯಶಕ್ತಿಯು ಮಹಾತ್ಮನ ತಪೋಬಲದಿಂದ ಪ್ರಜ್ವಲಿ ತವಾಗಿ ಉರಿಯಹತ್ತುವದು. ರಾಷ್ಟ್ರಧ್ವಜವೆಂದರೇನು ? ಒಂದು ಎರಡಾಣೆಯ ಅರಿವೆಯ ತುಂಡು. ಅದರ ಶಕ್ತಿಯನ್ನು ಕಂಡು ಹಿಡಿಯಬೇಕಾದರೆ ಸ್ವತಂತ್ರರಾಷ್ಟ್ರ ಗಳ ಇತಿಹಾಸದ ಕಡೆಗೆ ದೃಷ್ಟಿಯನ್ನು ಚೆಲ್ಲಬೇಕು. ತಾಯಿಯು ಸಾಮಾನ್ಯ ಜನರಿಗೆ ಒಬ್ಬ ಸಾಮಾನ್ಯ ಸ್ತ್ರೀಯಾದರೂ ಆಕೆಯು ಮಗನಿಗೆ ದೇವತೆಯಾಗಿರುವಂತೆ ಒಂದು ರಾಷ್ಟ್ರದ ನಿಶಾನೆಯು ಎರಡನೆಯವರಿಗೆ ಬರೇ ಅರಿವೆಯ ತುಂಡಾದರೂ ಆ ದೇಶದ ಅಭಿಮಾನಿಗೆ, ಆ ಮಾತೆಯ ಸುಪುತ್ರನಿಗೆ, ಅದು ಪ್ರಾಣಕ್ಕಿಂತಲೂ ಪ್ರಿಯವಾಗಿರುವದು ಯಾಕೆ? ಆ ಗುಡಿಯ ದರ್ಶನವು ಅವನ ಬಾಲ್ಯದಿಂದಲೇ ಅವನಿಗೆ ಆಗಿ ಆ ಗುಡಿಯ ಕಣಕಣದಲ್ಲಿ ದೇಶಾಭಿಮಾನಿಯಾದ ಬಾಲಕನು ತನ್ನ ಕಣಕಣಗಳನ್ನು ಕೂಡಿಸಿ ಸಾಮರಸ್ಯವನ್ನು ಪಡೆದಿರುವದರಿಂದ ಆ ಗುಡಿಯನ್ನು ಹರಿದರೆ ದೇಶಾಭಿಮಾನಿಯ ಹೃದಯವನ್ನು ಹರಿದಂತಾಗುವದು. ಅದಕ್ಕೆ ಯಾರಾದರೂ ಬೆಂಕಿಯನ್ನು ಹಚ್ಚಿದರೆ ಇವನ ಹೊಟ್ಟೆಯಲ್ಲಿ ಉರಿಯು ಬೀಳುವದು. ಅದರ ಅಲೆಗಳ ಕೂಡ ಇವನ ಹೃದ ಯವೂ ಅಲೆದಾಡುವದು. ಇದನ್ನು ಅವನಿಗೆ ಯಾರು ಕಲಿಸಿದರು? ಚಿಕ್ಕಂದಿನಿಂದ ಹುಟ್ಟಿ ಬೆಳೆದಂಥ ಅತ್ಯುತ್ಕಟವಾದ ನಿಷ್ಕಾಮಪ್ರೇಮದ ಬೀಜವು ಇದನ್ನು ಅವನಿಗೆ ಕಲಿಸಿತು. ಒಂದು ಸೊಟ್ಟ ಜಡ ಪದಾರ್ಥದಲ್ಲಿ ಮಮತೆಯನ್ನು ಇಟ್ಟರೆ ಕೋಟ್ಯಾ ವಧಿ ಜನರು ಅದರ ಬಗ್ಗೆ ಪ್ರಾಣಗಳನ್ನು ನೀಡುವರೆಂದಮೇಲೆ, ಮಹಾತ್ಮನು ಅವರ ರಕ್ತ ಮಾಂಸಗಳಿಂದಲೇ ಹುಟ್ಟಿದಂಥ ಬಾಲಕನಿದ್ದ ಮೇಲೆ ಜನತೆಯಲ್ಲಿಯೂ ಇವನ ಲ್ಲಿಯೂ ಇರುವ ಸಂಬಂಧವನ್ನು ಯಾರು ಬಣ್ಣಿಸಬೇಕು ? ಇವನ ಅಪಮಾನವು ಅಸಂಖ್ಯ ಜನರ ಕಣ್ಣುಗಳನ್ನು ಕೆಂಪು ಮಾಡುವದು; ಇವನಿಗೆ ಕೊಟ್ಟ ಮರ್ಯಾದೆ ಯನ್ನು ಸ್ವೀಕರಿಸಿ ಆನಂದ ಬಡಲಿಕ್ಕೆ ರಾಷ್ಟ್ರದೊಳಗಿನ ಪ್ರತಿಯೊಂದು ಚಿಳ್ಳೆಯು ಸಿದ್ಧ ವಾಗುವದು. ಈ ಪ್ರಾತಿನಿಧಿಕಸ್ವರೂಪವು ಬಂದರೂ, ನಿಷ್ಕಾಮಪ್ರೇಮಪಾಶದಿಂದ ಇವರಿಬ್ಬರೂ ಬಿಗಿಯಲ್ಪಟ್ಟರೂ, ಸಾಮರಸ್ಯವನ್ನು ಹೊಂದಿ ಒಂದಾದವರೂ, ಮಹಾತ್ಮನು ಜನತೆಯ ಅಂಕಿತವಾಗನು. ಮಹಾತ್ಮನು ಜನತೆಯನ್ನು ತನ್ನ ಅಂಕಿತವನ್ನಾಗಿಯೇ ಇಟ್ಟುಕೊಳ್ಳುವನು. ದೀಪದ ಕಾಜು ಬೇರೆ ಬೇರೆಯಾಗಿರುವಾಗ ಬೇರೆ ಬೇರೆ ಬಣ್ಣದ ಬೆಳಕನ್ನು ಕೊಡುವಂತೆ ಎಂಥ ಮಹಾತ್ಮನು ರಾಷ್ಟ್ರದಲ್ಲಿ ಹುಟ್ಟುವನೋ ಅಷ್ಟುಷ್ಟು ಬಗೆ ಯಾಗಿ ರಾಷ್ಟ್ರವು ಪರರಿಗೆ ಕಾಣುವದು. ನೆಪೋಲಿಯನ್ನನಂಥ ಸ್ವಾರ್ಥಿಯು ಇದರ

ದುರುಪಯೋಗವನ್ನು ಮಾಡಿ ಜಗತ್ತನ್ನೆಲ್ಲ ಪರತಂತ್ರದಲ್ಲಿಡುವ ಪ್ರಯತ್ನವನ್ನು ಮಾಡುವನು. ಆದರೆ ನಮ್ಮ ಬುದ್ಧನು ಮಾತ್ರ ಇದೇ ಶಕ್ತಿಯನ್ನು-ರಾಷ್ಟ್ರಶಕ್ತಿಯನ್ನು-ಜನತಾರೂಪಿಯಾದ ಜನಾರ್ದನನ ಶಕ್ತಿಯನ್ನು ಲೋಕಕಲ್ಯಾಣಾರ್ಥವಾಗಿ ಉಪಯೋಗಿಸುವನು.

ರಾಷ್ಟ್ರದ ಇತಿಹಾಸವೆಂದರೆ ಇಂಥ ಮಹಾತ್ಮರ ಚರಿತ್ರೆಯೇ ಆಗಿದೆ. ಗಂಗಾ
ನದಿಯು ಹಿಮಾಲಯದಲ್ಲಿ ಹುಟ್ಟಿ ಬರಬರುತ್ತ ಎಷ್ಟೋ ಸಣ್ಣ ನದಿಗಳನ್ನು ಸಂಗಡ
ಕರೆದು ಕಡೆಗೆ ದೊಡ್ಡದಾಗಿ ಸಹಸ್ರಮುಖದಿಂದ ಸಮುದ್ರಕ್ಕೆ ಸೇರಿದರೂ ಆ ಇಡೀ
ನದಿಗೆ ಗಂಗೆಯೆಂತಲೇ ಕರೆಯುವರೇ ಹೊರ್ತು ಅದಕ್ಕೆ ಯಮುನೆಯೆಂದು ಕರೆಯುವ
ಲ್ಲ. ಅದೇ ಮೇರೆಗೆ ರಾಷ್ಟ್ರದ ಚೈತನ್ಯವನ್ನು ಬೆಳೆಯಿಸುವ ಸಾವಿರಾರು ಚಿಕ್ಕ
ಂಸ್ಥೆಗಳ ವಿಚಾರಸಾಮರ್ಥ್ಯವನ್ನು ಕೈವಶ ಮಾಡಿಕೊಂಡು ಅದರ ಹೆಜ್ಜೆಯನ್ನು
ುಂದರಿಸುವ ಮಹಾತ್ಮನ ಚರಿತ್ರೆಯಲ್ಲಿ ಆ ಕಾಲದ ಇತಿಹಾಸವೆಲ್ಲವೂ ಅಡಕವಾಗು
ದೆ. ಆದ್ದರಿಂದ ವಾಙ್ಮಯದೊಳಗಾಗಲೀ ಇತಿಹಾಸದೊಳಗಿನ ಆ ಕಾಲವು ಆ
ಂಡಿತನ ಅಥವಾ ಮಹಾತ್ಮನ ಹೆಸರಿನಿಂದ ಕರೆಯಲ್ಪಡುತ್ತದೆ. ರಾಮರಾಜ್ಯವೇನೂ
ಮನೊಬ್ಬನಿಂದೇ ಕಟ್ಟಲ್ಪಡಲಿಲ್ಲ. ಆದರೂ ರಾಮನೇ ಆ ರಾಜ್ಯದ ಜೀವಸ್ವರೂಪಿ
ಾಗಿದ್ದರಿಂದ ಆ ರಾಜ್ಯಕ್ಕೆ ಅವನ ಹೆಸರುಗೂಡಿದ ಹೆಸರು ಬಂತು. ಯಾವದಾದ
ಂದು ರಾಷ್ಟ್ರದ ಇತಿಹಾಸವೆಂದರೆ ಆ ದೇಶದ ರಾಜರಾಣಿಯರು ಹುಟ್ಟಿ ಮಡಿದ
ಗಳ ಪಟ್ಟಿಯಲ್ಲ. ರಾಷ್ಟ್ರವು ಚೈತನ್ಯಯುಕ್ತವಾಗಿದ್ದರೆ ಅದಕ್ಕೆ ಇತಿಹಾಸವಿರುವದು.
ಇತಿಹಾಸವು ರಾಷ್ಟ್ರದ ಜನರ ಇತಿಹಾಸವಿರುವದು. ಪ್ರತಿಯೊಬ್ಬ ಮನುಷ್ಯನಿಗೆ
ವದಾದರೊಂದು ಮಧ್ಯವರ್ತಿಯಾದ ವಿಚಾರವಿರುವಂತೆ, ಒಂದು ಜೀವಿತದ ಗುರಿ
ುವಂತೆ, ಪ್ರತಿಯೊಂದು ರಾಷ್ಟ್ರಕ್ಕಾದರೂ ಇರುವದು. ಅದಕ್ಕೆ ಆ ರಾಷ್ಟ್ರದ ಸಂಸ್ಕೃ
ಂದೆನ್ನುವರು. ಕುಟುಂಬದಲ್ಲಿರುವ ಪ್ರತಿಯೊಬ್ಬ ಮನುಷ್ಯನು ತನ್ನ ವಂಶದ ಲೌಕಿ
ಷ್ಣ ಕಾಪಾಡುವಂತೆ ರಾಷ್ಟ್ರದ ಸಕಲಜನರು ಅದರ ಜೀವಾಳವಾದ ಸಂಸ್ಕೃತಿ
ಷ್ಣ ಕಾಯಲಿಕ್ಕೆ ಹೆಣಗುತ್ತಿರುವರು. ಈ ಸಂಸ್ಕೃತಿಯ ಮಾರ್ಗದಲ್ಲಿಯೇ ಒಂದು
ಮುಂದೆ ಹೋದರೆ ಅದೇ ಒಂದು ಹೊಸ ಯುಗವಾಗುವದು. ಹೊಸ
ದ ಶಿಲ್ಪಿಯು ಮಹಾತ್ಮನೇ ಆಗಿರುವನು. ಅವನೇ ರಾಷ್ಟ್ರದ ವಿಭೂತಿಯು.

—ಶ್ರೀಧರ.

॥ ಓಂ ನಲ್ ॥

# 'ವಿಸರ್ಜನ'ದ ಪ್ರಸ್ತಾವನೆ

ಓದುಗರಿಗೆ,

'ಚೌಸಷ್ಟಿ ಕಲೆಗಳು. ಎಂಬ ಮಾತನ್ನು ತಾವು ಮಾತಿನಲ್ಲಿ ಕೇಳಿರಬಹುದು, ಗ್ರಂಥಗಳಲ್ಲಿ ಓದಿರಬಹುದು. ಈ ಅರುವತ್ತುನಾಲ್ಕು ಕಲೆಗಳು ಮಾನವಸೃಷ್ಟಿಯೊಳ ಗಿನ ಅರವತ್ತುನಾಲ್ಕು ಶಕ್ತಿಗಳು. ನಿಸರ್ಗರಮಣೀಯವಾದ ದೇವಸೃಷ್ಟಿಯನ್ನು ಈ ಅರವತ್ತುನಾಲ್ಕು ರೀತಿಯಲ್ಲಿ ತನಗೆ ರುಚಿಯಾಗುವಂತೆ ಮಾನವನು ಮಾಡಿಕೊಂ ಡಿರುವನು. ದೇವಸೃಷ್ಟಿಯೊಳಗಿನ ರಮಣೀಯತೆಯ ದರ್ಶನವಾಗಿ, ಅದರ ಸಾಕ್ಷಾ ತ್ಕಾರವು ಸಾಮಾನ್ಯರಿಗೂ ಕೆಲಮಟ್ಟಿಗಾದರೂ ಆಗಲೆಂದು ಈ ಕಲೆಗಳ ಮೂಲಕ ಮಾನವನ ದಿವ್ಯಶಕ್ತಿಯು ಪ್ರಯತ್ನವು ಸಾಗಿರುವದು. ದೇವನು ಹೂವುಗಳನ್ನು ಹುಟ್ಟಿ ಸಿದನು; ಮಾನವನು ಹಾರವನ್ನು ಹೆಣೆದುಕೊಂಡನು. ದೇವನು ಅಂಗಾಂಗಗಳನ್ನು ಕೊಟ್ಟಿರುವನು; ಮಾನವನು ನೃತ್ಯ ಮೊದಲಾಗಿ ಅಭಿನಯಶಾಸ್ತ್ರವನ್ನೆ ಮಾಡಿಕೊಂ ಡನು. ದೇವನು ಬಿದಿರನ್ನುಂಟು ಮಾಡಿದನು; ಮಾನವನು ಅದರಿಂದ ಮಾಡಿಕೊಂ ಡದ್ದು ಕೊಳಲು. ಅಂತೂ ವಿಶ್ವಕರ್ಮನ ಬಂಗಾರದಲ್ಲಿ ತನ್ನ ರಂಗುರೂಪಿನ ಹೊಳವು ಸುಳುವುಗಳನ್ನು ಬರೆದು ಮಾನವನು ಮತ್ತೆ ತಿರುಗಿ ಅದನ್ನು ಬಂಗಾರವನ್ನಾಗಿ ಮಾಡಿ ಕೊಂಡಿರುವನು. ಈ ಅರುವತ್ತುನಾಲ್ಕು ಕಲೆಗಳಲ್ಲಿ ಗಾಯನ, ಚಿತ್ರ, ಶಿಲ್ಪ ಮೊದಲಾ ದವುಗಳು ಮೇಲ್ತರಗತಿಯವುಗಳು.

ಗಾಯಕನು ಸ್ವರಸಮ್ಮೇಳನದಿಂದೊಂದು ನಾದಮಂದಿರನ್ನು ನಿರ್ಮಿಸುವನು. ಚಿತ್ರಗಾರನು ಕಾಮನ ಬಿಲ್ಲನ್ನೆ ಕುಂಚವನ್ನಾಗಿ ಮಾಡಿ ಹೊಸದೊಂದು ಗಂಧರ್ವನಗರ ವನ್ನು ರೂಪುಗೊಳಿಸುವನು. ಕೈವಾಡದ ಶಿಲ್ಪಿಯು ವಿವಿಧಾಕಾರಗಳನ್ನು ಹಲವು ಬಗೆಗಳಲ್ಲಿ ಹೊಂದಿಕೆಗೂಡಿಸಿ ಆ ಅಪೂರ್ವ ಆಕೃತಿಗಳನ್ನು ಗುಡಿಗೋಪುರಗಳನ್ನಾಗಿ ಕಲ್ಲಿನಲ್ಲಿ ಅರಳಿಸುವನು. ಕವಿಯು ಹೃದಯಕ್ಕೊಂದು ಹಂದರವೆಂದು ಭಾವಭಾವ ಗಳ ಬಳ್ಳಿವಾಡಗಳನ್ನು ರಚಿಸುವನು. ಮಾತರಿವನು, ಸಭಿಕರ ಚಿತ್ತವೃತ್ತಿಗಳನ್ನು, ಗೋವಳನು ಗೋವುಗಳನ್ನು ಅಟ್ಟಿ ತರುವಂತೆ ತನ್ನ ಈಪ್ಸಿತ ಭಾವನೆಯ ಮೆಟ್ಟಿಗೆ ಮಾತಿನ ಭಂಗಿಗಳಿಂದ ಅನಾಯಾಸವಾಗಿ ತರುವನು. ನರ್ತನವು ಮೌನದ ತಂತ್ರ ಶಾಸ್ತ್ರ. ನರ್ತಕಿಯು ತನ್ನ ನೇತ್ರಪಲ್ಲವಿ–ಕರಪಲ್ಲವಿಗಳಿಂದ ಪ್ರೇಕ್ಷಕರ ಮನದ ನೌಕೆಗ ಳನ್ನು ಅವಿದಿತ ಆನಂದದ ಒಂದು ಸಿಂಧುವಿನ ಮಧ್ಯದಲ್ಲಿ ತಂದು ತೇಲಬಿಡುವಳು. ಹೀಗಾಗಿ ಈ ಕಲೆಗಳೆಲ್ಲ ಅಂತರ್ಯಾಮಿಯು ತನ್ನ ವಿಶ್ವರೂಪದೊಳಗಿನ ಆನಂದವನ್ನು ಮುಟ್ಟಲು ತಾನೇ ಕಟ್ಟಿಕೊಂಡ ಮೆಟ್ಟಲಿನ ಸಾಲಿನಂತೆ ಕಂಗೊಳಿಸುವವು.

ನಾಟಕವು ಕಲೆಯಲ್ಲ; ವಿವಿಧ ಕಲೆಗಳ ಸಂಗಮವು. ಕಲೆಗಳಿಂದಲೇ ರೂಟ್ಟಿ ಕೊಂಡ ಒಂದು ನವೀನಪ್ರಪಂಚ. ಸರ್ವಕಲೆಗಳ ಸಫಲತೆಯು ನಾಟ್ಯವಲ್ಲಿದೆ.

ಈ ಸಂಸಾರವನ್ನೆ ಒಂದು ವೇದವೆಂದು ಕಲ್ಪಿಸಿದರೆ, ನಾಟಕವು ಅದರ ರಹಸ್ಯ ವನ್ನುದ್ಘಾಟಿಸುವ ಭಾಷ್ಯವೆಂದು ಹೇಳಬಹುದು. ನಾಟಕಕ್ಕೆ ಪಂಚಮವೇದವೆಂದು ವ್ಯರ್ಥವಾಗಿ ಪೂರ್ವಿಕರು ಅಂದಿಲ್ಲ. ಯೋಗ್ಯ ಉಪಯೋಗ ಮಾಡಿಕೊಂಡಲ್ಲಿ ಅದು ವೇದದಂತೆ ಸರ್ವಮಾನ್ಯವಾಗಬಹುದು; ದುರುಪಯೋಗವಾದಲ್ಲಿ ಪಂಚಮರಂತೆ ಮುಟ್ಟಲು ಬಾರದುದೂ ಅದಾಗಬಹುದು. ಶ್ರೇಯದ ತುದಿದೋರುವ ಸೋಪಾನ ಪಂಕ್ತಿಯಾಗುವುದೇ ಅದರ ಉಪಯೋಗ; ಪ್ರೇಯದ ತಳಕ್ಕೊಯ್ಯುವ ಜಾರುಬಂಡಿ ಯಾಗುವುದೇ ಅದರ ದುರುಪಯೋಗ. 'ಪ್ರತಿಮಾ' 'ಶಾಕುಂತಲ' 'ಉತ್ತರರಾಮಚರಿತ್ರೆ' ಗಳು ಅದರ ಉಪಯೋಗವನ್ನೂ ಭಾಣಪ್ರಪಂಚವೆಲ್ಲ ಅದರ ದುರುಪಯೋಗವನ್ನೂ ಸೂಚಿಸುತ್ತವೆ.

ಈಗ ನಮ್ಮ ತಿರುವುಮುರುವು ಪ್ರಪಂಚದಲ್ಲಿ ನಾವು ಅನೇಕ ಕೆಲಸಗಳಿಗೆ ಕೈ ಹಾಕಿರುವೆವು. ಹೊಲೆಯರ ಹೊಲೆತನವನ್ನು ಕಳೆಯದೆ, ಇತರರನ್ನು ಹೆಚ್ಚಿಗೆ ಮಡಿಯು ಳ್ಳವರನ್ನಾಗಿ ಮಾಡದೆ, ಇಬ್ಬರ ಕಲೆಬೆರಿಕೆಮಾಡಿ ಇಬ್ಬರ ಸಮ್ಮೇಲನದಿಂದಲೇ ಏನೋ ಹಿತವಾಗತಕ್ಕದ್ದಿದೆಯೆಂದು ನಾವು ತಿಳಿದಿರುವೆವು. ಗಂಡಸರಿಗೆ ನಿಗ್ರಹದ ಶಿಕ್ಷಣ ಕೊಡದೆ, ಹೆಣ್ಣುಮಕ್ಕಳಿಗೆ ಶುದ್ಧಜೀವನದ ಸಂಸ್ಕಾರ ಮಾಡದೆ ಇಬ್ಬರನ್ನು ಅನಿ ರ್ಬಂಧ ಸಹವಾಸದಲ್ಲಿ ತಂದು ಇದರಿಂದಲೇ ವೀರ್ಯವತ್ತರವಾದ ಜೀವನವೊಂದು ಉಂಟಾದೀತೆಂದು ನಾವು ಹಾದಿ ಕಾಯುತ್ತಿರುವೆವು. ನಾಟಕವಸ್ಥಿತಿಯಾದರೂ ಇದೆ. ನಾಟಕದಿಂದ ನೀತಿಮಯ ಜೀವನದ ಪ್ರವರ್ತನೆಯಾದೀತೆಂದು ನಮ್ಮ ಅಪೇಕ್ಷೆ. ಆದರೆ ನಟರಲ್ಲಿ ಬದಲಿಲ್ಲ; ನೋಡುವವರಲ್ಲಿ ಬದಲಿಲ್ಲ; ನಾಟಕದಲ್ಲಿ ಬದಲಿಲ್ಲ; ಬರಿ ನಮ್ಮ ತಿರುವುಮುರುವು ಪ್ರಪಂಚದ ಅಪೇಕ್ಷೆಯ ಉಚ್ಚಾರದಲ್ಲಷ್ಟೇ ಬದಲು. ಅಪೇಕ್ಷೆಯು ಪ್ರಾಮಾಣಿಕವೂ, ಪ್ರಬಲವೂ ಇದ್ದ ಪ್ರಮಾಣದಲ್ಲಿ ನಾಟಕದಲ್ಲಿಯೂ, ನಟರಲ್ಲಿಯೂ, ನೋಡುವವರಲ್ಲಿಯೂ ಬದಲಾಗಬಹುದು. ನಾಟಕವೊಂದು ನೀತಿಶಿಕ್ಷಣದ ಸಾಧನ ವಾಗಬೇಕೆಂಬ ಹಂಬಲ ಉಂಟಾದಂದಿನಿಂದ, ನಾಟಕದಲ್ಲಿಯೂ ನೀತಿಯ ಹರಟೆಗೆ ಸ್ಥಳ ದೊರೆಯುಹತ್ತಿದೆ. ಸೂಳೆಯರ ರಂಗವಿಲಾಸಗಳನ್ನು ವಿಕಟವಾಗಿ ವರ್ಣಿಸುವ ನಾಟಕಕಾರನೂ 'ಹೀಗೆ ಮಾಡಬಾರದು. ಇದರಿಂದ ಇಹ ಪರಗಳಲ್ಲಿ ಸುಖವಿಲ್ಲ; ಹಾದ ರದ ಸುಖವು ಕ್ಷಣ ಭಂಗುರುವು. ಪತಿವ್ರತೆಯರಿಗೆ ಪರಲೋಕದಲ್ಲಿ ಉತ್ತಮಗತಿಯಾ ಗುವದು. ಪಾಪಿಗಳಿಗೆ ನರಕವು ನಿಶ್ಚಿತ' ಇದೇ ಬಗೆಯ ಹರಟೆಯನ್ನು ಯಾವದಾದ ರೊಂದು ಪಾತ್ರದಿಂದ ಕೊಚ್ಚಿಸಿ, ನೀತಿನಿರೂಪಣದ ಕಾರ್ಯಮಾಡಿ ತಾನು ಧನ್ಯನಾದ ನೆಂದು ತಿಳಿಯುತ್ತಾನೆ. ಕೆಲವರು ಮಾತುಮಾತಿಗೆ ನೀತಿಯ ಹರಟೆಯನ್ನು ಹೊಸೆದು ನಾಟಕವನ್ನು ಸಾಭಿನಯಪುರಾಣವನ್ನಾಗಿ ಮಾಡುವರು. ಕೆಲವು ಕೀರ್ತನಕಾರರು

ನಟರಂತೆನರ್ತಿಸುವರು. ಕೆಲವು ನಟರು ಕೀರ್ತನಕಾರರಂತೆ ವರ್ತಿಸುವರು. ಅಂತೂ ಈ ಅಭಿನವಸಂಮಿಶ್ರಣದ ಪರಿಣಾಮವೇನಾಗಿದೆಯೆಂದರೆ ನಾಟಕದಲ್ಲಿ ರುಚಿಕಡಿಮೆಯಾಗಿದೆ, ಕೀರ್ತನದಲ್ಲಿ ಪಾವಿತ್ರ್ಯ ಕಡಿಮೆಯಾಗಿದೆ. ನಿಜವಾಗಿ ಬೇರೆ ಹಾದಿಯಿಂದ ಬದಲು ಮಾಡಬೇಕಾಗಿದೆ. ಈ ಬದಲು ಗುರುರವೀಂದ್ರರ ನಾಟಕಗಳಲ್ಲಿ ಕಂಡುಬರುವದು. ನವೀನಮಾರ್ಗಪ್ರವರ್ತರಾದ ಶ್ರೀರಾಮಕೃಷ್ಣಪರಮಹಂಸ, ವಿವೇಕಾನಂದ, ಅರವಿಂದ ಘೋಸ; ಅವನೀಂದ್ರಟಾಗೋರ, ಜಗದೀಶಚಂದ್ರ ಬೋಸರನ್ನು ಹಡೆದ ವಂಗಮಾತೆಯೇ ನಾಟಕದಲ್ಲಿ ನೀತಿಪ್ರವರ್ತನೆಯು ಸಾಧನವನ್ನು ಕಂಡುಹಿಡಿದ ಗುರುರವೀಂದ್ರರನ್ನು ಹಡೆದಳು. ಗುರುರವೀಂದ್ರರ ನಾಟ್ಯವಸ್ತುವಿನಲ್ಲಿಯೂ, ಭಾಷೆಯಲ್ಲಿಯೂ, ಪಾತ್ರಸ್ವಭಾವಪ್ರಕಟನೆಯಲ್ಲಿಯೂ, ಈ ನಾಟಕಗಳನ್ನು ಆಡುವ ನಟರಲ್ಲಿಯೂ ಅವುಗಳನ್ನು ನೋಡಿಬರುವ ಪ್ರೇಕ್ಷಕರ ಭಾವನೆಯಲ್ಲಿಯೂ ಒಂದು ಬದಲಾಗಿದೆ. ಆ ಬದಲಿನಿಂದಲೇ ಈ ನಾಟಕಗಳಿಗೆ ಒಂದು ವಿಶಿಷ್ಟಪ್ರಾಶಸ್ತ್ಯವು ಬಂದಿದೆ.

೨.

ಗುರುರವೀಂದ್ರರು ತಮ್ಮ 'ಜೀವನಸ್ಮೃತಿ'ಯಲ್ಲಿ ಹೀಗೆ ಬರೆದಿದ್ದಾರೆ :—

"ನಾನು ವಿಲಾಯತಿಗೆ ಹೋಗುವ ಮೊದಲು, ಆಗಾಗ್ಗೆ ಸಾಹಿತಿಗಳ ಸಂಮೇಲನಗಳಾಗುತ್ತಿದ್ದವು; ಹಾಡುವುದು, ಬಾರಿಸುವುದು, ಪದಪದ್ಯಗಳಸ್ಸನ್ನುವುದು, ಕೊನೆಗೆ ಕೊಂಚ ಫಲಾಹಾರ, ಹೀಗಿರುತ್ತಿತ್ತು ಅವರ ಕಾರ್ಯಕ್ರಮ. ನಾನು ವಿಲಾಯತಿಯಿಂದ ಮರಳಿಬಂದಬಳಿಕ ಇಂಥದೊಂದು ಸಂಮೇಲನವು ಜರುಗಿತು; ಅದೇಕಡೆಯದೂ ಆಯಿತು. ಆ ಸಂಮೇಲನದ ರಂಜನಾರ್ಥವಾಗಿ 'ವಾಲ್ಮೀಕಿಪ್ರತಿಭಾ' ಎಂಬ ನಾಟಕವನ್ನು ಬರೆದೆನು. ನಾನು 'ವಾಲ್ಮೀಕಿ' ಯಾಗಿದ್ದೆ; ನನ್ನ ಅಣ್ಣನ ಮಗಳಾದ ಪ್ರತಿಭೆಯು ' ಸರಸ್ವತಿ ' ಯಾಗಿದ್ದಳು.

× × ×

' ವಾಲ್ಮೀಕಿ ಪ್ರತಿಭಾ ' ಈ ನಾಟಕದೊಳಗಿನ ನವರೀತಿಗೆ ದೊರೆತ ಜಯದಿಂದ ಉತ್ಸಾಹಿತನಾಗಿ, ಅದೇ ಜಾತಿಯ ಸಂಗೀತನಾಟಕಕ್ಕೆ ಸೇರಿದ ಇನ್ನೊಂದು ಆಟವನ್ನು ಬರೆದೆನು. ಅದರ ಹೆಸರು 'ಕಾಲಮೃಗಯಾ'. ದಶರಥರಾಜನು ಕುರುಡರಾದ ಮುಪ್ಪಿನ ತಂದೆತಾಯಿಗಳ ಊರುಗೋಲಂತಿದ್ದ ಒಂದೇ ಒಂದು ಮಗುವಾದ ಶ್ರಾವಣನನ್ನು ಮಬ್ಬುಗತ್ತಲಲ್ಲಿ ಮದ್ದಾನೆಯೆಂದು ಭ್ರಮಿಸಿ ಕೊಂದದ್ದೇ ಆ ಆಟದ ಕಥಾವಸ್ತುವು. ಅದನ್ನು ಆಡುವದಕ್ಕಾಗಿ ನಮ್ಮ ಹೊರಮಾಳಿಗೆಯಮೇಲೆ ಅಟ್ಟವನ್ನು ಹಾಕಿದ್ದೆವು. ಆಟವನ್ನು ನೋಡಿದವರೆಲ್ಲರೂ ಅದರೊಳಗಿನ ಕರುಣಾರಸದಿಂದ ಕರಗಿ ಹೋದರು.

\+ + +

ಈ ಎಲ್ಲ ಸಂಗೀತನಾಟಕಗಳನ್ನು ಆಡಿತೋರಿಸುವದರಲ್ಲಿ ನಾನೇ ಮುಂದಾಗುತ್ತಿದ್ದೆನು. ಚಿಕ್ಕಂದಿನಿಂದಲೂ ವೇಷಹಾಕಿ ಆಡುವದರಲ್ಲಿ ನನಗೆ ರುಚಿ; ಅದಕ್ಕಾಗಿ

ನನ್ನಲ್ಲಿ ವಿಶೇಷಯೋಗ್ಯತೆಯೂ ಇತ್ತೆಂದು ನನ್ನ ದೃಢವಿಶ್ವಾಸ. ನನ್ನ ವಿಶ್ವಾಸವು ಸಾಧಾರವಾಗಿತ್ತೆಂದು ನಾನು ಪ್ರಮಾಣಿಸಿಯೂ ಕೊಟ್ಟಿದ್ದೆನು. ನನ್ನ ಅಣ್ಣನಾದ ಜ್ಯೋತೀಂದ್ರನು ಬರೆದ ಒಂದು ಪ್ರಹಸನದಲ್ಲಿ ನಾನು 'ಅಲೀಕಬಾಬು'ವಿನ ಪಾತ್ರವನ್ನು ಈ ಮೊದಲು ವಹಿಸಿದ್ದೆನು; ಅದೂ ಒಮ್ಮೆ. ಅಂತೂ ಅಭಿನಯದಲ್ಲಿ ಇವು ನನ್ನ ಪ್ರಥಮಪ್ರಯತ್ನಗಳಾಗಿದ್ದವು. ನಾನು ಆಗ ಚಿಕ್ಕವನಿದ್ದೆನು; ನನ್ನ ಕಂಠಕ್ಕೆ ಕಷ್ಟವಾಗಲಿ ದಣಿವಾಗಲಿ ಗೊತ್ತಿರಲಿಲ್ಲ.

\+ \+ \+

ಬರೆಯುವುದೂ ಹಾಡುವುದೂ, ಆಡುವುದೂ, ಅಂತೂ ಹಾದಿಕಂಡತ್ತ ಹರಿಯುತ್ತಿದ್ದೆವು ನಾವು. ಆಗ್ಗೆ ನನಗೆ ಅದೇ ಇಪ್ಪತ್ತುವರ್ಷ."

ರವೀಂದ್ರರು ಚಿಕ್ಕಂದಿನಿಂದ ನಟರು, ನಾಟಕಕಾರರು. ಅವರಿಗೆ ಸಹಾಯಕರಾದ ನಟರು ಕುಟುಂಬದೊಳಗಿನವರು, ಸಂಸ್ಕಾರವಂತರು; ಪೋಲಿಗಳಾಗಲಿ, ಘಟಿಂಗರಾಗಲಿ ಅಲ್ಲ. ನೋಡುವವರು ಸಾಹಿತಿಗಳು, ರಸಿಕರು, ವಿದ್ಯಾಸಂಪನ್ನರು; ರೊಕ್ಕವನ್ನು ಕೊಟ್ಟು ಹಾಳು ರಂಜನೆಯಲ್ಲಿ ಕಾಲವನ್ನು ಬೀಳುಗಳೆಯಲು ಬಂದ ಉಂಡಾಡಿಗಳಲ್ಲ. ಅವರು ಬರೆದ ಆಟಗಳು ಪ್ರತಿಮಾನವನಿಗೆ ಅನುಪಮ ಅನುಭವದ ಕಾಲಕ್ಕೆಗೆವ ರಸದ ರಾಸಲೀಲೆಯಂಥವುಗಳು; ಅಸಂಭವ ಭಾವಾಭಾಸಗಳಲ್ಲ. ಇಂಥವುಗಳನ್ನಾಡುವದರಿಂದ, ವೀರ, ಕರುಣ, ಭಕ್ತಿ ಮೊದಲಾದ ರಸಗಳ ಝರಿಯು ಪ್ರೇಕ್ಷಕರ ಮನಮನದಲ್ಲಿ ಸೆಲೆಯೊಡೆದು ಹರಿಯಹತ್ತುವುದು. "ಹಾಗೆ ಮಾಡಿರಿ ಹೀಗೆ ಮಾಡಿರಿ" ಎಂದು ಹೇಳಿಸಿಕೊಳ್ಳುವಷ್ಟು ಕಲ್ಲಾಗಿ ಕರಗದೆ ಕುಳಿತವನೇ ಇಂಥ ನಾಟಕಗಳ ಪ್ರೇಕ್ಷಕರಲ್ಲಿ ಸಿಕ್ಕುವುದು ಅಪರೂಪ. ನಾಟ್ಯಸೃಷ್ಟಿಯಲ್ಲಿಯ ಪರದುಃಖವನ್ನು ಕಂಡು ಕಣ್ಣೀರು ಸುರಿಸಿದವನು ನಿಜಸೃಷ್ಟಿಯಲ್ಲಿಯ ಪರದುಃಖವನ್ನು ಕಂಡು ಅದನ್ನು ನಿವಾರಿಸಲು ಪ್ರಯತ್ನಪಡದೆ ಉಳಿಯಬಹುದೇ? ಅಲ್ಲಿ ಭಕ್ತಚರಿತ್ರವನ್ನು ಕಂಡು ಆನಂದಾಶ್ರುಗಳನ್ನುದುರಿಸಿದವನು, ಸಂಸಾರದಲ್ಲಿ ಸಾಧುಸಂತರನ್ನು ಮನ್ನಿಸದಿರುವನೇ? ಅಲ್ಲಿಯ ಪರಾಕ್ರಮವನ್ನು ಕಂಡು ಬಾಹುಸ್ಫುರಣವನ್ನು ಹೊಂದಿದವನು ವ್ಯವಹಾರದಲ್ಲಿ ಹೇಡಿಯಾಗಿರಬಹುದೇ! 'ಶೂರರಾಗಿರಿ ವೀರರಾಗಿರಿ; ಹೀಗೆ ಮಾಡಿದರೆ ಪುಣ್ಯವಂತರಾಗುವಿರಿ, ಹಾಗೆ ಮಾಡಿದರೆ ಪಾಪಿಷ್ಠರಾಗುವಿರಿ;' ಇಂತು ಮೊದಲಾಗಿ ನೀತಿಯ ಕಷಾಯವನ್ನು ಕುಡಿಸುವದರಿಂದ ಅನೀತಿಯ ರೋಗವು ಹೋಗದು. ರಸಾನುಭವದಿಂದಲೇ ಸತ್ಪ್ರವೃತ್ತಿ! ಇದೇ ಸಕಲಸಾಹಿತ್ಯದ ಗುಟ್ಟು. ರಸಸಾಹಿತ್ಯವಿಲ್ಲದ್ದರಿಂದಲೂ ಭಾವಾಭಾಸಗಳ ಪ್ರಾಬಲ್ಯದಿಂದಲೂ ಇಂದಿನ ವಾಙ್ಮಯವು ತನ್ನ ಸನ್ಮಾರ್ಗಪ್ರವರ್ತನ ಧರ್ಮವನ್ನು ಕಳೆದುಕೊಂಡಿದೆ. ಜನರಿಗಿನ್ನೂ ತಮ್ಮ ಪತಿತಜೀವನದ ಜಾಜ್ವಲ್ಯ ಸ್ಮರಣವಾಗಿಲ್ಲ. ನಾಟಕಸಂಸ್ಥೆಯು ಅಸ್ಪೃಶ್ಯರಂತೆ ಉದ್ಧಾರಕರ ಹಾದಿಯನ್ನು ಕಾಯುತ್ತಿದೆ. ಅದಿರಲಿ.

ರವೀಂದ್ರರ ನಾಟಕಗಳಲ್ಲಿ ಎರಡು ವರ್ಗಗಳನ್ನು ಮಾಡಬಹುದು. 'ಪೋಸ್ಟ ಆಫೀಸ' (ಅಂಚೆಮನೆ), 'ದ ಕಿಂಗ ಆಫ್ ದ ಡಾರ್ಕ ಚೆಂಬರ' (ಕತ್ತಲೆ ಮನೆಯೊಳಗಿನ ಅರಸು) ಇವುಗಳು ಒಂದು ವರ್ಗದವು. 'ವಿಸರ್ಜನ' 'ಮಾಲಿನೀ' 'ಸಂನ್ಯಾಸಿ' 'ರಾಜಾರಾಣಿ' ಇವು ಇನ್ನೊಂದು ವರ್ಗದವು. ಮೊದಲನೆ ವರ್ಗದ ನಾಟಕಗಳಲ್ಲಿ ಧ್ವನಿತವಾಗುವ ತತ್ತ್ವವು ಹೊಳೆದರೆ ಪ್ರೇಕ್ಷಕರಿಗೆ ಆನಂದವಾಗುವದು. ಇಲ್ಲದಿದ್ದರೆ ಆಟವು ಹುಡುಗಾಟಿಕೆಯಂತೆ ಬರಿ ವಿಚಿತ್ರವಾಗಿ ತೋರುವದು. ಅಭಿನವ ವಂಗಚಿತ್ರಗಳ ತತ್ತ್ವವರಿಯದವರು ಅವುಗಳ ಚೇಷ್ಟೆಮಾಡುವಂತೆ ಈ ನಾಟಕಗಳನ್ನೂ ಹುರುಳಿಲ್ಲದವುಗಳು ಎಂದು ತಿಳಿಯುವ ಪಂಡಿತರುಂಟು. ಬೆಲ್ಜಮದ ಕವಿಶೇಖರನಾದ ಮಾರಿಸ್ ಮೇಟರಲಿಂಕನ 'ದ ಬ್ಲ್ಯೂ ಬರ್ಡ'(ನೀಲಪಕ್ಷಿ),'ದ ಬ್ಲಾಯಿಂಡ' (ಕುರುಡರು) ಎಂಬ ನಾಟಕಗಳಾದರೂ ಒಂದು ಬಗೆಯಲ್ಲಿ ಇದೇ ಜಾತಿಯವು. ಆದರೆ ರವೀಂದ್ರರ ನಾಟಕಗಳು ಮೇಟರಲಿಂಕನ ನಾಟಕಗಳಿಗಿಂತ ಹೆಚ್ಚು ರಸವತ್ತಾಗಿರುವವು. ಆದರೆ ಇಬ್ಬರಲ್ಲಿಯ ವ್ಯಂಗ್ಯಸರಣಿ ಮಾತ್ರ ಅಷ್ಟೇ ಪ್ರಗೂಢವಾಗಿರುವದು. ಎರಡನೆಯ ವರ್ಗದ ನಾಟಕಗಳಲ್ಲಿ ವ್ಯಂಗ್ಯಸರಣಿಯೇನೋ ಇದೆ; ಮಾತುಗಳೂ ಬೋಳುಬೋಳಿಲ್ಲ; ಭಾವವು ಬತ್ತಲೆಯಾಗಿ ಉತ್ತಾನತೆಯನ್ನು ಹೊಂದಿಲ್ಲ. ವಿಚಾರಗಳೂ ಬಳಿಸಿ ಹಳಿಸಿದವುಗಳಲ್ಲ; ಹೂವುಗಳಲ್ಲಿಯೂ ಹಳ್ಳಗಳಲ್ಲಿಯೂ ಹೊಳೆಯುವ ಸಹಜರಮಣೀಯತೆಯೂ ಅದರಲ್ಲಿ ಇದೆ. ಆದರೆ ಅರ್ಥದೊಳಗೆ ಅರ್ಥಹುಟ್ಟುವ ಇಂದ್ರಜಾಲವಿಲ್ಲ, ಕೂಟಪ್ರಶ್ನೆಯಂತೆ ತಲೆ ತಿನ್ನುವ ಮಾತವಿಲ್ಲ. ರಘುಪತಿಯ ದುರಾಗ್ರಹದ ಮತ್ತು ಗೋವಿಂದಮಾಣಿಕ್ಯನ ಸದಾಗ್ರಹದ ಅರ್ಥವಾಗುವಂತಿದೆ. ಜಯಸಿಂಹನ ಮತ್ತು ಗುಣವತಿಯ ಮೋಹವು ನಮ್ಮ ಅನುಭವದ ಹೊರಗಿಲ್ಲ. ಅರ್ಪಣೆಯಲ್ಲಿದ್ದ ಆಕರ್ಷಕ ಗುಣವು ನಮಗೆ ತೋಚದ ಮಾತಲ್ಲ. ದೇವಿಯ ವಿಸರ್ಜನೆಯೆಂದರೆ ದೇವಿವಿಸರ್ಜನೆ. ಪ್ರಾಣಹಿಂಸೆಯಾಗಬಾರದೆಂದರೆ ಪ್ರಾಣಹಿಂಸೆಯಾಗಬಾರದು; ಇದೇ ಅದರ ಅರ್ಥ. ಒಳಗೊಂದು ಹೊರಗೊಂದು ಅರ್ಥವಿಲ್ಲ. ಧರ್ಮರೂಢಿಯ ನೆವದಿಂದಾಗುತ್ತಿರುವ ಪ್ರಾಣಿಹಿಂಸೆಯಲ್ಲಿ ಆತ್ಮವಂಚನೆಯಿದೆ; ಇದರಿಂದ ಗೋವಿಂದಮಾಣಿಕ್ಯ, ರಘುಪತಿ, ಗುಣವತಿ, ಜಯಸಿಂಹ, ಮೊದಲಾದವರು ತಮ್ಮ ತಮ್ಮ ಪರಿಯಿಂದ ಹೇಗೆ ಮುಕ್ತರಾದರು ಎಂಬದನ್ನು ಈ ನಾಟಕದಲ್ಲಿ ತೋರಿಸಿದೆ. ಇದರಿಂದ ನಾವು ಕಲಿಯಬೇಕಾದದ್ದೇನು ? ಎಂದು ಕೇಳಿದರೆ ಬುದ್ಧಿವಂತರು ಮಾತುಮಾತಿಗೂ, ಇದರಿಂದ ಕಲಿಯಬೇಕಾದ ಸಂಗತಿಗಳು ಹೇರಳವಾಗಿವೆ. ಒಂದೇ ಎಂದು ಹೇಳಲು ಬರದು. ತಮ್ಮ ತಮ್ಮ ಶ್ರದ್ಧೆಗಾಗಿ ತಮ್ಮ ತಮ್ಮ ಸರ್ವಸ್ವವನ್ನೂ ಅರ್ಪಿಸಲು ಪ್ರತಿಯೊಬ್ಬನು ಸಿದ್ಧನಿರಬೇಕೆಂದು ಕಲಿಯಬಹುದು. ಯಾವ ಅಮಾನುಷಕೃತ್ಯಗಳಿಗೂ ದೇವದೇವನ ಸಂಮತಿಯಿಲ್ಲ; ನಮ್ಮ ಅವಿವೇಕದಿಂದ ನಾವೇ ಪ್ರತಿಷ್ಠೆಮಾಡಿದ್ದನ್ನು ನಮ್ಮ ವಿವೇಕದಿಂದ ವಿಸರ್ಜನೆಮಾಡುತ್ತೇವೆ ಎಂದು ಕಲಿಯಬಹುದು. ದೈವಭಕ್ತಿಯು ಎಲ್ಲಕ್ಕೂ

ಮೇಲೆಂದು ಕಲಿಯಬಹುದು. ಪ್ರಾಣಹಿಂಸೆಯು ಅನೀತಿಕರವೆಂದೂ ಕಲಿಯಬಹುದು.
ಪ್ರೇಕ್ಷಕರ ಸಂಸ್ಕಾರಸಂಪನ್ನವಾದ ರಸಿಕ ಅಂತಃಕರಣಕ್ಕೆ ಅನುಭವ ಬಂದುದೆಲ್ಲ
ಒಂದಿಲ್ಲೊಂದು ಸತ್ಪ್ರವೃತ್ತಿಗೆ ಪ್ರಚೋದಕವಾಗದಿರಲಾರದು. ಅಂತಃಕರಣವನ್ನು
ಜಾಗ್ರತಮಾಡುವದೇ ಕವಿಯ ಕೆಲಸ. ಕಲಿಯುವದೋ ಅವರವರದು !

ಈ ನಾಟಕದ ಪ್ರಯೋಜನವೇನೆಂದು ಕೇಳಬಹುದು. ಸಪ್ರಮಾಣವಾಗಿ
ಮಾತಾಡುವದಾದರೆ ' ವಿಸರ್ಜನ 'ವು ಈಗಾಗಲೇ ತಕ್ಕನುಷ್ಟಿಗೆಗೆ ಲಬ್ಧಪ್ರಯೋಜನ
ವಾಗಿದೆ ಎಂದು ಹೇಳಬಹುದು. ಯಾಕಂದರೆ ಈ ಆಟವನ್ನು ಆಡಿ ತೋರಿಸಿದಂದಿ
ನಿಂದ ಶಾಂತಿನಿಕೇತನದ ಸುತ್ತುಮುತ್ತಲಿನ ಎಷ್ಟೋ ಹಳ್ಳಿಗಳಲ್ಲಿ 'ದುರ್ಗಾಪೂಜೆ'ಯ
ಕಾಲಕ್ಕೂ ಪ್ರಾಣಿಬಲಿಯನ್ನು ಕೊಡುವುದು ನಿಂತುಬಿಟ್ಟಿದೆ. ಶಾಂತಿ ನಿಕೇತನದಲ್ಲಿಯೂ
ಪ್ರಾಣಿಹಿಂಸೆಯಾಗಬಾರದೆಂದು ಒಂದು ಆಜ್ಞೆಯಿದೆ. ಮಾನವನ ಆಹಾರಕ್ಕಾಗುವ
ಪ್ರಾಣಿಹಿಂಸೆಯನ್ನು ಕಂಡು ದಯಾರ್ದ್ರ ಅಂತಃಕರಣವುಳ್ಳವರಾಗಿ ಗುರ್ಜಳ ರಲ್ಲಿ
ತಾವು ಶಾಕಾಹಾರಿಗಳಾಗಬೇಕೆಂದು ಪ್ರಯತ್ನಮಾಡುವ ಪ್ರತಿಜ್ಞಾವಾಕ್ಯವೊಂದು
ರವೀಂದ್ರರ ' ಗ್ಲಿಂಪ್ಸಿಸ್ ಆಫ್ ಬೆಂಗಾಲ 'ಎಂಬ ಓಲೆಗಳಲ್ಲಿ ಕಂಡುಬರುವದು. ಜೀವ
ದಯೆಯ ಅಪೂರ್ವ ಅನುಭವದಿಂದ ಬರೆದೀ ನಾಟಕವು ಜನರಲ್ಲಿ ಪರಿಣಾಮವನ್ನು
ಮಾಡಿದ್ದು ಆಶ್ಚರ್ಯವಲ್ಲ.

' ದೇವೋ ದುರ್ಬಲಘಾತಕಃ ' ಮತ್ತು ' ಅಜಾಪುತ್ರಂ ಬಲಿಂ ದದ್ಯಾತ್'
ಎಂಬ ಲೋಕೋಕ್ತಿಗಳಲ್ಲಿ ಒಂದು ವಿಶಾಲತರವಾದ ಸತ್ಯವಿದೆ. ದುರ್ಬಲವಾದ
ಮೂಕ ಪ್ರಾಣಿಗಳನ್ನು ಪ್ರಬಲರು ತಮ್ಮ ಈಪ್ಸಿತಾರ್ಥಪ್ರಾಪ್ತಿಗಾಗಿ ದೇವರಿಗಾಗಿ
ಬಲಿದಾನವನ್ನು ಮಾಡುವ ರೂಢಿಯಲ್ಲಿ ಧರ್ಮದ ಕುಚೇಷ್ಟೆಯೇ ಇದೆ ಎಂದೆನ್ನಬ
ಹುದು. ಈ ಬಲಿದಾನಪದ್ಧತಿಯು ತ್ಯಾಗಸೂತ್ರಕ್ಕೆ ಬರೆದ ತಾಮಸಿಕ ಭಾಷ್ಯವೆ
ಸೈ. ಎಲ್ಲಿಯವರೆಗೆ ಮನುಷ್ಯರಿಗಾಗಿ, ದೇವರಿಗಾಗಿ, ವಿನೋದಕ್ಕಾಗಿ, ತಮ್ಮ ಇಷ್ಟ
ವನ್ನು ಸಾಧಿಸಿಕೊಳ್ಳಲು ಎರಡನೆಯವರನ್ನು ಬಲಿಕೊಡುವ ತಾಮಸಪ್ರವೃತ್ತಿಯಿ
ದೆಯೋ ಅಲ್ಲಿಯವರೆಗೂ ಈ ಆಟದ ಪ್ರಯೋಜನ ತೀರಲಾರದು.

ಗುಂಪಿಗಾಗಿ, ಗೆಳೆಯರಾದ ಚೆನ್ನಮಲ್ಲಪ್ಪನವರು ಬಂಗಾಲಿಯಿಂದ ಕನ್ನಡಿಸಿದರು.
'ಸ್ವಧರ್ಮ' ಕಾರ್ಯದಲ್ಲಿ ಸುಮಾರು ೩೦೦-೩೫೦ ರೂಪಾಯಿ ಮೈಮೇಲೆ ಬಂದಂತಾ
ಗಿದೆ. ಇದರ ಮಾರಾಟದಿಂದ ಆ ಹಾನಿಯು ನಮಗೆ ತಟ್ಟದಂತೆ ಯೋಜನೆಯಾದೀತೆಂದು
ಆಶೆ. ಈ ಗ್ರಂಥವು ಒಳ್ಳೆಯದೆಂದು ಕಂಡವರು ತಮ್ಮ ತಮ್ಮ ಆಪ್ತೇಷ್ಟರಿಗೂ ಮಿತ್ರ
ರಿಗೂ ಕೊಳ್ಳಲು ಮನವೊಲಿಸಬೇಕು.

ಶಾಂತಿ ನಿಕೇತನದ ' ಪುಸ್ತಕಾಲಯದ ಕಾರ್ಯದರ್ಶಿ ' ಗಳಿಂದ ಈ ಪುಸ್ತಕ
ವನ್ನು ಕನ್ನಡಿಸಲು ಅಧಿಕಾರವನ್ನು ಕೊಡಿಸಲು ಗುಂಪಿನ ಗೆಳೆಯರೂ ಶಾಂತಿನಿಕೇತನ

ದಲ್ಲಿಯೇ ಕಲಿಯುತ್ತಿರುವವರೂ ಆದ ಕಲ್ಲೂರ ಕೃಷ್ಣ ಮೊದಲಾದ ಗೆಳೆಯರು ಸಹಾಯ ಮಾಡಿದರು. ನಾವು ಆ ಕಾರ್ಯದರ್ಶಿಗಳಿಗೆ ಋಣಿಗಳಾಗಿದ್ದೇವೆ.

ಬಂಗಾಲಿಯಿಂದಲೇ ಕನ್ನಡಿಸಿದ್ದರಿಂದ ರವೀಂದ್ರರು ತಾವೇ ಸ್ವತಃ ಅಪ್ಪಣೆಯನ್ನು ಕೊಟ್ಟದ್ದಕ್ಕೆ ಅವರಿಗೂ ಉಪಕೃತರಿರುವೆವು. ಅಥವಾ ಜಗತ್ತನ್ನೇ ರಿಣದಲ್ಲಿ ಮುಳುಗಿಸಿದ ರವೀಂದ್ರ ಗುರುದೇವನಿಗೆ ನಾವು ರಿಣಿಗಳಾಗಿರುವೆವೆಂದು ಅನ್ನುವದೇ ಬೇಡ. ಮಾತ್ರ ಕೆರೆಯ ನೀರು ಕೆರೆಗೆ ಹಾಕಿ ವರವ ಪಡೆದುಕೊಳ್ಳುವವರಂತೆ ನಾವು ಈ ಪುಸ್ತಕವನ್ನೇ ಆ ರಸಪುರುಷನ ಪಾದತಲದಲ್ಲಿ ಅರ್ಪಿಸಿದ್ದೇವೆ.

ತಮ್ಮೆಲ್ಲರ ಆಶ್ರಯಾಕಾಂಕ್ಷಿ,
ಗೆಳೆಯರ ಗುಂಪಿನ,
**ದತ್ತಾತ್ರೇಯ ರಾಮಚಂದ್ರ ಬೇಂದ್ರೆ.**

---

## ಅಕ್ಕರತೆ

ಅಕ್ಕರತೆಯು ದಾರಿ, ಕಕ್ಕುಲತೆಯು ದೃಷ್ಟಿ; ಒಕ್ಕಟ್ಟೇ ಗುರಿ. ಕಕ್ಕುಲತೆಯು ಅಕ್ಕರತೆಯನ್ನು ತೂಗುವ ತಕ್ಕಡಿ, ಅಕ್ಕರತೆಯು ಕೂಡಿಕೆಯನ್ನು ಹೊರುವ ಚಕ್ಕಡಿ. ಅಕ್ಕರತೆ ಒಳಮೈ, ಕಕ್ಕುಲತೆ ಹೊರಮೈ. ಹೃದಯವೇ ಅವೆರಡರ ಕೂಟದ ಸುಳಿ. ಆ ಸುಳಿಯ ಸೆಳವಿಗೆ ಸಿಕ್ಕು ತಿಳಿಯದವರಾರು ?

ತಿಳಿಗಟ್ಟಿದ ಒಳುಬಗೆಯಲ್ಲಿ ಕುನುಸು–ಮುನಿಸುಗಳಿಗೂ, ಸಿಡುಕು–ಮಿಡುಕುಗಳಿಗೂ ಸ್ಥಳವಿರುವದಿಲ್ಲ. ಅಂತೆಯೇ ಅಲ್ಲಿ ಎಲ್ಲರ ಒಳಗಣ್ಣುಗಳ ಸುಳಿದಾಟ. ಅಕ್ಕರತೆಗೆ ಆಸೆಯಿಲ್ಲ; ಆದರೆ ಅದು ತನ್ನಂತೆಯೇ ಇರುವ ಇನ್ನೊಂದರೊಡನೆ ಬೆರೆಯಲಿಕ್ಕೆ ಬಯಸುತ್ತಿರುತ್ತದೆ.

ಅಕ್ಕರತೆಯ ಇರವು ಯಾವಾಗಲೂ ಎಲ್ಲೆಲ್ಲಿಯೂ ಇರುವದೇನೋ ನಿಜ. ಆದರೆ ಅದರ ಸುಳಿದಾಟವು ಗಾಳಿಯ ಹಾಗೆ ಹೊತ್ತುಗೊತ್ತುಗಳಿಂದ ಹೆಚ್ಚು ಕಡಿಮೆಯಾಗಿರುತ್ತದೆ. ಹೆಚ್ಚಾಗಿದ್ದರೆ, ಅದು ಜನರಿಗೆ 'ಹುಚ್ಚುತನ'ವೆಂದು ತೋರುತ್ತದೆ; ಕಡಿಮೆಯಾಗಿದ್ದರೆ, ಅದು ಇಂಥ 'ಹೆಚ್ಚಿನ ಹುಚ್ಚ'ರಿಗೆ 'ಕಟುಕತನ'ದಂತೆ ಕಾಣಿಸುತ್ತದೆ.

'ತಾಯಿಯ ಕರುಳು ಅಕ್ಕರತೆಯ ತಿರುಳು.' ಚಿಕ್ಕಮಕ್ಕಳಲ್ಲಿರುವ ಅಕ್ಕರತೆಯು ಚೊಕ್ಕ ಚಿನ್ನದಂತೆ. ಬೆಳಿಗೆಯಲ್ಲಿ ಕಳೆದು ಹೋದುದು ತಿಳಿಬಗೆಯಲ್ಲಿ ಮತ್ತೆ ಮೂಡಿತೆಂದರೆ ಎಳವಳ್ಳಿಯ ಸುಳಿಗುಡಿಗಳಂತೆ ಅದರ ಕಳೆಯು ಬೇಗನೆ ಬೆಳೆದು ಬೆಳಗುತ್ತದೆ.

" ಮತ್ತೆ ಮೂಡಲಿ !
ಬೆಳೆದು ಬೆಳಗಲಿ । "

—ಚೆನ್ನ

# ಪುಸ್ತಕ ಪರಿಚಯ

**ಲೋಕಸೇವಾ:—** (ಸಂಪಾದಕ ಅಗರಂ ವೆಂಕಟಾದ್ರಿ ಪಂಡಿತರು, ಬೆಂಗಳೂರ ಸಿಟಿ, ಈ ಮೂರು ಮೂರು ತಿಂಗಳ ಹೊತ್ತಿಗೆಗೆ ವಾರ್ಷಿಕ ವರ್ಗಣಿ ಅರ್ಧಪ್ಪ ರೂಪಾಯಿ) ಮೈಸೂರ ದೇಶದ 'ಸೇವಾಸಂಘ'ದ ಮುಖಪತ್ರವಿದು. ಹೋದವರ್ಷದ ಚೈತ್ರದಿಂದ ಹೊರಡುತ್ತಿದೆ. ಈ ಸಂಘವು ದೇವಸೇವೆ, ದೇಶಸೇವೆ, ರಾಜಸೇವೆ ಎಂಬ ಮೂರು ಉದ್ದಿಶ್ಯಗಳುಳ್ಳದ್ದಾಗಿದೆಯೆಂದು ತೋರುತ್ತದೆ. ಇದುವರೆಗೆ ಹೊರಟ ಸರ್ವ ಸಂಚಿಕೆಗಳನ್ನು ವಿಶ್ವಾಸಪೂರ್ವಕವಾಗಿ ಕಳುಹಿದ್ದಕ್ಕೆ ಸಂಪಾದಕರಿಗೆ ನಾವು ಅತ್ಯಂತ ಋಣಿಯಾಗಿದ್ದೇವೆ. 'ಮೈಸೂರದೇಶವೇ ನಮಗೆ ನಿಜವಾಗಿಯೂ ಸ್ವರ್ಗ'ವೆಂಬ ಈ ಪತ್ರಿಕೆಯ ಅರ್ಧಮರ್ಧ ಕರ್ನಾಟಕದ ಅರಕಳಿಸೊಲ್ಲು ನಮ್ಮ ಕಿವಿಗೆ ಹೇಗೋ ಆ ಅನಿಸಿತು. ಎಲ್ಲ ಕನ್ನಡಿಗರೂ ಚಂದಾದಾರರಾಗಬೇಕೆಂದು ಹೇಳುವಲ್ಲಿ ಮಾತ್ರ 'ಕರ್ನಾಟಕ' ಎಂಬ ಒಂದು ಶಬ್ದವಮಾತ್ರಬಂದಿದೆ. ಇದೆಲ್ಲಿಯ ನ್ಯಾಯವೋ ನಮಗೆ ತಿಳಿಯಲೊಲ್ಲ ಇರಲಿ. ಗೀತೆಯಮೇಲಿನ ಶ್ರೀ ನಾರದರ ಗೀತೆ (ಕಾರಿಕಾ)ಗಳು ಹೃದಯಪ್ರಚೋದಕವಾಗಿವೆ. 'ಆ ಶಾಸ್ತ್ರಗಳನ್ನೆಲ್ಲಾ ಕಲಿಯುವದು ನಮ್ಮಂಥವರ ಪಾಡೇ' ಎಂದು ಈಗಿನ ಕೆಲವರು ಕೀಸರೆಬ್ಬಿಸಿದಕಾಲಕ್ಕೆ 'ಗೀತಾಶಾಸ್ತ್ರೇ ಹಿ ಸರ್ವೇಷಾಮಧಿಕಾರಃ ಪ್ರಕೀರ್ತಿತಃ' 'ಈ ಗೀತಾಶಾಸ್ತ್ರದಲ್ಲಿ ಎಲ್ಲರಿಗೂ ಅಧಿಕಾರವುಂಟು' ಎಂದು ಉದ್ಘೋಷಿಸಿದ ಶ್ರೀಮನ್ನಾರದರ ರಸಾಲುವಾಣಿಯು ಸ್ವಲ್ಪಿಲ್ಲ ಸ್ವಲ್ಪ ಎಚ್ಚರಿಕೆಯನ್ನು ಹುಟ್ಟಿಸೀತೆಂದನಿಸುವದು. ಇರಲಿ. ಅಧ್ಯಕ್ಷೋಪಾಧ್ಯಕ್ಷರ ಸರಪಳಿಯನ್ನು ಹಾಕಿಕೊಂಡು ಸಮಾಜಸೇವಾಕಾರ್ಯವನ್ನು ಈ ಸಂಘವು ಹೇಗೆ ಹೇಗೆ ಮಾಡುವದೆಂಬದನ್ನು ಒಳ್ಳೇ ಆತುರತೆಯಿಂದ ನೋಡುತ್ತಿದ್ದೇವೆ.

**ಕೊಳಲ ಕೃಷ್ಣ:—** (ಬೆಲೆ ೮ ಆಣೆ, ಪಾಂಡೇಶ್ವರ ಗಣಪತಿರಾವ್‌ಕೃತ, ಬ್ರಹ್ಮಾವರದ ಶಾಂತೀನಿಲಯ ಗ್ರಂಥಮಾಲೆಯ ತೃತೀಯ ಕುಸುಮ) ಕ್ರೌನ್ ಆಕಾರದ ೨೦ ಪುಟಗಳ ಪುಸ್ತಕಕ್ಕೆ ೮ ಆಣೆ ಬೆಲೆ ತುಸು ಹೆಚ್ಚೆಂಬುದನ್ನು ಮೊದಲೇ ಹೇಳಿಬಿಡುವೆವು. ಇರಲಿ 'ತಂದೆ ನಿನ್ನಯೊಲುಮೆಯನ್ನು ಹೊಂದಲಹುದೆ ಎನ್ನಕವನ' ಎಂದು ಹೆದರುತ್ತಾ ಹೆದರುತ್ತಾ ಮೊದಲುಮಾಡಿ ಎನ್ನ ಗೀತ ಲಯವನೊಂದಿ ನಿನ್ನ ನಾದಭೇದವರಿಯದೆನ್ನ ಹಾಡ ಹೊನಲ ಹರಿಸಿ 'ಎನ್ನ ನಲಿಸಿದೆ' ಎಂದು ಮುಗಿಸಿದುದು ಮನೋಹರವಾಗಿದೆ. 'ಪರವೋದಾರಿಗಳಾದ ಶ್ರೀ ಒಡೇರ ಹೊಬಳಿ ನರಸಿಂಹ ಕಾರಂತರು (ಕುಂದಾಪೂರ ತಾಲೂಕ ಬೋರ್ಡ ಪ್ರೆಸಿಡೆಂಟರು) ಸ್ವತಃ ರಸಿಕರಾಗಿದ್ದು ಈ ಗ್ರಂಥದ ಪ್ರಕಟನಾ ಭಾರಹೊತ್ತಿದ್ದು' ಅಭಿನಂದನಿಯವು. ಇದನ್ನು ಉಳಿದ್ದದೈವುಳ್ಳ ಕನ್ನಡಿಗರು ಅನುಕರಿಸಬಾರದೇ?

# ಮೊದಲಿನ ಮೂರು ಮಾತುಗಳು

೧ 'ಸ್ವಧರ್ಮ'ಕ್ಕೆ ಮೂರುವರುಷಗಳು ತುಂಬಿ ನಾಲ್ಕನೇ ವರ್ಷದಲ್ಲಿ ಬಿದ್ದಿದೆ. ನಮ್ಮ ಗೆಳೆಯರ ಗುಂಪಿನ ಜೋಪಾನದಲ್ಲಿ ಎರಡನೆಯ ವರ್ಷಕ್ಕೆ ಮೊದಲಾಯಿತು. ಇಂದೇ ಈ ಸ್ವಧರ್ಮಪುರುಷನ ಹುಟ್ಟಿದ ಹಬ್ಬ. ಮುದ್ದುಮಕ್ಕಳು ತಮ್ಮ ಹುಟ್ಟಿದ ಹಬ್ಬವೆಂದು ಹಿಗ್ಗಿ ನಲಿದಾಡುವಂತೆ ಸ್ವಧರ್ಮಕ್ಕೆ ಇಂದು ಹಿಗ್ಗಿನ ದಿನ. ಎಳೆಯ ಮಕ್ಕಳು ತಮ್ಮ ಎಳೆತನದ ತೊದಲುನುಡಿಗಳಿಂದಲೂ, ಚಿಕ್ಕತನದ ಕಿಡಿಗೇಡಿತನದಿಂದಲೂ ಬಂಧುಬಳಗದವರನ್ನು ಅಳಿಸಿ, ನಗಿಸಲು ಹಚ್ಚುವಂತೆ ಸ್ವಧರ್ಮವು ತನ್ನ ಸ್ವಭಾವಕ್ಕನುಸರಿಸಿ ತನ್ನಾಟದಿಂದ ಕನ್ನಡಿಗರ ಮುಪ್ಪಿಗೆ ಪಾತ್ರವಾಗಿದೆ. ಚಿಕ್ಕ ಮಕ್ಕಳಿಗೆ ತನ್ನ ತಂದೆ ತಾಯಿಗಳಿಂದ "ಹೌದು" ಎನಿಸಿಕೊಳ್ಳಬೇಕೆಂದು ಹಂಬಲವಿರುವಂತೆ ಸ್ವಧರ್ಮದ ತಂದೆತಾಯಿಗಳಾದ ಕನ್ನಡಿಗರಿಂದ ಮೆಚ್ಚನ್ನು ಪಡೆಯಬೇಕೆಂದು ಅದು ಹಗಲಿರುಳು ಹೆಣಗುತ್ತಿರುವದು.

೨. ಸ್ವಧರ್ಮವು ತನ್ನ ಗುರಿಯಾದ ಸಮಾಜವು (ಕರ್ನಾಟಕವು) ಶಾಂತಿ ಪುಷ್ಟಿತುಷ್ಟಿಗಳಿಂದ ಕಳೆತುಂಬಬೇಕೆಂಬುದನ್ನು ಇಂದು ಮತ್ತೆ ಉದ್ಘೋಷಿಸುತ್ತದೆ. ಇದೇ ಅದರ ಧ್ಯಾನ. ಹೋದವರ್ಷ ತುಳಿದ ದಾರಿಯನ್ನೇ ತುಳಿಯಬೇಕೆಂದು ಸಂಕಲ್ಪಿಸುತ್ತಿದೆ. ಅದಕ್ಕೆ ತಾನಿಟ್ಟ ಹೆಜ್ಜೆಯನ್ನು ಹಿಂದೆಗೆಯಲು ಒಪ್ಪಿಗೆಯಿಲ್ಲ. "ಬಂದದ್ದೆಲ್ಲ ಬರಲಿ ಗೋವಿಂದನ ದಯವೊಂದಿರಲಿ" ಎಂದು ಪರಮಾತ್ಮನಲ್ಲಿ ದೃಢಶ್ರದ್ಧೆಯನ್ನಿಟ್ಟು ಮುಂದಡಿಯಿಡುವ ಸಂಕಲ್ಪವನ್ನೇ ಮಾಡುತ್ತದೆ.

ಯುಗಯುಗಕ್ಕೆ ಧರ್ಮವು ಬದಲಾಗುವಂತೆ, ಈ ಯುಗಧರ್ಮವನ್ನರಿತು ಧರ್ಮಮಾರ್ಗದಲ್ಲಿ ಪ್ರವೃತ್ತವಾಗಬೇಕೆಂದು ಸ್ವಧರ್ಮದ ಬಯಕೆ! ಭಾರತದ ಭಾಗ್ಯೋದಯಕ್ಕಾಗಿ ಎಲ್ಲ ಧರ್ಮಗಳು ಎಲ್ಲ ಜಾತಿಗಳು ಎಲ್ಲ ಪಂಗಡಗಳು ಒಂದುಗೂಡುವಂತೆ ಹೊಂದಿಕೆಯಾಗಬೇಕೆಂದು ಭಾರತದಲ್ಲೆಲ್ಲ ಒಂದೇ ಒಂದು ಕೂಗು ಕೇಳಬರುತ್ತಿದೆ. ಸಾಧಾರಣವಾಗಿ ಇದೇ ಈ ಯುಗಧರ್ಮವೆಂದೂ ಈ ಧರ್ಮಾಚರಣೆಯಿಂದಲೇ ನವಯುಗಪ್ರಾರಂಭವೂ ಪರಮಾತ್ಮನ ದಿವ್ಯಶಕ್ತಿಯ ಪ್ರಾದುರ್ಭಾವವೂ ಆಗುವದೆಂದು ಭಾರತೀಯಮಹಾತ್ಮರ ವಿಚಾರಸರಣಿಯು. ಈ ನವಮನ್ವಂತರದ ಮನುಗಳು ರಾಮಕೃಷ್ಣಪರಮಹಂಸರೆಂದು ಹೇಳಬಹುದು. ಸರ್ವಧರ್ಮಗಳು ಮುಕ್ತಿಯ ದಾರಿಗಳೆಂದೂ, ಅವು ಒಂದಕ್ಕೊಂದು ವಿರೋಧವಾಗಿರದೆ ಪೋಷಕವಾಗಿ ಇರುವದರಿಂದ ಸರ್ವಧರ್ಮಗಳನ್ನು ಸಹಾನುಭೂತಿಯ ದೃಷ್ಟಿಯಿಂದ ನೋಡಬೇಕೆಂಬ ಮಂತ್ರೋಪದೇಶಕ್ಕೆ ಮೊದಲುಮಾಡಿದರು. ಈ ಸಿದ್ಧಾಂತವನ್ನೇ ಮಹರ್ಷಿ ಅರವಿಂದರು ಆಚಾರ್ಯರಾಗಿ ವೇದೋಪನಿಷತ್ತುಗಳಿಂದ ಸರ್ವ ಧರ್ಮಮತಗಳ ಸಮನ್ವಯ ಮಾಡಲು ಹೆಣಗುತ್ತಿರುವರು. ಮಹಾತ್ಮಾಜಿಯವರ ಜೀವನದ ಒಗಟವಾದರೂ ಇದೇ ಇರುವದೆಂದು ನಮಗೆ ಅನಿಸುವದು. ರವೀಂದ್ರನಾಥರು ತಮ್ಮ ಇಂಪಾದ ಗಾನ

ದಿಂದ ಇದೇ ಮಾತನ್ನು ಹಾಡುತ್ತಿರುವರು. ಜಗತ್ತಿನಲ್ಲಿ ಭಿನ್ನ ಭಿನ್ನ ಪ್ರಕೃತಿಗಳಿದ್ದಷ್ಟು ಭಿನ್ನ ಭಿನ್ನ ಧರ್ಮಗಳಿದ್ದರೂ, ಎಲ್ಲವೂ ಆ ಸತ್ಯಸಂಕಲ್ಪನ ಸಂಕಲ್ಪದಿಂದಲೇ ಉದ್ಭವಿಸಿರುವದರಿಂದ ಎಲ್ಲ ಧರ್ಮಗಳ ವ್ಯಕ್ತಿತ್ವವನ್ನಿಟ್ಟು ಪರಸ್ಪರ ವಿರೋಧವಾದ ಧೋರಣೆವನ್ನು ಬಿಟ್ಟು ಪರಸ್ಪರರಿಗೆ ಪೂರಕವಾಗುವಂತಿಟ್ಟು ಸತ್ಯಸಂಕಲ್ಪಿಯಾದ ಆ ದಿವ್ಯ ಪುರುಷನ ಎಲ್ಲ ಅವಯವಗಳ ದರ್ಶನ ತೆಗೆದುಕೊಳ್ಳುವದೇ ಈ ಯುಗಧರ್ಮವೆಂದೂ ಈ ಯುಗಧರ್ಮದ ಪ್ರಸಾರದ ಕಾರ್ಯವೇ ಸ್ವಧರ್ಮದ ಈ ವರ್ಷದ ಮಹತ್ವವಾದ ಮೆಟ್ಟಲೆಂದು ಹೇಳಬಹುದು. ಒಬ್ಬನ ಧರ್ಮವು ಇನ್ನೊಬ್ಬನ ಧರ್ಮವಾಗುವ ಸಂಭವವಿಲ್ಲ. 'ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ' ಎಂದು ಶ್ರೀ ಕೃಷ್ಣ ಪರಮಾತ್ಮನೇ 'ತಮ್ಮದಾರಿಯಲ್ಲಿಯೇ ತಮಗೆ ಮುಕ್ತಿಯುಂಟೆ'ಂದು ಸಾರಿಹೇಳಿರುವನು. ಇದಲ್ಲದೆ ಈ ಯುಗಧರ್ಮದ ಸಿದ್ಧಾಂತದ ಪ್ರಮೇಯವನ್ನೇ ಸ್ವಧರ್ಮದಲ್ಲಿ ಉತ್ಕಟ ನಿಷ್ಠೆಯೂ ಪರಧರ್ಮದಲ್ಲಿ ಸಹಾನುಭೂತಿಯೂ ಅವಶ್ಯವಾಗಿ ಬೇಕೆಂಬ ಮಾತನ್ನು 'ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ' ಎಂಬ ಮಾತಿನಿಂದ ಸ್ಪಷ್ಟಪಡಿಸಿದ್ದಾನೆ. ಆದುದರಿಂದ ಈ ಯುಗಧರ್ಮದ ಪುರಸ್ಕಾರವೇ ಸ್ವಧರ್ಮದ ಸ್ವಧರ್ಮವೆಂದು ಹೇಳಬಹುದು.

೩. ಹಿಂದಿನ ಸಂಪಾದಕರಾದ ಶ್ರೀ. ಬೇಂದ್ರೆಯವರು ಮುದ್ದುಮಗುವಾದ ಸ್ವಧರ್ಮವನ್ನು ಲಾಲಿಸುತ್ತ ಆಡಿಸುತ್ತ ಈ ಕಠಿಣ ಮಾರ್ಗದಲ್ಲಿ ಜಪ್ಪಿಸಿ ಜೋಪಾನ ಮಾಡುತ್ತ ಕರೆತಂದು ನಮಗೆ ಒಪ್ಪಿಸಿದ್ದಾರೆ. ಆದರೆ ಈ ಕೂಸಿನ ಸಂರಕ್ಷಣೆಯನ್ನು ಮಾಡಲು ನಾವು ಎಷ್ಟು ಶಕ್ತರಿರುವೆವೋ ನಾವು ಅರಿಯೆವು. ವಿಶ್ವರೂಪಿಯಾದ (ಗುಂಪಿನ) ಪರಮಾತ್ಮನ ಅಪ್ಪಣೆಯಾದುದರಿಂದ ನಾವು ಈ ಕಾರ್ಯವನ್ನು ಕೈಕೊಳ್ಳಲೇಬೇಕು. ನಾವು ಅವನ ಕೈಯಲ್ಲಿಯ ಆಯುಧಗಳು. ಅವನು ನಮ್ಮನ್ನು ಮನಬಂದಂತೆ, ಉಪಯೋಗಿಸಿಕೊಳ್ಳಲಿ. ಎಲ್ಲರ ಹೃದಯಸ್ಥನಾಗಿ ನಿಂತು ತಾನೇ ಸಂಕಲ್ಪಿಸಿ ತಾನೇ ಕಾರ್ಯಮಾಡುವವರಿಂದ ಅವನೇ ನಮ್ಮಿಂದ ಕಾರ್ಯಮಾಡಿಸಲೆಂದೂ ಕರ್ನಾಟಕಜನತೆಯ ರೂಪದಿಂದ ನಮ್ಮ ಸೇವೆಯನ್ನು ತೆಗೆದುಕೊಳ್ಳಲೆಂದೂ, ಕನ್ನಡ ನಾಡಿನ ಗೆಳೆಯರೆಲ್ಲರೂ, ಹುಟ್ಟಿದ ದಿನದ ಹೊಸ ಉಡುಪಗಳಿಂದ ಅಲಂಕೃತನಾಗಿ ನಮಸ್ಕರಿಸಲು ಬಂದ ಈ ಸ್ವಧರ್ಮಬಾಲಕನಿಗೆ ಉಡುಗರೆಯನ್ನಿತ್ತು (ಚಂದಾಹಣ ಕೊಟ್ಟು) ಚಿರಾಯುವಾಗಲೆಂದು ಆಶೀರ್ವದಿಸಬೇಕೆಂದು ಬೇಡಿಕೊಂಡು ನಮ್ಮ ಈ ಹರಟೆಯನ್ನು ಇಲ್ಲಿಗೇ ನಿಲ್ಲಿಸುತ್ತೇವೆ.

ಪ್ರಭವದ 'ಅಕ್ಷತೃತೀಯೆ'

ತಮ್ಮವರೇ ಆದ,
ಕೃ. ಶ್ರೀ. ಬೆಟಗೇರಿ
ಹ. ಬ. ಕೊಣ್ಣೂರ

---

॥ ಓಂ ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು ॥

ಗೆಳೆಯರ ಗುಂಪಿನ

ಓಂ ನಲ್

# ಸ್ವಧರ್ಮ

॥ ತನ್ನ ತಾನರಿದಡೆ ತನ್ನರಿವೇ ಗುರು ॥

ಸಂಪುಟ ೪ ಪ್ರಭವ ಸಂ॥ ವೈಶಾಖ ಸಂಚಿಕೆ ೨

೧೯೨೭

ಸಂಪಾದಕರು: —

ಕೃಷ್ಣ ಶ್ರೀನಿವಾಸ ಬೆಟಗೇರಿ

ಮತ್ತು

ಹನುಮಂತ ಬಳವಂತ ಕೊಣ್ಣೂರ, ಬಿ.ಎ.

ವಾರ್ಷಿಕ ಚಂದಾ ರೂ. ೩ ಬಿಡಿ ಸಂಚಿಕೆಗೆ ಆಣೆ ೪

ವ್ಹಿ. ಪಿ. ವೆಚ್ಚ ಬೇರೆ

# ವಿಷಯ-ಪರಿಚಯ

ಓಂ ನಲ್

# ಸ್ವಧರ್ಮ

॥ ಜಯಂ ಭದ್ರಂ ಶುಭಂ ಮಂಗಲಮ್ ॥

ವರ್ಷ.—೪. { ಶಕೆ ೧೮೪೯ ಪ್ರಭವ ಸಂ॥—ವೈಶಾಖ } ತಿಂ. ೨

## ಗೆಳೆತನದ ಕುರುಹಿಂಗೆ

( ಪ್ರೀತಿ ಪರಮೇಶ್ವರಿಯುಪ್ರಸಾದವನ್ನುಂಡ ಭಕ್ತನ ಒಡನುಡಿ )

೧.

ಹೊಳೆಯಕಡ್ಡಿಗಳೆರಡರಂತೆಮ್ಮ ಜೀವಗಳು ।
ಗಳಿಗೆ ಕೂಡಿಡುವೆಂದು, ಹೇಗೆಯೆನ್ನಲಿ ನಾನು, ।
ಒಳಜೀವದೊಳು ಬೆರೆತ, ನಮ್ಮರವು, ನಲಿವಿನೊಳಗೂಟವೆಂದರಿತಮೇಲೆ ।

೨.

ಕಣ್ಣಬೆಳಕಿಂಡಿಯೊಳು, ಕಾಣುತಿರುವದು, ನಿನ್ನ—।
ಸಣ್ಣಯೆದೆಯೊಳು ಮೂಡಿಬೆಳೆದ ಪುರುಷೋತ್ತಮನು ।
ಮಣ್ಣುತನವನ್ನೆಲ್ಲ ಹೊನ್ನಹೊನಗೆಯಿಂದ ಬೆಳಗುತಿರುವಂಥ ಬೆಳಕು ॥

೩.

ನಾವೆಂದರೇನು? ಒಂದೊಂದು ಬಿದಿರಿನ ಕೊಳಲು ।
ಸಾವು ಹುಟ್ಟನಕೊಳವೆಯೊಳು ಬಯಕೆ ನುಡಿಗಳನು ।
ತೀವುತಿದೆ ಆ ದೇವನುಸಿರು ನಮ್ಮಿಬ್ಬರೆದೆದನಿಬೆರೆತು ಒಂದಾಗಿರೆ ॥

೪.

ಈ ತೆರದ ಆತನಾಟವು ಗುಳ್ಳೆಬಾಳೆಂದು ।
ಪಾತಕಿಯು ನಾನಾಗಲಾರೆ, ನನ್ನಿರುವಿನಲಿ ।
ಆತನದು ಹಿರಿಬಯಕೆ ಕೊನೆಗೊಳ್ಳಲೆನ್ನೆರಕ ನಿನ್ನಲ್ಲಿ ನನೆಗೊಳ್ಳಲಿ ॥

—ವನಮಾಲಿ

**ಸವಿ:**—ಇನೊಂದು ಪ್ರೇಮರಸದ, ದಿಟದೂಟವನುಂಡು, ರಸದ ಸವಿಯುಂಡ ಸವಿಗಾರನ ನುಡಿ. ಕವಿಯು ನಿಜಪ್ರೇಮಾಮೃತವನುಂಡು ಆ ಆನಂದದ ತುಟ್ಟತುದಿಯಲ್ಲಿ ನಿಂತು, ಜೀವಿಗಳ ಇರವನ್ನು ಕಂಡಿದ್ದಾನೆ. ಹೊರಗಣ್ಣಿಗೆ ಹೊಳೆಯುಕಣ್ಣಿಗಳಂತೆ, ಎರಡು ಜೀವಿಗಳಲ್ಲಿ ಭೇದ ತೋರಿದರೂ ಒಳಗಣ್ಣಿಗಲ್ಲ. ಪ್ರೇಮದ ಕೂಟವೇ ಅಂತಃಕರಣದ ಕೂಟ. ನನ್ನಿಗೆ ಎರಡಿಲ್ಲ. ದಿಟವಾದ ಪ್ರೇಮಿಗೆ ಉಳಿದ ಜೀವಿಗಳಲ್ಲಿ ಭೇದವೆನಿಸುವದು. ಎಲ್ಲದೂ ತನ್ನದೆಂಬುದೇ ಕಡೆಯ ಭಾವ. ಇದೇ ನನ್ನಿಯ ಧ್ಯಾನದ ಹೆಚ್ಚುವಿಕೆಯೇ, ಜೀವನ ಹೃದಯಸ್ಥ ಪರಮಾತ್ಮನನ್ನು, ಪ್ರಸನ್ನೀಕರಿಸುವ ಮಾರ್ಗ, ಇದೇ ಮೇಲಾದ ಉಪಾಯ. ಕವಿಯು ಇದನ್ನು ಎತ್ತಿ ಹಿಡಿದಿದ್ದಾನೆ. ಅದೇನೋ ಹೇಳುವರಲ್ಲ ! ಆ ಪರಪುರುಷನ ಸಾಕ್ಷಾತ್ಕಾರವೆಂದರೆ, ಜ್ಞಾನದ ಅಂಕುರವೆಂದು. ಅದನ್ನೇ—ಆ ಅರಿವಿನ ಪ್ರಕಾಶವನ್ನೇ—ಕವಿಯು ತನ್ನ ಒಳಗಣ್ಣಿನಿಂದ ಕಂಡಿರುವ ಆ ಆನಂದದಲ್ಲಿ ಆಪರದೈವತವನ್ನು ನೋಡಿ ನಲಿದಾಡಲಿರುವ, ಆ ಚಿನ್ಮಯನ ಬೆಳಗು ಕವಿಗೆ ಕಂಡ ಮರೆವುಗಣ್ಣಿನ ಮಣ್ಣನೆಲ್ಲ ಚಿನ್ನದ್ದಾಗಿ ಮಾಡಿದ್ದೇ ಆ ಹೊನ್ನ ಹೊನಗೆಯ ಬೆಳಕಿನ ಸ್ವಾರಸ್ಯವನ್ನು ಹೇಳುವ ಭಾವ. ಈ ತೆರನಾಗಿ ಆ ವಿಶ್ವಚಾಲಕನನ್ನು ಕಂಡ ಕವಿಯು ತನ್ನ ಜೀವದ ನಿರಭಿಮಾನತೆಯನ್ನು ಅನನಲ್ಲಿ ತೋರಲು, "ನಾವೆಂತರೇನು!" ಎಂದು ನಮ್ಮ ದೇಹವನು ಅವನ ಬಿದಿರಿನ ಕೊಳಲಾಗಿಸಿರುವ. ನಮ್ಮ ಬಗೆ ಭಾವನೆಗಳೆಲ್ಲ, ಅವನ ಉಸಿರಿನಿಂದಲೇ ಎಂದಿರುವ. ಈ ತೆರನಾಗಿ ಎಲ್ಲವೂ ಆ ವಿಶ್ವರೂಪನಿಂದಲೇ ಎಂದು ಅವನಲ್ಲಿ ಬೆರೆತಿರುವ. ಈ ರೀತಿಯಾಗಿ ಸಾಮರಸ್ಯವನ್ನು ಹೊಂದಿದ ಮೇಲೆ ತನ್ನ ದನಿ, ಆ ದೇವನ ದನಿ, ಬೇರೆಯೇ? ಎಂದಿರುವ. ತನ್ನೊಡನೆ ಇಂತು ಆಟವಾಡಿ, ತನ್ನ ನಲ್ಮೆಯಿಂದ ನಿಜಾನಂದವನ್ನು ಊಯುವ ಸರ್ವ ಶಕ್ತಿಮಯನ, ಈ ಜಗದ ಬಾಳು, ಎಲ್ಲರಂತೆ "ನೀರಗುಳ್ಳಿ" ಎನಲಾರೆನೆಂದು ಕವಿಯ ಭಾವ. ಗುಳ್ಳಿಯೆಂದರೆ ತಾನು ಪಾತಕಿ ಆಗುವನೆಂಬ ಧೃಢನಿಶ್ಚಯವೇ ಅವನುಂಡ ಬಾಳಿನ ಸತ್ಯತೆಯನ್ನು ತೋರುವದು. ಕಡೆಗೆ ಕವಿಯು ತನ್ನನ್ನು ಈ ರೀತಿ ಆನಂದದಲ್ಲಿ ಮುಳುಗಿಸಿದ ದೇವನಲ್ಲಿ ತನ್ನ ನನ್ನಿಯೇ ಚನ್ನಾಗಿ ಕೊನರೊಡೆಯಲೆಂದು ಬೇಡಿಕೊಂಡಿರುವ, ಅದೂ ಅವನ ಬಯಕೆಯಿಂದೇ ಬಗೆದು ಅವನಿಗೇ ಸರ್ವಾಧಿಕಾರವನ್ನು ಕೊಟ್ಟು ತನ್ನ ಅಕರ್ತೃತ್ವವನ್ನು ತೋರಿದ್ದಾನೆ. ಒಟ್ಟಾರೆ ಜಗದ ಸತ್ಯತ್ವವನ್ನು ಹೇಳುವದೂ, ನಲಿವಿನಿಂದಲೇ ನಿಜವಾದ ಆನಂದವು. ಎಂದು ಹೇಳುವದೇ ಕವಿಯ ಭಾವ.

— ನೇಕಜೀವ.

---

# ರಾಷ್ಟ್ರೀಯ ಉತ್ಸವಗಳು.

ಬರೆದವ:—ತಿಸುಳಿಯ ಬಂಧು

यद्यद्विभूतिमत्सत्त्वं श्रीमदूर्जितमेव वा ।
तत्तदेवावगच्छ त्वं ममतेजोंऽश संभवं ॥

श्रीकृष्ण.

ಸೃಷ್ಟಿದೇವತೆಗೆ ವಯೋಮಾನಕ್ಕನುಸರಿಸಿ, ಇದೀಗ ನವಯೌವನಕಾಲ, ಹೊಸ ಉಡಿಗೆ ತೊಡಿಗೆಗಳಿಂದ ಅಲಂಕೃತಳಾಗಿ ಸೌಂದರ್ಯದ ಮೂರ್ತಿಯಂತೆ ಕಂಗೊಳಿಸ ತೊಡಗಿದ್ದಾಳೆ. ಆಕೆಯ ಎಲ್ಲ ಶಕ್ತಿಗಳೂ ಜಾಗೃತವಾಗಿ ಚೈತನ್ಯದಿಂದ ತುಂಬಿತುಳುಕುತ್ತವೆ. ಎಲ್ಲೆಡೆಯಲ್ಲಿಯೂ ಸೃಷ್ಟಿದೇವತೆಯ ಸ್ತುತಿಪಾಠಕವಾದ ಕೋಕಿಲೆಗಳು ಆಕೆಯ ಸಾಮಗಾನವನ್ನು ಹಾಡತೊಡಗಿವೆ. ಈ ಆದಿಮಾತೆಯು ತನ್ನ ಬೆಡಗಿನಿಂದ ತನ್ನ ಮಕ್ಕಳಾದ ಮಾನವರ ಸಂಗಡ ನಲಿದಾಡುತ್ತ ಅವರಲ್ಲಿಯೂ ನವಚೈತನ್ಯವನ್ನುಂಟುಮಾಡುವ ಸಂಕಲ್ಪವನ್ನು ಮಾಡಿದಂತೆ ಕಾಣುತ್ತದೆ. ಯಾಕಂದರೆ ಇಡೀಭಾರತದಲ್ಲಿ, ಈ ತಿಂಗಳಲ್ಲಿ, ನವಚೈತನ್ಯದ ಲಕ್ಷಣಗಳು ಕಾಣಹತ್ತಿವೆ. ಎಲ್ಲಿ ನೋಡಿದರೂ ಜನರು ಉತ್ಸಾಹಿತರಾಗಿ ಉತ್ಸವಗಳಲ್ಲಿ ತೊಡಗಿದ್ದಾರೆ. ಒಂದೆಡೆಯಲ್ಲಿ ಶಾಂತಿಪ್ರಿಯರು ಬುದ್ಧಜಯಂತಿಗಾಗಿ ಗುಂಪುಗೂಡಿದ್ದರೆ, ಇನ್ನೊಂದೆಡೆಯಲ್ಲಿ ಬ್ರಾಹ್ಮಣರು ವೇದಘೋಷಗಳಿಂದಲೂ ಮಂಗಳ ವಾದ್ಯಗಳಿಂದಲೂ ಪ್ರಹ್ಲಾದವರದನಾದ ನಾರಸಿಂಹನ ರಥೋತ್ಸವವನ್ನು ನಡಿಸಿದ್ದಾರೆ. ಒಂದೆಡೆಯಲ್ಲಿ ವೇದಾಂತಿಗಳು ಶ್ರೀಮತ್ ವ್ಯಾಸ, ಶಂಕರಾಚಾರ್ಯ ಬಸವರ ಜಯಂತ್ಯುತ್ಸವಗಳನ್ನು ನಡಿಸಿದ್ದರೆ, ಬೇರೊಂದೆಡೆಯಲ್ಲಿ ಕ್ಷಾತ್ರತೇಜಸ್ವಿಗಳಾದ ತರುಣರು ಸ್ವರಾಜ್ಯಸಂಸ್ಥಾಪಕನಾದ ಛತ್ರಪತಿ ಶಿವಾಜಿಮಹಾರಾಜನ ಪ್ರತಿಮೆಯನ್ನು ಹಯಪಲ್ಲಕ್ಕಿಯೊಳಿರಿಸಿ, ಜಯಘೋಷಮಾಡುತ್ತ ಮೆರೆಸತೊಡಗಿದ್ದಾರೆ. ಹೀಗೆ ಎಲ್ಲಿ ನೋಡಿದರೂ



"ಸ್ವರಾಜ್ಯ ಸಂಸ್ಥಾಪಕರಾದ ಛತ್ರಪತಿ ಶಿವಾಜಿಮಹಾರಾಜರು"

ಉತ್ಸಾಹಕ್ಕೆ ಒಳ್ಳೇ ಉಕ್ಕೇರಿದೆ. ಇದರ ಕಾರಣವೇನು? ಈ ಮಹಾಪುರುಷರ ಉತ್ಸವಗಳು ತಮ್ಮಿಂದ ತಾವೇ ಇಷ್ಟು ಉತ್ಸಾಹದಿಂದ ಸಾರ್ವಜನಿಕವಾಗಿ ಯಾಕೆ ಮಾಡಲ್ಪಡುತ್ತವೆ? ಈ ಉತ್ಸವ ಉಪಯೋಗವೇನಾದರೂ ಇರುವದೋ ಇವೇ ಮೊದಲಾದ ಪ್ರಶ್ನೆಗಳನ್ನು ವಿಚಾರಿಸುವದು ಅತ್ಯಂತ ಅವಶ್ಯವದೆ.

(೧) ಅತ್ಯಂತ ಆಲ್ಹಾದವನ್ನುಂಟುಮಾಡುವ, ಅಥವಾ ಭಯವನ್ನುಂಟುಮಾಡುವ, ಅತ್ಯಂತ ಕೋಮಲ, ಅಥವಾ ಉಗ್ರ ಅಥವಾ ಅವೆರಡರ ಯೋಗ್ಯ ಬೆರಿಕೆಯಿಂದುಂಟಾದ ಸೃಷ್ಟಿಯ ದಿವ್ಯಸ್ವರೂಪವನ್ನು ನೋಡಿಯಾಗಲೀ ಇಲ್ಲವೆ ದೊಡ್ಡ ಮನುಷ್ಯರ ಅದ್ಭುತ ರಮ್ಯ ಕೃತ್ಯಗಳನ್ನು ಕಂಡು ಕೇಳಿಯಾಗಲೀ ಮನುಷ್ಯನಲ್ಲಿ ಆಶ್ಚರ್ಯವುಂಟಾಗುವದು ಮಾನವ ಸ್ವಭಾವದ ಧರ್ಮವದೆ. ಈ ಅಗಾಧವಾದ ಗುಣಗಳಿಂದ ಆಶ್ಚರ್ಯಚಕಿತನಾದ ಮನುಷ್ಯನಲ್ಲಿ ಆ ವಸ್ತುವಿನ ಬಗ್ಗೆ ಅಥವಾ ಆ ವ್ಯಕ್ತಿಯ ಬಗ್ಗೆ ಪೂಜ್ಯಭಾವವುಂಟಾಗುವದೂ ಆದರವು ಉಂಟಾಗುವದೂ ಭಕ್ತಿಭಾವವುಂಟಾಗುವದೂ ಅದರ ದಾಸಾನುದಾಸನಾಗುವದೂ, ಮಾನವ ಸ್ವಭಾವ ಧರ್ಮವದೆ. ಈ ಗುಣವೇ ಮಾನವನ ಉನ್ನತಿಯ ಮೂಲಾಧಾರವು. ಈ ಗುಣದಿಂದಲೇ ಸೃಷ್ಟಿಯಲ್ಲಿ ಆನಂದ ಸಮಾಧಾನಗಳುಂಟಾಗಿರುವವು. ಈ ಗುಣವೇ ಸಮಾಜವನ್ನೂ ರಾಷ್ಟ್ರವನ್ನೂ ಕಟ್ಟುವದೆಂದೂ ಹೇಳಬಹುದು. ಈ ಗುಣವು ಎಲ್ಲಿ ಇಲ್ಲವೋ ಅಲ್ಲಿ ಶೂನ್ಯ ಸಾಮ್ರಾಜ್ಯದ ಹೊರ್ತು ಬೇರೆ ಏನೂ ಇರುವದು ಶಕ್ಯವಿಲ್ಲ. ಈ ಗುಣವೇ ಈ ಸ್ವಭಾವವೇ ನಮ್ಮಂಥ ಮುಗ್ಗಲಗೇಡಿಗಳಲ್ಲಿ ಕೂಡ ಈ ಮಹಾಪುರುಷರ ಉತ್ಸವವನ್ನು ಮಾಡಹಚ್ಚಿರುವದೆಂದು ಹೇಳಬಹುದು.

(೨) ಇಂಥ ಆಶ್ಚರ್ಯಕಾರಕವಾದ ಗುಣಗಳಿಂದ ಯುಕ್ತವಾದ ವ್ಯಕ್ತಿಯು ಅಥವಾ ವಸ್ತುವು ಪರಮಾತ್ಮನೇ ಹೊರ್ತು ಬೇರೆಯಾವದೂ ಅಲ್ಲ. ಸ್ವತಃ ಶ್ರೀ ಕೃಷ್ಣಪರಮಾತ್ಮನೇ ಎಲ್ಲೆಲ್ಲಿ ಆಶ್ಚರ್ಯಕಾರಕವಾದ ತೇಜೋಮಯವಾದ ಶಕ್ತಿಯಿರುವದೋ ಅಲ್ಲೆಲ್ಲ ನನ್ನ ಅಂಶವೇ ಇರುವದೆಂದು ಹೇಳಿದ್ದಾನೆ. ಆ ವಸ್ತುವಿನ ಆ ವ್ಯಕ್ತಿಯ ಪೂಜೆಯುಂದರೆ, ಪರಮಾತ್ಮನ ಆ ದಿವ್ಯ ವಿಭೂತಿಯ ಪೂಜೆಯೇ ಹೊರ್ತು ಬೇರೊಂದಿಲ್ಲ. ಸಮಾಜದ ಅಥವಾ ರಾಷ್ಟ್ರದ ಕಟ್ಟುಗಳು ಇಂಥ ವಿಭೂತಿಯಿಂದಲೇ ಮಾಡಲ್ಪಡುತ್ತವೆ. ಆಸಮಾಜದ ಅಥವಾ ರಾಷ್ಟ್ರದ ಬೆಲೆಯು ಇಂಥ ವಿಭೂತಿಗಳ ಮೇಲೆಯೇ ಕಟ್ಟಲ್ಪಡುತ್ತದೆ. ಎಲ್ಲಿ ವಿಭೂತಿಗಳು ಉದಯವಾಗಿಲ್ಲವೋ ಅಲ್ಲಿ ಸಮಾಜವೂ, ರಾಷ್ಟ್ರವೂ ಇಲ್ಲವೇ ಇಲ್ಲವೆಂದು ಹೇಳಬಹುದು. ನಿಗ್ರೋಜನರ ಉದ್ಧಾರಕರಾದ ಬುಕರಟೀ ವಾಶಿಂಗ್ಟನ್ನನು ತಮ್ಮ ಜನರಿಗೆ ಆದರ್ಶಪ್ರಾಯವಾದ ಪುರುಷನು ತಮ್ಮಲ್ಲಿ ಉತ್ಪನ್ನನಾಗದ್ದರಿಂದ ತಮ್ಮ ಜನರನ್ನು ಸುಧಾರಿಸಲು ಅತ್ಯಂತ ಕಠಿಣವಾಗಿರುವದೆಂದೂ ಆದುದರಿಂದಲೇ ನಿಗ್ರೋಜನರಿಗೆ ಸಮಾಜದ ಕಲ್ಪನೆಯೇ ಇಲ್ಲವೆಂದೂ ತಮ್ಮ ದಿನವಹಿಯಲ್ಲಿ ಬರೆದಿಟ್ಟಿದ್ದಾರೆ. ಅಂದ ಮೇಲೆ, ಇಂಥ ಮಹಾತ್ಮರಿಂದಲೇ ಸಮಾಜವು ಸುಸ್ಥಿತಿಗೊಂಡು ರೂಪ

ಗೊಳ್ಳುತ್ತದೆಂದ ಬಳಿಕ ಅವರ ಅರ್ಚನ ಪೂಜನಗಳಲ್ಲಿ ಜನರು ಮಗ್ನರಾಗುವದೇನಾಶ್ಚರ್ಯ. ಅವರನ್ನು ನಾವು ಪೂಜಿಸಲೇಬೇಕು. ಅವರ ಗುಣಗಳ ಧ್ಯಾನವನ್ನು ನಾವು ಸದಾ ಮಾಡಲೇ ಬೇಕು. ಅವರ ಋಣವನ್ನು ತೀರಿಸುವದು ನಮ್ಮ ಕರ್ತವ್ಯದಲ್ಲೊಂದು ಎಂದು ತಿಳಿಯುವದು ನಿಜವಾದ ಮನುಷ್ಯನ ಲಕ್ಷಣವು.

(೩) ಪ್ರತಿಯೊಂದು ರಾಷ್ಟ್ರವು ಅಥವಾ ಜನಾಂಗವು ಬಹುಕಾಲದಿಂದ ವಿಭೂತಿ ಪೂಜೆಯನ್ನು ಮಾಡುತ್ತ ಬಂದಿವೆ. ಧರ್ಮಗ್ಲಾನಿಯಾದಾಗ, ಪರಮಾತ್ಮನು ಅವತರಿಸಿ ಧರ್ಮ ಸಂಸ್ಥಾಪನೆಯನ್ನು ಮಾಡಿರುವನೆಂದು ರಾಮ ಕೃಷ್ಣಾದಿಗಳ ಉತ್ಸವವನ್ನು ನಾವು ಹೇಗೆ ಮಾಡುವೆವೋ ಹಾಗೆಯೇ ಯುರೋಪಿಯನ್ನರು ಕೂಡ, ಆಡ್ಯಾಮ, ಮತ್ತು ಥಾರ್ನ ಎಂಬ ಮಹಾಪುರುಷರನ್ನು ದೇವರ ಅವತಾರವೆಂದೂ, ದುಷ್ಟ ಸಂಹಾರಕರೆಂದೂ ಪೂಜಿಸುತ್ತಾರೆ. ಶಂಕರಾಚಾರ್ಯ ಮಧ್ವಾಚಾರ್ಯರನ್ನು ಮತಸ್ಥಾಪಕರೆಂದು ನಾವು ಹೇಗೆ ಪೂಜಿಸುವೆವೋ ಹಾಗೆಯೇ ಕ್ರಿಸ್ತ, ಮಹಮ್ಮದರನ್ನು ಪೂಜಿಸುವರು. ಮತಸ್ಥಾಪಕರನ್ನು ಪೂಜಿಸಿದಂತೆಯೇ ಸಾಧು ಸಂತರನ್ನು ಪೂಜಿಸುವದೂ ಅವರ ಜಾತ್ರೆಯನ್ನು ಮಾಡುವದು ಪದ್ಧತಿಯುಂಟು. ಆ ಸಾಧು ಸಂತರು ನಮ್ಮ ಕಣ್ಮರೆಯಾದರೂ ಅವರ ಉಪದೇಶಾಮೃತವು, ಅವರ ಕೃತಿಗಳು ಜೀವಂತವಿರುವದರಿಂದ ಇನ್ನೂವರೆಗೆ ನಮ್ಮ ಧರ್ಮದಲ್ಲಿ ಜೀವವಿದೆ. ನಮ್ಮ ಪೂರ್ವಜರಾದ ವಿದ್ಯಾರಣ್ಯ ಬಸವರ ಇಚ್ಛೆಯಂತೆ ರಾಷ್ಟ್ರಧರ್ಮವನ್ನು ಹಬ್ಬಿಸುವ ಆಶೆಯಿದೆ. ಕರ್ನಾಟಕದಲ್ಲಿಯ ಈ ರಾಷ್ಟ್ರೀಯ ಉತ್ಸವಗಳು ಅಥವಾ ಜಾತ್ರೆಗಳು ನಮ್ಮನ್ನೂ ನಮ್ಮ ಪೂರ್ವದ ವಿಭೂತಿಗಳನ್ನೂ ಅಗಲಿಸದೆ ಇಟ್ಟು ಕನ್ನಡಿಗರ ಮೇಲೆ ಅತ್ಯಂತ ಉಪಕಾರವನ್ನು ಮಾಡಿವೆ. ಧರ್ಮ, ರಾಷ್ಟ್ರೀಯತ್ವ, ಸಮಾಜವ್ಯವಸ್ಥೆ ಇವುಗಳ ಮೂಲಭೂತ ತತ್ವವು ವಿಭೂತಿ ಪೂಜೆಯಲ್ಲಿದೆ ಎಂಬುದನ್ನು ಮರೆಯಲಾಗದು.

ಆದರೆ ರಾಜಕೀಯ ದೃಷ್ಟಿಯಿಂದ ಪ್ರಸಿದ್ಧರಾದ ವಿಭೂತಿಗಳ ಸಂಸ್ಮರಣವು ಮಾತ್ರ ನಮ್ಮ ಪಾರತಂತ್ರ್ಯದಿಂದ ನಷ್ಟವಾಗಿದೆ. ನಮ್ಮ ಸ್ವರಾಜ್ಯವಿದ್ದಾಗ ಮಾತ್ರ ನಾವು ನಮ್ಮ ರಾಜಕೀಯ ವಿಭೂತಿಗಳ ಕೃತಿಗಳ ಉಪದೇಶವನ್ನು ಮಾಡುತ್ತಿದ್ದುದಲ್ಲದೆ ಅವುಗಳ ಮನನಚಿಂತನವನ್ನು ಮಾಡುತ್ತ ಅವರನ್ನು ಪೂಜಿಸುತ್ತಿದ್ದುದು. ಪುರಾಣಗಳಲ್ಲಿ ಪ್ರಸಿದ್ಧವಿರುವದಲ್ಲದೆ, ಸ್ವರಾಜ್ಯ ಸಂಸ್ಥಾಪಕನಾದ ಶಿವಾಜಿಯ ಚರಿತ್ರೆಯಿಂದ ಸ್ಪಷ್ಟವಾಗುತ್ತದೆ. ರಜಪೂತರ ಇತಿಹಾಸದಲ್ಲಿಯೂ ಕಾಣಬಹುದು. ಆದರೆ ಬ್ರಿಟಿಶಸರಕಾರದ ಆಳಿಕೆಯು ಭಾರತೀಯರ ಕ್ಷಾತ್ರತೇಜಸ್ಸನ್ನು ಬಗ್ಗು ಬಡಿಯಬೇಕೆಂದಿರುವದರಿಂದ ರಾಜಕೀಯ ವಿಭೂತಿಗಳ ಸ್ಮರಣವು,ನಮ್ಮ ಸ್ಮೃತಿಪಥದಿಂದ ಹಾರಿಸಲು ಹೆಣಗುತ್ತಿರುವದು ಸ್ವಾಭಾವಿಕವದೆ. ಆದರೆ ಯುರೋಪ, ಅಮೇರಿಕಾಗಳಲ್ಲಿ, ಮಾತ್ರ ಅಲ್ಲಿಯ ರಾಜಕೀಯ ವಿಭೂತಿಗಳ ಉತ್ಸವಗಳಿಂದ ಜನರಲ್ಲಿ ಜಾತೀಯತೆಯನ್ನೂ ರಾಷ್ಟ್ರಾಭಿಮಾನವನ್ನೂ, ಉಂಟುಮಾಡುವ ಪರಿಪಾಠವೇನೋ ನಡೆದಿದೆ, ಹೀಗೆ ನಡೆದ ಉತ್ಸವಗಳೇ ರಾಷ್ಟ್ರೀಯ ಉತ್ಸವಗಳೆಂದು

ಹೇಳಬಹುದು. ಅಂತೂ ಸಮಾಜ, ರಾಷ್ಟ್ರ, ಜನಾಂಗಗಳೆಂದು ಜಗತ್ತಿನಲ್ಲಿ ಎಲ್ಲೆಲ್ಲಿ ರುವವೋ ಅಲ್ಲಲ್ಲೆಲ್ಲ ವಿಭೂತಿ ಪೂಜೆಯು ನಡೆದೇ ಇರುತ್ತದೆ. ಆದರೆ ಭಾರತದಲ್ಲಿ!

(೪) ಪಾರತಂತ್ರದಿಂದ, ಕಳೆಗುಂದಿ ಬಲಹೀನವಾದ ರಾಷ್ಟ್ರವು, ಉದಯ ಹೊಂದಬೇಕಾದರೆ, ವಿಭೂತಿಗಳ ಉದಯವಾಗಬೇಕು. ವಿಭೂತಿಗಳ ವರ್ಚಸ್ಸಿನಿಂದ ಜನಾಂಗವು ಜಾಗೃತವಾಗುವದು. ವಿಭೂತಿಗಳ ನೇತೃತ್ವದಿಂದ ಜನಾಂಗವು ಕಾರ್ಯ ದಕ್ಷವಾಗುವದು. ವಿಭೂತಿಗಳ ಶಕ್ತಿಯಿಂದ ಜನಾಂಗವು ಶ್ರದ್ಧೆಯುಕ್ತವಾಗುವದು. ಆ ವಿಭೂತಿಯ ಸ್ಮರಣ ಮಾತ್ರದಿಂದ ಜನಾಂಗದಲ್ಲಿ ಅಥವಾ ರಾಷ್ಟ್ರದಲ್ಲಿ ನವ ಚೈತನ್ಯ ಉಂಟಾಗುವದು. ಯುರೋಪಖಂಡವು ರಾಜ್ಯಕ್ರಾಂತಿಗಳಿಂದಲೂ ಧರ್ಮ ಕ್ರಾಂತಿಗಳಿಂದಲೂ ಜರ್ಜರಿತವಾದಾಗ, ಅಲ್ಲಿಯು ವಿಭೂತಿಗಳ ಸ್ಮರಣದಿಂದಲೇ ಜನಾಂಗವು ಸ್ಥೈರ್ಯವನ್ನೂ ಶಾಂತತೆಯನ್ನೂ ಪಡೆಯಿತು. ರಜಪೂತ ವೀರಕೇಸರಿ ಯಾದ ಪ್ರತಾಪನು ತಮ್ಮ ವಿಭೂತಿಗಳ ಸ್ಮರಣದಿಂದಲೇ, ಅಕಬರನಂಥ ಸಾಮ್ರಾಟ ನಿಗೂ, ಭಾರಿಯಾಗಿ ರಾಜಸ್ಥಾನದ ಮಾನವನ್ನು ಕಾಯ್ದನು. ಶಿವಾಜಿ ಮಹಾರಾ ಜನು ರಾಮಕೃಷ್ಣ, ಅರ್ಜುನ ಭೀಮ ಮೊದಲಾದ ವಿಭೂತಿಗಳ ಪೂಜೆಯಿಂದಲೇ ತೇಜಸ್ವಿಯಾಗಿ ಕೀಳ್ನೆಲಕ್ಕಿಳಿಯುತ್ತಿದ ಹಿಂದು ಧರ್ಮರಕ್ಷಣೆಯ ಭಾರವನ್ನು ಹೊತ್ತು ಅದನ್ನು ರಕ್ಷಿಸಿದನು. ಅವನ ಸ್ಮರಣದಿಂದಲೆ ರಾಜರಾಮನು ಔರಂಗಜೇಬ ನಂಥ ಪ್ರಬಲ ಶತೃವಿಗೆ ಸೊಪ್ಪುಹಾಕಲಿಲ್ಲ. ಆ ವಿಭೂತಿಯ ಸ್ಮರಣದಿಂದಲೇ ಮರಾಠರು ಭಾರತಭೂಮಿಯನೆಲ್ಲ ಹಿಂದೂಮಯ ... ಮಾಡುವ...ಅದ್ಭುತ...ಸಂಕಲ್ಪ ವನ್ನು ಮಾಡಿ, ಮುಸಲ್ಮಾನರ ಸಂಗಡ ಹೋರಾಡಿ, ಜಯಶಾಲಿಗಳಾದರು. ಹೀಗೆ ವಿಭೂತಿ ಪೂಜೆಯು, ಹೊಸರಾಷ್ಟ್ರ ನಿರ್ಮಾಣಕ್ಕೆ, ವಿಭೂತಿಗಳ ಜನ್ಮಕ್ಕೆ ಕಾರಣ ವಾಗಿದೆ. ಉಜ್ವಲವಾದ ದೀಪವು ತನ್ನ ಹತ್ತರ ಬಂದ ವಸ್ತುಗಳಿಗೆ ಬೆಳಕನ್ನೂ ಶಕ್ತಿ ಯನ್ನೂ ಕೊಟ್ಟು, ಅವುಗಳನ್ನು ಸೋಜ್ವಲಮಾಡುವಂತೆ, ಈ ವಿಭೂತಿ ಪೂಜನದಿಂದ ನಮ್ಮ ಹೃದಯದಲ್ಲಿ ವಾಸಮಾಡುತ್ತಿರುವ ವಿಭೂತಿಯ ಅಂಶಕ್ಕೆ. ಪುಟಕೊಟ್ಟಂತಾಗಿ ಅದು ಹೊಳೆಯ ತೊಡಗುತ್ತದೆ. ವಿಭೂತಿಯ ಪೂಜೆಯಿಂದ ನಮ್ಮ ಸಂಸ್ಕೃತಿಯ ಪುನ ರುಜ್ಜೀವನ ವಾಗುತ್ತದೆ, ನಮ್ಮಲ್ಲಿ ಗುಪ್ತವಾಗಿರುವ ಶಕ್ತಿಗಳೆಲ್ಲ ಜಾಗೃತವಾಗಿ ರೂಪ ಗೊಳ್ಳುತ್ತವೆ.

ಈ ದೃಷ್ಟಿಯಿಂದಲೇ ಲೋಕಮಾನ್ಯರು ಈ ವಿಭೂತಿಗಳ ಉತ್ಸವವನ್ನು ಪ್ರಾರಂಭಮಾಡಿದರು. ಅವುಗಳಿಂದ ಉಂಟಾದ ನವಶಕ್ತಿಯ ಅನುಭವವು ಎಲ್ಲ ಭಾರ ತೀಯರಿಗೆ ಗೊತ್ತಿದ್ದಮಾತು. ಈ ಉತ್ಸವಗಳಿಂದಲೇ ಲೋಕಮಾನ್ಯರು ಜನಸಾಮಾನ್ಯ ರಲ್ಲಿ, ಜಾತೀಯತೆನ್ನುಂಟು ಮಾಡಿದರು. ಅವರು ಬಿತ್ತಿದ ಈ ಉತ್ಸವದ ಮೊಳಕೆಯೇ ಮರವಾಗಿ ಮೊನ್ನೆ ತ್ರಿಶತ ಸಾಂವತ್ಸರಿಕ ಶಿವಜಯಂತ್ಯುತ್ಸವದ ಭವ್ಯ ರೂಪವನ್ನು ತೋರಿಸಿತು.

ಹೀಗೆ ವಿಭೂತಿ ಪೂಜೆಯು ಅಥವಾ ರಾಷ್ಟ್ರೀಯ ಉತ್ಸವಗಳು ಪರತಂತ್ರ ರಾಷ್ಟ್ರಗಳ ಪುನರುಜ್ಜೀವನ ಕಾರ್ಯಕ್ಕೆ ಅತ್ಯಂತ ಉಪಯುಕ್ತ ವಾಗಿದ್ದು, ರಾಷ್ಟ್ರಗಳು ಉಜ್ವಲವಾದ ಧ್ಯೇಯದಿಂದ ತೇಜೋಮಯವಾಗಿ ಬೆಳಗಲು ಕೈ ಕೋಲಿನಂತಿರುತ್ತವೆ. ನಮ್ಮಲ್ಲಿ ನಡೆದ ರಾಷ್ಟ್ರೀಯ ಉತ್ಸವಗಳಿಂದ ಭಾರತೋದಯವಾಗಲೆಂದು ವಿಭೂತಿ ರೂಪನಾದ ಆಪರಮಾನಲ್ಲಿ ಬೇಡಿಕೊಳ್ಳುತ್ತೇವೆ.

ಜಯ ಭುವನೇಶ್ವರಿ

---

# ಶ್ರೀಮದ್‌ಬಸವೇಶ್ವರನು.

### ಬರೆದವ—ಭವಿ.

ಶ್ರೀಮದ್ ಬಸವೇಶ್ವರನು ಕರ್ನಾಟಕ ಉದ್ಧಾರಕ್ಕಾಗಿ ಅವತರಿಸಿದ ವಿಭೂತಿಯು. ಕರ್ನಾಟಕದಲ್ಲಿ ಸಾಮಾಜಿಕ, ರಾಜಕೀಯ ಕ್ರಾಂತಿಗಳನ್ನುಂಟು ಮಾಡಿ, ಆಧ್ಯಾತ್ಮಿಕ ಹಾಗು ಆದಿಭೌತಿಕ ತತ್ವಗಳನ್ನು ಎಲ್ಲೆಡೆಯಲ್ಲಿ ಹರಡಿ, ಕರ್ನಾಟಕದ ಜನಜೀವನಕ್ಕೆ ಹೊಸ ತೇಜಸ್ಸನ್ನೂ ಕನ್ನಡ ವಾಙ್ಮಯಕ್ಕೆ ಉನ್ನತ ಸ್ವರೂಪವನ್ನೂ ತಂದು ಕೊಟ್ಟು ಕರ್ನಾಟಕದ ಜಾತೀಮತೆಯನ್ನುಂಟುಮಾಡಿದ ಬಸವೇಶ್ವರನು ಅದ್ವಿತೀಯ ವಿಭೂತಿಗಳಲ್ಲೊಬ್ಬನೆನ್ನಲು ಸಂದೇಹವೇನು ?

ಬಸವೇಶ್ವರನ ಸ್ವದೇಶಾಭಿಮಾನವು ಉಜ್ವಲವಾದದು, ಆತನ ಸಾಮಾಜಿಕ ದೃಷ್ಟಿಯು ಅತ್ಯಂತ ಶ್ರೇಷ್ಠವಾದದು. ಆತನ ಉಪದೇಶಗಳನ್ನು ನೋಡಿದರೆ, ಆತನ ಸಮಾಜ ಸಂಘಟನೆಯ ತತ್ವಗಳು ಎಷ್ಟು ಅಮೌಲ್ಯವಾಗಿರುವವೆಂಬುದೂ, ಸಮಾಜವು ಸ್ವಾವಲಂಬಿಯಾಗಿಯೂ, ಸ್ವತಂತ್ರವಾಗಿಯೂ, ಬಾಳುವದಕ್ಕೆ ಆತನು ಎಂತಹ ವಿಶಾಲವಾದ ಮಾರ್ಗವನ್ನು ಹಾಕಿ ಕೊಟ್ಟಿರುವನೆಂಬುದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಬಸವೇಶ್ವರನ ಜೀವನಚರಿತೆಯಿಂದಲೂ, ಆ ಕಾಲದ ಇತಿಹಾಸದಿಂದಲೂ ನೋಡಿದರೆ ಆತನು ಕರ್ನಾಟಕದಲ್ಲಿ ಆಧ್ಯಾತ್ಮಿಕ ಯುಗವನ್ನೇ ಉಂಟು ಮಾಡಿ, ಜನಜೀವನದಲ್ಲಿ ಅದ್ಭುತ ಶಕ್ತಿಯನ್ನುಂಟುಮಾಡಿದನು. ಇವನ ಉಪದೇಶದಿಂದ ಕರ್ನಾಟಕವು ಧೀರ ಗಂಭೀರವಾಗಿ, ಸೋಜ್ವಲವಾಗಿ ಮೆರೆಯುತ್ತಿದ್ದುದು, ಸ್ಪಷ್ಟವಾಗಿ ಒಡೆದು ಕಾಣುತ್ತದೆ. ಇದಕ್ಕೆ ಮೂಲಕಾರಣವಾದ ಅವನ ಆಧ್ಯಾತ್ಮ ವಿಚಾರಗಳನ್ನು ಕನ್ನಡಿಗರಾದ ನಾವು ಇಂದು ಮತ್ತೆ ಧ್ಯಾನಮಾಡುವದು ಅವಶ್ಯವಿದೆ. ಆದುದರಿಂದ ಅವನ ಮಾತಿನಲ್ಲಿಯೇ ಅವನ ವಿಚಾರಗಳನ್ನು ಇಡಲು ಯತ್ನಿಸುತ್ತೇವೆ.

**ಪರಮಾತ್ಮನು ವಿಶ್ವವ್ಯಾಪಿಯಾಗಿರುವನು.**

ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ, ಸಕಲವಿಸ್ತಾರದ ರೂಹು ನೀನೇ ದೇವಾ, ವಿಶ್ವತೋಚಕ್ಷು ನೀನೇ ದೇವಾ ! ವಿಶ್ವತೋಮುಖ ನೀನೇ ದೇವಾ ! ವಿಶ್ವತೋಬಾಹು ನೀನೇ ದೇವಾ ! ವಿಶ್ವತೋಪಾದ ನೀನೇ ದೇವಾ ! ಕೂಡಲಸಂಗಮದೇವಾ !

ಪರಮಾತ್ಮನು ಹೀಗೆ ವಿಶ್ವಭರಿತನಾಗಿದ್ದರೂ ಅಜ್ಞೇಯನಾಗಿರುವನೆಂದು ಹೇಳಿದ್ದಾನೆ.

ತೋರುವನಯ್ಯಾ ಶಿವನು, ಅಡಗುವನಯ್ಯಾ ಶಿವನು, ಕಂಗಳ ಮುಂದೆ ಕಾಯಗೊಂಡು. ಮತ್ತೆ ಮುಂದೆ ಕಸವಾಗಿ, ಕಾಡುವನಯ್ಯಾ ಶಿವನು. ಒಲ್ಲದೊಡೆ ಅಲ್ಲೇ ಇದ್ದು, ಹಲವೆಡೆಯಲ್ಲಿ ತೋರುವನು ಹಲವೆಡೆಯಲ್ಲೇರಿ, ಒಂದೇ ರೂಪಾಗಿರ್ಪನು, ಕೂಡಲಸಂಗಮದೇವನು ಚಿನ್ಮಯನಾಗಿ ಎನಗೆ ಅಪ್ರಾಪ್ಯನಾದನು.

ಆ ಕಾಲದಲ್ಲಿ ಅನೇಕ ದೇವರುಗಳನ್ನು ಪೂಜಿಸುವದನ್ನು ಬಸವನು ನಿಷೇಧಿಸಿ, **ದೇವರು ಒಬ್ಬನೇ** ಇರುವನೆಂದೂ, ಎಲ್ಲವುಗಳಲ್ಲಿಯೂ ಅವನೇ ವ್ಯಾಪ್ತನಾಗಿರುವನೆಂದೂ ಅವನನ್ನೇ ಪೂಜಿಸಿರೆಂದೂ ಸಾರಿದ್ದಾನೆ.

ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ ದೇವನೊಬ್ಬ ಕಾಣಿರೋ ! ಇಬ್ಬರೆಂಬುದು ಹುಸಿನೋಡಾ ! ಕೂಡಲಸಂಗಮದೇವನೊಬ್ಬನೇ ಅಲ್ಲದೆ ಇಬ್ಬರಿಲ್ಲವೆಂದಿತ್ತುದಾವೇದ.

ಉಣಲುಡಲು ಮಾರಿಕಟ್ಟೆಯಲ್ಲದೆ, ಕೊಲ್ಲಲು ಕಾಯಲು ಮಾರಿಯೋ ! ತನ್ನ ಮಗನ ಜವನ ಯ್ಯವಲ್ಲಿ, ಅದೆತ್ತ ಹೋದಳೋ ಮಾರಿಕಪ್ಪೆ ? ಇವರಾವರೇ ? ನಮ್ಮ ಕೂಡಲಸಂಗಯ್ಯನಲ್ಲದೆ ಮತ್ತೊಂದು ದೈವವಿಲ್ಲ. ದೈವವಿಲ್ಲ.

ಲಿಂಗೈಕ್ಯವನ್ನು ಹೊಂದುವದೇ ಮೋಕ್ಷವೆಂದೂ ಜ್ಞಾನದಿಂದಲೇ ಮೋಕ್ಷವಾಗುವದೆಂದೂ ಸ್ಪಷ್ಟವಾಗಿ ಸಾರಿದ್ದಾನೆ. ಇನ್ನು ಅವನ ಸಾಮಾಜಿಕ ನಿಯಮಗಳನ್ನು ಸಂಕ್ಷಿಪ್ತದಲ್ಲಿ ಹೇಳಿ ಈ ಬರಹವನ್ನು ಮುಗಿಸುತ್ತೇವೆ. ಯಾಕಂದರೆ, ಬಸವೇಶ್ವರನಂಥ ವಿಭೂತಿಯ ತತ್ವಗಳೆಲ್ಲವನ್ನೂ ಹೇಳುವ ಯೋಗ್ಯತೆಯೂ ನನ್ನದಲ್ಲ. ಹೇಳುತ್ತ ಕುಳಿತರೆ ಒಂದು ಹೊತ್ತಿಗೆಯೇ ಆಗಬಹುದು. ಆದುದರಿಂದ ಜಿಜ್ಞಾಸುಗಳು ಅವರ ವಚನಗಳನ್ನೇ ಅಭ್ಯಾಸಿಸಬೇಕೆಂದು ಬಿನ್ನವಿಸುತ್ತೇವೆ.

ಆ ವೇಳೆಯಲ್ಲಿ ನಡೆದ ಜಾತಿಗಳ ಗೊಂದಲವು ಅವನನ್ನು ಬಹು ಪೀಡಿಸಿದಂತೆ ತೋರುತ್ತದೆ. ಅವನು ವರ್ಣಭೇದ ಜಾತಿ–ಭೇದಗಳನ್ನು ಕಿತ್ತೊಗೆದು ಎಲ್ಲರೂ ಸಮಾನರೆಂದು ಹೇಳಿದ್ದಾನೆ.

ದೇವ ದೇವ ಬಿನ್ನಪವ ಅವಧಾರು, ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನ್ನೆಲ್ಲರನ್ನೊಂದೇ ಎಂಬೆ. ಹಾರುವ ಮೊದಲು ಶ್ವಪಚರ ಕಡೆಯಾಗಿ ಭವಿಯಾದವರನ್ನೆಲ್ಲರನ್ನೊಂದೇ ಎಂಬೆ ಹೀಗೆಂದು ನಂಬುವದೆನ್ನ ಮನವು. ಈ ನುಡಿದ ನುಡಿಯೊಳಗೆ ಎಳ್ಳಮೊನೆಯಷ್ಟು ಸಂದೇಹವುಳ್ಳರೆ ನೀನಂದೆ ಮೂಗುಕೊಯ್ಯ ಕೂಡಲಸಂಗಮದೇವಾ.

[೪೮ನೇ ಪುಟ ನೋಡಿ.]

॥ ಓಂ ನಮಃ ಶಿವಾಯ ॥

# ಶ್ರೀಮದಾನಂದತೀರ್ಥ !

( ರಕ್ತಾಕ್ಷಿಸಂವತ್ಸರದ ಅಕ್ಷತ್ತದಿಗೆಯ ಸಂಘಸಾಧನದ ನಿಮಿತ್ತವಾಗಿ ಬರೆದುದು )

ಶ್ರೀಮದಾನಂದತೀರ್ಥನೆ ! ಶರಣು! ಶರಣು!! ॥
ಶ್ರೀ–ಮದಾನಂದತೀರ್ಥನೆ ! ಶರಣು! ಶರಣು ! ॥ ೧ ॥
ಆನಂದತೀರ್ಥದಲಿ ನಾನಬಂದಿಹೆನು ॥
ಸಾನಂದಸುಂದರನ ಕಾಣಬಂದಿಹೆನು ॥ ೨ ॥
ಆನಂದತೀರ್ಥ! ನೀನೆನ್ನ ತೀರ್ಥ! ॥
ತನ್ನ ಮೈಮನ ತೊಳೆಯಬಂದನಾರ್ತ ! ॥ ೩ ॥
ಶ್ರೀಮದಾನಂದಸಾಗರನ ತನಯ ॥
ಶ್ರೀಮದಾಸ್ಯವ ತೋರ್ಪನೇನೊ ಜೀಯ? ॥ ೪ ॥

*  *  *

ಆಡಿ ಬೇಡುವೆ ನಾನು ನಕ್ಕು ಕೆಲೆದು! ॥
ಕಾಡಿ ಬೇಡುವೆ ನಾನು ಅತ್ತು ಕರೆದು! ॥ ೫ ॥
ಭಕುತಿಯೆಂಬುವದು ದಿಟ ! ತಾಯ ತೊಡೆಯು! ॥
ಸಕಲಲೋಕೈಕಚಕ್ರೇಶ್ವರನ ಕೊಡೆಯು ! ॥ ೬ ॥
ದೇವದತ್ತಾತ್ರೇಯನುಂಡ ಹಾಲಿಹುದು ! ॥
ಜೀವದೇವರ ತುಟಿಗಳೊಡಗೂಟವಿಹುದು! ॥ ೭ ॥
ವಾಲ್ಮೀಕಿಕೋಕಿಲದ ನಾಲಿಗೆಯ ನಲ್ಲೆ ।
ನಲ್ಮೆ-ಒಲ್ಮೆಗಳ ಸಂಗಮವು ನೀನಲ್ಲೆ? ॥
ನವರಸಂಗಳ ನಾಟ್ಯ ನಿನ್ನ ಸುತ್ತಿಹುದು! ।
ಕವಿಹೃದಯರಾಸಸಮ್ರಾಜ್ಞಿ ನೀನಹುದು ! ॥
ಭಾವಗೀತೆಯ ನುಡಿವ ಭಾವಕವಿಯ ।
ಭಾವದೇವಾಯತನದಧಿದೇವಿಯೇ ! ॥
ಭಾವಗೀತೆಯ ಮಾಳ್ಪೆ ದೇವಗೀತೆ !
ಭಾವಾಂಬುಜಾತಗರ್ಭಾಭಿಜಾತೆ ! ॥ ॥ ೮-೧೧ ॥

— — — —

ಮೇಲೆ ನೋಡಲು ಮುಗಿಯದಂಥ ಮುಗಿಲು! ।
ಎಲ್ಲಿ ನೋಡಿದರಲ್ಲಿ ಪಾಲ್ಗಡಲ ಪಾಲು! ॥

ಆಲದೆಲೆಯೊಂದಲ್ಲಿ ಚಲ್ಲದಿಂದಲೆದು ।
ಲೀಲೆಯಿಂದುಲಿವ ಕವಿಹೃದಯದಂತಿಹುದು! ॥

ಆ ವನಧಿಮಧ್ಯದುಯ್ಯಾಲೆಯಲ್ಲಿ ।
ಆವ ನಲ್ಕೂಸು ಮುದ್ದಾಡುತಿಹುದಲ್ಲಿ? ॥

ತನ್ನ ಕಾಲುಂಗುಟವ ತಾನೆ ಚೀಪುವದು! ।
ಸ್ವಾನಂದಲೀಲಾವಿಲೋಲವಿಹುದು! ॥

ಅಮೃತಕಲಶದ ಪಾಂಗು ಆ ಉಂಗುಟದಲಿ ।
ಅಮರದುರ್ಲಭಭಕ್ತಿ! ನೀನಿರುವೆಯಲ್ಲಿ! ॥ ೧೩-೧೬ ॥

ಆಡಿ ಬೇಡುವೆ ನಾನು ನಕ್ಕು ಕೆಲೆದು! ॥
ಕಾಡಿ ಬೇಡುವೆ ನಾನು ಅತ್ತು ಕರೆದು ! ॥ ೧೭ ॥

ಶ್ರೀಮಧ್ವ! ·ಮಧುರಮಾಧವನ ಭಕ್ತ! ॥
ಆ ಮಧುವ ನೀಡು ಆನಂದತೀರ್ಥ! ॥ ೧೮ ॥

— — — —

ಬೇಡಯ್ಯ ಬುದ್ಧಿಯೂ ಶ್ರದ್ಧೆ ಬೇಡ ! ॥
ಬೇಡಯ್ಯ ಹೃದಯದಾ ಭಾವ ಬೇಡ ! ॥ ೧೯ ॥

ಛಾಯೋಪಜೀವಿತ್ವ ಬೇಡ ! ಬೇಡಯ್ಯ ! ॥
ಜೀವೋಪಜೀವಿತ್ವ ನೀಡು ! ನೀಡಯ್ಯ ! ॥ ೨೦ ॥

ಭಕ್ತಿಯದು ಭಾವಶ್ರದ್ಧೆಗಳ ತಾಯಿ ! ॥
ಭಕ್ತಿಯದು ವಿಶ್ವರೂಪವ ತೋರ್ವ ಬಾಯಿ! ॥ ೨೧ ॥

ಭಕ್ತಿಯದು ಮುಕ್ತಿಸೋಪಾನವಲ್ಲ ! ॥
ಮುಕ್ತಿಯೇ ಭಕ್ತಿಸೋಪಾನವಿಹುವಲ್ಲ ! ॥ ೨೨ ॥

ಭಕ್ತಿಯೊರಗಿಹಳು ವತ್ಸಾಂಕವಕ್ಷದಲಿ ! ॥
ಭಕ್ತಿಯಿಲ್ಲದ ಮುಕ್ತಿಯೆಲ್ಲಿ? ಎಲ್ಲಿ ? ॥ ೨೩ ॥

ಭಕ್ತಿಯಿದ್ದರೆ ಭುಕ್ತಿಯೊಳು ಮುಕ್ತಿಯಿಹುದು ! ॥
ಭಕ್ತಿಯಿದ್ದರೆ ಭುಕ್ತಿಯೊಳು ಶಕ್ತಿಯಿಹುದು ! ॥ ೨೪ ॥

ಶ್ರೀಮಧ್ವ ! ಮಧುರಮಾಧವನ ಭಕ್ತ ! ॥
ಆ ಮಧುರ ಭಕ್ತಿಕೊಡು ಆನಂದತೀರ್ಥ ! ॥ ೧೫ ॥

* * *

ಈರೇಳು ಭುವನಗಳ ಮುಖ್ಯ ಪ್ರಾಣ ! ॥
ಹರಣಕರಣಗಳ ಅರಳಿಟ್ಟೆ ಜಾಣ ! ॥ ೧೬ ॥

ವೇದಗಳನುಸುರಿರುವ ಉಸಿರೆ! ಸುವ್ವಿ ! ॥
ಮಾಧವನ ಮಧುವೇಣುವನ್ನು ಊದಿಸುವಿ ! ॥ ೧೭ ॥

ಉಬ್ಬುಗಲ್ಲದಿ ಶಂಖವೂದುವಂತೆ ॥
ಅಬ್ಬರದಿ ನಭವನೂದುತ್ತ ನಿಂತೆ ! ॥ ೧೮ ॥

ನೀನು ಪುರುಷೋತ್ತಮನ ಪೌರುಷದ ನೀರು ! ॥
ನಾನು ಪ್ರಾಕೃತನಯ್ಯ ! ದೇವ! ಅವಧಾರು ! ॥ ೧೯ ॥

ಪೂರ್ಣಿಮೆಯ ಪೂರ್ಣನೊಲು ಪೂರ್ಣವಾಗಿ ॥
ಪೂರ್ಣಪ್ರಜ್ಞನೆ! ನನ್ನ ಪ್ರಜ್ಞೆ ಗೆಲ್ಗೆ ! ॥ ೨೦ ॥

ನನ್ನಿನನ್ನಿಗಳ ಸಂಸಾರ ಸಾಗಿ ।
ಇನ್ನಿರ್ದ ಮಾಗಿಯದು ಸುಗ್ಗಿಯಾಗಿ ॥

ಆನಂದವಾಳ್ವಿದಕ್ಷಯ್ಯವಾಗಿ ।
ಕಾಣುವೆನೆ ಚಿಕ್ಕೆಗಳ ಅಕ್ಕನಾಗಿ! ॥ ೨೧–೨೧ ॥

ಮಾಣಿಸೈ ಮೈಮನದ ಮೋಡಿಯನ್ನು ! ॥
ಕಾಣಿಸೈ ಜಗವೊಗುವ ಗಾಡಿಯನ್ನು ! ॥ ೨೨ ॥

ಓಡಿಸೈ ಭೂತವೆನ್ನುವ ಭೂತವನ್ನು ! ॥
ಮಾಡಯ್ಯ ಭವ್ಯವನು ಭವ್ಯವನ್ನು ! ॥ ೨೪ ॥

ಶ್ರೀಮದಾನಂದತೀರ್ಥನೆ ! ಶರಣು ! ಶರಣು ! ॥
ಶ್ರೀ–ಮದಾನಂದತೀರ್ಥನೆ ! ಶರಣು ! ಶರಣು ! ॥ ೨೫ ॥

॥ ಶ್ರೀಮದಾನಂದತೀರ್ಥಾರ್ಪಣಮಸ್ತು ॥

—ರಾಮಚಂದ್ರ

# ವಿಭೂತಿ ವಿಚಾರ

(೧ನೇ ಸಂಚಿಕೆಯಿಂದ ಮುಂದೆ ಸಾಗಿದ್ದು.)

ಜನತಾರೂಪಿಯಾದ ಜಾನಕೀರಮಣನ ಸೇವೆಯೇ ಮಹಾತ್ಮನ ಮುಖ್ಯವಾದ
ಗುರಿಯಾಗಿರುವದರಿಂದ ಶ್ರೀಮಂತ ಜನರ ಗೊಡವೆಗೆ ಅವನು ಹೋಗನು. ಅಥವಾ
ಸಂತತವಾದ ವಿಷಯೋಪಭೋಗಗಳಲ್ಲಿ ಕೊಳೆಯುತ್ತಿರುವ ಆಲಸ್ಯದಿಂದ ತುಂಬಿದ
ಶ್ರೀಮಂತ ಜನರನ್ನು ಬಗ್ಗು ಬಡೆದು ಮುಗ್ಗು ರೊಟ್ಟಿಯ ಮೇಲೆ ಒಂದು ತಟಕು
ತುಪ್ಪದ ಹನಿಯನ್ನು ಹಾಕುವದಕ್ಕೆ ಇವನ ಅವತಾರವಾಗುವದರಿಂದ ಬಡ ಜನ
ಲ್ಲರೂ ಇವನ ಬೆನ್ನು ಹತ್ತುವದು ಸ್ವಾಭಾವಿಕವು. ಶ್ರೀ ಕೃಷ್ಣನ ಭಕ್ತರಲ್ಲಿ ಅರ್ಜುನ
ನಿರುವದೇನೋ ನಿಜ. ಆದರೂ ಅವನಿಗೆ ಬಡವಿದುರನ ಅಥವಾ ದರಿದ್ರ ಸುದಾಮನ
ಪದವು ಹೇಗೆ ಬಂದೀತು? ಸುಗ್ರೀವ ವಿಭೀಷಣರಿಗೆ ಗುಹಕನ ಅಥವಾ ಶಬರಿಯ
ಬೆಲೆಯು ಹೇಗೆ ಬಂದೀತು ? ಬಡವರಲ್ಲಿ ಸದ್ಗುಣಗಳಿರುವವು. ಸದ್ಗುಣಿಗಳಾದವರನ್ನು
ಒಟ್ಟುಗೂಡಿಸಬೇಕಾದ ಪಕ್ಷದಲ್ಲಿ ಮೊಟ್ಟಮೊದಲು ಬಡವರ ಕಡೆಗೆ ಯಾರಾದರೂ
ಹೊರಳುವರು. ರಾಷ್ಟ್ರವು ಮುಂದುವರಿಯುಬೇಕೆಂದರೇನೂ ಅದರೊಳಗಿನ ಕೈ ಬೆರ
ಳಿಂದ ಎಣಿಸಲ್ಪಡುವಷ್ಟು ಶ್ರೀಮಂತರು ಹೋದರಲ್ಲ. ಸಾಮಾನ್ಯ ಜನತೆಯು ಮುಂದು
ವರಿದರೆ ರಾಷ್ಟ್ರದ ಹೆಜ್ಜೆ ಮುಂದೆ ಬಿದ್ದಂತಾಯಿತು. ತುಕಾರಾಮ ಮಹಾರಾಜರು
ತಮ್ಮ ದಿವ್ಯವೇದಾಂತವಾಣಿಯಿಂದ ಸಂತನ ಲಕ್ಷಣವನ್ನು ಹೀಗೆ ಹಾಡಿದ್ದಾರೆ:—

‘ जे का रंजले गांजले त्यासि म्हणे जो आपुले ।
तोचि साधु ओळखावा देव तेथेचि जाणावा ।
मृदु सबाह्य नवनीत तैसें सज्जनांचें चित्त ।
ज्यासि आपंगिता नाहीं त्यासि धरी जो हृदयीं ।
दया करणें जें पुत्रासि तेचि दासा आणि दासीं ।
तुका म्हणे सांगू किती तोचि भगवंताची मूर्ति ॥

ಯಾರು ಬಡತನದಲ್ಲಿ ಬಳಲುವರೋ ಅವರೇ ನನ್ನವರೆಂದು ಯಾರು ಅನ್ನು
ವರೋ ಅವರೇ ಸಾಧುಗಳು; ಅಲ್ಲಿಯೇ ದೇವರು ವಾಸವಾಗಿದ್ದಾನೆಂದು ತಿಳಿಯಬೇಕು.
ಸಜ್ಜನರ ಚಿತ್ತವು ಬೆಣ್ಣೆಯಂತೆ ಒಳಗೂ ಹೊರಗೂ ಮೃದುವಾಗಿರುವದು. ಆಧಾರವಿ
ಲ್ಲದವರನ್ನು ಹೃದಯಕ್ಕೆ ಅಪ್ಪಿಕೊಳ್ಳುವನವನು. ತನ್ನ ಮಕ್ಕಳ ಮೇಲೆ ಪ್ರೀತಿಯನ್ನು
ತೋರಿಸುವಷ್ಟೇ ತನ್ನ ಆಳುಹೋಳುಗಳ ಮೇಲೆಯೂ ತೋರಿಸುವನು. ಎಷ್ಟೆಂತ
ಹೇಳಬೇಕು? ಇಂಥ ಸಾಧುವೇ ಭಗವಂತನ ಮೂರ್ತಿಯೆಂದು ತಿಳಿಯಬೇಕು.

ಶ್ರೀಮಂತರಲ್ಲಿ ಸದ್ಗುಣಗಳ ಅಭಾವವಿರುವದರಿಂದ, ಅವರಲ್ಲಿ ದುರ್ಜನರೇ ಹೆಚ್ಚುಮಂದಿ. ಭರ್ತೃಹರಿಯು ಹೇಳುವಂತೆ, ಕ್ರೂರತನವು ಮೊಸರು ಒಣಹಾಕಿ ಸ್ವಾರ್ಥದ ದೆಶೆಯಿಂದ ಬಡವರ ಕೂಡ ಜಗಳವನ್ನು ತೆಗೆಯುವದು, ಪರರ ದುಡ್ಡಿನಲ್ಲಿಯೂ ಸ್ತ್ರೀಯರಲ್ಲಿಯೂ ತುಂಬಾ ಪ್ರೀತಿ, ತಮ್ಮ ಆಪ್ತ ಇಷ್ಟರಲ್ಲಿಯೂ ಹೊಟ್ಟೇಕಿಚ್ಚು, ಇವೆಲ್ಲ ಗುಣಗಳು प्रकृतिसिद्धमिदं हि दुरात्मनाम् । ಅವರಿಗೆ ಸೃಷ್ಟಿದೇವಿಯು ಕೊಟ್ಟ ಉಡುಗರೆಗಳಾದ್ದರಿಂದ ಅವರು ಇವುಗಳ ಅವತಾರಗಳೇ ಇರುತ್ತಾರೆ. ಸತ್ಯಧರ್ಮದ ಪುರಾಣವನ್ನು ಹೇಳಿ ಶ್ರೀಕೃಷ್ಣ ಪರಮಾತ್ಮನು ಎಲ್ಲ ಧರ್ಮಗಳಿಗೆ ನಮ್ಮವರನ್ನೇ ವಾರಸಾದಾರರನ್ನಾಗಿ ಮಾಡಿರುವವೆಂಬದಾಗಿ ಕೊಚ್ಚುತ್ತಿರುವ ಶ್ರೀಮಂತಭಟ್ಟರುಸಹ, ಸಮಾಜದ ಕುರುಹುಗಳಾಗಿರುತ್ತಾರೆ. ದುಡ್ಡಿನಿಂದ ಮದಾಂಧರಾಗಿ, ಹಗಲಿರುಳು ಬಡವರನ್ನು ಪೀಡಿಸುತ್ತಿರುವ ದೈವುಳ್ಳವರನ್ನು, ಭಟ್ಟರನ್ನು, ಸದೆಬಡೆದು, ರಾಷ್ಟ್ರೋದ್ಧಾರವನ್ನೂ ಧರ್ಮೋದ್ಧಾರವನ್ನೂ, ಮಾಡಲಿಕ್ಕೆ ಟೊಂಕ ಕಟ್ಟಿದ ಮಹಾತ್ಮನು, ದೀನರಾದ ಬಡವರ ಕಡೆಗೇ ತಿರುಗುವನು. ಮಹಾತ್ಮರಲ್ಲಿ ಒಬ್ಬರನ್ನಾದರೂ, ಶ್ರೀಮಂತರನ್ನು ತೋರಿಸಿರಿ. ಅದೇಕೆ! ಎಷ್ಟೋಮಂದಿ ರಾಜರು ಸಹ ವಿಭೂತಿಗಳಾಗಿಲ್ಲವೆ ? ಶ್ರೀಕೃಷ್ಣನ ಉದಾಹರಣೆಯನ್ನೇ ತೆಗೆದುಕೊಳ್ಳಿರಿ. ಎಷ್ಟೋ ರಾಜರು ಕೂಡ ಮಹಾತ್ಮರಿರುವದು ನಿಜ. ಅವರು ಸದ್ಗುಣಗಳ ಮೂರ್ತಿಗಳಾದ್ದರಿಂದ, ಅವರು ಬಡವರರಕ್ತವನ್ನು ಹೀರಿ ತಮ್ಮ ವಿಷಯೋಪಭೋಗಗಳಿಗೆ ಸಾಧನವನ್ನು ಮಾಡಿಕೊಂಡವರಲ್ಲ. " स्नेहं दयांच सौख्यं च यदि वा जानकीमपी आराधनाय लोकस्य मुञ्चतो नास्ति मेव्यथा " ಎಂದು ಸ್ನೇಹವನ್ನೂ, ದಯೆಯನ್ನೂ, ಸೌಖ್ಯವನ್ನೂ ಅಥವಾ ಈ ಮೂರೂ ಗುಣಗಳ ಅವತಾರವಾದ ಸೀತೆಯನ್ನು, ಸಹ ಪ್ರಜೆಗಳ ಸಂರಕ್ಷಣಾರ್ಥವಾಗಿ, ಅವರನ್ನು ಸಂತೋಷಗೊಳಿಸುವದಕ್ಕಾಗಿ, ಬಿಡುವೆನೆಂದು ಪ್ರತಿಜ್ಞೆಯನ್ನು ಒಬ್ಬ ರಾಜನೇ ಮಾಡಿದ್ದಾನೆ. ಯಾವದಾದರೊಂದು ಸುಖಕಾರಕವೆಂದು ಈಗಲೂ ಅದಕ್ಕೆ ರಾಮರಾಜ್ಯವೆನ್ನುತ್ತಾರೆ. ಶ್ರೀ ರಾಮಚಂದ್ರನ ಗುಡಿಯಲ್ಲಿ ಪ್ರಜೆಗಳೆಂದರೇನರ್ಥ? ಗೋಬ್ರಾಹ್ಮಣ ಪ್ರತಿಪಾಲನೆ. ಒಕ್ಕಲಿಗರ ಮತ್ತು ಬ್ರಾಹ್ಮಣರ ಪರಿಪಾಲನೆಯೊಂದೇ ಅಲ್ಲವೇ. ಇವರಿಬ್ಬರೆಂಬರೆ ಏಕಾದಶೀ ಮತ್ತು ಶಿವರಾತ್ರಿಗಳ ಅವತಾರಗಳಲ್ಲವೇ? ಇನ್ನು ಶ್ರೀ ಕೃಷ್ಣ! ಶ್ರೀ ಕೃಷ್ಣಪರಮಾತ್ಮನು, ಯೋಗಭೋಗೇಶ್ವರನಿದ್ದನು. ಬರೇ ಭೋಗೇಶ್ವರನಿದ್ದರೆ, ಅವನು ಜರಾಸಂಧನಂತೆಯೇ ಹೆಸರಾಗುತ್ತಿದ್ದನು. ತನ್ನ ಚಿಕ್ಕಂದಿನಲ್ಲಿ ದನಗಳನ್ನು ಕಾಯುವಗೊಲ್ಲರ ಸಹವಾಸ; ತಾರುಣ್ಯದಲ್ಲಿ ಬಡವರನ್ನು ಪೀಡಿಸುತ್ತಿರುವ ದುಷ್ಟ ದುರ್ಜನರಾದ ಕಂಸ ಶಿಶುಪಾಲ ಜರಾಸಂಧರ ವಧ; ತನ್ನ ವಯುಸ್ಸಿನಲ್ಲಿ ಬಡವರಾದ ಪಾಂಡವರ ಪಕ್ಷವನ್ನು ಹಿಡಿದು ಒಬ್ಬನೇ ಶಸ್ತ್ರವಿಲ್ಲದೆ ಸಹಾಯುಮಾಡುವೆನೆಂಬ ಪ್ರತಿಜ್ಞೆ, ನಮ್ರತನವಾದರೋ ಅನನುಕರಣೀಯವಾದದ್ದು. ಅರ್ಜುನನ ಕುದುರೆಗಳನ್ನು ತೊಳೆಯುವ ಸಾರಥಿಯ ಕೆಲಸ, ಪ್ರೀತಿಯಲ್ಲಿಯೂ ಸಮಭಾವ, ಧರ್ಮನ ಆಸ್ಥಾನದಲ್ಲಿ ಊಟಮಾಡಿದ ಬ್ರಾಹ್ಮಣರ ಎಂಜಲ

*

ವನ್ನು ಬಳೆಯುವ ಶ್ರೀ ಕೃಷ್ಣನು, ಶ್ರೀಮಂತರ ಅಧಿದೈವತವಾಗಬಹುದೇ! ಬಡವರ ಭಾಗ್ಯದೇವತೆಯು ಶ್ರೀ ಕೃಷ್ಣನು. ಬಡಭಕ್ತರ ವತ್ಸಲನು ಶ್ರೀ ಕೃಷ್ಣನು. ಈಗಲಾದರೂ ಬಡವರ ಗೋಳನ್ನು ನೋಡಲಾರದೆ ಅವರ ಸಹಾಯಾರ್ಥವನ್ನು ಜೀವವನ್ನು ಮುಡುಪು ತೆಗೆದಿಡುವ ವೀರರೆಲ್ಲರೂ ಶ್ರೀ ಕೃಷ್ಣನ ಅಂಶಸಂಭೂತರೆಂದೆನ್ನಲಿಕ್ಕೆ ಅಡ್ಡಿ ಏನು! ತುಕಾರಾಮ ಮಹಾರಾಜರು ಇಂಥವರು. तेचि भगवंताची मूर्ति ಅವರೇ ಭಗವಂತನ ಅವತಾರವಾಗಿರುವನೆಂದೆನ್ನುವರು.

ಮಹಾತ್ಮರ ಚರಿತ್ರೆಗಳಿಂದ ನಮಗೇನು ಉಪಯೋಗ? ಅಜ್ಞಾನಿಗಳು ಸುಜ್ಞಾನಿಗಳಾಗುವದು, ಮಹಾತ್ಮರ ಮಹಿಮೆಯಿಂದಲೇ. ಕಾಲಕಾಲಕ್ಕೆಮಹಾತ್ಮರು–ಪೂರ್ಣಾವತಾರಿಗಳು ಹುಟ್ಟುತ್ತಿದ್ದರೆ ಬೇರೆ ಮಾತಾಗಿತ್ತು. ಗೀತೆಯಲ್ಲಿ ಹೇಳಿದಂತೆ ಪರಮಾತ್ಮ ಸಾಧನದ ಮಾರ್ಗವನ್ನು–ಪರೋಪಕಾರದ ಹಾದಿಯನ್ನು ಹಿಡಿಯುವವರು मनुष्या णां सहस्रेषु कश्चिद्यतति सिद्धये? यततापि सिद्धानां कश्चिन्मांवेत्तितत्त्वतः" ॥ ಸಾವಿರಾರು ವರ್ಷಗಳಲ್ಲಿ, ಸಾವಿರಾರು ಮನುಷ್ಯರಲ್ಲಿ, ಸಿದ್ಧಿಯನ್ನು ಪಡೆಯಬೇಕೆಂದು ಪ್ರಯತ್ನಮಾಡುವವನು ಒಬ್ಬನು, ಇಂಥ ಸಾಧಕರಲ್ಲಿಯೂ ಸಿದ್ಧಿಯನ್ನು ಹೊಂದುವವನು ಯಾವನಾದರೊಬ್ಬನು. ಮಹಾತ್ಮನು ಸಕಲಗುಣಗಳ ಪೂರ್ಣಾವತಾರವಾಗಿರುವನು. ಸತ್ಯ, ಪ್ರೀತಿ, ಅಹಿಂಸೆ, ಕಾರುಣ್ಯ, ವೀರ್ಯ, ಧೈರ್ಯ, ನಿಸ್ಪೃಹತೆ ಕ್ಷಮೆ ಮುಂತಾದ ಸಕಲ ಗುಣಗಳನ್ನು ಮೈಗೂಡಿಸಿಕೊಂಡು ಬಂದಂಥ ಜನರು, ಈ ಮರ್ತ್ಯ ಲೋಕದಲ್ಲಿ ತೀರ ಕಡಿಮೆ. ಚಿಕ್ಕ ಬಾಲಕನ ಕೈಬರಹವನ್ನು ಸುಧಾರಿಸಲಿಕ್ಕೆ ಅವನಿಗೆ ಸಂಪೂರ್ಣ ಮನಗಳುಳ್ಳ ಸುಂದರವಾದ ಕಿತ್ತೆಯನ್ನು ಅವನಿಗೆ ಕೊಡುವಂತೆ ಈ ಜಗತ್ತು ಯಥಾಯೋಗ್ಯವಾಗಿ ತನ್ನ ಮನಸ್ಸಿನಂತೆ ನಡೆಯಲೆಂದೂ, ತನ್ನ ಪ್ರಭಾವವನ್ನು ಜನರು ಪೂರ್ಣವಾಗಿ ಅರಿತುಕೊಳ್ಳಲೆಂದೂ, ಮಹಾತ್ಮಾನೆಂಬ ಕಿತ್ತೆಯನ್ನು ಅವರ ಮುಂದೆ ತಂದಿಡುವನು. ಆದ್ದರಿಂದ ಧ್ಯೇಯವಾದಿಯಾದವನೇ ಮಹಾತ್ಮನಾಗುವನು. ಅರ್ಧ ಸತ್ಯ ವ್ಯಾವಹಾರಿಕ ಸತ್ಯ ಮುಂತಾದ ಸತ್ಯದ ಹೀನ ಸ್ವರೂಪಗಳು ಅವನಲ್ಲಿರುವದಿಲ್ಲ. ಸರಾಫರ ಅಂಗಡಿಗೆ ಮಾದರಿಯಾಗಿ ಬಂಗಾರವನ್ನು ಕೇಳಿದರೆ ಕೆಟ್ಟ ಬಂಗಾರವನ್ನು ಅವನು ಎಂದೂ ತೋರಿಸುವದಿಲ್ಲ. ಅಗದೀ ನೂರು ನಂಬರಿನ ಬಂಗಾರವನ್ನೇ ತೋರಿಸುತ್ತಾನೆ. ಅದೇ ಮೇರೆಗೆ ಪರಮಾತ್ಮನಾದರೂ, ಮನುಷ್ಯನ ಮಾದರಿಯನ್ನು ತೋರಿಸಬೇಕೆಂಬುದಾಗಿ ನಿರ್ಮಿಸಿದ ಪುರುಷನು, ಅತ್ಯುಚ್ಚ ಗುಣಗಳಿಂದಲೇ ತುಂಬಿರುವನು. ಸತ್ಯವೆಂದರೆ ಸತ್ಯ. ಅಹಿಂಸೆಯೆಂದರೆ ಅಹಿಂಸೆ. ದಾನವೆಂದಮೇಲೆ ಪ್ರಾಣದ ಪರಿವೆಯಿಲ್ಲ. ಇಂಥ ಧ್ಯೇಯವಾದಿಗಳು ಪವಿತ್ರವಾದ ವಾತಾವರಣವನ್ನುಂಟುಮಾಡಿದರೆಂದರೆ ಅಗದೀ ಕ್ಷುದ್ರ ಜನರು ಕೂಡ ಮೇಲಿನ ತರಗತಿಯವರಾಗುವರು. ಬುದ್ಧನ ಕಾಲದಲ್ಲಿ ಅಥವಾ ಉಪನಿಷತ್ತುಗಳ ಕಾಲದಲ್ಲಿ, ಜನ ಸಾಮಾನ್ಯವೂ ಕೂಡ, ಉಚ್ಚ ಪ್ರಕಾರದ್ದೇ ಆಗಿರಬೇಕು. ಬಸವೇಶ್ವರನ ಕಾಲದ ವಿಚಾರಗಳನ್ನು ಸ್ತ್ರೀಯರು ಚಿಕ್ಕ ಬಾಲಕರು

ಸಹ ಕಲಿತು ಆಚರಿಸುತ್ತಿದ್ದದ್ದನ್ನು ನಾವು ಓದುತ್ತೇವೆ. ಅಂಥ ಮೇಲೆ ಮಹಾತ್ಮರು ಸಾಮಾನ್ಯ ಜನರಿಗೆ ಶ್ರೇಯಮಾರ್ಗವನ್ನು ಪ್ರತ್ಯಕ್ಷ ಆಚರಣೆಯಿಂದ ತೋರುವ ಕೈಗಂಬ ಗಳಂತೆ ಕೈದೀಪಗಳಂತಿರುವರು. ಒಬ್ಬ ಇಂಗ್ಲಿಷ ಕವಿಯು

Lives of all men great remind us
We can make our lives sublime.
And departing leave behind us.
Foot print on the sands of Time.

ಮಹಾತ್ಮರ ಚರಿತ್ರಗಳು ನಾವೂ ನಮ್ಮ ಚರಿತ್ರಗಳನ್ನು ಉದಾತ್ತವನ್ನಾಗಿ ಮಾಡ ಬಹುದೆಂಬದರ ಬಗ್ಯೆ ನೆನಪುಗೊಡುತ್ತವೆ. ಮತ್ತು ಈ ಜಗತ್ತಿನಲ್ಲಿ ಏನಾದರೂ ಕೀರ್ತಿ ಯನ್ನು ನಾವು ಉಳಿಸಿಹೋಗುವಂತೆ ಮಾಡುತ್ತವೆ. ಅವರು ಸ್ವತಃ ಪರಿಪೂರ್ಣರಾಗಿ ಬೆಳಕನ್ನು ಕೆಡವಿದ ಕೂಡಲೇ ಸಾವಿರಾರು ಜನರು ತಮ್ಮ ತಮ್ಮ ಸ್ವಧರ್ಮದಂತೆ, ತಮ್ಮ ತಮ್ಮ ಮಾರ್ಗಗಳನ್ನು ಕಂಡುಹಿಡಿದು, ಸದಾಚರಣೆಯುಳ್ಳವರಾಗುವರು. ಸತ್ಯ ವನ್ನು ಮಾಡಬೇಕು; ಕಳವುಮಾಡಬಾರದು, ಅಧ್ಯಾತ್ಮಜೀವಿಗಳಾಗಬೇಕು, ಲೋಕ ಕಲ್ಯಾಣಕ್ಕಾಗಿ ಜೀವಿತವನ್ನು ಸವಿಸಬೇಕು; ಪರಮಾತ್ಮನನ್ನು ಸಾಕ್ಷಿಯಾಗಿಟ್ಟುಕೊಂಡು ಎಲ್ಲ ಕಾರ್ಯಗಳನ್ನು ಮಾಡುತ್ತಿರಬೇಕು. ಪರೋಪಕಾರವನ್ನೇ ತಮ್ಮ ಜೀವದ ಧ್ಯೇಯವಾಗಿಟ್ಟುಕೊಂಡಿರಬೇಕು; ಅಹುದು! ಹೀಗೆ ಯಾರಾದರೂ ಮಾಡಿರುವರೋ? ಇದನ್ನು ವೇದಾಂತದಲ್ಲಿ ಹೇಳಿದೆ, ಗೀತೆಯಲ್ಲಿ ಹೇಳಿದೆ, ಬಾಯಬಲಿನಲ್ಲಿ ವಿಸ್ತರಿಸಲ್ಪ ಟ್ಟವೆ. ಈ ವಿಷಯಗಳು! ಅದರಿಂದೇನೂ ಮನುಷ್ಯರ ಮನಸ್ಸಿನ ಮೇಲೆ ಪರಿಣಾಮ ವಾಗುವದಿಲ್ಲ! ಈ ಎಲ್ಲ ಸದ್ಗುಣಗಳುಳ್ಳ ಮನುಷ್ಯನೇ ಇರುವನೆಂದ ಕೂಡಲೇ, ಜನ ರಲ್ಲಿ ಶ್ರದ್ಧೆಯು ಉತ್ಪನ್ನವಾಗುವದು. ಮೋಟಾರ ಗಾಡಿಗಳು ತಾಸಿಗೆ ೫೦–೬೦ ಮೈಲು ಹೋಗುತ್ತವೆಂದು, ೧೦೦ ವರ್ಷದ ಹಿಂದೆ ಯಾರಿಗಾದರೂ ಹೇಳಿದ್ದರೆ ಅವ ರಿಗೆ ಅದು ಕಲ್ಪನೆಯ ಸಾಮ್ರಾಜ್ಯವೆಂದು ಅನಿಸುತ್ತಿತ್ತು. ಅದೇ ಅವರನ್ನು ಈಗ ಅದ ರೊಳಗೆ ಕೂಡಿಸಿದರೆ ಒಂದೇ ಒಂದು ನಿಮಿಷದೊಳಗೆ ಶ್ರದ್ಧೆಯು ಉತ್ಪನ್ನವಾಗುವದು. ಈಸುವದು ಅತ್ಯುತ್ತಮ ವ್ಯಾಯಾಮವಾಗಿರುವದೆಂದು, ವ್ಯಾಖ್ಯಾನಗಳನ್ನೆಷ್ಟುಕೊಟ್ಟರೂ ಜನರ ಮನವರಿಕೆಯಾಗುವದಿಲ್ಲ. ಅದೇ ಒಬ್ಬನು ಹತ್ತುಹದಿನೈದು ವರುಷಗಳವರೆಗೆ ಈಸಿ, ಇದು ನೋಡು ನನ್ನ ಮೈ ಹೇಗಾಗಿರುತ್ತದೆಂದು ಯಾರಾದರೂ ತೋರಿಸಿದರೆ, ಒಮ್ಮೆಲೇ ಈಸುವದರಲ್ಲಿ ನಂಬಿಗೆಯು ಉತ್ಪನ್ನವಾಗುವದು. ಗ್ರಂಥ ಗ್ರಂಥಾಂತರಗಳ ಲ್ಲಿಲ್ಲ ಓದಿಕೊಂಡಂಥ ಮನುಷ್ಯನು ಹತ್ತುವರುಷಗಳವರೆಗೆ, ಪುರಾಣಪುಣ್ಯಪ್ರವಚನ ಗಳನ್ನು ಹೇಳಿದ್ದು ಒಂದೇ. ಮಹಾತ್ಮನು ಒಂದೇ ಒಂದು ನಿಮಿಷ ಆಚರಣೆಯಲ್ಲಿದ್ದದ್ದು ಜನರು ನೋಡಿದ್ದೂ ಒಂದೇ. ನನ್ನಂತೆಯೇ ಎಲ್ಲ ಪ್ರಕಾರವಾಗಿರುವಂಥವನೊಬ್ಬನು ಇಂಥದೊಂದು ಕಾರ್ಯವನ್ನು ಮಾಡಿರುವನೆಂದು ಯಾರೂ ಕಂಡರೂ ಅವರಲ್ಲಿ

ತತ್ಕಾಲ ಆತ್ಮವಿಶ್ವಾಸವುತ್ಪನ್ನವಾಗಿರುವದು. ಆತ್ಮವಿಶ್ವಾಸವು ಹುಟ್ಟಿದ ಮೇಲೆ ಪ್ರತ್ಯಕ್ಷ ಯಮನು ಬಂದು ಮುಂದೆ ನಿಂತರೂ ಅಂಜಿಕೆಯು ಹುಟ್ಟಲಾರದು. ಶ್ರದ್ಧೆಯು ಮನುಷ್ಯನಲ್ಲಿ ಹುಟ್ಟಿತೆಂದರೆ ಅವನ ಪುನರ್ಜನ್ಮವಾದಂತೆಯಾಗುವದು. ಹೇಳಲಿಕ್ಕೆ ಬಾರದಂಥ ಶಕ್ತಿಯು ಅವನಲ್ಲಿ ಬೇರೂರುವದು; ಅವನ ಕಾರ್ಯವು ಕ್ಷಣಕ್ಷಣಕ್ಕೆ ಹೊಸದೇ ಆಗುವದು. ' He who knows that power is in born, that he is weak because he has looked to good out of him and elsewhere and so perceiving throws himself unhesitatingly on his thought, instantly rights himself, stands in the erect position, commands his limbs, works miracles, ಶಕ್ತಿಯೆಂಬದು ನನ್ನಲ್ಲಿಯೇ ಇರುವದೆಂದು ಯಾರಿಗೆ ತಿಳಿಯುತ್ತದೆಯೋ ಅವನಲ್ಲಿ ನವಚೈತನ್ಯವುಂಟಾಗುವದು. ಆ ಮೇಲೆ ಅವನು ತನ್ನ ವಿಚಾರವೇ ಶಕ್ತಿಯಾಗಿರುವದೆಂದು ಬಗೆದು ಅದರ ಮೇಲೆಯೇ ತನ್ನ ಭಾರವನ್ನು ಹಾಕುತ್ತಾನೆ. ಎರಡನೆಯರ ಮೇಲೆ ಭಾರವನ್ನು ಹಾಕಿ ನಿಂತಿರುವಾಗ ಅವನಲ್ಲಿರುವ ಶಕ್ತಿಗಿಂತಲೂ ಈಗಿನ ಶಕ್ತಿಯು ವಿಲಕ್ಷಣವಾಗಿ ತೋರುವದು. ಅಲ್ಲಿಂದ ಅವನು ಚಮತ್ಕಾರಗಳನ್ನೇ ಮಾಡಿ ತೋರಿಸುವನು. " श्रद्धामयोयं पुरुषः योयच्छ्रद्धः स एवसः" ಪುರುಷನು ಶ್ರದ್ಧಾಮಯನಾಗಿರುವನು. ಆದ್ದರಿಂದ ಅವನು ಯಾವ ವಸ್ತುವಿನಲ್ಲಿ ತನ್ನ ಶ್ರದ್ಧೆಯನ್ನಿಡುವನೋ ಅದೇ ಅವನು ಆಗುವನು. ಶ್ರದ್ಧೆಯು ಉದಯವೆಂದರೆ ಧ್ಯೇಯ ಜೀವನದ ಹುಟ್ಟು, ಅಧ್ಯಾತ್ಮಜೀವನದ ಅರುಣೋದಯು. ಶ್ರದ್ಧೆಯ ಜನನವೆಂದರೆ ಪ್ರೇಯಸ್ಸಿನ ಮರಣ. ಶ್ರೇಯಸ್ಸಿನ ಜನನ. ಪ್ರೇಯೋಮಾರ್ಗವನ್ನುಳಿದು, ಶ್ರೇಯ ಮಾರ್ಗವನ್ನು ಹಿಡಿದವನು ಇಂದಿಲ್ಲ ನಾಳೆ ಸುಖಶಾಂತಿಯನ್ನು ಹೊಂದುವನು. ಅವನ ತತ್ವಗಳ ವಿಜಯವೇ ಅವನಿಗೆ ಶಾಂತಿಯಾಗುವದು. ಶ್ರದ್ಧೆಯನ್ನು ಹುಟ್ಟಿಸಿ ಶ್ರೇಯೋ ಮಾರ್ಗವನ್ನು ತೋರಿಸಿ ಅನಂತಸುಖಶಾಂತಿಯನ್ನು ಒದಗಿಸಿಕೊಡುವವನೇ ಮಹಾತ್ಮನು, ಮಹಾತ್ಮನು ಮರಣದ ಮಾರಿಯಾಗಿರುವನಾದ್ದರಿಂದ ತನ್ನನ್ನು ಹಿಂಬಾಲಿಸುವವರಿಗೆ ಅಮೃತದ ಅಮೃತವನ್ನು ಕುಡಿಸುವನು. ಅಮರನಾಗುವದೇ ಮಾನವನ ಧ್ಯೇಯವು. ಈ ಧ್ಯೇಯವನ್ನು ಸ್ವತಃ ಪಡೆದು, ಪರರಿಗೆ ತನ್ನಂತೆಯೇ ಮಾಡುವವನು ಪರಮಪುರುಷನು. ಅವನಿಗೆ ಭಗವಂತನ ಅವತಾರವೆಂದನ್ನುವದುಂಟು. ತುಕಾರಾಮ ಮಹಾರಾಜರು ಇಂಥವರ ವರ್ಣನೆಯನ್ನು ತನ್ನ ಅಮರವಾಣಿಯಿಂದ ಮಾಡಿರುವರು.

> शुद्धबीजापोटीं फळें रसाळ गोमटीं-।
> मुखीं-अमूल्या वाणी, देह देवाचे भारणी ।
> सर्वांग निर्मळ, चित्त जैसें गंगाजळ ।
> तुका म्हणे जाती ताप दर्शनें विश्रांति ॥ [तुकाराम]

# ಕಥೆಯಲ್ಲ ಕಥನ

ಬರೆದವ:—ಚಾಣಕರಾಯ

## ೧ ಮಲತಾಯಿ

( ವಾ. ದೀ. ಧ್ವಿ. )

ತಾಯೆ! ಮಲತಾಯೆ ! ನೀನೆಂದು ಹುಟ್ಟಿದೆ ಹೇಳು.
ನಿನಗಾಗಿ ಲೋಕವೆಲ್ಲಾ ॥
ಕಾಯುವನು ಸವಿಸುತಿದೆ, ಮಾಯವಾಗುವೆಯದೆಂದೆಲೆ
ದೇವಿ, ಪೇಳ್ವುದೆಲ್ಲಾ ॥ ೧ ॥

ಮೊದಲನೆಯ ಜನ್ಮದೊಳು, ಕದ್ರುವಿನ ರೂಪದಿಂದವತರಿಸಿ
ಭುವನದಲ್ಲಿ ॥
ಆ ದಯೆಯಿಂ ಸೌಪರ್ಣಿಯನ್ನೆಳೆದೆಯಲ್ಲವೇ
ನಿನ್ನ ರಣರಂಗದಲ್ಲಿ? ॥ ೨ ॥

ತದನಂತರದೆ ಸುರುಚಿಯಾಗಿ, ಭೂತಲಕಿಳಿದು
ಮುದ್ದುಮೊಗದೆಳಮಗುವನು ॥
ಎದೆಗಿಚ್ಚಿನಿಂದಕಟ ! ನೀನೋಡಿಸಿದೆಯಲ್ಲವೇ
ಬಿಡಿಸಿ ಭೂತಲವನು ? ॥ ೩ ॥

ತದನಂತರದೆ ನೀನು ಕೈಕೇಯಿಯಾಗಿ
ಲಕ್ಷ್ಮಣ-ರಾಮರನು ಕಾಡಿಗೆ ॥
ಪದುಳದಿಂದಟ್ಟಿ ತೊಳಲಿಸಿದೆ, ಬಳಲಿಸಿದೆ ಯೆಲೆ
ನಿನ್ನ ಗತಿಯೇನು ಕಡೆಗೆ? ॥ ೪ ॥

ಈಗಳಾದರೊ, ನೀನು, ನೆಲದೊಳೆಲ್ಲೆಲ್ಲಿಯುಂ
ಹೂಡಿರುವೆಯಾಟವನ್ನು ॥
ಸಾಗು ದಯಮಾಡಿ ಮಲತಾಯೆ !
ಬೇಗನೆ ಹಿಡಿಯೆ ತವರಮನೆ ಹಾದಿಯನ್ನು ॥ ೫ ॥

ಗೋವಿಂದಪುರದಲ್ಲಿ, ಧನಪಾಲನು ತನ್ನ ಹೆಸರಿಗನುಗುಣವಾಗಿ, ದೊಡ್ಡ ಶ್ರೀಮಂತನು. ಅವನಿಗೆ ಇಬ್ಬರು ಹೆಂಡಿರು. ಹಿರಿಯವಳಾದ ಗೌರಮ್ಮನಿಗೆ ಒಂದು ಹೆಣ್ಣು ಕೂಸು ಮಾತ್ರ. ಕಿರಿಯವಳು ಮೂವರು ಗಂಡುಮಕ್ಕಳನ್ನು ಹೆತ್ತು ಆವಾಗಲೆ ಕಾಲವಾಗಿಬಿಟ್ಟಿದ್ದಾಳೆ. ಪಾಪ! ಆ ಎಳೆಮಕ್ಕಳನ್ನು ಮಲತಾಯಿಯಾದ ಗೌರಮ್ಮನು ಪರಿ

ಪರಿಯಿಂದ ಕಾಡಹತ್ತಿದಳು. ಧನಪಾಲನು ಇದನ್ನೆಲ್ಲ ನೋಡಿ ಮನಸ್ಸಿನಲ್ಲಿ ಮರ ಮರನೆ ಮರುಗಿದರೂ, ಮೇಲೆ ಮಾತ್ರ ಆವ ಭಾವನೆಯನ್ನೂ ಪ್ರಕಟಿಸುತ್ತಲಿರಲಿಲ್ಲ. ಗಂಡನು ಊಟಕ್ಕೆ ಮನೆಗೆ ಬಂದರಾಯಿತು, ಮಕ್ಕಳ ದಂಡನೆಯು ಮಿತಿಮೀರುವದು. ಗೌರಮ್ಮನು ಒಳಗೆ ಗಂಡನಿಗೆ ಉಣಬಡಿಸಿ ತಾನು ಹೊರಗೆ ಪಡಸಾಲೆಯಲ್ಲಿ ಬಂದು ಕುಳಿತು, ಬೇಕೆಂತಲೇ ತನ್ನ ಚಿಕ್ಕಮಗಳನ್ನಳಿಸಿ "ನಮ್ಮವ್ವಾ ! ನನಗೆಲ್ಲಿ ಮತ್ತೆ ಕಡಿಮೆ ಯಾಗಿದ್ದಿತು ! ನಿನ್ನ ಮಕ್ಕಳನ್ನು ನಿನ್ನ ಸಂಗಡ ತೆಗೆದುಕೊಂಡು ಹೋಗದೆ, ಹೆರವರ ಹೆಣಕ್ಕೆ ಗುರಿಮಾಡಿಟ್ಟೆ. ಹಂದಿಯಹಾಗೆ ಬಡಬಡನೆ ಹತ್ತೆಂಟು ಹಡೆದು, ಹೊರ ಟೆದ್ದು ಹೋದರೆ ಹಿಂದಿನಿಂದ ಆರು ತೇಕಬೇಕು ! ನಾನು ಎಷ್ಟು ಜನ್ಮಗಳಲ್ಲಿ ಪಾಪ ಮಾಡಿ ಈ ಮನೆಗೆ ಬಂದಿರಬೇಕೇ ನಮ್ಮವ್ವಾ! ಮಾಡಬೇಕು-ಮುಟ್ಟಬೇಕು-ಮತ್ತೆ ಜನ ರಿಂದ "ಎಷ್ಟಾದರೂ ಮಲತಾಯಿ, ಆವಳ ಕರುಳು ಏತಕ್ಕೆ ಕರಗೀತು!" ಎಂದು ಆಡಿಸಿ ಕೊಳ್ಳಬೇಕು. ಈ ಪೀಳಿಗೆಗಳು ನನ್ನ ಮಗಳನ್ನು ಸಮ್ಮಸುಮ್ಮನೆ ಬಡಿದು, ಚಿವುಟಿ ಅಳಿಸುತ್ತವೆ. ಈ ಸಂಸಾರವು ಸಾಕಾಗಿ ಹೋಯಿತು! ಎಲ್ಲಿಯಾದರೂ ಹೋಗಿ ಬಾವೀ ಬೀಳುವಂತಾಗಿದೆ!!" ಎಂದು ಗಡಗಡನೆ ಗದ್ದರಿಸುವಳು.

ಆಗ ಗಂಡನು ಒಳಗೆ, ಕುಳಿತಲ್ಲಿಯೇ ಕಣ್ಣಿಗೆ ನೀರು ತಂದು, ಕಾತರ ಸ್ವರದಿಂದ "ತಮ್ಮಗಳಿರಾ! ಇಲ್ಲಿ ಬನ್ನಿ. ನನ್ನೊಡನೆ ಉಣಬನ್ನಿ." ಮಕ್ಕಳನ್ನು ಕರೆಯುವುದೇ ತಡ, ಹೊರಗೆ ಮಾರಿಯ ಮೂರ್ತಿಯೇ ಪ್ರಕಟವಾಯಿತು! "ಹೂಂ-ಬರುತ್ತಾರೆ ! ಬಾರದೆ ಏನು ಮಾಡಿಯಾರು ? ಹತ್ತಿಪ್ಪತ್ತು ಸಲ ತಿಂದು ಬೇನೆ ಬಿದ್ದರೆ ಹಿಂದಿನಿಂದ ಆರೈಕೆ ಮಾಡುವವರಾರು? ಮನೆಯಲ್ಲಿಯೇ ಕುಳಿತುಕೊಳ್ಳುತ್ತಿದ್ದರೆ ನಿಮಗೆ ತಿಳಿಯುತ್ತಿದ್ದಿತು! ಉಂಡನೀರು ಉಗುಳುತ್ತ ಹೊರಗೆ ಹೊರಟು ಹೋಗುತ್ತೀರಿ - ನಿಮಗೇನು ಗೊತ್ತು!" ಎಂದವಳೇ ಆ ಮಕ್ಕಳನ್ನು ಸಾಯುವಂತೆ ಮನಸಣಿ ಬಡಿದು "ಮಂದಿಯ ಮಕ್ಕಳೆಲ್ಲ ಹೇಗೆ ತಿಂದು ತಿರುಗಾಡುತ್ತಲಿವೆ! ನಿಮಗೇನು ದಾಡಿಯಾಗಿದೆ? ಯಾವಾಗಲೂ 'ಕೂಳು ಕೂಳು' ಎಂದಳುವುದೇ ನಿಮ್ಮ ಹಾಡು ! ನಿಮ್ಮನ್ನು ಹಡೆದವರು ಆವ ಬರದಲ್ಲಿ ಹಡೆ ದಿದ್ದಾರೆಯೋ ದೇವರೇ ಬಲ್ಲ!" ಎಂದು ಗಲಗಲ ಬಾಯಿಮಾಡಿ ಹೊರಗೆ ಓಣಿಗೆ ಅಟ್ಟಿ ಬಿಟ್ಟಳು.

ಇಂತಹ ಕೋಲಾಹಲದಲ್ಲಿ ಎಂತಹ ಪಕ್ವಾನ್ನವಾದರೂ ಹೇಗೆ ಗಂಟಲಲ್ಲಿಳಿ ದೀತು!—

"ಕೆಂದಳಿರಂದದ ಕಿರುವೆರ—।
ಲಿಂದಂ, ಕಿರುಗೂಸು ಸುಟ್ಟೆ ತೋರುತ್ತೆ ಮನಂ—॥
ದಂದು ಕಿಮುಳ್ಚಿದ ಬೋನಂ ।
ತಂದೆಗೆ ಸುಧೆಯುತ್ತಣಿಂದಮಿನಿದೆನಿಸದೆ ಪೇಳ್ " ॥ *

* ನೀತಿಮಂಜರಿಯ ಎರಡನೆಯ ಭಾಗದಿಂದಾರಿಸಲ್ಪಟ್ಟದೆ.

ಇಂತಹ ಕರುಳಿನ ತಂದೆಯು ಗಂಟಲಲ್ಲಿ ದೆವ್ವಿಗಿಟ್ಟ ನಿವಾಳಿಯನ್ನು ಹೋಲುವ ಕೂಳು ಹೇಗೆ ಇಳಿದೀತು ! ಹೊಟ್ಟೆಯ ಕಾಟಕ್ಕಾಗಿ ಒಂದೆರಡು ತುತ್ತು ತಿಂದು ಕೈತೊಳೆದು ಕೊಂಡು ಅರೆಹೊಟ್ಟೆಯಿಂದ ಹೊರಗೆ ಹೊರಟು ಹೋದನು.

ಹೊರಗೆ ಹೋಗಿ ಇನ್ನೂ ಒಂದು ತಾಸು ಮುಗಿಯುವುದರಲ್ಲಿದ್ದಿತು. ಇಷ್ಟ ರಲ್ಲಿ ಆ ಎಳೆಮಕ್ಕಳು ಬಿಸಿಲಲ್ಲಿ ಅತ್ತಿತ್ತ ತಿರುಗಾಡಿ ಮನೆಯ ಬಾಗಿಲಿಗೆ ಬಂದು, ಸದ್ದು ಮಾಡದೆ ಒಳಗೆ ಹಣಿಕೆಹಾಕಿ ನೋಡುತ್ತ, ಕಾಲುಗಳನ್ನು ಮೆಲ್ಲಮೆಲ್ಲನೆ ಎತ್ತಿಡುತ್ತ, ಜೀವನನ್ನು ಕೈಯ್ಯಲ್ಲಿ ಹಿಡಕೊಂಡು ಹೊಸತಿಲೊಳಗೆ ಕಾಲಿಟ್ಟವು.

ಧನಪಾಲನು ಮನೆಗೆ ಬಂದಾಗ, ಆ ಕೋಲಾಹಲದಲ್ಲಿ ಮೇಲಂಗಿಯನ್ನು ಮನೆ ಯಲ್ಲಿಯೇ ಮರೆತು ಹೋಗಿದ್ದನಾದುದರಿಂದ, ತಿರುಗಿ ಮನೆಯ ಕಡೆಗೆ ಹೊರಟಿದ್ದಾನೆ. ಬಾಗಿಲಿಗೆ ಬಂದೊಡನೆ ಸೆರೆಯಾಳುಗಳಂತೆ ಕೂಳು ತಿನ್ನುತ್ತಲಿದ್ದ ಮಕ್ಕಳು ಪಡಸಾಲೆ ಯಲ್ಲಿ ಕಣ್ಣಿಗೆ ಬಿದ್ದವು. ಆ ಮಾರಿಯು ಏನೇನೋ ಗುಣಗುಟ್ಟುತ್ತಲಿದ್ದುದೂ ತಿಳಿ ಯಿತು. ಆದುದರಿಂದ ಅಲ್ಲಿಯೇ ಹೊರಗೆ ಸ್ವಲ್ಪ ವೇಳೆಯ ವರೆಗೆ ಮರೆಗೆ ನಿಂತನು.

"ಅವ್ವಾ ! ಇನ್ನಿಷ್ಟು ರೊಟ್ಟೀ ಹಾಕು"

"ಹೂಂ—ಹಾಕುತ್ತೇನೆ ! ಹಾಕದೆಯೇನು ಮಾಡಿಯೇನು!

ನನಗೆ ಕೆಲಸ—ಬೊಗಸೆಗಳೇ ಇಲ್ಲ. ನಿಮಗೆ ಕೂಳು ಕೊಡುವುದೊಂದೇ ನನ್ನ ಕೆಲಸ ! ತಿನ್ನುವುದಾದರೂ ಎಷ್ಟದು ? ಹೊಟ್ಟೆಯಲ್ಲಿ ಭೇತಾಳಗೀತಾಳ ಹೊಕ್ಕಿರುವ ದೇನು ? ನನ್ನ ಕಂದಮ್ಮನನ್ನು ನೋಡಿ ನಾಚಿರಿ ! ಒಂದು ಚಪಾತಿಯಲ್ಲಿ ಎಂಟು ದಿನ ಹೊರಳಾಡುತ್ತಾಳೆ. ( ಮೋರೆ ಕಿವುಚಿ, ತನ್ನಲ್ಲಿಯೇ ತಾನು- ) ಚಪಾತಿಯ ಹೆಸರನ್ನೇಕೆ ತೆಗೆದೆನೇ ! ( ಎದ್ದು ) ಅಲ್ಲಿ ಕಟಕು ರೊಟ್ಟೆಯಿವೆ, ಬೇಕಾದರೆ ಕೈ ತೊಳಕೊಂಡು ಹಾಕಿಕೊಂಡು ಅರಿಯಿರಿ."

ಧನಪಾಲನು ತನ್ನ ಮಕ್ಕಳ ಇಂತಹ ದುರವಸ್ಥೆಯನ್ನು ನೋಡಿ ಬಲು ಮರುಗಿ ದನು. ಆದರೆ ಮಾಡುವುದೇನು ? ಒಳಗೆ ಬಂದು ನೋಡುತ್ತಾನೆ, ರೊಟ್ಟೆಯ ಮೇಲೆ ಬಿಸಿ ಕುದಿಸಿದ ತೊಗರಿಯ ಕಾಳುಗಳು ಮಾತ್ರ ಕೆಂಪಗೆ ಕಾಣಿಸುತ್ತಿದ್ದವು. ಪಾಪ ! ಆ ಮಕ್ಕಳಿಗೆ ಒಂದಿಷ್ಟು ತೊಗೆಯೂ ಕೂಡ ಬಂಗಾರವಾಗಿದ್ದಿತು !

## ೨. ದುರ್ದಿನ

( ಕುಸುಮ ವಿಷಮ ದ್ವಿಪದಿ. )

ಇರುಳೆಲ್ಲ ಗೂಗೆಗಳ<br>
ಒರಟು ಕೂಗನೆ ಕೇಳಿ ॥೧॥

ಬಗೆಯಲ್ಲಿ ಬಗೆದೆನ್ನೆ<br>
ನಗೆಗೆಡೆಯಿವ್ಯಾತ್ತುಕಟ ! ॥೨॥

ಕಿವಿಯು ಗಡಚಿಕ್ಕಿಹುದು
ಎವೆ ಮುಚ್ಚದಿದ್ದೆನ್ನೈ ॥೩॥

ಮುಗಿಲಲ್ಲಿ ಮೋಡಗಳು
ಮಿಗಿಲಾಗಿ ಹಬ್ಬಿದುವು ॥೪॥

ಕಗ್ಗತ್ತಲೆಯ ಕಾಟ
ದಗ್ಗಳಿಕೆ ಬೆಳೆದಿರಲು ॥೫॥

ಮೊದಲಿದ್ದ ಕತ್ತಲೆಯೆ
ಉದಯಿಸಿತಹಾ ಮತ್ತೆ ! ॥೬॥

ಚಿತ್ತವಿದು ಬೇಸತ್ತು
ಸತ್ತಂತೆ ಕಂಡಿತ್ತೈ ॥೭॥

ಎತ್ತ ಹೋದರು ತನ್ನ
ದತ್ತ ಬೆಂಬಿಡದಯ್ಯೊ ! ॥೮॥

ಇನಿತರೊಳ್ ಬೆಳಗಾಗಿ
ಮನವನರಳಿಪುದೆಂದು ॥೯॥

ಚಿತ್ತಜಾರಿಯೆ! ನಿನಗಿ—
ದೆತ್ತಣಾ ನ್ಯಾಯವೋ ? ॥೧೦॥

× × × × ×

ಧನಪಾಲನು ಪರಂಧಾಮಕ್ಕೆ ಹೋಗಿ, ಇಂದಿಗೆ ಎಷ್ಟೋ ವರ್ಷಗಳಾಗಿವೆ. ಅವನು ಇರುವಾಗಳೇ ಎಲ್ಲ ಮಕ್ಕಳ ಮದಿವೆಯು, ಮುಗಿದಿದ್ದಿತು. ಇಂದು ಅವನ ಮಗಳಾದ ಕಾಂತಮ್ಮನು ಗಂಡನ ಮನೆಯಲ್ಲಿ ಸುಖದಿಂದ ಇದ್ದಾಳೆ. ಇತ್ತ ಎಲ್ಲ ಮಕ್ಕಳ ಹೆಂಡಿರೂ ಮನೆಗೆ ಬಂದಿದ್ದಾರೆ. ಈ ಮೂವರು ಮಕ್ಕಳಲ್ಲಿ ಕಿರಿಯವನಾದ ದೇವೇಂದ್ರನು ಬಲು ಜಾಣನು. ಅವನಿಗೆ ಸಂಸಾರವನ್ನು ಹೇಗೆ ಸಾಗಿಸಬೇಕೆಂಬುದು ಚೆನ್ನಾಗಿ ತಿಳಿದಿದ್ದಿತು. ಉಳಿದವರಿಬ್ಬರಿಗೆ ಕುಳಿತು ತಿನ್ನಲಿಕ್ಕೆ ಮನೆಯೊಳಗಿನ ಹಂಡೆ–ತಪ್ಪೇಲಿಗಳೂ ಕೂಡ ಸಾಲದಾದವು. ಧನಪಾಲನಾದರೋ ಸಾಯುವ ಮೊದಲು ಆವುದೋ ಒಂದು ಜಗಳದಲ್ಲಿ, ತನ್ನ ಜಿಂದಿಗೆಯನ್ನೆಲ್ಲ ಹಾಳುಮಾಡಿ ಬಿಟ್ಟಿದ್ದನು. ಹಾಗೂ ಆಗಿನ ಕಾಲದಲ್ಲಿ ಮಳೆಯು ತಕ್ಕಷ್ಟಕ್ಕಿಂತ ಹೆಚ್ಚಿಗೆ ಆಗಹತ್ತಿದಿತ್ತಾದುದರಿಂದ, ಹೊಲಗಳೆಲ್ಲ ಬೀಳು ಬಿದ್ದವು. ಮನೆಯ ವೆಚ್ಚಕ್ಕೆ ಹೆಂಡಿರ ಮೈಮೇಲಿನ ಒಡವೆಗಳೂ ಕೂಡ ಸಾಲದಾದವು. ಆದುದರಿಂದ ಚಿಕ್ಕವನು, ಹೀಗೆ ಕುಳಿತು ತಿನ್ನುವುದು ನೆಟ್ಟಗಲ್ಲವೆಂದೂ ತಿನ್ನಲಿಕ್ಕಾದರೂ ಎಲ್ಲಿಂದ ಬರಬೇಕೆಂದೂ, ಬಗೆದು, ಇದ್ದ ಬಿದ್ದ ಜಿಂದಿಗೆಯಲ್ಲಿಯೇ ಪಾಲು ಮಾಡಿಕೊಂಡು ತನ್ನ ಅಣ್ಣಂದಿರಿಂದ ಬೇರೆಯಾಗಿ ಬೇರೆ ಮನೆ ಮಾಡಿಕೊಂಡು ಹೆಂಡತಿಯೊಡನೆ ನಿಂತನು. ಉಳಿದಿಬ್ಬರು ತಮ್ಮ ಹೊಲಗಳನ್ನೆಲ್ಲ ಕೈಗೆ ಬಂದಂತೆ ಮಾರಿ, ಇರುವ ತನಕ ತಿಂದು ಕಡೆಗೆ ಯಮಪುರದ ಅತಿಥಿಗಳಾದರು. ಮೃತ್ಯುವೇ ಇವರನ್ನು ಕರೆಯಿತೋ, ಅಥವಾ ಇವರೇ ಮೃತ್ಯುವಿನ ಬೆನ್ನು ಹತ್ತಿಹೋದರೋ ಎಂಬ ಸಂದೇಹ. ಏನೇ ಇರಲಿ ನಿರುದ್ಯೋಗಿಗಳಾಗಿ ಫಲವನ್ನುಂಡರು !

ದೇವೇಂದ್ರನು ಹೊಲಮನೆ ಮಾರುವ ಗೋಜಿಗೆ ಹೋಗಲಿಲ್ಲ. ಮೈಮುರಿದು ದುಡಿದು ಕೆಲಮಟ್ಟಿಗೆ ಹಣವನ್ನು ಕೂಡಹಾಕಿ, ಸಣ್ಣದೊಂದು ಸೀರೆಯ ವ್ಯಾಪಾರವನ್ನಿಟ್ಟನು. ಸೀರೆಯ ಗಂಟನ್ನು ಹೊರಲಿಕ್ಕೆ ಕುದುರೆಯೊಂದನ್ನು ಕೊಂಡರೆ ಮತ್ತೆ ತುಸು ಗಂಟು ಸಾಯುವದೆಂದು ಬಗೆದು, ಸ್ವತಃ ತನ್ನ ತಲೆಯ ಮೇಲೆ ದೊಡ್ಡದಾದ

ಸೀರೆಯ ಗಂಟನ್ನು ಹೊತ್ತುಕೊಂಡು, ಬಿಸಿಲು ಮಳೆಗಳನ್ನು ಲೆಕ್ಕಿಸದೆ ಹಳ್ಳಿಹಳ್ಳಿ ತಿರುಗಹತ್ತಿದನು.

ಬಾಲ್ಯದಲ್ಲಿಯೇ ಬಂದು ಕೂಡಿದ ಕಷ್ಟಗಳು ಇಂದಿಗೂ ಇಲ್ಲಿ ತಳವೂರಿ ನಿಂತವು. ಇವನು ತನ್ನ ಸಾತ್ವಿಕ ವ್ಯವಹಾರದಿಂದ, ಬೇಗನೆ ಹಳ್ಳಿಯ ಜನರ ನಂಬುಗೆಗೆ ಪಾತ್ರನಾದನು. ಇವನ ವ್ಯಾಪಾರವು ಸುಸೂತ್ರವಾಗಿ ನಡೆಯಹತ್ತಿತಾದುದರಿಂದ, ಹೊಟ್ಟೆಯ ಚಿಂತೆಯೊಂದು ಕಡಿಯಿತು. ಸಾತ್ವಿಕನಾದ ದೇವೇಂದ್ರನು ತನ್ನ ಅಣ್ಣಂದಿರು ಮಾಡಿಟ್ಟುಹೋದ ಹೆಡಿಗೆ ಸಾಲವನ್ನೆಲ್ಲ ಹರಿಸು, ಹರತಿಗೆ ಹತ್ತಿ ಹಣವನ್ನು ಹಿಂದೊಗೆಯು ಹತ್ತಿದನು. ಆ ಮೇಲೆ ತನ್ನ ಹೊಲಗಳನ್ನೆಲ್ಲ ಹಸನುಮಾಡಿಸಿದನಾದುದರಿಂದ, ಅವೂ ಚೆನ್ನಾಗಿ ಬೆಳೆಯಹತ್ತಿದವು. ಕಾಲವೊಂದನುಕೂಲವಾದರೆ ಎಲ್ಲವೂ ಸಾಧ್ಯ!

ಇವನ ಹೆಂಡತಿ—ಸುಂದರಮ್ಮ. ಇವಳೂ ಒಬ್ಬ ಸಾವುಕಾರನ ಮಗಳು. ಪತಿಪರಾಯಣಳು. ಇವಳೇನು ಆ ಬಡತನದ ಹೊಡತಕ್ಕೆ ಹಣಿಯಲಿಲ್ಲ. ಗಂಡನು ವ್ಯಾಪಾರ ಮಾಡಹತ್ತಿದಾಗಿನಿಂದ ಹೊಟ್ಟೆ—ಬಟ್ಟೆಗಳಿಗೇನು ಕೊರತೆಯಿರಲಿಲ್ಲ. ದೇವರ ದಯದಿಂದ ಒಬ್ಬ ಮಗನು ಹುಟ್ಟಿದ್ದಾನೆ. ಚೆಲುವಾದ ಕೂಸಿಗೆ ಅಕ್ಕರತೆಯಿಂದ ಚಿದುರನೆಂದು ಹೆಸರಿಟ್ಟಿದ್ದಾರೆ. ಅಪರೂಪವಾಗಿ ಹುಟ್ಟಿದ ಈ ಮುದ್ದುಮಗುವನ್ನೆತ್ತಿ "ಹರಿಶ್ಚಂದ್ರ ತಾರಾಮತಿಯರಿಗೆ ಲೋಹಿತಾಂಗನು ಹುಟ್ಟಿದಂತೆ ನಮಗೆ ನಮ್ಮಪ್ಪ ಹುಟ್ಟಿದ! ಇನ್ನು ನಮಗೇನು ಕೊರತೆ? ಈ ಮುದ್ದುಮಗುವಿನ ಮೋರೆ ನೋಡಿದರೆ ದಣಿವೆಲ್ಲ ಹಿಂದಾಗುತ್ತದೆ!" ಎಂದು ಮಾತುಮಾತಿಗೊಮ್ಮೆ ಪ್ರೇಮೋದ್ಗಾರಗಳನ್ನು ತೆಗೆಯುತ್ತ, ಮೊದಲಿನ ಕಷ್ಟನಷ್ಟಗಳನ್ನೆಲ್ಲ ಮರೆತುಬಿಟ್ಟರು.

ಹೊಲಕ್ಕೆ ಬೆಳಸೀ ತಿನ್ನಲಿಕ್ಕೆ ಹೋದರೆ, ದೇವೇಂದ್ರನು ಹೆಂಡತಿಯನ್ನು ಗುಡಿಸಲಿನ ಹೊರಗೆ ಬರಗೊಡುತ್ತಲಿರಲಿಲ್ಲ. "ಏನೇ! ನೀನು ಹೊರಗೆ ಬಂದರೆ ಕೂಸೂ ಹೊರಗೆ ಬರುತ್ತದೆ. ಹೊರಗೆ ಬಂದರೆ ಇಂತಹ ಬಿಸಿಲಲ್ಲಿ ಅದರದೇನು ಗತಿಯಾದೀತು!" ಎಂದೆನ್ನುವನು.

ಈ ಪರಿಯಾಗಿ ಆ ಮಗುವನ್ನು ಅಕ್ಕರತೆಯಿಂದ ಸಲುಹುತ್ತಿದ್ದರು. ಇಷ್ಟರಲ್ಲಿಯೇ ದೇವೇಂದ್ರನಿಗೆ, ನವೆಬೇನೆ ಬಂದು ಕೂಡಿತು. ಎಷ್ಟು ಔಷಧೋಪಚಾರಗಳನ್ನು ಮಾಡಿದರೂ ವಾಸಿಯಾಗಲಿಲ್ಲ. ಕಡೆಗೆ ಒಂದು ದಿನ ಸುಂದರಮ್ಮನನ್ನು ಕರೆದು, ತನ್ನ ಹತ್ತರ ಕುಳ್ಳಿರಿಸಿಕೊಂಡು, ಅವಳ ಒಂದು ಕೈಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ಹೇಳಿದುದೇನೆಂದರೆ—

"ನೀನು ಅಳುವದಿಲ್ಲವಾದರೆ ನಾನು ಹೇಳುತ್ತೇನೆ. ಹಿಂದಿನಿಂದ ಸಾಯುವಾಗ 'ಏನು ಹೇಳುವಿರಿ! ಏನು ಹೇಳುವಿರಿ!' ಎಂದು ಹಲುಬಿದರೆ, ಆಗ ನಾನು ಏನು

ಹೇಳೇನು? ಈಗ ನನ್ನ ಮನಸ್ಸು ಸಮಾಧಾನವಿದೆ. ಏನು ಹೇಳಬೇಕೆಂದಿರುವೆನೋ
ಅದನ್ನೆಲ್ಲ ಈಗಳೇ ಹೇಳಿ ಬಿಡುತ್ತೇನೆ. ಕೇಳು- ”

ಸುಂದರಮ್ಮನು ಕಣ್ಣುತುಂಬ ನೀರು ತಂದು, ನಡುಗುವ ದನಿಯಿಂದ “ಏನು ಹೇಳುತ್ತೀರಿ ! ಯಾವಾಗಲೂ ಇದೇ ಮಾತು! ಹೀಗೇಕೆ ಮಾಡುವಿರಿ? ಯಾವಾಗಲೂ ಸಾಯುವೆನೆಂಬುದೊಂದೇ ಮಾತು! ಈ ದಿನ ದಸರೆಯ ಹಬ್ಬ. ಏನಾದರೂ ನಾಲ್ಕು ಶುಭದ ಮಾತುಗಳನ್ನು ಹೇಳಬೇಕು, ಅದನ್ನೆಲ್ಲ ಬಿಟ್ಟು ಸಾಯುವ ಸಮಾಚಾರನ್ನೇ ಎತ್ತುತ್ತೀರಿ! ” ಎಂದವಳೇ ‘ಹೊಂಯ್’ ಎಂದು ಅಳಹತ್ತಿದಳು.

“ಛೇ ಇಲ್ಲನೇ- ನಾನು ಇಂತಹ ಕೆಟ್ಟಬೇನೆಯಿಂದ ಉಳಿಯುವ ಸಂಭವವಿಲ್ಲ. ನೀನು ಹೀಗೇಕೆ ಹುಚ್ಚಳಂತೆ ಅಳುತ್ತೀ? ಅಳುವುದಿಲ್ಲವಾದರೆ ಮಾತ್ರ ಹೇಳುತ್ತೇನೆಂದು ಮೊದಲೇ ಹೇಳಿದ್ದೇನೆ. ಆದರೂ ಕೇಳಲೊಲ್ಲೆ. ಅತ್ತರೇನು ನಾನು ಉಳಿಯುವೆನೇ! ಹಾಗಾದರೂ ಹೇಳು. ಆ ಮೇಲೆ ನಿನಗೆ ಅಳಲಿಕ್ಕೆ ಬೇಡವೆಂದೆನ್ನುವುದಿಲ್ಲ. ಕೇಳು-

“ಇಂದು ವಿಜಯದಶಮಿ, ಪಾಂಡವರಿಗೆ ಇಂದು ವಿಜಯವಾಗಿದೆ. ಪಾಂಡವರಂತೆಯೇ ನೀನೂ ಪರಿಪರಿಯಾಗಿ ಕಷ್ಟಗಳನ್ನನುಭವಿಸಿದೆ. ಇಂದಿನ ದಿನವು ನಿಮ್ಮ ಪಕ್ಷ ಶವನ್ನು ಸೂಚಿಸುವದಕ್ಕಾಗಿಯೇ ಬಂದಿದೆ.

“ನಾನು ಸತ್ತ ಮೇಲೆ ನೀನು ಬೇಕಂತೇ ನಿನ್ನ ಜೀವಕ್ಕೆ ಕಷ್ಟ ಮಾಡಿಕೊಳ್ಳುವೆ ಯೆಂಬುದು ನನಗೆ ಮೊದಲೇ ತಿಳಿದಿದೆ. ಈಗಾಗಳೇ ಸ್ವತಃ ಕಮತವನ್ನಿಟ್ಟು, ಹೊಲಗಳನ್ನು ಸಾಗಿಸಬೇಕೆಂದು ಹೆಣಗಾಡುತ್ತೀ. ಮುಂದೆ ನೀನೇನು ಕೇಳುವದಿಲ್ಲ. ದುಡ್ಡುಗಳಿಸುವ ಚೆಂದಕ್ಕೆ ಬೀಳಬೇಡ. ದೇವರು ನಿನಗೆ ಆವುದೇನು ಕೊರತೆಮಾಡಿಲ್ಲ. ನಿನಗೆ ಹೇಳುವುದಿಷ್ಟೇ, ಮಗನನ್ನು ಮಾತ್ರ ಸುಶಿಕ್ಷಿತನನ್ನಾಗ ಮಾಡು. ನಾವು ಮಲತಾಯಿಯ ಮೂಲಕ ದಡ್ಡರಾಗಿ ಬಗೆಬಗೆಯ ಕಷ್ಟಗಳನ್ನನುಭವಿಸಿದೆವು. ಆದರೆ ದೇವರು ಇವನಿಗೇನು ಅಂತಹ ಸ್ಥಿತಿಯಲ್ಲಿಟ್ಟಿಲ್ಲ. ಇವನ ದೈವವು ಚೆನ್ನಾಗಿದೆ. ಇವನ ಬಯಕೆಯನ್ನು ನೀನು ಎಂದೂ ಭಂಗಿಸಬೇಡ, ದೊಡ್ಡವನಾಗಿ ವಿದ್ಯಾಬುದ್ಧಿಗಳನ್ನು ಕಲಿತು, ನಾಲ್ಕು ಜನರಿಂದ ‘ಅಹುದಹುದೆಂ’ದೆನ್ನಿಸಿಕೊಂಡು ಸುಖದಿಂದ ಸಂಸಾರ ಮಾಡುವದನ್ನಷ್ಟು ನೋಡಬೇಕೆಂದು ನನ್ನ ಮನಸ್ಸಿನಲ್ಲಿದ್ದಿತು, ಆದರೆ ಅದು ಪರಮಾತ್ಮನ ಮನಸ್ಸಿಗೆ ಬರಲಿಲ್ಲ! ನಾನು ಸಾಯುತ್ತೇನೆಂದು ನೀನು ಬರಿ ಅಳುತ್ತ ಕುಳಿತುಕೊಳ್ಳಬೇಡ. ನನ್ನ ಕೈಹಿಡಿದು ನೀನು ನಿಜವಾಗಿಯೂ ಸುಖವನ್ನು ಕಾಣಲಿಲ್ಲ. ಇನ್ನು ಮೇಲೆ ಕಾಣುವವಳಿದ್ದೆ. ಆದರೆ ನನ್ನಿಂದ ನಿನ್ನ ಋಣವನ್ನು ತೀರಿಸುವುದಾಗಲಿಲ್ಲ. ಆದರೆ ನಮ್ಮ ಚಿದುರನು ಅದನ್ನು ತೀರಿಸದೆಬಿಡನು. ಅವನು ನಿನಗೆ ಸುಖಕೊಡುವದಕ್ಕಾಗಿಯೇ ಹುಟ್ಟಿದ್ದಾನೆ. ”

ಆ ಕಲ್ಲಿಗೆ ಬಡಿದು, ಈ ಕಲ್ಲಿಗೆ ಬಡಿದು ಕಡೆಗೆ ಆವುದೋ ಒಂದು ದಂಡೆಗೆ ಬಂದು ಹತ್ತಿದ್ದ ದೇವೇಂದ್ರನು, ಇಂದು ಪಿಳಿಪಿಳಿ ಕಣ್ಣು ಬಿಡುತ್ತ, ಚೆದುರನನ್ನು ದಿಟ್ಟಿಸಿ ನೋಡುತ್ತ, ಪಳಪಳನೆ ಕಣ್ಣೀರನುದುರಿಸುತ್ತಲಿರುವಾಗ, ಚೆದುರನು ತನ್ನ ಕೆಂಪಾದ ಕಿರುವೆಲುಗಳಲ್ಲಿ ಸಿಂಪಿಯನ್ನು ಹಿಡಿದು ಬಾಯಿಯಲ್ಲಿ ಬಿಟ್ಟ ಹಾಲಿನ ಧಾರೆಗಳನ್ನು ಗಟಗಟನೆ ಗುಟಕರಿಸಿ ಸೋಮವಾರ ಸೂರ್ಯೋದಯದ ವೇಳೆಗೆ ಸ್ವರ್ಗಯಾತ್ರೆಗಾಗಿ ಕಣ್ಣು ಮುಚ್ಚಿದನು!

## ೩. ಸುರಿಮಳೆ

( ಕು. ವಿ. ಧ್ವ. )

ಇದ್ದರೂ ಇರಲಿದನೆ
ಮುದ್ದುಗತ್ತಲೆಯೆಂದು ||೧||
ತಿಳಿವೆನ್ನೈ ಪರಮೇಶ !
ತಿಳಿಯದಿರೆ ಫಲವೇನು ? ||೨||
ಬಂದುದನೆ ಬೆಲ್ಲವೆಂ–
ದಿಂದು ತಿಳಿಯುವುದಾಯ್ತು ||೩||
ಮೇಲೆ ಸುರಿಮಳೆಯೇಕೆ
ಬೀಳಹತ್ತಿ…ಗೇವ ! ||೪||
ಎಳ ಬೀಳಕ ಗೂಡು
ತಾಳುವುದೆ ಸುರಿಮಳೆಗೆ ? ||೫||

ಕಟಕಟನೆ ನಡುಗುತ್ತ
ಸೆಟೆಯು ಹತ್ತಿವೆನಕಟ ! ||೬||
ನನಗಳಿವು ಬಂತೆಂದು
ಚಿನುಮಯನೆ ಚಿಂತಿಸೆನು ||೭||
ನನ್ನ ಮುದ್ದಿನ ಮುದ್ದೆ–
ಯನ್ನಾರು, ನೋಡುವರು ! ||೮||
ನನ್ನ ಪರಿಯಿದು ನಿನ್ನ
ಚೆನ್ನ ಚಿನ್ನಾಟವೈ ! ||೯||
ನಿನಗಿದರೊಳಾನಂದ–
ವೆನಿಸುತಿರಲೆನ ಗಳುವೆ! ||೧||

ಈ ವರುಷ ಮಳೆ ಬಹಳ. ದೇವೇಂದ್ರನ ಹೊಲಗಳು ಮತ್ತೆ ಬೀಳು ಬಿದ್ದವು. ಹೊಲಗಳನ್ನಾರಿಗಾದರೂ ಹಚ್ಚಿದರೆ, ಬಂದಷ್ಟು ಕಾಳು–ಕಡಿಗಳನ್ನೆಲ್ಲ ತಮ್ಮ ಮನೆ ತುಂಬಿಕೊಂಡು "ಈ ವರುಷ ಏನೂ ಬೆಳೆಯಲಿಲ್ಲರೀ, ನಮಗೆ ಬಹಳ ಹಾನಿಯಾಯಿತು!" ಎಂದು ವಂಚಿಸುವ ರೈತರ ಸಂಖ್ಯೆಯು ದಿನದಿನಕ್ಕೆ ಬೆಳೆಯುತ್ತಲಿರುವುದನ್ನು ನೋಡಿ, ಸುಂದರಮ್ಮನು ಆಳುಗಳನ್ನಿಟ್ಟು ಸ್ವತಃ ತಾನೇ ಹೊಲಗಳನ್ನು ಸಾಗಿಸಹತ್ತಿದಳು. ಆದರೂ ಪ್ರತಿವರ್ಷದಂತೆ ಈ ವರ್ಷ ಬೆಳೆಯಿರಲಿಲ್ಲ. ಎಂದೋ ಮೂಡಿ ಎಂದೋ ಅಡಗಿಹೋಗಿದ್ದ, ಕಾಮನಬಿಲ್ಲು ಮತ್ತೆ ಮುಗಿಲಲ್ಲಿ ಮೂಡಹತ್ತಿತು! ಕಾಲಚಕ್ರವು ಘಡಕ್ಕೆಂದು ತಿರುಗಿತು! ಸುಂದರಮ್ಮನಿಗೆ ಬಹಳ ಚಿಂತೆಯಾಯಿತು. ಆದರೂ ಉದ್ಯೋಗ ಶೀಲಳಾದ ಸುಂದರಮ್ಮನು ಎದೆಗುಂದಲಿಲ್ಲ.

ಈ ದಿನ ಹೊಲದಲ್ಲಿ ಬೆಳೆ ಕೊಯ್ಯುವ ಕೆಲಸವು ನಡೆದಿದೆ. ಆದುದರಿಂದ ಸುಂದರಮ್ಮನು ಮನೆಯಲ್ಲಿ ಬಡ ಬಡನೆ ಅಡಿಗೆಯನ್ನು ಮಾಡಿ ಹೊಲಕ್ಕೆ ಒಯ್ಯಬೇಕಾಗಿರುವ

ಷ್ಟನ್ನು ಒಂದು ಬುಟ್ಟಿಯಲ್ಲಿ ತುಂಬಿದಳು. ಮನೆಯ ಕೆಲಸಗಳನ್ನೆಲ್ಲ ಮುಗಿಸಲಿಕ್ಕೆ ಸುಂದರಮ್ಮನಿಗೆ ಮಧ್ಯಾಹ್ನವೇ ಆಯಿತು. ಆದುದರಿಂದ ಅವಳು ಮನೆಯಲ್ಲಿ ಊಟ ಮಾಡಲಿಲ್ಲ— ನೀರು ಸಹ ಕುಡಿಯಲಿಲ್ಲ. ದೇವರ ಗುಡಿಗೆ ಹೋಗಿ ಬಂದು, ಬುಟ್ಟಿಯನ್ನು ತಲೆಯ ಮೇಲಿಟ್ಟುಕೊಂಡು ಹೊಲದ ಹಾದೀ ಹಿಡಿದಳು. ಬಗಲಲ್ಲಿ ಎಳೆಗೂಸು. ಇದಲ್ಲದೆ “ ಹೊಲದಲ್ಲಿ ಆಳುಗಳು ಮಲಗಿದ್ದಾರೆಯೋ, ಕುಳಿತಿದ್ದಾರೆಯೋ! ಏನು ಮಾಡುತ್ತಲಿದ್ದಾರು! ” ಎಂಬಿವೇ ಮೊದಲಾದ ವಿಚಾರಗಳು ಮನದಲ್ಲಿ ಗೊಂದಲವನ್ನೆಬ್ಬಿಸಿವೆ.

ಅದೇ ಮಾಘ ಮಾಸವು ಮುಗಿಯುವದರಲ್ಲಿದೆ. ಸೂರ್ಯನ ಕಾವು ದಿನದಿನಕ್ಕೆ ಇನ್ಮಡಿಸಹತ್ತಿದೆ. ಸದ್ಯಕ್ಕಂತೂ ಮಧ್ಯಾಹ್ನದ ಸಮಯ. ಮೊದಲೆ ಸುಂದರಮ್ಮನು ಬರಿಗಾಲಿನಿಂದ ಹೊರಟಿದ್ದಾಳೆ. ಹೊಟ್ಟೆಯಲ್ಲಿ ಕೂಳಿಲ್ಲ— ನೀರಿಲ್ಲ ನೀರಡಿಕೆಯಿಂದ ಹರಣ ಹಾರಹತ್ತಿದೆ. ಊರಲ್ಲಿ ಇದಿರಾದವರೆಲ್ಲ “ ಏನಮ್ಮಾ— ಸುಂದರಮ್ಮಾ! ನಿನ್ನ ಕಷ್ಟವನ್ನು ನೋಡಲಾಸಲ್ಲ !! ಎಂತಹ ಬಿಸಿಲಲ್ಲಿ ಹೊರಟಿರುವೆ! ಕಾಲಲ್ಲಿ ಕಾಲ್ಮರೆಯನ್ನಾದರೂ ಮಾಡಿಸಬಾರದಾಗಿತ್ತೇ? ” ಎಂದು ಎದೆಗರಗಿ ಕೇಳಲು, “ ಏನು ಮಾಡಲಿ ! ಮನೆಯಲ್ಲಿ ನಿಂತು ಕಾಲೊಳಗೆ ಕಾಲ್ಮರೆ ಮಾಡಿಸೇನೆಂದರೆ, ಅತ್ತ ಹೊಲದಲ್ಲಿ ಆಳುಗಳೆಲ್ಲ ಹಾಳು ಮಾಡಿ ಬಿಡುತ್ತಾರೆ ! ನಾನಿಲ್ಲದಿದ್ದರೆ ಕೂಲಿಯವರೂ ಕೂಡ ಅವರೊಡನೆ ಹರಟೆ ಹೊಡೆದು ಬರುತ್ತಾರೆ. ಏನು ಮಾಡಲಿ ! ಬಂದಿರುವದನ್ನು ಕಳೆಯಬೇಕಲ್ಲ!! ” ಎಂದೆನ್ನುತ್ತ ಹಾಗೆಯೇ ಮುಂದಕ್ಕೆ ನಡೆದಳು.

ಸುಂದರಮ್ಮನಿಗೆ ನೀರಡಿಕೆಯು ಮಿತಿಮೀರಿತು. ಹಾದಿಯಲ್ಲೊಂದು ಹಳ್ಳ; ನೀರೆಲ್ಲ ಅಟ್ಟಿಸಿ, ಅಲ್ಲೊಂದು ಕುಣಚಿ, ಇಲ್ಲೊಂದು ಕುಣಚಿಯೂ ಹೊಲಸು ನೀರು ಒರತೆಯೊರತೆಯಾಗಿ ನಿಂತಿದೆ. ಆಗ ಸುಂದರಮ್ಮನು ನೀರು ಕುಡಿಯಬೇಕೆಂದಾಲೋಚಿಸಿ, ಅಲ್ಲಿಯೇ ಒಂದು ಕ್ಷಣ ನಿಂತಳಾದರೂ “ತಲೆಯ ಮೇಲೆ ಒಜ್ಜೆ, ಬಗಲಲ್ಲಿ ಕೂಸು, ಮಿಕದ ತಲೆಯೊಡೆಯುವಂತೆ ಬಿಸಿಲು ಕಾಯಹತ್ತಿದೆ, ನೆಲವೆಲ್ಲ ಕಾವೇರಿದೆ. ಇಂತಹ ನೆಲದ ಮೇಲೆ ಈ ಮಗುವನ್ನು ಹೇಗೆ ಇಳಿಸಲಿ ! ಹುರುಪಳಿಸಿ ಚಡಪಡಿಸೀತು ! ಹೊಲಕ್ಕೆ ಹೋಗಿಯೇ ಕುಡಿಯೋಣ ” ಎಂದು ಬಗೆದವಳೇ ನೀರು ಕುಡಿಯದೆ ಹಾಗೆಯೇ ನಡೆದಳು.

ಹೊಲಕ್ಕೆ ಹೋಗಿ ಗುಡಿಸಲಿನ ಮುಂದೆ ಬುಟ್ಟಿಯನ್ನಿಳಿಸಿದಳು. ಆಳು ಮಕ್ಕಳ ದುರ್ಲಕ್ಷ್ಯದ ಮೂಲಕ, ಒಂದು ಗೂಳಿಯು ಹೊಲದಲ್ಲಿ ಹೊಕ್ಕು ಬೆಳೆಯನ್ನೆಲ್ಲ ತಿಂದು ತುಳಿದು ಹಾಳುಮಾಡುತ್ತಲಿದ್ದುದು ಇಷ್ಟರಲ್ಲಿಯೇ ಇವಳ ಕಣ್ಣಿಗೆ ಬಿದ್ದಿತು. ಸುಂದರಮ್ಮನ ನೀರಡಿಕೆಯು ಎಲ್ಲಿಯೋ ಅಡಗಿ ಹೋಯಿತು. ಅಲ್ಲಿಂದೆದ್ದವಳೇ ಬಗಲಲ್ಲಿ ಕೂಸನ್ನಿರಿಸಿಕೊಂಡು ಗೂಳಿಯ ಕಡೆಗೆ ನಡೆದಳು. ಹೋಗಿ ಕಲ್ಲನ್ನೆಸೆಯುವುದೇ ತಡ,

ಆ ಗೂಳಿಯು ಓಡುತ್ತ ಬಂದು ಕೋಡಿನಿಂದೆತ್ತಿ ಸುಂದರಮ್ಮನನ್ನು ಚಿಮ್ಮಿ, ಹಾರಿಸಿ, ಒಗೆಯಿತು. ಗಾಬರಿಯಾಗಿ ಕೂಸನ್ನೆತ್ತಿ ನೋಡುತ್ತಾಳೆ, ಅದಕ್ಕೇನೂ ಆಗಿರಲಿಲ್ಲ. ಆದರೆ ನೆತ್ತರವು ಹರಿಗಟ್ಟಿ ನಡೆದಿರುವುದನ್ನು ನೋಡಿ ತನ್ನ ಮೈಗೆಲ್ಲ ಕೈಯಾಡಿಸಿ ಕೊಂಡು ನೋಡಿದಳು, ಬಲಕಿನ ಪಕ್ಕಕ್ಕೆ ಕೋಡು ತಗಲಿ ದೊಡ್ಡ ಗಾಯವಾಗಿದೆ. ಗಪ್ಪನೆ ಕಣ್ಣು ಮುಚ್ಚಿದವಳೇ ಸೆರಗು ತೆಗೆದು ಗಟ್ಟಿಯಾಗಿ ಸೊಂಟಕ್ಕೆಬಿಗಿದು ರಕ್ತಕ್ಕೆ ತಡೆ ಮಾಡಿದಳು. ಕೂಸು ಚಟ ಚಟನೆ ಚೀರ ಹತ್ತಿದೆ. ಇವಳೂ ಬಿಕ್ಕಿ ಬಿಕ್ಕಿ ದನಿ ಗೂಡಿಸಿದಳು. ಆಳುಗಳೆಲ್ಲ ಗಾಬರಿಯಾಗಿ ಓಡಿ ಬಂದರು.

ಆಗ ಸುಂದರಮ್ಮನು ಅಳುತ್ತಲೇ “ ಇನ್ನು ನನ್ನನ್ನು ಮನೆಗೆ ತೆಗೆದುಕೊಂಡು ನಡೆಯಿರಿ. ವಿಧಿಯು ನೀರು ಸಹ ಕುಡಿಯಗೊಡದೆ ಇಲ್ಲಿಗೆ ಎಳೆದು ತಂದಿತು! ನನಗೆ ಗೂಳಿಯ ಕೋಡು ಹತ್ತಿ ಗಾಯವಾಗಿದೆ. ಬೇಗನೆ ಮನೆಗೆ ತೆಗೆದುಕೊಂಡು ನಡೆ ಯಿರಿ! ” ಎಂದು ಹೇಳಲು, ಕೂಲಿಗೆ ಬಂದ ಇಬ್ಬರು ಹೆಂಗುಸರು ಎರಡೂ ಕಡೆಯ ರಟ್ಟೆಗಳನ್ನು ಹಿಡಿದು ಮೆಲ್ಲನೆ ಎಬ್ಬಿಸಿ ಕರೆದುಕೊಂಡು ಹೊರಟರು. ಆಳು ಮಗನೊ ಬ್ಬನು ಚೆದುರನನ್ನೆತ್ತಿಕೊಂಡು ಹೊರಟನು. ಹೊಲದ ಎಲ್ಲೆಯನ್ನು ದಾಟುವಾಗ ಸುಂದರಮ್ಮನು ನಡುಗುವ ದನಿಯಿಂದ “ ಇನ್ನು ಮುಂದೆ ನಾನು ಈ ಹೊಲಕ್ಕೆ ಬರು ವುದು ಮುಗಿಯಿತು ! ಇನ್ನು ಮುಂದೆ ಈ ಕಣ್ಣುಗಳು ಈ ಹೊಲವನ್ನು ನೋಡ ಲಾರವು ! ನನ್ನನ್ನು ಒಂದಿಷ್ಟು ಹೊಲದ ಕಡೆಗೆ ಮೋರೆ ಮಾಡಿ ನಿಲ್ಲಿಸಿರಿ. ಈಗಲೇ ಇನ್ನೊಮ್ಮೆ ಈ ಹೊಲವನ್ನು ಕಣ್ತುಂಬ ನೋಡುತ್ತೇನೆ. ” ಎಂದು ಹೇಳಲು ಅವರು ಹಾಗೆಯೇ ಮಾಡಿದರು. ಆಗ ಸುಂದರಮ್ಮನು ಕೆಲಹೊತ್ತು ಹೊಲವನ್ನು ದಿಟ್ಟಿಸಿ ನೋಡಿದುದೇನೋ ನಿಜ. ಆದರೆ ಕಣ್ಣಲ್ಲಿ ಎಲ್ಲೆಲ್ಲಿಯೂ ಹರಿದಾಡಹತ್ತಿರುವ ಅಶ್ರು ಜಲದ ಮೂಲಕ ಅವಳಿಗೆ ಅದು ಸ್ಪಷ್ಟವಾಗಿಕಾಣಿಸಲಿಲ್ಲ. ಆದುದರಿಂದ ಅವಳು ಮನ ದಲ್ಲಿ ವಿಧಿಯನ್ನು ಬೈಯ್ಯುತ್ತ ತುಂಬಿದ ಹೊಲವನ್ನು ಬಿಟ್ಟು ಮನೆಯ ಹಾದೀ ಹಿಡಿದಳು !

## ೪. ಹೂಬಿಸಿಲು.

( ಕು. ವಿ. ಪ್ವ. )

ಮಳೆಕುಟ್ಟಿ ಬೆಳಗಿತ್ತೆ<br>
ನೆಲವೆಲ್ಲ ತನುವಾಯ್ತು ||೧||

ಮಂಗಳವೆ ನೆಲಕಿಂದು<br>
ಸಿಂಗರದೊಳಿಳಿಯಿತೋ! ||೬||

ಮಕರಂದ ವಾತವಿದೊ<br>
ಮಕ ಮಕನೆ ತೀಡುತಿದೆ ||೩||

ಪೊಸ ನೆಲಕೆ ಹೊಸ ಬಿಸಿಲು<br>
ನುಸುಳಿ ನಲಿದಾಡುತಿದೆ ||೭||

ತಿಳಿನೀರು ಝುಳು ಝುಳುನೆ<br>
ಇಂಥಗಳಿಗೆಯು ತೆರೆಗ

ಸೆಳವಾಗಿ ಹರಿಯುತಿದೆ ||೩||
ಎಳಮಕ್ಕಳ್ಕೋಣೆಯೊಳು
ನಲಿದು ಮುದ್ದಾಡುತಿವೆ ||೪||
ಎಲ್ಲಿ ನೋಡಿದಡಲ್ಲಿ
ನಲ್ಲೆಯರ ಸೊಲ್ಲುಗಳೇ !||೫||

ಳಿಂತೆಯೇ ಬರುತಿರಲಿ ! ||೮||
ಚಿಂತೆಯೊಂದಿದೆ ಬಗೆಯೊ
ಳೆಂತಹುದೊ? ತಿಳಿಯದಿದೆ ||೯||
ಹೂಬಿಸಿಲೆ ಬೆಳೆದು ಮ-
ತ್ತಾ ಬಿಸಿಲೆ ಸುರಿಯುವುದೋ!||೧೦||

ತಂದೆಯ ತೀವ್ರ ಇಚ್ಛಾಶಕ್ತಿಯಿಂದಲೂ, ತಾಯಿಯ ಅನುಕೂಲತೆಯಿಂದಲೂ, ಈಶಸಂಕಲ್ಪದಿಂದಲೂ, ಚೆದುರನು ಇಂದಿಗೆ ವಿದ್ಯಾಬುದ್ಧಿಗಳನ್ನು ಕಲಿತು, ವಿನಯಶೀಲನಾಗಿ, ಶುದ್ಧ ಪ್ರೇಮದ ಸ್ವಯಂಭೂ ಮೂರ್ತಿಯಾಗಿದ್ದಾನೆ. ಅಂದಿನ ಸಸಿಯಿಂದು ಗಿಡವಾಗಿದೆ, ಇದೀಗ ಚೆದುರನಿಗೆ ತುಂಬಾ ಪ್ರಾಯ. ಸುಂದರಮ್ಮನೂ ಮಗನ ಮೇಲ್ಮೆಯನ್ನು ನೋಡಿ ಇಂದು ಹಿಂದಿನ ಹಾಳು ಕಥೆಯನ್ನೆಲ್ಲ ಮರೆತು ಬಿಟ್ಟಿದ್ದಾಳೆ. ಅವಳು ಇವನನ್ನು ಇಂದಿನವರೆಗೆ ಒಂದ ಕಷ್ಟಕ್ಕೂ ಗುರಿಮಾಡಲಿಲ್ಲ. ಎಲ್ಲ ಕಷ್ಟ ನಷ್ಟಗಳಿಗೆ ಇದಿರಾಗಿ ನಿಂತು ಮಗನನ್ನು ಸುಖದಿಂದ ಬೆಳೆಸಿದಳು. ಮಗನಾದರೋ ಇಂತಹ ತಾಯಿಯ ಬಸಿರಲ್ಲಿ ಬಂದು ತಾನೇ ಈ ಜಗತ್ತಿನಲ್ಲಿ ದನ್ಯನೆಂದು ಬಗೆದಿದ್ದಾನೆ. ತಾಯಿ-ಮಕ್ಕಳಿಬ್ಬರೂ ಇಂದು ಆನಂದದಿಂದ ತುಂಬಿ ತುಳುಕುತ್ತಲಿದ್ದಾರೆ.

ತನ್ನ ಮರಣಾನಂತರ ಮಕ್ಕಳು ಮಲತಾಯಿಯನ್ನು ನೋಡಲಿಕ್ಕಿಲ್ಲೆಂದು ಭಾವಿಸಿ, ಧನಪಾಲನು ತಾನು ಜೀವಿಸಿರುವಾಗಲೇ ಪುಣ್ಯಕ್ಕೆ ಗೌರಮ್ಮನಿಗೆ ಎರಡು ಹೊಲಗಳನ್ನು ಕೊಟ್ಟಿದ್ದನು. ಅವಳು ಎಂಎಂದಿಗೂ ನಂಜೆದೆಯವಳೇ. ಅವಳಿಗೆ ಗಂಡಸು ಮಕ್ಕಳಂತೂ ಇರಲಿಲ್ಲ. ಆದುದರಿಂದ ತನ್ನ ಮರಣಾನಂತರ ತನ್ನ ಹೊಲಗಳು ಮಲಮಕ್ಕಳಿಗಾಗಬಹುದೆಂದು ಬಗೆದು ಇಂದಿಗೆ ಹತ್ತು ಹನ್ನೆರಡು ವರ್ಷಗಳಿಗೆ ಮೊದಲೇ ತನ್ನ ಮಗಳಾದ ಕಾಂತಮ್ಮನ ಹೆಸರಿಗೆ ಹಾಕಿಬಿಟ್ಟಿರುವಳು. ಕಾಂತಮ್ಮನಿಗೂ ಒಂದೇ ಒಂದು ಮಗಳು. ಅವಳು ಆ ಮಗಳಿಗೆ ಬಸಂತಿಯೆಂದು ಹೆಸರಿಟ್ಟಿದ್ದಾಳೆ. ಆದರೆ ಬಂಕಿಮ ಬಾಬುಗಳ ವಿಷವೃಕ್ಷವೆಂಬ ಕಾದಂಬರಿಯನ್ನೋದಿದ ಪ್ರತಿಯೊಬ್ಬ ರಸಿಕರೂ, ಇವಳ ಸಂಪೂರ್ಣ ಚರಿತ್ರೆಯನ್ನೋದಿದ ಮೇಲೆ 'ಇವಳಿಗೆ ಕುಂದನಂದಿನಿಯೆಂದು ಹೆಸರಿಟ್ಟಿದ್ದರೆ ಸಮಂಜಸವಾಗುತ್ತಿದ್ದಿತು. ಎಂದು ಹೇಳದೆ ಬಿಡಲಿಕ್ಕಿಲ್ಲ.

ಒಂದು ದಿನ ಸುಂದರಮ್ಮನೂ, ಕಾಂತಮ್ಮನೂ ಕೂಡಿ ( ಸುಂದರಮ್ಮನ ಮನೆಯಲ್ಲಿಯೇ ) ಮಾತನಾಡುತ್ತ ಕುಳಿತಿದ್ದರು. ಆಗ ಮಾತಿಗೆ ಮಾತು ಹೊರಡಲು ಕಾಂತಮ್ಮನು "ಸುಂದರಮ್ಮಾ ! ನಮ್ಮಪ್ಪನು ನಿಮಗಾಗತಕ್ಕ ಹೊಲಗಳನ್ನು ಅಂತರಿಸಿ ನನಗೆ ಕೊಟ್ಟಿರುವುದೇನೋ ನಿಜ. ಚೆದುರನಾದರೊ ನನಗೆ ಸೋದರಳಿಯ. ದೇವರ ದಯದಿಂದ ನನಗೂ ಒಬ್ಬ ಮಗಳಿದ್ದಾಳೆ. ಚೆದುರನಿಗೆ ಬಸಂತಿಯನ್ನು

ಕೊಟ್ಟು ಮೇಲೊಂದ ಹೊಲವನ್ನೂ ಕೊಡುತ್ತೇನೆ. ಕಟ್ಟೆಯು ಕಲ್ಲು ಕಟ್ಟೆಗೆ ಕುಳಿತರೇನೇ ನೆಟ್ಟಗೆ. ಸೋದರತ್ತೆಯು ಸೋದರನಿಗೆ ಸರಿ. ಆದುದರಿಂದ ಚೆದುರನಿಗೊಂದು ಹೊಲ, ನನಗೊಂದು ಹೊಲ; ಹೀಗಾದರೆ ನ್ಯಾಯವಲ್ಲವೇ! ಚೆದುರನ ಹೆಸರು ಹೇಳಿ ನನ್ನ ಮಕ್ಕಳೂ ಮೊಮ್ಮಕ್ಕಳೂ ಅದೊಂದು ಹೊಲದಿಂದ ಜೀವಿಸುವರಾದರೆ ಚೆದುರ ಬಳ್ಳಿ ಹಂದರವನ್ನೇರಿ ನೂರೊಂದು ಮಿಡಿಗಳನ್ನು ಬಿಡಲಿಕ್ಕಿಲ್ಲವೇ! ಇದಕ್ಕೆ ನೀನೇನೆನ್ನುತ್ತೀ? ಹೇಳು.” ಎಂದೆನ್ನಲು ನನಗೇನೇ ? ಇಂದಿನವರೆಗೆ ಆ ಹೊಲಗಳ ನೆನಪು ಸಹ ಇರಲಿಲ್ಲ. ಈ ದಿನ ನೀನು ಆ ಮಾತನ್ನೆತ್ತಿದಮೇಲೆಯೇ ನನಗೆ ನೆನಪು. ನಿನಗೆ ಮನಸ್ಸಿಗೆ ಬಂದರೆ ಆಗಲಿ. ಆರು ಬೇಡವೆಂದೆನ್ನುತ್ತಾರೆ? ನೂಲಿಲ್ಲದಿದ್ದರೂ ನೂಲೆಳೆಯಾದರೂ ಅವನದವನಿಗೆ ಮುಟ್ಟಿದಹಾಗಾಯಿತು; ಕಟ್ಟೆಯ ಕಲ್ಲು ಕಟ್ಟೆಗೆ ಗಟ್ಟಿಯಾಗಿ ಕುಳಿತಂತಾಯಿತು. ಎಂದು ಸುಂದರಮ್ಮನು ಹೇಳುವುದೇ ತಡ, ಮದುವೆಯ ಸಿದ್ಧತೆಗೆ ಪ್ರಾರಂಭವಾಯಿತು. ಕೇಳುವುದೇನು! ಹನ್ನೆರಡು ವರುಷದವನಿರುವಾಗಲೇ ಚೆದುರನು ಹೆಂಡತಿಯನ್ನು ಕಂಡನು. ಇದೂ ಒಂದು ಭಾಗ್ಯ ! .

ಮದುವೆ ಮುಗಿದ ಮೇಲೆ ನೆರೆಮನೆಯ ಹೆಂಗಸರ ಕಲಿಕೆಯಿಂದ ಕಾಂತಮ್ಮನು ಹೊಲ ಕೊಡುವುದಾಗುವುದಿಲ್ಲವೆಂದು ಹಟ ಹಿಡಿದಳು. ಆದರೆ “ಇವಳು ತನ್ನನ್ನು ಬೇಕೆಂತಲೇ ಅಪಮಾನ ಮಾಡಿದಳಲ್ಲ!” ಎಂದು ಸಿಟ್ಟು ಹಿಡಿದು ಸುಂದರಮ್ಮನು ‘ನಾನು ಹೊಲವನ್ನು ಬಿಟ್ಟವಳೇ ಅಲ್ಲ’ವೆಂದು ಬಿಗಿದು ಕುಳಿತಿದ್ದಾಳೆ. ಬಸಂತಿಯು ನೆರೆತು ಇಂದಿಗೆ ಎರಡು ವರ್ಷಗಳಾದರೂ ಚೆದುರನು ಹೆಚ್ಚಿನ ವಿದ್ಯಾಭ್ಯಾಸ ಮಾಡುತ್ತ ಮೈಸೂರಿನಲ್ಲಿಯೇ, ಇವಳು ಇಲ್ಲಿ ತವರ ಮನೆಯಲ್ಲಿಯೇ.

---

## ೫. ಅಕ್ಕರತೆ.

(ಹಾಡು—“ಗೋಕುಲದೊಳಗು” ಎಂಬಂತೆ)

ಕೋಮಲ ಬಾಲೆಯೆ! ಉಷಾದೇವಿಯೇ! ನಿನ್ನಯ ಗಲ್ಲದಲೀ ॥
ಪಾದರಿಗೆಂಪಿನ ಸುಳಿಗಳು ಸುಳಿಯುವ ವೇತಕೆ ಸೊಬಗಿನಲಿ? ॥೧॥

ಈಗೇತಕೆ ಕೇಳಿಸುವವು ನನ್ನಯ ನುಡಿಗಳು! ಕಾಮಿನಿಯೇ ॥
ಮೊಗವನು ತಿರುಗಿಸಿ ಮನದಲಿ ನಲ್ಲನ ಮುಖವನು ನೋಡುವಿಯೇ ॥ ೨ ॥

ಮೊದಲಿಗೆ ನಾಚುತೆ ಬಗೆಬಗೆಯೊನಪನೆ ಮಾಡಿದೆಯೇ ಕೆಲಗೇ ? ॥
ನಲ್ಲನು ತಾನೇ ಬಂದೊಡನವನೊಳು ಕೂಡಿದೆಯೇ ಕೆಲಗೇ ? ॥ ೩ ॥

× × × ×

ಕಗ್ಗತ್ತಲೆಯಪು ಕಿಟಕಿಟ ಹಚ್ಚಲು ಮುದುಡು ಜೇನೆ ಬಂದು ॥
ಬಳಲಿಕೆ ಹೆಚ್ಚಿರಲಾವೇಳೆಗೆ ಮನದನ್ನನು ಬಳಿಬಂದು
ನಿಂದೆಳಗೈಗಳ ನೀಡಲು ಕಣ್ದೆರೆದೇತಕೆ ಕಮಲಿನಿಯೇ ॥ ॥೪॥
ಬಳಲಿಕೆಯನು ಮರೆವೆಳನಗೆ ಬೀರುವೆಯಾನಂದದ ಸರಿಯೇ ॥೫॥

× × × ×

ಕಣ್ಣು ಮೆರಳು, ಕೈಕಾಲು ಡೊಂಕ, ಮೈ ಗೋಣಿಯ ತರಟಾಗಿ ॥೬॥
ಕಾಣುತಲಿದೆ ಕೂಸೊಂದಿದು ಶುಷ್ಕ ಕಹೋಳನ ಮಗನಾಗಿ ॥
ಇಂತಹ ಮಗುವನು ಮಿದುಗೈಗಳಿನೆದೆಗವಚುತೆ ಮುದ್ದಿಡುತ ॥
ನಿಂತಿಹೆಯೇತಕೆ, ಹೇಸದೆ ತಾಯಿಯೆ, "ಅಳಳಳ" ಪದವೆನುತ ! ॥೭॥

× × × ×

ಹನುಮನ ಹೇಳಿಕೆಯಿಂದಲೆ ತುಂಬಿಯೆ, ಪಳುಕಿನ ಪೀಠವನು ॥
ಬಳಬಳ ಮುರಿವಂತೊಳಗಿನದೊಳಗೇ ಸೊಳ್ಳಿಸಿರುವ ನೀನು ॥೮॥
ಇಂದೀ ತಾವರೆ ಹೂವಿನ ಸೆರೆಮನೆಯೊಳಗೇತಕೆ ಕುಳಿತೆ ? ॥
ವಜ್ರವ ಹುಳಿಸಿದ ನಿನಗೀ ಕಮಲದ ದಲ ಬಿರುಸೆನ್ನಿಸಿತೇ? ॥೯॥

× × × ×

ಪ್ರೇಮವೆ! ನಿನ್ನಯ ಮೋಹನ ಮಂತ್ರವಿದೇಂ ಪ್ರತಿಸೃಷ್ಟಿಯನೇ ॥
ನಿರ್ಮಿಸುತಿರುವುದು! ನಿನ್ನನು ಪೊಗಳಲು ನಾನೇಂ ಬಲಯುತನೇ ! ॥೧೦॥

× × × ×

ಸುಂದರಮ್ಮನು ಇತ್ತಿತ್ತಲಾಗಿ, ಮತ್ತೆ ಹೊಲಮನೆಗಳನ್ನು ಗಳಿಸಿದ್ದಾಳೆ. ನಡುವೆ ಎರಡು ಮೂರು ವರ್ಷ ಹೊಲಗಳು ಮತ್ತೆ ಬೀಳು ಬಿದ್ದವಾದುದರಿಂದಲೂ; ಮಧ್ಯೆ ಲಗ್ನದ ವೆಚ್ಚವೂ—ಚೆದುರನ ವಿದ್ಯಾಭ್ಯಾಸದ ವೆಚ್ಚವೂ ಬಂದು ಕೂಡಿದುವಾದುದರಿಂದಲೂ, ಸಾವಿರಾರು ರೂಪಾಯಿಗಳ ಸಾಲವಾಗಿದೆ. ಸಾಲದ ಹಣಕ್ಕೆ ಕಾಗದವಿಲ್ಲ! ಪತ್ರವಿಲ್ಲ; ಅಡವಿಲ್ಲ—ಸಾಕ್ಷಿಯಿಲ್ಲ. ಬರಿ ನಂಬುಗೆಯೇ ಆಧಾರ. ಹೊಲಗಳು ಬೆಳೆದರೆ ಇಷ್ಟೆಲ್ಲ ಸಾಲವು ಒಂದೇ ವರ್ಷದಲ್ಲಿಯೇ ಹರಿದು ಹೋಗುವಂತಿದ್ದರೂ, ಸುಂದರಮ್ಮನು, "ಹೇಗೆ ಒಬ್ಬರ ಕಿವಿಕೇಳದಹಾಗೆ ತಂದಿರುವೆನೋ, ಹಾಗೆಯೇ ದೇವರು ಇನ್ನೊಬ್ಬರ ಕಿವಿಗೊಯ್ಯದೆ ಎಂದು ಮುಟ್ಟಿಸಿಯಾನು !" ಎಂದು ಹಗಲಿರುಳು ನಿಡುಸುಯ್ಯುತ್ತಲಿದ್ದಾಳೆ.

ಸುಂದರಮ್ಮನು ಕಾಂತಮ್ಮನೊಡನೆ ಹಟತೊಟ್ಟದ್ದಲ್ಲೇ ವಿನಾ ಸೊಸೆಯ ಮೇಲೆ ಇವಳ ವೈಮನಸ್ಯವಿರಲಿಲ್ಲ. ತನ್ನ ಹಟವನ್ನು ಗೆಲ್ಲಬೇಕೆಂದು ಸೊಸೆಯನ್ನು ಕರೆತಂದಿರಲಿಲ್ಲವೇ ಹೊರತು, ಬೇರೆ ಭಾವನೆಯಿಂದಲ್ಲ. ಬಸಂತಿಯಾದರೋ ಬಸಂತಕಾಲದಂತೆ ಎಲ್ಲರಿಂದಲೂ ಹೊಗಳಿಸಿಕೊಳ್ಳುತ್ತ, ತನ್ನ ಕೋಮಲಾಂತಃಕರಣದ ಮತ್ತು ಸದ್ವಾಚರಣೆಯ ಧ್ವಜವನ್ನು ಮೆರೆಯಿಸುತ್ತಲಿದ್ದಳು. ಇದ್ದೂರಲ್ಲಿಯೇ ಅತ್ತೆಯ ಮನೆ. ಆದುದರಿಂದ ಅವಳು ವಾರದಲ್ಲಿ ಎಷ್ಟೋ ಸಲ ಅತ್ತೆಯ ಮನೆಗೆ ಬರುತ್ತಿದ್ದಳು—ಹೋಗುತ್ತಿದ್ದಳು. ಆದರೆ ಕಾಂತಮ್ಮನು ಮಾತ್ರ ಬಲು ಕಹಿ. ಗೌರಮ್ಮನ ನೆರಳು ಅವಳ ಮೇಲೆ ಚೆನ್ನಾಗಿ ಬಿದ್ದಿದ್ದಿತು. ಅವಳು ದಾಂಭಿಕ ಪ್ರೇಮದಿಂದ ಮಾತ್ರ ಜನರ ಮುಂದೆ ತನ್ನ ಅಳಿಯನ ಮೇಲ್ಮೆಯನ್ನು ಕೊಂಡಾಡಿ ಕೃತಕೃತ್ಯಳಾಗುತ್ತಿದ್ದಳು. ಆದರೆ ಬಸಂತಿಯ ಅಂತಃಕರಣವು ಅಂತಹದಲ್ಲ.

ಚೆದುರನಾದರೋ ಸೂಟಿಯಲ್ಲಿ ಊರಿಗೆ ಬಂದನೆಂದರೆ ರಜಾ ದಿನಗಳು ಮುಗಿಯುವ ವರೆಗೆ, ತಿಂಗಳುಗಟ್ಟಲೆ ಗೋವಿಂದಪುರದಲ್ಲಿಯೇ ನಿಲ್ಲುತ್ತಿದ್ದನು. ಮೂರು ತಲೆಗಳಿಗಿಂತ ಮೊದಲಿನದೇ ಆಗಲೊಲ್ಲದೇಕೆ, ಚೆದುರ—ಬಸಂತಿಯರಲ್ಲಿ ರಕ್ತ ಸಂಬಂಧವಿದ್ದಿತಷ್ಟೇ. ಇದೂ ಅಲ್ಲದೆ ಇವನೂ ಮೆಲ್ಲೆದೆಯವನು, ಅವಳೂ ನಿರ್ಮಲ ಹೃದಯದವಳು. 'ಸಮಾನ ಗಂಧ ವಸ್ತು ಒಂದನ್ನೊಂದು ಪ್ರೀತಿಸುವುದ'ರಲ್ಲೇನಾಶ್ಚರ್ಯವು ? ಇವರು ಒಬ್ಬರಿಗೊಬ್ಬರು ನೋಡಿದರೆಂದರೆ ಇಬ್ಬರ ಮೋರೆಯ ಮೇಲೆಯೂ ಪ್ರೇಮರಸವು 'ಮೇರೆವರಿ'ಯುತ್ತಲಿದ್ದಿತು. ಸುಂದರಮ್ಮನು ಪ್ರತಿದಿವಸ ಮಧ್ಯಾಹ್ನದಿಂದ ಹೊಲಕ್ಕೆ ಹೋಗುವವಳು. ಆಗ ಬಸಂತಿಯು ಮನೆಯಲ್ಲಿ ಚೆದುರನಿರುವ ಸಮಯವನ್ನು ಸಾಧಿಸಿ ಅತ್ತೆಯ ಮನೆಗೆ ಬರುವಳು. ಈ ಕ್ರಮವು ಎಷ್ಟೋ ದಿನಗಳ ಹಿಂದಿನಿಂದ ನಡೆದು ಬಂದುದು.

ಚೆದುರನಂತೂ ತಾಯ್ನುಡಿಯಲ್ಲಿ ಚೆದುರನು. ಬಸಂತಿಯೂ ಕೂಡ ಅವನ ಶಿಷ್ಯಳಾಗಿ ಚೆನ್ನಾಗಿ ಓದು ಬರೆಹಗಳನ್ನು ಕಲಿತಿದ್ದಳು. ಆದರೆ ಇವಳು ಗವರ್ನ್‌ಮೆಂಟ್ ಸ್ಕೂಲುಗಳ ಮೆಟ್ಟಲುಗಳನ್ನೂ ಕೂಡ ಮೆಟ್ಟಿದವಳಲ್ಲ. ಅಂತೇ ಇವಳ ಹೃದಯವು ಇಷ್ಟು ಶುದ್ಧವಿದೆ. ಇಲ್ಲದಿದ್ದರೇನು ಕೇಳುವುದು ! ... ...

ಚೆದುರನಲ್ಲಿ ಮನೋನಿಗ್ರಹವು ಚೆನ್ನಾಗಿದ್ದಿತು. ಅವನು ಬಸಂತಿಗೆ ಮನೋನಿಗ್ರಹವನ್ನು ಕುರಿತು ಎಷ್ಟೋ ಸಲ ಚೆನ್ನಾಗಿ ತಿಳುಹಿಸಿ ಹೇಳಿದ್ದನು. ಆದುದರಿಂದ ಅವಳಲ್ಲಿಯೂ ಮನೋನಿಗ್ರಹವು ಅಸಾಧಾರಣವಾಗಿದ್ದಿತು. ಇಂದಿನ ವರೆಗೆ ಈ ದಂಪತಿಗಳು ಅಕ್ಕರೆಯ ಅಣ್ಣ—ತಂಗಿಯರಂತಿದ್ದರೇ ವಿನಾ ಹೆಸರಿಗೆ ಮಾತ್ರ ಗಂಡಹೆಂಡಿರು.

ಇಂದು ಚೆದುರನು ಬಸಂತಿಯ ತೊಡೆಯ ಮೇಲೆ ತಲೆಯನ್ನಿಟ್ಟು ಒರಗಿದ್ದಾನೆ.

ಈಗ—

" ನೀವು ಮೈಸೂರಿಗೆ ಹೋದ ಮೇಲೆ ಇಲ್ಲಿ ನಾನು ನಿಮ್ಮನ್ನಗಲಿ ಹೇಗೆ ಜೀವಿಸಬೇಕು ? "

" ನಿನ್ನನ್ನಗಲಿ ಅಲ್ಲಿ ನಾನು ಹೇಗೆ ಜೀವಿಸಬೇಕೋ, ಹಾಗೆಯೇ ನೀನು ನನ್ನನ್ನಗಲಿ ಇಲ್ಲಿ ಜೀವಿಸಬೇಕು. "

ಬಸಂತಿಗೆ ಈಗಿನ ಗಂಡರಾಮೆಯರ ಸುಳಿಗಾಳಿ ಸೋಂಕಿದ್ದರೆ " ನೀವೇನು— ಗಂಡಸರು ! ... ... ... ... " ಎಂದು ತಟ್ಟನೆ ಉತ್ತರ ಕೊಡುತ್ತಿದ್ದಳು. ಆದರೆ ಸಾಧುವಿನಂತಿದ್ದ ಚೆದುರನ ಸಹವಾಸದಿಂದ ಅವಳಲ್ಲಿ ಆರ್ಯತೇಜವು ತುಂಬಿ ತುಳುಕುತ್ತಲಿದ್ದಿತು. ಆದುದರಿಂದ ಅವಳು ಮೌನಳಾಗಿ ತನ್ನ ಒಪ್ಪಿಗೆಯನ್ನು ಸೂಚಿಸಿದಳು.

" ಏನೇ ! ಇಂದು ಏತಕ್ಕೋ ನನ್ನ ಮನಸ್ಸಿಗೆ ಸಮಾಧಾನವಿಲ್ಲ. ಒಂದು ಗೀತೆಯನ್ನು ಹೇಳುವೆಯಾದರೆ ನನಗೆ ಸಮಾಧಾನವಾಗುತ್ತದೆ. "

" ನಮ್ಮ ಧಾರವಾಡ ಪ್ರಾಂತದ ಹೆಣ್ಣುಮಕ್ಕಳಿಗೆ ಗೀತೆಗಳು ಗೊತ್ತಿರುವುದೇ ಕಡಿಮೆ. ಅವರಲ್ಲಿಯೂ ನಾನಿರುವುದು ಹಳ್ಳಿಯಲ್ಲಿ. ಮೈಸೂರಿಗೆ ಕರೆದುಕೊಂಡು ಹೋಗುವುದಿಲ್ಲಾ—ಏನಿಲ್ಲಾ; ಬರಿ ಗೀತೆಗಳನ್ನು ಹೇಳು ಹೇಳೆಂದರೆ ಎಲ್ಲಿಂದ ಹೇಳಲಿ! ಮೈಸೂರು ನಾಡಿನಲ್ಲಿ ಹೆಣ್ಣುಮಕ್ಕಳಿಗೆ ಗಾಯನ ಕಲೆಯ ಲಕ್ಕು ಬಹಳವೆಂದು ಮೊನ್ನೆ ನೀವೇ ಹೇಳುತ್ತಲಿರಲಿಲ್ಲವೇ ? "

ಎಂದು ಸಾತ್ವಿಕ ವಿನೋದಗೆಯ್ದಳು. ಅದಕ್ಕೆ ಚೆದುರನೂ ಮುಗುಳು ನಗೆ ನಕ್ಕನು.

" ನೀನು ಈಗಲೇ ಇಷ್ಟು ಸುಳ್ಳು ಹೇಳಹತ್ತಿದೆ. ಇನ್ನು ಮುಂದೆ ನಾವೇ ಈ ಸಂಸಾರದ ಭಾರವನ್ನು ಹೊತ್ತುಕೊಂಡು ನಿಂತೆವೆಂದರೆ ಆಗ ನೀನೆಷ್ಟು ಸುಳ್ಳು ಹೇಳೀ! ಮೊನ್ನೆ ನೀನು ಏನೇನೋ 'ಗುಣುಗುಣು' ಮಾಡುತ್ತ ಬಾಗಿಲವರೆಗೆ ಹೋದೆಯಲ್ಲ!"

ಸುಂದರಮ್ಮ—ಕಾಂತಮ್ಮನವರ ವಾದವೂ ಈ ಜನ್ಮದಲ್ಲಿ ಮುಗಿಯುವುದಿಲ್ಲ; ಆ ಸಂಸಾರದ ಭಾರವೂ ನಮ್ಮ ತಲೆಯ ಮೇಲೆ ಬರುವುದಿಲ್ಲ. ಅದಕ್ಕಾಗಿ ಹೆದರುವುದರಲ್ಲೇನಿದೆ ! ಇದು ಏನೇ ಇರಲಿ. ತಮ್ಮ ದೃಷ್ಟಿಯಿಂದ ನಾನು ಸುಳ್ಳು ಹೇಳಿದೆನೆಂಬುದೇ ನಿಜವಾದರೆ ನಾನು ನಿಶ್ಚಿನಾಗಿಯೂ ಅಪರಾಧ ಮಾಡಿದ ಹಾಗಾಯಿತು. ಅದ. ಪ್ರಾಯಶ್ಚಿತ್ತವನ್ನಿತ್ತರೂ ಸೆರಗೊಡ್ಡಿ ಕುಳಿತಿದ್ದೇನೆ.—"

" ಪಶ್ಚಾತ್ತಾಪವಾದ ಮೇಲೆ ಪ್ರಾಯಶ್ಚಿತ್ತವೇ ಇಲ್ಲ. ಇನ್ನು ಮುಂದೆ ಮಾತ್ರ ಹೀಗೆ ಸುಳ್ಳು ಹೇಳಬೇಡ. ಆ ದಿನ ನೀನಲ್ಲಿ ಏನು ಹಾಡಿದೆಯೋ ಅದನ್ನೇ ಈಗಲೂ ಹಾಡು. "

“ ಇದೇನು ಭೋಗ ! ಜೋಗುಳು ಹಾಡನ್ನೂ ಕೂಡ ಹಾಡಬೇಕೇ ? ನಿಮ್ಮ ಅಪ್ಪಣೆಯನ್ನು ನಾನೇಕೆ ಮುರಿಯಲಿ ! ಹಾಡುತ್ತೇನೆ ಕೇಳಿರಿ.—

( ಜೋಗುಳುವಾಡು. )

ಸಕಲ ಜೀವಿಗಳಲ್ಲಿ ತಾನೆ ನಿಂತಿರ್ದು ।
ಸಕಲ ಲೋಕಗಳಿಂದೆ ಪೂಜ್ಯನಾಗಿರ್ದು ॥
ನಿಖಿಲ ನಾಮಗಳಿಂದೆ ವಿಶ್ವದೊಳ್ ಮೆರೆದು ಜಗದೆ ।
ಲಕುಮೀಶನೆನಿಸಿರ್ದ ಪರಮ ಮೂರುತಿಗೆ ಜೋ ಜೋ ॥೧॥

ಹೂಂ, ನೀವು ಹೇಳಿದಂತೆ ನಾನು ಹಾಡಿದೆನು ಆದರೆ—”

“ ಆದರೆ,—ಎಂದು ಅರ್ಧ ಮಾತನ್ನು ಹೇಳಿದರೆ ಹೇಗೆ ತಿಳಿಯಬೇಕೇ ? ”

“ ನೀವು ಪ್ರಕೃತಿಯನ್ನು ಕುರಿತು ಎಷ್ಟೋ ಸವಿಗವನಗಳನ್ನು ಕಟ್ಟಿರುವಿರೆಂಬುದನ್ನು ನೊನ್ನೆ ನಿಮ್ಮ ದಿನವಹಿ (ಡಾಯರಿ)ಯನ್ನು ನೋಡಿ ತಿಳಿದುಕೊಂಡಿದ್ದೇನೆ. ಅವುಗಳಲ್ಲಿ ಒಂದನ್ನಾದರೂ— ”

“ ಹೇಳಬೇಕೇ— ? ”

“ ಹೂಂ— ! ”

“ ಹಾಗಾದರೆ ಕೇಳು—

( ರಾಗ—ಲಲಿತ, ತಾಳ—ಝಂಪೆ )

ನಿನ್ನನಗಲಿನ್ನೆಂತು ಬಾಳಲೆನ್ನರಸಿಯೇ ? ।
ಮುನ್ನ ಪಲಕಾಲ ಮಿಂತೆನಿಸಲಿಲ್ಲವು ಪ್ರಿಯೇ ! ॥ ಪಲ್ಲವಿ ॥
ಸವಿದುತ್ತುಗಳನುಣುತೆ ನಿನ್ನ ಗುರುತನೆ ಮರೆತು ।
ಭುವನ ಸೌಂದರ್ಯದೊಳು ತಲ್ಲೀನನಾಗಿರಲು ॥
ಕಿವಿಯೊಳಗೆ ತುಟಿಯಿಟ್ಟು ಸಣ್ಣ ಸರದಿಂ ನುಡಿದು ।
ತವಕದಿಂದೆಚ್ಚರಿಸಿ ಮನಮನೆಳೆದಿಹ ರಮಣಿ ! ॥
ನಿನ್ನನಗಲಿನ್ನೆಂತು ... ... ... ... ॥೧॥

ಆಯಿತೇ— ? ”

“ ನಮ್ಮಪ್ಪಾ ! ಎರಡರ್ಥದ ಹಾಡುಗಳ ಹೊಲಬು ನಮ್ಮಂಥ ಹೆಂಗಸರಿಗೆ ಹೇಗೆ ತಿಳಿಯಬೇಕು ? ”

ಎಂದೆನ್ನುವಷ್ಟರಲ್ಲಿ ಹೊಲದಿಂದ ಬ್ಯಾಕ್ಷೆ ಸುಂದರಮ್ಮನು ಹಾಗೇ ಒಳಗೆ ಬಂದುಬಿಟ್ಟಳು. ಕೇಳುವುದೇನು ? ಬಸಂತಿಯು ತಾನೆಷ್ಟು ಕೋಮಲ ಹೃದಯುದವಳೋ,

ಅಷ್ಟೇ ಚತುರಳೂ ಇದ್ದುದನ್ನು ಇಂದು ಚೆದುರನ ನಿದರ್ಶನಕ್ಕೆ ತಂದುಕೊಟ್ಟಳು. ಅತ್ತೆಯು ಒಳಗೆ ಬಂದಳೆಂಬುದು ತಿಳಿಯುವುದೇ ತಡ, ತನ್ನ ತೊಡೆಯ ಮೇಲೆಯೇ ಇರುವ (ಗಂಡನ) ತಲೆಯನ್ನೊತ್ತಹತ್ತಿದಳು.

ಸುಂದರಮ್ಮನಿಗೆ ಚೆದುರನ ಮನೋನಿಗ್ರಹದ ಪರಿಚಯವಾಗಿ, ಎಷ್ಟೋ ದಿನಗಳಾಗಿ ಹೋಗಿದ್ದವು. ಇದಲ್ಲದೆ ಬಸಂತಿಯು ಇಲ್ಲಿಗೆ ಎಷ್ಟೋ ಸಲ ಬಗಹೋಗುತ್ತಲಿದ್ದುದರಿಂದ ಇಂದು ಆವ ಸಂಶಯಾಂಕುರವೂ ಮೊಳೆಯುಲಿಲ್ಲ. ಇಷ್ಟೇ ಅಲ್ಲ; ಚೆದುರನಿಗೆ ತಲೆಬೇನೆಯೆದ್ದಿರಬಹುದೆಂದು ಬಗೆದು ಅಸಮಾಧಾನಪಟ್ಟು ತಾನೂ ಮಗನ ತಲೆಯನ್ನೊತ್ತಿದಳು. ಅತ್ತೆ ಸೊಸೆಯರು ಕೂಡಿ ಆ ಮಾತು—ಈ ಮಾತುಗಳನ್ನಾಡಿದಮೇಲೆ ಬಸಂತಿಯು 'ನಟ್ಟಮನವ ಕಿತ್ತಿಕೊಂಡು' ಹೊರಟು ಹೋದಳು.

## ೬. ಬಾಲಚಿಕ್ಕೆ

( ಅ. ವಿ. ಪ್ರ. )

| | |
|---|---|
| ಬಾಲಚಿಕ್ಕೆಯು ಮೂಡಿ । | ಒದಗಿಸುವ ಹಂಚಿಕೆಯ— |
| ಮೇಲಕೇರಿತು ನಭದೆ ॥೧॥ | ನೆದೆಯೊಳಗೆ ಹುಡುಕುತಿಹ ॥೬॥ |
| ಹೊತ್ತು ಪೆರೆಗಳನುಳಿದು | ಘಾತಕಿಯನೆಲೆ ದೇವಿ ! |
| ಚಿತ್ತದಲಿ ಬಗೆಯುತಿದೆ—॥೨॥ | ಜಾತ ಮುತ್ತೆಂದೆಣಿಸಿ ॥೭॥ |
| " ಎತ್ತ ನೋಡಿದೊಡತ್ತ | ಕೊರಲೊಳಿರಿಸಿದೆಯೇಕೆ ! |
| ಬಿತ್ತು ಕಗ್ಗತ್ತಲೆಯು ॥೩॥ | ಪರುಕಿಸದೆ, ಮುಗಿಲರಸಿ ! ॥೮॥ |
| ಕುತ್ತುಗಳ ಬಳಗವನು | ಮೋರೆಯೊಳು ಮುತ್ತಿಹುದು, |
| ಹೆತ್ತು ಯಾರುಡಿಯೊಳಗೆ ॥೪॥ | ತೋರಲೊಲ್ಲದೆ ಬಾಲು ? ॥೧೦॥ |
| ಹಾಕಬೇಕೈ ? " ಎಂದು | ತನಿಗೆಂಡದಂತಿದರ |
| ಹಾಕುತಿಹುದೆಣಿಕೆಯನು ॥೫॥ | ಕೊನೆಬಾಲು ಕಾಣುತಿದೆ ॥೧೧॥ |
| ಬಹಳ ದಿವಸಕೆ ಬಂದು | ಬಾಲನ್ನು ಬೀಸುತಿಹ |
| ಬಹಳ ಕೇಡನೆ ಜಗಕೆ ॥೬॥ | ವ್ಯಾಲವನ್ನುನಂಬುವುದೆ ! ॥೧೨॥ |

ಹೇಗಾದರೂ ಆಗಲಿ, ಮಗಳು ಅತ್ತೆಯ ಮನೆಯನ್ನು ಸೇರಿದರೆ ಸಾಕೆಂಬುದೇ ಕಾಂತಮ್ಮನ ಪ್ರಬಲವಾದ ಇಚ್ಛೆ. ಇದಕ್ಕಾಗಿ ಅವಳು ಎಷ್ಟೋ ತಂತ್ರಗಳನ್ನು ಕಲ್ಪಿಸುತ್ತಲೇ ಇದ್ದಳು. ಗುಣಭದ್ರನಿಗೂ, ಕಾಂತಮ್ಮನಿಗೂ ಬೀಗತನದ ಸಂಬಂಧ. ಅವಳು ಇಂದು ಗುಣಭದ್ರನ ಕಿವಿಯಲ್ಲಿ ಏನೇನೋ ಓದಿಬಿಟ್ಟಳು. ಆ ಎಲ್ಲ ಮಾತುಗಳಲ್ಲಿ "ನಮ್ಮ ಚೆದುರ— ಬಸಂತಿಯರು ಏಕಜೀವ! ಚೆದುರನಿಗೆ ನಾನು ತೋರಿಸುವುದೇ

ಮೂಡಲದಿಕ್ಕು. ಸುಂದರಮ್ಮನ ಆಟವು ಇನ್ನೆಷ್ಟುದಿನ ನಡೆದೀತು!" ಎಂಬುದೇ ಬೀಜ ಮಂತ್ರವು. ಸರಳಸ್ವಭಾವದವನಾದ, ಗುಣಭದ್ರನಿಗೆ ಇದೆಲ್ಲವೂ ನಿಜವಾಗಿಯೇ ಕಂಡಿತು. ಗುಣಭದ್ರನು ಸುಂದರಮ್ಮನಿಗೆ ದೂರದಿಂದ ಅಣ್ಣನಾಗಬೇಕು. ಕಾಂತಮ್ಮನ ಮಾತು ಕೇಳಿದೊಡನೆ "ಪಾಪ! ನಮ್ಮ ಸುಂದರಮ್ಮನಾದರೋ ಪರಿಪರಿಯ ಕಷ್ಟಗಳನ್ನನುಭವಿಸಿ ಈಗೀಗಲೇನೋ ಒಂದು ಗೊತ್ತಿಗೆ ಹತ್ತಿದ್ದಾಳೆ. ಇಂತಹ ಸಮಯದಲ್ಲಿ, ಎಲ್ಲಿ ಆ ಹುಡುಗ ಈ ಹೆಂಗಸರ ಮಾತು ಕೇಳಿ ಏನಾದರೂ ವಿಪರೀತಮಾಡಿ ಅವಳನ್ನು ತೊಂದರೆ ಪಡಿಸುವನೋ!" ಎಂಬ ವಿಚಾರವು ಗುಣಭದ್ರನ ತಲೆಯಲ್ಲಿ ಮನೆಮಾಡಿತು. ಕೂಡಲೆ ಅಲ್ಲಿಂದೆದ್ದು, ಸುಂದರಮ್ಮನ ಮನೆಗೆ ಬಂದನು. ಚೆದುರನು ಅದೇ ಊಟ ಮಾಡಿ, ತನ್ನ ಗೆಳೆಯನಾದ ಕಾಮಣ್ಣನ ಮನೆಯ ಕಡೆಗೆ ಹೋಗಿದ್ದನು. ಸುಂದರಮ್ಮನು ಅದೇ ಊಟಕ್ಕೆ ಕುಳಿತಿದ್ದಳು. ಗುಣಭದ್ರನು ಧುತ್ತೆಂದು ಬಂದುನಿಂತನು.

"ಅಣ್ಣಾ! ಇಂದು ಬಲು ಅವಸರದಿಂದ ಬಂದಂತೆ ತೋರುತ್ತದೆ! ಇತ್ತ ಮೇಲಕ್ಕೆ ಬನ್ನಿ"

"ಅಹುದಮ್ಮಾ ತಂಗಿ! ಬಂದೆ." (ಮೇಲಕ್ಕೆ ಹೋಗಿ ಕುಳಿತುಕೊಳ್ಳುವನು)

"ಅದಾವದಂತಹ ಕೆಲಸ?"

"ಊರಲ್ಲಿ ಹೊಸದಾಗಿ, ಎದ್ದ ಬೊಬ್ಬಾಟ"

"ಅದೇನು?"

"ಚೆದುರನದು"

"ಚೆದುರನದೇ?"

"ಹೂಂ—!"

"ಚೆದುರನದದೇನು!" ಎಂದವಸರದಿಂದ ಕೈತೊಳಕೊಂಡೇಳುವಳು. "ಚೆದುರನದೂ, ಬಸಂತಿಯದೂ ಏಕಜೀವವಂತೆ. ಚೆದುರನು ಕಾಂತಮ್ಮನೊಗೆದ ಕಡ್ಡಿಯನ್ನೂ ಕೂಡ ದಾಟಲಾರನಂತೆ. ಹೀಗೆ ಅವರಲ್ಲಿ ಅನ್ಯೋನ್ಯವಾಗಿ ಸಂಬಂಧವು ಮಿತಿಮೀರಿ ಬೆಳೆಯುಹತ್ತಿರುವುದೆಂದೂ, ಅವರವರೊಂದಾದರೆ, ಸುಂದರಮ್ಮನ ಗತಿಯು ನಾಯಿಗೂ ಬೇಡಾಗಬಹುದೆಂದೂ ಜನರು ಎಲ್ಲಿ ನೋಡಿದಲ್ಲಿ ಗುಜುಗುಜು ಮಾತನಾಡುತ್ತಲಿದ್ದಾರೆ. ಇದರ ನೆಲೆಯೇ ತಿಳಿಯಲೊಲ್ಲದು. ಅದಕ್ಕಾಗಿ ಇಷ್ಟು ಅವಸರದಿಂದ ಬಂದೆನು."

"ಅಹುದು. ನಾನು ಹೊಲದಿಂದ ಬರುವುದರೊಳಗಾಗಿ, ಬಸಂತಿಯು ನನಗೆ ಪ್ರತಿದಿನ ಬೀದಿಯಲ್ಲಿಯೇ ಇದಿರಾಗುತ್ತಿರುತ್ತಾಳೆ. ಮನೆಗೆ ಬರುವುದರಲ್ಲಿ ಚೆದುರನೂ ಕುಳಿತಿರುತ್ತಾನೆ. ಅವಳು ಪ್ರತಿದಿನ ಇಲ್ಲಿಗೆ ಬಂದು ಚೆದುರನೊಡನೆ ಏನೇನೋ ಗುಟ್ಟಿನ ಮಾತುಗಳನ್ನಾಡಿ ಹೋಗುತ್ತಿರಬೇಕು. ಇಷ್ಟೇ ಅಲ್ಲ, ಮೊನ್ನೆ ಮೊನ್ನೆ ಮತ್ತೊಂದು ಮಾತಾಗಿದೆ. ಅದು ಈಗ ನೆನಪಿಗೆ ಬಂದಿತು. ಅದೇನೇ ಇರಲಿ. ನೀನು ಹೇಳುವುದು ನಿಜವಾಗಿರಬಹುದು. ಅದರಲ್ಲೇನೂ ಸಂಶಯವಿಲ್ಲ."

ಇದನ್ನೆಲ್ಲ ಕೇಳಿದ ಮೇಲೆ, ಗುಣಭದ್ರನಿಗೆ ಕಾಂತಮ್ಮನ ಹೇಳಿಕೆಯು ಮತ್ತಷ್ಟು ಮನದಟ್ಟಾಯಿತು. ಆ ಮೇಲೆ ಅವನು ಹೇಳಿದುದೇನೆಂದರೆ—

"ಈಗಿನ ಹುಡುಗರೇ ಹೀಗೆ ಸುಂದರಮ್ಮಾ! ಏನಾದರೂ ವ್ಯವಸ್ಥೆ ಮಾಡಿಕೊಂಡು ಬಿಡು. ಇಷ್ಟು ದಿನಗಳವರೆಗೆ ನಿನ್ನ ತಾಪವನ್ನು ಕಣ್ಣಾರೆ ನೋಡಿ, ನೋಡಿ ಬೇಸತ್ತೆನು. ಇನ್ನುಮುಂದೆ ಮಾತ್ರ ಅಂತಹ ಪ್ರಸಂಗವನ್ನು ತಿರಿಗಿ ತಂದುಕೊಳ್ಳಬೇಡ. ಎಚ್ಚರದಿಂದಿರು" (ಎಂದು ಹೇಳಿ ಹೊರಟು ಹೋದನು.)

ಸುಂದರಮ್ಮನ ಮನಸ್ಸು ಕಾಯ್ದೆಣ್ಣೆಯಂತೆ ಸಳಮಳನೆ ಕುದಿಯಹತ್ತಿತು.

## ೭ ವಜ್ರಾಘಾತ.

( ಕು. ವಿ. ದ್ವಿ. )

ಮೋಡಗಳ ಬಳಗವಿದೊ
ಕೂಡಹತ್ತಿತು ನಭದೆ ॥೧॥
ಬಿಳಿಮೋಡ ಕಪ್ಪಾಗಿ
ಬೆಳೆಯಹತ್ತಿತು ತಮವು ॥೩॥
ಗದ್ದರಣೆ ಸುರುವಾಯ್ತು
ಎದ್ದಿತಿದೊ ಬಿರುಗಾಳಿ ॥೫॥
ಎಳೆ ಹುಲ್ಲು ಮೆಯುತಿಹ
ಎಳೆ-ಹುಲ್ಲೆಯೊಂದಂಜಿ ॥೭॥
ಎದೆಗೆಟ್ಟು ನಿಂತಿಹುದು
ಎದೆಯಿಲ್ಲ ಹಾರಲ್ಕೆ ॥೯॥

'ಇನಿತರೊಳ್ ಹೆಗ್ಗೋವಿ
ದನಿಗೆಯ್ದು ,ಕೂಗೆಯೊಡನೆ ॥೨॥
ಕೆಂಡಗಳ ರಾಶಿಸಹ
ಗುಂಡನುಗುಳವ ತೆರದೆ' ॥೪॥
"ಕಡಡ ಕಡಕಡಕೆ"ಂದು
ಸಿಡಿಲು ನೆಲಕಿಳಿದೊಡನೆ ॥೬॥
ಎದೆಗೆ ಬಡಿದಿಹ ಕಣೆಯು
ಬದಿಯಿಂದೆ ಸಿಡಿವಂತೆ ॥೮॥
ಪೊಡವಿಯಡಿಗಳಿಗೆರಗಿ
ಸಿಡಿದು ಬಿದ್ದಿತು ಮೃಗವು! ॥೧೦॥

ಚೆದುರನಿಗೆ ಕಾಮಣ್ಣನು ಬೀದಿಯಲ್ಲಿಯೇ ಕೂಡಿಕೊಂಡನು. ಹಾಗೆಯೇ ಗೆಳೆಯನ ಹೆಗಲಮೇಲೆ ಕೈಹಾಕಿಕೊಂಡು (ಕಾಮಣ್ಣನ) ಮನೆಯಕಡೆಗೆ ನಡೆದನು. ಹೋಗಿ ಕುಳಿತುಕೊಳ್ಳುವುದೇ ತಡ, ಅಂಚೆಯಾಳು ಬಂದು ಒಂದು ಓಲೆಯನ್ನು ಕೈಗಿಟ್ಟನು. ಚೆದುರನು ಅದನ್ನೋದಿದೊಡನೆಯೇ ಅವಸರದಿಂದೆದ್ದು—

"ಗೆಳೆಯಾ! ನಾನು ಬರುತ್ತೇನೆ. ತಡಮಾಡಿದರೆ ಹೊಗೆಬಂಡಿಯ ವೇಳೆಯು ಮೀರುತ್ತದೆ. ದಯಮಾಡಿ ಬೇಗನೆ ಅಪ್ಪಣೆಕೊಡು."

"ಆ ಓಲೆಯು ಎಲ್ಲಿಯದು? ಏನೆಂದು ಬರೆದಿದ್ದಾರೆ?"

"ಮೈಸೂರಿನದು. ನನಗೆ ಮನೆಯಲ್ಲಿ ಅಧ್ಯಯನ ಹೇಳುವ ಶಿವಪ್ಪಶಾಸ್ತ್ರಿಗಳದು. 'ಪ್ರೇಮಪೇಶಲರಾಗಿ ಇತ್ತಕಡೆಯ ಸುದ್ದಿಯನ್ನೇ ಮರೆತಿರೆಂದು ತೋರುತ್ತದೆ.' ಎಂದು ಬರೆದಿದ್ದಾರೆ. ನೀನೇ ಓದಿನೋಡಿಕೊಳ್ಳು"

ಎಂದವನು ಓಲೆಯನ್ನೊಗೆದು ಮನೆಗೆ ಬಂದನು. ಮನೆಯಲ್ಲಿ ಕಾಲಿಡುವುದೇ ತಡ—

"ಸಾಕಪ್ಪಾ ಚೆದುರಾ ! ನೀನೇನೋ, ನಿನ್ನ ಮನೆಯೇನೋ, ನಿನ್ನ ಹೊಲಗಳೇನೋ, ನಿನ್ನವನ್ನು ನೀನು ನೋಡಿಕೊಳ್ಳು. ನಾನು ನನಗಾಗಿ ಗಳಿಸುವದಂತೂ ಒತ್ತಟ್ಟಿಗೇ ಇದೆ. ನೀನು ನಿಮ್ಮತ್ತೆಯ ಮುಂದೆ 'ನನಗೇನೂ ಹೊಲದ ಆಶೆಯಿಲ್ಲ' ವೆಂದು ಹೇಳುವುದೂ ಬೇಡ. ಅವಳು 'ನನ್ನ ಅಳಿಯನಿಗೇ ಹೊಲದ ಆಶೆಯಿಲ್ಲ! ನಾನೇಕೆ ಕೊಡಲಿ!' ಎಂದು ಮಂದಿಯ ಮುಂದೆ ಹೇಳುವುದೂ ಬೇಡ. ಬೇಕಾದರೆ ನಿನ್ನವೇ ನಾಲ್ಕು ಹೊಲಗಳನ್ನು ಅವಳಿಗೆ ಕೊಡು. ಬೇಕಾದರೆ ನೀನೂ ಹೋಗಿ ಅವಳ ಮನೆಯಲ್ಲಿಯೇ ನಿಲ್ಲು. ನನ್ನದೇನೂ ಅಡ್ಡಿಯಿಲ್ಲ. ಎಷ್ಟಾದರೂ ಅವಳ ಮಾತೇ ಗೆಲ್ಲಬೇಕು. ನಿನಗೆ ನಾನೆಷ್ಟರವಳು! ಹಡೆದವಳು-ಹಿಂಗಿದವಳು-ಹೊತ್ತವಳು-ತುತ್ತುಮಾಡಿ ಉಣ್ಣಿಸಿದವಳು-ಎಲ್ಲವೂ ಅವಳೇ! ನಾನೇನು? ಧರ್ಮದವಳು! ಕೈಮಾಡಿ ಕರೆದರೆ ಮುಂದಕ್ಕೆ ಬರುತ್ತೇನೆ; ಬೇಡವೆಂದರೆ ಹೊರಟು ಹೋಗುತ್ತೇನೆ. ಈಗಿನ ಕಾಲದ ಮಕ್ಕಳಿಗೆ ತಾಯಿ ತಂದೆಗಳ ಅಳವಿನಲ್ಲಿರುವುದೆಂದರೆ ಗೊತ್ತೇ ಇಲ್ಲ. ಈ ಇಪ್ಪತ್ತು ವರುಷಗಳ ವರೆಗಾದರೂ ನೀನು ನನ್ನ ಮಾತನ್ನು ನಡಿಸಿಕೊಟ್ಟೆ. ಇದೇ ದೊಡ್ಡ ಮಾತಾಯಿತು ! ಇದೇ ನನ್ನ ಮೇಲೆ ದೊಡ್ಡದೊಂದು ಉಪಕಾರವಾಯಿತು ! ಧರ್ಮವನ್ನು ವಿಚಾರಿಸಿ ನೀನೆಷ್ಟು ಕೈಯೆತ್ತಿ ಕೊಡುವೆಯೋ ಅಷ್ಟೇ ವರ್ಷಾಶನದಿಂದ ನಾನು ಹೇಗಾದರೂ ಮಾಡಿ ಕಾಲಕಳೆಯುತ್ತೇನೆ. ನನ್ನ ಹಣೇಬರಹವೇ ಹೀಗಿದೆ ! ಅದಕ್ಕೆ ಆರೇನು ಮಾಡಿಯಾರು ! ಹೇಗೂ ದೇವರ ದಯದಿಂದ ಎರಡು ಮನೆಗಳಿವೆ. ಆ ಚಪ್ಪರದ ಮನೆಯಲ್ಲಿ ನಾನಿರುತ್ತೇನೆ. ಈ ಹೊಸಮನೆಯಲ್ಲಿ ನೀನೂ, ನಿನ್ನ ಹೆಂಡತಿಯೂ, ಅತ್ತೆಯೂ ಸುಖದಿಂದ ಬಾಳಿರಿ. ನಾನೇನು? ಆವ ಕೋರಿಯಲ್ಲಿ ಹೊರಳಾಡಿದರೂ ಅಷ್ಟೇ."

ಎಂದು ಸುಂದರಮ್ಮನು ಅಳುತ್ತ ಮರ್ಮೋದ್ಘಾಟನ ಮಾಡಿಬಿಟ್ಟಳು. ಚೆದುರನ ಕೋಮಲ ಹೃದಯದ ಮೇಲೆ 'ಆ ದಿನ ತಾನು ತಲೆನೋವಿನಿಂದ ಬಳಲುವವನಂತೆ ನಟಿಸಿದ' ಚಿತ್ರವು ತಟ್ಟನೆ ಮೂಡಿತು. ತಾನು ತನ್ನ ತಾಯಿಯ ಮನಸ್ಸನ್ನು ಎಂದೂ ನೋಯಿಸಿದವನಲ್ಲವಾದರೂ "ಇಂದು ಕಾರಣವಿಲ್ಲದೆ ಅಂತಹ ಅಪರಾಧಕ್ಕೆ ತಕ್ಕುದಾದ ಪ್ರಾಯಶ್ಚಿತ್ತಕ್ಕೆ ಗುರಿಯಾದೆನಲ್ಲ !" ಎಂದು ಮನಸ್ಸಿನಲ್ಲಿ ಬಲು ನೊಂದುಕೊಂಡನು. ಇಂತಹ ಸ್ಥಿತಿಯಲ್ಲಿಯೂ, ಆ ಪತ್ರವು ಎಚ್ಚರಿಕೆ ಕೊಡುವುದಕ್ಕಾಗಿ ಬೆನ್ನಿನಮೇಲೆ ಒಂದೇಸವನೆ ಏಟುಗಳನ್ನು ಹಾಕುತ್ತಲೇ ಇದ್ದಿತು. ಆದುದರಿಂದ ಆವ ಉತ್ತರವನ್ನೂ ಕೊಡಲಿಕ್ಕೆ ತಿಳಿಯದವನಾಗಿ ಒಂದು ತುಟಿ ಎರಡು ಮಾಡದೆ ತನ್ನ ಅರಿವೆ ಅಂಚಡಿಗಳನ್ನೆಲ್ಲ ತೆಗೆದುಕೊಂಡು ಮೈಸೂರಿನಿಂದ "ಬಹಳೇ ಅವಸರದ ಪತ್ರ ಬಂದಿದೆ; ಹೋಗಿ ಬರುತ್ತೇನೆ." ಎಂದಿಷ್ಟು ನುಡಿದವನೇ ಹೊಗೆಬಂಡಿಯ ನಿಲ್ಮನೆಯ ಹಾದೀ ಹಿಡಿದು ನಡೆದನು. ಎಷ್ಟಾದರೂ ತಾಯಿಯ ಕರುಳು. ಜೀವವು ಕೇಳಲಿಲ್ಲ. ಸ್ವಲ್ಪ ದೂರದ

ವರೆಗೆ, ಮಗನನ್ನು ಕಳುಹಿಸಲಿಕ್ಕೆ ಬಂದು "ಬೇಗನೆ ತಿರುಗಿ ಬಾರಪ್ಪಾ! ಜೀವವು ಬಹಳ ನೆನಿಸುತ್ತಿರುತ್ತದೆ" ಎಂದು ಕಣ್ಣಿಗೆ ನೀರುತಂದು ನುಡಿದು, ಮಗನ ಜುಲುಮೆಯಿಂದ ಮನೆಯ ಕಡೆಗೆ ತಿರುಗಿದಳು. ಒಂದಿಷ್ಟು ಮುಂದಕ್ಕೆ ಹೋಗುವುದರೊಳಗಾಗಿಯೇ ಹಾದಿಯಲ್ಲಿ ಕಾಮಣ್ಣನು ನಿಂತಿದ್ದಾನೆ—

"ಏಕೆ ? ಗೆಳೆಯಾ ! ನನಗಿಂತ ಮುಕ್ಕಟ್ಟಾಗಿಯೇ ಬಂದುಬಿಟ್ಟೆ ?"

"ಈ ಪುಸ್ತಕದ ಸಲುವಾಗಿ."

"ಅದಾವುದು ?"

"ದೈವದುರ್ವಿಪಾಕ"

ಹೆಸುರು ಕೇಳಿದೊಡನೆ ಮೋರೆ ಸಣ್ಣದಾಯಿತು. "ಹಾಗಾದರೆ ಕೂಡಿತು !"

"ಹೀಗೇಕೆ ಹುಚ್ಚನಂತೆ ಮಾತಾಡುವೆ ? ಪತ್ರದ ಗಡಬಿಡಿಯಲ್ಲಿ, ಇದನ್ನು ಅಲ್ಲಿಯೇ ಮರೆತು ಬಂದುಬಿಟ್ಟೆ ! ಹೀಗೇಕೆ ? ನಿನ್ನ ಮೋರೆಯು ಇಷ್ಟೇಕೆ ಕಂದಿದೆ?" ಚೆದುರನು ಕಾಮಣ್ಣನ ಕಿವಿಯಲ್ಲಿ ಏನೇನೋ ಹೇಳಿ, ಅವನನ್ನು ಬಿಗಿದಪ್ಪಿ, ಮಿಕಿ ಮಿಕಿ ಮೋರೆನೋಡಿ, ಮಾತನಾಡದೆ ಹೊರಟನು. ಅವನು ಮರೆಯಾಗುವ ವರೆಗೆ ಕಾಮಣ್ಣನು ಅಲ್ಲಿಯೇ ನಿಂತು, ಮರೆಯಾದಮೇಲೆ, ಉಪಾಯವಿಲ್ಲದೆ ಮನೆಯ ಕಡೆಗೆ ಹೊರಳಿದನು.

## ೮. ಪ್ರಳಯಕಾಲ

(ಕು. ವಿ. ಡ್ಜ.)

ಖಡಖಡಲ್ಲೆಂದೀಗ ।
ಗುಡುಗು ಮಿಂಚುಗಳೆನ್ನು ॥೧॥
ಗುಡುಗುಡಿಸ ಹತ್ತಲ್ಕೆ
ನಡುಗ ಹತ್ತಿತು ನೆಲವು ॥೨॥
ಕೆಡಕು ಬಂದೀತೆಂದು
ಹೆಡಕು ಚೆಲ್ಲಿತು ಜಗವು ॥೩॥
ಗಿಡಗಳಲಿ ಹಕ್ಕಿಗಳು
ಬಿಡುತಿಹವು ಬಾಯ್ಗಳನು ॥೪॥
ಜಡೆಯು ಹತ್ತಿತುಮಳೆಯು
ಬಡಿಗೆ ಯಂತಹ ಧಾರೆ ! ॥೫॥
ಹರಿ ಹಳ್ಳಗಳು ತುಂಬಿ
ಹರಿಯು ಹತ್ತಿದ ವಕಟ ! ॥೬॥
ಹೊಳೆಸಾಲು ನೀರೊಳಗೆ
ಮುಳುಗಿಹೊಯಿತುಮೊದಲು! ॥೭॥
ಮುಗಿಲೆ ಹರಿಯಿತು ನೆಲಕೆ
ಜಗಿಯ ಹತ್ತಿತು ನೀರು ॥೮॥
ನೆಲದ ಹೊಟ್ಟೆಯು ಹರಿದು
ಸೆಲೆಗಳೊಡೆದವು ಮೇಲೆ ! ॥೯॥
ನೋಡ ನೋಡುತಿರಲ್ಕೆ
ಕೂಡಿ ಕೊಂಡಿತು ನೀರು ! ॥೧೦॥
ನೋಡುವವರಾರಿದನು ?
ನಾಡೆ ಮುಳುಗಿತು ನಾಡೆ ! ॥೧೧॥

ಮೂರು ತಾಸು ರಾತ್ರಿಯಾಗಿದೆ. ಕೃಷ್ಣ ಪಕ್ಷದಕೊನೆ. ಕೋಣೆಯಲ್ಲಿ ಚೆದುರ ನೊಬ್ಬನೇ ಕೃಷ್ಣಪಕ್ಷದ ಕಾಳರಾತ್ರಿಯಂತೆ ಮೋರೆಮಾಡಿಕೊಂಡು ಕುಳಿತಿದ್ದಾನೆ. ಅವ

ವವನಿಗೇ ತಿಳಿಯದಂತೆ, ಅವನ ಬಾಯಿಯು ನಾಲಿಗೆಯು ಇಳುಕಲಿನಿಂದ, ಎದೆಯೊಳಗಿನ ನೀರನ್ನೆಲ್ಲ ಹರಿಯ ಹಚ್ಚಿದೆ.

"ಕಾಂತಮ್ಮನಾದರೋ ಹೊಲವನ್ನು ಕೊಡುವವಳಲ್ಲ; ಇವಳಾದರೋ ಸುಮ್ಮನಿರುವವಳಲ್ಲ. ನಿಜವಾಗಿಯೂ ನನಗೆ ಆ ಹೊಲದ ಆಶೆಯಿಲ್ಲ. ಇವರಿಬ್ಬರ ನಡುವೆ ಸಿಕ್ಕು ಬಸಂತಿಯು ಸುಮ್ಮಸುಮ್ಮನೆ ನುಗ್ಗಾಗಹತ್ತಿದಳು. ತಾಯಿಯ ಮನಸ್ಸನ್ನು ನೋಯಿಸುವದೂ ಕಷ್ಟ; ವಸಂತಕಾಲದ ಹೊಸಚಿಗುರಿನಂತೆ ಕೋಮಲಳಾದ ಬಸಂತಿಯ ಪರಿತಾಪವನ್ನು ನೋಡಿ, ಸಹಿಸುವದೂ ಕಷ್ಟ! ಮೊನ್ನೆ ಬರುವಾಗ ತಾಯಿಯ ಮುಖದಿಂದ ಹೊರಟ 'ಮರ್ಮವಾಣಿ' ಯ ಕಾರಣವೂ ತಿಳಿಯಲಿಲ್ಲ. ಆ ವಾಣಿಯೇ ಬಾಣವಾಗಿ ನಡಹತ್ತಿದೆ! ಇವರಿಬ್ಬರ ಜಗಳಿದಲ್ಲಿ ನನಗೆ ಸಾವು ಬಂದರೆ, ನ್ಯಾಯದಂತೆ ನನ್ನ ಜಿಂದಿಗೆಯೆಲ್ಲ ಬಸಂತಿಯದಾಗುತ್ತದೆ. ಅವಳು ಅಂತಹ ನಂಜೆದೆಯವಳಲ್ಲ—ವಾದರೂ, ಕಾಂತಮ್ಮನ ಆಳಿಕೆಯಿಂದ, ನನ್ನ ತಾಯಿಯ ಸ್ಥಿತಿಯು ನಾಯಿಗೂ ಬೇಡವಾಗಬಹುದಲ್ಲ! ಆಮೇಲೆ ಸಾಲವನ್ನು ತೀರಿಸುವ ಬಗೆಯೇನು? ವ್ಯರ್ಥವಾಗಿ ಅವರ ಋಣದಲಿ ಸಾಯುತ್ತಾಳೆ! ಎಲ್ಲ ನಿಟ್ಟಿನಿಂದಲೂ ಕೇಡೇ ಕೇಡು! ಹಗ್ಗ ಹರಿಯುವುದಿಲ್ಲ— ಕೋಲು ಮುರಿಯುವುದಿಲ್ಲ '!

ಎಂದು ಉಸರ್ಗರೆದೆದ್ದವನೇ ಏನೇನೋ ಬರೆದು, ಕೆಲವು ಕಾಗದದ ಪುಡಿಕೆಗಳಿಗೆ ಅಂಚೆಯ ಚೀಟುಗಳನ್ನಂಟಿಸಿ, ಬಗಲಲ್ಲಿ ಹಿಡಿದುಕೊಂಡು ಬಾಡಿದ ಹೂವು, ಬಳ್ಳಿಯಿಂ ದಿಳಿಯುವಂತೆ ಮ್ಲಾನವದನನಾದ ಚದುರನು ಅಟ್ಟದ ಮೆಟ್ಟಲುಗಳನ್ನಿಳಿದು ಎಲ್ಲಿಗೋ ಹೋಗಿಬಿಟ್ಟನು.

## ೯. ಹಿಂದಿನಿಂದ.

(ಕು. ವಿ. ಶ್ರೀ.)

ಹಾರದಿರು ಹರಿಣವೇ !
ಹಾರಿ ಚಿಂತಿಸಬೇಡ
ಹಾರಿ ಬಲೆಯಲಿ ಬೀಳೆ
ಹಾರದಿರುವುದೆ ಹರಣ ? ॥೧॥

ಜಡಮತಿಯೆ—ಕೋಡಗವೆ !
ಕಡಿಯದಿರು ಮಿಡಿಗಳನು
ಕಡಿದು ಬಲು ಮಿಡುಕಿದರೆ
ಗಿಡಕೆ ಮಿಡಿ ಹತ್ತುವವೆ ? ॥೨॥

ನುಡಿವಕ್ಕಿ ! ನುಡಿಯುದಿರು,
ನುಡಿಯೆ ಬಂಧನವಕ್ಕು
ನುಡಿದು ಚಡಪಡಿಸಿದರೆ
ನುಡಿದ ನುಡಿ ತಿರುಗುವುದೆ ॥೩॥

ಕರದೊಳಿಹ ಕಲ್ಲನ್ನು
ನರನೆ! ನೀನೆಸೆಯದಿರು
ಮರೆ ತೊಗೆದು ಮನದೊಳಗೆ
ಮರುಗಿ ತಳಮಳಿಸಿದರೆ
ತಿರುಗಿ ಬರುವುದೆ ಕಲ್ಲು ?
ಗುರಿಗೆ ಬಡಿವುದೆ ದಿಟವು ॥೪॥

ಗೋವಿಂದಪುರದಲ್ಲಿ ಚೆದುರನ ಮನೆಯಲ್ಲಿಂದು ನೆಲ ಮುಗಿಲುತುಂಬಿ ಗೋಳಾಟವೆದ್ದಿದೆ. ಕಾಮಣ್ಣನು ಚೆದುರನ ಕೊನೆಯ ಹಾಡನ್ನು ಹಾಡಿ ಹಾಡಿ ಕಣ್ಣೀರು ಸುರಿಸುತ್ತಿದ್ದಾನೆ. ಆ ಹಾಡಿದು—

## ಕೊನೆಯ ಹಾಡು

ತಾಯೆ ಕನ್ನಡ ನುಡಿಯೆ !
ತಾಯೆ ಕನ್ನಡ ನಾಡೆ !
ಬಗೆಯ ಬೆಳಗಿನ ಮನೆಯೊ-
ಳುಗುವ ಸೊಗಸಿನ ಮಣಿಯ
ಹಾಕಿರುವೆನೆನ್ನಬ್ಬೆ !
ಹಾಕು ಹೊನ್ನೆಜ್ಜೆಯನು,
ನೆಲವೆಂಬ ಕುಡಿಯೆಲೆಯೊ-
ಳೊಡಲದುಂಡಲಿಗೆಯನು
ಹಾಕಿ ಕರೆವೆನು ಬಾರೆ,
ಸಾಕೆ? ಬೇಕೇ? ಹೇಳೆ.
ಕಸವಿಸಿಯ ನುಳಿದಿಂದು
ನಸು ನಗುತೆ ನಲ್ಮೆಯಿಂ
ತಾಯೆ ! ತೊಡೆಯಲಿ ಮಲಗಿ
'ಆ' ಯೆಂದು ಹಾಡುವೆನೆ! ॥೧॥
ಹಡೆದು ಹರಸಿದೆಯಂದು
ನುಡಿದು ನೆನಿಸುವೆನಿಂದು
ಮೆಯ್ಮಣ್ಣ ಸವಿಸೆನ್ನ
ಮೆಯ್ಮಾಡಿದೆಲೆ ತಾಯೆ !
ನಿನ್ನ ಮೆಯ್ಮಣ್ಣಿಂದು
ನಿನ್ನ ಮೆಯ್ಸೇರಿದರೆ,
ಹಲವು ಹಬ್ಬಗಳೆಲ್ಲ
ಕಲೆತಂಥ ನಲಿವೆನಗೆ !
ನಿನ್ನೊಡಲ ಬೆಂಕಿಯಿಂ-
ದೆನ್ನ ಕಣ್ಬೆಳಗಾಯ್ತು!
ನಿನ್ನ ಬೆಳಕದು ನಿನಗೆ
ಚಿನ್ನದಾರುತಿಯಾಗೆ,
ಜೊನ್ನದಾ ಝುಡಿ ಮಳೆಗೆ
ಚೆನ್ನ ಚೆಲ್ವಿನ ಚಿಗುರು
ಚಿಗಿತು ಜಗಿಯುವ ತೆರದೆ
ನಗುವೆನಾ ನಲಿದಾಡಿ ! ॥೨॥
ತೊಟ್ಟಿಲೊಳು ತರುಳನ-
ನಿಟ್ಟು ತೂಗಿದ ತಾಯೆ !
ಕೂಸು ಕಿರಿಕಿರಿ ಮಾಡೆ
ಹೂಸಿ ಹಾಡಿದ ತಾಯೆ !
ಈಸು ಋಣಗಳನೆಲ್ಲ
ಐಸು ಜನುಮಗಳಲ್ಲಿ
ಏನು ಮಾಡಿಸಿಕೊಂಡು
ನೀನು ಮುಟ್ಟಿಸಿಕೊಳ್ವೆ? (!)
ಮುಗಿಲ ಮಂಚವಕಟ್ಟಿ,
ಹಗಲ ಹಚ್ಚಡ ಹೊಚ್ಚಿ,
ತನುವೆಂಬ ತಲೆಗಿಂಬ
ನಿನ್ನ ನಲ್ಮಲೆಗಿಟ್ಟು,
ಜನುಮಭೂಮಿಯೆ ! ನಿನ್ನ
ಗುಣಮಾಲೆಯನೆ ಕಟ್ಟಿ
ತೂಗಿ ತೂಕಡಿಸುವೆನು
ಜೋಗುಳುಗಳನೆ ಹಾಡಿ ! ॥೩॥
ಅಂದೆನ್ನ ತುಟಿ ಹಿಡಿದು,
ಚಂದದಿಂ ಮುದ್ದಿಟ್ಟು,
'ಕಂದ!ಕಂದಾ!' ಎಂದು,
ಮುಂದೆ ಮಲಗಿಸಿಕೊಂಡು,
ಹೊಟ್ಟೆಗೆಳವೆರಲಿಂದೆ
ಕಟ್ಟಾಡಿಸುತೆ ನಗಿಸಿ,

ನನ್ನ 'ಗ್ಜಾಗಜ್ಜೆ' ದನಿಗೆ
ಹನ್ನೆರಡುಸಲ ನಕ್ಕೆ;
ಜನಗಳಿಗೆ ದೊಡ್ಡವನು,
ನಿನಗೆ ದೊಡ್ಡವನಲ್ಲ.
ಹಿಂದಾದರೂ ಮಗನೆ;
ಇಂದಾದರೂ ಮಗನೆ;
ಮುಂದಾದರೂ ಮಗನೆ;
ಎಂದಾದರೂ ಮಗನೆ ॥೪॥

ತಾಯೆ ಕನ್ನಡ ನುಡಿಯೆ
ತಾಯೆ ಕನ್ನಡ ನಾಡೆ
"ಸಿರಿಗನ್ನಡಂ ಗೆಲ್ಗೆ !
ಸಿರಿಗನ್ನಡಂ ಗೆಲ್ಗೆ !! ॥೫॥

ಸಿರಿಗನ್ನಡದ ಸಿರಿಯು
ಧರೆಯಲ್ಲಿ ಮೆರೆಯುತಿದೆ ॥೬॥

ತಾರೆಗಳ ಬಳಗದೊಳು
ಸೇರಿ ಸೋಳ್ಪಿನು ಸಿರಿಯು ! ॥೭॥

ಇವಳ ಸಿರಿಯಿಂ ಬೆಳೆದ
ಸವಿ ಮಾವುಗಳ ಸವಿಯು ॥೮॥

ಸವಿದು ನೋಡುವೆನೆಂದು
ತವೆ ಜನಿಸಿ ಗಿಳಿಯಾಗಿ ! ॥೯॥

ಇವಳ ಸೊಬಗಿನ ಸಿರಿಯು
ಸವಿಗವನಗಳ ಕಟ್ಟೆ ॥೧೦॥

ಲಕುಮಿಶನೊಲುಮೆಯಿಂ
ಪಿಕನಾಗಿ ಪಾಡುವೆನು ! ॥೧೧॥

'ಬೇಸಿ!' ನಾನಳಿಯಾಗಿ
ಆ ಸಿರಿಯ ಮೂಸುವೆನು! ॥೧೨॥

ಸುಳಿಗಾಳಿಯಾಗಿ ಸುಳಿ–
ದಿಳೆಯೊಳೆಲ್ಲಾ ಕಡೆಗೆ ॥೧೩॥

ಹರಡಿಸುವೆ ಕನ್ನಡದ
ಪರಿಮಲವ ದೆಸೆದೆಸೆಗೆ! ॥೧೪॥

( ನನ್ನ ಅಕ್ಕರೆಯ ಗೆಳೆಯನೇ ! ಮುದ್ದಿನ ಮನದನ್ನೆಯೇ ! ಮತ್ತು ಹೊತ್ತು ಹೆತ್ತು ಸಲುಹಿದ ನನ್ನ ತಾಯಿಯೇ ! ಇನ್ನುಳಿದ ಬಳಗವೇ ! ನಿಮ್ಮೊಡನೆ ಮಾತನಾಡಲಿಲ್ಲವೆಂದು ಸಿಟ್ಟಾಗಬೇಡಿರಿ; ನಿಮ್ಮ ನಿರೋಪವನ್ನು ತೆಗೆದುಕೊಳ್ಳಲಿಲ್ಲವೆಂದು ನನ್ನನ್ನು ಅಲ್ಲಗಳೆಯಬೇಡಿರಿ ! )

ಕನ್ನಡಿಗರೆಲ್ಲರೂ
ಕನ್ನಡದ ಸರಿಯೆನಗೆ! ॥೧೫॥

'ಕನ್ನಡದ ಸಿರಿಯೊಡನೆ
ಕನ್ನಡಿಗರಾ ಸಿರಿಯು' ॥೧೬॥

ಕನ್ನಡಿಯ ಹೊಳಹಿನಂ–
ತಿನ್ನು ಹೊಳೆಯಲಿ ಜಗದೆ !
ಸಿರಿಗನ್ನಡಂಗೆಲ್ಗೆ ॥೧೭॥

ಸಿರಿ ಗನ್ನಡಂ ಗೆಲ್ಗೆ
"ಧನ್ಯವಾಗಲಿ ನಮ್ಮ
ಮಾನ್ಯವಾದೀ ನಾಡು!" ॥೧೮॥

—ಕನ್ನಡ ಚೆನ್ನಿಯ ಚಿನ್ನಡಿಯಾಳು ಚೆದುರ

# ಮುದಿವಿಚಾರ

ಬರೆದವನು—ಮರಪಂಡಿತ

ಮುದಿವಿಚಾರವೆಂದರೆ, ಚಂಚಲಬುದ್ಧಿಯ ತತ್ತರಿಸುವ ಜರಠವಿಚಾರ, ಗೊತ್ತಿಲ್ವೆ! ಅರುವತ್ತರ ಮನೆಯನ್ನು ಮೀರಿದಾಗಳೆ, ಅರುಳುಮರುಳಾಗುವುದೆಂದು, ಬಹುಕಾಲದ ಅನುಭವ. ಇದಕ್ಕೆ ವಿಪರೀತವಾಗಿಯೂ ಕ್ವಚಿತ್ತಾಗಿ ಸಿಕ್ಕಬಹುದು. ಬಹುದಿನಗಳಿಂದ ಆ ಕಲ್ಲಿಗೆ ಬಡಿದು ಈ ಕಲ್ಲಿಗೆ ಬಡಿದು, ಹಿರಿತನಕ್ಕೇನೊ ಬಂದು ಮುಟ್ಟಿದಹಾಗಿರುತ್ತದೆ. ನುರಿತಸೊಸೆಯೇ ಅತ್ತೆಯಾಗಿ, ಮುಂದಿನ ಸೊಸೆಯರನ್ನು ಚೆನ್ನಾಗಿ (!) ನಡಿಸಿಕೊಳ್ಳುವದಿಲ್ಲವೇ ? ಹಾಗೆಯೇ ಈ ಹಿರಿತನ. ಹಿರಿತನದ ಹಮ್ಮಿನಿಂದ ಸಿಕ್ಕ ಕಾರಭಾರಗಳಲ್ಲೆಲ್ಲ ಕೈಹಾಕುವುದೇನೋ ಸಹಜ. ಆದರೆ ನಿಸ್ತರಿಸುವುದು ಕಷ್ಟ. ಚಂಚಲಬುದ್ಧಿಯೇ ಮುದಿವಿಚಾರದ ತವರುಮನೆ. ಇದು ಮುದಕರಲ್ಲಿಯೇ ಇರುವದೆಂದಲ್ಲ; ಮುದಿಬುದ್ಧಿಯಲ್ಲಿ ! ಈ ಮುದಿವಿಚಾರವನ್ನು ಚೆಷ್ಟಾವಿಚಾರವೆಂದೂ ಕರೆಯಬಹುದು. ನಿಂತಲ್ಲಿ ನಿಲ್ಲವುದು ಗೊತ್ತೇ ಇಲ್ಲ. ಮಾಡಿ ಮಟ್ಟಿದ ಜೀವ, ಉರುಲುಹಾಕಿಕೊಂಡು ಗುರುಗುರು ಎನ್ನುವುದರಲ್ಲಿಯೇ ಸರ್ವ ಶ್ರೇಯಸ್ಸು, ಈ ಚೇಷ್ಟಾವಿಚಾರವು ಮನುಷ್ಯನನ್ನು ಮೂಲದಿಂದಗಲಿಸಿ ಛಾಯೆಯಕಡೆಗೆ, ಆಭಾಸದಕಡೆಗೆ, ಓಡಾಡಿಸುತ್ತದೆ. ಗಾಳಿಯೊಳಗಿನ ಪತ್ರಾವಳಿಯಂತೆ, ಸಿಕ್ಕ ಸಿಕ್ಕ ಕಡೆಗೆ ಹಾರಿಸಿ ಸಿಕ್ಕ ಸಿಕ್ಕಲ್ಲಿಗೊಯ್ದು, ನಿರಾಶೆಗೊಳಿಸಿ ನಗೆಗೆಡೆ ಮಾಡುವದು. ಈ ವಿಚಾರದಲ್ಲಿ, ಸದ್ಯೈವ ಚಾಲನೆಯೇನೋ ಉಂಟು. ಆದರೆ ಸುಸಂಬದ್ಧತೆಯಿಲ್ಲ; ಸುಸೂತ್ರತೆಯಿಲ್ಲ; ಗಳಿಗೆ ಅವಕಾಶವಿಲ್ಲ; ಕಾಸಿನ ಲಾಭವಿಲ್ಲ. ಮುದಿವಿಚಾರಕ್ಕೊಂದು ಗತಿಯುಂಟು; ಆದರೆ ಅವಿಚ್ಛಿನ್ನತೆಯಿಲ್ಲ. ಕಪ್ಪೆಯ ಹಾಗೆ ಮುಂದೆ ಮುಂದೆ ಟುಣುಟುಣು ಹಾರುತ್ತ, ಹಿಂದೆ ಅನೇಕಖಳೆಗಳದೊಂದು ಹಾದಿಯನ್ನುಂಟುಮಾಡಿ, ಅಲ್ಲಲ್ಲಿ ಗುರುತು ಹೊಡೆದು ನೀರಿಲ್ಲದಲ್ಲೆಲ್ಲ, ನೀರಿರುವಂತೆ ಭ್ರಮೆಯನ್ನುಂಟುಮಾಡಿ ಮನುಷ್ಯನನ್ನು ಓಡಾಡಿಸಿ ದಣಿಸುವದು. ನಿರಾಶೆಗೊಳಿಸಿ, ಮತ್ತೆ ಆಶೆಹುಟ್ಟಿಸಿ, ಮತ್ತೂ ನಿರಾಶೆಗೊಳಿಸಿ, ಮತ್ತೂ ಆಶೆಹುಟ್ಟಿಸಿ, ಹಾಗೆಯೆ ಸಿಕ್ಕ ಸಿಕ್ಕಲ್ಲಿಗೆ ಹಾರಿಸಿಕೊಂಡು ಹೋಗಿ, ಈ ಮರುಳುತನಕ್ಕೆ ನಗೆಗೆಡೆಯ ಫಲವನ್ನು ಕೊಡುತ್ತ ಚೇಷ್ಟೆಮಾಡುವದು. ಈಗಿನ ಕಾಲದಲ್ಲಿ ಆಭಾಸಕ್ಕೆ ಬೆನ್ನುಹತ್ತಿ, ಕುಣಿದಾಡಿ ನಗೆಗೇಡಿಗಳಾಗುತ್ತಿದ್ದುದೇ ಹೆಚ್ಚು, ಇಂಥಾ ಶೌರ್ಯವೇ ಮುದಿವಿಚಾರದಲ್ಲಿದೆ.

# ಭಗವಾನ್ ಗೌತುಮ ಬುದ್ಧನ ಧರ್ಮೋಪದೇಶ

ಬರೆದವರು:— ದಿವಾಕರ ರಂಗರಾವ, ಸಂಪಾದಕ ಕರ್ಮವೀರ.

ಶ್ರೀ ಗೌತುಮ ಬುದ್ಧನು, ಜಗತ್ತಿನಲ್ಲಿ ಇದುವರೆಗೆ ಆಗಿಹೋದ ನಾಲ್ಕೆಂಟು ಅಲೌಕಿಕ ವ್ಯಕ್ತಿಗಳಲ್ಲಿ ಒಬ್ಬನು. ಅರ್ವಾಚೀನ ಇತಿಹಾಸಕಾರರು ಬರೆಯುವ ಹೊತ್ತಿಗೆಗಳಲ್ಲಿ, ಇವನ ಹೆಸರು ಅಷ್ಟು ಪ್ರಾಮುಖ್ಯದಿಂದ ಬರುತ್ತಿರಲಿಕ್ಕಿಲ್ಲ. ಯಾಕಂದರೆ ಅವುಗಳಲ್ಲಿ ಅಲೇಕ್ಸಾಂಡರ, ಸೀಝರ, ನೆಪೋಲಿಯನ್, ಮುಂತಾದವರ ಹೆಸರೇ ಹೆಚ್ಚು ಬರುತ್ತವೆ. ಆದರೆ ಗೌತುಮ ಬುದ್ಧನಂಥವರು, ತಮ್ಮ ಕೀರ್ತಿಯ ಶಾಶ್ವತೆಗಾಗಿ, ಭೌತಿಕ ರಾಜ್ಯವೈಭವದ ರಾವಿಗೆ ತಲೆದೂಗುವ, ಅಥವಾ ನರಬಲಿಗಳ ನೆತ್ತರದಲ್ಲಿ ಮುಳುಗಿ ಮಿಂಚುವ, ಕತ್ತಿಯನ್ನು ನೋಡಿ ನಗುವ ಅಕ್ಕರಿಗರನ್ನು, ನಂಬಿಕೊಡುವದಿಲ್ಲ. ಅವರು ತಮ್ಮ ಸಾಮ್ರಾಜ್ಯದ ಇತಿಹಾಸವನ್ನು ಜನರ ಚಿತ್ತದಮೇಲೆ, ಅದೃಶ್ಯಾಕ್ಷರಗಳಿಂದ ಅಂತಃಕರಣಕ್ಕೆ ಅಥವಾ ಒಳಗಣ್ಣಿಗೆ, ಗೋಚರವಾಗುವ ಲಿಪಿಯಲ್ಲಿ ಬರೆದಿಡುತ್ತಾರೆ. ನಿಸ್ಸೀಮ ಪ್ರೇಮಬಲದಿಂದ, ಅವರು ಎದುರಿಸುವವರನ್ನು ಪಾದಾಕ್ರಾಂತಮಾಡಿ ತಮ್ಮ ರಾಜ್ಯವನ್ನು ಬೆಳಿಸುತ್ತಾರೆ. ಅವರ ಸಾಮ್ರಾಜ್ಯವು ನಾಲ್ಕೆಂಟು ತಲೆ ನಡೆದು ಮುಳುಗುವಂತಹದಲ್ಲ. ಅದು ಕಲ್ಪಕಲ್ಪಾಂತಗಳ ವರೆಗೆ ಸಾಗುವಂತಹದು. ಇಂಥ ಪುರುಷರನ್ನು ಭಾರತೀಯರಾದ ನಾವು ಅವತಾರಗಳೆಂದೂ ವಿಭೂತಿಗಳೆಂದೂ ಕರೆಯುವದುಂಟು. ಭಗವದಂಶಪ್ರಾಬಲ್ಯವೂ ಹೆಚ್ಚಳವೂ ಯಾವ ಪುರುಷನಲ್ಲಿ ವಿಶೇಷವಾಗಿ ಕಂಡುಬರುವದೋ ಆ ಪುರುಷನೇ ವಿಭೂತಿ ಅಥವಾ ಅವತಾರನೆಂದೆನಿಸಿಕೊಳ್ಳಲು ಅರ್ಹನು. ಅವತಾರ ತಾಳುವದರಲ್ಲಿ ಪರಮಾತ್ಮನ ಉದ್ದೇಶಗಳು ಅನೇಕವಿರಬಹುದು. ಆದರೆ ಧರ್ಮೋದ್ಧಾರ, ದುಷ್ಟಸಂಹಾರ, ಸುಷ್ಟಪರಿಪಾಲನೆ, ಆದರ್ಶರೂಪ ಜೀವನಕ್ರಮವನ್ನು ಜನರೆದುರಿಗೆ ಇಡೋಣ; ಇವೇ ಮುಖ್ಯವಾದವುಗಳು. ಇಲ್ಲಿ ಬುದ್ಧನ ವಿಷಯಕ್ಕೆ ಸಮಗ್ರವಾಗಿ ಬರೆಯುವದು ಅಶಕ್ಯವು. ಆದುದರಿಂದ ಅವನ ಧರ್ಮೋಪದೇಶದ ಬಗ್ಗೆ ಸಂಕ್ಷಿಪ್ತವಾಗಿ ಬರೆಯುವ ಉದ್ದೇಶವಿದೆ.

ಬುದ್ಧನು ಅವತಾರಿಯಾಗಿದ್ದರೂ, ಮಾನವದೇಹಧಾರಣಮಾಡಿ, ಅತ್ಯುಚ್ಚ ಕೋಟಿಯ ಮಾನವರು ವರ್ತಿಸುವಂತೆ, ಅವನಾದರೂ ವರ್ತಿಸಿರುವನು. ಆದುದರಿಂದ ಅವನ ವೈರಾಗ್ಯವೂ, ಕರುಣೆಯೂ, ಪ್ರೇಮವೂ, ನಿಷ್ಠೆಯೂ, ಮಾನವ ಜಾತಿಗೆ ಆದರ್ಶಭೂತವಾಗಿರುವವು. ಬುದ್ಧನು ತಾನು ಕಂಡುಂಡ ಮಾತುಗಳನ್ನೇ ಮಾನವಪ್ರಾಣಿಗಾಗಿ ಉಪದೇಶಿಸಿದ್ದಾನೆ. ಅವುಗಳನ್ನು ನಾವು ಮನನ ಮಾಡುವದು ಅತ್ಯವಶ್ಯವಾಗಿದೆ.

## ಬುದ್ಧನ ಧರ್ಮೋಪದೇಶ.

ಒಮ್ಮೆ ಬುದ್ಧನು ಋಷಿಪತ್ತನದಲ್ಲಿ ಮೃಗವನದಲ್ಲಿರುತ್ತಿದ್ದನು. ಆಗ ಪಂಚ ವರ್ಗೀಯ ಭಿಕ್ಷುಗಳನ್ನುದ್ದೇಶಿಸಿ—"ಭಿಕ್ಷುಗಳೇ! ಧಾರ್ಮಿಕ ಮನುಷ್ಯನು ಈ ಎರಡೂ ಅತಿರೇಕಗಳ ಕಡೆಗೆ ಹೋಗತಕ್ಕದ್ದಲ್ಲ. ಈ ಎರಡು ಅತಿರೇಕಗಳು ಯಾವವು! ಮೊದಲನೇಯದು ಕಾಮೋಪಭೋಗವು. ಇದು ಹೀನವು, ಗ್ರಾಮ್ಯವು, ಸಾಮಾನ್ಯರು ಸೇವಿಸುವಂಥದು, ಅನಾರ್ಯವು ಅನರ್ಥಕರವು. ಎರಡನೆಯದು ದೇಹದಂಡನೆಯು, ಇದು ದುಃಖಕಾರಕವು, ಅನಾರ್ಯವು, ಅನರ್ಥಕರವು. ಈ ಎರಡೂ ಅತಿರೇಕಗಳನ್ನು ಬಿಟ್ಟು, ತಥಾಗತನು (ಬುದ್ಧನು) ಜ್ಞಾನಚಕ್ಷುಗಳನ್ನು ಕೊಡುವ, ಉಪಶಮ, ಪ್ರೇಮ, ಸಂಬೋಧ, ಮತ್ತು ನಿರ್ವಾಣಗಳಿಗೆ ಕಾರಣೀಭೂತವಾದ, ಮಧ್ಯಮ ಮಾರ್ಗವನ್ನು ಹುಡುಕಿ ತೆಗೆದಿರುವನು. ಅದು ಯಾವದು? ಸಮ್ಯಕ್‌ದೃಷ್ಟಿ, ಸಮ್ಯಕ್ ಸಂಕಲ್ಪ ಸಮ್ಯಕ್ ವಾಚಾ, ಸಮ್ಯಕ್, ಕರ್ಮಾಂತ, ಸಮ್ಯಕ್‌ಅಜೀವ, ಸಮ್ಯಕ್ ವ್ಯಾಯಾಮ, ಸಮ್ಯಕ್ ಸ್ಮೃತಿ, ಸಮ್ಯಕ್ ಸಮಾಧಿ, ಇದೇ ಆ, ಆರ್ಯಅಷ್ಟಾಂಗಿಕ ಮಾರ್ಗವು. ಭಿಕ್ಷುಗಳೇ! ದುಃಖವೆಂಬ ಮೊದಲನೇ ಆರ್ಯಸತ್ಯವು ಹೀಗೆಯಿರುವದು. ಜನ್ಮವು ದುಃಖದಾಯಕವು. ಜರಾ, ಮರಣ, ವ್ಯಾಧಿ, ಶೋಕ, ವಿಲಾಪದುಃಖ, ದೌರ್ಮನಸ್ಯ, ಶೋಕ–ಗ್ಲಾನಿ, ಇವೆಲ್ಲ ದುಃಖಕಾರಕವಿರುವವು. ಪ್ರಿಯವಿಯೋಗ, ಅಪ್ರಿಯ ಸಮಾಗಮ, ಇಷ್ಟವಸ್ತುವಿನ ಅಪ್ರಾಪ್ತಿ, ಇವೆಲ್ಲ ದುಃಖಕರವಿರುವವು. ಭಿಕ್ಷುಗಳೇ, ಅನೇಕ ವಿಷಯಗಳಲ್ಲಿ, ರಮಮಾಣವಾಗುವ ಕಾಮತೃಷ್ಣೆ, ಭವತೃಷ್ಣೆ, ವಿನಾಶತೃಷ್ಣೆ! ಎಂಬ ದುಃಖಸಮುದಾಯವು, ಎರಡನೇ ಆರ್ಯಸತ್ಯವು. ಮೇಲೆ ಹೇಳಿದ ಆರ್ಯ ಅಷ್ಟಾಂಗಿಕ ಮಾರ್ಗವು ದುಃಖನಿರೋಧಗಾಮಿನೀ–ಪ್ರತಿಪದಾ ಎಂಬ ನಾಲ್ಕನೇ ಆರ್ಯಸತ್ಯವು. ಇದು ದುಃಖವಿರುವದು ಇದನ್ನು ತಿಳಿಯತಕ್ಕದ್ದು, ಈ ದುಃಖಸಮುದಾಯವು ಆರ್ಯಸತ್ಯವಿರುವದು. ದುಃಖನಿರೋಧ ಮಾಡತಕ್ಕದ್ದು, ದುಃಖನಿರೋಧ ಮಾಡುವದು ಆರ್ಯ ಸತ್ಯವಿರುವದು. ದುಃಖನಿರೋಧಗಾಮಿನೀ ಪ್ರತಿಪದಾ ಎಂಬ ಮಾರ್ಗವು ಆರ್ಯಸತ್ಯವಿರುವದು. ಇದರ ಸಾಕ್ಷಾತ್ಕಾರ ಮಾಡಿಕೊಳ್ಳಲಿಕ್ಕೆಬೇಕು, ಎಂದು ತಿಳಿದಕೂಡಲೇ ನನಗೆ ಹೊಸ ದೃಷ್ಟಿ ಬಂದಿತು. ಜ್ಞಾನವಾಯಿತು. ವಿದ್ಯೆಯು ಉದ್ಭವಿಸಿತು. ಹೊಸ ಪ್ರಕಾಶವು ಹೊಳೆಯಿತು. ಈ ನಾಲ್ಕು ಆರ್ಯಸತ್ಯಗಳ ಸಂಪೂರ್ಣಜ್ಞಾನವಾಗುವವರೆಗೆ, ನನಗೆ ಸಂಬೋಧಿಯಾಗಿದ್ದಿಲ್ಲ."

ಬುದ್ಧ ಧರ್ಮಕ್ಕೆ ಆಧಾರಭೂತವಾದ ಉಪದೇಶವು ಇದೇ ಇರುವದು. ಸಚ್ಚ ಸಂಯುಕ್ತದಲ್ಲಿ, ಈ ನಾಲ್ಕು ಸತ್ಯಗಳ ಸಂಬಂಧವಾಗಿ ೧೩೧ ಸೂತ್ರಗಳು ಕೊಡಲ್ಪಟ್ಟಿರುವವು. ಬುದ್ಧನು ಜಗತ್ತಿಗೆ ಯಾವದಾದರೂ ಹೊಸತತ್ತ್ವವನ್ನು ಕೊಟ್ಟಿದ್ದರೆ, ಅದು ಈ ನಾಲ್ಕು ಆರ್ಯಸತ್ಯಗಳ ತತ್ತ್ವವೇ. ಅಹಿಂಸೆ, ಅಸ್ತೇಯ, ಸತ್ಯ, ಅಸ್ವಭಿಚಾರ ಅಪೇಯ, ಈ ಐದು ನಿಯಮಗಳು ನಿರ್ಗ್ರಂಥರ ಅಂದರೆ ಜೈನರ ಪಂಚಯಾಮಗಳ

ಆಧಾರದಿಂದ ರಚಿಸಲ್ಪಟ್ಟವೆ. ಇವು ಬೌದ್ಧ ಗೃಹಸ್ಥರ ಸಲುವಾಗಿ ಮಾಡಲ್ಪಟ್ಟಿರುವವು. ಸಮಾಧಿಯ ನಾಲ್ಕು ಪಾವಟಿಗೆಗಳನ್ನು ಅಥವಾ ಧ್ಯಾನ ಸಾಧನೆಯನ್ನು, ಬುದ್ಧನು ತನ್ನ ಗುರುವಾದ ಆಲಾರಕಾಲಾಮ, ಹಾಗೂ ಉದ್ದಕರಾಮಪುತ್ರ ಇವರಿಂದ ತೆಗೆದುಕೊಂಡಿರುವನು. ಮಿಕ್ಕ ಸುಭಾಷಿತಗಳನ್ನಾಗಲೀ, ನೈತಿಕ ನಿಯಮಗಳನ್ನಾಗಲೀ, ಬೇರೆಬೇರೆ ಶ್ರಮಣ, ಬ್ರಾಹ್ಮಣಪಂಥಗಳ ಅನುಕರಣಮಾಡಿ, ಬುದ್ಧನು ಬೌದ್ಧಧರ್ಮದಲ್ಲಿ ಸೇರಿಸಿರುವನು. ಆದರೆ ಈ ನಾಲ್ಕು ಆರ್ಯಸತ್ಯಗಳೂ ಈ ಆರ್ಯ ಅಷ್ಟಾಂಗಿಕ ಮಾರ್ಗವೂ, ಸ್ವತಃ ಬುದ್ಧನ ಆತ್ಮಿಕಸಾಧನೆ, ಹಾಗೂ ಆತ್ಮಾನುಭೂತಿಯ ಪರಿಪಕ್ವಫಲವೆಂಬುದರಲ್ಲಿ ಯಾವಸಂಶಯವೂ ಇಲ್ಲ. ಪ್ರಮಾಣಾತೀತವಾಗಿ ಬೆಳೆದ ಯಜ್ಞಯಾಗದ ಹಿಂಸೆಯನ್ನು ನಿಷೇಧಿಸುವದರ ಸಲುವಾಗಿ, ಬುದ್ಧನು ತನ್ನ ಅಹಿಂಸಾಧರ್ಮವನ್ನು ಸ್ಥಾಪಿಸಿದನೆಂದು ಕೆಲವರು ಹೇಳುವರು. ಆದರೆ ಬುದ್ಧನ ಪೂರ್ವದಲ್ಲಿ ನಿರ್ಗ್ರಂಥ (ಜೈನ) ಶ್ರಮಣರು, ದಯಾಮೂಲಕ ಅಹಿಂಸಾಧರ್ಮವನ್ನು ಪ್ರಸ್ಥಾಪಿಸಿದರು. ನೀರಿನ ಹನಿಯಲ್ಲಿದ್ದ ಜೀವಜಂತುಗಳಮೇಲೆ ಸಹ, ಹಿಂಸೆ ಮಾಡದಷ್ಟು ಅವರ ಧರ್ಮವು ಸೂಕ್ಷ್ಮವಾಗಿದ್ದಿತು. ತೀವ್ರತಪಶ್ಚರ್ಯಮಾಡುವ ಶ್ರಮಣ ಸನ್ಯಾಸಿಗಳಂತೂ, ಅವನಿಗೆ ಭ್ರಷ್ಟನೆಂದೆಣಿಸುತ್ತಿದ್ದರು. ಹಾಗಾದರೆ ಅವನ ವೈಶಿಷ್ಟ್ಯವು ಯಾತರಲ್ಲಿತ್ತೆಂಬದನ್ನು ಪರೀಕ್ಷಿಸಿ ನೋಡಿದರೆ, ಅದು ಅವನು ಸ್ಥಾಪಿಸಿದ ಅಷ್ಟಾಂಗಮಾರ್ಗದಲ್ಲಿ ದೊರೆಯುವದು. ದಯೆಯ ಹೆಸರಿನಿಂದ ಕೇವಲ ನಿಷ್ಕ್ರಿಯತೆಯು ಅಪರಂಪಾರವಾಗಿ ಬೆಳೆದು ಹೋಗಿತ್ತು, ತಪಶ್ಚರ್ಯದ ಹೆಸರಿನಿಂದ ದೇಹದಂಡನೆ ಮಾಡುವ, ನಾನಾ ತರದ ಹೊಸ ಹೊಸ ರೀತಿಗಳು, ಶೋಧಿಸಲ್ಪಡುತ್ತಿದ್ದವು. ಆದರೆ ನೀರಿಲ್ಲದ ಕೆರೆಯಲ್ಲಿ ಪಡಪಡಿಸುತ್ತಿರುವ ಮೀನಗಳಂತೆ, ಬಳಲುತ್ತಿರುವ ಸಾಮಾನ್ಯ ಜನರ ದುಃಖವಿಮೋಚಕ, ಉಪಾಯಗಳನ್ನು ಯಾರೂ ಸೂಚಿಸುತ್ತಿದಲಿಲ್ಲ. ಬುದ್ಧನು ವೈಯಕ್ತಿಕ ಮುಕ್ತಿಯ ಕಡೆಗೆ ಲಕ್ಷವಿಡದೆ, ಸಾರ್ವತ್ರಿಕ ಕಲ್ಯಾಣದ ಅಷ್ಟಾಂಗಿಕ ಮಾರ್ಗವನ್ನು ಹುಡುಕಿ ತೆಗೆದನು. ದಯಾಭಾವನೆಗೆ ವ್ಯವಹಾರಿಕ ಹಾಗೂ ಕ್ರಿಯಾತ್ಮಕ ರೂಪ ಕೊಟ್ಟು, ಅದು ಒಂದು, ಒಳ್ಳೇಬಲವತ್ತರವಾದ ನಿರ್ಧಾಯಕ ಶಕ್ತಿಯಾಗುವಂತೆ ನಿರ್ಬಂಧ ಮಾಡಿದನು. ಈ ಮಾರ್ಗವನ್ನು ಅವಲಂಬಿಸಿ ಸಾಗದ ಹೊರ್ತು, ಜಗತ್ತಿನ ಕಲ್ಯಾಣವಾಗುವದು ಅಶಕ್ಯವು. ಎಲ್ಲ ಜನರು ಈ ಮಾರ್ಗದಿಂದ ಸಾಗಲಾರಂಭಿಸುವವರೆಗೆ, ಜಗತ್ತಿನಲ್ಲಿ ಶಾಂತಿಸುಖಗಳ ಸಾಮ್ರಾಜ್ಯವು ಎಂದಿಗೂ ನೆಲೆಗೊಳ್ಳಲಿಕ್ಕಿಲ್ಲ. ಈ ಧರ್ಮಕ್ಕೆ ಸೇರಿದವರು, ಇಡೀ ಮನುಷ್ಯಜಾತಿಯು ಈ ಧರ್ಮದಂತೆ, ನಡೆಯಬೇಕೆಂದು ಉಪದೇಶಿಸಬೇಕು. ಆದರೆ ಮಿಕ್ಕವರು ಇದರಂತೆ ನಡೆಯದಿದ್ದರೂ, ತಾನು ಒಬ್ಬನೇ ಈ ಧರ್ಮವನ್ನು ಪಾಲಿಸಿದ್ದರೂ ತನಗೆ ಇದರಲ್ಲಿ ಶಾಂತಿಯೂ, ಸಂತೋಷವೂ, ದೊರಕುವದೆಂದು ಬುದ್ಧನು ಜನರಿಗೆ ಸಂಬುಗೆಯನ್ನಿತ್ತಿರುವನು.

## ಆರ್ಯ ಅಷ್ಟಾಂಗಿಕ ಮಾರ್ಗವು.

ಇನ್ನು ಆ, ಅಷ್ಟಾಂಗಿಕ ಮಾರ್ಗವೆಂದರೇನು ? ಇದನ್ನು ನೋಡುವ, ಸಮ್ಯಕ್ ದೃಷ್ಟಿಯೆಂದರೆ, ಜಗತ್ತಿನಲ್ಲಿ ದುಃಖವು ತುಂಬಿರುವದು; ಇದನ್ನು ನಾಶಗೊಳಿಸಿ, ಶಾಂತಿಯನ್ನು ನೆಲೆಗೊಳಿಸಬೇಕಾದರೆ, ಜನರು ಸ್ವಾರ್ಥ ಕಾಮನೆಗಳನ್ನು ತ್ಯಜಿಸಿ, ತಮ್ಮ ತಮ್ಮೊಳಗೆ, ಸತ್ಯತನದಿಂದ ಪ್ರೇಮಪೂರ್ವಕವಾಗಿ ವರ್ತಿಸಲಿಕ್ಕೇಬೇಕು. ಎಂಬ ಜ್ಞಾನವಾಗುವದು. ತನ್ನೊಬ್ಬನ ಸಮೃದ್ಧಿಯಾಗಬೇಕು, ಕಲ್ಯಾಣವಾಗಬೇಕು, ಎಂಬ ಸಂಕಲ್ಪವನ್ನು ಬಿಟ್ಟು, ಇಡೀ ಜಗತ್ತಿನ ಸುಖಶಾಂತಿಗಳು ಹೆಚ್ಚಾಗಬೇಕು. ವಿಶ್ವದಲ್ಲಿ ಪ್ರೇಮದ ರಾಜ್ಯವಾಗಬೇಕು. ಎಂಬ ಶುದ್ಧ ಸಂಕಲ್ಪ ಮಾಡುವದೇ ಸಮ್ಯಕ್ ಸಂಕಲ್ಪವು. ಅಶುದ್ಧ, ದೋಷಯುಕ್ತ ಅಮಂಗಳ ಶಬ್ದಗಳನ್ನುಚ್ಚರಿಸದೆ ಸದಾ ಸುಂದರ ಮಧುರ, ಪ್ರೇಮಮಯ ವಾಣಿಯನ್ನು ಉಪಯೋಗಿಸುವದು ಸಮ್ಯಕ್ ವಾಚೆಯು ಪ್ರಾಣಘಾತ, ಕಳವು, ವ್ಯಭಿಚಾರ, ದುಷ್ಕೃತ್ಯಗಳನ್ನು ಬಿಟ್ಟು, ಲೋಕಹಿತದ ಕಾರ್ಯಗಳಲ್ಲಿ ನಿರತನಾಗುವದೇ ಸಮ್ಯಕ್ ಕರ್ಮಾಂತವು. ಎರಡನೇಯವರನ್ನು ಹೊಡೆದು ಬಡೆದು ಅಥವಾ ಠಕ್ಕಿಸಿ, ಮೋಸಮಾಡಿ, ಅಥವಾ ಸೋಮಾರಿತನದಿಂದ ತನ್ನ ಹಿತಾರ್ಥವನ್ನು ಸಾಗಿಸದೆ ಶುದ್ಧ ಕರ್ಮಗಳನ್ನು ಮಾಡಿ, ಪ್ರಾಮಾಣಿಕತನದಿಂದ, ತನ್ನ ಯೋಗಕ್ಷೇಮವನ್ನು ನಡೆಸುವದು ಸಮ್ಯಕ್ ಆಜೀವಿಕೆಯೆಂದೆನಿಸುವದು. ನಿರುತ್ಸಾಹಿಯಾಗಿ, ಇದು ನನ್ನ ಕೈಯಿಂದ ಹೇಗಾದೀತು ? ನಾನು ನಿರ್ಬಲನು, ನಾನು ಅಶಕ್ತನು ಎಂಬ ಕಾರ್ಯಘಾತಕ ನಷ್ಟ ವಿಚಾರಗಳನ್ನು ಕಿತ್ತುಹಾಕಿ, ಸತ್ಕಾರ್ಯಗಳಲ್ಲಿ ಯಾವಾಗಲೂ ಉತ್ಸಾಹದಿಂದ ಪ್ರವೃತ್ತವಾಗುವದೇ ಸಮ್ಯಕ್ ವ್ಯಾಯಾಮವೆನಿಸುವದು. ಯಾವ ಕೆಲಸದಲ್ಲಿಯಾದರೂ, ಅತ್ಯಂತ ಎಚ್ಚರದಿಂದಿರುವದು, ಹಾಗು ಮನಸ್ಸಿನಲ್ಲಿ ಅಕುಶಲ ವಿಚಾರಗಳನ್ನು ಬರಗೊಡದೆ ಕುಶಲ ವಿಚಾರಗಳನ್ನೇ ಪರಿಪೋಷಿಸುತ್ತಿರುವದು ಸಮ್ಯಕ್ ಸ್ಮೃತಿಯು. ಮನಸ್ಸನ್ನು ಚಲ-ಅಚಲರಹಿತ ವಿಕಾರರಹಿತ, ಅಸ್ಥೈರ್ಯರಹಿತ, ಶಾಂತಿಯಲ್ಲಿಸ್ಥಿರಗಮಾಡುವದೇ ಸಮ್ಯಕ್ ಸಮಾಧಿಯು ಈ ರೀತಿಯಾಗಿ ಈ ಅಷ್ಟಾಂಗ ಧರ್ಮವು, ಅಕುಶಲತ್ಯಾಗಪೂರ್ವಕ ಕುಶಲ ಕರ್ತವ್ಯಯುಕ್ತ, ನಿಷ್ಕಾಮಶುದ್ಧ ಸುಖಶಾಂತಿದಾಯಕವಾದ ಮಾರ್ಗವಿರುವದು. ವೈದಿಕ ಧರ್ಮದ ಪರಿಭಾಷೆಯಲ್ಲಿ ಹೇಳುವದಾದರೆ, ಪಾಪದಿಂದ ನಿವೃತ್ತರಾಗಿ, ಪುಣ್ಯದಲ್ಲಿ ಪ್ರವೃತ್ತರಾಗಬೇಕು. ಹಾಗು ಸಾತ್ತ್ವಿಕಸುಖ ಅಥವಾ ಆನಂದವನ್ನು ಪಡೆಯಲು ಬಾಧ್ಯರಾಗಬೇಕು. ಎಂಬುದೇ ಈ ಧರ್ಮದ ತತ್ತ್ವವು.

# ಕೆಲವು ಆಕ್ಷೇಪಗಳಿಗೆ ಉತ್ತರ.

ಬೌದ್ಧಧರ್ಮದಿಂದ, ನಿಷ್ಕ್ರಿಯತೆ, ಬೆಳೆಯಿತೆಂದು ಕೆಲವು ಪಾಶ್ಚಾತ್ಯ ಪಂಡಿತರೂ, ಆಂಗ್ಲವಿದ್ಯಾವಿಭೂಷಿತ ಅನುಕರಣಪಟುಗಳಾದ ಕೆಲವು ಭಾರತೀಯರೂ ಅನ್ನುವರು. ಆದರೆ ಇದು ಕೇವಲ ಸುಳ್ಳು. ಒಂದುದಿನ ಬುದ್ಧನು ಭಾರದ್ವಾಜನೆಂಬ ಬ್ರಾಹ್ಮಣನ ಹೊಲಕ್ಕೆ ಭಿಕ್ಷೆಗೆ ಹೋಗಿದ್ದನು. ಆಗ ಆ ಬ್ರಾಹ್ಮಣನು– ನೀನು ನನ್ನಂತೆ, ರಟ್ಟೆ ಮುರಿದು ಹೊಲಮನೆಮಾಡಿ ಹೊಟ್ಟೇಹೊರೆದುಕೊಳ್ಳದೆ, ಮನೆಮನೆ ಭಿಕ್ಷೆ ಬೇಡುತ್ತ ಏಕೆ ತಿರುಗುತ್ತಿರುವಿ? ಆಗ ಭಗವಾನ್‌ಬುದ್ಧನು– "ನಾನಾದರೂ ಒಂದು ಪ್ರಕಾರದ ಹೊಲದ ಕೆಲಸವನ್ನೇ ಮಾಡುತ್ತಿರುವೆನು. ಶ್ರದ್ಧೆಯೇ ಬೀಜವು. ತಪಶ್ಚರ್ಯೆಯೇ ಮಳೆಯು, ಪ್ರಜ್ಞೆಯೇ ನೇಗಿಲವು. ಪಾಪದ ಲಜ್ಜೆಯೇ ನೇಗಿಲದ ಹಿಡಿಕೆ, ಸ್ಮೃತಿಯೇ ನೇಗಿಲದ ಹಲ್ಲು, ಸಂತೋಷವೇ ಫಲವು." ಇದನ್ನು ಕೇಳಿ ಭಾರದ್ವಾಜನು ತತ್ಕ್ಷಣವೇ ಬುದ್ಧನ ಶಿಷ್ಯನಾದನು. ಹೇಳುವ ತಾತ್ಪರ್ಯವೇನಂದರೆ, ಧರ್ಮಬೋಧೆಯಿಂದ ಸಮಾಜದಲ್ಲಿ ಉಂಟಾಗುವ ಶಾಂತಿಯೂ, ಸಮಾಧಾನವೂ, ಇರದೇ ಹೋದರೆ, ಸಮಾಜದಲ್ಲಿ ಎಲ್ಲ ಅವ್ಯವಸ್ಥೆಯಾಗಿ, ಪಾಶವೀಬಲವುಳ್ಳ ಬಲಿಷ್ಠರೇ ಪ್ರಬಲರಾಗುವರು. ಆದುದರಿಂದ ಸರ್ವಸ್ವವನ್ನು ತ್ಯಾಗಮಾಡಿ, ಧರ್ಮ ಪ್ರಚಾರಮಾಡಿರೆಂದು ಬುದ್ಧನು ಉಪದೇಶಿಸುತ್ತಿದ್ದನು. ಆ ಬೋಧೆಗನುಸರಿಸಿ, ಎಷ್ಟೋ ಭಿಕ್ಷುಕರೂ, ಭಿಕ್ಷುಕಿಯರೂ ಧರ್ಮಪ್ರಚಾರ ಮಾಡಲಿಕ್ಕೆ ಸಿದ್ಧರಾಗಿ, ಈ ಧರ್ಮವನ್ನು ದಕ್ಷಿಣದಲ್ಲಿ ಕನ್ಯಾಕುಮಾರಿಯಿಂದ, ಅಥವಾ ಸಿಂಹಲದ್ವೀಪದಿಂದ ಉತ್ತರಕ್ಕೆ ಬೆಹರಿಂಗ ಸಾಮುದ್ರಧುನಿಯವರೆಗೆ, ಹಾಗು ಪೂರ್ವದಲ್ಲಿ ಪೀತ ಸಮುದ್ರದಿಂದ ಪಶ್ಚಿಮಕ್ಕೆ ಇಜಿಪ್ತದವರೆಗೆ, ಒಯ್ದು ಮುಟ್ಟಿಸಿದರು. ಇನ್ನು ಕಾಲವಶಾತ್ ಕೆಲವು ಪ್ರಸಂಗಗಳಲ್ಲಿ. ಈ ಧರ್ಮದ ವಿಪರ್ಯಾಸವಾಗಿ, ಕೆಲವು ಭಿಕ್ಷುಗಳು ನಿಷ್ಕ್ರಿಯತೆಯ ಉಪದೇಶವನ್ನು ಮಾಡಲಾರಂಭಿಸಿದರೆಂಬುದು, ಅಥವಾ, ಅಭಿಧರ್ಮದಲ್ಲಿ ಸಮ್ಯಕ್ ಕರ್ಮ ಹಾಗು ಸಮ್ಯಕ್ ವಾಚಾ, ಇದರ ಅರ್ಥವು ಕೇವಲ, ಅಕುಶಲ ಕರ್ಮದಿಂದ, ಅಕುಶಲವಾಚೆಯಿಂದ ನಿವೃತ್ತವಾಗುವದಷ್ಟೇ ಎಂದು ಮಾಡಿರುವರೆಂಬುದು ದುರ್ದೈವದ ಸಂಗತಿಯೇ ಹೊರತಾಗಿ, ಅದು ಮೂಲಧರ್ಮದ ದೋಷವಲ್ಲ; ಅಥವಾ ಬುದ್ಧಭಗವಾನನ ದೋಷವೂ ಅಲ್ಲ. ಹಲವು ಧರ್ಮಾಂಧ ಮುಸಲ್ಮಾನರು ಒತ್ತಾಯದಿಂದ ಧರ್ಮಪ್ರಸಾರಮಾಡುವದರಿಂದ ಹೇಗೆ ಪೈಗಂಬರರಿಗೆ, ದ್ವೇಷವು ತಟ್ಟಲಾರದೋ! ಹಲವು ಸ್ವಾರ್ಥೀ ಅದ್ವೈತಿಗಳು "ಅಹಂಬ್ರಹ್ಮಾಸ್ಮಿ" ಎಂದು ಸ್ವೇಚ್ಛಾಚಾರಿಗಳಾದ ಕ್ಷಣಕ್ಕೆ ಶ್ರೀಮತ್ ಶಂಕರಾಚಾರ್ಯರು ದೋಷಿಗಳಾಗಲಾರರೋ ಹಾಗೆಯೇ ಬುದ್ಧಧರ್ಮದ ಅವಸಾನಕಾಲಕ್ಕೆ ಕೆಲವು ಭಿಕ್ಷುಗಳು ನಿಷ್ಕ್ರಿಯತೆಯ ಆಲಸ್ಯ ಮುಂತಾದವುಗಳನ್ನು ಆಚರಿಸುವದರಿಂದ ಉಜ್ವಲವಾದ ಸಕ್ರಿಯ ಅಷ್ಟಾಂಗ ಮಾರ್ಗಕ್ಕೆ ಅಥವಾ ಅದನ್ನು ಪ್ರವರ್ತಿಸಿದ ಬುದ್ಧನಿಗೆ ಯಾವದೋಷವು ಸೋಂಕಲಾರದು.

# ಆಟಪಾಟ.

( ಶಬ್ದದ ಮೇಲೊಂದ ಆಟಪಾಟ—Pun )

೧.

ವಿನಾಯಕವಿಷ್ಣುಗೋಖಲೆಯು, ನನ್ನ ಚಿಕ್ಕನ್ನಕಾಲೇಜದ ಗೆಳೆಯ. ಅವನೂರು ಜಂಬುಕಂಡಿ. ನನ್ನ ಹಾಗೂ ತಮ್ಮೂರ ರೈತರ ಸಂಗತಿಯಿಂದ, ಅವನು ಕನ್ನಡವನ್ನು ತಕ್ಕಮಟ್ಟಿಗೆ ತಿಳಿದುಕೊಳ್ಳಬಲ್ಲ. ಹುಟ್ಟುಮರಾಟಿಗನಾದ್ದರಿಂದ, ಕನ್ನಡದಉಚ್ಚಾರಗಳು ಅವನಿಗೆ ಹೇಗೆ ಹೇಗೋ ಎನಿಸುತ್ತಿದ್ದವು. ಕಾರಣ ಕನ್ನಡ ಮಾತನಾಡುವದು, ಆತನಿಗೆ ತುಸು ಬಿಗಿಯಾಗುತ್ತಿತ್ತು. ಆದರೂ ನನ್ನ ಒಡನಾಟದಿಂದ ಅವನು ಕನ್ನಡವನ್ನು ಪ್ರೀತಿಸಲು ಕಲಿತಿದ್ದ. ಅಲ್ಲದಲೆ ಶ್ರೀಯುತ ಯ. ಭಾ. ಜಠಾರರವರ ಜೈಮಿನಿಭಾರತದ ಮೊದಲ ಸಂಧಿಯ ಸಮೂಲ ಭಾಷಾಂತರವಾದರೂ, ಆತನಮೇಲೆ ಒಳ್ಳೇ ಪರಿಣಾಮ ಮಾಡಿತ್ತು.

ವಿನೂನ ತಂಗಿ ಬಸಕ್ಕನನ್ನು—ನಮ್ಮೂರ ದತ್ತೋಪಂತ ಜೋಶಿಯುವರ ಮಗ-ಸದೂನಿಗೆ ಕೊಟ್ಟಿತ್ತು. ಸುಗ್ಗಿಯ ಸೂಟಿಯಲ್ಲೊಮ್ಮೆ, ವಿನೂ, ತಂಗಿಯನ್ನು ಕರೆಯಲೆಂದೂ ನನ್ನನ್ನು ಕಾಣಲೆಂದೂ ನಮ್ಮೂರಿಗೆ ಬಂದಿದ್ದ. ಅಂದು ಮುಚ್ಚಂಜೆ, ನಾನು ನನ್ನ ಹಳೇ ಹಳ್ಳಿಯ ಗೆಳೆಯರೊಡನೆ ಏನೋ ಆಟವಾಡಬೇಕೆಂದು, ಅದೇ ಹೊರಹೊರಟಿದ್ದೆ. ಅಷ್ಟರಲ್ಲಿ, ವಿನು, ನನ್ನನ್ನು ಕಾಣಲುಬಂದವನು, ನಾನು ಹೊರಹೊರಟದ್ದನ್ನುಕಂಡು “ ಕಾಯ್ಹೋ ! ऽऽ! ಕುಠೇನಿಘಾಲ್ಲಾ ! ” ( ಏನು? ಎತ್ತ ಹೊರಟಿರಿ ) ಎಂದು ಮರಾಟಿಯಲ್ಲಿ ಕೇಳಿದರೂ ನಾನು ಸ್ವಾಭಾವಿಕವಾಗಿ “ಹೀಗೆ: ಆಟಪಾಟಕ್ಕೆ” ಎಂದು ಕನ್ನಡದಲ್ಲೇ ಮಾರ್ನುಡಿಗೊಟ್ಟೆ. ಆತನೂ ನಮ್ಮೊಡನೆ ಆಟದಬೈಲಿಗೆ ಬಂದ. ಅಂದು ಅಗೀಹುಣ್ಣಿವೆ. ಹುಡುಗರೆಲ್ಲರೂ ಬೆಳದಿಂಗಳ ಹುರುಪಿನಿಂದ ತಿಳ್ಳೀ ಆಡೋಣವೆಂದರು.

ವಿನೂನನಿಗೆ ಆ ಆಟಕಂಡು ಅಚ್ಚರಿಯಾಗಿರಬೇಕು! ಮೊದಲಿಂದ ಕೊನೇವರಿಗೂ, ಬೆಪ್ಪಾಗಿ ನಮ್ಮನ್ನೆಲ್ಲ ಹುಳುಹುಳು ನೋಡುತ್ತಲೇ ಇದ್ದ. ಆತನೊಳ್ಳೇ ಜಿಜ್ಞಾಸು. ಆಟ ಮುಗಿದೊಡನೆ ನನ್ನಿಂದ ಆ ಆಟದ ಗೊತ್ತುಗುರಿಗಳನ್ನೆಲ್ಲ ಅರಿತುಕೊಂಡ, ಆಟದ ಹೆಸರನ್ನು ಮಾತ್ರ ಕೇಳಲು ಆತನೂ ಮರೆತ; ಹೇಳಲು ನಾನೂ ಮರೆತೆ.

ವಿನು ಮರುದಿನವೇ ತಮ್ಮನ ಮುಂಜಿಗಾಗಿ ತಂಗಿಯನ್ನು ಕರೆದುಕೊಂಡು ಹೋದ.

೨.

ಮತ್ತೊಮ್ಮೆ, ನಮ್ಮ ಆಬಚಿ (ಚಿಕ್ಕವ್ವ)ಯವರ ಹೊಲಮನೇ ಲೆಕ್ಕಕ್ಕಾಗಿ ನಾನು ಜಂಬುಕಂಡಿಗೆ ಹೋಗಬೇಕಾಗಿ ಬಂತು. ಅನಾಯಾಸವೇ ವಿನಾಯಕನ ಬೆಟ್ಟಿಯೂ

ಆಯಿತು. ನಾನು ಹೋದಾಗ ಆತ, ಸಾಲೆಯ ಹುಡುಗರನ್ನು ಹಿಂಡುಗಟ್ಟಿಕೊಂಡು ಅದೇ ತಿಳ್ಳಿಯಾಟವನ್ನಾಡುತ್ತಿದ್ದ. ಸಹಜವಾಗಿಯೇ "ಏನು! ವಿನಾಯಕರಾಯರೇ! ಏನು ನಡೆದಿದೆ?" ಎಂದು ಕೇಳಿದೆ, ಆಕಸ್ಮಾತ್ತಾದ ನನ್ನ ಬರುವಿನಿಂದ ವಿನೂ ಒಮ್ಮೆಲೆ ಬೆಚ್ಚಿಬಿದ್ದು "ಅಹೊ! ಆಪಣಕಾಯ್ (ಓಹೋ ನೀವೇನು ? !) ಯಾಽಕಿ (ಬನ್ನಿ) ತುಮಚೇಚತೇ–ऽ–ऽ ಆ–ऽ ಟ್ಯಾ–ऽ ಪ್ಯಾ–ऽ ಟ್ಯಾ–ऽऽ ಚಾಲಲಾ ಆಹೆ (ಅದೇ–ऽ ನಿಮ್ಮ ಆ–ಆ–ಟಾ–ಪಾ–ಟ ನಡೆದಿವೆ)" ಎಂದು ಹೇಳಿದ. ಅವರು ಆಟದ ಭರದಲ್ಲಿದ್ದದರಿಂದ, ಅದನ್ನು ಕೇಳಿ ಗಲ್ಲದಲ್ಲೇ ನಕ್ಕು ಆಟ ನೋಡುತ್ತ ನಿಂತೆ. ಆಟ ಮುಗಿದ ಮೇಲೆ ಮನೆಗೆ ಹೋದೆವು. ಅಂದೇ ರಾತ್ರಿಯ ಉಗಿಬಂಡಿಯಲ್ಲಿ ನಾನು ನಮ್ಮೂರಿಗೆ ಬಂದು ಬಿಟ್ಟೆ.

೩.

ಇಂದಿಗೆ ಈಯೆಲ್ಲಮಾತು ನಡೆದು ಎಷ್ಟೊ ದಿನಗಳಾದವು. ಮೊನ್ನೆ, ಒಂದು ದಿನ ನನ್ನ ಚಿಕ್ಕ ಮಗಳಮಗ, ತನ್ನ ಗೆಳೆಯರೊಂದಿಗೆ ತಮ್ಮ ಸಾಲೆಯಲ್ಲಿ ಅದೇನೋ ಆಟ್ಯಾಪಾಟ್ಯಾ (Atapata) Match (ಆಟ) ಇದೆಯೆಂದು ಹೇಳುತಲಿದ್ದ. ಮುಪ್ಪಿನವನಾದರೇನು! ನಾನು ಇಂಗ್ಲೀಷು ಮರೆತಿರಲಿಲ್ಲ. ಅಲ್ಲದೆ B. A. BSc. ಆಗಿದ್ದರೂ ನಾನು ಇಂಥ Match (ಆಟ)ದ ಹೆಸರನ್ನೇ ಕೇಳಿರಲಿಲ್ಲ. ಬಲು ಧೇನಿಸಿ, ಧೇನಿಸಿ, ಕಡೆಗೆ "ಶ್ಯಾಮೂ ಅದೇನೋ ಹೇಳ್ತಿದ್ದೆಲ್ಲ. ನಿಮ್ಮ ರಂಗನ ಮುಂದ, ಆಟ್ಯಾಪಾಟ್ಯಾ ಅಂತ; ಹಾಂಗಂದ್ರೇನದು?

"ಇಷ್ಟು ಗೊತ್ತಿಲ್ಲೇನೋ ಅಜ್ಜಾ! ನಾವು ಹಗಲೆಲ್ಲ ಆಡ್ತೀವಲ್ಲ"

"ಹೌದಪಾ! ನೀವಾಡ್ತಿದ್ದೀರಾದಿತು! ಆದರ ಽ ಅದರರ್ಥ ಏನಣಾ?"

"ಅರ್ಥಏನ್ಹೇಳ್ಬೇಕಪಾ, ಈತಗ! ಅದಽನೋ ಅಜ್ಜ ನಾವಾಡ್ತೀವಲ್ಲ ಸರಮುಸೀ ಕಟ್ಟಿ!! ಆದೇ ಆ ತಿಳ್ಳೀ ಆಟ!!"

"ಹೀ ಽ ಂ ಗ! ಆ ತಿಳ್ಳಿ ಇಷ್ಟು ತಿಳೀದ್ಹಂಗ ಆತೇನು"

ಮತ್ತೂ ಧೇನಿಸಿದೆ; ಧೇನಿಸಿದೆ; ಧೇನಿಸೇ ಧೇನಿಸಿದೆ; ಆಗ ಹೊಳೀತು. ಹಿಂದಿನದೆಲ್ಲಾ ನೆನಪಾಯ್ತು. ಅಂತೂ ನಮ್ಮ 'ಆಟಪಾಟ' ನನ್ನ ಅಲಕ್ಷದಿಂದೇ, ಮರಾಟೆ–ಇಂಗ್ಲೀಷಗಳ ಕೈ–ಕಾಲಾಗಸಿಕ್ಕು ಈ ಅವಸ್ಥೆಗೆ ಬಂದೀತೆಂದೆನ್ನಿಸಿತಲಿಲ್ಲ.

—ಶಾಸ್ತ್ರಿ.

( ೧ನೇ ಫಾರ್ಮಿನ ಮುಂದೆ ಸಾಗಿದ್ದು )

ಹೀಗೆಯೇ ಸದಾಚಾರಿಯೇ ಉತ್ತಮ ಕುಲದವನೆಂದೂ, ಅನಾಚಾರಿಯೇ ಹೊಲೆಯನೆಂದೂ ಉಸರಿದ್ದಾನೆ. ಇದಲ್ಲದೆ, ವೇದಧದಿಕಾರವು ಎಲ್ಲರಿಗೂ ಉಂಟೆಂದು ಹೇಳಿರುವನು. ಸದಾಚಾರಿಯಾಗಿ, ಬೇಕಾದ ಕಸಬನ್ನು ಮಾಡಲೂ, ಅಡ್ಡಿಯಿಲ್ಲವೆಂದೂ ಕಸಬುಗಳಲ್ಲಿ ಕೀಳುಮೇಲುಗಳಿಲ್ಲವೆಂದೂ ಮನವು ಶುದ್ಧವಿದ್ದರೆ ಎಲ್ಲವೂ ಶುದ್ಧವಿರುವ ವೆಂದೂ ತನ್ನ ಹೊಟ್ಟೆಯನ್ನು ಎರಡನೆಯವರಮೇಲೆ ಹಾಕುವದು ಪಾಪವೆಂದು ಬಣ್ಣಿಸಿದ್ದಾನೆ.

ಸದಾಚಾರ ಸದ್ಭಕ್ತಿ ಇಲ್ಲದವರ ನಾನೊಲ್ಲೆನಯ್ಯಾ ಅವರಾರಾಧನೆ ದುಡ, ನಿಚ್ಚ, ನಿಚ್ಚ, ಪ್ರಾಯಶ್ಚಿತ್ತನೊಲ್ಲೆನಯ್ಯಾ. ಕೂಡಲಸಂಗಮದೇವಾ ಭೂಮಿ ಭಾರಕರಾ.

ನೂರನೋದಿ ನೂರಕೇಳಿದರೇನು ? ಆಶೆಹರಿಯದು, ರೋಷಬಿಡದು, ಮಜ್ಜನಕ್ಕೆರೆದು ಫಲವೇನು ! ಮಾತಿನಂತೆ ಮನವಿಲ್ಲದ ಜಾತಿ, ಡೊಂಬರ ನೋಡಿ ನಗುವ ನಮ್ಮ ಕೂಡಲಸಂಗಮದೇವ.

## ಬಸವನ ನೀತಿಯ ವಚನಗಳು.

ದೇವಲೋಕ ಮರ್ತ್ಯಲೋಕವೆಂಬುವು ಬೇರಿಲ್ಲ ಕಾಣಿರೋ, ಸತ್ಯವನುಡಿವುದೇ ದೇವಲೋಕ ಅಸತ್ಯನುಡಿವುದೇ ಮರ್ತ್ಯಲೋಕ, ಆಚಾರವೇ ಸ್ವರ್ಗ, ಅನಾಚಾರವೇ ನರಕ, ಇದಕ್ಕೆ ನೀವೇ ಪ್ರಮಾಣು ಕೂಡಲ ಸಂಗಮದೇವ.

ದಯವಿಲ್ಲದ ಧರ್ಮದಾವುದಯ್ಯಾ? ದಯವೇ ಬೇಕು. ಸಕಲ ಪ್ರಾಣಿಗಳಲ್ಲಿ, ದಯವೇ ಧರ್ಮದ ಮೂಲವಯ್ಯಾ ಕೂಡಲಸಂಗಮದೇವ.

ಹರಿವ ಹಾವಿಗಂಜೆ, ಉರಿವ ನಾಲಿಗೆಗಂಜೆ, ಸುರಿಗೆಯ ಮೊನೆಗಂಜೆ, ಒಂದಕ್ಕಂಜುವೆನ್ನೊಂದಕ್ಕಂಜುವೆ, ಪರಸ್ತ್ರೀ ಜೂಜಿಗಂಜುವೆ. ಮುನ್ನಂಜದ ರಾವಣನೇ ವಿಧಿಗೊಳಗಾದ ಅಂಜುವೆನಯ್ಯಾ ಕೂಡಲಸಂಗಮದೇವಾ.

ಒಲಿಯು ಬೂದಿಯ ಬಳಿಯಲು ಬೇಡ, ಒಲಿಯಂತೆ ಹೂಸಿಕೊಂಡಿಪ್ಪುದು ಹುಸಿ, ಏನು ಫಲ, ಮನದಲ್ಲಿ ಲೇಸಿಲ್ಲದಕ್ಕರ; ಬಂದನಾಡಹೋಗಿ ಒಂಭತ್ತನಾಡುವ ಡಂಭಕರ ಮೆಚ್ಚ ಕೂಡಲಸಂಗಮದೇವಾ.

## ಭಕ್ತನ ಬೇಡಿಕೆ.

ಬಡಪಶು ಪಂಕದಲ್ಲಿ ಬಿದ್ದರೆ ಕಾಲಬಡಿವುದಲ್ಲದೆ ಬೇರೆ ಗತಿಯುಂಟೇ ? ಶಿವ, ಶಿವಾ, ಹೋದೆನು ಹೋದಿಹೆನಯ್ಯಾ ! ನಿಮ್ಮ ಮನದತ್ತಲೆನ್ನ ತೆಗೆಯಯ್ಯಾ, ಪಶುವಾನು ಪಶುಪತಿ ನೀನು, ತುಡುಗುಣಿ ಎಂದೆನ್ನ ಹಿಡಿದು ಬಡಿಯದ ಮುನ್ನ, ಒಡೆಯ, ನಿಮ್ಮ ಬಯ್ಕೆದಂತೆ ಮಾಡು, ಕೂಡಲಸಂಗಮದೇವಾ.

ಈವೆಲ್ಲ ತತ್ವಗಳನ್ನರಿತು ಕನ್ನಡಿಗರು ಅವುಗಳ ಧ್ಯಾನಚಿಂತನಗಳಲ್ಲಿ ಮಗ್ನರಾಗಿ, ಆಚರಣೆಯಲ್ಲಿ ತರಲು ಯತ್ನಿಸಬೇಕೆಂದು ಬೇಡಿಕೊಳ್ಳುತ್ತೇವೆ.

ಗೆಳೆಯರ ಗುಂಪಿನ

ಓಂ ನಲ್

# ಸ್ವಧರ್ಮ

॥ ತನ್ನ ತಾನರಿದಡೆ ತನ್ನರಿವೇ ಗುರು ॥

ಸಂಪುಟ ೧ ಪ್ರಭವ ಸಂ॥ ಜ್ಯೇಷ್ಠ ಸಂಚಿಕೆ ೩

ಗಿಳ್ಳೀ

ಸಂಪಾದಕರು: —

ಕೃಷ್ಣ ಶ್ರೀನಿವಾಸ ಬೆಟಗೇರಿ

ಮತ್ತು

ಹನುಮಂತ ಬಳವಂತ ಕೊಣ್ಣೂರ, ಬಿ.ಎ.

ಕ ಚಂದಾ ರೂ. ೩ ಬಿಡಿ ಸಂಚಿಕೆಗೆ ಆಣೆ ೪

ವ್ಹಿ. ಪಿ. ವೆಚ್ಚ ಬೇರೆ

# ವಿಷಯ-ಪರಿಚಯ.



—:०:—

ವಾಚಕಮಹಾಶಯರೇ; ಗುಂಪಿನ ಹಲವು ಅನಿವಾರ್ಯವಾದ ತೊಂದರೆಗಳಿಂದ ಈ ಸಂಚಿಕೆಯು ತಡವಾದುದಕ್ಕೆ ಕ್ಷಮೆಯಿರಲಿ. ಈಗಾಗಲೇ ಕೆಲವರ ಓಲೆಗಳೂ ಬಂದಿವೆ. ಅವರಿಗೆಲ್ಲ ಈ ಸಂಚಿಕೆಯೇ ಉತ್ತರ. ಮುಂದಿನವನ್ನು ಹೊತ್ತಿಗೆ ಸರಿಯಾಗಿ ಶುದ್ಧ ತೃತೀಯೆಗೆ ಹೊರಡಿಸುತ್ತ ಹೋಗುವೆವು. ನೀವು ಪತ್ರವ್ಯವಹಾರದಲ್ಲಿ ಅವಶ್ಯವಾಗಿ ಕ್ರಮಾಂಕವನ್ನು ತಿಳಿಸಲೇಬೇಕು.

—ಕಾರ್ಯದರ್ಶಿ.

ಓಂ ತತ್ ಸತ್

# ಸ್ವಧರ್ಮ

॥ ಜಯಂ ಭದ್ರಂ ಶುಭಂ ಮಂಗಲಮ್ ॥

| ವರ್ಷ—೪ | ಶಕೆ ೧೮೪೯ ಪ್ರಭವ ಸಂ॥—ಜ್ಯೇಷ್ಠ | ಸಂ.—೩. |
|---|---|---|

## ಹಾಲಕ್ಕಿ !

ರಂಗು ಮಹಲಿನ ರಾಗ, ರಂಗುದುಟಿಗಳ ರಾಗ, ಇಂಗೊರಲು ಉಲಿವ ರಾಗ ॥
ಶೃಂಗಾರಸೂತ್ರಜ್ಞೆ ಕೋಕಿಲೆಯು ಕುಕಿಲು ಸಹ ಕಡು ಬೇಸರಾಯಿತೀಗ ॥ ೧ ॥

ಅಡ್ಡಹಾದಿಯ ಹಿಡಿಸೆ! ಸಾವಿನಾಚೆಯ ನಾಡ ಗೂಢವಿಂದೊಡೆಯುತಿಹುದು ॥
ಗುಡ್ಡಗಾಡಿನ ನಡುವೆ ಕಳಕುಳಗಿಳೆಂದು ಹಾಲಕ್ಕಿಯೊಡನುಡಿಯುತಿಹುದು ॥ ೨ ॥

ಚೀರಿಡುವ ಹಾಲಕ್ಕಿ! ದೇವಲೋಕದ ಗುಟ್ಟು ಬಟ್ಟೆಯನು ನೀನೆ ಬಲ್ಲೆ ! ॥
ಕಾರಿರುಳ ದೇವತೆಯು ಕಿವಿಯಲ್ಲಿ ಹೇಳಿದಳು ಇರಿಸಿ ಮುಂಗೈಯ ಮೇಲೆ! ॥ ೩ ॥

ಈಚೆ ಮುಳುಗುವ ಭಾನು ಆಚೆ ಮೂಡುವೆನೆಂದು ಚೀರುತಿಹೆ ಬೇರೆ ಸ್ವರದಿ ! ॥
ಊಚನೀಚದ ಮಾನ ನಿನ್ನದಾ ಕನಸರಸಿ ! ಸಾಗುವೆನು ನಾನು ತ್ವರದಿ ! ॥ ೪ ॥

ನನ್ನ ದೈವದ ದೈವತವೆ! ನಿನ್ನ ಮನೆಯಲ್ಲಿ ಪರದ ಸಂಸಾರಿಯಾಗಿ ॥
ಇನ್ನು ಬಾಳುವೆನಮ್ಮ—ನಿನ್ನ ಒಳ್ನುಡಿಯಲ್ಲಿ ಇಹದ ಸಂನ್ಯಾಸಿಯಾಗಿ ॥ ೫ ॥

ಅಕ್ಕ ಶಕುನದ ಹಕ್ಕಿ ! ನಿನ್ನ ಭಕ್ತನು ಅಂಗಲಾಚುವನು ಮುಂದೆ ನಿಂದು ॥
ಕಕ್ಕುಲಾತಿಯ ತೋರಿ ಹರಿಸವ್ವ—ಜಗದಲ್ಲಿ ಹಗಲು ಇರುಳಾಗಲೆಂದು ! ॥ ೬ ॥

—ರಾಮಚಂದ್ರ

ಸವಿ:—ಹಾಲಕ್ಕಿಯೊಂದು ಶಕುನದ ಹಕ್ಕಿ. ಇರುಳಿನಲ್ಲಿ ಅಡ್ನಾಡಿ ಹಾಲಕ್ಕಿಯ ಸೊಲ್ಲು ಕೇಳಿ ಚುಮು ಚುಮು ನಸುಕಿನಲ್ಲಿ ಹಾಲಕ್ಕಿಯು ಶಕುನವನ್ನು ಸಾರುವ ಬುಡುಬುಡುಕಿಯವರ ವಿಚಿತ್ರ ಸಂಗೀತವನ್ನು ಎಚ್ಚತ್ತು ಕೇಳಿ, ಕೇಳ ಕೇಳುತ್ತ ನಿದ್ದೆಹೋದ ಅನುಭವವು ಯಾರಿಗಿಲ್ಲ ? ಸಂಸಾರದ ತ್ರಿವಿಧ ತಾಪಗಳಿಂದ ತ್ರಸ್ತರಾದವರು ಮಾತ್ರ ಲಗುಬಗೆಯಿಂದೆದ್ದು ಆ ಬುಡ-ಬುಡುಕಿಯುವನ ಕಾಲಜ್ಞಾನದಲ್ಲಿ ತಮಗೆ ಹಾದಿ ತೋರಿಸುವ ಜ್ಞಾನಕಿರಣವೇನಾದರೂ ಇರಬಹುದೋ ಎಂದು ಸಾಕಾಂಕ್ಷರಾಗಿ ಅವನ ಸೊಲ್ಲಿಗೆ ಕಿವಿಗೊಡುವರು. ಅದರಂತೆಯೆ ದೇವನೆಂದರೇನು, ದೈವವೆಂದರೇನು, ಜೀವನ ಸ್ಥಿತಿಯೇನು ಗತಿಯೇನು ? ಇವೇ ಮೊದಲಾದ ಪ್ರಶ್ನೆಗಳನ್ನು ಕುರಿತು ಯೋಚಿಸುವವರು ಮಾತ್ರ ತಮ್ಮ ಹೃದಯ ಗುಹೆಯಲ್ಲಿ ನೆಲೆನಿಂತ ಇರುಳಿನಲ್ಲಿ ನುಡಿಯುವ ಹಾಲಕ್ಕಿಯೇನಾದರೂ ಇರುವದೋ ? ಅದರ ನುಡಿಕೇಳಿ ಅರ್ಥ ತಿಳಿದು—ಹೃದಯದ ಗುಹೆಯಲ್ಲಿರುವುದು ಇರುಳಲ್ಲ ಹಗಲು—ಎಂದೆಂಬ ಅನುಭವವು ಬರುವದೋ ! ಎಂದು ಸಾಧಕ ಜೀವರು ಮಾತ್ರ ಚಡಪಡಿಸುವುದುಂಟು. ಉಳಿದವರೋ ಹಾಲಕ್ಕಿಯ ನುಡಿಯನ್ನು ಕೇಳಿಯೂ, ಕೇಳ ಕೇಳುತ್ತ ನಿದ್ದೆಹೋಗಿ ಅದನ್ನು ಮರೆತುಬಿಡುವರು. ಅವರಿಗೆ ತಮ್ಮ ಎಚ್ಚರವೊಂದು ಕನಸೆಂಬುದು ತಿಳಿಯುವದಿಲ್ಲ. ತಿಳಿಯದೆ ಇದ್ದ ವಿಷಯಗಳೆಲ್ಲ ತಿಳಿಯಲಾರದ ವಿಷಯಗಳೆಂದು ತಿಳಿದುಕೊಂಡು ತಾವು ಕಂಡದ್ದೇ 'ದರ್ಶನ' ತಾವು ಉಂಡದ್ದೇ 'ಅನುಭಾವ'ವೆಂದು ಬಗೆದು ಬಾಳುವೆಯನ್ನು ಸಾಗಿಸುವರು.

ಎಲ್ಲರಿಗೂ ಯಾವುದು ನಿದ್ದೆಹೋಗಬೇಕಾದ ರಾತ್ರಿಯೊ ಅದೆ ಎಚ್ಚರಿರಬೇಕಾದ ಹಗಲು ಸಂಯಮಿಗೆ; ಎಲ್ಲರೂ ಯಾವ ವ್ಯವಹಾರದಲ್ಲಿ ಹಗಲಿನಲ್ಲಿದ್ದಂತೆ ಎಚ್ಚರಿರುವರೊ ಅದೆಲ್ಲವೂ ರಾತ್ರಿಯು ಕಣ್ಣುಳ್ಳ ಮುನಿಗೆ-ಎಂದು ಭಗವಂತನು ಹೇಳಿದುದು ಮೇಲಿನ ಸ್ಥಿತಿಯನ್ನನುಲಕ್ಷಿಸಿಯೇ! ಈ ಗೀತದಲ್ಲಿ 'ಜಗದಲ್ಲಿ ಹಗಲು ಇರುಳಾಗಲೆಂದು' ಆಶೀರ್ವಾದವನ್ನು ಬೇಡಿದ್ದಾದರೂ ಇದೆ ತಿಳಿವಿನಿಂದ. ಸಾಮಾನ್ಯತಃ ನಮ್ಮ ಜೀವನವು ಪಂಚೇಂದ್ರಿಯಗಳ ಸಂತರ್ಪಣದಲ್ಲಿ ಸಮಾಪ್ತಿಹೊಂದುವುದು. ಇದಕ್ಕೇ ಕವಿ 'ಪಂಪ'ನು ಆದಿಪುರಾಣದಲ್ಲಿ 'ಚರ್ವಿತ ಚರ್ವಣ ಪಿಷ್ಟಪೇಷಣ'ವೆಂದು ತಿರಸ್ಕಾರದಿಂದ ನುಡಿದಿರುವನು. ಆದರೆ ಈ ಬಾಳುವೆಗೇ ನಾವು ಜೀವಿತವೆಂದೂ ಹಗಲೆಂದೂ ಸರಳ ಮಾರ್ಗವೆಂದೂ ಅನ್ನುವದುಂಟು. ಇದಕ್ಕೂ ಬೇರೆಯಿದ್ದುದೆಲ್ಲ ನಮಗೆ ಸಾವು-ಇರುಳು—ಅಡ್ಡಹಾದಿ ! ಆದರೆ ಪರದ ಸಂಸಾರವೇ ಸಂಸಾರವೆಂದು ಬಗೆದು ಇಹವ ಸಂನ್ಯಾಸಮಾಡಿ ಇಹದ ಅರ್ಥದಿಂದ ಮುಳುಗಿ ಪರಾರ್ಥಕ್ಕಾಗಿ ಮೂಡುವ ತೇಜಸ್ವಿಗಳು ಉದಯಿಸಬೇಕೆಂಬುದೇ ಈ ಗೀತದೊಳಗಿನ ಪ್ರಾರ್ಥನೆ. ರತಿಯು ಮುಂಗೈಯ ಮೇಲೆ ಕುಳಿತು ಗಿಳಿಯು ಮಾತುಕಲಿವಂತೆ ಹೃದಯದ ಗುಹೆಯೊಳಗಿನ ದೇವತೆಯು ಮುಂಗೈಯಮೇಲೆ ಕುಳಿತು ಈ ಶಕುನದ ಹಕ್ಕಿಯು ಈ ಗುಟ್ಟನ್ನೇ ಕಲಿತುಕೊಂಡು ಅದನ್ನೆ ಸಾರುತ್ತಿದೆ ಬೀರುತ್ತಿದೆ.

—ದ. ರಾ. ಬೇಂದ್ರೆ

# ಶ್ರೀ ಮದ್ವಿವಿದ್ಯಾರಣ್ಯರು ಉದಯಿಸದಿದ್ದರೆ !

೧೪ನೇ ಶತಮಾನವೆಂದರೆ ಭಾರತದ ಭಾಗ್ಯಹೀನತೆಯಕಾಲ. ಎಲ್ಲಿನೋಡಿದರೂ ಕತ್ತಲೆಯು ಮುಸುಕಿಹೋಗಿತ್ತು. ವೇದಧರ್ಮದ ಮೇಲೆ ಒಳ್ಳೆ ಆಘಾತಗಳಾಗಿ ಜರ್ಜರಿತವಾಗತೊಡಗಿತ್ತು. ಆರ್ಯಸಂಸ್ಕೃತಿಯು ಜೀವದಿಂದುಳಿಯುವದು ಕಠಿಣವಾಗಿತ್ತು.

ಕರ್ನಾಟಕ ಸಿಂಹಾಸನಸ್ಥಾಪನಾಚಾರ್ಯರಾದ

ಶ್ರೀಮದ್ವಿದ್ಯಾರಣ್ಯರು.



( ಈ ಪಡಿಯಚ್ಚು ಕನ್ನಡಿಗನ ಚಾವಡಿಯದು. )

ಆರ್ಯತತ್ವಜ್ಞಾನದ ರಹಸ್ಯವು ಮಾಲಿನ್ಯವಾಗಿ ಎಲ್ಲೆಡೆಯಲ್ಲಿಯೂ, ವೇದಾಂತದ ದುರುಪಯೋಗವಾಗತೊಡಗಿತ್ತು. ಧೀರವೃತ್ತಿಯ ತ್ಯಾಗವು ಮೈಗಳ್ಳರು ಮೈಯುಳಿಸಿಕೊಳ್ಳಲು ಉಪಯೋಗವಾಗತೊಡಗಿತ್ತು. ಮ್ಲೇಂಛರ ಉಗ್ರಸ್ವರೂಪದಲ್ಲಿ ಭಾರತೀಯರ

ಕ್ಷಾತ್ರವೃತ್ತಿಯು ಮಾಯವಾಗಿ ನಮ್ಮಷ್ಟಕ್ಕೆ ನಾವು ಸುಖದಿಂದ ಇದ್ದರೆ ತೀರಿತು. ನಮ್ಮ ಸ್ನಾನಸಂಧ್ಯಾವಂದನೆಗಳು ಯಥಾಸಾಂಗವಾಗಿ ಸಾಗಿದರೆ ಸಾಕು, ಪರರಗೊಡವೆ ನಮಗೇಕೆ? ವೇದಾಂತಿಗಳಿಗೆ ವ್ಯವಹಾರವು ಏತಕ್ಕೆಬೇಕು? ಇವೇ ಮೊದಲಾದ ದುರ್ಬಲ ವಿಚಾರಗಳು ಸಮಾಜದಲ್ಲಿ ಮನೆಮಾಡಿಕೊಂಡಿದ್ದವು. ವೇದಧರ್ಮದಲ್ಲಿ ವರ್ಣಿಸಿದ ಬ್ರಹ್ಮತೇಜಸ್ಸು ಕಟ್ಟುಕತೆಯಾಗಿ ಹೋಗಿತ್ತು. ಆರ್ಯತತ್ವಜ್ಞಾನವೆಲ್ಲವೂ, ಯಾರೋ ಹುಚ್ಚರು ಬಡಬಡಿಸಿದ ತಲೆತಿರುಕಮಾತುಗಳೇನೋ ಎಂಬ ಭ್ರಮೆಯು, ಮೆಲ್ಲಮೆಲ್ಲನೆ ನೆಲೆಯೂರಹತ್ತಿತ್ತು. ಆರ್ಯಸಂಸ್ಕೃತಿಯು ತನ್ನನ್ನು ರಕ್ಷಿಸುವವರಿಲ್ಲವೇ? ಎಂದು ಗೋಳಿಡುತ್ತಿತ್ತು. ಇಂಥ ಸಮಯದಲ್ಲಿ ವಿದ್ಯಾರಣ್ಯರು ಉದಯಿಸಿ, ಆರ್ಯತತ್ವಜ್ಞಾನದ ಮೇಲಿನ ಧೂಳನ್ನು ಝಾಡಿಸಿ ತೆಗೆದು, ಅದರ ದಿವ್ಯಪ್ರಕಾಶವನ್ನು ಹೊರಗೆಡವಿದರು. ಯಾವ ತತ್ವಜ್ಞಾನದಿಂದ ಭಾರತವು ಇಲ್ಲಿಯವರೆಗೆ ಜೀವಂತವಿರುವದೋ ಆ ತತ್ವಜ್ಞಾನವನ್ನೂ ಆ ಆರ್ಯಸಂಸ್ಕೃತಿಯನ್ನೂ ರಕ್ಷಿಸದಿದ್ದರೆ, ಅದರ ಫಲವಾದ ಜ್ಞಾನವು ನಿಮಗೂ ಶಕ್ಯವಿಲ್ಲವೆಂದೂ, ಅದನ್ನು ರಕ್ಷಿಸುವದೋ ಈಗಿನ ಧರ್ಮವೆಂದೂ, ಉಪದೇಶಿಸಿ, ವೈಗಳ್ಳರನ್ನು ಬೈಲಿಗೆಳೆದು ತೇಜಸ್ವಿಗಳನ್ನಾಗಿಮಾಡಿದರು, ಜ್ಞಾನಿಯಾಗಿ, ಆತ್ಮಸ್ಥಿತಿಗೆ ಯಾವ ಕ್ಷತಿಯೂ ಉಂಟಾಗದಂತೆ, ವೇದಧರ್ಮವನ್ನು ಆಪತ್ತಿನೊಳಗಿಂದ ರಕ್ಷಿಸುವದೇ ವೀರ (ನಿಜವಾದ) ಧರ್ಮವೆಂದೂ, ಯುಗಧರ್ಮವೆಂದೂ ಶಕ್ಯವಿದೆಯೆಂದೂ "ಜ್ಞಾನಿನಾ ಚರಿತುಂ ಶಕ್ಯಂ, ಸಮ್ಯಕ್ ರಾಜ್ಯಾದಿ ಲೌಕಿಕಂ," ಎಂಬುಕ್ತಿಯನ್ನು ಸಾರಿ, ಆರ್ಯ ಧರ್ಮದ ತಿರುಳಾದ ವೀರಧರ್ಮದ ಪ್ರವರ್ತಕರಾದರು. ವ್ಯಕ್ತಿಯ ಜೀವನದ ಕಲ್ಪನೆಯನ್ನು ತೆಗೆದು ಸಾಂಘಿಕ ಜೀವನದ ಕಲ್ಪನೆಯನ್ನು ಪ್ರಸಾರಗೊಳಿಸಿದರು. ಇದೇ ಕಲ್ಪನೆಯನ್ನೇ ಶಾಂತಕವಿಗಳು ಈ ರೀತಿಯಾಗಿ ಹಾಡಿದ್ದಾರೆ.

> ಏಳುಸಾಯಣ ಕಟ್ಟುಗ್ರಂಥವ । ಎಳುಪಂಪಾಕ್ಷೇತ್ರಕೆ ।
> ಗಾಳಿಗಂಟುಗಳೋದಿದೇತಕೆ । ಎಳು ಈಕ್ಷಣಮಾತ್ರಕೆ ॥೧॥

ಹೀಗೆ ಬ್ರಾಹ್ಮಣರನ್ನು ಹುರಿದುಂಬಿಸಿ, ನಿಜವಾದ ತತ್ವಜ್ಞಾನದ ಕಡೆಗೆ ಅವರನ್ನು ಎಳೆದರು. ಆರ್ಯತತ್ವಜ್ಞಾನದ ಉಜ್ವಲಸ್ವರೂಪವಾದ ಬ್ರಹ್ಮತೇಜಸ್ಸನ್ನು ಮತ್ತೆ ಜಗತ್ತಿಗೆ ತೋರಿಸಿ, ವೇದಧರ್ಮವನ್ನು ರಕ್ಷಿಸಿದರು. ಸಾಂಘಿಕ ಜೀವನದ ಹೊಸ ಮಂತ್ರವನ್ನು ಉಪದೇಶಿಸಿ ಭಾರತವನ್ನು ಜೀವಂತಗೊಳಿಸಿದರು. ವಿದ್ಯಾರಣ್ಯರು ಉದಯಿಸದಿದ್ದರೆ, ಈ ಹೊಸತತ್ವಗಳ ಉದಯವಾಗದೆ ಆರ್ಯತತ್ವಜ್ಞಾನದ ಗತಿಯು ಏನಾಗುತಿತ್ತೋ ನಾವರಿಯವು.

(೨) ಇನ್ನೊಂದು ದೃಷ್ಟಿಯಿಂದ ವಿಚಾರಿಸೋಣ. ಮುಸಲ್ಮಾನರ ಹಾವಳಿಯನ್ನು ಅಡ್ಡಗಟ್ಟುವ ವಿದ್ಯಾರಣ್ಯರಂಥ ಗಂಡುಗಲಿಗಳು ಆ ಕಾಲಕ್ಕೆ ಇರದಿದ್ದರೆ, ದಕ್ಷಿಣಹಿಂದುಸ್ಥಾನವು ಈ ರೂಪದಿಂದ ನಮ್ಮ ದೃಷ್ಟಿಗೆ ಬೀಳುತ್ತಿದ್ದಿಲ್ಲ. ಸದ್ಯಕ್ಕೆ

ಕಾಣುವ ಗುಡಿಗೋಪುರಗಳು ಮಾಯವಾಗಿ, ಪುಣ್ಯಕ್ಷೇತ್ರಗಳು ಹಾಳಾಗಿ, ಅವುಗಳಲ್ಲಿ ಒಡಮೂಡಿದ ನಮ್ಮ ಕಲೆ, ಸಂಸ್ಕೃತಿ, ಮೊದಲಾದವುಗಳೆಲ್ಲವೂ, ಹೇಳಹೆಸರಿಲ್ಲದೆ ಹೋಗುತ್ತಿದ್ದವು. ಆರ್ಯತತ್ವಜ್ಞಾನದ ಶಾಖೆಗಳಾದ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ, ಮೊದಲಾದ ತತ್ವಜ್ಞಾನದ ಸೂಕ್ಷ್ಮರೂಪಗಳೂ ಅವುಗಳ ಆಚರಣೆಯೂ, ದಕ್ಷಿಣಹಿಂದುಸ್ತಾನದಲ್ಲಿ ಬೇರೆ ಜಾತಿಗಳಲ್ಲಿ ಕಾಣಬಹುದು. ಮುಸಲ್ಮಾನರ ಹಾವಳಿಯಿಂದ ಇವೆಲ್ಲ ಜಾತಿಪಂಗಡಗಳು ಧ್ವಂಸವಾಗಿ, ಉತ್ತರಹಿಂದುಸ್ತಾನದಂತೆಯೇ ಸ್ಥಿತಿಯಾಗಬಹುದಾಗಿತ್ತು. ಅಲ್ಲಿ ನಿಮಗೆ, ಈ ತತ್ವಜ್ಞಾನದ ಸೂಕ್ಷ್ಮರೂಪಗಳು ಕಾಣುವದು ಅಪರೂಪ. ಹಿಂದೂ ಎಂಬ ಒಂದೇ ಒಂದು ಜಾತಿಯು ಕಣ್ಣಿಗೆ ಬೀಳುವ ಸಂಭವವಿತ್ತು.

(೩) ಮೃಗರಾಜನು ಕ್ರೀಡಿಸಿ, ಗವಿಯನ್ನು ಸೇರಿದ ನಂತರ ವನದಲ್ಲೆಲ್ಲ ನರಿಗಳ ಚೆಲ್ಲಾಟವೇ ಆಗುವಂತೆ, ಭಾರತದ ವೀರಶ್ರೀಯು, ಮಂದವಾದ ಕೂಡಲೇ ಮುಸಲ್ಮಾನರ ಉಪಟಳಕ್ಕೆ ಮೇರೆದಪ್ಪಿತು. ಎಲ್ಲಿ ನೋಡಿದಲ್ಲಿ ಕೊಲೆಸುಲಿಗೆಗಳು, ಪಾತಿವ್ರತ್ಯಭಂಗವೂ, ದೇವಾಲಯಗಳನಾಶವೂ, ತೆರಪಿಲ್ಲದೆ ನಡೆದಿದ್ದವು. ಕ್ರೂರವಾದ ಹುಲಿಯನ್ನು ಕಂಡು ಎರಳೆಗಳು ಎದೆಯೊಡೆದು ದಿಕ್ಕೆಡುವಂತೆ; ಮುಸಲ್ಮಾನರ ಈ ಉಗ್ರಸ್ವರೂಪರವನ್ನು ಕಂಡು ಸಹಿಸಲಾರದೆ ಭಾರತೀಯರೆಲ್ಲರೂ ಬಾಯಿಯಲ್ಲಿ ಅಕ್ಕಿಕಾಳು ಹಾಕಿಕೊಂಡು ಜೀವರಕ್ಷಣೆಯಸಲುವಾಗಿ ಗುಡ್ಡಗಾಡುಗಳನ್ನು ಅಲೆಯಹತ್ತಿದರು. ಇಡೀ ಭಾರತದಲ್ಲಿ ಇವರನ್ನು ಅಡ್ಡಗಟ್ಟುವ ಗಂಡುಗಲಿಗಳು ಒಬ್ಬರೂ ಇರಲಿಲ್ಲ. ಇಡೀ ಭಾರತವು ಯವನ ಸಂಸ್ಕೃತಿಮಯವಾಗುವ ಹೊತ್ತುಬಂದಿತ್ತು. ಇಂಥ ವೇಳೆಯಲ್ಲಿ ವಿದ್ಯಾರಣ್ಯರು ಉದಯಿಸಿ, ಮುಸಲ್ಮಾನರ ಹಾವಳಿಯನ್ನು ಅಡ್ಡಗಟ್ಟಿ ಅವರ ಉಗ್ರಸ್ವರೂಪವನ್ನು ಅಡಗಿಸಿ, ಹಿಂದು ರಾಜ್ಯವನ್ನು ಸ್ಥಾಪಿಸಿದವರು. ದಕ್ಷಿಣ ಹಿಂದುಸ್ಥಾನದಲ್ಲಿ ಮುಸಲ್ಮಾನರನ್ನು ಅಡ್ಡಗಟ್ಟಿ ಎದುರಿಸಿದವರಲ್ಲಿ ಇವರೇ ಮೊದಲನೆಯವರು. ದಕ್ಷಿಣ ಹಿಂದುಸ್ತಾನವೇ ಏಕೆ! ಇಡೀ ಭಾರತದಲ್ಲಿ ಎಂದರೂ ಸಲ್ಲುವದು. ಇಷ್ಟೇ ಅಲ್ಲ ಇದಕ್ಕೂ ಹೆಚ್ಚಿನ ಮಹತ್ವವು ಇವರ ಅವತಾರದಿಂದಾಗಿದೆ. ಭಾರತವು ಕಂಗೆಟ್ಟು ಕಂಗಾಲಾದ ಕಾಲದಲ್ಲಿ, ಭಿನ್ನ ಭಿನ್ನ ಭಾಷೆಗಳನ್ನಾಡುವ ಹಿಂದೀ ಜನಾಂಗವನ್ನು ತಮ್ಮ ತಪಶ್ಚರ್ಯೆಯಿಂದ ಒಟ್ಟುಗೂಡಿಸಿ, ತಾವು ಪರತಂತ್ರ ಸ್ಥಿತಿಯಲ್ಲಿದ್ದರೂ ಕೂಡ, ಬಲಿಷ್ಠರೂ ಕ್ರೂರರೂ ಪರಧರ್ಮೀಯರೂ ಆದ ಶತ್ರುಗಳ ಕೂಡ ಹೋರಾಡಿ ಧರ್ಮರಾಜ್ಯ ( ದೇವರಾಜ್ಯ )ವನ್ನು ಸ್ಥಾಪನೆಮಾಡಿದ್ದು ಭಾರತೀಯ ಇತಿಹಾಸದಲ್ಲಿಯೇ ಮೊದಲನೇ ಪ್ರಸಂಗವು. ಇಲ್ಲಿಯವರೆಗೆ ಭಾರತೀಯ ರಾಜರು ತಮ್ಮ ಸೈನ್ಯಬಲದಿಂದಲೇ ಹೋರಾಡುತ್ತಿದ್ದರು ಜನಾಂಗಕ್ಕೆ ಜನಾಂಗವನ್ನೇ ಜಾಗೃತಗೊಳಿಸಿ, ಸಂಘಶಕ್ತಿಯ ಅದ್ಭುತ ಸಾಮರ್ಥ್ಯವನ್ನು ವಿದ್ಯಾರಣ್ಯರು ಜಗತ್ತಿಗೆ ತೋರಿಸಿದರು. ಕ್ಷಾತ್ರ ತೇಜಸ್ಸಿನೊಂದಿಗೆ ಬ್ರಹ್ಮತೇಜಸ್ಸು ಬೆರೆತರೆ ಅದರ ಪ್ರಖರತೇಜ

ಸ್ಸನ್ನು ಸಹಿಸುವದು ಅಂತ್ಯಂತ ಕಠಿಣವೆಂಬುದನ್ನು ಶತ್ರುಗಳಿಗೆ ತೋರಿಸಿಕೊಟ್ಟರು. ಹೀಗೆ ರಾಷ್ಟ್ರವು ವಿಪತ್ತಿನಲ್ಲಿರುವಾಗ ಆರ್ಯ ಧರ್ಮವು, ಆರ್ಯ ಸಂಸ್ಕೃತಿಯು ಮುಳುಗ ವೇಳೆಯಲ್ಲಿ, ಇಡೀ ಜನಾಂಗವೇ ಅವರ ರಕ್ಷಣೆಯನ್ನು ಗೈಯುವದು ಅವಶ್ಯವೆಂದೂ, ಜನಾಂಗವು ಜಾಗೃತವಾದರೆ ಅದರಲ್ಲಿ ಅದ್ಭುತ ಸಾಮರ್ಥ್ಯ ಉಂಟೆಂಬ ಹೊಸ ತತ್ವಪ್ರಚಾರವನ್ನು ಮಾಡಿದರು. ಈ ವೇಳೆಯಲ್ಲಿ ಬ್ರಾಹ್ಮತೇಜಸ್ಸಿನಿಂದ ಒಪ್ಪುವ ವಿದ್ಯಾರಣ್ಯರಂಥ ಕ್ಷಾತ್ರವೀರನು ಉದಯಿಸದಿದ್ದರೆ ಭಾರತದ ಗತಿಯು, ಏನಾಗು ತ್ತಿತ್ತೋ ನೀವೇ ವಿಚಾರಿಸಿರಿ.

(೪) ಬೇರೊಂದು ದೃಷ್ಟಿಯಿಂದ ವಿಚಾರಿಸೋಣ. ವಿದ್ಯಾರಣ್ಯರ ಚರಿತ್ರೆಯನ್ನು ನಿರೀಕ್ಷಿಸಿದಂತೆ ಅವರ ಜೀವನದಲ್ಲಿ ಹೊಸ ಹೊಸ ತತ್ವಗಳೇ ಒಡೆದು ಕಾಣುತ್ತವೆ. ಭಿನ್ನ ಭಿನ್ನಜಾತಿ, ಭಿನ್ನ ಭಿನ್ನಪಂಥ, ಭಿನ್ನ ಭಿನ್ನ ಧರ್ಮಗಳುಳ್ಳ ಜನರನ್ನು ಒಂದೆಡೆ ಒಂದೇ ಮಾತ್ರದಿಂದ ಒಟ್ಟುಗೂಡಿಸಿದ್ದೇ ಆಶ್ಚರ್ಯಕರವಾದ ಸಂಗತಿ. ಆ ಜನಜೀವ ನದ ಜೀವಾಳವನ್ನು ಹುಡುಕಿ ತೆಗೆದುದು ಅದಕ್ಕೂ ಆಶ್ಚರ್ಯ ಧರ್ಮಜೀವನವಾದ ಭಾರತವು ಜಾಗೃತ ಉಳಿಯಬೇಕಾದರೆ,ಗೋ, ದೇವ, ಬ್ರಾಹ್ಮಣ ಪ್ರತಿಪಾಲಕತ್ವವೇ ಹಿಂ ದೂರಾಜ್ಯದ ಧ್ಯೇಯವಿರಬೇಕೆಂಬ ಮಂತ್ರವನ್ನು ಕಂಡು ಹಿಡಿದು, ಅದನ್ನೇ ಉಪದೇಶಿಸಿ, ಉದಯ ಭಾರತದ ಹಿಂದೂ ಜನಾಂಗಕ್ಕೆಲ್ಲ ಒಂದು ರೀತಿಯಿಂದ ಗುರುಗಳಾದರು. ಇದೇ ಮಂತ್ರವನ್ನೇ ಜಪಿಸಿ, ಶಿವಾಜಿ ಮೊದಲಾದವರೆಲ್ಲ ಸ್ಫೂರ್ತಿಯನ್ನುಗೊಂಡರು. ಹೀಗೆ ರಾಜ್ಯದ ಅಸ್ತಿಭಾರವನ್ನು ಧರ್ಮದ ಮೇಲೆ ಕಟ್ಟಿದ್ದಲ್ಲದೆ, ವೇದಕಾಲದ ಧರ್ಮರಾಜ್ಯ ವನ್ನು (ದೇವ ರಾಜ್ಯವನ್ನು) ಪ್ರಾರಂಭಮಾಡಿದರು. ಧರ್ಮರಾಜನಿಂದ ಇತ್ತಕಡೆಗೆ ಹಿಂದೂರಾಜರು ರಾಜ್ಯವು ವ್ಯಕ್ತಿಗತ ರಾಜ್ಯವೆಂದೂ, ಅದು ತಮ್ಮ ಸ್ವತ್ತೆಂದೂ ಭಾವಿಸಿ, ಮನಬಂದಂತೆ ನಡಿಯಹತ್ತಿದ್ದರು. ಇದರಿಂದ ರಾಷ್ಟ್ರದಮೇಲೆ ವಿಪತ್ತುಗಳು ಬಂದರೂ ಆರ್ಯ ಸಂಸ್ಕೃತಿಯು ನಷ್ಟವಾಗುವ ಹೊತ್ತುಬಂದರೂ ಅವರ ಕಣ್ಣು ತೆರೆಯುತ್ತಿ ದಿಲ್ಲ. ಅವಿವೇಕಿಗಳಂತೂ ರಾಜ್ಯಮದದಿಂದ ಮದವೇರಿ ಪ್ರಜಾಪೀಡನೆಯನ್ನೇ ಉಂಟು ಮಾಡುತ್ತಿದ್ದರು. ಈ ಎಲ್ಲ ಅನರ್ಥಗಳನ್ನು ತಪ್ಪಿಸುವದಕ್ಕಾಗಿ, ತಾವು ವೇದ ಧರ್ಮದ ಪುರಸ್ಕರ್ತರಾದುದರಿಂದ ವೇದಕಾಲದ ರಾಜ್ಯಪದ್ಧತಿಯನ್ನು ನೆಲೆಗೊಳಿಸುವದಕ್ಕಾಗಿ ತಾವು ಸ್ಥಾಪಿಸಿದ ರಾಜ್ಯವು ಮಾನವರ ರಾಜ್ಯವಲ್ಲೆಂದೂ, ದೇವರಾಜ್ಯವೆಂದೂ, ಸಾರಿ ದರು. ಈ ಪಟ್ಟವನ್ನಾಳುವವನು, ಶ್ರೀ. ವಿರುಪಾಕ್ಷನ ಪ್ರತಿನಿಧಿಯೆಂದು ಹೇಳಿದರು. ಆದ್ದರಿಂದಲೇ ಬುಕ್ಕರಾಯನು, ತಾನು ಧರ್ಮಪಾದಪನೆಂದು ಹೇಳಿಕೊಂಡಿದ್ದಾನೆ. ವಿಜಯನಗರದ ದೇವರಾಯನು ಕೊರಿಸಿದ ಸಂಸ್ಕೃತ ಕನ್ನಡ ತಾಮ್ರಶಾಸನಗಳಲ್ಲಿ ಕೊನೆಗೆ ರಾಜರ ಅಂಕಿತ (ಸಹಿ)ವು ಇರದೆ "ವಿರೂಪಾಕ್ಷ"ವೆಂಬ ದೇವರ ಅಂಕಿತ ವಿರುವದು. ಪಟ್ಟದಮೇಲೆ ಕುಳಿತ ರಾಜನು ತಾನು ರಾಜನಲ್ಲವೆಂದೂ ದೇವರ ಪ್ರತಿ ನಿಧಿಯೆಂದೂ ಜನಸೇವೆಯೇ ತನ್ನ ಕರ್ತವ್ಯವೆಂದೂ ತಿಳಿಯುವ ಪದ್ಧತಿಯು ದ್ವಾಪರ ದಲ್ಲಿ ಮಾಯವಾಗಿ ಕಲಿಯುಗದಲ್ಲಿ ಮತ್ತೆ ವಿಜಯನಗರದಲ್ಲಿ ಪ್ರಾರಂಭವಾಯಿತು.

ಇಂಥ ಉದಾತ್ತ ಧರ್ಮನೀತಿಗಳ ಮೇಲೆ ಕಟ್ಟಲ್ಪಟ್ಟ ವಿಜಯನಗರ ಸಾಮ್ರಾಜ್ಯಕ್ಕೆ ಇದರ ಬುಡದಲ್ಲಿ ನೀತಿಯ ಅಸ್ತಿವಾರವು ಇಲ್ಲವೆಂದು ಪ್ರತಿಪಾದಿಸುವ * ರಿಯಾಸತ ಕಾರರಾದ ಸರದೇಸಾಯಿಯವರಿಗೆ ಏನನ್ನಬೇಕೋ ತಿಳಿಯದು. ಕೇವಲ ತಮ್ಮನ್ನು ಹೊಗಳಿಕೊಳ್ಳುವಲ್ಲಿ ಪರರನ್ನು ನಿಂದಿಸುವದು ಯೋಗ್ಯವಾಗಲಾರದು. ದೇಸಾಯರು ಮಹಾರಾಷ್ಟ್ರಾಭಿಮಾನದ ದೃಷ್ಟಿಯನ್ನು ಬದಿಗಿರಿಸಿ, ಐತಿಹಾಸಿಕ ದೃಷ್ಟಿಯಿಂದ ನೋಡಿದರೆ, ವಿಜಯನಗರದ ರಾಜ್ಯದ ತಳಹದಿಯನ್ನೇ ಛತ್ರಪತಿ ಶ್ರೀ ಶಿವಾಜಿ ಮಹಾರಾಜನು ಅನುಕರಣಮಾಡಿದನೆಂಬುದು ಒಡೆದುಕಾಣುವದು. ಇರಲಿ, ಹೀಗೆ ವಿದ್ಯಾರಣ್ಯರು ಉದಯಿಸದಿದ್ದರೆ ಈ ಹೊಸ ಸಾಂಪ್ರದಾಯದ ಪ್ರಾರಂಭವಾಗಬಹುದಾಗಿತ್ತೇ? ಹಿಂದು ರಾಜ್ಯವು ಬೇರೆಯವರಿಂದ ಸ್ಥಾಪಿತವಾಗಿದ್ದರೂ ಈ ಸಾಂಪ್ರದಾಯವು ಉಂಟಾಗುವದು ಅಸಂಭವವಿತ್ತೆಂದು ನಮ್ಮ ಮತ. ವಿಜಯನಗರದ ಅರಸರು ಎಲ್ಲಿಯವರೆಗೆ ಈ ಸಾಂಪ್ರದಾಯದ ಅನುಯಾಯಿಗಳಾಗಿದ್ದಾರೆ ಅಲ್ಲಿಯವರೆಗೆ ಅದರ ಕೀರ್ತಿದುಂದುಭಿಯು ಜಗತ್ತಿನಲ್ಲಿ ಮೊಳಗಿತು. ಎಂದು ಅವರು ಅದರಿಂದಚ್ಯುತರಾದರೋ ಅಂದೇ ಆ ಸಾಮ್ರಾಜ್ಯವೂ ಮಾಯವಾಯಿತು.

(೫) ಇನ್ನೊಂದು ದೃಷ್ಟಿಯಿಂದ ವಿಚಾರಮಾಡಿ ಈ ಬರಹವನ್ನು ಮುಗಿಸುತ್ತೇವೆ. ಅದ್ವೈತ ಸಿದ್ಧಾಂತ ಸ್ಥಾಪನಾಚಾರ್ಯರಾದ ಶ್ರೀ. ಶಂಕರಾಚಾರ್ಯರು ಆಗಿ ಬಹಳ ದಿನಗಳಾಗಿ ಹೋಗಿದ್ದವು. ಆ ಮೇಲೆ ಅವರಷ್ಟೇ ಯೋಗ್ಯತೆಯುಳ್ಳ ಶ್ರೀ ಮಧ್ವಾಚಾರ್ಯಮೊದಲಾದವರು ಅದ್ವೈತ ಸಿದ್ಧಾಂತವನ್ನು ಖಂಡಿಸಿ, ತಮ್ಮ ಮತ ಪ್ರಚಾರವನ್ನು ಮಾಡಿದ್ದರು. ಇದರಿಂದ ಅದ್ವೈತ ತತ್ವಜ್ಞಾನವು ಮಾಯವಾಗದಿದ್ದರೂ ಕಳೆಗುಂದಿ ಮಲಿನವಾಗಿತ್ತು. ಇವಲ್ಲದೆ ಇದೇ ವೇಳೆಗೆ ವಿಶಿಷ್ಟಾದ್ವೈತದ ಪ್ರಸಾರಕರಾದ ದೇಶಿಕಾಚಾರ್ಯರೂ, ದ್ವೈತಮತ ಪ್ರಸಾರಕರಾದ ಟೀಕಾಚಾರ್ಯರೂ, ತಮ್ಮ ಪ್ರಖರವಾದ ಬುದ್ಧಿಸಾಮರ್ಥ್ಯದಿಂದ ಇದ್ದ ಅದ್ವೈತ ಸಿದ್ಧಾಂತವನ್ನು ಜರ್ಜರ ಮಾಡುವ ವೇಳೆಯಲ್ಲಿ ವಿದ್ಯಾರಣ್ಯರಂಥ ಬುದ್ಧಿಶಾಲಿಗಳು ಉದಯಿಸದಿದ್ದರೆ ಅದ್ವೈತ ಸಿದ್ಧಾಂತ ಗತಿಯು ಏನಾಗುತಿತ್ತೋ ದೇವರೇ ಬಲ್ಲ. ಅದ್ವೈತ ಸಿದ್ಧಾಂತದ ಮೇಲಿನ ಧೂಳನ್ನು ಝಾಡಿಸಿ, ಅದನ್ನು ಹೊಸ ಎರಕದಲ್ಲಿ ಹೊಯ್ದು ಅದರ ತೇಜಸ್ಸನ್ನು ಮತ್ತೆ ಜಗತ್ತಿನಲ್ಲಿ ಕೆಡವಿದ್ದಲ್ಲದೆ ಮಾಲೀನ್ಯವನ್ನು ಹೊಂದಿದ ವೇದೋಪನಿಷತ್ತುಗಳಿಗೆ ಟೀಕೆಗಳನ್ನು ಬರೆದು ಜನಸಾಮಾನ್ಯರಿಗೂ ತಿಳಿಯುವಂತೆ ಮಾಡಿದರು.

---

* ಮುಸಲ್ಮಾನ ರಿಯಾಸತ್ತಿನಲ್ಲಿ ವಿಜಯನಗರ ರಾಜ್ಯಕ್ಕೆ ನೀತಿಯ ಅಸ್ತಿವಾರಕವೆಂದು ಹೇಳಿದ್ದಾರೆ

ಹೀಗೆ ವಿದ್ಯಾರಣ್ಯರ ದಿವ್ಯಚರಿತ್ರೆಯನ್ನು ನಿರೀಕ್ಷಿಸಹತ್ತಿದರೆ ಮಹಾಭಾರತದಲ್ಲಿಯ,

अग्रतश्चतुरो वेदाः पृष्ठतः सशरं धनुः ।
इदं ब्राह्ममिदं क्षात्रं शापादपि शरादपि ॥ १ ॥

ಎಂಬ ಆರ್ಯೋಕ್ತಿಯು ನೆನಪಾಗುತ್ತದೆ. ಈ ಶ್ಲೋಕವೇ ಶ್ರೀ ವಿದ್ಯಾರಣ್ಯರ ವರ್ಣನೆಯನ್ನು ಯಥಾರ್ಥವಾಗಿ ಮಾಡಬಲ್ಲದು.

ಇಂಥ ಮಹಾತ್ಮರ ದಿವ್ಯ ತೇಜಸ್ಸು ನಮ್ಮಲ್ಲಿ ಸಂಚರಿಸಿ ವೇದಧರ್ಮದ ರಕ್ಷಣೆಯನ್ನೂ ದೇವರಾಜ್ಯವನ್ನೂ ಸ್ಥಾಪಿಸಲೆಂದು ಶ್ರೀಮದ್ವಿದ್ಯಾರಣ್ಯರಲ್ಲಿ ಬಿನ್ನವಿಸುವ

ಬಿಂದುನಾಥನ.

**ಜಯ ಭುವನೇಶ್ವರಿ! ಜಯಭುವನೇಶ್ವರಿ!!**

---

## ' ಶ್ರೀವಿಜಯವಿದ್ಯಾರಣ್ಯ. '

ವಿಜಯ ವಿದ್ಯಾರಣ್ಯ ನೀನೆ ಧನ್ಯ ॥

ಮೈಯೆಲ್ಲ ಕಣ್ಣುಳ್ಳ ಮುಂದಾಳು ಬೇಕು ।
ಕುರುಡು ಬಳ್ಳಿಯ ಮೆಳ್ಳ ನಾಯಕರು ಸಾಕು ॥

ಈಸಗುಂಬಳ ಜೊತೆಯು ಬೇಕು ಈಸುವರೆ ।
ಪಾತಾಳಕೊಯ್ಯುವಾ ಕಲ್ಲನರಸುವರೇ? ॥
ಯೋಗಿ ! ನಿನ್ನೊಲು ನೀನು ! ದೊರೆಯುನನ್ಯ ।
ವಿಜಯ ವಿದ್ಯಾರಣ್ಯ ನೀನೆ ಧನ್ಯ ॥

ಬೀಜ ಬಿತ್ತುವರುಂಟು; ಬೆಳೆಸಿಕೊಂಡವರು ।
ಉಂಟು ! ಜನರೇಸು ಆ ಫಲವನುಂಡವರು ? ॥
ರಾಷ್ಟ್ರ ಪ್ರಪಂಚವನು ಗೈದ ಸಂಸಾರಿ ।
ನಮೊ ನಮೋ ನಿನಗೆಂಬೆ ನೂರು ಬಾರಿ ॥

— ದ. ರಾ. ಬೇಂದ್ರೆ.

---

# ಉನ್ಮಾದಯಂತೀ ಜಾತಕ.

( ಬೌದ್ಧ ಜಾತಕಮಾಲೆಯಿಂದ ಚಾಣಿಕರಾಯನು ಕನ್ನಡಿಸಿದುದು. )

" ತೀವ್ರದುಃಖದಲ್ಲಿ ಮುಳುಗಿದರೂ ಸಾಧುಗಳು ತಮ್ಮ ಅಚಲಧೈರ್ಯದ ಬಲದಿಂದ ನೀಚಮಾರ್ಗಕ್ಕೆ ಮುಳ್ಳುಹಚ್ಚುವರು. " ಜನಗಳಾವರೋ ಹೀಗೆಂದು ಹೇಳುತ್ತಲೇ ಬಂದಿರುವರು.

ಒಮ್ಮೆ ಭಗವಾನ್ ಬೋಧಿಸತ್ತ್ವನು ಶಿಬಿಗಳ ರಾಜನಾಗಿದ್ದನು. ಅವನಲ್ಲಿ ಸತ್ಯವೂ ತ್ಯಾಗವೂ ಮನೆಮಾಡಿಕೊಂಡಿದ್ದವು; ವಿಜ್ಞಾನವೂ ವೈರಾಗ್ಯವೂ ' ವತನ ' ಪಡೆದಿದ್ದವು. ಆದುದರಿಂದ ಅವನು ಲೋಕಹಿತಸಾಧನದಲ್ಲಿ ಸದಾ ತೊಡಗಿದ್ದನು. ಮೂರ್ತಿಮಂತ ಧರ್ಮವಿನಯಗಳ ಅವತಾರಿಯಿವನು. ಯಾವಾಗಲೂ ಪ್ರಜೆಗಳ ಕಲ್ಯಾಣವನ್ನೆ ಚಿಂತಿಸುತ್ತಿದ್ದನು.

ದೇಶವಾಸಿಗಳಲಿ ದುಷ್ಟಭಾವ ಬಾರದೆ
ಮಾಸದಂಥ ಹೃದಯದಲ್ಲಿ ಭೇದ ತೋರದೆ
ಉಭಯಲೋಕಸುಖಗಳಲ್ಲಿ ಕೊರತೆಯಾಗದೆ
ಅಭಯರಾಗೆ ಹೊರೆವನವರ ಲಾಗು ವೇಗದೆ
ದಂಡನೀತಿಯೊಪ್ಪುತಿತ್ತು ಧರ್ಮಮೀರದೆ
ಪರಿಜನಕ್ಕೆ ಪರಜನಕ್ಕೆ ಭೇದ ತೋರದೆ
ಪಾಪಮಾರ್ಗವನ್ನು ಮುಚ್ಚಿ ನಾಡ ಮಂದಿಯಾ
ತಾಪ ಹರಿದು ಸ್ವರ್ಗಪಥವ ತೋರ್ವ ತಂದೆಯೈ
ಧರ್ಮನಿಷ್ಠೆಯಿಂದೆ ಲೋಕಹಿತದ ಸಾಧನೆ
ಧರ್ಮನಿಷ್ಠೆಯಲ್ಲೆ ಸತ್ಯ ತತ್ತ್ವಶೋಧನೆ
ಧರ್ಮ ಬಿಟ್ಟರೆಲ್ಲಿಯುಂಟೊ ಹಿತದ ಕಲ್ಪನೆ
ಧರ್ಮವಿಲ್ಲದಿದ್ದರೆಲ್ಲ ಜೊಳ್ಳು ಜಲ್ಪನೆ ॥

ಎಂದರಿತ ರಾಜರಾಜನ ರಾಜಧಾನಿಯಲ್ಲಿ ಒಬ್ಬನ ಮಗಳು ಒಳ್ಳೆ ರೂಪವತಿಯಾಗಿದ್ದಳು. ಅವಳನ್ನು ನೋಡಿದರೆ ರಂಭೆಯೋ ರತಿಯೋ ಎಂದೆನ್ನುವಂತಾಗುತ್ತಿತ್ತು. ಎಲ್ಲರೂ ಅವಳನ್ನು ರೂಪವತಿಯೆಂದು–ರಮಣೀರತ್ನವೆಂದು ಆದರಿಸುತ್ತಿದ್ದರು.

ವೀತರಾಗ ಋಷಿಯು ಬಿಟ್ಟು ಬೇರೆ ಮಂದಿಯ
ಸೋತ ಕಣ್ಣುಗಳಿಗೆ ಮಾರವೀರ ವಂದ್ಯೆಯು
ರೂಪುದೋರೆ ನಯನರಾಶಿ ಚಲನೆಯಿಲ್ಲದೆ
ಪಾಪ ಪಾಶದಲ್ಲಿ ಸಿಲುಕದುಳಿಯಬಲ್ಲದೆ! ॥

ಇಂಥ ಮೋಹಿನಿಯವಳು. ನೋಡಿದವರೆಲ್ಲ ಹೀಗೆ ಉನ್ಮಾದವಶರಾಗುತ್ತಿದ್ದರು. ಆದುದರಿಂದ ಅವಳ ಬಳಗದವರು ಅವಳಿಗೆ ಉನ್ಮಾದಯಂತಿಯೆಂಬ ಹೆಸರಿಟ್ಟು ಕರೆಯುತ್ತಿದ್ದರು. ಒಂದು ದಿನ ಅವಳ ತಂದೆ ರಾಜಸನ್ನಿಧಿಗೆ ಬಂದು ಬಿನ್ನೈಸಿದನು:—

" ಪ್ರಭೋ, ತಮ್ಮ ನಾಡಿನಲ್ಲೊಂದು ಕನ್ಯಾರತ್ನ ಹುಟ್ಟಿದೆ. ತಮ್ಮ ಇಷ್ಟದಂತೆ ಸ್ವೀಕರಿಸಬೇಕು; ಇಲ್ಲವೆ ತ್ಯಜಿಸಬೇಕು. "

ರಾಜನು ಸ್ತ್ರೀಲಕ್ಷಣವೇತ್ತರಾದ ಬ್ರಾಹ್ಮಣರನ್ನು ಕರೆಯಿಸಿ:—"ಆ ಕನ್ಯೆ ಸ್ವೀಕರಿಸುವುದಕ್ಕೆ ಯೋಗ್ಯಳೇ ಹೇಗೆ! ನೋಡಿಕೊಂಡು ಬನ್ನಿರಿ"ಂದು ಹೇಳಿದನು. ಆ ಕನ್ಯೆಯ ತಂದೆಯು ಅವರನ್ನು ಕರೆದುಕೊಂಡು ಮನೆಗೆ ಹೋದನು. ಮನೆಗೆ ಹೋಗಿ ಮಗಳಿಗೆ " ನೀನೇ ಉಪಚರಿಸೆ"ಂದು ಹೇಳಿದನು. ಅಪ್ಪನ ಅಪ್ಪಣೆಗೆ ಮಗಳು ಒಪ್ಪಿದಳು. ಅವಳನ್ನು ನೋಡಿದ ಹಾರುವರ ಹರಣ ಹಾರಿತು.

ನೋಡು ನೋಡುತಿರಲು ಮೈಯ ಪರವೆ ಹಾರಿತು
ಕೂಡು ಕೂಡುತಿರಲು ಬುದ್ಧಿ ಮೇರೆ ಮೀರಿತು
ಪಿಳುಕುದಪ್ಪಿ ಕಣ್ಣುಗೊಂಬೆ ಕಲ್ಲುಗೊಂಡವು
ಪುಳಕವೆದ್ದು ಗರುವಿಕೆಗಳು ಹುಲ್ಲು ಕೊಂಡವು ॥

ಉಣ್ಣುವುದು ತಿನ್ನುವುದು ಒತ್ತಟ್ಟಿಗಿರಲಿ; ನೆಟ್ಟಗೆ ಕುಳಿತು ಮಾತಾಡುವುದಕ್ಕಾಗಲಿಲ್ಲ. ಆಗ ಅವಳ ತಂದೆಯು ಅವಳನ್ನು ಸರಿಸಿ ತಾನೇ ಉಪಚರಿಸಿ ಅವರನ್ನು ಕಳುಹಿಸಿಕೊಟ್ಟನು.

ಹಾರುವರು ಹಾದಿಯಲ್ಲಿ ಹಂಚಿಕೆ ಹಾಕಹತ್ತಿದರು:—" ಈ ಹೆಣ್ಣೋ ಸೂತ್ರದ ಗೊಂಬೆಯಂತಿದ್ದಾಳೆ. ನೋಡುತ್ತಿದ್ದ ಹಾಗೆ ಮೈಮೇಲಿನ ಪರವೆ ತಪ್ಪುತ್ತ ಬರುತ್ತದೆ. ಹೀಗಿದ್ದುದರಿಂದ ನಮ್ಮ ರಾಜನಿಗೆ ಇವಳು ಹೆಂಡತಿಯಾಗುವದಂತೂ ಒತ್ತಟ್ಟಿಗಿರಲಿ; ಕಣ್ಣಿಗೆ ಬೀಳುವುದೂ ಕೂಡ ಬೇಡ. ಇವಳನ್ನು ನೋಡಿದರೆ ರಾಜನು ಉನ್ಮತ್ತನಾಗಿ ರಾಜಕಾರ್ಯವನ್ನೂ ಧರ್ಮಕಾರ್ಯವನ್ನೂ ಅಲಕ್ಷಿಸುವುದರಲ್ಲಿ ಸಂದೇಹವಿಲ್ಲ. ರಾಜನಲ್ಲಿ ಹೀಗೆ ವಿಪರೀತವಾದರೆ ಪ್ರಜೆಗಳ ಕಲ್ಯಾಣಕ್ಕೆ ಸೊನ್ನೆ ಬಿದ್ದು ಹೋಗುವದು.

" ಇವಳನೊಮ್ಮೆ ನೋಡೆ ಮುನಿಯ ಧ್ಯಾನ ಕೆಡುವದು
ಯುವಕನಾದ ಅರಸಗೆಂತು ಧೃತಿಯು ತಡೆವುದು ? "

ಎಂದು ಭಾವಿಸುತ್ತ ಅವರು ರಾಜನಲ್ಲಿಗೆ ಬಂದು:—" ಮಹಾರಾಜರೇ ! ಕನ್ಯೆಯನ್ನು ನೋಡಿಕೊಂಡು ಬಂದೆವು. ಅವಳೇನೋ ರೂಪವತಿಯು ಹೌದು. ಆದರೆ ಅವಲಕ್ಷಣಗಳಿಗೆ ಕೊರತೆಯಿಲ್ಲ. ಅವಳನ್ನು ಮದುವೆಯಾದರೆ ಅಪಮೃತ್ಯುವನ್ನು ಮನೆ

ಯಲ್ಲಿ ಹೊಗಿಸಿಕೊಂಡಂತಾಗುವದು. ಆದುದರಿಂದ ಮಹಾರಾಜರು ಅವಳನ್ನು ಸ್ವೀಕರಿಸುವದು ಒತ್ತಟ್ಟಿಗಿರಲಿ; ಒಂದು ಸಾರೆ ಕಣ್ಣೆತ್ತಿ ನೋಡುವುದು ಕೂಡ ಕಲ್ಯಾಣಕರವಲ್ಲ." ಎಂದು ಬಿನ್ನವಿಸಿದರು.

ನೋಡಗೂಡಿದಿರುಳು ಚಂದ್ರನನ್ನು ಮರೆಯಿಸಿ
ಗಾಢಿಯುಳ್ಳ ಮುಗಿಲ ಶೋಭೆಯನ್ನೆ ಅಡಗಿಸಿ
ರೂಢಿಯಲ್ಲಿ ತೋರುವಂತೆ ರಮಣಿ ರತ್ನವ
ಗಾಢನಿಂದೆಯಿಂದೆ ಮುಚ್ಚಿ ಗೆಯ್ವರಿತ್ನವ ॥
ಶ್ರೇಷ್ಠವಂಶದಿಂದೆ ಲೋಕಹಿತದ ಸಾಧನೆ
ಭ್ರಷ್ಟನಾರಿಯಿಂದೆ ಉಭಯಹಿತಕೆ ಬಾಧನೆ ॥

ರಾಯನು ಇದನ್ನೆಲ್ಲ ಕೇಳಿ, ಈ ಅಲಕ್ಷಣವತಿಯಾದ ನಾರಿಯು ನಮ್ಮ ಕುಲಕ್ಕೆ ಅನುರೂಪಳಲ್ಲವೆಂದು ಭಾವಿಸಿ, ಅವಳ ಕಡೆಯ ಮನಸನ್ನು ತೆಗೆದು ಹಾಕಿದನು.

ಇತ್ತ, ರಾಜನು ತನ್ನ ಮಗಳನ್ನು ವರಿಸಲಾರನೆಂದು ತಿಳಿದ ಮೇಲೆ, ಆ ಗೃಹಸ್ಥನು ಅದೇ ರಾಜನ ಒಬ್ಬ ಅಮಾತ್ಯನಾದ ಅಭಿಪಾರಗನೆಂಬವನಿಗೆ ಮಗಳನ್ನು ಕೊಟ್ಟನು.

ಆ ಬಳಿಕೊಮ್ಮೆ, ಬೆಳದಿಂಗಳ ಕಾಲ ಬರಲು ತನ್ನ ರಾಜಧಾನಿಯ ಬೆಳದಿಂಗಳ ಸಿರಿಯನ್ನು ನೋಡ ಬಯಸಿ, ಅಂದವಾದೊಂದು ರಥವನ್ನೇರಿ ರಾಜನು ನಗರ ಸಂಚಾರಕ್ಕೆ ಹೊರಟನು. ರಾಜಬೀದಿಯೆಲ್ಲ ಎಳೆನೀರ ತಳಿಹೊಡೆದಿದೆ, ಹಾದಿಯಲ್ಲಿ ಹೂವಿನ ಹಾಸಿಗೆಯಿಂದ ಬೆಳದಿಂಗಳಿಗಿಂತ ಬಿಳುವಾಗಿದೆ. ಬದಿಯ ಅಂಗಡಿಗಳು ತಳಿರು ತೋರಣಗಳಿಂದ ನಳನಳಿಸುತ್ತಿವೆ. ಊದಿನ ಹೊಗೆಯಲ್ಲಿ ಹೂವಿನ ಹುಡಿಯಲ್ಲಿ ತಂಪುಗಾಳಿ ಕಂಪಾಗಿ ಹೋಗಿದೆ. ನೃತ್ಯಗೀತಗಳ ನಲ್ದನಿಯಿಂದ ದಿಕ್ಕು ದಿಮ್ಮಿಕ್ಕಿದೆ. ಪುಷ್ಟದೇಹದ ತುಷ್ಟನಾಗರಿಕರಿಂದ ಬೀದಿ ಬೀಡಿಲ್ಲದೆ ಬಿಗಿದು ಹೋಗಿದೆ. ನೋಡು ನೋಡುತ್ತ, ರಾಜರಥವು ಅಮಾತ್ಯನ ಮನೆಯ ಹತ್ತರ ಬಂತು.

ಅವಲಕ್ಷಣವನ್ನೆತ್ತಿ ರಾಜನು ತನ್ನನ್ನು ತ್ಯಜಿಸಿದುದಕ್ಕೆ ಉನ್ಮಾದಯಂತಿಯ ಮನಸ್ಸಿಗೆ ತುಂಬಾ ನೋವಾಗಿತ್ತು. ಆದುದರಿಂದ ಅವಳು ರಾಜನನ್ನು ತನ್ನ ಬೆಡಗಿನ ಬಲೆಯಲ್ಲಿ ಕೆಡವಿ ಎಂದಿಗೆ ಮರುಳುಗೊಳಿಸಿ ಸಿಟ್ಟು ತೀರಿಸಿಕೊಂಡೇನೆಂದು, ಬಹುದಿನಗಳಿಂದ ಕಾಯುತ್ತುಕೊಂಡು ಕುಳಿತಿದ್ದಳು. ಕಾಲವೀಗ ಕೂಡಿ ಬಂತು. ಮೋಡದ ತುದಿಯಲ್ಲಿ ಮಿಂಚು ಮಿಣುಕಿದ ಹಾಗೆ, ಮೇಲ್ಮಾಡದಲ್ಲಿ ಒಯ್ಯಾರದಿಂದೊಮ್ಮೆ ಒನಪು ಮಾಡಿದಳು. ಮತ್ತೆ ಮನದಲ್ಲಿ ಮತ್ಸರಿಸುತ್ತ ಮೈಯ್ಯುಬ್ಬಿ ಮಲೆಯುತ್ತಿದ್ದಳು:— "ನೋಡುವೆ ನೋಡುವೆ! ಅವಲಕ್ಷಣಗಳ ಇದಿರಿಗೆ ತನ್ನ ಧೃತಿ—ಮತಿ—ಸ್ಮೃತಿಗಳನ್ನು ಉಳಿಸಿಕೊಂಡು ಹೋಗಲಿ, ನೋಡುವೆ! "

ಇಷ್ಟರೊತ್ತಿಗೆ ರಾಜನು ಸಹಜವಾಗಿ ಮಂದಿರದ ಮೇಲುಗಡೆ ನೋಡಿನೋಡು ವುದೇ ತಡ, ಉನ್ಮಾದಯಂತಿಯು ತುಂಬಾ ಕಣ್ಣಿಗೆ ಬಿದ್ದಳು.

ಕಾಮಿನಿಯರ ರೂಪನೋಡಿ ನೋಟ ನಿಳಿಸುವ,
ಸೋಮಶಾಂತಚಿತ್ತನಾಗಿ ಕೀರ್ತಿಗಳಿಸುವ,
ಧರ್ಮವನ್ನು ಜೀವದಂತೆ ಕಾಯಲೆಳಿಸುವ,
ಕರ್ಮದಲ್ಲಿ ನಿಯಮದಿಂದ ಮನವ ಬಳಿಸುವ,
ತೇಜದಿಂದ ತಮದ ಸೊಕ್ಕ ಸೀಳಿ ಮೆರೆಯುವ,
ರಾಜನಿಂದು ಮರೆತನಯ್ಯೊ ವೈಯ ಪರವೆಯಾ ॥

ಅಲ್ಲದೆ ಮನದಲ್ಲಿ:–

ನಾರಿಯಲ್ಲ– ಮನೆಯ ಸಿರಿಯೊ? ಚಂದ್ರಕಾಂತಿಯೋ!
ಮಾರಸತಿಯೊ, ದೇವಪುರದ ರೂಪವಂತಿಯೋ! ॥

ಎಂದೆಂದು ಮಿಡುಕುತ್ತಿರುವ ರಾಜನ ಮನೋರಥಕ್ಕೆ ಪ್ರತಿಕೂಲವಾಗಿ ಅಶ್ವ ರಥವು ಆ ಸ್ಥಳವನ್ನು ತಪ್ಪಿಸಿಕೊಂಡು ದೂರಸಾಗಿತು. ನಟ್ಟಮನವನ್ನು ಕಿತ್ತುಕೊಳ್ಳ ಲಾರದ ರಾಜನು ಶೂನ್ಯಚಿತ್ತನಾಗಿ ರಥದಿಂದಿಳಿದು ಅರಮನೆಯೊಳಗೆ ಹೋಗುವಾಗ ಗೌಪ್ಯವಾಗಿ ಸಾರಥಿಯಾದ ಸುನಂದನನ್ನು ಕುರಿತು:—

" ಬೆಳ್ಳಿಯಂಥ ಬೆಳಕ ಮೀರಿ ಹೊಳಪ ಮೆರೆಸಿದಾ
ಒಳ್ಳೆ ಮನೆಯ ಒಡತಿಯಾರು? "ಎಂದು ಎಳಸಿದಾ ॥

ಆಗ ಸಾರಥಿಯೆಂದನು:— " ದೇವಾ! ತಮ್ಮ ಅಮಾತ್ಯರೊಬ್ಬನು ಅಭಿಪಾರಗ ರೆಂಬವರಿರುವರಷ್ಟೆ. ಅವರ ಮನೆಯೇ ಅದು. ಮೇಲಿದ್ದವಳು ಅವನ ಹೆಂಡತಿ, ಕಿರೀಟವತ್ಸನ ಮಗಳು, ಅವಳ ಹೆಸರು ಉನ್ಮಾದಯಂತಿ. " ಪರನಾರಿಯೆಂದರಿತವನೇ ರಾಜನು ವ್ಯಾಕುಲಚಿತ್ತನಾದನು. ನಿಟ್ಟುಸಿರುಬಿಟ್ಟು ತದರ್ಪಿತಮಾನಸನಾದ ರಾಯನು ತನ್ನೊಳಗೆ ತಾನು ಚಿಂತಿಸಹತ್ತಿದನು:—

ಮಧುರಹಾಸ್ಯದಿಂದಲು–ನ್ಮಾದವಾಯಿತು
ಮಧುರನಾಮಕಕ್ಷರಗಳ ಜೋಡಿಯಾಯಿತು
ಮೆರೆವ ಉ–ನ್ಮಾದಯಂತಿಯೆಂದು ಕರೆಯಲು
ಪರವೆ ಹೇಗೆ ಉಳಿಯಿತಯ್ಯೊ ಶಬ್ದರಚಿಸಲು !
ಮರೆಯಲೆಳಸಿದಂತೆ ನೆನವು ಗಟ್ಟಿಗೊಳುತಿದೆ !
ಸರಿಯಲೆಳಸಿದಂತೆ ಮನವು ಸೆರೆಗೆ ಸಿಗುತಿದೆ !
ಹರಿದುಕೊಳ್ಳಲೆಳಸಿದಂತೆ ಹುರಿಯೆ ಬೆಳೆವುದು
ಮುರಿಯಲೆಳಸಿದಂತೆ ಮೊಳಕೆ ಮೇಲೆ ಚಿಗಿವುದು !

ಕಾಮಿನಿಯರ ರೂಪನೋಡಿ ಕ್ಲೇಶಪಡುತಿಹೆ
ಕ್ಷೇಮವುಂಟೆ ? ಕಂಡ ವಿಷಯಕೆಲ್ಲ ಮಿಡುಕುವೆ !
ಮಲಗಿಕೊಂಡು ಮಿಡುಕುತಿರುವೆ ನಿದ್ರೆಬಾರದು
ಕುಳಿತುಕೊಂಡು ಕನಲುತಿರುವೆ ಹೊತ್ತು ಹೋಗದು !
ಜ್ಞಾನವಮಾನಗಳಿಗೆ ಸಂಚಕಾರ ಸಿಕ್ಕಿದೆ
ಹೀನ ಧ್ಯಾನದಿಂದ ಲಜ್ಜೆ ಮಣ್ಣು ಮುಕ್ಕಿದೆ!
ಶುದ್ಧಿಯಿಲ್ಲ ಬುದ್ಧಿಯಿಲ್ಲ ವೃದ್ಧಿಯಿಲ್ಲವು
ವಿದ್ಯೆ, ವಿನಯ, ಸತ್ಯ, ಶೀಲ ಇದ್ದು ಇಲ್ಲವು!
ಓರೆ ನೋಟದಲ್ಲಿ ಸಿಲುಕಿ ಗಾರುಗೊಂಡೆನು
ತೂರು ನಗೆಯುಲುರುಳಿ ಮನವ ಮಾರುಗೊಟ್ಟೆನು !
ಅನ್ಯಕಾರ್ಯಗಳಲಿ ಶ್ರದ್ಧೆ ಸನಿಹ ಸುಳಿಯದು
ಅನ್ಯನಾದೆನಿಂದು ನಾನು ಜನ್ಮವುಳಿಯದು!! ॥

ಹೀಗೆ ಉನ್ಮಾದವಶನಾದರೂ ರಾಜನು ವಿವೇಕದ ಬಲದಿಂದ ಧೈರ್ಯ್ಯವನ್ನು ಮನದ ಹಿಂದಿಂದೆ ಓಡಗೊಡಲಿಲ್ಲ. ಆದರೂ ಮನದ ಕೊರಗು ಧೈರ್ಯ್ಯವನ್ನು ಸೊರಗಿಸದೆ ಬಿಡಲಿಲ್ಲ ! ಸೊಟ್ಟಮೋರೆಯೂ, ನಿಟ್ಟುಸಿರೂ, ಕಟ್ಟೇಕಾಂತವೂ ಕಾಮರಾಯನ ಹೆಗ್ಗಾಳಿಯನ್ನೂದುತ್ತಲೇ ಇದ್ದುವು. ಆದರೂ–

ಧೈರ್ಯದಿಂದೆ ಮನದ ಮಿಡುಕ ಮರೆಸುತಿರುವನು
ಶೌರ್ಯದಿಂದೆ ಕಾಮಶರವ ಮುರಿಯುತಿರುವನು
ಅರಿವಿನಿಂದ ಸತ್ಯಪಥವನನುಸರಿಸುವನು
ಮರೆವು ಮೇರೆ ಮೀರಿದಾಗ ಪರವೆಗೆಡುವನು ॥

ಹಾವಭಾವಗಳನ್ನು ನೋಡಿ ಅಂತರಂಗದ ನೆಲೆಯನ್ನು ಗೊತ್ತುಹಚ್ಚುವುದರಲ್ಲಿ, ಅಭಿಸಾರಗನೆಂಬ ಆ ಅಮಾತ್ಯನು ಅಭಿಸಾರಗನೇ ಸರಿ. ರಾಯನನ್ನು ನೋಡಿದಾಗಲೇ ಅಭಿಸಾರಗನ ಮನಸ್ಸಿಗೆ ಹೊಳೆಯದೆ ಇನ್ನೇನೂ ಉಳಿಯಲಿಲ್ಲ. ಈ ಅವಸ್ಥೆಯುಂಟಾದುದರ ಕಾರಣವು ತಿಳಿದಕೂಡಲೆ, ರಾಯನಿಗೆ ಇನ್ನು ಕಲ್ಯಾಣವಿಲ್ಲವೆಂದರಿತು, ಅಭಿಸಾರಗನು ಈ ಅನಿಷ್ಟವನ್ನು ಹೇಗೆ ನೀಗಿಸಬೇಕೆಂದು ಚಿಂತೆಗೊಳಗಾದನು. ಯಾಕೆಂದರೆ, ಅಭಿಸಾರಗನು ರಾಯನನ್ನು ತುಂಬಾ ಪ್ರೀತಿಸುತ್ತಿದ್ದನು; ಅಲ್ಲದೆ ಕಾಮಾಗ್ನಿಗೆ ಆಹುತಿಯಾದವರ ಪಾಡುಪಟ್ಟುಗಳನ್ನೆಲ್ಲಾ ಅವನು ತಿಳಿದವನಿದ್ದನು. ಆದುದರಿಂದ ಅವನು ಏಕಾಂತದಲ್ಲಿ ಏನಾದರೂ ವಿಚಾರಿಸಬೇಕೆಂದು ಬಯಸಿ, ರಾಜಸನ್ನಿಧಿಯನ್ನು ಸೇರಿ, ಅಪ್ಪಣೆಹೊಂದಿ ಹೇಳತೊಡಗಿದನು:–

ದೇವಪೂಜೆಯಲ್ಲಿ ನಾನು ಮಗ್ನನಾಗಿರೆ
ದೇವದೇವ ! ಯಕ್ಷರಾಜನೊಬ್ಬ ತಾ ಬರೆ
ಕರವ ಮುಗಿದು ಶಿರವ ಬಾಗಿ ನಾನು ನಿಂದಿರೆ
ಉರಿವನೋಟದಿಂದೆ ಅವನ ಸಿಟ್ಟು ಸೂಸಿರೆ
ಬೆಚ್ಚಿ ನಾನು ಬೇಡಿಕೊಂಡೆ " ಆಜ್ಞೆಯೇನು ಭೋ !"
ಹುಚ್ಚು ಹಿಡಿಸುವಂಥ ವಾಣಿ ಬಿಚ್ಚಿ ಬಿತ್ತು ಭೋ !
"ನಿನ್ನ ನಲ್ಲೆಯಲ್ಲಿ ರಾಜ ಚಿತ್ತನಟ್ಟಿದೆ
ಇನ್ನುವರೆಗೆ ಕಣ್ಣುಮುಚ್ಚಿ ಕುಳಿತು ಕೆಡಿಸಿದೆ !"
ಯಕ್ಷನಿಂತು ಪೇಳಿ ಮಟ್ಟಮಾಯವಾದನು
ಯಕ್ಷವಚನದಿಂದೆ ಅಲ್ಲೆ ಬೆಚ್ಚಿಬಿದ್ದೆನು !
ಯಕ್ಷನೆಂದ ಮಾತು ಸತ್ಯ ಸತ್ಯವಾದರೆ
ರಕ್ಷಿಸುವುದು ! ಇದ್ದ ಕತೆಯು ಪೇಳಿ ದೇವರೆ ! ॥

" ಮಹಾರಾಯರೇ ! ದಯವಿಟ್ಟು ಉನ್ಮಾದಯಂತಿಯನ್ನು ಸ್ವೀಕರಿಸಿ ನನಗೆ ಅನು ಗ್ರಹಿಸಬೇಕೆಂ"ದು ಬಿನ್ನವಿಸಿದನು. ಈ ಮಾತು ಕಿವಿಗೆ ಬೀಳುತ್ತಲೇ ರಾಜನ ಮುಖವು ನಾಚಿಕೆಯಿಂದ ಕೆಳಗಾಯಿತು. ಕಾಮವಶನಾಗಿದ್ದರೂ ರಾಜನು ಬಹುದಿನಗಳಿಂದ ಆಚರಿಸಿಕೊಂಡುಬಂದ ಧರ್ಮಬಲದಿಂದ ಎಂದೂ ಧೈರ್ಯಹೀನನಾಗಿರಲಿಲ್ಲ. ಈಗ ಅವನು ಸ್ಪಷ್ಟಾಕ್ಷರಗಳಿಂದ ಈ ಮಾತನ್ನು ತಿರಸ್ಕರಿಸಿ ಹೇಳಿದನು:– "ಛೀ! ಆಗದಾ ಗದು !! ಹಾಗೆಂದಿಗೂ ಆಗಲಾರದು !!! ಯಾಕೆಂದರೆ:—

ದೇವರಾಯನಲ್ಲ ನಾನು–ಪುಣ್ಯ ಸರಿವುದು
ಕಾವರಾರು ಪಾಪ ಬಂದು ಗೋಣ ಮುರಿವುದು
ನಿತ್ಯವಲ್ಲ ದೇಹವದರ ಸಂಗ ಸಲ್ಲದು
ಸತ್ಯಸತ್ಯ ಕಾಮಸೌಖ್ಯ ನಿತ್ಯ ನಿಲ್ಲದು
ಅರಿವುಗೆಟ್ಟು ಹರಿಯಲಾರೆ ಸಾವು ಬಂದರೂ
ಉರಿಸಲಾರೆ ಉಭಯಲೋಕಫಲವ ಸತ್ತರೂ
ಮರಣಬಂದು ಹರಣಹಾರುವಂತೆಯಾದರೂ
ಶರಣರಿಂಥ ಭಂಡಕತೆಯ ಮಾಡಲಾರರು ॥

ಅದಕ್ಕೆ ಅಭಿಸಾರಗನೆಂದುದೇನೆಂದರೆ:—"ದೇವಾ! ಇದರಿಂದ ತಮ್ಮ ಧರ್ಮ ಹಾನಿಯಾಗುವ ಭಯವೆಷ್ಟೂ ಇಲ್ಲ. ಯಾಕೆಂದರೆ: —

ರಾಜನೆಮ್ಮ ದೇವರೆಂದು ಶಾಸ್ತ್ರವಿರುವದು
ರಾಜರಾಜ! ದೇವಗೆನ್ನ ದಾನವಿರುವದು .

ದಾನಕಾರ್ಯಕಿತ್ತ ನೆರವು ಧರ್ಮವಲ್ಲವೇ
ದಾನಕಡ್ಡಬರಲು ಧರ್ಮ ಹಾನಿಯಲ್ಲವೇ ? ॥

ಅಲ್ಲದೆ ತಮ್ಮ ಕೀರ್ತಿಗೆ ಕಲಂಕ ಹತ್ತುವ ಭಯವೂ ಇಲ್ಲ. ಯಾಕೆಂದರೆ:—

ನಮ್ಮ ನಿಮ್ಮ ಬಿಟ್ಟು ಹೊರಗೆ ಸುದ್ದಿ ಹೋಗದು
ಸುಮ್ಮನೇಕೆ ಲೋಕಭಯವು ? ಮರುಗಲಾಗದು ॥

ಅಲ್ಲದೆ ಈ ಕಾರ್ಯದಲ್ಲಿ ತಾವು ನನ್ನನ್ನು ಪೀಡಿಸುವುದೂ ಇಲ್ಲ. ಇಷ್ಟೇ ಅಲ್ಲ, ತಿರುಗಿ ಇದರಿಂದ ನನ್ನ ಕಲ್ಯಾಣವೇ ಆಗುವದು.

"ದಾಸಜನದ ತನುಮನಧನ ಸ್ವಾಮಿಗಿರುವವು
ದಾಸಧನವು ಸ್ವಾಮಿಗೊಪ್ಪೆ ಉಭಯಪುಣ್ಯವು" ॥

ಈ ಮಾತಿಗೆ ರಾಜನೆಂದುದೇನೆಂದರೆ:— "ಛೀ ಛೀ, ಇಂಥ ಪಾಪದ ಮಾತುಗಳನ್ನಾಡಬೇಡ! ಇಂಥ ಪಾಪವಿನ್ನಾವುದು !!!"

ಸಕಲದಾನಗಳಲಿ ತಾನೆ ಧರ್ಮವಾಗದು
ವಿಕಲಮತಿಯೆ ಸ್ನೇಹಮೌಢ್ಯ ಧರ್ಮವಾಗದು

ಇದಲ್ಲದೆ—

ಜೀವಕಾಗಿ ಜೀವಮರೆವ ನರನೆ ಬಂಧುವು
ಜೀವಬಂಧು—ಪತ್ನಿಯೆನ್ನ ಭಗಿನಿ ಸತ್ಯವು ॥

ನನ್ನ ಜೀವಬಂಧುವಾದ ನೀನು ನನ್ನನ್ನು ಇಂಥ ವಿಷಮಸಂಕಟಕ್ಕೆ ಗುರಿಮಾಡುವುದು ನಿನ್ನ ಬಂಧುತ್ವಕ್ಕೆ ಕೊರತೆಯನ್ನು ತರುವುದಾಗಿದೆ. ಅಲ್ಲದೆ ಜನಕ್ಕೆ ಗೊತ್ತಾಗದ ಮಾತ್ರಕ್ಕೆ ಪಾಪವಲ್ಲವೆಂದೆನ್ನಲಿಕ್ಕಾದೀತೇ?

ಗುಪ್ತದಲ್ಲಿ ವಿಷವನೊಮ್ಮೆ ನುಂಗಿ ಕುಳಿತರೆ
ಪ್ರಾಪ್ತವಾಗಲಾರದೇನೊ ಮೃತಿಯು ತೊಂದರೆ
ದಿವ್ಯದೃಷ್ಟಿಯುಳ್ಳ ಋಷಿಗಳಿಲ್ಲವೆಂಬೆಯಾ?
ಭವ್ಯಶಕ್ತಿಯುಳ್ಳ ದೇವ ನೋಡನೆಂಬೆಯಾ? ॥

ಅಲ್ಲದೆ—

ನಿನ್ನ ಮೂಢಬುದ್ಧಿ ಅವಳ ಪಾತಿವ್ರತ್ಯವ
'ಹನ್ಯ' ಗೊಳಿಸಲಾರು ಉಣ್ಣಬೇಕೊ ಪಾಪವ ?

ಇದಕ್ಕೆ ಅಭಿಪಾರಗನು:—

"ಸತಿಸುತರ್ಕಳಿಂದ ಕೂಡಿ ನಿಮ್ಮದಾಸನು
ಪತಿಯು ದೇವನಲ್ಲವೇನು ಸತಿಗೆ ದೇವನು?

ದಾಸದೇಹದಂತೆ ದಾಸಿಮಣಿಯು ತನುವನು
ದಾಸನಿಷ್ಟಪೂರ್ತಿಗಾಗಿ ಗೃಹಿಸಲೇನದು!
ಸರ್ವಸುಖವನಿತ್ತು ದೇವರಾಯನಡಿಯೊಳು
ಸರ್ವಸುಖದ ಸಾರವರ್ಪಿಸುವೆನು ಭುವಿಯೊಳು
ಇಲ್ಲಿ ತನ್ನ ಸುಖದ ವಸ್ತುವನ್ನು ಕೊಡುವುದು
ಅಲ್ಲಿ ಮತ್ತೆ ಸತ್ಯಸುಖವ ನಿತ್ಯ ಪಡೆವುದು ॥

ಆದುದರಿಂದೆನ್ನದೇವಾ! ನನ್ನೀ ನೈವೇದ್ಯಕ್ಕೆ ಅಡ್ಡಬರಬೇಡಿರಿ" ಎಂದು ಹೇಳುತ್ತಲೆ ರಾಜನೆಂದನು:—"ಛೀ ಛೀ ಆಗದಾಗದು! ನೀನೇನು ಹೇಳಿದರೂ ಆ ಮಾತೊಂದು ಆಗಲಾರದು! ಯಾಕೆಂದರೆ—

ಉರಿವ ಕಿಚ್ಚಿನಲ್ಲಿ ಹಾರಿ ಬೇಯಬಲ್ಲೆನು
ಕೊರಿವ ಕತ್ತಿಗಿರಿದು ನಾನು ಸಾಯಬಲ್ಲೆನು
ಧರ್ಮದಿಂದೆ ನಡೆದು ಸತ್ಯಸ್ವರ್ಗಪಡೆವೆನು
ದುರ್ಮದಕ್ಕೆ ಸಿಕ್ಕು ನಾನು ಅಡ್ಡನಡೆಯೆನು ॥

ಅದಕ್ಕೆ ಅಭಿಸಾರಗನು:—"ಜೀಯಾ! ಇನ್ನೊಂದು ಮಾತನ್ನು ಬಿನ್ನವಿಸುವುದಕ್ಕೆ ಮರೆತೆನಾದ್ದರಿಂದ ತಾವು ಹೀಗೆ ತಿರಸ್ಕರಿಸುವಿರೆಂದು ತೋರುತ್ತದೆ. ಹೌದು. ನಾನು ಅವಳ ಮೇಲೆ ಪತ್ನಿಯೆಂಬ ಅಧಿಕಾರವನ್ನು ಇಟ್ಟು ಅರ್ಪಿಸಿದರೆ ತಾವು ಹೇಗೆ ಸ್ವೀಕರಿಸಬಹುದು? ಸರಿಸರಿ ತಾವು ಅನಿಚ್ಛುಕರಾದುದರ ಕಾರಣವು ತಿಳಿಯಿತು. ಇಂದಿನಿಂದ ನಾನು ಅವಳನ್ನು ಸರ್ವಜನಸಮಕ್ಷದಲ್ಲಿ ಪಾತರದವಳನ್ನಾಗಿ ಮಾಡುವೆನು. ಆ ಬಳಿಕ ಅವಳನ್ನು ಅನಾಯಾಸವಾಗಿ ಸ್ವೀಕರಿಸಲಿಕ್ಕೆ ತಮಗೆ ಅಡ್ಡಿಯುಳಿಯದು."

ಅದಕ್ಕೆ ರಾಜನೆಂದನು: "ಹುಚ್ಚಾ, ಹುಚ್ಚಾ !
ದಂಡಿಸುವೆನು ದೋಷವಿರದ ಸತಿಯಬಿಟ್ಟರೆ !
ಭಂಡತನವ ಸಾಕುಮಾಡು ಕ್ಷಮಿಸಿ ಬಿಟ್ಟಿಹೆ
ಸತ್ಯಮಾರ್ಗ ತಪ್ಪಿದವಗೆ ನಷ್ಟ ನಷ್ಟವು
ಸತ್ಯಸತ್ಯ ಉಭಯಲೋಕ ಭ್ರಷ್ಟನಪ್ಪುದು! ॥

ಆದುದರಿಂದ ನಮ್ಮೆಲ್ಲರ ಕಲ್ಯಾಣವನ್ನು ಲಕ್ಷ್ಯಕ್ಕೆ ತಂದುಕೊಂಡು ಅನ್ಯಾಯವಾದ ಮಾರ್ಗವನ್ನು ತಿರಸ್ಕರಿಸಿ ನ್ಯಾಯಮಾರ್ಗವನ್ನು ಹಿಡಿ."

ಅದಕ್ಕೆ ಅಭಿಸಾರಗನಿಂತೆಂದನು:—

ಲೋಕನಿಂದೆ ಪಾಪಭಾರ ಧರ್ಮಹೀನತೆ
ಲೋಕದೊಡೆಯ! ಬರಲಿ ನನಗೆ ಸರ್ವದೀನತೆ!

ನಿನ್ನ ಮನದ ಶಾಂತಿಯೆನಗೆ ಸರ್ವಸೌಖ್ಯವು
ನಿನ್ನ ಮನದ ಚಿಂತೆಯೆನಗೆ ಪರಮದುಃಖವು!
ಲೋಕನಾಥ ನೀನು, ನಿನ್ನ ಸೇವೆ ಧರ್ಮವು
ಯಾಕೆ ಭಲನೆ? ಪುಣ್ಯಹೇತುವೆನ್ನಕರ್ಮವು! ॥

ಇದಕ್ಕೆ ರಾಜನೆಂದನು:—"ಅಭಿಪಾರಗನೆ; ನನ್ನ ಹಿತವನ್ನು ನೀನು ತುಂಬಾ ತಿಳಕೊಳ್ಳದೆ ಹಿತಕ್ಕೆಂದು ಅಹಿತವನ್ನೇ ಸಾಧಿಸುವುದಕ್ಕಿರುವಿ. ನಿನ್ನ ಸರಳಭಕ್ತಿಗೆ ನಾನು ಒಪ್ಪುವೆ. ಆದರೆ ಎಷ್ಟಾದರೂ ಅದು ಶುದ್ಧಸೇವೆಯಲ್ಲ. ನನ್ನ ಸ್ವಾರ್ಥಕ್ಕಾಗಿ ನಿನ್ನ ಸ್ವಾರ್ಥವನ್ನು ಲಯಗೊಳಿಸಲಿರುವಿ. ಸುತ್ತ್ಯ. ಆದರೆ ಎಷ್ಟಾದರೂ ಇದು ಅಕಲ್ಯಾಣಮಾರ್ಗ. ನನ್ನ ಅಶುದ್ಧಸ್ವಾರ್ಥವನ್ನು ಸೇವಿಸಿ ನೀನು ಶುದ್ಧಗತಿಯನ್ನು ಪಡೆಯುವುದು ಹೇಗೆ? ಅಲ್ಲದೆ ನನ್ನ ಐಹಿಕಭೋಗದ ಮುಂದೆ ಪಾರತ್ರಿಕದಂಡನೆಯನ್ನು ಲಕ್ಷಿಸದ ನಿನಗೆ ಸೇವಕನೆಂದಾದರೂ ಹೇಗೆನ್ನಲಿ? ಅಲ್ಲದೆ ಲೋಕಾಪವಾದಕ್ಕಾದರೂ ಬೆಲೆಯಿಲ್ಲದೆಯಿಲ್ಲ—

ಲೋಕನಿಂದಾಸ್ಪದನಿಗಿನ್ನೆಲ್ಲಿ ಧರ್ಮ
ಲೋಕನಿಂದಾಸ್ಪದನಿಗಿನ್ನೆಲ್ಲಿ ಕರ್ಮ
ಲೋಕವೆಂದರೆ ಲೋಕನಾಥನಂಗಾಂಗ
ಲೋಕನಿಂದೆಯಲಿ ಪರಸಾಧನೆಗೆ ಭಂಗ!!

ಆದುದರಿಂದ ನಾನು ನಿನಗೆ ಹೇಳುವುದೇನೆಂದರೆ—

ಧರ್ಮಹೀನನಾದರವಗೆ ಪಾಪ ತಪ್ಪದು
ಧರ್ಮಬಿಟ್ಟು ಸುಖವ ಬೇಡೆ ತಾಪ ತಪ್ಪದು
ಇಲ್ಲಿ ಸಿಗುವ ಸುಖವು ನಿತ್ಯವಲ್ಲ ಕ್ಷಣಿಕವು
ಅಲ್ಲಿಗಾಗಿ ಇಲ್ಲಿ ಕಾಯಬೇಕು ನಿತ್ಯವೂ ॥

ಇದಲ್ಲದೆ ಹೆಚ್ಚಿಗಿನ್ನೇನು ಹೇಳುವೆನು!—

ತನ್ನ ಹಿತಕೆ ಅನ್ಯರನ್ನು ಕಾಡಬಾರದು
ತನ್ನ ಸತಿಗೆ ಅಹಿತವನ್ನು ನೀಡಬಾರದು
ನಾಥನೆಂದು ನಂಬಿದವಳ ದೂಡಬಾರದು
ಪಾತಿವ್ರತ್ಯಧರ್ಮಕಡ್ಡಿಮಾಡಬಾರದು
ಅನ್ಯರನ್ನು ದುಃಖದಲ್ಲಿ ದೂಡಿ, ಸಾಧುವು
ತನ್ನ ಕಷ್ಟ ಕಳೆಯಲಾರನಿದುವೆ ಬೋಧವು
ನನ್ನ ಮನದ ಪೀಡೆಯನ್ನು ನಾನು ಸಹಿಸುವೆ
ನನ್ನ ಜೊತೆಗೆ ನಿಮ್ಮನೆಂತು ದೂಡಿ ಸಹಿಸುವೆ? ॥

ಅಭಿಸಾರಗನಿಂತೆಂದನು:— "ದೇವಾ! ಒಡೆಯನ ಋಣವನ್ನು ತೀರಿಸುವುದರಿಂದ ಒಡೆಯನಿಗೆ ಬರುವ ಪಾಪವೇನು? ಬಂದರೆ ಆ ಪಾಪವೆಲ್ಲಾ ನನಗೆ ಬಂದೀತು. ನಿಮಗೆ ಬರುವ ಕಾರಣವಿಲ್ಲ. ಅಲ್ಲದೆ ಸರ್ವಶಿಬಿಗಳೂ, ಸಾಮಂತರೂ, ದೇಶವಾಸಿಗಳೂ ಏಕಕಂಠದಿಂದ ಹೇಳುತ್ತಿದ್ದಾರೆ— "ನಮ್ಮ ರಾಜನು ಸುಖದಿಂದುಳಿಯಲಿ. ಇದರಲ್ಲಿ ಪಾಪವಿನ್ನೇನೂ ಇಲ್ಲ." ಎಲ್ಲರೂ ಹೀಗೆನ್ನುವಾಗ ಲೋಕಾಪವಾದದ ಅರ್ಥವೇನು?. ದೇವಾ, ದಯವಿಟ್ಟು ಉನ್ಮಾದಯಂತಿಯನ್ನು ಸ್ವೀಕರಿಸಿ ಪ್ರಜಾರಂಜನವೆಂಬ ರಾಜಧರ್ಮವನ್ನು ಪರಿಪಾಲಿಸಿದ ಪುಣ್ಯಗಳಿಸಬೇಕಾಗಿ ಬಿನ್ನವಿಸುವೆ!!! "

ರಾಜನು:— "ಏನು ಹೇಳಲಿ? ನಿನ್ನ ದುರಾಗ್ರಹಕ್ಕೆ ಮೇರೆಯಿಲ್ಲ. ಬರೀ ನನ್ನ ಐಹಿಕ ಭೋಗವಾಸನೆಯೇ ನಿನಗೆ ಪರಮ ಭಕ್ತಿಸ್ಥಾನವಾಗಿ ಬಿಟ್ಟಿದೆ! ಕೇಳು ನೋಡೋಣ; ಸಮಸ್ತ ಪ್ರಜೆಗಳು, ಸಾಮಂತರು ಹಾಗು ನಾನು ಮತ್ತು ನೀನು— ಇಷ್ಟು ಜನರಲ್ಲಿ ಧರ್ಮಜ್ಞರಾದ ಜ್ಞಾನಿಗಳು ಯಾರು?"

ಅಭಿಸಾರಗನು ಕೂಡಲೆ ಸಂಭ್ರಮದಿಂದ ನುಡಿದನು:—

ಶಾಸ್ತ್ರಗಳಲಿ ನಿಮ್ಮ ಸ್ಥಾನ ತೀರ ಶ್ರೇಷ್ಠವು
ಶಾಸ್ತ್ರಿಗಳಿಗೆ ಸೇವ್ಯವೆನಿಸೆ ನಿಮ್ಮ ಜ್ಞಾನವು
ಎಲ್ಲ ಬಲ್ಲ ದಿವ್ಯ—ಭವ್ಯ—ಸೇವ್ಯ—ಸಿದ್ಧರು
ಎಲ್ಲರಲ್ಲಿ ನೀವೆ ಶ್ರೇಷ್ಠ ಪರಮ ಬುದ್ಧರು " ॥

ಕೂಡಲೆ ರಾಜನೆಂದನು:—"ಸಾಕು ಸಾಕು; ಶ್ರೇಷ್ಠಪುರುಷರ ಮಾರ್ಗವೇ ಸತ್ಯಮಾರ್ಗ. ಅಜ್ಞರಾದವರು ಎಷ್ಟು ಜನಗಳು ಏನು ಹೇಳಿದರೂ ಪ್ರಮಾಣವಲ್ಲ. ಆದುದರಿಂದ ನೀವೀಗ ನನಗೆ ಪ್ರತಿ ಹೇಳುವುದಕ್ಕೆ ಅಧಿಕಾರಿಗಳಲ್ಲ. ಇದೋ ಕೇಳು—

" ಲೋಕದ ಹಿತಾಹಿತಗಳೆಲ್ಲ ಕಾಲದಲಿ
ಲೋಕನಾಯಕನ ಬೆಂಬತ್ತಿ ನಡೆವಲ್ಲಿ
ನಾನೆಂತು ಸಾಗಬೇಕೆಂಬುದನು ನೋಡು
ಜ್ಞಾನವಿಲ್ಲದೆ ನಡೆದರೆಲ್ಲರಿಗೆ ಕೇಡು
ಸುಪಥಕುಪಥಗಳ ಸಂಧಾನವಿಲ್ಲದಲೆ
ನೃಪನನನುಸರಿಸುವರು ಮುಂದೆ ನೋಡದಲೆ
ಎತ್ತು ಮುಂಪರಿಯುತಿರೆ ಆವುಗಳ ಮೇಳು
ಸುತ್ತುವರಿದದರೊಡನೆ ಸಾಗುವದು —ಕೇಳು !!!

ಇದಲ್ಲದೆ—

ತನ್ನನಾಳದ ರಾಜ ಪ್ರಜೆಯನಾಳುವನೇ?
ತನ್ನ ಹಿತವರಿಯದವ ಲೋಕಹಿತರತನೇ ?

ತನ್ನ ಜಯಿಸದ ಮೂಢ ಯಾವಕಾಲಕ್ಕೆ
ಇನ್ನೇನು ಒಡ್ಡುವನೊ ಅರಿಯೆ ಲೋಕಕ್ಕೆ!
ಪ್ರಜೆಯ ಹಿತವಲಿ ನನ್ನ ಧರ್ಮ ಬೆಳೆಯುವದು
ಪ್ರಜೆಯ ಹಿತದಲೆ ನನ್ನ ಹಿತವು ಮೊಳೆಯುವದು
ಅವರ ಮುಂದಾಳು ನಾನವರ ನರಪತಿಯು
ಅವರ ಹಾದಿಗೆ ನಾನೆ ದರ್ಶಕನು —ತಿಳಿಯು! ॥

ರಾಜನ ಈ ಅವಸ್ಥೆಯನ್ನು ನೋಡಿ ಅಭಿಪಾರಗನು ವಿಸ್ಮಿತನಾಗಿ ಪಾದಕ್ಕೆರಗಿ ಕೈಮುಗಿದಿಂತೆಂದನು:—

ನಿನ್ನಂಥ ನರಪತಿಯ ಪ್ರಜೆಗಳೇ ಧನ್ಯ!
ತನ್ನ ತಾಗೆದ್ದವನ ಪ್ರಜೆಗಳೇ ಧನ್ಯ!
ಎಲ್ಲಿದ್ದರೇನು ನಿನ್ನಂಥ ರತ್ನಗಳು.
ಅಲ್ಲಿ ವನಮುನಿಗಳಲ್ಲಿಹರೆ ಇಂಥವರು!?
ಮಹಾರಾಜನೆಂದರೆ ನೀನೆ ಮಹಾರಾಜ!
ಮಹಾತ್ಮ್ಯವಿಲ್ಲದವನೆಂಥ ಮಹಾರಾಜ?
ಗುಣಿಯೆಂದು ಗುಣವಿಲ್ಲದವನ ಹೊಗಳಿದರೆ
ಗುಣವೇನು! ಗುಣವುಂಟು ನಿನ್ನ ಹೊಗಳಿದರೆ
ಮಹಾರಾಜನೈ ನೀ ಮಹಾಸಾಗರದೊಲು
ಮಹಾರತ್ನದಾಗರನದಾರು ನಿನ್ನವೊಲು? ॥

ಅಂತೆಯೇ— ತೀವ್ರ ದುಃಖದಲ್ಲಿ ಮುಳುಗಿದರೂ ಸಾಧುಗಳು ತಮ್ಮ ಅಚಲಧೈರ್ಯದ ಬಲದಿಂದ ನೀಚಮಾರ್ಗಕ್ಕೆ ಮುಳ್ಳುಹಚ್ಚುವ ರೆಂಬ ವಚನವು ತ್ರಿಕಾಲಾಬಾಧಿತವಾದುದು. ಆದುರಿಂದಲೇ ಧರ್ಮ ಬಲದ ಧೈರ್ಯಬರುವುದಕ್ಕೆ ಯೋಗಸಾಧನವು ಅತ್ಯಾವಶ್ಯಕವು. ಇತಿ—

“ಹಾದಿಯಿಲ್ಲದೆ ಹರಿವ ಮರುಳುಮನವನು ನಿನ್ನ
ಬುದ್ಧಿ ಬಲದಿಂದಲೇ ಬದ್ಧಗೊಳಿಸು!
ಬೋಧಿವೃಕ್ಷದ ಬುಡಕೆ ಸಿದ್ಧಾರ್ಥನಾದಶ್ರೀ—
ಬುದ್ಧದೇವನೆ ನಿನ್ನ ನಮಿಪೆ ನೆನಿಸು॥”

---

# ಕ್ಷುದ್ರ ವಿ ಚಾ ರ.

ಬರೆದವನು—ಮರಪಂಡಿತ.

ಅನ್ಯರನ್ನು ಕ್ಷುದ್ರರೆಂದು ಭಾವಿಸುವದು ಕ್ಷುದ್ರವಿಚಾರ. ಇದು ಕ್ಷುದ್ರಬುದ್ಧಿಗಳಲ್ಲಿರಬೇಕಾದದ್ದು ನ್ಯಾಯವೇ ಸರಿ. ದೊಡ್ಡವನು ನಿಜವಾಗಿಯೂ ತಾನು ಉಳಿದೆಲ್ಲರಿಗಿಂತ ಕಿರಿಯನೆಂದೇ ಭಾವಿಸುತ್ತಾನೆ. ಅಂತೆಯೆ ಅವನು ಎಲ್ಲರ ಸೇವೆಮಾಡಿ ಜನ್ಮವನ್ನು ಸಾರ್ಥಕಮಾಡಿಕೊಳ್ಳುತ್ತಿರುತ್ತಾನೆ. ಆದರೆ ದೊಡ್ಡವರು! ಎದೆಯುಬ್ಬಿಸಿಕೊಂಡು, ನೆತ್ತಿಯ ಮೇಲೆ ಕಣ್ಣಿಟ್ಟುಕೊಂಡು, ಯಾರನ್ನೂ ಲೆಕ್ಕಿಸದೆ, ಹೆಮ್ಮೆಯಿಂದ ಉರಿಯುತ್ತ ಮೆರೆಯುತ್ತಿರಬೇಕಾದದ್ದು ಸಹಜವಲ್ಲವೆ ? ಗೌರವ—ಲಾಘವಗಳು ಜಾತಿಯಿಂದಲ್ಲ, ದೇಹದಿಂದಲ್ಲ, ಸಂಪತ್ತಿಯಿಂದಲ್ಲ, ವಿದ್ಯೆಯಿಂದಲೂ ಅಲ್ಲ. ಮನದಿಂದಲೇ ಮೇಲ್ಮೆ—ಕೀಳ್ಮೆ. ಶುದ್ಧವೂ ಪವಿತ್ರವೂ ಕರುಣಾಮಯವೂ ಪ್ರೇಮಮಯವೂ ಆದ ಅಂತರಂಗವೆ ಮಹಾತ್ಮರ ಮೂಲಧನವಲ್ಲವೆ ? ಇವಿಲ್ಲದೆ ಇನ್ನಾವುದರಿಂದ ಎಷ್ಟು ಮೆರೆದರೇನು ? ಅದೊಂದು ಸುಡುಗಾಡಸಿದ್ಧನ ಸೋಗು.

ಇಂದು ತಮ್ಮಷ್ಟಕ್ಕೆ ತಾವು ದೊಡ್ಡವರೆಂದು ಉಬ್ಬಿ ಉರುಳಾಡುತ್ತಿರುವವರೇ ಹೆಚ್ಚು. ಇವರ ಕಣ್ಣಿಗೆ ಯಾರೂ ಒಳ್ಳೆಯವರಲ್ಲ; ಯಾರೂ ದೊಡ್ಡವರಲ್ಲ. ಇವರ ಕಣ್ಣಲ್ಲಿ ಸೀತೆ ಹದಿಬದಿಯಲ್ಲ; ಧರ್ಮರಾಯ ಸತ್ಯಸಂಧನಲ್ಲ. ಬಸವ ಭಕ್ತನಲ್ಲ. "ಎಲ್ಲ ದೀಪಗಳ ಬುಡಕ್ಕೆ ಕತ್ತಲೆ"ಯೆಂಬುದು ಇಂಥವರ ಸಿದ್ಧಾಂತ. ಅಂಥಂಥವರ ಗತಿ ಹಾಗಿರುವಾಗ ನಮ್ಮದೆಲ್ಲಿಗೆ ಹತ್ತೀತೆಂಬುದಿವರ ಶಾಂತಿಸೂಕ್ತ. ಇದನ್ನು ಪಠಿಸುತ್ತಿದ್ದರೆ ಇವರಿಗೆ ಯಾವ ವಿಪತ್ತೂ ಇಲ್ಲ. ಎಲ್ಲಾ ಸ್ವಾಯತ್ತವಾಗಿ ಬಿಡುವುದು. ಇವರ ದೋಷೈಕದೃಷ್ಟಿಗೆ ಗುಣದ ಲೇಶವೂ ಕೂಡ ಕಾಣಿಸದು. ತಮ್ಮನ್ನು ಬಿಟ್ಟರೆ ಲೋಕದಲ್ಲಿ ಇವರಿಗೆ ಒಳ್ಳೆಯವರು ಸಿಕ್ಕವುದೇ ಇಲ್ಲ. "ಇಂಥಾ ನೀಚಲೋಕದಲ್ಲಿ ಬಾಳುವೆ ಮಾಡಿಕೊಂಡಿರುವುದು ಬಹಳ ಕಷ್ಟವಪ್ಪಾ! 'ಸಂಸಾರ ಎಂಬುದು ಭೌಕಷ್ಟಾ! ಇದು ಯಾವ ಸೂಳೆಮಗ ಮಾಡಿಟ್ಟಾ!' ಎಲ್ಲೆಲ್ಲೂ ಅಂಥವರೇ! ಇಂಥಾ ಲೆಂಡರನ್ನು ದಾರಿಗೆ ತರುವುದು ಕಷ್ಟವಪ್ಪಾ!" ಎಂದೆನ್ನುತ್ತ ತಾವೆಂಥವರೆಂಬುದನ್ನು ನೋಡಿಕೊಳ್ಳುವುದಕ್ಕೆ ಅವಕಾಶವಿಲ್ಲದೆ ಹೋಗುತ್ತದೆ.

ಏನಕೇನ ಪ್ರಕಾರೇಣ ಪ್ರಸಿದ್ಧಪುರುಷರಾಗುವುದೇ ಇಂಥವರ ಜೀವನಸರ್ವಸ್ವ. ಇಂಥವರನ್ನು ಈಗಿನ ಕಾಲದಲ್ಲಿ ಹಿಂಡುಗಟ್ಟಲೆ ಕಾಣಬಹುದು. ಸಿಕ್ಕಸಿಕ್ಕವರಿಗೆ ಗಂಟುಬಿದ್ದು ಗೋಜುಕಟೆದು ಗೋಳಾಟವೆಬ್ಬಿಸಿ ಸೈಸೈ ಎನ್ನಿಸಿಕೊಳ್ಳುವುದಕ್ಕೆ ಹಾತೊರೆಯುತ್ತಿರುವ ದುರುಳ ವೇದಾಂತಿಗಳು ಪರಿವೆಯಿಲ್ಲದೆ ಬೆಳೆದಿದ್ದಾರೆ. ದೊಡ್ಡವರೆನಿಸಿಕೊಳ್ಳುವುದಕ್ಕಾಗಿ ಹಾಳಾಗುತ್ತಿರುವ ಲುಬ್ಧಪ್ರತಿಷ್ಠಿತರಿಗೆಲ್ಲಿಯೂ ಕೊರತೆಯಿಲ್ಲ. ಇನ್ನೂ ಎಷ್ಟೆಷ್ಟೋ ವಿಧದವರು ಈ ವರ್ಗದಲ್ಲಿ ಸೇರಲಿಕ್ಕೆ ಅಡ್ಡಿಯಿಲ್ಲ.

ಈ ವರ್ಗದಲ್ಲಿ ಇನ್ನೂ ಕೆಲವರಿದ್ದಾರೆ. ಅವರಿಗೆ ಯಾರ ಗೊಡವೆಯೂ ಕಾರಣ ವಿಲ್ಲವಂತೆ. ತಮ್ಮ ಮಟ್ಟಿಗೆ ತಾವು ಇಂದ್ರರಂತೆ; ಚಂದ್ರರಂತೆ! ಮನೆಯ ಕೂಳು ತಿಂದು ಮಂದಿಯ ಗೋಜಿಗೆ ಹೋಗುವದ್ಯಾಕೆಂಬುವು ಇವರ ಗುರುಮಂತ್ರ. ತಮಗೆ ಯಾರ ಅಗತ್ಯವೂ ಇಲ್ಲವಂತೆ, ಅಬ್ಬಬ್ಬಾ! ಸ್ವಯಂ ಸ್ವರಾಜಗಿವರು! ನಿಜವಾಗಿಯೂ ಇವುಗೆ ಇನ್ನೊಬ್ಬರ ಅಗತ್ಯವೇ ಇಲ್ಲ. ತಾವೇ ಮನೆಕಟ್ಟಿಕೊಳ್ಳುವರು, ತಾವೇ ಹೊಲಾ ಸಾಗಿ ಸುವರು, ತಾವೇ ಕೆತ್ತಿಕೊಳ್ಳುವರು, ತಾವೇ ಮೆತ್ತಿಕೊಳ್ಳುವರು, ತಾವೇ ನೇಯ್ದು ಕೊಳ್ಳುವರು, ತಾವೇ ತಿಗರೀ ತಿರುವುವರು, ತಾವೇ ತಿದೀ ಹಾಕುವರು, ತಾವೇ ಬೋಳಿ ಸಿಕೊಳ್ಳುವರು, ತಾವೇ ಕೆರವು ಹೊಲೆಸುಕೊಳ್ಳುವರು, ತಾವೇ ದನಗಳನ್ನೆಳಿಯುವರು, ತಾವೇ ಗಾಣಹೊಡೆಯುವರು, ತಾವೇ ಎಲ್ಲಾ ಮಾಡಿಕೊಳ್ಳುವರು. ಎಲ್ಲಾ ಸ್ವತಂತ್ರ; ಇನ್ನೊಬ್ಬರ ಅಗತ್ಯವೇ ಇಲ್ಲ. ಹೆಂಡತಿಯನ್ನು ಹೇಗೆ ಪಡೆಯುವರೋ ಏನೋ!! ? ಇದರಲ್ಲಿಯೂ ಇವರಿಗೆ ಸ್ವಾತಂತ್ರ್ಯವೇನಾದರೂ ಇದ್ದೀತು! ಅಂತೆಯೇ ಇವರು ಇನ್ನೊ ಬ್ಬರ ಅಗತ್ಯವಿಲ್ಲೆನ್ನುವರು! ಅಸಹಾಯಶೂರರು! ಸ್ವತಃ ಸಮರ್ಥರು! ಇವರಿಗೆ ಯಾತ ರವೇನು ಈಡು?! ಸೃಷ್ಟಿಕರ್ತನ ದ್ವಿತೀಯಾವತಾರಿಗಳಿವರು! ಇಂಥ ಸ್ವಯಂಭೂ ಸಮರ್ಥರಿಗೆ ಯಾರ ಸೂತಕವೇನು? ನಿಜವಾಗಿಯೂ ಚಿರಂಜೀವಿಗಳು!!! ಇದೆಂಥಾ ಕ್ಷುದ್ರವಿಚಾರ ?

## ವಿಭೂತಿವಿಚಾರ.

[೨ನೆಯ ಸಂಚಿಕೆಯಿಂದ ಮುಂದೆ ಸಾಗಿದ್ದು]

ಶುದ್ಧಬೀಜದ ಹೊಟ್ಟೆಯಲ್ಲಿ ರಸವುಳ್ಳ ಸುಂದರವಾದ ಹಣ್ಣುಗಳೇ ಹುಟ್ಟು ವವು. ಬಾಯಿಯಲ್ಲಿ ಅಮೃತದ ಭಾಷೆಯು. ದೇಹವು ದೇವರಕಾರ್ಯಕ್ಕೆ ಅರ್ಪಿತವಾ ದದ್ದು. ಅಂಗವೆಲ್ಲ ನಿರ್ಮಲವಾದದ್ದು. ಮನಸ್ಸು ಗಂಗಾನದಿಯ ನಿರ್ಮಲ ನೀರಿ ನಂತೆ. ಆಹಹಾ ಇಂಥವರನ್ನು ನೋಡಿದರೆ ತಾಪಗಳೆಲ್ಲ ಮಾಯವಾಗಿ ವಿಶ್ರಾಂತಿಯು ಯಾರಿಗೆ ಸಿಗಲಿಕ್ಕಿಲ್ಲ ?

ಮಹಾತ್ಮರು ಇಷ್ಟು ಕಷ್ಟಗಳನ್ನು ಸೋಸುವದೇಕೆ ? ಇಷ್ಟು ಪ್ರಯತ್ನಗಳನ್ನು ಮಾಡುವದೇಕೆ ? ಈ ಜಗತ್ತು ನಾಯಿಯ ಬಾಲದಂತೆ ಡೊಂಕಾಗಿರುವದು. ಎಂದೆಂದೂ ಅದು ಸರಲತೆಯನ್ನು ಹೊಂದದು. ಪರಮಾತ್ಮನೇ ಈ ಸೃಷ್ಟಿಯನ್ನು ಅಪೂರ್ಣವನ್ನಾಗಿ ಮಾಡಿರಲಿಕ್ಕೆ ಮಹಾತ್ಮರು ಬಂದು ಅದನ್ನು ಪೂರ್ಣಮಾಡುವರೇನು ? ಇವೆಲ್ಲ ಪ್ರಶ್ನೆ ಗಳು ಮನುಷ್ಯನ ಬುದ್ಧಿಗೆ ನಿಲುಕದಷ್ಟು ಗಹನವಾಗಿರುವದರಿಂದ ಯಾರೂ ಇವುಗ ಳಿಗೆ ಉತ್ತರವನ್ನು ಕೊಟ್ಟಿಲ್ಲ. ಇನ್ನು ಮುಂದೆ ಕೊಡುವ ಆಶೆಯೂ ಇಲ್ಲ. 'ಸತಾಂ ಕೇನೋದ್ದಿಷ्टं विषममसिधाराव्रतमिदम्' ಇಂಥ ಭಯಂಕರವಾದ ಖಡ್ಗದ ಅಲಗಿನ

ಮೇಲೆ ನಡೆಯುವ ವ್ರತವನ್ನಾಚರಿಸಲಿಕ್ಕೆ ಈ ಸಾಧುಗಳಿಗೆ ಯಾರು ಹೇಳಿದರೆಂದು ಭರ್ತೃಹರಿಯು ಪ್ರಶ್ನೆಯನ್ನು ಕೇಳಿ 'प्रकृतिसिद्धमिदं हि महात्मनाम्' ಇದು ಮಹಾತ್ಮರಿಗೆ ಪ್ರಕೃತಿಸಿದ್ಧವಾಗಿರುವದೆಂದು ಹೇಳಿರುವನು. ಅಂದರಾದರೂ ಏನು! ಏನೂ ಅರ್ಥವಾಗುವದಿಲ್ಲ. ಮಹಾತ್ಮರಿಗೆ ಕೇಳಿದರೆ ಇದರ ಉತ್ತರವು ಚನ್ನಾಗಿ ಸಿಗುವದು. ಅವರು ಅಧ್ಯಾತ್ಮಜೀವನದಲ್ಲಿ ಪೂರ್ಣತೆಯು ಇರುವದು. ಅದರಲ್ಲಿ ನಿರತ್ಯನಿರ್ಮಾಣವಿರುವದು. ಇಂದ್ರಿಯೋಪಭೋಗದ ಮಾರ್ಗವನ್ನು ಬಿಟ್ಟು ಲೋಕ ಕಲ್ಯಾಣದ ಮಾರ್ಗವನ್ನು ಮನುಷ್ಯನು ಹಿಡಿದನೆಂದರೆ ಅವನಿಗೆ ಆಧ್ಯಾತ್ಮಿಕ ಆನಂದದ ಉಗ್ರಾಣವು ಕೈಸೇರುವದು. ಜೇನುಹುಟ್ಟು ಬಾಯಿಗೆ ಸಿಕ್ಕಿರಲು ಈ ಹುಟ್ಟನ್ನು ದೇವರು ಯಾರ ಹಿತಕ್ಕಾಗಿ ಮಾಡಿರುವನೆಂಬ ಮೂರ್ಖತನದ ವಿಚಾರವನ್ನು ಬಿಟ್ಟು ಮನಸಪಣಿಯಾಗಿ ತುಪ್ಪವನ್ನು ಕುಡಿಯುವದೇ ನಮ್ಮ ಕರ್ತವ್ಯವೆಂದು ನಾವು ಬಗೆಯುತ್ತೇವೆ. ಅಮರತ್ವವು ಬೇಕೋ ? ಆನಂದವು ಬೇಕೋ ? ಇಲ್ಲಿ ಬನ್ನಿ. ನಮ್ಮಲ್ಲಿ ಬೇಕಾದಷ್ಟು ಇದೆ. ನಾವು ಸವಿದಿದ್ದೇವೆ. ನೀವೂ ರುಚಿಯನ್ನು ತೆಗೆದುಕೊಳ್ಳಿರಿ. ಸಾವಿರಾರು ಸುಖದ ಮಾರ್ಗಗಳನ್ನು ದೇವರು ಈ ಜಗತ್ತಿನಲ್ಲಿ ನಿರ್ಮಾಣಮಾಡಿದ್ದಾನೆ. ಅವೆಲ್ಲವುಗಳ ಸಂಗಡ ದುಃಖವನ್ನೂ ಇಟ್ಟಿದ್ದಾನೆ. ದುಃಖವಿಲ್ಲದ ಆನಂದವು ಮಾತ್ರ ಅಧ್ಯಾತ್ಮ ಜೀವನದಲ್ಲಿರುತ್ತದೆ. ಲೋಕಕಲ್ಯಾಣದಲ್ಲಿರುತ್ತದೆ. ನಾವು ಅದನ್ನು ಮಾಡಿದರಾಯಿತು. ಆನಂದವನ್ನು ಸವಿದರಾಯಿತು. ನಾವು ಮಾಡುವ ಪ್ರಯತ್ನವು ಸಫಲವಾಗುವದೋ ಇಲ್ಲವೋ ಎಂಬ ಗೊಡವೆ ನಮಗೇಕೆ ? ಸತ್ತ ಮೇಲೆ ನಮ್ಮ ಸ್ಥಿತಿಯು ಏನಾಗುವದೋ ಎಂಬವನ್ನು ನಮ್ಮನ್ನು ಹುಟ್ಟಿಸಿದ ಹರಿಯೇ ಬಲ್ಲ. ನಾವು ನಿಷ್ಕಾಮ ಕರ್ಮದಲ್ಲಿ ಆನಂದವನ್ನು ಪಡೆಯುವರು. ಓಂ ! ಮರ್ತ್ಯಲೋಕದಲ್ಲಿ ಮರಣವನ್ನು ಮೂದಲಿಸಿ ಪರಮಾನಂದವನ್ನು ಪಡೆಯುವದೇ ನಮ್ಮ ಧ್ಯೇಯವು. ನಾವು ನಮ್ಮ ಕೆಲಸವನ್ನು ಮಾಡಿ ಈ ಜನ್ಮದಲ್ಲಿ ಪವಿತ್ರವಾದ ಪರಮಾನಂದವನ್ನು ಸಾಯುವವರೆಗೆ ಪಡೆದರಾಯಿತು. ಇಲ್ಲದ ಚಿಂತೆಮಾಡಿದರೆ ದುಃಖವಿಲ್ಲದೆ ಬೇರೆ ಯಾವ ಫಲವು ದೊರಕಲಾರದು. ಪೂರ್ವಕಾಲದ ಕಾಡುಸ್ಥಿತಿಯಿಂದ ಈಗಿನ ಕಾಲದವರೆಗೆ ಸಾವಿರಾರು ಸಂತರು ಮಾನವಸ್ವರೂಪಿಯಾದ ಪರಮಾತ್ಮನ ಸೇವೆಯನ್ನು ಬಗೆಬಗೆಯಿಂದ ಮಾಡಿ ತಾವು ಮುಕ್ತಿಯನ್ನು ಪಡೆದಿರುವರು. ಆನಂದವನ್ನು ಹೊಂದಿರುವರು. ಮಾನವನ ದೇಹಮನಗಳಲ್ಲಿ ಅವರು ಮಾಡಿದ ಸೇವೆಯ ಕುರುಹುಗಳು ಅಡಗಿಕೊಂಡಿವೆ. ಅವುಗಳನ್ನು ನೋಡಿ ಸಂತೋಷಪಟ್ಟು ಮಾನವನ ಸೇವೆಯನ್ನು ಭಕ್ತಿಯಿಂದಲೂ ಪ್ರೀತಿಯಿಂದಲೂ ಮಾಡುವದೇ ನಮ್ಮ ಕರ್ತವ್ಯವು. ಕೆರೆಯ ನೀರು ಕೆರೆಗೆ ಹಾಕಿ ವರವ ಪಡೆದರಾಯಿತು. ಪರಮಾತ್ಮನು ಕೊಟ್ಟ ಶಕ್ತಿಗಳನ್ನು ನರರೂಪಿಯಾದ ನಾರಾಯಣನಿಗೆ ಅರ್ಪಿಸಿದರೆ ನಾವು ಕೃತಕೃತ್ಯರಾಗುವೆವು.

ब्रह्मार्पणं ब्रह्मविधौ ब्रह्माग्नौ ब्रह्मणाहुतम् ।
ब्रह्मैव तेन गंतव्यं ब्रह्म कर्म समाधिना ॥ (श्री गीता)

## ಸ್ವಾನುಭವದ

# ಒಂದೋಲೆ.

[ಕಿವಿಮಾತು:— ಬರಹಗಾರರೆಂದೆನಿಸಿಕೊಳ್ಳುವುದಕ್ಕಾಗಿ ಬರೆಯುವವರೆಷ್ಟೋ
ಜನ. ಏನಾದರೊಂದು ಬರೆಯುವುದೆಂದರೇನಪ್ಪಾ! ಅದೊಂದು ಲೋಕಶಿಕ್ಷಣದ
ಹೋರೆ. ಲೋಕಕ್ಕೆ ಕಲಿಸಹೊರಡುವವನು ತಾನು ಶಿಕ್ಷಿತನಿರಬೇಕಷ್ಟೆ. ತಾ ಕಲಿ
ಯದೆ ಕಲಿಸಹೊರಡುವ ಹುಚ್ಚರೇ ಹೆಚ್ಚು. ಇಂಥ ಮರುಳರ ಬರಹದಿಂದ ಲೋಕ
ಕ್ಕೆನ್ನೆಷ್ಟು ಪ್ರಯೋಜನವೋ ದೇವರೇ ಬಲ್ಲ. ಮನಬಂದಂತೆ ಬರೆದದ್ದು ಮರುಳಾಟ.
ಮನಗಂಡು ಬರೆದದ್ದು ಮೆಚ್ಚುಮಾಟ. ಜಗದಲ್ಲಿ ಮನಗಂಡವರೇ ಮೆಚ್ಚು ಮಾಟ
ಮಾಡಿ ಲೋಕವನ್ನು ಕುಣಿಸಿದರು. ನಮಗೀಗ ಇಂಥ ಮನಗಂಡ ಮಾತುಹೇಳು
ವವರು ಬೇಕು. ಕೇನೋಪನಿಷತ್ತು ಇದನ್ನೇ ಸಾರುತ್ತಿದೆ. (ಖಂಡ ೪. ಶ್ರುತಿ ೬)

ಬಂಗಾಲದಲ್ಲಿ ಇಂಥ ಮನಗಂಡವರೊಬ್ಬರು ಮೊನ್ನೆ ಮೊನ್ನೆ ಆಗಿಹೋದರು.
ಅವರ ಹೆಸರು ಕೈಲಾಸವಾಸಿ ರಾಮೇಂದ್ರಸುಂದರ ತ್ರಿವೇದಿ. ಇವರು ಸೋಸಿಸೋಸಿ
ವೇದಾಧ್ಯಯನ ಮಾಡಿದವರು. ೨೫ ವರುಷಗಳವರೆಗೆ ಬಂಗಾಲದ ಸಾಹಿತ್ಯಪರಿಷ
ತ್ತಿಗೆ ಅಧ್ಯಕ್ಷರಾಗಿದ್ದರು. ಕವೀಂದ್ರರವೀಂದ್ರ ಮುಂತಾದವರು ಇವರನ್ನು ಅತ್ಯಂತ
ಪೂಜ್ಯಭಾವದಿಂದ ಕಾಣುತ್ತಿದ್ದರು. ರಾಮೇಂದ್ರ ಮಹಾಶಯರು ವೇದವ್ಯಾಖ್ಯೆಗಳಾದ
ಬ್ರಾಹ್ಮಣಾದಿ ಪ್ರಾಚೀನ ಮಹಾಗ್ರಂಥಗಳನ್ನು ಸಾಮಾನ್ಯರಿಗಾಗಿ ದೇಶೀಯ ಭಾಷೆಗೆ
ಪರಿವರ್ತಿಸಿದರು. ಅಲ್ಲದೆ ಧರ್ಮವಿಷಯದಲ್ಲಿ ಸ್ವಾನುಭವದ ಗ್ರಂಥಗಳನ್ನೂ ಬರೆದಿ
ರುವರು. ಇವರ ಗ್ರಂಥಾದಿಗಳನ್ನೋದಿ ತುಂಬಾ ನಂಬಿ, ತನ್ನ ಜೀವದ ಸಂಕಟಗಳ
ನ್ನೆಲ್ಲ ತೋಡಿಕೊಂಡೊಬ್ಬ ಅಪರಿಚಿತ ಯುವಕನು ಹಾದಿ ತೋರಿಸಿರೆಂದು ಪತ್ರಬರೆ
ದಾಗ, ರಾಮೇಂದ್ರರು ಅವನಿಗೊಂದೋಲೆ ಬರೆದು ತನ್ನ ಹೊಟ್ಟೆಯ ಮಾತುಗಳ
ನ್ನೆಲ್ಲ ಹೇಳಿರುವರು. ಆ ಓಲೆಯನ್ನೆ ಇಲ್ಲಿ ಕನ್ನಡಿಸಿರುವೆನು.]

ಜೆನೋ, ಕಾಂತಿ.

ತಾ|| ೧-೭-೧೯೧೬

ಪರಮ ಶ್ರದ್ಧಾಸ್ಪದರಿಗೆ—

ತಮ್ಮ ಪತ್ರವನ್ನೋದಿ ಆನಂದವೂ ಆಯಿತು. ವಿಷಾದವೂ ಆಯಿತು. ಎಂಥೆಂಥ
ಬಿಗಿಯಾದ ಪ್ರಶ್ನೆಗಳೂ ಕೂಡ ತಮ್ಮ ಚಿತ್ತಕ್ಕೆ ಬಂದಿವೆ! ಆನಂದಕರ! ಆದರೆ ತಮ್ಮ
ಪತ್ರದಲ್ಲಿ ಕಾಣುವ ತುಂಬ ನಿರಾಶೆ ಮಾತ್ರ ನನ್ನನ್ನು ವಿಷಾದಪಡಿಸದೆ ಇರಲಿಲ್ಲ.

ತಾವು ಎತ್ತಿದ ಪ್ರಶ್ನೆಗಳಿಗೆಲ್ಲ ಉತ್ತರ ಕೊಡಲಿಕ್ಕೆ ನನಗೆ ಸಾಧ್ಯವಿಲ್ಲ. ಮೃತ್ಯು
ವಿನಿದಿರಿಗೆ ಮನುಷ್ಯನು ಅನಾದಿಕಾಲದಿಂದಲೂ ಭೀತನೇ. ಮರಣವನ್ನು ಮೀರಿ ಅಮರ

ಮೇಲೆ ನಡೆಯುವ ವೃತವನ್ನಾಚರಿಸಲಿಕ್ಕೆ ಈ ಸಾಧುಗಳಿಗೆ ಯಾರು ಹೇಳಿದರೆಂದು ಭರ್ತೃಹರಿಯು ಪ್ರಶ್ನೆಯನ್ನು ಕೇಳಿ 'प्रकृतिसिद्धमिदं हि महात्मनाम्' ಇದು ಮಹಾತ್ಮರಿಗೆ ಪ್ರಕೃತಿಸಿದ್ಧವಾಗಿರುವದೆಂದು ಹೇಳಿರುವನು. ಅಂದರಾದರೂ ಏನು! ಏನೂ ಅರ್ಥವಾಗುವದಿಲ್ಲ. ಮಹಾತ್ಮರಿಗೆ ಕೇಳಿದರೆ ಇದರ ಉತ್ತರವು ಚನ್ನಾಗಿ ಸಿಗುವದು. ಅವರು ಅಧ್ಯಾತ್ಮಜೀವನದಲ್ಲಿ ಪೂರ್ಣತೆಯು ಇರುವದು. ಅದರಲ್ಲಿ ನಿರತ್ಯನಿರ್ಮಾಣವಿರುವದು. ಇಂದ್ರಿಯೋಪಭೋಗದ ಮಾರ್ಗವನ್ನು ಬಿಟ್ಟು ಲೋಕ ಕಲ್ಯಾಣದ ಮಾರ್ಗವನ್ನು ಮನುಷ್ಯನು ಹಿಡದನೆಂದರೆ ಅವನಿಗೆ ಆಧ್ಯಾತ್ಮಿಕ ಆನಂದದ ಉಗ್ರಾಣವು ಕೈಸೇರುವದು. ಜೇನುಹುಟ್ಟು ಬಾಯಿಗೆ ಸಿಕ್ಕಿದಲು ಈ ಹುಟ್ಟನ್ನು ದೇವರು ಯಾರ ಹಿತಕ್ಕಾಗಿ ಮಾಡಿರುವನೆಂಬ ಮೂರ್ಖತನದ ವಿಚಾರವನ್ನು ಬಿಟ್ಟು ಮನಸದಣಿಯಾಗಿ ತುಪ್ಪವನ್ನು ಕುಡಿಯುವದೇ ನಮ್ಮ ಕರ್ತವ್ಯವೆಂದು ನಾವು ಬಗೆಯುತ್ತೇವೆ. ಅಮರತ್ವವು ಬೇಕೋ ? ಆನಂದವು ಬೇಕೋ ? ಇಲ್ಲಿ ಬರ್ರಿ. ನಮ್ಮಲ್ಲಿ ಬೇಕಾದಷ್ಟು ಇದೆ. ನಾವು ಸವಿದಿದ್ದೇವೆ. ನೀವೂ ರುಚಿಯನ್ನು ತೆಗೆದುಕೊಳ್ಳಿರಿ. ಸಾವಿರಾರು ಸುಖದ ಮಾರ್ಗಗಳನ್ನು ದೇವರು ಈ ಜಗತ್ತಿನಲ್ಲಿ ನಿರ್ಮಾಣಮಾಡಿದ್ದಾನೆ. ಅವೆಲ್ಲವುಗಳ ಸಂಗಡ ದುಃಖವನ್ನೂ ಇಟ್ಟಿದ್ದಾನೆ. ದುಃಖವಿಲ್ಲದ ಆನಂದವು ಮಾತ್ರ ಅಧ್ಯಾತ್ಮ ಜೀವನದಲ್ಲಿರುತ್ತದೆ. ಲೋಕಕಲ್ಯಾಣದಲ್ಲಿರುತ್ತದೆ. ನಾವು ಅದನ್ನು ಮಾಡಿದರಾಯಿತು. ಆನಂದವನ್ನು ಸವಿದರಾಯಿತು. ನಾವು ಮಾಡುವ ಪ್ರಯತ್ನವು ಸಫಲವಾಗುವದೋ ಇಲ್ಲವೋ ಎಂಬ ಗೊಡವೆ ನಮಗೇಕೆ ? ಸತ್ತ ಮೇಲೆ ನಮ್ಮ ಸ್ಥಿತಿಯು ಏನಾಗುವದೋ ಎಂಬವನ್ನು ನಮ್ಮನ್ನು ಹುಟ್ಟಿಸಿದ ಹರಿಯೇ ಬಲ್ಲ. ನಾವು ನಿಷ್ಕಾಮ ಕರ್ಮದಲ್ಲಿ ಆನಂದವನ್ನು ಪಡೆಯುವರು. ಓಂ ! ಮರ್ತ್ಯಲೋಕದಲ್ಲಿ ಮರಣವನ್ನು ಮೂದಲಿಸಿ ಪರಮಾನಂದವನ್ನು ಪಡೆಯುವದೇ ನಮ್ಮ ಧ್ಯೇಯವು. ನಾವು ನಮ್ಮ ಕೆಲಸವನ್ನು ಮಾಡಿ ಈ ಜನ್ಮದಲ್ಲಿ ಪವಿತ್ರವಾದ ಪರಮಾನಂದವನ್ನು ಸಾಯುವವರೆಗೆ ಪಡೆದರಾಯಿತು. ಇಲ್ಲದ ಚಿಂತೆಮಾಡಿದರೆ ದುಃಖವಿಲ್ಲದೆ ಬೇರೆ ಯಾವ ಫಲವು ದೊರಕಲಾರದು. ಪೂರ್ವಕಾಲದ ಕಾಡುಸ್ಥಿತಿಯಿಂದ ಈಗಿನ ಕಾಲದವರೆಗೆ ಸಾವಿರಾರು ಸಂತರು ಮಾನವರೂಪಿಯಾದ ಪರಮಾತ್ಮನ ಸೇವೆಯನ್ನು ಬಗೆಬಗೆಯಿಂದ ಮಾಡಿ ತಾವು ಮುಕ್ತಿಯನ್ನು ಪಡೆದಿರುವರು. ಆನಂದವನ್ನು ಹೊಂದಿರುವರು. ಮಾನವನ ದೇಹಮನಗಳಲ್ಲಿ ಅವರು ಮಾಡಿದ ಸೇವೆಯ ಕುರುಹುಗಳು ಅಡಗಿಕೊಂಡಿವೆ. ಅವುಗಳನ್ನು ನೋಡಿ ಸಂತೋಷಪಟ್ಟು ಮಾನವನ ಸೇವೆಯನ್ನು ಭಕ್ತಿಯಿಂದಲೂ ಪ್ರೀತಿಯಿಂದಲೂ ಮಾಡುವದೇ ನಮ್ಮ ಕರ್ತವ್ಯವು. ಕೆರೆಯ ನೀರು ಕೆರೆಗೆ ಹಾಕಿ ವರವ ಪಡೆದರಾಯಿತು. ಪರಮಾತ್ಮನು ಕೊಟ್ಟ ಶಕ್ತಿಗಳನ್ನು ನರರೂಪಿಯಾದ ನಾರಾಯಣನಿಗೆ ಅರ್ಪಿಸಿದರೆ ನಾವು ಕೃತಕೃತ್ಯರಾಗುವೆವು.

ब्रह्मार्पणं ब्रह्मविधौ ब्रह्माग्नौ ब्रह्मणाहुतम् ।
ब्रह्मैव तेन गंतव्यं ब्रह्म कर्म समाधिना ॥ (श्री गीता)

# ಸ್ವಾನುಭವದ
# ಒಂದೋಲೆ.

[ಕಿವಿಮಾತು:— ಬರಹಗಾರರೆಂದೆನಿಸಿಕೊಳ್ಳುವುದಕ್ಕಾಗಿ ಬರೆಯುವವರೆಷ್ಟೋ ಜನ. ಏನಾದರೊಂದು ಬರೆಯುವುದೆಂದರೇನಪ್ಪಾ! ಅದೊಂದು ಲೋಕಶಿಕ್ಷಣದ ಹೋರೆ. ಲೋಕಕ್ಕೆ ಕಲಿಸಹೊರಡುವವನು ತಾನು ಶಿಕ್ಷಿತನಿರಬೇಕಷ್ಟೆ. ತಾ ಕಲಿಯದೆ ಕಲಿಸಹೊರಡುವ ಹುಚ್ಚರೇ ಹೆಚ್ಚು. ಇಂಥ ಮರುಳರ ಬರಹದಿಂದ ಲೋಕಕ್ಕಿನ್ನೆಷ್ಟು ಪ್ರಯೋಜನವೋ ದೇವರೇ ಬಲ್ಲ. ಮನಬಂದಂತೆ ಬರೆದದ್ದು ಮರುಳಾಟ. ಮನಗಂಡು ಬರೆದದ್ದು ಮೆಚ್ಚುಮಾಟ. ಜಗದಲ್ಲಿ ಮನಗಂಡವರೇ ಮೆಚ್ಚುಮಾಟ ಮಾಡಿ ಲೋಕವನ್ನು ಕುಣಿಸಿದರು. ನಮಗೀಗ ಇಂಥ ಮನಗಂಡ ಮಾತುಹೇಳುವವರು ಬೇಕು. ಕೇನೋಪನಿಷತ್ತು ಇದನ್ನೇ ಸಾರುತ್ತಿದೆ. (ಖಂಡ ೪. ಶ್ರುತಿ ೬)

ಬಂಗಾಲದಲ್ಲಿ ಇಂಥ ಮನಗಂಡವರೊಬ್ಬರು ಮೊನ್ನೆ ಮೊನ್ನೆ ಆಗಿಹೋದರು. ಅವರ ಹೆಸರು ಕೈಲಾಸವಾಸಿ ರಾಮೇಂದ್ರಸುಂದರ ತ್ರಿವೇದಿ. ಇವರು ಸೋಸಿಸೋಸಿ ವೇದಾಧ್ಯಯನ ಮಾಡಿದವರು. ೨೫ ವರುಷಗಳವರೆಗೆ ಬಂಗಾಲದ ಸಾಹಿತ್ಯಪರಿಷತ್ತಿಗೆ ಅಧ್ಯಕ್ಷರಾಗಿದ್ದರು. ಕವೀಂದ್ರರವೀಂದ್ರ ಮುಂತಾದವರು ಇವರನ್ನು ಅತ್ಯಂತ ಪೂಜ್ಯಭಾವದಿಂದ ಕಾಣುತ್ತಿದ್ದರು. ರಾಮೇಂದ್ರ ಮಹಾಶಯರು ವೇದವ್ಯಾಖ್ಯೆಗಳಾದ ಬ್ರಾಹ್ಮಣಾದಿ ಪ್ರಾಚೀನ ಮಹಾಗ್ರಂಥಗಳನ್ನು ಸಾಮಾನ್ಯರಿಗಾಗಿ ದೇಶೀಯ ಭಾಷೆಗೆ ಪರಿವರ್ತಿಸಿದರು. ಅಲ್ಲದೆ ಧರ್ಮವಿಷಯದಲ್ಲಿ ಸ್ವಾನುಭವದ ಗ್ರಂಥಗಳನ್ನೂ ಬರೆದಿರುವರು. ಇವರ ಗ್ರಂಥಾದಿಗಳನ್ನೋದಿ ತುಂಬಾ ನಂಬಿ, ತನ್ನ ಜೀವದ ಸಂಕಟಗಳನ್ನೆಲ್ಲ ತೋಡಿಕೊಂಡೊಬ್ಬ ಅಪರಿಚಿತ ಯುವಕನು ಹಾದಿ ತೋರಿಸಿರೆಂದು ಪತ್ರಬರೆದಾಗ, ರಾಮೇಂದ್ರರು ಅವನಿಗೊಂದೋಲೆ ಬರೆದು ತಮ್ಮ ಹೊಟ್ಟೆಯ ಮಾತುಗಳನ್ನೆಲ್ಲ ಹೇಳಿರುವರು. ಆ ಓಲೆಯನ್ನೆ ಇಲ್ಲಿ ಕನ್ನಡಿಸಿರುವೆನು.]

ಜೆನೋ, ಕಾಂಬಿ.

ತಾ॥ ೧-೭-೧೯೧೬

ಪರಮ ಶ್ರದ್ಧಾಸ್ಪದರಿಗೆ—

ತಮ್ಮ ಪತ್ರವನ್ನೋದಿ ಆನಂದವೂ ಆಯಿತು. ವಿಷಾದವೂ ಆಯಿತು. ಎಂಥೆಂಥ ಬಿಗಿಯಾದ ಪ್ರಶ್ನೆಗಳೂ ಕೂಡ ತಮ್ಮ ಚಿತ್ತಕ್ಕೆ ಬಂದಿವೆ! ಆನಂದಕರ! ಆದರೆ ತಮ್ಮ ಪತ್ರದಲ್ಲಿ ಕಾಣುವ ತುಂಬ ನಿರಾಶೆ ಮಾತ್ರ ನನ್ನನ್ನು ವಿಷಾದಪಡಿಸದೆ ಇರಲಿಲ್ಲ.

ತಾವು ಎತ್ತಿದ ಪ್ರಶ್ನೆಗಳಿಗೆಲ್ಲ ಉತ್ತರ ಕೊಡಲಿಕ್ಕೆ ನನಗೆ ಸಾಧ್ಯವಿಲ್ಲ. ಮೃತ್ಯುವಿನಿದಿರಿಗೆ ಮನುಷ್ಯನು ಅನಾದಿಕಾಲದಿಂದಲೂ ಭೀತನೇ. ಮರಣವನ್ನು ಮೀರಿ ಅಮರ

ನಾಗುವುದಕ್ಕಾಗಿ ಮನುಷ್ಯನು ಇತಿಹಾಸದ ಆರಂಭದ ಕಾಲದಿಂದಲೂ ಹೆಣಗುತ್ತಿದ್ದಾನೆ. ಯಾವ ಪ್ರಯತ್ನದಲ್ಲಿ ಮಾನವಕೋಟಿಯು ಮುಂದಾಳುಗಳ ಮೋರೆಯೊಣಗಿಹೋಯಿತೋ ಸರ್ವದೇಶದ ಸುಬುದ್ಧಿಗಳ ಕೈಕಟ್ಟಿ ಹೋಯಿತೋ ಅಂಥ ಹಿರಿಯೊಗಟುಗಳನ್ನು ಬಿಡಿಸಿ ಒಡೆದು ಹೇಳುವುದಕ್ಕೆ ನನ್ನಂಥ ಹುಟ್ಟಹುಳುವಿಗೆ ಶಕ್ಯವೆ ? ನನ್ನ ಬಳಿಯಲ್ಲಿ ತಾವು ಇಂಥ ಹೊಟ್ಟೆಯ ಮಾತನ್ನೆತ್ತಿರುವುದು, ನನ್ನ ಮೇಲೆ ತಮಗಿರುವ ಅತಿಶಯಶ್ರದ್ಧೆಯ ಫಲವೆ.

ನನ್ನನ್ನು ನೀವು ಎಂದೂ ನೋಡಿರುವ ಸಂಭವವಿಲ್ಲ. ದೂರದಲ್ಲಿದ್ದುಕೊಂಡು ಕಾಗದ ಪತ್ರಗಳ ಪ್ರಖ್ಯಾತಿಯಿಂದಲೇ ನೀವು ನನ್ನನ್ನು ಪ್ರೀತಿಸುತ್ತಿದ್ದೀರಿ. ಹತ್ತರ ಬಂದು ನೋಡಿದರೆ ನಾನೂ ಕೂಡ ಸಾಧಾರಣ ಸಾಮಾನ್ಯ ಮಾನವರಂತೆ ತೀರ ದುರ್ಬಲನೂ ಕ್ಷೀಣಪ್ರಾಣದ ಜೀವಿಯೂ ಅಲ್ಲದೆ ಯಾವ ಅಸಾಧಾರಣತೆಯಿಲ್ಲದವನೂ ಇರುವೆನೆಂಬುವು ಗೊತ್ತಾಗುವದು. ಬದುಕುವುದರ ಗುರಿಯೇನೆಂಬು ತಿಳಿಯದೆ ಅಸಮಾಧಾನದಿಂದ ಸಂಶಯಸಾಗರದಲ್ಲಿ ತಾವು ಹೇಗೆ ಮುಳುಮುಳುಗಿ ಏಳುತ್ತಿರುವಿರೋ, ನನ್ನ ಗತಿಯೂ ಕೂಡ ತೀರ ಹಾಗೇ ಇದೆ. ಸಾವಿನ ಗುಟ್ಟೇನೆಂಬ ಒಗಟಿನ ಮುಂದೆ ಜೀವಿಗಳ ಜೀವವು ಕಾತರಿಸುತ್ತಲೇ ಇದೆ. ಯಾವ ಉತ್ತರ ಪಡೆಯುವುದಕ್ಕೂ ಉಪಾಯಗಾಣದಿರುವೆನು.

ನಿಮ್ಮ ಪ್ರಶ್ನೆಗಳನ್ನು ನಾನೆಂದೂ ಆಲೋಚಿಸಿಯೇ ಇಲ್ಲವೆಂತಲ್ಲ. ಎಲ್ಲರಿಗೂ (ಒಂದಿಲ್ಲೊಂದು ದಿನ) ಈ ಯೋಚನೆ ಬಂದೇ ತೀರುವದು. ಹಾಗೆಯೆ ನನಗೂ ಬಂದಿತು. ಇಷ್ಟೇ ಅಲ್ಲ; ಬಹುಜನರಿಗಿಂತ ಬಹಳ ಚೆನ್ನಾಗಿ ಆಲೋಚಿಸಿರುವೆ. (ಅಷ್ಟೊಂದು ಕಾಲ ನಡೆದ ಯೋಚನೆಯ ಸಾರಾಂಶವನ್ನು) ಇಂಥ ಪುಟ್ಟ ಪತ್ರವೊಂದರಲ್ಲಿ ಹೇಗೆ ಬರೆಯಬಲ್ಲೆನು!

ನಾನು ಅರಿತಿರುವಷ್ಟರಲ್ಲಿ— ಜೀವಭಾವವಿರುವಷ್ಟು ದಿನವೂ ಜೀವಿಗೆ ಮರಣಭಯದಿಂದ ಬಿಡುಗಡೆಯಾಗುವಂತಿಲ್ಲ. ಅದುವರೆಗೆ ಧಾರ್ಮಿಕತೆಯೊಂದೇ ಶ್ರೇಷ್ಠವಾದ ಉಪಾಯವು. ಈ ಧಾರ್ಮಿಕತೆಯೆಂಬುದರ ಲಕ್ಷಣಗಳೆರಡು.

ಇವುಗಳಲ್ಲೊಂದು:— ಇದ್ದದ್ದಿರಲೆಂಬ ಸಮರ್ಪಣಭಾವ. ಅವನ ಪಾದಸನ್ನಿಧಿಯಲ್ಲಿ ಸಂಪೂರ್ಣವಾಗಿ ಆತ್ಮಸಮರ್ಪಣ ಮಾಡಿ ತುಂಬಾ ನಿಶ್ಚಿಂತೆಯಿಂದಿರುವುದು. ಇದು ರಾಮಪ್ರಸಾದರಂಥ ಭಗವದ್ಭಕ್ತರ ಹಾದಿ. ನಾವು ಶ್ರೀಪಾದವನ್ನು ನಂಬಿಕೊಂಡು ಗಟ್ಟಿಯಾಗಿ ಅಂಟಿಕೊಂಡಿರುವಾಗ ಆ ಮಗ—ಯಮ ಏನುಮಾಡಬಲ್ಲನು! ಯಾವ ಯುಕ್ತಿತರ್ಕಸಂಶಯಗಳಿಂದಲೂ ಈ ಗೊತ್ತಿಗೆ ಬಂದು ಮುಟ್ಟುವಹಾಗಿಲ್ಲ. ಯುಕ್ತಿ ತರ್ಕಗಳನ್ನು ತುಂಬಾ ನಿರಾಕರಿಸಬೇಕು. ಯಾವನಿಗಿದು ಶಕ್ಯವೋ ಅವನಿಗೇ ಸಮರ್ಪಣಮಾಡುವುದಕ್ಕಾಗಬಲ್ಲದು.

ಇನ್ನೊಂದು ಲಕ್ಷಣವೆಂದರೆ ದೈನ್ಯಭಾವ. ನಾನು ಪಾಪಿ, ಶಾಪಿ, ದೀನ, ನನ್ನಿಂದೇ ನಾದೀತು! ಕರುಣವಿಟ್ಟು ಅವನೇ ಎಳೆದುಕೊಳ್ಳಬೇಕು ! ಅವನು ದಂಡೆಗೆ ಮುಟ್ಟಿಸಿ ಉದ್ಧರಿಸಿದರೆ ಮಾತ್ರವೇ ನನ್ನ ರಕ್ಷಣೆ. ಇದರಿಂದೊಂದು ನೈರಾಶ್ಯ ಬರುವುದುಂಟು. ಅದೇ ಈ ಭಾವದ ಉತ್ಕಟ ಅವಸ್ಥೆ.

(ಬಂಗಾಲದ) ವೈಷ್ಣವದಾಸರೂ, ಕ್ರೈಸ್ತ ಸಾಧುಗಳೂ ಈ ನೈರಾಶ್ಯದ ಹುಡು ಲಿನೊಳಗಿಂದಲೇ ಹಾಯ್ದು ಹೋದವರು. ಕೆಲಕೆಲವರೇನೋ ತುಂಬ ನಾಸ್ತಿಕತೆಯಿಂದ (=Acquiescence ) ಶಾಂತರಾದರು!

ದೃಷ್ಟಾಂತಸ್ವರೂಪವಾಗಿದ್ದವರಲ್ಲಿ ಕ್ರೈಸ್ತ ಸಾಧುವಾದ ಜಾನ್‌ಬನಿಯನ್ನ ನೊಬ್ಬ; ನಮ್ಮವರಲ್ಲಿ ತುಂಬ ಉದಾಹರಣೆಯಾದವನು (ಬಂಗಾಳದ ಧರ್ಮಾಚಾರ್ಯ ನಾದ ) ಚೈತನ್ಯದೇವನೊಬ್ಬ. ಈ ಚೈತನ್ಯದೇವನಿಗೆ ಮರಣಭಯವಿದ್ದಿತೆಂದರೆ ತೀರ ಅನುಚಿತ. ಅವನಲ್ಲಿದ್ದದ್ದು ಯಮಯಾತನೆಯಲ್ಲ, ವಿರಹಯಾತನೆ. ತನ್ನ ಪ್ರಾಣಸ್ವ ರೂಪನ ಯೋಗವಿಲ್ಲದೆ ವಿರಹದಿಂದ ಗೋಳಿಟ್ಟನು. ಕೊನೆಯ ಗಳಿಗೆಯ ವರೆಗೂ ಶಾಂತಿಯಿರಲಿಲ್ಲ. ಅವನನ್ನು ಅವತಾರಿಯಾದ ದೇವರೆಂದೆನ್ನುವುದಾದರೆ— ಮಾನವ ಕೋಟಿಗೊಂದು ದೃಷ್ಟಾಂತವನ್ನು ತೋರಿಸಿಕೊಡುವುದಕ್ಕೆ ಹೀಗೆ ನಟನೆ ಮಾಡಿದ ನೆಂದು ಹೇಳಬಹುದು. ಏನೇ ಇದ್ದರೂ ಇರಲಿ. ಸಾಧನ ಪಥದಲ್ಲಿ ಸಾಗಿದ ಸಾಧಕ ಶಿರೋಮಣಿಯು ಈ ವಿರಹವ್ಯಥೆಯನ್ನು ತುಸುವಾದರೂ ಭೋಗಿಸಲೇಬೇಕಾಗುವದು.

ಇದು ಸಾಧಕಜೀವಿಗಳಿಗೆ ತಪ್ಪದ ವಿಧಿಲಿಪಿ. ಅವರು ಮರಣವನ್ನರಿಯರು; ವಿರಹವನ್ನು ಬಲ್ಲರು. ಅಮರತ್ವದಲ್ಲಿ ಇವರಿಗೆ ಹುರುಳಿಲ್ಲ; ಇವರಿಗೆ ಬೇಕಾದ್ದು ಮಿಲನ, ಯೋಗ. ಇದಕ್ಕಾಗಿ ಇವರು ಕಾತರಿಸುವರು.

ಎದುವರೆಗೆ ಮನದಲ್ಲಿ ಜೀವಭಾವವಿರುವದೋ ಅದುವರೆಗೆ ಮರಣಭಯ ದಿಂದೇಳುವ ಸಂಶಯಯಾತನೆಯು ಇದ್ದೇ ಇರುವಸು. ಎದುವರೆಗೆ ತನ್ನ ಬ್ರಹ್ಮ ಸ್ವರೂಪದ ಸ್ವಾನುಭವವಾಗದೊ ಅದುವರೆಗೆ ಮರಣಭಯವು ತಪ್ಪಲೇ ಆರದೆಂದು ನನ್ನ ದೃಢವಾದ ವಿಶ್ವಾಸ. ನಾನೇ ಬ್ರಹ್ಮ, ನನ್ನ ಬಿಟ್ಟು ಇನ್ನಾವ ಬ್ರಹ್ಮನೂ ಇಲ್ಲ, ನಾನೇ ಜಗತ್ಕರ್ತನು; ಜಗನ್ನಿಯಾಮಕನು, ಈ ಹುಟ್ಟು ಸಾವಿನ ಬಾಳ್ವೆಯೆಲ್ಲಾ ನನ್ನ ಆಟ. ಈ ಸ್ವಾನುಭವವಾಗುವ ವರೆಗೆ ವಿರಹಭಾವವು ಅಳಿಯುವ ಸಂಭವವೇ ಇಲ್ಲ. ಆದರೆ ಇದೂ ಕೂಡ ಬಾಯ್ಮಾತಿನಿಂದಲ್ಲ; ಹಂಚಿಕೆಯಿಂದಲ್ಲ. ತುಂಬಾ ಗಟ್ಟಿಯಾಗಿ ಎನಿಸಬೇಕು. ಎಷ್ಟು ಕಷ್ಟಬಟ್ಟರೂ ತರ್ಕದಿಂದ ಈ ಎನಿಸಿಕೆ ಬಾರದು.

ನನ್ನ ಲೇಖನಗಳಲ್ಲಿ " ಜಿಜ್ಞಾಸೆ " ಮತ್ತು " ಕರ್ಮಕಥೆ "ಗಳ ಕೊನೆಯಲ್ಲಿ ದನ್ನು ತಿಳಿಸಿ ಕೊಡುವುದಕ್ಕೆ ಒಂದಿಷ್ಟು ಯತ್ನಿಸಿರುವೆ. ಆದರೆ ಯಾವುದನ್ನು ತಿಳಿಸಿ

ಹೇಳುವುದರಲ್ಲಿ ಸ್ವಯಂ ಶಂಕರಾಚಾರ್ಯರು ಕೃತಾರ್ಥರಾಗಲಿಲ್ಲವೋ ಅಂಥ ವಿಷಯ ದಲ್ಲಿ ನನ್ನಂಥ ಹುಳದಿಂದೇನಾಗಬೇಕು ? !

ಏನೇ ಇರಲಿ. ನಿಮ್ಮ ಮನಸ್ಸಿನ ಅವಸ್ಥೆಯನ್ನು ನೋಡಿ ಒಂದೆರಡು ಗ್ರಂಥ ಗಳನ್ನೋದುವುದಕ್ಕೆ ಬಿನ್ನೈಸುವೆ. ಬಂಗಾಲಿಯಲ್ಲಿ ಕೈ. ವಾ. ಕ್ಷೇತ್ರಮೋಹನರಾ ಯರು ಬರೆದ "ಅಭಯಕಥಾ" ಎಂಬ ಪುಸ್ತಕವನ್ನು ಓದಬೇಕು. ಇಂಗ್ಲಿಷಿನಲ್ಲಿ ಉಯಿಲ್ಯಂ ಜೇಮ್ಸ್ ಬರೆದ "ಧರ್ಮಾನುಭವದ ತಾರತಮ್ಯ" ( Varieties of religious experience ) ಎಂಬ ಉಪನ್ಯಾಸಗಳನ್ನೋದಬೇಕು. ನಾನು ಧಾರ್ಮಿಕತೆಯ ಎರಡು ಮೈಗಳನ್ನು ಕುರಿತು ಹೇಳಿದ ದೃಷ್ಟಾಂತಗಳನ್ನು ಈ ಪುಸ್ತಕ ದಲ್ಲಿ ನೋಡಬಹುದು. ಈ ವಿಷಯದಲ್ಲಿ ಆಲೋಚನೆಗೆ ಎಷ್ಟೂ ನೆಲೆಹತ್ತದು.

ನಾನಾದರೋ ನನಗೊಪ್ಪುವದೊಂದು ಸಿದ್ಧಾಂತವನ್ನು ಮನದಲ್ಲಿಯೇ ಗೊತ್ತು ಪಡಿಸಿಕೊಂಡು ಅದನ್ನೆ ಆಶ್ರಯಿಸಿ ತುಸುಮಟ್ಟಿಗೆ ಶಾಂತಿಯಲ್ಲೇನೋ ಇದ್ದೇನೆ ಆದರೆ ಈ ಪುಟ್ಟಪತ್ರದಲ್ಲಿ ಹೇಗೆ ತಮಗೆ ತಿಳಿಸಿ ಕೊಡಬಲ್ಲೆನು? ಅದು ನನ್ನ ಇಡಿಯಾ ಯುಷ್ಯದ ಸಾಧನೆಯ ಫಲವು. ಈಗ ಅದನ್ನೇ ಗಟ್ಟಿಯಾಗಿ ಅಂಟಿಕೊಂಡು ಇದ್ದೇನೆ ಜೀವನಸಮಸ್ಯೆ (ಬಾಳುವೆಯೊಗಟು) ನನ್ನ ಮಟ್ಟಿಗೊಂದು ಗೊತ್ತಿಗೆ ಬಂದಿದೆ. ತಮ್ಮನ್ನು ಹೇಗೆ ಆ ಗೊತ್ತಿಗೆ ಹಚ್ಚೇನು !

ನಾನು ಕೆಲ ವರುಷಗಳಿಂದ ಮೆಮಳಿನ ದೌರ್ಬಲ್ಯದ ಮೂಲಕ, ಬೇಕಾದಾಗ ಪತ್ರಬರೆಯುವುದಕ್ಕಾಗದವನಾಗಿರುವೆ. ಅವರಲ್ಲಿ ನನ್ನ ಕೈಬರಹವೂ ಅಷ್ಟೊಂದು ನಿಚ್ಚಳವಲ್ಲ. ಇದಕ್ಕಾಗಿ ನನ್ನನ್ನು ಕ್ಷಮಿಸಬೇಕು.

ಊಹೆಗೆ ನಿಲುಕದ ಇಂಥ ದುರೂಹವಿಷಯದಲ್ಲಿ ಯೋಚನೆಗಂತೂ ಅಸಂಭ ವವೇ. ನನ್ನ ಮೈಮನಗಳು ಕಸುವುಗೆಟ್ಟದ್ದರಿಂದ ಈ ವಿಷಯದಲ್ಲೀಗ ತುಂಬಾ ಪರಾಙ್ಮುಖನಾಗಿರುವೆನು. ಈಗೆರಡು ವರುಷಗಳಿಂದ "ಭಾರತವರ್ಷ" ಮಾಸಿಕದಲ್ಲಿ ಬರುತ್ತಿರುವ ನನ್ನ ಪ್ರಬಂಧಗಳ ಕೊನೆಯ ಭಾಗದಲ್ಲಿ ಈ ವಿಷಯವನ್ನು ತುಸು ಆಲೋಚಿಸಬೇಕೆಂದೇನೋ ಇಚ್ಛೆಯಿದೆ.

ತಾವು ನನ್ನನ್ನು ಆದರಿಸುತ್ತಿರುವದಕ್ಕಾಗಿ ನನ್ನದೊಂದು ನಮಸ್ಕಾರವನ್ನು ತೆಗೆದುಕೊಳ್ಳಿರಿ.

—ಶ್ರೀ ರಾಮೇಂದ್ರ ಸುಂದರ ತ್ರಿವೇದಿ.

ಟೀಪು:— ಸಬುಜಪತ್ರವೆಂಬ ಬಂಗಾಲೀ ಮಾಸಿಕದಲ್ಲಿ ಈ ಪತ್ರವು ಪ್ರಸಿದ್ಧವಾ ಗಿದೆ. ಕನ್ನಡಿಸಿದವ—ಚೆನ್ನಮಲ್ಲ.

# ಕೋಗಿಲೆಗೆ

( ಒಂದು ಲಾವಣಿ )

ಕೋಗಿಲೆ ! ಕೋಗಿಲೆ ! ಎಂದು ಬಂದೆ ನೀಂ? ಹೇಳೆ ಹೇಳೆ ಗೆಳತಿ !
ನಿನ್ನ ನೋಡಿ ಸುಖವೆಷ್ಟು ಹೇಳಲಾ !—ಹೇಳಲಾರೆ ಅಳತಿ ॥೧॥

ಎಲ್ಲಿ ನೀನು ಹೋಗಿದ್ದೆ ಇಷ್ಟುದಿನ ? ಹೇಳವ್ವಾ ಹೇಳೇ
ಗಂಡನ ಮನೆಗೋ ? ಮಾವನಮನೆಗೋ ? ಹೇಳಲ್ಲೇ ಹೇಳೇ ॥೨॥

ಹೇಳುವದಿಲ್ಲೇ ? ಹೇಳದೆ ಇದ್ದರೆ—ನನ್ನ ಕೊರಳ ಆಣೆ !
ನಿನ್ನಂತಹ ಮಿದು ಮಾಟಗಾರ್ತಿಯನು ಮೂಜಗದೊಳು ಕಾಣೆ ॥೩॥

ಏನು ದಿಮಾಖವು ! ಏನು ಡೌಲು ಇದು ! ಜಂಭವಿನ್ನು ಸಾಕು;
ಒಗೆದಕ್ಷತೆಯನು, ಆರತಿ ಬೆಳಗುವೆ—ಹೇಳು ಏನು ಬೇಕು ? ॥೪॥

ಎಷ್ಟೇ ಅಷ್ಟೇ ಪಾಲಾ ಬಿಟ್ಟ್ಯಾ ? ಒಡನುಡಿಯೇ ಸಾಕು
ಧೂಪ ಹಾಕಿ ನಾ ಮಾಡಲೇನು—ಆ—ನಮಸ್ಕಾರ ನಾಕು ॥೫॥

('ಕೂಹೂ ಕೂಹೂ' ನುಡಿದಳು ಕೋಗಿಲೆ) "ಇದರ ಅರ್ಥವೇನು?"
ಕೂಹೂ ಅಂದರೆ ಏನು ತಿಳಿಯಲಾ ? ಬೇಕೊ ಬ್ಯಾಡೊ ನಾನು ॥೬॥

ಹೋದವರುಷ ಸಹ, ಇದೇ ಶಬ್ದವನು ನುಡಿಯುತಿದ್ದಿ ನೀನು
ಈ ವರುಷ ಸಹ, ಇದೇ ಶಬ್ದವೇ ? ಬಿಡೇ ಒಲ್ಲೆ ನಾನು ! ॥೭॥

ಮನೆಗೆ ಬಂದ ಮೇಲ್ ಮೌನವೇತಕೇ ? ಮಾತಾಡೇ ಹುಚ್ಚೀ !
ಗೆಳತಿಯ ಮುಂದೇ ಹೇಳು ಎಲ್ಲವೂ, ಇಡಬ್ಯಾಡೇ ಮುಚ್ಚೀ ॥೮॥

ಸುಖದುಃಖಗಳ ಸಂಗತಿಯನ್ನೂ ಎಲ್ಲಿ ಹೇಳಬೇಕು ?
ಗೆಳತಿಯಲ್ಲದೇ ಯಾರು ಕೇಳುವರು ? ಸಾಕು ಬಿಡೇ ಸಾಕು ! ॥೯॥

( 'ಕೂಹೂ ಕೂಹೂ ಕೂಹೂ' ಎಂದು ನುಡಿದಳಾಗ)
ಸಾಕು ಚ್ಯಾಷ್ಟಿಯಿದು, ಎಷ್ಟು ಹೇಳಲಾ ? ಮಾತಾಡೇ ಬ್ಯಾಗ ॥೧೦॥

ಹೋದ ವರುಷ ಮಳೆಗಾಲದೊಳಗೆ ನಾ ಮಾಳಿಗೆ ಮೇಲ್ ನಿಂತು
ನೋಡುವಷ್ಟರೊಳು ಸುತ್ತುಮುತ್ತಲೂ ಮಳೆಯು ಕವಿದು ಬಂತು ॥೧೧॥

ಮಿಂಚು ಮಿಂಚಿತೂ, ಗುಡುಗುಡು ಅಂದಿತು, ಸುರಿಮಳೆಯೂ ಬಿತ್ತೇ
ನೀರೇ ನೀರಾಯಿತೇ ಸುತ್ತಲೂ ಎತ್ತ ನೋಡಿದತ್ತೇ ! ॥೧೨॥

ಮಳೆ ತೀರುತ್ತಲೆ ಹೊರಗೆ ಬಂದು ನಾ ಗಿಡದ ಕಡೆಗೆ ನೋಡಿ,
ಎಲ್ಲ್ಯೂ ನೀನಿಲ್ಲದ್ದು ಕಂಡೆನೇ ! ಅಯ್ಯಯ್ಯೋ ! ಖೋಡಿ ! ||೧೩||

ಕಾಲಪ್ಪಳಿಸಿದೆ; ಎದೆ ಎದೆ ಬಡಿದೆನು, ಬಿಕ್ಕಿ ಬಿಕ್ಕಿ ಅತ್ತೆ !
ಎಲ್ಲಿ ಹೋದಿ ಅರಗಿಳಿಯೇ ! ಅಂದೆನು, ಮಾಣಿಕವೇ ! ಮುತ್ತೇ ! ||೧೪||

ಧಕ್ಕ ಧಕ್ಕನೆದೆ ಹಾರಹತ್ತಿದೊಡೆ ಅನಿಸಿತು ನೀ ಸತ್ತಿ !
ಗಂಡನ ಮನೆಗೇ ಹೋದೆಯೆಂದು ನೀ—ಹೇಳಿವಳೇ ಅತ್ತಿ ||೧೫||

ಸುಮ್ಮನಾದೆ ನಾ, ಕಣ್ಣು ಒರಸಿದೆನು; ಸಮಾಧಾನವಾಗ್ಯೆ
ಅನಿಸದರೂ ಸಹ ಖೇದವೆನಿಸಿತೇ; ಹೇಳದೆ ಹೋಧೇಗೆ ? ||೧೬||

ಅತ್ತೆಯವರ ಮನೆಘೋಗುವೆನೆಂದೂ ಹೇಳಬಾರದಿತ್ತೇ ?
ಇಷ್ಟೂ ಹೇಳಲು ಗೆಳತಿಯ ಮುಂದೂ ನಾಚಿಕೆ ಒಂದಿತ್ತೆ ? ||೧೭||

('ಕೂಹೂ ಕೂಹೂ ಕೂಹೂ ಕೂಹೂ' ಕೂಗಿತು ಅದು ತಿರುಗಿ)
('ಕೂಹೂ—ಹೂಂ ಹೂಂ' ಪ್ರತಿಧ್ವನಿಯಾಯಿತು ಅದೇ ತಿರುಗಿ ಮುರುಗಿ) ||೧೮||

'ಹೂಂ ಹೂಂ ಹೂಂ ಹೂಂ' ಏನು ಅನ್ನುವದು ಇದು ಅಲ್ಲೇ ಛಂದ !
ಹುಡುಗಾಟಕೆಯಿದು ಸಾಕಾಗಿಲ್ಲೇ ? ನೀನಲ್ಲಾ ಕಂದ ! ||೧೯||

ಮದುವೆಯಾಗಿ ಹೋಗಿದ್ದರು ಸಹ ನೀ ಹೇಳಲಿಲ್ಲ ನನಗೆ
'ಗಂಡನ ಹೆಸರನು ಹೇಳು' ಎಂದು ನಾನೆಂದು ಅಂದೆ ನಿನಿಗೆ ? ||೨೦||

ತೊಟ್ಟಿಲದೊಳಗೇ ಮದುವೆಯಾಯಿತೋ ಇಷ್ಟಾದರು ಹೇಳೇ !
ಹೇಳದಿದ್ದರೂ ಆಷ್ಟೇ ಹೋಯಿತು, ನಾನು ಹೇಳ್ವೆ ಕೇಳೇ ! ||೨೧||

ವಸಂತರಾಜನ ರಾಣಿಯಾದೆ ನೀ—ಎಂದಳೆನಗೆ ಅತ್ತಿ
ಅಹಾ ! ಕುಲು ಕುಲೂ—ಕುಹೂ ಕುಹೂ—ನಗೆ ! ಸಾಕೆ ಸೊಬಗುಗಾರ್ತಿ! ||೨೨||

ಮಧುಮಾಧವನೇ ಗಂಡನಲ್ಲವೇ ? ಬಾಯಿಬಿಚ್ಚೆ ರಾಣಿ !
ಗಂಡನ ಹೆಸರನು ಹೇಳದೆ ಇದ್ದರೆ ನನ್ನ ಜೀವದಾಣೆ ! ||೨೩||

ರಾಣಿಯಾದರೆ ರಾಜನಿಗಾದಿ—ನನಗೆ ಗೆಳತಿಯಲ್ಲೇ ?
ನಿನ್ನ ಮೇಲೆ ನಾ ಪ್ರೀತಿ ಮಾಡುವದು 'ಗೆಳತಿಯೆ' ಎಂದಲ್ಲೇ ? ||೨೪||

ದನವ ಕಾಯ್ವ ಹುಡುಗರೂ ಕೂಡ ಕೇಳ್ ಟಕಮಕ ನೋಡುವರು
ಹಾಡುಕೇಳುತಲೆ ನೀನಿದ್ದಲ್ಲೇ, ಬೇಗನೆ ಓಡುವರು ||೨೫||

ಕೈಯೊಳಗಿನ ಕೊಳಲನ್ನು ಬಿಸುಟದನು ಕುರುಬನು ಧ್ವನಿಕೇಳಿ
ಎಲ್ಲರ ಮನಸಿಗೆ ನೀನೆ ಬಂದಿಯಾ ಇಡೀ ಭೂಮಿಯಲ್ಲಿ ? ||೨೬||

ಕಪ್ಪು ಶರೀರಕೆ ಮರುಳನೊಬ್ಬನೌ, ಹಾಡಿಗೊಬ್ಬ ಹುಚ್ಚು!
ಹೊರಗಿನವಿವು ನಾ ನೋಡಿ ಬೆರಗೆನೇ; ಅದು ಮಾಡದು ಮೆಚ್ಚು ! ॥೨೭॥

ನಿನ್ನ ನೋಡುತಲೆ ಸುಖವೆನಿಸುವದೇ ಗೊತ್ತಿಲ್ಲವು ಯಾಕೆ ?
ಗೊತ್ತಿದ್ದಾದರು ಏನು ಮಾಡುವದು —ಪ್ರೀತಿ ಅದೇ ಸಾಕೆ ! ॥೨೮॥

ಒಂದು ಜೀವವನು ಒಡೆದು ಎರಡರೊಳು ಹಾಕಿದಂತೆ ಆಗಿ
ತಳಮಳಿಸುವೆನೇ ನಿನ್ನ ನೋಡಿ ನಾ ಜೀವದ ಸಲುವಾಗಿ ! ॥೨೯॥

ಎದೆಗೆ ಎದೆಯನೂ ಹಚ್ಚಿ ಕುಳಿತರೂ ನಾಕು ಬಟ್ಟು ದೂರ
ಒಂದೇ ಆಗಲಿ; ಎರಡು ಬೇಡಿನ್ನೂ—ಒಂದೆ —ಇಡೀಪೂರಾ ॥೩೦॥

ನಿಮಿಷಮಾತ್ರವೇ ಎಂದೆಂದಾದರು ಅನಿಸುವದೇ ನನಗೆ !
ವಸಂತಮಯ ಜಗ—ಏನು ಇಲ್ಲವು ಭೇದ ನನಗೆ ನಿನಗೆ ! ॥೩೧॥

ಮಾವಿನ ಮರಗಳೆ ಕಾಣಹತ್ತ್ತವು ನಿನ್ನಂಥಾ ಕೂಗೆ
ಹೂವೇ ಹೂಗಳು —ಅದರ ಹೊರ್ತು ಜಗ ಎಲ್ಲ ಶೂನ್ಯವಾಗೈ ॥೩೨॥

ಹಣ್ಣುಹಣ್ಣು ತಗಲಾಡಿ ರಸದ ಮಳೆ ಸುರಿವನಾಡಿನಲ್ಲಿ
ಮುಳುಗಿ ಹೋದೆ ನಾ—ಸುತ್ತುಮುತ್ತಿಹುದು ಮಾಧವೀಯ ಬಳ್ಳಿ ! ॥೩೩॥

('ಕೂಹೂ ಕೂಹೂ ಕೂಹೂ ಕೂಹೂ ಕುಹೂ ಕುಹೂ' ಒದರಿ
(ಎಚ್ಚರ ಮಾಡಿತು; ಉಸುರು ಬಿಟ್ಟಳೈ ಎಚ್ಚತ್ತಳು ಹೆದರಿ !

(ಕೋಗಿಲೆ ಕಂಡಿತು ಗಿಡದ ಮೇಲೆ, ಹಾ! ಅವಳು ಗಿಡದ ತೆಳಗೆ
(ಜೀವವಾಯಿತ್ತೈ ಅರ್ಧ ಅರ್ಧವೇ, ಅವರಿಬ್ಬರ ಒಳಗೆ ! ) ॥೩೪+೩೫॥

ಬೆಳೆಯು ಬೆಳೆದು ಕಳೆ ಏರಿತು ಭೂಮಿಗೆ; ಬರಲಿಲ್ಲೇ ನೀನು !
ಆಳು ಜೋಳದೊಳು ಓಡುವಾಗ್ಯೆ, ಹಾ ! ನೆನಸಿದೆನೇ ನಾನು ! ॥೩೬॥

ಹಣ್ಣು ಎಲೆಗಳೂ ಹಾರಿ ಹೋದವೂ; ಎಲ್ಲ ಮಣ್ಣುಪಾಲು !
ಮಾಗಿಯು ಬಂದಿತು—ಮನೆಯ ಸುತ್ತಲೂ ಬರೀ ಗಿಡದ ಸಾಲು ॥೩೭॥

ಮಳೆ—ಬೆಳೆಗಾಲಗಳಾದವು ಮಾಗಿಯು ಆಗಿ ಹೋಯಿತೀಗ !
ಬಾರೇ ಬಾರೇ ಜೀವದ ಗೆಳತೀ !—ಬಾ ಬಾರೇ ಬ್ಯಾಗ ! ॥೩೮॥

'ಮುಪ್ಪು ಹೋಯಿತಾ—ಹರೇ ಹರವಲೇ ಹೀಗೆ ನಾನು ಅನಲು
ಮಾವು ಬೇವಿನೊಳು ಸಹಜ ಕಂಡೆನೇ ಈ ಸುಗ್ಗಿಯ ಕಾಲು! ॥೩೯॥

ಕೋರೀಹುಳದಿಂ ಪಾತರಗಿತ್ತಿಯು ಕುಣಿಯುತ ಬರುವಂತೆ
ಮಾಗಿಯ ಬೆನ್ನನು ಬಿರಿಯುತ ಬಂದಿತು, ಸುಗ್ಗಿಯು ಅದರಂತೆ ! ॥೪೦॥

ಕಂಡೆನು ನಿನ್ನನು, ಎಲೇ ಕೋಗಿಲೆ ! ಮಾವಿನ ಮರನೊಳಗೆ !
'ಕೂಹೂ' ಶಬ್ದವ ಕೇಳಿದ ಕೂಡಲೆ ಓಡಿ ಬಂದೆ ತೆಳಗೆ ! ॥೪೧॥
ಇಷ್ಟು ಹೊತ್ತು ನಾ ಎಷ್ಟಾಡಿದರೂ ಉತ್ತರವೇ ಇಲ್ಲ ! ॥
( 'ಕೂಹೂ ಕೂಹೂ' ಅಂದಳುಗೆ ಳತಿಯು—ಅರ್ಥ ತಿಳಿಯಲಿಲ್ಲ) ॥೪೨॥
ಅತ್ತರು ಕೂಹೂ, ನಕ್ಕರು ಕೂಹೂ, ಕೂಹೂ ಎಲ್ಲಕ್ಕೂ ॥
ಒಂದೇ ಸ್ವರವೇ—ಒಂದೇ ಮಾತೇ—ಏನು ಮಾಡಬೇಕು ? ॥೪೩॥
(ಶಬ್ದಬ್ರಹ್ಮವು 'ಕೂಹೂ' ಎಂಬದು ತಿಳಿದಳಾಗ್ಯೆ ಬಾಲೆ ॥
(ಕೂಹೂದೊಳಗೇ ಎಲ್ಲ ಅರ್ಥವೂ—ನುಡಿದಳು ಆ ವ್ಯಾಲೆ) ॥೪೪॥
ವಸಂತರಾಜನ ರಾಣಿ ನೀನು, ನಾ ಒಕ್ಕಲಿಗನ ಹುಡುಗಿ ! ॥
ಮಾವಿನ ಹಂದರ ನಿನಗೆ; ನನಗೆಲೇ ಹರಕು ಉಡಿಗಿ ತೊಡಿಗಿ ! ॥೪೫॥
ಪ್ರೀತಿತೀರ್ಥವಿದು ಸೂಸುತುಂಬಿತೌ—ಕಾಣದಾಯ್ತು ತಳವು ॥
ಆದನ್ನಾದರೂ ಧುಮುಕಿ ನೋಡೆ ನೀ ಕಂಡರವರ ಅಳವು ॥೪೬॥

—ಅಂಬಿಕಾತನಯ-ದತ್ತ.

---

## ಸಾವು

### ( ೧ )

ಸಾವು ಸೂಕ್ಷ್ಮಶರೀರದ ಸ್ಥಾನಾಂತರ; ಸ್ಥೂಲಶರೀರದ ರೂಪಾಂತರ. ಸೂಕ್ಷ್ಮಶರೀರಕ್ಕೆ ಸ್ಥೂಲಶರೀರವು ಹೊದಿಕೆ. ಸಾವಿನ ಸಮಯಕ್ಕೆ ಸ್ಥೂಲಸೂಕ್ಷ್ಮಶರೀರಗಳು ಅಗಲುವವು. ಮಾನವನ ಹುಟ್ಟು ಸಾವಿಗಾಗಿ; ಸಾವು ಹುಟ್ಟಿಗಾಗಿ. ಹಲವರು ಸತ್ತು ಹುಟ್ಟುವದಿಲ್ಲ; ಅವರ ಹುಟ್ಟಿನ ಹಾದಿಯು ಸಾವಲ್ಲ; ಅವರು ಮರಣೇಚ್ಛುಗಳಲ್ಲ; ಮುಮುಕ್ಷುಗಳು. ಮಾನವನು ಮರಣೇಚ್ಛುವು; ಮುಮುಕ್ಷುವು ಇಚ್ಛಾಮರಣಿಯು. ಮುಮುಕ್ಷುಗಳು; ಮಾನವರನ್ನು ಮಿಕ್ಕಿದವರು. ಇವರಿಗೆ ಸಾವು ಸುಖದ ದಾರಿ, ಮಾನವರಿಗೆ ಮಾತ್ರ ಇದು ಸ್ವರ್ಗ—ನರಕಗಳ ದಾರಿ—ಮಾನವರ ಮಾರ್ಗವು ಅನಿಶ್ಚಿತ; ಮುಮುಕ್ಷುಗಳದು ನಿಶ್ಚಿತ.

—ಕೃಷ್ಣ.

### ( ೨ )

ಬೀಳುವದು ಏಳುವ ಮುಂತೋರಿಕೆ. ಹಿಂಗು ಹುಟ್ಟುವ ಹೆಗ್ಗುರುತು. ಈ ಪರಿ ವಿಡಿಯು ಇಳೆಗೆ ಅಳಿವಿಲ್ಲವೆಂದು ಹೇಳಿದ ಹಾಗೆ. ಮಿಕ್ಕ ಬಳಲಿಕೆಗಿಂತ ಸಾವಿನದು ಬಲು ದಾರುಣವೆಂದು ನಮ್ಮೆಲ್ಲರ ನಂಬಿಕೆ.

ಸಂಕಟಗಳನ್ನು ಸೋಸುವದು ಸುಖದ ಸಾಧನೆ. ಸಾವ ಬಳಲಿಕೆಯಲ್ಲಿ ಬಂದು ನಿಲ್ಲುವ ವಿಚಿತ್ರ ಚಿತ್ರಗಳು ಬರುವ ಮೈಯ್ಯ ಇರುವಿಕೆಯ ಕುರುಹುಗಳೆಂದು ನಮ್ಮ ಶಾಸ್ತ್ರಗಳ ಅನುಮಾನ.

ಜನನಮರಣಗಳು ಜಗದೀಶನ ಕೈಯಲ್ಲಿ ಮಕ್ಕಳಾಟಿಕೆಯಂತೆ. ಅಂತೇ ಇಂತು ಚಲ್ಲಾಟವಾಡುವನು. 'Death is a joke to me'- ಸಾವಿನ ಕೂಡ ನಗೆಯಾಡುವೆನು —ಎಂದು ಒಂದೆಡೆಯಲ್ಲಿ ಒಡನುಡಿದ ದೇವಾಂಶಸಂಭೂತರಾದ ವಿವೇಕಾನಂದರ ವೀರವಾಕ್ಯವೇ ಇದಕ್ಕೆ ಸಾಕ್ಷಿ.

ತಂದೆಯ ಸಂತಸಕ್ಕಾಗಿ, ಹೊಸ ಮೈಯ ಸಂಭ್ರಮಕ್ಕಾಗಿ, ಸಾವ ಸಂಕಟವನ್ನು ಶಾಂತವಾಗಿ ಸಹಿಸಿಕೊಳ್ಳಬೇಕು.

—ನಾರಾಯಣ.

( ೩ )

ಸಾವೆಂದರೆ ಕೆಲವರಿಗೆ ಭೀತಿಯ ಮೆಟ್ಟು; ಕೆಲವರಿಗೆ ತಿಳಿಯದ ಗುಟ್ಟು; ಕೆಲವರಿಗೆ ಏನೋ ಕಣ್ಣು ಕಟ್ಟು; ಮೊದಲನೆಯದು ಸಂಸಾರಿಕರಿಗೆ, ಎರಡನೆಯದು ವಿಚಾರವಂತರಿಗೆ, ಮೂರನೆಯದು ಚಿಕ್ಕಮಕ್ಕಳಿಗೆ.

ರಣಶೂರರು ಸೇವೆಯ ಸಾಧನವೆಂದು ಸಾವಿಗೆ ಎದೆಗೊಡುವರು. ಕರ್ಮಯೋಗಿಗಳು, "ಜಾತಸ್ಯ ಹಿ ಮರಣಂ ಧ್ರುವಂ" ಎಂದಂದುಕೊಂಡು ಅದರ ಗೊಡವೆಗೆ ಹೋಗುವದಿಲ್ಲ. ಜ್ಞಾನಿಗಳು, "ಮರಣಂ ಪ್ರಕೃತಿಃ ಶರೀರಿಣಾಂ" ಎಂದು ಅದರ ಬೆಲೆಕಟ್ಟಿ ನಿಶ್ಚಿಂತರಾಗಿರುವರು. ದುಃಖೋದ್ವೇಗಭೀತರು ಅದರೊಳಗಿಂದ ಪಾರಾಗಬೇಕೆಂಬ ಭ್ರಮೆಯಿಂದ ಸಾವನ್ನು ಬರಮಾಡಿಕೊಳ್ಳುವರು.

ಸಾವು ದೇಹಕ್ಕೆ; ಜೀವಕ್ಕಲ್ಲ. ಕೆಲವರು ಜೀವಕ್ಕೂ ಸಾವುಂಟೆಂದು ನಂಬುವರು. ಸಾವು ಒಂದು ಪ್ರಚಂಡ ವಿಸ್ಮರಣಕಲ್ಪವು; ಅಂಜನವು; ಮರೆವಿನ ಮಲವು. ಸಾಯುವ ಮೈಯೊಡನೆ ಸಾಯದ ಜೀವವನ್ನೂ ಈ ಮರೆವು ಮಣ್ಣುಪಾಲುಮಾಡುವದು.

ಸಾವು ಎದೆಯನ್ನು ಕರಗಿಸುವದು. ಬುದ್ಧಿಯನ್ನು ಬೆರಗಿಸುವದು. ಆದಕಾರಣವೆ ಕವಿಗಳು ಇದನ್ನು ಮುಟ್ಟಿ ಕಟ್ಟಿ ಹೋಗಿರುವರು. ತತ್ತ್ವಜ್ಞರು ತಟ್ಟಿ ಅಟ್ಟಿ ಸಾಗಿರುವರು. "ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್"

ಧರ್ಮಬುದ್ಧಿಯ ತತ್ತಿಗೆ ಸಾವು ಕಾವು.

— ದತ್ತ.

# ಒಳಜಗಳ.

( 'ಹರಟೆಮಲ್ಲ'ನ ತಮ್ಮ-ಲಿಂಗ )

ಒಳಜಗಳವು ಇಂದು ನಿನ್ನಿನದಲ್ಲ ! ಅದು ಆದಿ ಬುನಾದಿಯಿಂದ ಬಂದುದು. ಇದರ ಹುಟ್ಟು ದೇವಲೋಕದಲ್ಲಿ! ಗಂಗೆಯು, ಹೇಗೆ ಶಿವನ ತಲೆಯಿಂದ ಇಳಿದು ಭೂಲೋಕಕ್ಕೆ ಬಂದಳೋ ಹಾಗೆ ಒಳಜಗಳವೂ ಹರಿದು ಬಂದಿದೆ. ಈ ಲೋಕರಹಸ್ಯವೂ 'ಜನಜೀವನ'ವೂ ಒಳಜಗಳಗಳನ್ನೆ ಒಳಗೊಂಡಿವೆ. ಒಳಜಗಳವು ಕಾಜಿನ ಕೋಣೆಯಲ್ಲಿಟ್ಟ ಅರಗಿನ ಬೊಂಬೆಯಂತೆ. ಕಾಜು ಎಷ್ಟು ದಪ್ಪವಾಗಿದ್ದರೂ, ಗೊಂಬೆಯು ಕಾಣಿಸತಕ್ಕದ್ದೇ! ಮುಗಿಲು ಎಷ್ಟು ಗಂಭೀರವಾಗಿದ್ದರೂ ಮೂಡಿದ ಚಿಕ್ಕೆಗಳು ಕಂಗೊಳಿಸದಿರವು. ಸೃಷ್ಟಿಸ್ಥಿತಿಯ ಮೂಲಶಕ್ತಿಯಾದ ಸ್ನೇಹಾಕರ್ಷಣಶಕ್ತಿಯು, ಪದಪದಾರ್ಥಗಳನ್ನೊಂದೊಂದನ್ನು ಬರೀ ಎಳೆಯುವ ಕೆಲಸವನ್ನಷ್ಟು ಮಾಡಿಸುತ್ತದೆ; ಆದರೆ, ಒಳಜಗಳವಿದು ಸ್ಥಳವನ್ನು ಬಿಡಿಸಿ, ಎಳೆದು ಮುಂದಕ್ಕೆ ತರಿಸುತ್ತದೆ.

ಬ್ರಹ್ಮನು ಹುಟ್ಟಿಸುವವನೂ, ಶಿವನು ಸಂಹಾರಕನೂ ಆದಬಳಿಕ ಆ ತತ್ತ್ವವು ಏತರಲ್ಲಿ ಅಡಗಿದೆ ನೋಡಿ ? ದೇವಲೋಕದ ಸುಖವನ್ನು ಗುರಿಯಿಟ್ಟುಕೊಂಡವರು ಲಕ್ಷ್ಮೀ ಸರಸ್ವತಿಗಳ ಸದ್ಗುಣಗಳನ್ನೆ ಕಲಿಯಬೇಕು. ಲೋಕದಲ್ಲಿ ಒಬ್ಬನು ತಾಪಕರನಿದ್ದರೆ ಮತ್ತೊಬ್ಬನು ತಾಪಹರನಿರುತ್ತಾನೆ. ಅನುಕರಣೆಗಳಾದ ಮನುಷ್ಯರು, ಅದರಲ್ಲೂ ಸ್ತ್ರೀಯರು, ರುಕ್ಮಿಣೀಸತ್ಯಭಾಮೆಯರಂಥ ಸಾಮರ್ಥ್ಯವನ್ನು ಪಡೆಯಬೇಕಾದರೆ, ಅವರಂಥ ಚಾರಿತ್ರ್ಯವುಳ್ಳವರಾಗಬೇಕಾದರೆ, ಒಳಜಗಳ್ವನ್ನೆ ತಮ್ಮ ಬಿರುದನ್ನಾಗಿ ಮಾಡಿಕೊಳ್ಳಬೇಕು. ಆ ಲೋಕ ಈ ಲೋಕ ಎಂದು ಹೇಳಹತ್ತಿದರೆ, ಎಷ್ಟೋ ಜನರು ನಂಬಲಿಕ್ಕಿಲ್ಲ. ಅದಕ್ಕಾಗಿ ಇನ್ನು ಪೌರಾಣಿಕ, ಐತಿಹಾಸಿಕ ಸಂಗತಿಗಳನ್ನು ಹೇಳುತ್ತೇವೆ.

ಕೌರವ-ಪಾಂಡವರ ಯುದ್ಧವು, ಜಗತ್ತಿನಲ್ಲೇನು ಸಾಮಾನ್ಯ ಉತ್ಕ್ರಾಂತಿಯನ್ನು ಮಾಡಿತೇ? ಜಗತ್ಕ್ರಾಂತಿಗೂ, ರಾಜ್ಯಕ್ರಾಂತಿಗೂ ಒಳ ಜಗಳವೇ ಬೇಕಲ್ಲವೇ? ದ್ರೋಣಾಚಾರ್ಯ- ಭೀಷ್ಮ ಮೊದಲಾದ ಪರಲೋಕವಾಸೀಯರು ಭೂಲೋಕದಲ್ಲಿರಬಾರದೆಂದೇ, ದೇವರು ಈ ಯುದ್ಧಕ್ಕೆ ಪ್ರೇರಿಸಿದನು. ಘೋರೀಮಹಮ್ಮದನನ್ನು ಜಯಚಂದನು ಕರಿಸಿ, ಪೃಥ್ವಿರಾಯನ ಹೆಣಹಾಕಿಸದಿದ್ದರೆ, ನಾವೀಗ ಮುಸಲ್ಮಾನರ ಮೋಹರಮು ಮೊದಲಾದ ಹಬ್ಬಗಳಲ್ಲಿ ಸೇರುವ ಭಾಗ್ಯವನ್ನು ಪಡೆಯುತ್ತಿದ್ದೆವೋ? ಇನ್ನೂ ಮುಸಲ್ಮಾನರನ್ನು ನೋಡುತ್ತಿದ್ದೆವೋ ಇಲ್ಲವೋ ಸಂಶಯು.

ಪೇಶ್ವೆಯು ಮಹಾರಾಷ್ಟ್ರವನ್ನೂ, ಹೈದರನು ಮೈಸೂರ ರಾಜ್ಯವನ್ನೂ ಗಳಿಸಿದ್ದು ಮೂಲರಾಜ್ಯದಲ್ಲಿ ನಡೆದ ಒಳಜಗಳಗಳೇ ಕಾರಣ. ನಮ್ಮ ಹಿಂದುಸ್ಥಾನದ ಇತಿಹಾಸ

ಪುಸ್ತಕವು, ಇಷ್ಟು ದೊಡ್ಡದಾಗಿ ಭಾರವಾಗಿರುವುದಕ್ಕೆ– ಕನ್ನಡ ನುಡಿಗೆ ಭೂಷಣವಾಗಿರುವುದಕ್ಕೆ ಒಳಜಗಳವೇ ಪುಟ ಪುಟಗಳಲ್ಲೂ ವ್ಯಾಪಿಸಿದುದಲ್ಲವೇ!

ಚಿತ್ರಸೇನನು ಸೆರೆಸಿಕ್ಕಾಗ ಧರ್ಮನು ಒಳಜಗಳವನ್ನು ಮರೆತುದರಿಂದಲೇ, ಮಹಾಯುದ್ಧದ ಹಬ್ಬದೂಟವು, ಮುಂದಕ್ಕೆ ಬಿದ್ದಿತು; ಕಾವು ಮೀರಿತು.

ಕೆಲವರು ಧಾರ್ಮಿಕರೆಂಬವರು– ಜಗಳವು ಹಾನಿಕರವೆಂದು ಹೇಳಿಕೊಳ್ಳುತ್ತ ಸ್ವಾರ್ಥಸಾಧಿಸುವರು; ಇವರಿಗನ್ನಬೇಕು, ನೀರು ಕುಡಿಯುವ ಕಾಗಿಯೆಂದು! 'ಜಗಳ' ಶಬ್ದದಲ್ಲಿರುವ ಅಕ್ಷರಗಳನ್ನು ತಮ್ಮ ಬಯಕೆಯಂತೆ ಹೊಂದಿಸಿಕೊಂಡು ( ಜಗ, ಜಳ, ಗಳ) ಹಾಲು ಕುಡಿಯುವ ಹಂಸಗಳಾಗಬೇಕು. ಹಂಸಕ್ಷೀರನ್ಯಾಯವನ್ನು ಆಡಲಿಕ್ಕೆ ಮಾಡಿರುವರೇ ? ಅದೂ ನ್ಯಾಯವೇ.

ಅತ್ತೆ ಸೊಸೆ, ಅಪ್ಪ ಮಗ, ಗಂಡಹೆಂಡಿರು, ಸವತಿಮಕ್ಕಳು, ಅಣ್ಣತಮ್ಮರು ಮೊದಲಾದ ಜೋಡುಗಳಲ್ಲಿ, ನೀರಲ್ಲೆಸೆದ ಹರಳಿನಿಂದ ತೆರೆಗಳಾದಂತೆ ಒಳಜಗಳವು ಮೊಳೆಯುತ್ತದೆ. ಮೊಳಿಕೆಗೆ ಉಗುರು ಕೊಡಲೆಗಳ ನಂಜು ಹತ್ತದಿದ್ದರೆ ಮರವಾಗಿ ಫಲಕೊಡುವುದರಲ್ಲಿ ಸಂದೇಹವಿಲ್ಲ. ಈ ಫಲದಿಂದಲೇ ತಾಲೂಕಿಗೂ ಜಿಲ್ಹೆಗೂ ಬಳಗದೊಂದಿಗೆ ಪ್ರವಾಸ ಮಾಡಿ, ಪುಣ್ಯಪಡೆಯುವವರು ಹರಳುಗಳಂತೆ ಹೆಜ್ಜೆಜ್ಜೆಗೂ ಕಾಣಸುತ್ತಾರೆ.

ಒಳಜಗಳವೀಗ ಕಲಿಯ ಪ್ರಾಬಲ್ಯದಿಂದಲೋ, ಜನತೆಯ ಅಜ್ಞಾನದಿಂದಲೋ ಕೊಂಚ ಕುಂದಿದೆ. ಆದರೂ ಸೆರೆಸಿಂದಿಗಳ ಅಂಗಡಿಗಳಲ್ಲಿ ಅದರ ಮೂರ್ತಸ್ವರೂಪವನ್ನು ಕಾಣಬಹುದು; ಅಲ್ಲಿ ಒಳಜಗಳವು, ನಲ್ಲಮ್ಮಳಾಗಿ ನಲಿಯುವದು; ಸರಸಿಯಾಗಿ ಸರಸವಾಡುವುದು, ಚೆನ್ನೆಯಾಗಿ ಚಿನ್ನಾಟವಾಡುವುದು. ಆ ಅಂಗಡಿಗಳಲ್ಲಿ ಒಳಜಗಳವು ಅಮರನಾಗಿದೆ. ಆದುದರಿಂದಲೇ "ಈ ಜಲರಸದಿಂದ । ಊಚತನ ಬರತಾದ" ಎಂಬ ಪಲ್ಲವಿಯು ಪ್ರಖ್ಯಾತವಾಗಿಯೇ ಇದೆ. ಕೆಲವು ಜನರು ತಮ್ಮ ಯೋಗ್ಯತಾನುಸಾರವಾಗಿ ಇದನ್ನು ನಿಂದಿಸುತ್ತಲೂ ಇರುವರು. ಸೆರೆಸಿಂದಿಗಳನ್ನು ಕುಡಿಯುವವರ ಪುಣ್ಯದಿಂದಲೇ ಉಪಕಾರಿಯಾದ ಒಳಜಗಳವು ಅಲ್ಪ ಸ್ವಲ್ಪ ಮಸಮಸಕಾಗಿ ಉಳಿದಿದೆ; ಆದರಿಂದ ನಾವು ಕುಡಕರನ್ನು ಯಥಾಶಕ್ತಿ ಮರ್ಯಾದಿಸುವೆವು. ಆದರೆ ಉಪಕಾರಗೇಡಿಗಳು ಸೆರೆಕುಡಿಯುವದು ದೇವರ ನಿಯಮಕ್ಕೆ ವಿರುದ್ಧವಾದುದೆಂತಲೂ, ಕುಡಿದರೆ ದುಷ್ಪರಿಣಾಮಗಳುಂಟಾಗುತ್ತವೆಂತಲೂ ಜರಿಕೊಳ್ಳುವರು. ಅವರಿಗಿಷ್ಟೇ ನನ್ನ ಉತ್ತರ; "ಸೆರೆ ಕುಡಿಯುವದು ಈಶ್ವರೀನಿಯಮಕ್ಕೆ ವಿರುದ್ಧವಾಗಿದ್ದರೆ, ಅದನ್ನು ಕುಡಿಯುವಾಗ ಗಂಟಲೊಳಗೇ ಸೇರಬಾರದು" ಸೆರೆಸಿಂದಿಗಳನ್ನು ಮಾರುವವರಿಗೆ ಈ ಒಳಜಗಳದಿಂದ ಬರುವ ಶ್ರೇಯಾಂಶವು ಲಭಿಸೇಲಭಿಸುತ್ತದೆ.

ಮನೆಗಳ ಎಣಿಕೆಯು ಬೆಳೆಯುವದಕ್ಕೆ ಇದೊಂದು ಸಬಲವಾದ ಹಾದಿಯು. ಸ್ವಕಲ್ಯಾಣವನ್ನು ಬಯಸುವ ಹೆಣ್ಮಕ್ಕಳು, ತಮ್ಮ ಅಣ್ಣತಮ್ಮಂದಿರು ಬೇರೆಯಾಗಲೆಂದೇ ಹರಸುತ್ತಾರೆ; ಅಣ್ಣತಮ್ಮಂದಿರು ಬೇರೆಯಾದರೆ, ಹೆಣ್ಮಗಳಿಗೆ ತವರುಮನೆಗಳಾದರೂ ಒಂದಕ್ಕೆರಡಾಗುತ್ತವೆ. ಒಂದೇ ತವರು ಮನೆಯು ಹೆಣ್ಮಕ್ಕಳ ಮನವನ್ನು ಈ ಪರಿ ಸೆಳೆಯುತ್ತಿರಲು, ಒಂದಕ್ಕೆರಡಾದಾಗ ತವರಿನ ಸುಖಕ್ಕೆ ಸೀಮೆಯೇ ಇಲ್ಲ. ಅಣ್ಣತಮ್ಮರು, ಅಪ್ಪಮಕ್ಕಳು ಇದರಿಂದ ೩ ಮನೆಗಳನ್ನು ಮಾಡಿಕೊಳ್ಳುವರು. ಇಲ್ಲವೆ ಕಟ್ಟಬಹುದು, ಬೇರೆಯಾದುದಕ್ಕೆ ಬೀಗರು ಶೆಲ್ಲೆ ಮುಂಡಾಸಗಳನ್ನು ಮಾಡುವ ರೂಢಿಯೂ ನಮ್ಮಲ್ಲಿದೆ. ಮನೆತನದ ಬಂಡು ಮುರಿದು, ನೆರೆಹೊರೆಯವರಿಗೂ, ಊರುಕೇರಿಯವರಿಗೂ ಹಿತವಾಗುತ್ತೆ. ಇದೊಂದು ಈಶ್ವರೀಶಾಸನವೆನ್ನಬಹುದು.

ನೌಕರಿಯನ್ನೇ ಧ್ಯೇಯವಾಗಿಟ್ಟುಕೊಂಡು ಅಭ್ಯಾಸಿಸುವರಿಗೆ ಒಳಜಗಳವು ಅಲ್ಲಲ್ಲಿ ಕಾರಕೂನಿಯ ಕೆಲಸಗಳನ್ನು ಕೊಡಿಸಬಹುದು. ನಗರಗಳಲ್ಲಿ ವಕೀಲರ ಬೆಡಗಿನ ಮನೆಗಳು ತಲೆಯೆತ್ತಿ ಮೆರೆಯುವುದಕ್ಕೇನು ಕಾರಣವು? ಲಕ್ಷ್ಮಿಗೂ ಸರಸ್ವತಿಗೂ ಸಂಬಂಧವಿಲ್ಲಬಂತೆ. ಲಕ್ಷ್ಮಿಯಿರುವಲ್ಲಿ ಸರಸ್ವತಿಯೂ, ಸರಸ್ವತಿಯಿರುವಲ್ಲಿ ಲಕ್ಷ್ಮಿಯೂ ಇರುವದಿಲ್ಲವಂತೆ. ಮನೆಯಿಂದ ಲಕ್ಷ್ಮಿಯನ್ನು ಹೊರಹಾಕಿ, ಯಜಮಾನನಿಗೆ ಬುದ್ಧಿ ಕಲಿಸುವ ಈ ಒಳಜಗಳವಿಲ್ಲಿ ಯಾವ ಅವತಾರದಿಂದ ಇಳಿದಂತಾಯ್ತು. ಬಾವಿಯ ನೀರು, ಮೇಲೆ ಮೇಲೆ ತುಂಬಿ ಮೇಲೆ ಮೇಲೆ ಬರಿದಾಗುವಂತೆ ಮನುಷ್ಯನ ಗುಟ್ಟುಗಳೆಲ್ಲ ಮೇಲೆ ಮೇಲೆ ಬೈಲಿಗೆ ಬಂದರೇ ಅದಕ್ಕೆ ನೈರ್ಮಲ್ಯವುಂಟಾಗುತ್ತದೆ. ಹಾಗಿಲ್ಲದಾದರೆ, ಅದು ನಿಂತಲ್ಲಿಯೇ ನಿಂತು ಮಲೆಯಹತ್ತುವುದು. ಹಸರಿಸುವದನ್ನು ಹರಿಬಿಟ್ಟು ಪಸರಿಸುವಂತೆ ಮಾಡುವುದೀ ಒಳಜಗಳವು.

ನಮ್ಮ ದೇಶದ ಜನಸಂಖ್ಯೆಯು ಹೆಚ್ಚಾಗುತ್ತಿದ್ದದರಿಂದಲೂ, ಧಾನ್ಯದ ಬೆಳೆಯು ಬರಬರುತ್ತ ಕಡಿಮೆಯಾಗುತ್ತಿದ್ದುದರಿಂದಲೂ ಜನರಿಗೆ ಸ್ಪೇಶಲ್ ಏಕಾದಶಿಗಳೂ, ಶಿವರಾತ್ರಿಗಳೂ ಒದಗಹತ್ತಿವೆ. ಹೀಗೆ ಉಪವಾಸದಿಂದ ಉರಿದುರಿದು ಸಾಯುವುದಕ್ಕಿಂತ ಬಡಿದಾಡಿ ವೀರಸ್ವರ್ಗವನ್ನು ಪಡೆಯುವುದು ಪುಣ್ಯಕರವಲ್ಲವೇ? ಬಡೆದಾಟಕ್ಕೆ ಕಲಹವೇ ಕಾರಣವು.

ತನ್ನ ತಾಯಿ, ತನ್ನ ತಂದೆ, ತನ್ನ ಬಂಧು, ತನ್ನ ಬಳಗ ಮೊದಲಾದ "ತನ್ನತನ್ನ" ಸಂಕುಚಿತ ಭಾವನೆಯ ಮೋಡಗಳು, ಹಾರಿಹೋಗಬೇಕಾದರೆ, ಒಳಜಗಳದ ಬಿರುಗಾಳಿಯು, ಭರದಿಂದ ಬೀಸಿದರೆ ವಿಶಾಲಾವರಣದ ವಿಶಾಲಭಾವನೆಯು ಬಂದುಬಿಡುತ್ತೆ. ಯಾವನು ವಿಶಾಲಭಾವನೆಯ ವಿಶ್ವವ್ಯಾಪಿಯಾಗಿರುವನೋ, ಯಾವನು ತನ್ನಿಂದ ಹೆರರಿಗೆ ಕಲ್ಯಾಣವಾಗಲೆಂದು ಚಿಂತಿಸುವನೋ ಅವನು, ಇನ್ನೊಬ್ಬನಲ್ಲಿ ನ್ಯಾಯುತೆಗೆಯಲಿಕ್ಕೇ ಬೇಕು. ಇಬ್ಬರ ನ್ಯಾಯ ಒಬ್ಬರಿಗಾಯ.

ವರ್ತಮಾನಪತ್ರಗಳು ಹುರಿಕಟ್ಟಾಗಿಯೂ, ಹೆಚ್ಚು ಆಯುಷ್ಯವುಳ್ಳವುಗಳಾಗಿಯೂ, ಜಾದಾಸಂಚಿಕೆಗಳಾಗಿಯೂ ಹೊರಡಲಿಕ್ಕೆ ಆಗಾಗ ಒಳಜಗಳಗಳು ನಡೆಯಬೇಕು. ಅದರಿಂದ ಲೇಖಕರೂ, ಸಂಪಾದಕರೂ ಆವೇಶಪೂರಿತ ಲೇಖಗಳನ್ನು ಬರೆಯುವುದಕ್ಕೂ, ವಾಚಕರು ಪತ್ರದ ಹಾದಿ ನೋಡುವುದಕ್ಕೂ ಮೇಲು. "ಒಬ್ಬರಿಗಿಂತ ಇಬ್ಬರು ಲೇಸು" ಇದೇ ತತ್ತ್ವವನ್ನು ಇನ್ನಿಷ್ಟು ಹಿಗ್ಗಿಸಿದರೆ ಅಥವಾ ಲಿಂಗಭೇದವನ್ನು ಮಾಡಿದರೆ, "ಒಂದಕ್ಕಿಂತ ಎರಡು ಮಿಗಿಲು" ಎಂದು ಆಗುವದು. ಒಂಟಿ ಅಶುಭವು; ಜೋಡು ಶುಭವು. ಈ ಎಲ್ಲಾ ತತ್ತ್ವಗಳಿಗೂ, ಒಳಜಗಳವೇ ಬೀಜ! ಅದನ್ನು ನಾವು ಮೇಲೆ ಮೇಲೆ ನೆನೆಯುವೆವು.

ದೇವರಲ್ಲಿ ಐಕ್ಯವಾಗಿದ್ದರೆ ನಾವು ಈ ಸುಂದರವಾದುದೂ, ಸುಖಕರವಾದುದೂ ಆದ ಭೂಮಿಯಲ್ಲಿ ಹುಟ್ಟಿ ಬರುತ್ತಿದ್ದೆವೇ? ಇಲ್ಲ ಇಲ್ಲ, ಎಂದೂ ಇಲ್ಲ !!

ಒಳಜಗಳವೇ ನಿನಗೊಳಿತಾಗಲಿ! ನೀನು ಒಳಗೇ ಇರು !!

---

ಗುರು ಅರವಿಂದಘೋಷರ

# ಪೂರ್ಣಯೋಗ

( ಹೋದ ವರ್ಷದ ಆನೆಯ ಸಂಚಿಕೆಯಿಂದ ಸಾಗಿಬಂದದ್ದು. )

ಭೌತಿಕಪ್ರಪಂಚದ ಬೆನ್ನುಹತ್ತಿದ ನಮ್ಮ ಜಡಚಕ್ಷುಗಳಿಗೆ ಬ್ರಹ್ಮದರ್ಶನವಾಗದು. ಸ್ವರ್ಗದ ಬೆಳಕಿನಿಂದ ನಮ್ಮ ಕಣ್ಣಿನ ಕತ್ತಲೆ ಕಳೆದು ಹೋದಾಗ ಅಚೇತನವೆಂಬುದೊಂದೂ ಇಲ್ಲ. ಜೀವಜಡವೆಂಬ ಭೇದವಿಲ್ಲದೆ ಎಲ್ಲದರಲ್ಲಿಯೂ ಆಗ ಪ್ರಾಣ, ಮನ, ವಿಜ್ಞಾನ, ಆನಂದ, ಚಿತ್, ಸತ್ತುಗಳಿರುವುದನ್ನು ಕಾಣುವೆವು. ಎಲ್ಲದರಲ್ಲಿಯೂ ಲೀಲಾಮಯ ಪರಮಾತ್ಮನು ( Self conscious personality of God ) ವಿರಾಜಿಸುತ್ತಿದ್ದು, ತನ್ನ ಅನಂತಗುಣಗಳ ಅಪಾರವಾದ ಆನಂದವನ್ನುಣ್ಣುತ್ತಿರುವನು. ಹಣ್ಣುಹಂಪಲದಲ್ಲಿ, ಕಲ್ಲುಕಟ್ಟಿಗೆಯಲ್ಲಿ, ಮಣ್ಣುಮುಂಟೆಗಳಲ್ಲಿ—ಎಲ್ಲಿ ಬೇಕಲ್ಲಿ ಹಿಗ್ಗು ಹರಿದಾಡುತ್ತಿರುವದು. ಯಾಕೆಂದರೆ ಹಿಗ್ಗೇ ಹೆಚ್ಚಿ ಜಗವಾಯಿತು, ಶ್ರೀಕೃಷ್ಣನೀ ಹಲವಿನಲ್ಲೆಲ್ಲ ನಲಿವನ್ನುಣ್ಣುತ್ತಿರುವನು. ಓರ್ವನು ಸರ್ವದಲ್ಲಿದ್ದದ್ದು ಬಿಡಿಬಿಡಿಯಲ್ಲ. ಇಡಿಯಾಗಿದ್ದು ಬಿಡಿಯಾಗುವುದೇ ಅವನ ಅನಿರ್ವಚನೀಯ ಲೀಲೆ. ಅವನಿಗೆ ಹೊತ್ತುಗೊತ್ತುಗಳ ಬಂಧನವಿಲ್ಲ. ಸರ್ವದಲ್ಲಿದ್ದು ಸವಿಯುಣ್ಣುತ್ತಿರುವುದು ಸುಪ್ತನಾಗಿಯೂ ಅಲ್ಲ, ಗುಪ್ತನಾಗಿಯೂ ಅಲ್ಲ. ಚಿನ್ಮಯನಾಗಿ ಚೆಲ್ಲಾಟವಾಡುತ್ತಿರುವನು. "ಈಶಾವಾಸ್ಯ

ಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ " ಪ್ರಕೃತಿಯು ಇಡಿಯಾಗಿಯೂ ಬಿಡಿಯಾಗಿಯೂ ಅವನ ಲೀಲಾಕ್ಷೇತ್ರವಾಗಿದೆ.

ಆದರೆ ಇಷ್ಟಕ್ಕೇ ಮುಗಿಯಲಿಲ್ಲ. ಸರ್ವತ್ರ ಸರ್ವಭೂತಗಳಲ್ಲಿ ಶಿವನನ್ನು ಕಂಡಷ್ಟಕ್ಕೆ ತೀರಲಿಲ್ಲ. ಜಗದ ಆಗುಹೋಗುಗಳಲ್ಲಿ, ಏಳು ಬೀಳುಗಳಲ್ಲಿ, ಸರ್ವಕರ್ಮ ಸರ್ವಧರ್ಮಗಳಲ್ಲಿ, ಆಚಾರವಿಚಾರಗಳಲ್ಲಿ, ಎನಿಕೆ ಎಣಿಕೆಗಳಲ್ಲಿ—ಎಲ್ಲದರಲ್ಲಿ ಅವನನ್ನೆ ಕಾಣಬೇಕು. ಈ " ಸರ್ವಂ ಹ್ಯೇತದ್ ಬ್ರಹ್ಮ " ಭಾವವು ಬರುವುದಕ್ಕೆ ಎರಡು ಸಂಗತಿಗಳ ಅಗತ್ಯವಿದೆ. ಸರ್ವಕರ್ಮಗಳ ಫಲವನ್ನು ಪರಮಾತ್ಮನಿಗೆ ಸಲ್ಲಿಸುವುದು ಮೊದಲನೆಯದು. ಕರ್ಮಗಳ ಹೊಣೆಯನ್ನೂ ಅವನಿಗೇ ಬಿಟ್ಟುಕೊಡುವುದು ಎರಡನೆಯದು. ಕರ್ಮಫಲವನ್ನು ದೇವನಡಿಗೆ ಸಲ್ಲಿಸುವುದೆಂದರೆ ವೈರಾಗ್ಯವನ್ನು ತೊಡುವುದಲ್ಲ. ಸರ್ವಸ್ವವನ್ನು ಸಮರ್ಪಿಸಿದ ಮೇಲೆ ಸರ್ವವೂ ದೇವನಿಚ್ಛೆ. ನೀನೊಂದೂ ಯೋಚಿಸಬೇಕಾಗಿಲ್ಲ. " ಹೀಗಾಗಬೇಕು ಹೀಗಾಗಬಾರದು, ಅದು ಬೇಕು ಇದು ಬೇಡ, ಹಾಗಾದರೆ ಹೀಗಾಗುವದು, ಹೀಗಾದರೆ ಹಾಗಾಗುವದು " ಮುಂತಾದುದಾಗಿ ನೀನೇನೂ ಚಿಂತಿಸುವುದು ಬೇಡ. ನಿನ್ನ ಕರ್ತವ್ಯ ಅಕರ್ತವ್ಯಗಳ ಹೊಣೆ ದೇವನದು. ನಿನ್ನ ಒಳಿತುಕೇಡುಗಳ ಯೋಚನೆ ದೇವನದು. ಅವನು ಏನು ಮಾಡಿದ್ದೆಲ್ಲಾ—ನಿನಗೆ ಅನಾವಶ್ಯಕವೆಂದು ಕಾಣುತ್ತಿದ್ದರೂ—ಆವಶ್ಯಕವೆಂದೇ ತಿಳಿ. ನಿನ್ನ ಬೇಕುಬೇಡಗಳ ಬೆನ್ನು ಬಿಟ್ಟು ದೇವನಿಚ್ಛೆಯ ಬೆನ್ನು ಹತ್ತು. ಗೀತೆಯಲ್ಲಿನ ಅರ್ಜುನನಂತೆ ನಿನ್ನ ಬಯಕೆಯನ್ನು ಬಂಜೆಗೊಳಿಸಿ, ಬುದ್ಧಿಯನ್ನು ಗುದ್ದುಹೊಗಿಸಿ, ಗ್ರಹಿಕೆಗಳನ್ನು ಮೆಟ್ಟಿನಿಂತು, ಅಗತ್ಯಗಳನ್ನು ಹರಿದು ಹಾರಿಸಿ—ದೇವರಾಯನ ಅನುವು ಅಗತ್ಯಗಳಂತೆ ಮುಂದುವರಿ. ಅವನ ಇಚ್ಛೆಯಿಲ್ಲದೆ ಒಂದು ಕಡ್ಡಿಕೂಡ ಅಲುಗದು. ಇದನ್ನು ತುಂಬಾ ನೆನಪಿನಲ್ಲಿಡು. ಕರ್ಮವನ್ನೂ ಕರ್ಮಫಲವನ್ನೂ ಕೂಡಿಯೇ ಸಮರ್ಪಿಸಿ ಸಂಪೂರ್ಣವಾಗಿ ಅವನ ಕೈಯೊಳಗಿನ ಯಂತ್ರವಾಗಿ ಬಿಟ್ಟಮೇಲೆ ನಿನ್ನಿಂದಾಗುವುದೆಲ್ಲಾ ಕರ್ತವ್ಯ ಕರ್ಮವಲ್ಲದೆ ಇನ್ನೇನೂ ಅಲ್ಲ. ಏನು ಎಂತು ಎಂದು ನೀನು ಎಷ್ಟೂ ಯೋಚಿಸಬೇಕಾಗಿಲ್ಲ. ತುಂಬಾ ನೆನಪಿನಲ್ಲಿಡು—ಈ ವಿಶ್ವವನ್ನೆಲ್ಲ ಹುಟ್ಟಿಸಿ ಆಳುವ ಶಕ್ತಿಗೆ ನಿಶ್ಚಯವಾಗಿ ನಿನಗಿಂತ ಹೆಚ್ಚಾಗಿ ತಿಳುವಳಿಕೆಯಿದೆ. ನಿನ್ನನ್ನು ಕುಣಿಸುವದಕ್ಕೆ ನಿನ್ನ ಅನುಮತಿಯಿಲ್ಲದೆ ಸಾಗುವಹಾಗಿಲ್ಲವೆಂತಲ್ಲ, ದೇವರಾಯನಿಗೆ ಎಲ್ಲಾ ಕಾಣುತ್ತದೆ.

ಕರ್ತವ್ಯಕರ್ಮವೆಂದರೇನೆಂದು ಎಷ್ಟೋ ಸಲ ಕೇಳಲಾಗುತ್ತದೆ. ತುಂಬಾ ಸಮರ್ಪಣವಾದಮೇಲೆ ಯಾವ ಪ್ರಶ್ನವೂ ಏಳುವದಿಲ್ಲ. ಆದರೆ ತತ್ಪೂರ್ವದಲ್ಲಿ ಮಾತ್ರ ತಾಳುತಪ್ಪಿ ಹೋಗುತ್ತದೆ. ಪ್ರಶ್ನಬರುವುದೇನೋ ಸರಿ. ಆದರೆ ಹೇಳಿಕೊಡುವುದಕ್ಕೆ ತುಂಬಾ ಕಷ್ಟ—" ಗಹನಾ ಕರ್ಮಣೋ ಗತಿಃ । " ಆದರೆ ಇಂಗ್ಲಿಷ ವಿದ್ಯೆಯನ್ನು ಕಲಿತವರು ಕರ್ತವ್ಯ ಕರ್ಮಕ್ಕೆ ಡ್ಯೂಟ ( Duty ) ಎಂದು ಹೇಳುವರು. ನ್ಯಾಯಸಂಗತವಾದ ನೀತಿಸಂಗತವಾದ ಕರ್ಮವನ್ನು ಕರ್ತವ್ಯವೆಂದು ಕೈಕೊಳ್ಳುವುದೇ

ಡ್ಯೂಟಿ. ನಮ್ಮ ವಿವೇಕಬುದ್ಧಿಗೆ ಸರಿದೋರುವ ಕರ್ಮವನ್ನು ಪಾಲಿಸಿಕೊಂಡು ಹೋಗುವುದೇ ಡ್ಯೂಟಿ. ಜಾತಿಗೂ, ದೇಶಕ್ಕೂ ಹಿತವಾಗುವಂಥ ಕಾರ್ಯವನ್ನು ಮಾಡುವುದೇ ಡ್ಯೂಟಿ. ಈ ಮಂತ್ರವನ್ನೆ ಮುಂದಿಟ್ಟುಕೊಂಡು ಸಾಗುವವರು ಲೋಕ ಮಾನ್ಯರಾಗಬಹುದು, ದೇಶಭಕ್ತರಾಗಬಹುದು. ಆದರೆ ಜೀವನದ ಅನೇಕ ಅಶುದ್ಧ ಸಂಸ್ಕಾರಗಳೂ, ವಾಸನೆಗಳೂ ಅಹಂಕಾರವನ್ನು ಮುತ್ತಿಕೊಂಡೇಳುವುದರಿಂದ ಪೂರ್ಣಯೋಗದ ಹಾದಿಗೆ ಮುಳ್ಳುಬಡಿಯುವವು. ಕಾಮನೆಗಳು ಫಲದಿಂದ ಫಲಕ್ಕೆ ಜಿಗಿಯುತ್ತ ಹೆಚ್ಚೆಚ್ಚು ಹುರಿಹಾಕಿ ಇವನನ್ನು ಮುಂದುಮುಂದಕ್ಕೆ ಕೊಚ್ಚಿಕೊಂಡು ಹೋಗಿಬಿಡುವವು. ಒಂದುಸಾರೆ ಆಶಾಭಂಗವಾದರೆ ತೀರಿತು—ಅಲ್ಲಿಯೇ ಸೋತು ಕುಕ್ಕುರಿಸುವನು. ತನಗೆ ಸತ್ಯವೆಂದೆನಿಸಿದ್ದರ ಬಗ್ಗೆ ಯಾರು ಏನು ಮಾಡಲಿಕ್ಕಿಲ್ಲ ! ಸ್ವತಃ ಸಿದ್ಧವ್ಯಕ್ತಿಗಳ ಹುರುಪು ಹುರಿಯುಳ್ಳದ್ದು. ಅವರಿಗೆ ಅಡ್ಡಿಯಾಗಿ ಯಾವುದೂ ಕಾಳುವಂತಿಲ್ಲ. ಇಂಥ ಅಜೇಯ ಕರ್ತೃತ್ವಾಭಿಮಾನವು ರಾಜಸಿಕಕರ್ಮಗಳಲ್ಲಿ ಎಳೆ ದಾಡಿ ವೃಥಾ ಕ್ಲೇಶವನ್ನುಂಟುಮಾಡುವುದರಿಂದ ಇಂಥವರು ತ್ರಿಗುಣಾತೀತರಾಗಲಾ ರರು, ಗುಣಗಳ ಬಂಧನದಲ್ಲಿಸಿಕ್ಕು ಬದ್ಧರಾಗಿ ಹೋಗುವರು.

( ಸಾಗುವದು )

---

# ಬರೀ ನಗಚಾಟಗಿ

## ತಿಳಿಯದವರ ತಿಳುವಳಿಕೆ.

ಒಬ್ಬ ಚಂದಾದಾರ ( ಸಂಪಾದಕರಿಗೆ ):—ನಿಮ್ಮ ಸ್ವಧರ್ಮ ತಿಳಿಯುವದಿಲ್ಲ ಅಂತಾರೆ. ನೀವೇನಂತೀರಿ ?

ಸಂಪಾದಕರು: —ನಿಜವಿರಬೇಕು. ಯಾಕಂದರೆ ಎಷ್ಟೋ ಜನರು ತಿಳಿಯದೇ ನನ್ನ ಲೇಖಗಳನ್ನು ಹೊಗಳುತ್ತಾರೆ; ಕೆಲವು ಪತ್ರಿಕೆಗಳಂತೂ ತಿಳಿಯದೇ ಮುದ್ರಿಸಿ ಬಿಡುತ್ತವೆ.

## ಸವಿಯ ಸವಿ.

ರಾಯರು (ಸಂಪಾದಕರಿಗೆ):—ನಿಮ್ಮ ಕವಿತೆಗಳಿಗಿಂತ "ಸವಿ"ಯೇ ಬಿಗಿಯಿರು ತ್ತದೆ. ಅದಕ್ಕೇನು ಮಾಡಬೇಕು ?

ಸಂ—(ಚಟ್ಟನೆ):—ಅಂಥ ಪ್ರಸಂಗದಲ್ಲಿ ' ಸವಿ 'ಯನ್ನು ಮೊದಲು ಓದಿ ಅದರ ಅರ್ಥ ಸ್ಪಷ್ಟವಾಗುವದಕ್ಕಾಗಿ ಕವಿತೆಯನ್ನು ಓದಬೇಕು.

## ಚುರುಕುಬುದ್ಧಿ.

ರಾಯರು ( ಗೆಳೆಯರಾದ ಸಜ್ಜನಜ್ಜರಿಗೆ ):—ಇಷ್ಟು ಚಿಕ್ಕ ವಯಸ್ಸಿನಲ್ಲಿ ನಿಮ್ಮ ಹಲ್ಲು ಹೇಗೆ ಬಿದ್ದವು ?

ಹತ್ತರ ನಿಂತಿದ್ದ ರಾಯರ ಚುರುಕುಬುದ್ಧಿಯ ಮಗು:—ಒಮ್ಮಿಗೆಲೆ ಬಹಳ ದುಡ್ಡು ತಿಂದಿರಬೇಕು.

## ಅರ್ಧಂ ತ್ಯಜತಿ ಪಂಡಿತಃ

ಅಧಿಕಪ್ರಸಂಗಿ:—ಏನು ಪುರೋಹಿತರೇ ! ಲಗ್ನದ ಹುಡುಗಿಯು ಹದಿನಾಲ್ಕು ವರ್ಷದವಳಿದ್ದರೂ ನೀವು ಇನ್ನೂ ' ಅಷ್ಟವರ್ಷಾ ಭವೇತ್‌ಕನ್ಯಾ ' ಅಂದು ಮಂತ್ರವನ್ನು ಅಂದೇ ಅನ್ನುತ್ತೀರಲ್ಲಾ ?

ಶಂಕರಭಟ್ಟರು:—ಅಪ್ಪಾ ನಾವು ಎಷ್ಟಾದರೂ ಅಷ್ಟ ಕಾಯಕೊಂಡು ಇದ್ದೇವಿ. ಅದನ್ನೂ ಬಿಡ್ರಿ ಅಂತೀ ಏನು ?

## ಪಾಂಡುರೋಗಕ್ಕೆ ಔಷಧವು ಬೇಕೋ ?

ಹಾಗಾದರೆ ಶ್ರೀ. ಆಲೂರ ವೆಂಕಟರಾಯರ ಕರ್ನಾಟಕ ಗತವೈಭವವನ್ನು ಓದಿರಿ.

ರೋಗಿ:—ಅದೇಕೆ ?

ತುಂಟವೈದ್ಯ: — ಪ್ರಕಟನೆಯಲ್ಲಿ ಹೇಳಿಲ್ಲವೇ ' ಓದಿದವರಲ್ಲಿ ಹೊಸರಕ್ತವು ಹುಟ್ಟುವದು ' ಎಂದು ?

## ಅರ್ಧಮರ್ಧ ಕೆಲಸ.

ಒಂದು ಸಾಲಿಯಲ್ಲಿ ಪರೀಕ್ಷೆ ನಡೆದಾಗ್ಗೆ ಒಬ್ಬ ವಿದ್ಯಾರ್ಥಿಯು ಪುಸ್ತಕವನ್ನು ನೋಡಿ ಉತ್ತರ ಬರೆಯುತ್ತಿದ್ದನು. ಅವನು ಕಾಪೀ ಮಾಡುವದನ್ನು ಸುಪರವೈಡರನು ಕಂಡು ಹಿಡಿದು—

ಸು. ವೈ:—ಎಲೋ ಹೀಗೆ ಪುಸ್ತಕ ತಂದು ನೋಡಿ ಬರೆಯುವದಕ್ಕಿಂತ ಮನೆಯಲ್ಲೇ ಎಲ್ಲ ಬಾಯಿಪಾಠಮಾಡಿಕೊಂಡು ಬರಬೇಕಿತ್ತೋ ಹುಚ್ಚಾ ?

ವಿದ್ಯಾರ್ಥಿ:—ಸರ್, ನಾನು ಅಂಥಾ ಅರ್ಧಮರ್ಧ ಕೆಲಸ ಮಾಡತಾ ಇರೋದಿಲ್ಲ.

## ಒಳ್ಳೇ ಸಭ್ಯಗ್ರಹಸ್ಥರು.

ಒಂದು ಓಣಿಯಲ್ಲಿ ಒಬ್ಬ ಕಿಳ್ಳೀಕೇತನು ಹೋಳೀ ಹುಣ್ಣಿವೀ ರಾತ್ರಿ ಎಲ್ಲರ ಮನೆಯ ಮೇಲೆ ' ಲಫಂಗ ಫಟಂಗ ಹರಾಮಖೋರ ' ಎಂದು ಬರೆದು ಹೋದ.

ನೂರನೇ ದಿವಸ ಸಭ್ಯರಾದ ಪಂಚರು ಕೂಡಿ ಅವನಿಗೆ ' ಅಪ್ಪಾ! ಹೀಗೆ ಮಂದೀ ಮನೆಯು ಮೇಲೆ ನಿನ್ನ ಸಹೀ ಮಾಡುತಾ ಹೋಗಬಾರದು, ಎಂದು ಹೇಳಿದರು.

### ೧೯೩೦ ರಲ್ಲಿ.

ಒಬ್ಬ ವಕೀಲರು ನಿರ್ಧನರಾಗಿ ಸತ್ತಕಾಲಕ್ಕೆ ಅವನ ವ್ಯವಸಾಯಬಂಧುಗಳು ಅಂತ್ಯಕರ್ಮಕ್ಕಾಗಿ ರೂಪಾಯಿ ಪಟ್ಟೀ ಕೂಡಿಸುತ್ತಿರುವರು. ಅವರೆಲ್ಲರೂ ಜಜ್ಜನ ಕಡೆಗೆ ಹೋಗಿ ಒಂದು ರುಪಾಯಿ ಪಟ್ಟೀ ಬೇಡಲು—

ಜಜ್ಜ( ಹತ್ತು ರೂಪಾಯಿಯ ನೋಟು ಒಗೆದು ):— ತಗೊಂಡು ಹೋಗ್ರಿ. ನಾಳೆ ಮತ್ತೆ ೮–೯ ಜನರಿಗೆ ಉಪಯೋಗ ಬಿದ್ದೀತು !

### ಹಾಸಲು ಇಲ್ಲ.

ಹೊರಗೆ ನಿಂತ ಪ್ಯಾಸೆಂಜರನು ( ಮೋಟಾರ ಏಜಂಟನಿಗೆ ):—ಏನ್ರೀ ಒಬ್ಬರು ೮ ಆಣೆ ಅಂತಾರ ಒಬ್ಬರು ೬ ಆಣೆ ಅಂತಾರ. ಹುಬ್ಬಳ್ಳಿಗೆ ಹಾಸಲಾದರೂ ಏನ್ರೆಪ್ಪಾ?

ಮೋಟರಿನೊಳಗೆ ಕೂತ ಪ್ಯಾಸೆಂಜರ:—ಹಾಂಗ ಕೇಳೋದರೊಳಗೆ ಹಾಸಲು ಇಲ್ರೀ. ಒಳಗೆ ಬಂದು ಕೂಡ್ರಿ ಸುಮ್ಮನೇ.

---

## ಸ್ವೀಕಾರ-ವಿಮರ್ಶೆ

---

ಪ್ರಾಣಿದಯೆ:—ಬೆಂಗಳೂರಿನ ಚಿಕ್ಕಪೇಟೆಯಲ್ಲಿ ಹೊರಡುವ ಸಚಿತ್ರಮಾಸ ಪತ್ರಿಕೆ. ಈ ಪುಟ್ಟ ಹೊತ್ತಿಗೆಯ ಚಂದಾ ವರುಷಕ್ಕೆ ಎಂಟಾಣೆ. ಪ್ರಾಣಿದಯಾ ಪ್ರಸಾರಕಸಂಘಗಳ ಆಶ್ರಯದಲ್ಲಿ ಶ್ರೀ. ಗುಂಡೂರಾವ ಖಾದ್ರಿಯವರಿಂದ ಸಂಪಾದಿತ ವಾಗುತ್ತಿದೆ. ಮೊದಲಿನ ಮೂರು ಸಂಚಿಕೆಗಳೂ ಬಂದವು. ಯಶೋಬ್ರಹ್ಮರಾಜ ನೆಂಬುದು ಪ್ರಾಣಿದಯಾಬೋಧಕವಾದ ಚಿಕ್ಕಕತೆ. " ಗೂಳಿಯ ಕಾಳಗ " ಎಂಬ ಲೇಖವು ನಮ್ಮಲ್ಲಿ ಹುಂಬರಾದ ವಿನೋದಿಗಳಿಗೆ ಬುದ್ಧಿಗಲಿಸುವಂತಿದೆ. ಪಾಶ್ಚಾತ್ಯರ ನಡತೆಯಿಂದಲೂ ನುಡಿಗಳಿಂದಲೂ ಕಿವಿಹಿಂಡಿಸಿಕೊಳ್ಳುವ ಪ್ರಸಂಗವನ್ನು ನಮಗೆ ತಂದುಕೊಂಡುದು ವಿಷಾದಕರವಾಗಿದೆ. ಆದರೆ ನಮ್ಮವರ ಮಾತನ್ನು ನಂಬಲಾರದ " ಮೂಢಶ್ರದ್ಧೆ " ಎಂದೆನ್ನುವ ನವೀನವಿದ್ಯಾವಂತರಿಗೆ ಇಂತಹ ಲೇಖಗಳೂ ಬೇಕೇ ಬೇಕು. ರಕ್ಷಾಪತ್ರದ ಮೇಲೆ ಚಿತ್ರವಿರುವುದರಿಂದ ಸ-ಚಿತ್ರವೆಂಬುದು ಒಪ್ಪುತ್ತಿದೆ. ಅದರೊಳಗಿನ ಕವಿತೆಗಳು ಅಹಿಂಸಾದೃಷ್ಟಿಯಿಂದ ಚೆನ್ನಾಗಿವೆ. ಪ್ರಾಣಿದಯಾಬೋಧನ ಕಾರ್ಯವನ್ನು ಕೈಕೊಂಡ ಸಂಘದವರಿಗೆ ಕನ್ನಡಿಗರು ಕೈಗೊಟ್ಟು ನೆರವಾಗಿ ಕರ್ತವ್ಯವನ್ನು ನೆರವೇರಿಸಬೇಕಾಗಿ ಹಾರೈಸುವೆವು.

ಸಂಸ್ಕೃತಪ್ರವೇಶಃ :—ಇದು ಸಂಸ್ಕೃತ ಸ್ವಯಂಬೋಧಿನೀಗ್ರಂಥಮಾಲೆಯ ಎಷ್ಟನೆಯದೊ ಗ್ರಂಥ. ಲೇಖಕರು ಶ್ರೀ. ವೈ. ಸುಬ್ಬರಾಯರು. ಬೆಲೆಯನ್ನು ಬರೆದಿಲ್ಲ. ಪ್ರೇಮದಿಂದ ಕಳಿಸಿಕೊಟ್ಟ ಇದನ್ನು ಆದರದಿಂದ ಸ್ವೀಕರಿಸುವೆವು. ಮೊದಲೆ ವ್ಯಾಕರಣದ ಘೋಕಿಗೆ ಹಚ್ಚಿದರೆ ಭಾಷೆ ಹಿಂದೆಯೇ ಉಳಿಯುವುದೆಂದು ಇದನ್ನು ಹೊಸಬಗೆಯಲ್ಲಿ ಬರೆದಿರುವರು. ತೀರ ಬಳಕೆಯಲ್ಲಿಯ ಮಾತುಗಳಲ್ಲಿಯೇ ಕೆಲವು ಗುಂಪುಗಳನ್ನು ಮಾಡಿ, ಒಂದೊಂದು ಪಾಠದಲ್ಲಿ ಒಂದೊಂದು ಬಗೆಯ ಮಾತುಗಳು ಬರುವಂತೆ ಏರ್ಪಡಿಸಿದ್ದಾರೆ. ಪಾಠದ ಕೆಳಗೆ ಕನ್ನಡದಲ್ಲಿ ಅರ್ಥವನ್ನು ಬರೆದಿದ್ದಾರೆ. ಮಕ್ಕಳು ಮನೆಯಲ್ಲಿಯೂ ಸಾಲೆಯಲ್ಲಿಯೂ ಬೀದಿಯಲ್ಲಿಯೂ ಮಾತಾಡುತ್ತಿರುವಲ್ಲಿಂದಲೇ ಮೊದಲು ಮಾಡಿರುವುದರಿಂದ, ಬೇಗಬೇಗನೆ ಸಂಸ್ಕೃತವು ಮನದಲ್ಲಿ ನೆಲೆಗೊಳ್ಳುತ್ತ ಮುಂದೆ ಮುಂದೆ ಪ್ರವೇಶಿಸುವ ಲವಲವಿಕೆಯುಂಟಾಗುವುದು.

"ಇದಂ ಕೋಷ್ಠಾಗಾರಂ। ಅತ್ರಾನೇಕೇ ಮೂಷಕಾ ವರ್ತಂತೇ। ಏತೇ ಧಾನ್ಯಾನಿ ಖಾದಂತಿ। ವಸ್ತ್ರಾಣಿ ದಶಂತಿ । ಮಾರ್ಜಾರಮವಲೋಕಂತೇ । ಸರ್ವೇ ಭೀತಾಃ ಪಲಾಯಂತೇ ।........

"ಅತ್ರೈವ ಕ್ರೀಡಾಮಃ। ಯೂಯಂ ತಾವತ್ ಕ್ರೀಡತ । ವಯಂ ಪಶ್ಯಾಮಃ। ಏವಮೇವ ಭವತು। ಕಂದುಕ (ಚಂಡು) ಮಾನಯತ। ಕಂದುಕಯಷ್ಟಿಃ ( ದಾಂಡೂ) ಕುತ್ರವರ್ತತೇ? । ಕೃಷ್ಣ ತ್ವಂ ತತ್ರ ತಿಷ್ಠ । ವಯಂ ದೂರಂ ಗಚ್ಛಾಮಃ । ಯೂಯಂ ಸರ್ವೇ ತತ್ರ ತತ್ರ ತಿಷ್ಠತ।.........ಪ್ರತ್ಯಾಗತಃ ಕಂದುಕಃ। ಗೃಹ್ಣೀತ ಗೃಹ್ಣೀತ।......

"ವಯಂ ಕ್ಷುಧಿತಾಃ। ಕಿಂ ವಾಂಛಥ? । ಮಹ್ಯಂ ಪೃಥುಕಾನ್ (ಅವಲಕ್ಕಿ)ದೇಹಿ। ಮಹ್ಯಂ ಲಾಜಾನ್ ದೇಹಿ। ಅಹಂ ತೃಷಿತಃ। ಕಿಂಚಿತ್ ಕ್ಷೀರಂ ದೇಹಿ। ಅತ್ರೋಪವಿಶತ। ಇದಾನೀಂ ಭೋಜನಂ ಕುರುತ । ಅಸ್ಮಭ್ಯಂ ಖಾದ್ಯಮೇವ ಪ್ರಥಮಂ ದೇಹಿ । ಪಶ್ಚಾದ್ಭೋಜನಂ ಕರಿಷ್ಯಾಮಃ ।

ಪಾನಿನ ಕೆಳಗಡೆ ಟಿಪ್ಪಣಿಯಲ್ಲಿ ಸಂಧಿವಿಗ್ರಹಗಳನ್ನು ಮಾಡಿ ತೋರಿಸಿದ್ದಾರೆ.

ಕೆಲವು ಶಬ್ದಗಳನ್ನು ಏರ್ಪಡಿಸಿಕೊಂಡಂತೆಯೂ ಮಾರ್ಪಡಿಸಿಕೊಂಡಂತೆಯೂ ಪ್ರಯೋಗಗಳಿವೆ:—" ಮಷೀಪಾತ್ರಂ, ಮಷೀದಾನೀ; ಸೀಸಕಲೇಖನೀ; ಆಸಂದೀ (ಕುರ್ಚಿ); ರೋಟೀ; ರೋಟಿಕಾ........"

ಕೊನೆಯಲ್ಲಿ ಸ್ವಲ್ಪ ವ್ಯಾಕರಣ ಪ್ರವೇಶವೂ ಬಂದಿದೆ. ಶಬ್ದಕೋಶವನ್ನು ಕೊಟ್ಟಿದ್ದಾರೆ. ಅಕ್ಷರಗಳನ್ನು ಸಾವಕಾಶವಾಗಿ ಕಲಿತುಕೊಂಡರೆ ಸಾಕು ಎಂಬ ಭಾವನೆಯಂತೆ ಕನ್ನಡಲಿಪಿಯಲ್ಲಿಯೇ ಇದೆ. ಸಂಸ್ಕೃತ ಕಲಿಯುವ ಬಾಲಕರಿಗೆ ಬಹಳ ಉಪಯೋಗವಿದೆ ಎಂಬುದರಲ್ಲಿ ಸಂದೇಹವಿಲ್ಲ.

ಗೆಳೆಯರ ಗುಂಪಿನ — ಬೆಲೆ ಹತ್ತು ಆಣೆ.

# ಸ್ವಧರ್ಮ

॥ ತನ್ನ ತಾನರಿದಡೆ ತನ್ನರಿವೇ ಗುರು ॥

ಸಂಪುಟ ೪. ಪ್ರಭವ ಭಾದ್ರಪದ–ಆಶ್ವಿನ ೧೮೪೯. ಸಂಚಿಕೆ ೬–೭.



ಕರ್ನಾಟಕ

## ರಾಷ್ಟ್ರೀಯ ಮಹೋತ್ಸವ.

ಮಾನವಮಿಯ

ಸಂಚಿಕೆ.

ಸಂಪಾದಕರು:— ಕೃಷ್ಣ ಶ್ರೀನಿವಾಸ ಬೆಟಗೇರಿ
ಹನುಮಂತ ಬಳವಂತ ಕೊಣ್ಣೂರ, ಬಿ.ಎ.

# ವಿಷಯ ಪರಿಚಯ.

ಹೊದಿಕೆಯ ಮೇಲಣ ಚಿತ್ರ:—ಪ್ರಾಚೀನ ಶಿಲಾಲಿಪಿಗಳೊಳಗಿನ ಕನ್ನಡ ಅಕ್ಷರಗಳಲ್ಲಿ ಕೆಲ ಸಂಕೇತಗಳನ್ನು ಬರೆದಿದೆ. ಮೇಲ್ಗಡೆಗೆ ನಟ್ಟನಡುವೆ ಶಂಖದಂತಹ ವರ್ತುಲದ ಸುತ್ತು ಚಿಕ್ಕೆಗಳೂ, ಕಿರಣಗಳೂ, ಇದ್ದ ಆಕೃತಿಯು, ಓಂಕಾರವು. ಅದರ ಕೆಳಗಡೆ ಎಡಬಲಕ್ಕೆ ಇದ್ದ ಎರಡು ಗುರುತುಗಳು ನ ಲ್. ಒಟ್ಟಿಗೆ 'ಓಂ ನಲ್' ನಟ್ಟನಡುವಿನ ಕರೆಬಣ್ಣದ ವರ್ತುಲ ಆಕೃತಿಯು ಗುಂಪಿನ ಒಂದು ಕುರುಹು ( Symbol ) ಅದನ್ನು ಸುತ್ತುವರಿದಿರುವ ಬಳ್ಳಿಯು ಶಿಲಾಲಿಪಿಗಳೊಳಗಿನ ಶ್ರೀಕಾರವು.

೧. ರಾಮರಾಜನ ರಣದುಂದುಭಿ :— ಹಿರಿಯರ ಸಾಹಸವನ್ನು ಸ್ಮೃತಿಪಥಕ್ಕೆ ತಂದುಕೊಟ್ಟು ರಾಷ್ಟ್ರೀಯ ಭಾವನೆಯನ್ನು ಉದ್ದೀಪಿಸುವ ರಾಷ್ಟ್ರಗೀತೆ. ಮೇಳಗಳಲ್ಲಿ ಅನ್ನತಕ್ಕುದಾಗಿದೆ.

೨. ಸವಿ :—ಈ ವಿಧದ ಹಾಡುಗಳ ಜಾತಿಯ ಸಮಾಲೋಚನ ಸ್ವಲ್ಪದರಲ್ಲಿ.

೩. ನಾಡಹಬ್ಬದ ಒರೆಗಲ್ಲು :— ಕರ್ನಾಟಕದಲ್ಲಿ ರಾಷ್ಟ್ರೀಯ ಉತ್ಸವವಾಗುವುದರ ವಾರ್ತೆಯನ್ನು ಕೇಳಿ 'ವಿಶ್ವಭಾರತಿ' ಯಲ್ಲಿಯ ಗೆಳೆಯನೊಬ್ಬನು ನಮಗೆ ಬರೆದ ಪತ್ರ. ಕನ್ನಡಿಗರು ಎಷ್ಟು ವಿಮರ್ಶಕದೃಷ್ಟಿಯಿಂದ ತಮ್ಮೆಲ್ಲ ಚಟುವಟಿಕೆಗಳನ್ನು ನೋಡುತ್ತಿರುವರೆಂಬುದಕ್ಕೆ ಒಂದು ಸಾಕ್ಷಿ.

೪. ಬರೇ ನಗಚಾಟಗಿ :—ಸ್ವಲ್ಪ ವಿನೋದ.

೫. ವೇದಕಾಲದ ಶಕ್ತಿಪೂಜೆ :— ವೇದಕಾಲದಲ್ಲಿ ನಮ್ಮವರು ರಾಷ್ಟ್ರೀಯ ಶಕ್ತಿಯನ್ನು ಉಪಾಸನೆಯನ್ನು ಮಾಡುವ ಬಗೆಗೆ.

೬. ಮಾನವಮಿಯೂ ಶಕ್ತಿಮಾತೆಯರೂ :—ವೇದಕಾಲದಿಂದ ಈಗಿನವರೆಗೆ ಶಕ್ತಿಪೂಜೆಯ ಪರಂಪರೆಯನ್ನು ಕೊಟ್ಟು, ವಿಶೇಷತಃ ಕರ್ನಾಟಕದಲ್ಲಿ ರಾಷ್ಟ್ರೀಯ ದೃಷ್ಟಿಯಿಂದ ಮಾನವಮಿಯ ಮಹೋತ್ಸವದ ಪ್ರಾಶಸ್ತ್ಯವನ್ನೂ ಮಹತ್ತ್ವವನ್ನೂ ಸಂಸ್ಕೃತಿಹ, ಧಾರ್ಮಿಕ, ರಾಜಕೀಯ, ಐತಿಹಾಸಿಕ ಪ್ರಮಾಣಗಳಿಂದ ಮಂಡಿಸಿ, ಸಣ್ಣದೊಡ್ಡ ಆಕ್ಷೇಪಗಳನ್ನು ಖಂಡಿಸಿ, ಮಾನವಮಿಯೇ ನಮ್ಮ ನಾಡಹಬ್ಬವಾಗಬೇಕೆಂದು ಪ್ರತಿಪಾದಿಸುವ ಲೇಖನ.

೭. ಮಹಾರಾಷ್ಟ್ರದ ಗಣೇಶೋತ್ಸವದ ಪೂರ್ವಪರಂಪರೆ :— ಇದರಿಂದ ಗಣೇಶೋತ್ಸವವು ಮಹಾರಾಷ್ಟ್ರಕ್ಕಷ್ಟೇ ಹೇಗೆ ಯೋಗ್ಯವಾಗುವುದೆಂಬುದು ವ್ಯಕ್ತವಾಗುವುದು.

ಸ್ಥಧರ್ಮ.

ಕನ್ನಡರಾಜ್ಯರಮಾರಮಣರ ಸ್ಮೃತಿ



ಶ್ರೀಚಾಮುಂಡಿಯ ವರದಹಸ್ತ.

ಓಂ ನಲ್

# ಸ್ವಧರ್ಮ

॥ ಜಯಂ ಭದ್ರಂ ಶುಭಂ ಮಂಗಲಮ್ ॥

ವರ್ಷ—೪ | ಶಕೆ ೧೮೪೯ ಪ್ರಭವ ಸಂವತ್ಸರ ಭಾದ್ರಪದ-ಆಶ್ವೀನ | ಸಂ.—೬-೭

## ರಾಮರಾಜನ ರಣದುಂದುಭಿ !

ತೆಂಕಣನಾಡಿನ ಖಾನರೆಲ್ಲರೂ ಕೂಡಿ, ಕಾಳಗವಾಡಲೆಂದು ಬಂದು, ತಾಳೀಕೋಟೆಯ ಬಳಿಯಲ್ಲಿ ಪಾಳೆಯವನೂರಿದುದನ್ನು ಕೇಳಿ, ವಿಜಯನಗರದ ವೀರರಾಮರಾಯನು ತನ್ನ ಜನರಿಗೆ ಹೇಳಿದ ಹುರಿನುಡಿಗಳಿವು.

೧.

ಏಳಿರೇಳಿರಿ ! ಬಂಟರೆಲ್ಲರು ! ತಾಳಿಕೋಟೆಗೆ ತೆರಳುವಾ !
ಕಾಳೆಗದಿ ಖಾನರನು ಬೀಳಿಸಿ ದೂಳಿಯುಣ್ಣಿಸಿ ಮರಳುವಾ !

ವಿಜಯನಗರದ ವಿಜಯವಾರ್ತೆಯು ಹಲವು ತೆರದಲಿ ಹೆಚ್ಚಿತು.
ನಿಜವು ! ನಮ್ಮಯ ಬಳೆದ ಬಾವುಟ ಹಗೆಗಳೆದೆಯಲಿ ಚುಚ್ಚಿತು.

ಹೇಡಿತನ ಹಿಂಜರಿಯಿತು—ಈ-
ನಾಡಸಿರಿ ಮುಂದರಿಯಿತು—ಪರ-
ನಾಡಿಗರ ಮದ ಮುರಿಯಿತು.

ಬಾಡುತಿದ್ದಾ ವೇದಧರ್ಮವು ಮರಳಿ ಧರೆಯಲಿ ಮೆರೆಯಿತು.
ನಾಡಿನಲಿ ಕಾಡಿನಲಿ ಕೀರ್ತಿಯ ಹಾಡು ಹೊಗಳಿಕೆ ನೆರೆಯಿತು.

ಏಳಿರೇಳಿರಿ ! ಬಂಟರೆಲ್ಲರು ! ತಾಳಿಕೋಟೆಗೆ ತೆರಳುವಾ !
ಕಾಳೆಗದಿ ಖಾನರನು ತುಳಿಯುತೆ ದೂಳಿಯುಣಿಸಿ ಮರಳುವಾ

೨.

ಇದನು ಸಹಿಸದೆ ಖಾನರೆಲ್ಲರು ಕುದಿದು ಖತಿಯಲಿ ಮಿಡುಕುತೆ;
ಎದುರಿಸಲು ಬಂದಿಹರು ಗರುವದಿ ಕದನಕೆಮ್ಮನು ದುಡುಕುತೆ;

ನಮ್ಮ ತೋಳ್ಬಲ ತೋರಿಸಿ—ಹುಲು-
ಹೆಮ್ಮೆಗಾರರ ಹಾರಿಸಿ—ಅವ-
ರುಮ್ಮಳಕೆ ಕಳೆಯೇರಿಸಿ,

"ಸುಮ್ಮಸುಮ್ಮನೆ ಕೆಣಕಿ ಕೆಟ್ಟೆವು ಮಲಗಿದೀ ಕೇಸರಿಗಳ"
"ಅಮ್ಮ! ಅಯ್ಯೋ! ತಪ್ಪು! ಶರಣೆ"ಂದೆನಿಸುವಾ ಕುರಿಮರಿಗಳ.
ಏಳಿರೇಳಿರಿ! ಬಂಟರೆಲ್ಲರು! ತಾಳಿಕೋಟೆಗೆ ತೆರಳುವಾ!
ಕಾಳೆಗದಿ ಖಾನರನು ಕೊಚ್ಚುತೆ ದೂಳಿಯುಣ್ಣಿಸಿ ಮರಳುವಾ!

೩.

ಯಾರು ವೈದಿಕಧರ್ಮದಾ ತಿಳಿನೀರಿನೊಳು ಕೊಳೆ ಬಿಟ್ಟರೋ?
ಯಾರು ಗೋಮಾತೆಯ ಕೊರಳಿನಲಿ ಕೂರ ಚೂರಿಯ ನೆಟ್ಟರೋ?

ಯಾರಿಗಾಗಿಯೆ ಕೆಟ್ಟಿತೋ—ಜನ?-
ಭಾರತಿಯು ಸಿರಿಸುಟ್ಟಿತೋ?—ಬಲ-
ಧೀರತೆಯು ಕೈಬಿಟ್ಟಿತೋ?

ಯಾರು ನಮ್ಮಭಿಮಾನವೆಲ್ಲವ ಸೂರೆಗೈದರೊ ಹಿಂದಕೆ
ಚೋರರವರೇ ಇಂದು ಬಂದಿಹರೇರಿ ಮರಳಿಯು ಮುಂದಕೆ
ಏಳಿರೇಳಿರಿ ಬಂಟರೆಲ್ಲರು ತಾಳಿಕೋಟೆಗೆ ತೆರಳುವಾ!
ಕಾಳೆಗದಿ ಖಾನರನು ದಂಡಿಸಿ ದೂಳಿಯುಣ್ಣಿಸಿ ಮರಳುವಾ!

೪.

ಇವರಿಗಾಗಿಯೆ ಹಿಂದೆ ಹಿರಿಯರು ಬಾಳುವೆಯ ಬಲಿಗೊಟ್ಟರು.
ಇವರಿಗಾಗಿಯೆ ಹಲವು ಸತಿಯರು ಸವೆದು ದೇಹವ ಸುಟ್ಟರು.

ಮಾನದಾಶೆಯ ಬಿಟ್ಟರು—ಅಪ-
ಮಾನದಲಿ ಕಂಗೆಟ್ಟರು—ದು-
ಮ್ಮಾನದಲಿ ಗೋಳಿಟ್ಟರು.

ಕಾನನವ ಸೇರಿದರು ಕೆಲರಭಿಮಾನಕಾಗಿಯೆ ದುಡಿದರು.
ಹಾನಿಲಾಭಗಳೆನದೆ ನಾಡಿನ ಮಾನವುಳುಹಲು ಮಡಿದರು.
ಏಳಿರೇಳಿರಿ! ಬಂಟರೆಲ್ಲರು ತಾಳಿಕೋಟೆಗೆ ತೆರಳುವಾ!
ಕಾಳೆಗದಿ ಹಗೆಗಳನು ಹೊರಳಿಸಿ ದೂಳಿಯುಣ್ಣಿಸಿ ಮರಳುವಾ!

೫.

ಭಾರತದ ಸ್ವಾತಂತ್ರ್ಯ ಬದುಕಿಸೆ ಧೀರವಿದ್ಯಾರಣ್ಯರು
ದಾರಿಯನು ತೋರಿದರು ಕನ್ನಡ ವೀರಗಣಕೆ; ವರೇಣ್ಯರು

ಬುಕ್ಕ ಹರಿಹರರಾಯರು—ಅವ-
ರಕ್ಕರೆಯ ಸಂಗಡಿಗರು—ಮುಂ-
ದಿಕ್ಕಿ ಅಡಿಗಳ ನಡೆದರು.

ಸೊಕ್ಕಿ ಮಿಕ್ಕಿದ ಯವನರೆಲ್ಲರ ದಿಕ್ಕುಗೆಟ್ಟೋಡಿಸಿದರು.
ಕಕ್ಕುಲತೆಯಿಲ್ಲದಲೆ ಮಣ್ಣನು ಮುಕ್ಕಿಸುತೆ ಕೂಡಿಸಿದರು
ಏಳಿರೇಳಿರಿ ! ಬಂಟರೆಲ್ಲರು ! ತಾಳಿಕೋಟೆಗೆ ತೆರಳುವಾ !
ಕಾಳೆಗದಿ ಖಾನರನು ಖಂಡಿಸಿ ದೂಳಿಯುಣ್ಣಿಸಿ ಮರಳುವಾ !

೬.

ದೇವರಾಯನ ವಿಜಯಭೇರಿಯ ಸೋವು ಮುಗಿಲನು ಮುಸುಗಿತು.
ಭೂವರನ ಶ್ರೀಕೃಷ್ಣರಾಯನ ರಣದ ಕಾಳೆಯು ಮಸಗಿತು.

ಹಗೆಗಳನು ಹಿಂಜರಿಸಿತು—ಜಯ-
ದಿಗುವಲಯದಲಿ ಹರಿಸಿತು—ಸಿರಿ-
ಸೊಗದ ಮಳೆಯನು ಸುರಿಸಿತು.

ಮುಗುದೆ-ಮುಗು-ಮು ಒಕರ ಬಳಗ ಕಾಳೆಗಕೆ ಕೈಯನು ನೀಡಿತು.
ಜಗವು ಕನ್ನಡನಾಡ ಕಲಿಗಳ ವಿಗಡಬಿರುದನು ಹಾಡಿತು.
ಏಳಿರೇಳಿರಿ! ಬಂಟರೆಲ್ಲರು! ತಾಳಿಕೋಟೆಗೆ ತೆರಳುವಾ !
ಕಾಳೆಗದಿ ಖಾನರನು ಕುಗ್ಗಿಸಿ ದೂಳಿಯುಣ್ಣಿಸಿ ಮರಳುವಾ !

೭.

ಕಡುಗಲಿಗ ಕನ್ನಡಿಗರಲ್ಲವೆ ನಿಮ್ಮ ಹಿಂದಣ ಹಿರಿಯರು!
ತುಡುಕಿ ಹಗೆಯನು ಜಡಿದು ಎನಿಸಿರಿ "ಹಿರಿಯರಂತೆಯೆ ಕಿರಿಯರು"

ಅದಕೆ ಬೇಗನೆ ಸಾಗಿರಿ—ನೀವ್-
ಬದುಕಿನಾಶೆಯ ನೀಗಿರಿ—ಹಗೆ-
ಗೆದುರಿಸಲು ಮುಂದಾಗಿರಿ !

ಕದನದಲಿ ಕನ್ನಡದ ಕಲಿಗಳ ಎದೆಯ ಕೆಚ್ಚನು ತೋರಿರಿ !
ಎದುರು ಬರುತಿಹ ಖಾನರೆಲ್ಲರ ಸದೆದು ಗೆಲುವನು ಸಾರಿರಿ !
ಏಳಿರೇಳಿರಿ! ಬಂಟರೆಲ್ಲರು! ತಾಳಿಕೋಟೆಗೆ ತೆರಳುವಾ !
ಕಾಳೆಗದಿ ಖಾನರನು ಕೊನಿಸಿ ದೂಳಿಗುಟ್ಟಿಯೆ ಮರಳುವಾ !

೮.

ಬಿಡಿರಿ ಹೊಸಹೆಂಡತಿಯ ಹಂಬಲ ! ಬಿಡಿರಿ ಮಗುವಿನ ಮೋಹವ !
ಬಿಡಿರಿ ಬೇಹಾರಗಳ ಬೆಳೆಹೊಲ ! ಬಿಡಿರಿ ಬಂಧುಸಮೂಹವ !
ಇರಲಿ ! ಕುರಿಮರಿ ದನಗಳು—ಬಿಡಿ-
ಇರಲಿ! ನರಳುವ ಜನಗಳು–ಇರ -
ಲಿರಲಿ ! ಸತ್ತಿಹ ಹೆಣಗಳು !
ಇರಲಿರಲಿ! ತೆರವಿಲ್ಲವೀಗೊಂದರದು ಹಂಬಲಹಿಡಿಯಲು !
ಹೊರಡಿ ! ನಾಡಿನ ಹರಿಬಕಾಗಿಯೆ ರಣದೊಳೆಲ್ಲರು ಮಡಿಯಲು!
ಏಳಿರೇಳಿರ ! ಬಂಟರೆಲ್ಲರು•! ತಾಳಿಕೋಟೆಗೆ ತೆರಳುವಾ•!
ಕಾಳೆಗದಿ ಖಾನರನು ಕತ್ತಿಗೆ ಕೂಳಮಾಡಿಯೆ ಮರಳುವಾ!

೯.

ಕಾದಿ ಅಳಿದರೆ ಸುರರ ವನಿತೆಯರಾದರಿಪರಾ ಲೋಕದಿ
ಕಾದಿ ಗೆಲಿದರೆ ವಿಜಯವಧುವಾರಾಧಿಸುವಳೀ ಲೋಕದಿ
ಕಡುಗ ಹರಿಗೆ ಕಠಾರಿಯು—ಹೊಸ-
ಕೊಡಲಿ ಬಡಿಗೋಲ್ ಚೂರಿಯು—ಕಣೆ
ಮುಡಿಗೆ ಬಿಲ್ ಮೊನೆಹಾರಿಯು-
ಹಿಡಿದು ಝುಳಪಿಸಿ ಹೊರಡಿ ಕೊಳುಗುಳ ಕಸಲಿನೊಳು ಕುಣಿದಾಡಲು !
ಜಡಿದು ಝಾಡಿಸಿ ಯುವನರೆಂಬಾ ಮೊಸಳೆಗಳನೀಡಾಡಲು !
ಏಳಿರೇಳಿರಿ! ಬಂಟರೆಲ್ಲರು ! ತಾಳಿಕೋಟೆಗೆ ತೆರಳುವಾ !
ಕಾಳೆಗದಿ ಹಗೆಪಡೆಯನೆಲ್ಲವ ಹಾಳುಮಾಡಿಯೆ ಮರಳುವಾ !

೧೦.

ಕಾಳೆಕೊಂಬು-ತುತೂರಿ ತಮ್ಮಟಿ-ಭೇರಿದುಂದುಭಿ ಮೊಳಗಿರಿ !
ಏಳಿ ! ಕನ್ನಡ ನಾಡಗುಡಿಯನು ಬಾನಬಯಲಲಿ ಬೆಳಗಿರಿ !
"ಜಯವು ಜಯ ! ಭುವನೇಶ್ವರೀ !—ಜಯ
"ಜಯವು ! ಹಂಪೆಯಧೀಶ್ವರೀ!—ಜಯ-
"ಜಯವು ಶ್ರೀ ಮಾಹೇಶ್ವರೀ ! "
"ಜಯ ಜಯವು! ಪಂಪಾಪತೇ! " ಎಂದಿನಿತು ಜಯವನು ಮೊರೆಯಿರಿ!
ಭಯವನಿಲ್ಲಿಂಪೆ ಬಡುತೆ ಕಳನೊಳು ಕಾದಿ ಕತೆಯೊಳು ಮೆರೆಯಿರಿ!
ಏಳಿರೇಳಿರಿ! ಬಂಟರೆಲ್ಲರು! ತಾಳಿಕೋಟೆಗೆ ತೆರಳುವಾ!
ಕಾಳೆಗದಿ ಕೈದೋರಿ ಖಾನರ ದೊಳೆಗೂಡಿಸಿ ಮರಳುವಾ!

— ಆನಂದಕಂದ,

ಸವಿ :— ಇದೊಂದು ನಾಟ್ಯಗೀತೆಯೆನ್ನಬಹುದು. ಆಗಿನಕಾಲದಲ್ಲಿ ವಿಜಯ ನಗರದ ಮೇಲೆ ದಂಡೆತ್ತಿ ಬಂದಾಗ ಜನರನ್ನು ಹುರಿದುಂಬಿಸಿ ಏಳಿಸಿದ ರಾಮ ರಾಯನ ಹೃದಯಸ್ಫೂರ್ತಿಯ ನಟನೆ. ಆ ಸ್ಫೂರ್ತಿಗೆ ತಕ್ಕುದಾಗಿಯೆ ಈ ವೃತ್ತ ವನ್ನಾಯ್ದುಕೊಂಡಿದೆ. ಈ ರೀತಿಯ ಧಾಟಿ ಶ್ರೀ. ಪಂಜೆ ಮಂಗೇಶರಾಯರ ಹುತ್ತರಿಯ ಹಾಡಿ'ನಲ್ಲಿ ಜನ್ಮತಳೆದು 'ಶ್ರೀ' ಇವರ 'ಭಾರತಗೀತೆ'ಯಲ್ಲಿ ಬಳೆದು ಈ ರಣದುಂದುಭಿ'ಯಲ್ಲಿ ಕಳೆಗೊಂಡಿದೆ. ಮತ್ತೊಂದೆಡೆಗಿರುವ 'ದಿಗ್ವಿಜಯದ ನೆರವಿ' ಯಲ್ಲಿ ಇದು ಒಡಮೂಡಿದೆ. ಗಮಕಿಯು ಹಾಡಿ ತೋರಿಸಿದರೆ ಕಾಳಗದ ಮುನ್ನಿನ ಆವೇಶಕ್ಕೆ ಈ ಧಾಟಿಯು ಎಷ್ಟೊಂದು ಒಪ್ಪುವುದೆಂಬುದು ಗೊತ್ತಾಗುವುದು ಶಬ್ದಗಳು ಕ್ಲಿಷ್ಟವಾಗಿಲ್ಲ. ಸಾಮಾನ್ಯರಿಗೂ ಸಹಜವಾಗಿ ತಿಳಿಯುವಂತಿದೆ. ಇಂಥಲ್ಲಿ ಸೌಲಭ್ಯವೆ ಲೇಸು.

## ನಾಡಹಬ್ಬದ ಒರೆಗಲ್ಲು

**ಶ್ರೀ. ಸ್ವಧರ್ಮ ಸಂಪಾದಕರಿಗೆ** ಸಾ. ನ. ವಿ. ವಿ.

ಇಂದು ಕನ್ನಡಿಗರು ತಮ್ಮ ಸಂಸ್ಕೃತಿಯನ್ನು ಎತ್ತಿಹಿಡಿಯುವದಕ್ಕೆ ಮಾಡುತ್ತಿರುವ ಎಷ್ಟೋ ಪ್ರಯತ್ನಗಳಲ್ಲಿ ನಾಡಹಬ್ಬವನ್ನು ಜರುಗಿಸುವದು ಒಂದು. ಬರೀ ಇಷ್ಟೇ ಅಲ್ಲ. ಅಂಥ ಸಂಸ್ಕೃತಿಯ, ಉಜ್ಜೀವನದ ಕಾರ್ಯದಲ್ಲಿ ನಾಡಹಬ್ಬವೊಂದು ಜೀವಾಳದ ಮಾತು. ಸಂಸ್ಕೃತಿಯುಜ್ಜೀವನಕ್ಕಾಗಿಯೇ, ಭಾಷೆಯ ಬೆಳವಣಿಗೆ, ಕರ್ನಾಟಕದ ಏಕೀಕರಣ, ಕರ್ನಾಟಕ ವಿಶ್ವವಿದ್ಯಾಪೀಠ ಮೊದಲಾದ ಎತ್ತುಗಡೆಗಳು ನಡೆದದ್ದು. ಈ ಎತ್ತುಗಡೆಗಳನ್ನು ಹಳ್ಳಿಯ ಜನರ ಹೃದಯಕ್ಕೆ ಹತ್ತುವಂತೆ ಮಾಡುವದು ಬಿರಿ. ಆದರೆ ನಾಡಹಬ್ಬಕ್ಕೆ ಕೊಂಚ ಜಾತ್ರೆಯ ರೂಪನ್ನು ಕೊಟ್ಟುಬಿಟ್ಟರೆ, ಅದು ಹಳ್ಳಿಯವರೆದೆಗೂ ತಟ್ಟುವದು. ಈ ಹಬ್ಬದಿಂದ, ನಾವು ಬಲು ಸುಲಭವಾಗಿ ಹಳ್ಳಿಯುವರಲ್ಲಿಯೂ ನಾಡಿಗತನವನ್ನು ಹುಟ್ಟಿಸಬಹುದು.

ಈ ರೀತಿಯಿಂದ ಇಂಥದೊಂದು ಹಬ್ಬದ ಹೂಟವನ್ನು ಹೂಡಿದ್ದು ಕರ್ನಾಟಕದ ಮೇಲೆ ದೊಡ್ಡದೊಂದು ಉಪಕಾರವೇ ಸರಿ. ಇದು ಜಾಗೃತಿಯ ದ್ಯೋತಕವು. ಇಂಥ ಹಬ್ಬದ ಅವಶ್ಯಕತೆಯು ಅಷ್ಟಿಷ್ಟು ಇತ್ತೆಂದಲ್ಲ. ಭಾರತದಲ್ಲಿ ಯಾವ ಪ್ರಾಂತದಲ್ಲಿಯೂ ಈ ವಿಚಾರ, ಈ ರೀತಿಯಲ್ಲಿ ಇನ್ನೂ ನೆಲೆದೋರಿದಂತಿಲ್ಲ; ತೋರಿದ್ದರೂ ಇನ್ನೂ ಕಾರ್ಯದಲ್ಲಿಳಿದಿಲ್ಲ. ಮಹಾರಾಷ್ಟ್ರದಲ್ಲಿ ಲೋಕಮಾನ್ಯರು ಗಣೇಶೋತ್ಸವವನ್ನು ಮೊದಲು ಮಾಡಿದ್ದು ಸಂಸ್ಕೃತಿಯ ದೃಷ್ಟಿಯಿಂದಲ್ಲ; ಆದರೆ ಕೇವಲ ರಾಷ್ಟ್ರ

ಜಾಗ್ರತೆಯ ದೆಸೆಯಿಂದ. ಆ ಉತ್ಸವವು ಇನ್ನೂ ನಡೆಯುತ್ತಲಿದ್ದರೂ ಅದರ ಉದ್ದೇಶ ತಾತ್ಪೂರ್ತಿಕವಾದದ್ದು. ಆದರೆ ಕನ್ನಡನಾಡಿನಲ್ಲಿ ಮೊದಲುಗೊಂಡ ನಾಡಹಬ್ಬದ ಗುರಿಯು ರಾಷ್ಟ್ರಜಾಗೃತಿಯಷ್ಟೇ ಅಲ್ಲ; ರಾಷ್ಟ್ರಸಂಸ್ಕೃತಿಯ ಪರಿಪಾಲನೆ ಹಾಗೂ ಪರಿಪೋಷಣೆಗಳೂ ಗುರಿಯಾಗಿವೆ. ಆದ್ದರಿಂದ ಈ ಹಬ್ಬವು, ನಿರಂತರವಾದದ್ದು.

ಹೀಗೆ ನಿರಂತರವಾಗಬೇಕೆನ್ನುವ ಹಬ್ಬವು ನಿಜವಾಗಿಯೂ ನಿರಂತರವಾಗಬೇಕಾದರೆ ಆರಂಭದಲ್ಲಿ, ಅದರ ಹೊಟ್ಟೆಯಲ್ಲಿ ಬಲುದಿನ ಬಾಳುವ ಹುದುವನ್ನೂ ತುಂಬಬೇಕು. ಎಂದರೆ, ಅದರಲ್ಲಿ ಸಂಸ್ಕೃತಿಯೆಂಬ ಆತ್ಮಶಕ್ತಿಯೊಡನೆ ಬಲವಾದ ದೇಹಶಕ್ತಿಯನ್ನು ಉಂಟುಮಾಡಬೇಕು. ಎಂದರೆ ಅದರಲ್ಲಿ ತೇಜಸ್ಸು-ಓಜಸ್ಸುಗಳೆರಡೂ ಒಂದಿ ಅಚ್ಚಳಿಯದುಳಿಯುವವು. ಅದಕ್ಕೆ ನಾವು ಹಾಕುವ ತಳಹದಿಯು ಗಟ್ಟಿಯಾಗಿರುವದೇ ಮುಖ್ಯ.

ತಳಹದಿಯು ಗಟ್ಟಿಯಾಗಬೇಕಾದರೆ, ನಡುವೆ ಪೊಳ್ಳುಗಳುಳಿಯದಂತೆ ನೋಡಿಕೊಳ್ಳಬೇಕು. ಆದಷ್ಟು ಜಾಗ್ರತೆಯಿಂದ, ಸಾಧ್ಯವಾದ ಮಟ್ಟಿಗೆ ಮುನ್ನೋಡಿ ಈಗ ಹಬ್ಬಕ್ಕೆ ರೂಪು ಕೊಡಬೇಕು. ಈ ಹಬ್ಬವು ನಿರಂತರವಾಗಬೇಕಾದರೆ, ಸಾಧ್ಯವಾದ ಮಟ್ಟಿಗೆ ಅದು ತ್ರಿಕಾಲಾಬಾಧಿತವಾಗುವಂತೆ ಈಗಲೇ ಜೋಡಣೆಗಳನ್ನು ಮಾಡಬೇಕು. ಕೈಲಾದಮಟ್ಟಿಗೆ ಕೊಂಕುಕೊಸರುಗಳುಳಿಯದಂತೆ ಯತ್ನಿಸಬೇಕು. ಇದನ್ನೂ ಮೀರಿ, ಮಾರ್ಪಾಡುಮಾಡಬೇಕೆಂದರೆ ನಮ್ಮ ಮುಂದಿನವರು ಇದ್ದೇ ಇರುವರು.

ಈ ನಿಟ್ಟಿನಿಂದ ವಿಚಾರಮಾಡಿ, ನಮ್ಮ ಮುಂದಿನ ನಾಡಹಬ್ಬವು, ಹೇಗೆ ರೂಹುಗೊಳ್ಳಬೇಕೆಂಬದರ ರೇಷೆಗಳನ್ನು ಹಾಕಲು ಯತ್ನಿಸುವದೇ ಈ ಬರೆಹದ ಗುರಿ. ಈ ವಿಚಾರದಲ್ಲಿ ಇದೊಂದು ಸೂಚನೆ. ಇಂಥ ಸೂಚನೆಗಳು ಬಂದಮೇಲೆ ಆ ಸೂಚನೆಗಳ ತಿರುಳೇ ಕಡೆಗೆ ನಿರ್ಧಾರವಾಗುವದು.

(೧) ನಾವು ಮಾಡಬೇಕೆನ್ನುವ ನಾಡಹಬ್ಬವು ಏಕಧರ್ಮೀಯವಾಗಿರಬಾರದು. ಏಕೆಂದರೆ, ಮೊದಲಿನಂತೆ ನಾಡುಗಳ ಸಂಸ್ಕೃತಿಯು ಈಗ ಬರೇ ಧರ್ಮವನ್ನೇ-ಒಂದೇ ಧರ್ಮವನ್ನೇ ತಳಹದಿಯನ್ನಾಗಿಟ್ಟುಕೊಂಡಿಲ್ಲ. ಇಂದು ನಮ್ಮ ಕನ್ನಡನಾಡ ಸಂಸ್ಕೃತಿಗೆ ಹಿಂದುಗಳು, ಲಿಂಗಾಯತರು, ಜೈನರು, ಬೌದ್ಧರು, ಮುಸಲ್ಮಾನರು, ಕ್ರಿಶ್ಚನ್ನರು-ಇವರೇ ಮೊದಲಾದವರೆಲ್ಲರೂ ಆಧಾರಸ್ತಂಭರಾಗಿರುವರು. ಕಾರಣ ಹಬ್ಬವು ಬರೀ ಹಿಂದುಗಳದಾಗಲೀ, ಜೈನರದಾಗಲೀ, ಮುಸಲ್ಮಾನರದಾಗಲೀ ಆದರೆ ನಡೆಯುವಂತಿಲ್ಲ. ಆದ್ದರಿಂದಲೇ ನಾಡಹಬ್ಬವು, ಧಾರ್ಮಿಕ ಹಬ್ಬಕ್ಕಿಂತ ಬೇರೆಯೊಂದು ವೈಶಿಷ್ಟ್ಯವುಳ್ಳದ್ದಿರುವದರಿಂದ ಅದು ಏಕಧರ್ಮೀಯವಾಗಬಾರದು. ಇದಕ್ಕೆ, ನಾಡಿನಲ್ಲಿ ಬಹುಮತವುಳ್ಳವರದೇ ಮೇಲ್ಮೈಯಾಗುವದು ಸ್ವಾಭಾವಿಕವಾದ್ದರಿಂದ, ವಿವಾದ

ನಲ್ಲಿ ಬಹುಮತದಂತೆ ನಡೆಯುವದೇ ಲೇಸೆಂದು ಸಮಾಧಾನ ಹೇಳಬಹುದು. ಹಾಗಾಗ ಬಹುದಾದರೂ, ಹಬ್ಬಕ್ಕೆ ಏಕಧರ್ಮೀಯ ಸ್ವರೂಪವನ್ನು ಕೊಡದೆ, ಒಂದು ಸಮ ನ್ವಯದ ಮಾರ್ಗಹುಡುಕಿ ತೆಗೆಯುವದು ಹೆಚ್ಚು ಸಯುಕ್ತಿಕವು.

ಹೀಗಾಗಬೇಕಾದರೆ ಹಬ್ಬಕ್ಕೆ ಒಂದುತರದ ವಿಶ್ವಧರ್ಮದ ಬೆಂಬಲವಿರಬೇಕು. ಹಬ್ಬವು ಕೇವಲ ಧಾರ್ಮಿಕವಾದರೆ ಇದಕ್ಕೆ ವ್ಯತ್ಯಯವುಂಟಾಗುವದು. ಧಾರ್ಮಿಕ ಭಾವನೆಯು ಬಹಿರಂಗವಾಗಿ ಕಾರ್ಯತಃ ಒಡೆದು ತೋರುವದಕ್ಕಿಂತ ಅಂತರಂಗವಾಗಿ ಸ್ವತಃ ಹಬ್ಬದ ಹೊಟ್ಟೆಯೊಳಗೆ ಒಡಮೂಡಿಕೊಂಡಿರಬೇಕು. ಯಾವದೊಂದು ಧರ್ಮದವರು, ತಮ್ಮ ರೀತಿಯಲ್ಲೇ ಹಬ್ಬವು ನಡೆಯಬೇಕೆಂಬ · ಹಟತೊಡುವ ಪ್ರಸಂಗ ಬಂದಿರಬಾರದು. ಎಲ್ಲರೂ ಸೋತು, ಒಟ್ಟಿನಲ್ಲಿ ಗೆದ್ದಿರಬೇಕು. ಒಂದು ಪಂಥದವರು ಹಟತೊಡುವದಕ್ಕೆ ಅನುವುಂಟಾದರೆ, ಹಬ್ಬವು ಚಿರಂಜೀವಿಯಾಗ ಲಾರದು.

(೨) ಹಾಗೆಯೇ, ಮೂರ್ತಿಪೂಜೆ, ವಿಶಿಷ್ಟದೇವತಾಪೂಜೆಗಳಿಗೆ ಪ್ರಾಮುಖ್ಯ ವಿರಬಾರದು. ಬೇರೆ ಬೇರೆ ಪಂಥದವರು, ಇಂಥವುಗಳಿಗೆ ಬಿಡಿಯಾಗಿ ಪ್ರಾಮುಖ್ಯತೆ ಯನ್ನು ಕೊಟ್ಟರೆ ಕೊಡಲಿ. ಇಡಿಯಾಗಿ ಮೂಡಬೇಕೆನ್ನುವಾಗ ಇವುಗಳಿಗೆ ಪ್ರಾಮು ಖ್ಯತೆ ಕೊಟ್ಟರೆ ತಂಟೆಗೆ ದಾರಿಯಾಗಬಹುದು. ಅಲ್ಲದೆ ಇಂಥ ಪ್ರಾಮುಖ್ಯತೆಯು, ಹಬ್ಬಕ್ಕೆ ಏಕಧರ್ಮೀಯ ಸ್ವರೂಪವನ್ನುಂಟುಮಾಡುವದು.

ವಿಶಿಷ್ಟದೇವತಾಪೂಜೆಗೆ ಆಸ್ಪದವಿರಬಾರದಾದರೂ, ಹಬ್ಬವು ಇಡೀಕಿಡೀ ನಾಡ ದೇವಿಗೇ ಸಮರ್ಪಿತವಾಗಿರಬೇಕು. ಆ ಹಬ್ಬದಲ್ಲಿ ನಾಡದೇವಿಯ ಆರಾಧನೆ-ಉಪಾಸ ನೆಗೆ-ಪೂಜೆಗಲ್ಲ-ಪ್ರಾಮುಖ್ಯತೆಯಿರಬೇಕು. ಇದರಿಂದ ನಾಡದೇವಿಯ ಮಂದಿರವೂ, ಅವಳ ಮೂರ್ತಿಪೂಜೆಯೂ ಅವಶ್ಯವಾಗಿ ಆಗೇ ತೀರಬೇಕೆಂದಲ್ಲ. ಅದು ಇದ್ದರೂ- ಅರ್ಥಾತ್ ಬಿಡಿಯಾಗಿ-ವ್ಯತ್ಯಯವೇನಿಲ್ಲ. ಉದಾಹರಣೆಗೆ, ಆರಾಧನೆಯಲ್ಲಿ ಮೂರ್ತಿ ಪೂಜೆಗೂ ಮಹತ್ವ ಕೊಡುವ ಹಿಂದುಗಳು, ನಾಡದೇವಿಯ ರಥೋತ್ಸವವನ್ನು ಮಾಡ ಬಹುದು. ಅದರಂತೆ ಅನ್ಯಧರ್ಮೀಯರು ತಮ್ಮ ರೀತಿಯಲ್ಲಿಯೂ ಉತ್ಸವಮಾಡ ಬಹುದಾದರೂ, ಒಟ್ಟಿನ ಹಬ್ಬದಲ್ಲಿ ಅವು ಅಷ್ಟೊಂದು, ಪ್ರಸ್ತ ಜೆಳೆಸಿಕೊಳ್ಳಬಾರದು. ಎಲ್ಲರಿಗೂ ಸಮನ್ವಯವಾಗುವ ನಾಡದೇವಿಯ ಆರಾಧನೆಯು ಇದ್ದೇ ತೀರಬೇಕು. ಮನುಷ್ಯನಿಗೆ ನಾಡದೇವಿಯ ಸಂಬಂಧವಿರುವದು ಧಾರ್ಮಿಕರೀತಿಯಿಂದಲ್ಲ; ನಾಡಿಗ ತನದ ರೀತಿಯಿಂದ. ನಾನು ಇಂದು ಎಂಥ ಘೋರ ಅಧರ್ಮಿಯಾದರೂ, ಕನ್ನಡ ನಾಡು ನನ್ನದೆನ್ನುವ, ಅದರ ಸೇವೆಮಾಡುವ, ಅದಕ್ಕಾಗಿ ಮಡಿಯುವ ಅಧಿಕಾರವು ನನಗೆ ಎಂದಿಗೂ ಇದ್ದೇ ತೀರುವದು. ಎಂದ ಮೇಲೆ ನಾಡದೇವಿಯ ಆರಾಧನೆಯು ಏಕಧರ್ಮೀಯತೆಗೆ ಒಯ್ದೀತೆಂಬ ಭಯವಿಲ್ಲ.

( ೩ ) ನಾಡಹಬ್ಬಕ್ಕೆ ಸಾಮಾಜಿಕತೆಯ ಕಳೆಯಿರಬೇಕು. ಅದಕ್ಕೆ, ಹಿಂದೆ ವಿಶ್ವಧರ್ಮದ ಹಾಗೂ ರಾಜಕೀಯತೆಯ ಬೇರೆಬೇರೆ ಬಣ್ಣಗಳನ್ನು ಸೂಕ್ಷ್ಮವಾಗಿ ಬೆರೆಸಿರಬೇಕು. ಸಮಾಜವೆಂದರೆ ನಾಡಿನ ವ್ಯಕ್ತಸ್ವರೂಪವಷ್ಟೇ. ಆ ಇಡಿ ಸಮಾಜವೇ ಈ ಹಬ್ಬದಲ್ಲಿ ಪಾಲುಗೂಡಿರಬೇಕು. ಇಡೀ ಸಮಾಜವೇ ಇತ್ತ ಹೊರಳಬೇಕೆಂದರೆ, ಅದನ್ನು ಎಳೆದುಕೊಳ್ಳುವಂಥ ಸಂಗತಿಗಳು ಹಬ್ಬದಲ್ಲಿ ಅಡಕವಾಗಿರಬೇಕು. ಎಂದರೆ ಹಬ್ಬವು ಒಂದು Social Entertainment ಇದ್ದಂತಿರಬೇಕು. ಹಲವು ತರದ ಸಂಗತಿಗಳಿಂದ ಕೂಡಿ ಮನರಂಜಕವಾಗುವಂತಿರಬೇಕು. ಹಬ್ಬವು ಒಬ್ಬ ಗಂಭೀರ ನಾದ, ಮೋರೆಗಂಟಿಕ್ಕಿದ ಮುದುಕನಂತಿರದೆ, ಚಕ್ಕಂದ ಚಿಳ್ಳನಂತೆ ಚೆಲುವಾಗಿರಬೇಕು.

( ೪ ) ಬೇರೆ ಮಾತಿನಲ್ಲಿ ಹೇಳುವದಾದರೆ, ಈ ಹಬ್ಬವು, ಒಂದು ಸುಶಿಕ್ಷಿತವಾದ ನೀತಿಬೋಧಕವಾದ, ಸುಸಂಸ್ಕೃತವಾದ (Academic ಇಲ್ಲ Educational Fertival ) ಆಗಿರಬೇಕು. ಈಗಿನ ಜಾತ್ರೆಯ ಅನುಕರಣೀಯವಾದ ಪದ್ಧತಿಯನ್ನೂ ಶಿಕ್ಷಿತಸಂಸ್ಥೆಗಳ ಉತ್ಸವಗಳನ್ನೂ ಸಮರಸವಾಗುವಂತೆ ಹೊಂದುಗೂಡಿಸಿ, ಈ ಹಬ್ಬದ ರೂಪನ್ನುಂಟುಮಾಡಬೇಕು. ನಾಡಹಬ್ಬವೆಂದರೆ, ಬರೇ, ಮಾತುಬುರುಕರ, ತಲೆ ಹಿಡಿಯುವ ಭಾಷಣ ( boring lectures ) ಗಳ ಮಾಲೆಯಾಗಿರದೆ, ಅದು ಚಿತ್ತಾಕರ್ಷಕವಾಗಿರಬೇಕು.

ಈ ಹಬ್ಬದಲ್ಲಿ, ನಮ್ಮ ಹಿರಿಯರ ಪೂರ್ವಪದ್ಧತಿಗಳನ್ನೂ ಅವಶ್ಯವೆನಿಸಿದ ಹೊಸ ಪದ್ಧತಿಗಳನ್ನೂ ಸೇರಿಸಿ ಸಮನ್ವಯಿಸಬೇಕು. ಇದರಿಂದ, ಹಬ್ಬದ ಸಾಂಸ್ಕೃತಿಕ ಸ್ವರೂಪಕ್ಕೆ ಕಳೆಬರುವದು.

( ೫ ) ಮೇಲೆ ಹೇಳಿದಂತೆ ಹಬ್ಬವು ಸಂಸ್ಕೃತಜಾತ್ರೆಯಾಗಿರಬೇಕಾದರೆ, ಅದರಲ್ಲಿ ಶ್ರೀಮಂತರಂತೆ ಬಡವರಿಗೂ, ಅಕ್ಕರಿಗರಂತೆ ಬೆಳ್ಳಕ್ಕರಿಗರಿಗೂ ಭಾಗತೆಗೆದುಕೊಳ್ಳಲು ಬರುವಂತಿರಬೇಕು. ಹಬ್ಬವೂ ಸಾಮಾಜಿಕವಾದಂತೆ ಸಾರ್ವಜನಿಕವಾಗಬೇಕು. ಕನ್ನಡನಾಡು, ಮುಖ್ಯವಾಗಿ ಒಕ್ಕಲುತನದ್ದಾದ್ದರಿಂದ, ಒಕ್ಕಲಿಗರಿಗೆ ಮುಖ್ಯಸ್ಥಾನನ್ನು ಕೊಡದಪಕ್ಷದಲ್ಲಿ, ಹಬ್ಬವು ನಾಡಹಬ್ಬವೆನ್ನಿಸಿಕೊಳ್ಳಲೇ ಆರದು. ಹಾಗೆಯೇ ಕೈಗಾರಿಕೆಯವರಿಗೂ ಇನ್ನುಳಿದ ಉದ್ದಿಮೆಯವರಿಗೂ ಅಷ್ಟೇ ಮಹತ್ವದ ಭಾಗವಿರಬೇಕು. ಒಕ್ಕಲುತನದ ಪ್ರದರ್ಶನ, ಎತ್ತು ಕುದುರೆಗಳ ಪಂದ್ಯಾಟ, ಕೈಗಾರಿಕೆಯ ಪ್ರದರ್ಶನ, ಸಾಹಿತ್ಯಪ್ರದರ್ಶನ ಮೊದಲಾದವುಗಳಾಗಬೇಕು.

ಇದರಂತೆ ಈ ಹಬ್ಬವು ತರುಣರ ಹಬ್ಬವೂ ಆಗಿರಬೇಕು, ವ್ಯಾಯಾಮ, ಕುಸ್ತಿ ಸರ್ಕಸ್ಸುಗಳು, ನಾಟಕಗಳು, ಮ್ಯಾಚ್ಚು ( Match )ಗಳು, ಮೇಳಗಳು, ಇನ್ನೂ ಹಲತೆರದ ಆಟಪಾಟಗಳು, ಇದರಲ್ಲಿ ಸೇರ್ಪಡೆಯಾಗುವಂತಿರಬೇಕು. ಅಲ್ಲದೆ, ಈ ಹಬ್ಬವು ಶಾಲೆಯ ಶಿಕ್ಷಕರಿಂದ ಹುಡುಗರ ಮುಖಾಂತರ ಮಾಡಿಸಲ್ಪಡಬೇಕು. ಇದ

ರಿಂವಲೂ ಹಬ್ಬದ ಸಾಂಸ್ಕೃತಿಕ ಸ್ವರೂಪಕ್ಕೆ ಕಳೆಬರುವದುಂಟು. ಅಲ್ಲದೆ ಯೋಗ್ಯ ರೀತಿಯಿಂದ ಏರ್ಪಾಡುಮಾಡಿಕೊಟ್ಟರೆ, ಕೆಲಸನೀಗಿಸುವ ಕುವತ್ತನ್ನೂ ಸಾಲೆಯ ಹುಡುಗರಲ್ಲಿ ಸಹಜವಾಗಿ ಕಾಣಬಹುದು.

(೬) ಇದು ನಾಡಹಬ್ಬವೆಂದಮೇಲೆ ಇದರಲ್ಲಿ ನಾಡಗುಡಿಗೆ (National Flag) ಮೊದಲಸ್ಥಾನ. ಈ ಗುಡಿಯು ಒಂದು ಚಿಕ್ಕ ಅರಿವೆಯ ತುಂಡಾದರೂ ಅದರ ಮಾನಕ್ಕಾಗಿ ರಾಷ್ಟ್ರಗಳು ಸೋತದ್ದುಂಟು ಗೆದ್ದದ್ದುಂಟು; ಅಳಿದದ್ದುಂಟು ಬೆಳೆದ ದ್ದುಂಟು; ಕಡಿದದ್ದುಂಟು, ಮಡಿದದ್ದುಂಟು. ಏಕೆಂದರೆ ಅದರಲ್ಲಿದೆ ಅಂಥ ಮಹಾತ್ಮ್ಯ. ಆ ಅರಿವೆಯ ತುಂಡು, ನಾಡಿಗತನದ ಕುರುಹು; ಜನಾಂಗದ ಕುರುಹು, ಸಂಸ್ಕೃತಿಯ ಕುರುಹು; ವಿಜಯಧ್ವಜವು ನಮ್ಮ ವಿಜಯಿನೃಪರದಿದು, ಎಂದು ಅದಕ್ಕಾಗಿ ಮಡಿದ ಗಂಡುಗಲಿಗಳ ಕೆಚ್ಚೆದೆಯ ಕುರುಹು. ಇಂಥದಿರದಿದ್ದ ನಾಡಹಬ್ಬ ನಾಡಹಬ್ಬವಲ್ಲ. ಆದರೆ... ದುರ್ದೈವ! ಇದೀಗ ಎಷ್ಟರಮಟ್ಟಿಗೆ ಸಾಧ್ಯವೋ ನಾನರಿಯೆ.

(೭) ಮತ್ತೊಂದು ಒತ್ತಿ ಹೇಳುವ ಮಾತೆಂದರೆ, ಹಬ್ಬ ಹೋಳಿಗೆಗಳೆಂದರೆ ವಾಗರ್ಥಗಳಂತೆ ಹೊಂದಿಕೊಂಡಿವೆಯೆಂದು ಕನ್ನಡಿಗರ ಸದ್ಯದ ಕಲ್ಪನೆ. ಬೇಕಾದ ಹಬ್ಬವಾದರೂ ಸಮೀಚೀನಭೋಜನವಿರದಿದ್ದರೆ ಹಬ್ಬವೇ ಅಲ್ಲ. ಬುಂದೇದುಂಡಿಯ ಭುಜಂಗನಂತೆ ತಿಂದು ಹಬ್ಬದ ದಿನ ಹೊಟ್ಟೆಯುಬ್ಬಿಸಿಕೊಂಡು ಹೊರಳಾಡುವಾಗ ದೇವರೂ ಧರ್ಮವೂ ಹಳ್ಳಾಹಿಡಿದು ಬಿಟ್ಟಿರುತ್ತವೆ. ಇಂಥ ಕೇಡು, ತಿನಿಸಿನದು; ಕಾರಣ ಈ ಹಬ್ಬದಲ್ಲಾದರೂ ಪ್ರಸ್ತುಪ್ರಯೋಜನಗಳಿಗೆ ಆದಷ್ಟುಮಟ್ಟಿಗೆ ಸ್ಥಳಯಿರಬಾರದು.

(೮) ಈ ರೀತಿಯಲ್ಲಿ ಹಬ್ಬದ ಏರ್ಪಾಡಾಗುವದೇ ಆದರೆ ಇನ್ನೆರಡು ಮಾತು ಗಳು ಮುಂದೆ ಬರುವವು. (೧) ಇಂಥ ಹಬ್ಬಗಳಲ್ಲಿ ಬಹು ಜನರು ಒತ್ತಟ್ಟಿಗೆ ಕೂಡು ವದರಿಂದ ಈ ಹಬ್ಬಗಳು ಹವೆ ಅನುಕೂಲವಾದಕಾಲದಲ್ಲಿ ನಡೆಯಬೇಕು. (೨) ಎಲ್ಲ ಜನರು ಎಲ್ಲ ರೀತಿಯಿಂದಲೂ ಈ ಹಬ್ಬದಲ್ಲಿ ಭಾಗತೆಗೆದುಕೊಳ್ಳಬೇಕೆಂದಿರುವದರಿಂದ ಇಂಥ ಹಬ್ಬಗಳು ಸಾಮಾನ್ಯವಾಗಿ ಎಲ್ಲ ಜನರಿಗೂ ಬಿಡುವಿದ್ದ ಕಾಲದಲ್ಲಿಯೇ ಆಗಬೇಕು.

(೯) ಇನ್ನು ಯಾವದೊಂದು ನಾಡ ಹಬ್ಬವು ಆ ದೇಶಕ್ಕೆ ಏಕವೈಶಿಷ್ಟ್ಯವುಳ್ಳದ್ದು (Unique) ಆಗಿರಬೇಕು. ಇಲ್ಲದಿದರೆ ಎಲ್ಲರೂ ಮಾಡುವ ಹಬ್ಬ ಆ ನಾಡಿನದು ಹೇಗೆ ? ಆ ನಾಡಿಗೇನೇ ವಿಶಿಷ್ಟವಾಗಿದ್ದಲ್ಲಿ, ಆ ನಾಡಿನ ಜನರು ಸ್ವಾಭಾವಿಕವಾಗಿಯೇ ಅದನ್ನು ತಮ್ಮದೆಂದು ಹಚ್ಚಿಕೊಂಡು ಅಭಿಮಾನಪಡುವರು. ಎಲ್ಲರಿಗೂ ಸಾಮಾನ್ಯ ವಾದದ್ದು ವಿಶೇಷ ಅಭಿಮಾನವನ್ನು ಹುಟ್ಟಿಸದು. ನದಿಗಳೇನು ? ಎಲ್ಲೆಡೆಯಲ್ಲೂ ಇರು ವವು. ಆದರೆ ಗೆರೆಸಪ್ಪೆಯ ಓರಿಗೆಗೆ ನಿಲ್ಲುವ ತಡಸಲು ಇಡೀ ಜಗತ್ತಿನಲ್ಲಿ ಒಂದೋ ಎರಡೋ ? ಅಂತೇ ಗೆರಸಪ್ಪೆಯು ಕನ್ನಡಿಗರ ಅಭಿಮಾನಕ್ಕೆ ಒಪ್ಪತಕ್ಕಂಥಾದ್ದು.

*

ಆದುದರಿಂದ ನಾಡಹಬ್ಬದಂಥ ಹಬ್ಬವು ವಿಶಿಷ್ಟವಾಗಿದ್ದು, ವಿಶೇಷತಃ ಆ ನಾಡಿನವರಿಗೇ ವಿಶೇಷ ಅಭಿಮಾನಾಸ್ಪದವಾಗಿರಬೇಕು.

× × × ×

ಹೀಗೆ ಇದೊಂದು ನಾಡಹಬ್ಬದ ಹೊರದೇಹದ ಒಂದುಬಗೆಯ ರೂಪರೇಷೆ.

—ಗೆಳೆಯ (ಶಾಂತಿನಿಕೇತನ)

---

# ಬರೇ ನಗಚಾಟಗಿ!

## ಶ್ರೀ ಕೈಲಾಸಮ್

—ಶಂಕರನು ಕೈಲಾಸವಲ್ಲ!

—ಹಾಗಾದರೆ ಹೆಂಗಸಾಗಿರಬಹುದು!

—ಅಲ್ಲರಿ, ಮನುಷ್ಯರೇ ಅಲ್ಲ!

—ಹೌದು; ಗುಂಡು!

—ಗುಂಡೂ ಆಗಲಿಕ್ಕಿಲ್ಲ. ಇಷ್ಟು ಚೇಷ್ಟೆಮಾಡಿದರೆ ಹಾರಿಬಿಡುತ್ತಿತ್ತು!

— ಕಲ್ಲುಗುಂಡಾಗಿದ್ದೀತು!

—ಅದನ್ನಾದರೂ ಸರಿಯೆಂದು ಹೇಗೆನ್ನುವುದು? ಯಾವಾಗಲೂ ಪುಟದಾಡುತ್ತಿರುತ್ತೆ!

—ಹಾಸ್ಯ ರಸದ ಗುಂಡು ಆಗಿರಬೇಕು.

—ಇರಬಹುದು ನೋಡಿ. ಅಂತೆಯೇ ಎಲ್ಲರಿಗೂ ಸೇರುವುದು.

## ತಂಬಿಟ್ಟು

—ಹುಡುಗರಾಕಳ್ತಾರೆ?

—ತಂ-ಬಿಟ್ಟು ತಿಂದದ್ದಕ್ಕೆ.

## ಸಲಕ್ಷಣ ಕನ್ಯೆ

ಕಿಟ್ಟೂ, ಅದಕ್ಕೇಕೆ ಅಷ್ಟೊಂದು ಕೊರಗುತ್ತಿದ್ದೀಯೆ! ಅದರಪ್ಪನಂಥವು ಸಿಗುತ್ತವೆ.

—ಅಂಥಾದ್ದು ಬ್ಯಾಡ!



ಶ್ರೀಸರಸ್ವತಿ.

( ಚಂದ್ರಕಾಂತಶಿಲೆಯ ವಿಗ್ರಹವು.)

# ವೇದಕಾಲದ ಶಕ್ತಿಪೂಜೆ.

—:o:—

“ಮಾ”–ನವಮಿಯ ಮಹೋತ್ಸವವು ಎಲ್ಲೆಡೆಯಲ್ಲಿಯೂ ಈ ವರ್ಷ ಒಳ್ಳೇ ಉತ್ಸಾಹದಿಂದ ನೆರವೇರಿಸಲ್ಪಟ್ಟಿತು. ಜಗದ್ಧಾತ್ರಿಯೂ, ಜಗನ್ಮಾತೆಯೂ ಆದ ಶಕ್ತಿಯೇ ಈ ಉತ್ಸವದ ಅಧಿದೇವತೆಯು. ಈ ಮಾತೆಯನ್ನು ಪೂಜಿಸದ ಮಾನವರನ್ನು ಕಾಣುವದೇ ಅಪರೂಪ. ನಮ್ಮಲ್ಲಿಯಂತೂ ಆದಿ ಬುನಾದಿಯಿಂದ ಈ ಮಾತೆಯ ಪೂಜೆಯು ಅವ್ಯಾಹತವಾಗಿ ನಡೆದುಬಂದದೆ. ರಾಷ್ಟ್ರದ ಅಧಿದೇವತೆಯೇ ಇವಳು. ರಾಷ್ಟ್ರದ ಪುನರ್ಘಟನೆಯ ಕಾಲದಲ್ಲಿಯೂ, ರಾಷ್ಟ್ರನಿರ್ಮಾಣಕಾಲವಲ್ಲಿಯೂ, ಈ ಶಕ್ತಿಯ ಉಪಾಸನೆಯೇ ಮಾಡಲ್ಪಡುತ್ತದೆ. ರಾಷ್ಟ್ರೀಯತ್ವವನ್ನು ಉತ್ಪನ್ನಮಾಡಿದ ಭಾರತದ ಪ್ರತಿಯೊಬ್ಬ ವಿಭೂತಿಯ ಜೀವನಚರಿತೆಯಲ್ಲಿಯೂ ಈ ಉಪಾಸನೆಯನ್ನು ಕಾಣಬಹುದು. ಇಷ್ಟೇ ಅಲ್ಲ, ಭಾರತದಲ್ಲಿಯ, ಪ್ರತಿಯೊಬ್ಬರು ಒಂದಿಲ್ಲೊಂದು ರೂಪದಿಂದ ಈ ಮಾತೆಯನ್ನು ಪೂಜಿಸುತ್ತಿರುವರು· ಬೇರೆಬೇರೆ ರಾಷ್ಟ್ರಗಳಲ್ಲಿಯೂ, ಬೇರೆಬೇರೆ ರೀತಿಯಿಂದ ಈ ಶಕ್ತಿಯ ಉಪಾಸನೆಯು ಮಾಡಲ್ಪಡುತ್ತದೆ. ನಮ್ಮಲ್ಲಿಯಂತೂ ಈ ಪರಂಪರೆಯ ಬೇರನ್ನು ನೋಡುತ್ತಹೋದರೆ, ತಿಳಿನುಡಿ ( ವೇದ ) ಗಳಕಾಲದವರೆಗೂ, ಕಾಣಬರುತ್ತದೆ. ತಿಳಿನುಡಿಗಳಲ್ಲಿ, ಈ ಆದಿಮಾತೆಯ ವರ್ಣನೆಗಳು, ಬೇರೆಬೇರೆ ರೀತಿಯಿಂದ ಇರುವದನ್ನು ಕಾಣಬಹುದು; ಅವುಗಳ ವರ್ಣನೆಗಳನ್ನೂ ಉಪಾಸನೆಯ ಕ್ರಮವನ್ನೂ ನೋಡಿದರೆ, ವೇದಕಾಲದಲ್ಲಿ ಶಕ್ತಿಪೂಜೆಗೆ ಯಾವ ಸ್ಥಾನವಿತ್ತೆಂಬುದು ಒಡೆದು ಕಾಣುವಂತಿದೆ. ಅದರಲ್ಲಿಯ ರಾಷ್ಟ್ರೀಯ ಶಕ್ತಿಯ ( ದೇವತೆಯ ) ವರ್ಣನೆಯನ್ನು ಇದರ ಡಿಯಲ್ಲಿಕೆ ಊಡುತ್ತೇವೆ.

ಈಗವಿವರಿಸಲ್ಪಡುವ ಮಂತ್ರದ, ದೇವತೆಯು ಅಂಭ್ರಣೀವಾಕ್ ದೇವತೆಯು. ಯಾವದೇವತೆಯ ಪ್ರಸನ್ನತೆಯಿಂದ ರಾಷ್ಟ್ರದ ಧಾರಣ,ಪೋಷಣಗಳಾಗಿ,ಉನ್ನತಿಯಾಗುವದೋ ಆಕೆಗೆ ಅಂಭ್ರಣೀವಾಕ್ ದೇವತೆಯೆಂದು ಹೆಸರು. ಈ ಮಂತ್ರದ ಋಷಿಯು ವಾಕ್,

अहंरुद्रेभिर्वसुभि श्चराम्यहमादित्यैरुतविश्वदेवै :

अहंमित्रावरूणोभा बिभर्म्यहमिंद्राग्नि अहमश्विनोभा ॥१॥

ऋ. म. १० स १२५.

ನಾನು ಅಂಭ್ರಣೀವಾಕ್ ಎಂಬ ದೇವತೆಯು. ರಾಷ್ಟ್ರದ ಉತ್ಕರ್ಷವನ್ನುಂಟು ಮಾಡುವ ದೇವತೇಯೇ (ವಿದ್ಯಾ) ಶಕ್ತಿಯೇ ನಾನು. ೩೪ ವರ್ಷಗಳವರೆಗೆ, ಬ್ರಹ್ಮ

ಚರ್ಯವನ್ನು ಧಾರಣಮಾಡುವ, ಧಾರ್ಮಿಕರನ್ನೂ ಧನಿಕರನ್ನೂ ರಕ್ಷಿಸುವ, ೪೪ ವರ್ಷಗಳವರೆಗೆ, ಬಹ್ಮಚರ್ಯವನ್ನು ಪಾಲನಮಾಡುವ, ಅಡ್ಡಹಾದಿ ಹಿಡಿದವರನ್ನು ಹಾದಿಗೆತರುವ, ದುಷ್ಟರನ್ನು ದಂಡಿಸುವ, ನಾಸ್ತಿಕ-ರನ್ನು ಖಂಡಿಸುವ, ಶತ್ರುಗಳನ್ನು ಅಡಗಿಸುವ, ೪೮ ವರ್ಷಗಳವರೆಗೆ, ಬ್ರಹ್ಮಚರ್ಯವನ್ನು ಪಾಲಿಸಿ, ಸಂಪೂರ್ಣವಿದ್ಯೆ ಯನ್ನು ಸಂಪಾದಿಸಿ ವಿದ್ಯಾಪ್ರಸಾರವನ್ನು ಮಾಡುವ,ವಿ ದ್ವಜ್ಜನರಲ್ಲಿಯೂ ದಾನಶೂರ ರಲ್ಲಿಯೂ, ಮಾರ್ಗದರ್ಶಕರಲ್ಲಿಯೂ, ನಾನುಪ್ರಕಟನಾಗುವೆನು. ಈ ಶಕ್ತಿಯ (ವಿದ್ಯೆಯ) ಯೋಗದಿಂದ ರಾಷ್ಟ್ರದಲ್ಲಿ ನವಚೈತನ್ಯ ಉಂಟಾಗುವದು. ಈ ಶಕ್ತಿ ಯಿಂದಲೆ (ವಿದ್ಯಾ) ಕ್ಷತ್ರಿಯರು ವೀರಬಾಹುಗಳಾಗಿ, ಎಲ್ಲರಿಗೆ ಬೇಕಾದವರೂ, ಎಲ್ಲರ ಆದರಕ್ಕೆ ಪಾತ್ರರಾದವರೂ ಆಗುತ್ತಾರೆ. ವಿದ್ಯೆಯಿಂದಲೇ ಶ್ರೀಮಂತರಿಗೂ, ಲೋಕಾಗ್ರಣಿಗಳಿಗೂ ಧೈರ್ಯವುಂಟಾಗುತ್ತದೆ. ವಿದ್ಯಯ ಯೋಗದಿಂದಲೇ ಎಲ್ಲರೂ ಮಿತ್ರ ವರುಣರಂತೆ, ವಿದ್ಯುತ್ ಅಗ್ನಿಗಳಂತೆ; ಅಥವಾ ಈಗಿನ ಭಾಷೆಯಲ್ಲಿ ಹೇಳಬೇ ಕಾದರೆ, ಋಣ ಮತ್ತು ಧನಪ್ರವಾಹಗಳು ಒಂದಾಗಿ ವಿದ್ಯುತ್ತು ಉಂಟಾಗುವಂತೆ, ತೇಜೋಮಯರಾಗಿ ಕಾರ್ಯೋನ್ಮುಖರಾಗುತ್ತಾರೆ. ಹೀಗೆ ಈ ವಿದ್ಯೆಯ ಯೋಗ ದಿಂದಲೇ ಜನತೆಯಲ್ಲಿ, ರಾಷ್ಟ್ರದಲ್ಲಿ ಅದ್ಭುತಶಕ್ತಿಯುಂಟಾಗುತ್ತದೆ. ಹೀಗಿದೆ ಮೇಲಿನ ಮಂತ್ರದ ಭಾವಾರ್ಥವು.

अहंसोममा हनसं बिभर्म्यहंत्वष्टारमुतपूषणंभगम् ।
अहंदधामिद्रविंणहविष्मतेसुप्राव्य३यजमानाय सुन्वते ॥

ಶತ್ರುಗಳನ್ನು ಧ್ವಂಸಮಾಡುವ, ಅಥವಾ ಮಾಡಲು ಇಚ್ಛಿಸುವ, ಧೈರ್ಯವಂತ ರಾದ ಉದ್ಯೋಗಿಗಳಿಗೆ ನನ್ನಿಂದಲೆ (ವಿದ್ಯೆಯಿಂದಲೇ) ಉತ್ಸಾಹವು ಉತ್ಪನ್ನವಾಗು ತ್ತದೆ. ಲಲಿತಕಲೆಗಳನ್ನು ಬಲ್ಲಂಥವರಲ್ಲಿಯೂ ಬಡವರನ್ನು ರಕ್ಷಿಸುವಂಥ ಧನವಂತ ರಲ್ಲಿಯೂ, ಇತರ ಸರ್ವಸಂಪತ್ತಿಯುಳ್ಳವರಲ್ಲಿಯೂ, ವಿದ್ಯೆಯ ರೂಪದಿಂದಲೆ ಪ್ರೇರ ಣೆಯನ್ನು ಮಾಡುವೆನು. ಅದರಂತೆಯೇ ಲೋಕಸಂಗ್ರಹವನ್ನು ಮಾಡುವವರಲ್ಲಿಯೂ, ರಾಷ್ಟ್ರದ, ದೇಶದ, ಜನತೆಯ ಕಲ್ಯಾಣವನ್ನು ಮಾಡುವದರಲ್ಲಿ ಯಾರು ತತ್ಪರರಾಗಿರು ವರೋ ಯಾರು ಪರೋಪಕಾರಕ್ಕಾಗಿ ಸರ್ವವನ್ನು ತ್ಯಾಗಮಾಡಲು ಸಿದ್ಧರಿರುವರೋ ಅವರೆಲ್ಲರಿಗೂ ನನ್ನಿಂದಲೇ (ವಿದ್ಯೆಯಿಂದಲೆ) ದ್ರವ್ಯವು ಲಭಿಸುವದು ಎಂಬುದೇ ಮೇಲಿನ ಮಂತ್ರದ ಸಾರಾಂಶ

अहंराष्ट्री संगमनी वसूनां चिकितुषी प्रथमाय ज्ञियानाम्
तां मादेवा व्यदधुःपुरुत्रा भूरिस्थात्रांभूर्यावेशयन्तीम् ॥३॥
(अहंराष्ट्री राजते तद्राष्ट्रं तस्य बीजाभूत शक्तिः राष्ट्री ।

यद्वाराष्ट्रं उत्पत्तित्वेन अस्ति अस्यमिति राष्ट्री "वाग्वैराष्ट्रीवाचमेवा स्मिंस्तद्दधाति" ॥ ऐ. ब्रा. ग्र. पञ्चिका. अ. ४. ख. १.)

ನಾನೇ ರಾಷ್ಟ್ರೋನ್ನತಿಯ ಅಧಿದೇವತೆಯಾದ ಶಕ್ತಿಯು. ನನ್ನ ಯೋಗದಿಂದಲೇ (वसूनां) ಬ್ರಹ್ಮಚಾರಿಗಳಲ್ಲಿಯೂ, ಲೋಕರಕ್ಷಕರಲ್ಲಿಯೂ, ಧನಿಕರಲ್ಲಿಯೂ (संगमनी) ಐಕ್ಯವುಂಟಾಗಿ, ರಾಷ್ಟ್ರದ ಎಲ್ಲ ಸಂಪತ್ತುಗಳು ಒಟ್ಟುಗೂಡಿ ವಿಲಕ್ಷಣ ತೇಜಸ್ಸು ಉತ್ಪನ್ನವಾಗುತ್ತದೆ. ನನ್ನ ಸಲುವಾಗಿ ಮಾಡಬೇಕಾದ ಉಪಾಸನೆಯನ್ನು ಸರ್ವರೂ ಯೋಗ್ಯವೇಳೆಗೆ ಯೋಗ್ಯರೀತಿಯಿಂದ ಮಾಡಲೇಬೇಕು. ಯಾಕಂದರೆ, ರಾಷ್ಟ್ರೀಯ ಉಪಾಸ್ಯದೇವತೆಗಳಲ್ಲಿ ನಾನೇ ಮುಖ್ಯಳು. ( यज्ञीमानां प्रथमा ) ನನ್ನ ಉಪಾಸನೆ ಯಿಂದಲೇ ಭಕ್ತಿಯಿಂದಲೇ ರಾಷ್ಟ್ರದ ಕಲ್ಯಾಣವಾಗುತ್ತದೆ. ನಾನು ಎಲ್ಲೆಡೆಯಲ್ಲಿಯೂ ವ್ಯಾಪಿಸು( भूरिस्थात्रां ) ತ್ತಿದ್ದು, ಜನರಲ್ಲಿ ಒಂದೇ ವಿಚಾರವು ಯಾವಾಗ ತಲೆದೋರು ವದೋ ಆ ವೇಳೆಯಲ್ಲಿ ರಾಷ್ಟ್ರದಲ್ಲಿ ಜನತೆಯಲ್ಲಿ ವಿಲಕ್ಷಣವಾದ ಆವೇಶವನ್ನುಂಟು ಮಾಡುವೆನು. ಆದ್ದರಿಂದಲೇ ಸರ್ವರಾಷ್ಟ್ರದಲ್ಲಿ ವಿದ್ವಜ್ಜನರು ನನ್ನ ಆರಾಧನೆಯನ್ನು ಮಾಡುತ್ತಾರೆ.

मयासोअन्नमत्तियोविपस्यतियः प्राणीतियांईशृणोत्युक्तम् ॥
अमन्तवे मांतउपक्षयन्तिश्रुधिश्रुतश्रद्धिवंतेवदामि ॥ ४ ॥

ಯಾರಿಗೆ ನನ್ನ ಉಪದೇಶವು ಚೆನ್ನಾಗಿ ತಿಳಿಯುವದೋ ಅದರಂತೆ ನಡಿಯು ವರೋ ಸ್ವತಃ ಬಲಿಷ್ಠರಿರುವರೋ ಅವರಿಗೆ ನಾನು ಒಲಿದು ಕೃಪೆಮಾಡುವೆನು. ಅವರಿಗೆ ಸಂಪತ್ಸಮೃದ್ಧಿಗಳನ್ನುಂಟುಮಾಡುವೆನು. ಯಾರು ಅಜ್ಞಾನದಿಂದ ನನ್ನನ್ನು ಉಪೇಕ್ಷಿಸು ವರೋ ಅವರು ನಾಶವಾಗುವರು. ಆದ್ದರಿಂದ ನನ್ನ ತಿರಸ್ಕಾರವನ್ನಾಗಲಿ ಉದಾಸೀನ ತೆಯನ್ನಾಗಲಿ ಯಾರೂ ಮಾಡಕೂಡದು. ಬುದ್ಧಿವಂತರಾದ ರಾಷ್ಟ್ರಭಕ್ತರೆ! ನನ್ನ ಮೇಲಿನ ಶ್ರದ್ಧೆಯಿಂದಲೇ ನನ್ನನ್ನು ಭಜಿಸಿರಿ, ನನ್ನ ಅಂತಃಕರಣವನ್ನು ಸಂಪಾದಿಸಿರಿ, ನಿವು ಶ್ರದ್ಧಾಳುಗಳಿರುವಿರೆಂದೇ ನಿಮಗೆ ( तेवदामि ) ಹೇಳುತ್ತಲಿದ್ದೇನೆ.

अहमेव स्वयमिदं वदामिजुंष्टदेवीभरुतमोनुषेभ्यः ॥
यंकामये तं तमुग्र कृणामितं ब्रह्माणं तमृर्षितं सुमेधाम् ॥ ५॥

( ಪರಮಾತ್ಮ ಶಕ್ತಿಯು ) ರಾಷ್ಟ್ರೀಯ ಶಕ್ತಿದೇವತೆಯಾದ ನಾನೇ ಸ್ವತಃ ನಿಮಗೆ, ಇದನ್ನು ಹೇಳಹತ್ತಿದ್ದೇನೆ. ಈ ನನ್ನ ಉಪದೇಶದಂತೆ (देवेभिः)* ವಿದ್ವಾಂಸರೂ ಸತ್ಯ

* ಯಾರು ಸತ್ಯಾಚರಣೆಯಿಂದಿರುವರೋ ಅವರು ದೇವತೆಗಳೆಂದೂ ಯಾರಿಗೆ ಸತ್ಯಾಚರಣೆಯ ಮೇಲೆ ನಿಷ್ಠೆಯಿಲ್ಲವೋ ಅವರಿಗೆ ಮನುಷ್ಯರೆಂದೂ ಶತಪಥ ಬ್ರಾಹ್ಮಣದಲ್ಲಿ ವರ್ಣಿಸಿದೆ.

ನಿಷ್ಠರೂ ಬ್ರಹ್ಮಚಾರಿಗಳೂ ಸಾಮಾನ್ಯ ಮನುಷ್ಯರೂ ನಡೆಯುವರು. ಯಾರು ವೇದಾಜ್ಞೆಯಂತೆ ನಡೆಯುವ ವೈದಿಕರನ್ನು ರಕ್ಷಿಸುವ ಇಚ್ಛೆಯನ್ನು ಮಾಡುವರೋ ಅವರಿಗೆ (ತಗ್ರಂ) ಕ್ಷಾತ್ರತೇಜವನ್ನೂ ಅದರಂತೆಯೇ ಲೋಕಕಲ್ಯಾಣಾರ್ಥವಾಗಿ ಸರ್ವಸ್ವವನ್ನೂ ತ್ಯಾಗಮಾಡುವ (ಬ್ರಹ್ಮಾಣಂ) ಬ್ರಾಹ್ಮಣರಿಗೆ, ಅತೀಂದ್ರಿಯ ಜ್ಞಾನವನ್ನೂ (ಋಷಿಂ) ವೇದದ ರಹಸ್ಯವನ್ನು ಬಲ್ಲಂಥವರಿಗೆ ಉತ್ತಮ ಪ್ರಜ್ಞೆಯನ್ನೂ (ಕೃಣೋಮಿ) ದಯಪಾಲಿಸುವೆನು.

ಮೇಲಿನ ಎರಡು ಮಂತ್ರಗಳು ರಾಷ್ಟ್ರದ ದೃಷ್ಟಿಯಿಂದ ಅತ್ಯಂತ ಮಹತ್ವ ಉಳ್ಳವುಗಳಾಗಿವೆ. ಬ್ರಹ್ಮಚಾರಿಗಳಾಗಿ, ರಾಷ್ಟ್ರ ಸೇವೆ, ಜ್ಞಾನಸಂಪಾದನೆ, ಜ್ಞಾನಪ್ರಸಾರ ಇವೇ ಮೊದಲಾದ ಮೇಲೆ ಹೇಳಿದ ಎಲ್ಲ ಉಪದೇಶಗಳು ರಾಷ್ಟ್ರ ಸಂಘಟನೆಗೆ ಅವಶ್ಯವೆಂಬುದು ಸ್ಪಷ್ಟವಾದ ಮಾತು. ಯಾರು ಇವುಗಳನ್ನು ಆಚರಿಸುವರೋ ಅಥವಾ ಯಾವ ರಾಷ್ಟ್ರವು ಇವುಗಳನ್ನು ಆಚರಣೆಯಲ್ಲಿ ತರುವದೋ ಆ ರಾಷ್ಟ್ರದ ಸಂರಕ್ಷಣೆಯ ಭಾರವನ್ನು ಜಗನ್ಮಾತೆಯಾದ ಈ ಪರಮಾತ್ಮ ಶಕ್ತಿಯು, ರಾಷ್ಟ್ರದ ಅಧಿದೇವತೆಯು ತಾನೇ ಹೊತ್ತಿರುವಳು. ಇದಲ್ಲದೆ, ಯಾರು ಆಕೆಯ ಉಪದೇಶದಂತೆ ನಡೆಯುವರೋ ಅವರವರಿಗೆ ಅವರವರ ಯೋಗ್ಯತೆಯಂತೆ ಕ್ಷತ್ರಿಯರಿಗೆ ಕ್ಷಾತ್ರತೇಜಸನ್ನೂ ಬ್ರಾಹ್ಮಣರಿಗೆ ಋಷಿತ್ವವನ್ನೂ ವೇದಾಂತಿಗಳಿಗೆ ಮೋಕ್ಷವನ್ನೂ ಕೊಡುವೆನೆಂದೂ ಸಾರಿ ಸಾರಿ ಹೇಳುತ್ತಿರುವಳು. ಇವೇ ಮಾತುಗಳೇ ರಾಷ್ಟ್ರಕ್ಕೂ ಹತ್ತುವವು.

अहंरुद्राय धनुरातनोमिब्रह्मद्विषेशरवे हन्तवाउ ।
अहंजनाय समदंकृणोम्यहंद्यावापृथिवी आविवेश ॥ ६ ॥

ನಾಸ್ತಿಕರನ್ನೂ ವೇದವಿದ್ಯೆಯನ್ನು ದ್ವೇಷಿಸುವವರನ್ನೂ ಸಜ್ಜನರನ್ನು ನಿಂದಿಸುವವರನ್ನೂ ಸಜ್ಜನರನ್ನು, ಪೀಡಿಸುವ ಪರರನ್ನು ಹಿಂಸಿಸುವ ಜನರನ್ನೂ ನಾಶಮಾಡುವದರ ಸಲುವಾಗಿ, ನಾನು **ರಾಷ್ಟ್ರೀಯ ದೇವತೆಯು** ಪರಮಾತ್ಮ ಶಕ್ತಿಯು, ಶೂರರಿಗೆ ಶಸ್ತ್ರಗಳನ್ನೂ ಬ್ರಹ್ಮಚಾರಿಗಳಿಗೆ ಶಾಸ್ತ್ರವನ್ನೂ ದಯಪಾಲಿಸುವೆನು. ಇಷ್ಟೇ ಅಲ್ಲ ಜನರನ್ನು (ರಾಷ್ಟ್ರವನ್ನು) ಸಂರಕ್ಷಿಸುವ ಸಲುವಾಗಿ, (जनानां)ಯುದ್ಧಮಾಡುವದಕ್ಕೂ (समदं)ಜನರಲ್ಲಿ ವಿಲಕ್ಷಣ ಪ್ರೇರಣೆಯನ್ನುಂಟುಮಾಡುವೆನು. ನಾನು ಎಲ್ಲರಲ್ಲಿಯೂ ವಿಲಕ್ಷಣವಾದ ತೇಜದಿಂದ ಜನರಲ್ಲಿ ಆವೇಶವನ್ನುಂಟುಮಾಡಿದ ಕೂಡಲೇ ಇಡೀ ರಾಷ್ಟ್ರದಲ್ಲೆಲ್ಲ, ಜಗತ್ತಿನಲ್ಲೆಲ್ಲ (द्यावापृथिवी) ನಾನು ವ್ಯಾಪಿಸಿರುವ ನನ್ನ ವಿಶ್ವರೂಪವು ದೃಗ್ಗೋಚರವಾಗುತ್ತದೆ.

अहंसुवे पितरमस्य मूर्धन् ममयोनिरप्स्व १ न्तः समुद्रे ॥
ततोवितिष्ठे भुवनानु विश्वोतामूंद्यांवर्ष्मणोपस्पृशामि ॥ ७ ॥

ನನ್ನ ಉಪದೇಶದಂತೆ ನಡೆಯುವ ರಾಷ್ಟ್ರದಲ್ಲಿ ನಾನು ಸುಪ್ರಸನ್ನಳಾಗಿ ರಾಷ್ಟ್ರವನ್ನು ಸಂರಕ್ಷಿಸುವ ( मूर्धन् ) ಮುಂದಾಳುಗಳನ್ನೂ ( पितरं ) ಉತ್ಪನ್ನಮಾಡುವೆನು. ನಾನು ಸ್ವತಃ ಜನಸಮುದಾಯದ ಅಥವಾ ರಾಷ್ಟ್ರದ, ಅಂತಃಸಮುದ್ರದಲ್ಲಿ ಪ್ರವೇಸಿ, ಜ್ಞಾನೋದಯವನ್ನುಂಟುಮಾಡಿ, ರಾಷ್ಟ್ರೀಯದೃಷ್ಟಿಯನ್ನುತ್ಪನ್ನಮಾಡುವೆನು. ಆಗ ಅರ್ಥಾತ್ ನಾನು ವಿಶ್ವವ್ಯಾಪಿಯಾಗಿರು(विश्वाभुवनानि)ನೆನೆಂದೂ ವಿಲಕ್ಷಣ ತೇಜಸ್ವಿತೆಯಾಗಿರುವೆನೆಂದೂ ಜನರಿಗೆ ಭಾಸವಾಗುತ್ತದೆ. ಮತ್ತು ನನ್ನ ಆಜ್ಞೆಯಂತೆ ರಾಷ್ಟ್ರೋನ್ನತಿಯ ಸಲುವಾಗಿ ಯತ್ನಿಸುತ್ತಿರುವ ಮುಂದಾಳುಗಳನ್ನು ದಿವ್ಯದೇಹದಿಂದ ಸ್ಪರ್ಶಿಸುವೆನು. ಅದರಿಂದ ಅವರ ಕಾರ್ಯವು ಇಹದಲ್ಲಿ ಯಶಸ್ವಿಯಾಗಿ, ಪಾರಲೋಕದಲ್ಲಿಯೂ ಅವರಿಗೆ ಆನಂದವು ಉಂಟಾಗುವದು.

ರಾಷ್ಟ್ರದಲ್ಲಿ ಒಮ್ಮೆ ಏಕೃತ್ಯತ್ವಶಕ್ತಿಯು ಬೆಳೆಯಲು ಪ್ರಾರಂಭವಾಯಿತೆಂದರೆ ಲೋಕನಾಯಕರು ಉತ್ಪನ್ನರಾಗುವರು, ರಾಷ್ಟ್ರದಲ್ಲಿಯ ಎಲ್ಲ ಶಕ್ತಿಗಳನ್ನು ಒಟ್ಟುಗೂಡಿಸಿ, ರಾಷ್ಟ್ರದ ಪುನರ್ಘಟನೆಯನ್ನಾಗಲಿ ರಾಷ್ಟ್ರನಿರ್ಮಾಣವನ್ನಾಗಲೀ ಮಾಡುವರು. ಎಲ್ಲರನ್ನೂ ಒಂದೇದೃಷ್ಟಿಯಿಂದ ನೋಡಹತ್ತುವರು. ರಾಷ್ಟ್ರದ ಉನ್ನತಿಯ ಸಲುವಾಗಿ ಸಂಘಶಕ್ತಿಯು ಉತ್ಪನ್ನವಾಗುತ್ತದೆ. ಒಮ್ಮೆ ಈ ವ್ಯಾಪಕದೃಷ್ಟಿಯು ಉತ್ಪನ್ನವಾಯಿತೆಂದರೆ ತೀರಿತು.—ರಾಷ್ಟ್ರದ ಹೆಜ್ಜೆಯು ಮುಂದೆ ಬೀಳುವದು ಸ್ವಾಭಾವಿಕವದೆ.

**अहमेव वात इवप्रवाम्यारभमाणा भुवनानिविश्वा ॥**
**परो दिवा परएना पृथिव्यैतावती महिनासंबभूव ॥ ८ ॥**

ರಾಷ್ಟ್ರದಲ್ಲಿ ಜಾಗೃತಿಯನ್ನುಂಟುಮಾಡಿ, ನಾನೇ ವಾಯುವೇಗದಿಂದ ಜನರಲ್ಲಿ ಉತ್ಸಾಹವನ್ನುಂಟುಮಾಡುವೆನು. ಇದೇ ವೇಗದಿಂದಲೇ ರಾಷ್ಟ್ರವನ್ನು ಪ್ರಗತಿಪಥದ ಮೇಲೆ ಒಯ್ಯುವೆನು. ವಾಯು, ಆಕಾಶ, ಪೃಥ್ವಿಗಿಂತಲೂ ನನ್ನ ಶಕ್ತಿಯು ಹೆಚ್ಚಿನದು ನಾನೇ ನನ್ನ ಮಹಿಮೆಯಿಂದಲೇ ಈ ರೂಪವನ್ನು ರಾಷ್ಟ್ರಶಕ್ತಿಯ, ರಾಷ್ಟ್ರ ದೇವತೆಯ, ರೂಪವನ್ನು ಧಾರಣಮಾಡಿರುವೆನು.

ಈ ಸುಂದರವಾದ ವರ್ಣನೆಯಿಂದ ಶಕ್ತಿಪೂಜೆಯು ಎಷ್ಟು ಅವಶ್ಯವೆಂಬುದೂ ಎಷ್ಟು ಪುರಾತನವೆಂಬುದೂ ತಾನೇ ಒಡೆದುಕಾಣುವದು. ಹರಿದು ಹಂಚಿಹೋದ ಕರ್ನಾಟಕ ರಾಷ್ಟ್ರವು ಮತ್ತೆ ಪುನರ್ಘಟನೆಯಾಗಬೇಕಾದರೆ, ಶಕ್ತಿಯ ಉಪಾಸನೆಯನ್ನು ಮಾಡುವದು ಅವಶ್ಯವೆಂದು ಮೇಲಿನ ಮಂತ್ರಗಳೇ ಸಾರುತ್ತವೆ. ಶಕ್ತಿಯನ್ನು ನಿಂದಿಸುವರ ಗತಿಯು ಏನಾಗುವದೆಂಬುದನ್ನು ದೇವಿಯು ತಾನೇ ಹೇಳಿದ್ದಾಳೆ. ಪ್ರಿಯ ಕನ್ನಡಬಾಂಧವರೇ! ಕರ್ನಾಟಕವು—ಏಕರಾಷ್ಟ್ರವಾಗಬೇಕಾಗಿದ್ದರೆ, ಅದರ ಸಂಸ್ಕೃತಿಯ ಪುನರುಜ್ಜೀವನ ವಾಗಬೇಕಾಗಿದ್ದರೆ, ಪರಪ್ರಾಂತೀಯರಂತೆ, ಭಾರತದ ಉದ್ಧಾರದ

ವೀಳ್ಯವನ್ನೆತ್ತಬೇಕಾಗಿದ್ದರೆ, ಸ್ವಾತಂತ್ರ್ಯ ದೇವಿಯ ಸುಖಾನಂದವನ್ನು ಅನುಭವಿಸಬೇಕಾಗಿದ್ದರೆ, ಬಹಳವೇನು! ಮತ್ತೆ ಕರ್ನಾಟಕವು ಜಗತ್ತಿನಮೇಲೆ ತನ್ನ ಧಾರ್ಮಿಕ ಒಡೆತನವನ್ನು ಪಡೆಯಬೇಕಾಗಿದ್ದರೆ ಶಕ್ತಿಯನ್ನು ಪೂಜಿಸಿರಿ.

ಹೇ! ಜಗನ್ಮಾತೆಯಾದ **ಅಂಭ್ರಣಿಯೇ ! ರಾಷ್ಟ್ರೀಯೇ ! ವಿಶ್ವಭುವನಾನಿವ್ಯಾಪಿನಿಯೇ ।** ನಿನ್ನ ಭಕ್ತರಾದ ಕನ್ನಡ ಎಳೆಮಕ್ಕಳಲ್ಲಿ ಸಂಚರಿಸಿ ನಮ್ಮ ನಾಡನ್ನುದ್ಧರಿಸೆಂದು ಶಿರಗೊಡ್ಡಿ ಬೇಡಿಕೊಳ್ಳುವ,

—ಬಿಂದುಮಾಧವ

**ಜಯಭುವನೇಶ್ವರಿ! ಜಯಭುವನೇಶ್ವರಿ !!**

---

## ಸಶಾಸ್ತ್ರ ಪುನರ್ವಿವಾಹ.

—ವಿಧವೆಯೆಂದರೇನು ?

—ವಿಶೇಷಾಃ ಧವಾಃ ಯಸ್ಯಾಃ ಸಾ ವಿಧವೆ. ಒಬ್ಬ ಸತ್ತಮೇಲೆ ಮತ್ತೆ ಮದುವೆಯಾಗದಿದ್ದರೆ ವಿಧವೆಯಲ್ಲ.

## ಆಕಳ ಗೋಮೂತ್ರದಂಥ ಮಾತು.

ಈ ನಾಟಕದಲ್ಲಿ ಮಾಲಕರಾದ ವಿನೋದರತ್ನಾಕರ ಜಿ. ಎಚ್. ವೀರಣ್ಣನವರು ವಹಿಸುವ ಹಾಸ್ಯಪ್ರಧಾನವಾದ ಪಾತ್ರಗಳು ತುಂಬಾ ವಿನೋದಕರವಾಗಿರುತ್ತವೆ.

* * * *

ಇದನ್ನು ಕರ್ನಾಟಕ ಪ್ರಿಂಟಿಂಗ ವರ್ಕ್ಸ ಮುದ್ರಣಾಲಯದಲ್ಲಿ ಮುದ್ರಿಸಿ......

* * * *

ಹೊಲಗೇರಿ ಓಣಿ.

* * * *

ಒಬ್ಬ ಪ್ರಾಥಮಿಕ ಶಾಲಾ ಶಿಕ್ಷಕರು :—ರಾಮ್ಯಾ; ವಿಂಧ್ಯಾದ್ರಿಪರ್ವತವೆಲ್ಲಿದೆ ತೋರಿಸು.

—ಮಲ್ಲಾರಿ.

# ಮಾನವಮಿಯೂ ಶಕ್ತಿಮಾತೆಯರೂ.

:o:

## ನಮ್ಮ ಮಹಾನವಮಿಯ ಪ್ರಾರ್ಥನೆ.

ಮಮಾಗ್ನೇವರ್ಚಃ ವಿಹವೇಷು ಅಸ್ತು । ವಯಂತು ಇಂಧಾನಾಃ ತನ್ವಂ ಪುಷೇಮ ॥ ಮಹ್ಯಂ ನಮಂ ತಾಂ ಪ್ರದಿಷಃ ಚತಸ್ರಃ । ತ್ವಯಾ ಅಧ್ಯಕ್ಷೇಣ ಪ್ರತನಾಜಯೇಮ ॥ ಮಮದೇವಾ ವಿಹವೇಸಂತು ... ॥ ... ಸತ್ಯಾಃ ಮನಸೋಮೇ ಅಸ್ತು । ಏನೋ ಮಾಸಿಗಾಂಕತ ಮಚ್ಚನಾಹಂ, ವಿಶ್ವೇದೇವಾಸಃ ಅಧಿವೋಚತಾನಃ ॥ ದೇವೀಃ ಷಳುರ್ವೀಃ ಉರುನಃಕೃಣೋತ, ವಿಶ್ವೇದೇವಾಸಃ ಇಹವೀರಯಧ್ವಂ ॥

**ತಾತ್ಪರ್ಯ** :— ಅಗ್ನಿಯೇ ! ಕಾಳಗಗಳಲ್ಲಿ ನಮ್ಮ ವರ್ಚಸ್ಸು ಉಳಿಯಲಿ. ನಾವು ನಿನಗಾಗಿ ಯಜ್ಞವನ್ನು ಮಾಡಿ ನಮ್ಮ ದೇಹಗಳನ್ನು ಬಲಿಸಿಕೊಳ್ಳುವೆವು. ನಾಲ್ಕೂ ದಿಕ್ಕುಗಳು ನಮಗೆ ಬಾಗಲಿ. ನೀನು ಅಧ್ಯಕ್ಷನಾಗಿರಲು ಎದುರಾಟದಲ್ಲಿ ನಮಗೆ ಗೆಲವಿದೆ. ಯುದ್ಧದಲ್ಲಿ ದೇವತೆಗಳು ನನ್ನ ಪಕ್ಷದವರಿರಲಿ ...... ನಮ್ಮ ಹಾರೈಕೆಗಳು ಸತ್ಯವಾಗಲಿ. ಅತಿಕ್ರಮಣದ ಪಾಪವು ನಮ್ಮಿಂದ ಒಂದಿಷ್ಟೂ ಆಗದಿರಲಿ. ವಿಶ್ವೇದೇವತೆಗಳೇ ! ನಮಗೆ ಹರಕೆಗಳನ್ನು ಕೊಡಿರಿ. ಆರೂ ದಿಕ್ಕಿನ ದೇವಿಯರೇ ! ನಾವು ಬೀಸಾಗಿರುವಂತೆ ಇಂಬುಗೊಳಿಸಿರಿ. ವಿಶ್ವೇದೇವತೆಗಳೇ ! ಇಲ್ಲಿ ವೀರೋಚಿತವಾಗಿ ಆಚರಿಸಿರಿ.

## ಶಕ್ತಿಮಾತೆಯರು.

ವೇದದಲ್ಲಿ ಅದಿತಿ, ಭಾರತಿ, ಬೃಹದ್ದಿವಾ, ಉಷಾ, ದೇಷ್ಟ್ರೀ, ಧಿಷಣಾ, ಪೃಥ್ವೀ, ವಾಕ್, ಇಳಾ, ಮಹೀ, ಸರಸ್ವತೀ ಪ್ರಮುಖರಾದ ಅನೇಕ ದೇವತೆಗಳನ್ನು ನಮ್ಮ ಹಿರಿಯರು ತಮ್ಮ ಸಹಾಯಾರ್ಥವಾಗಿ ಪ್ರಾರ್ಥಿಸಿ ಕರೆದಿರುವರು. ಉಷಾ, ಅದಿತಿ, ಪೃಥ್ವಿ, ಸರಸ್ವತಿ ಮೊದಲಾದ ದೇವತೆಗಳನ್ನು ಕುರಿತಂತೂ ನೂರಾರು ಪ್ರಾರ್ಥನೆಗಳಿರುವವು. ಆ ಪ್ರಾರ್ಥನೆಗಳನ್ನು ನಿಜವಾದ ರೀತಿಯಲ್ಲಿ ನುಡಿದುದೇ ಆದರೆ ಹುಟ್ಟುಹೇಡಿಯೂ ಕೆಚ್ಚೆದೆಯ ಕಲಿಯಾಗಬಹುದು. ನಿರಕ್ಷರಕುಕ್ಷಿಯೂ ಜ್ಞಾನಜ್ಯೋತಿಯಿಂದ ಅಂತರ್ದೀಪಿತನಾಗಬಹುದು. ಮನದ ಮತ್ತು ಮೈಯ ದುರ್ಬಲತೆಯು ಹಿಮ್ಮೆಟ್ಟುವುದು ಇಂಥ ಪ್ರಾರ್ಥನೆಗಳಿಂದ. ಧೀರರೂ ವಿವೇಕಿಗಳೂ ಆದ ನಮ್ಮ ಹಿರಿಯರು ಹೆಚ್ಚು ಹಿರಿದಾಗಲು ಈ ಶಕ್ತಿಮಾತೆಯರ ಬೆಂಬಲವನ್ನು ಅಪೇಕ್ಷಿಸುತ್ತಿದ್ದರು. ಆ ಶಕ್ತಿಮಾತೆಯರು ಅವರ ನಿರ್ವಂಚನೆಯ ಬಿನ್ನಹವನ್ನು ಪೂರಯಿಸುತ್ತಿದ್ದರು. ಆ ಬೆಂಬಲದಿಂದ ತಕ್ಕ ಸಾಹಸಪರಾಕ್ರಮವನ್ನು ಮಾಡಿ ಅವರಾದರೂ ಆ ಶಕ್ತಿಗಳನ್ನು ತೃಪ್ತಿ

ಗೊಳಿಸುತ್ತಿದ್ದರು. ಹೀಗೆ ಅನ್ಯೋನ್ಯ ಸಹಕಾರದಿಂದ ನಮ್ಮ ಭರತಭೂಮಿಯಲ್ಲಿ ಶ್ರೇಯಸ್ಕರವೂ ಪ್ರೇಯಸ್ಕರವೂ ಆದ ಬಾಳುವೆಯು ಒಮ್ಮೆ ಕಂಗೊಳಿಸುತಲಿತ್ತು. ಹೆರವರಿಗೆ ಅನ್ಯಾಯವಾಗಬೇಕೆಂಬ ದುರ್ಬುದ್ಧಿಯು ಅವರಲ್ಲಿರಲಿಲ್ಲ. ಆದರೆ ತಮ ಗಾದ ಅನ್ಯಾಯವನ್ನು ಬೈರಾಗಿಗಳಂತೆ ಉಪೇಕ್ಷಿಸುವ ಬುದ್ಧಿಯೂ ಅವರಲ್ಲಿರಲಿಲ್ಲ. ಈ ಲೇಖನದ ಆರಂಭದಲ್ಲಿ ಬರೆದ ಪ್ರಕಾರ ಗಂಡು ಪ್ರಾರ್ಥನೆಗಳು ಅವರವಾಗಿದ್ದವು. ಈ ಶಕ್ತಿಮಾತೆಯರಿಗೆ ಅವರು "ನೀವೇ ತಂದಿ ನೀವೇ ತಾಯಿ" ಎಂದು ವಾತ್ಸಲ್ಯದಿಂದಲೂ ವಾತ್ಸಲ್ಯದಿಂದ, ಅಂತೆಯೇ ಸಖ್ಯದಿಂದಲೂ ಶರಣು ಹೋಗುತ್ತಿದ್ದರು. ಅವರಿಗೆ ಎಂದೂ ತಮ್ಮ ಅಭ್ಯುದಯದ ಹಾದಿಯು, ಪಾಪದ ಹಾದಿಯೆಂದೆನಿಸಲಿಲ್ಲ. ಯಾಕಂದರೆ ಅವರ ಕಾಮನೆಗಳು ಧರ್ಮಾವಿರುದ್ಧವಾಗಿದ್ದವು. "ಧರ್ಮಾವಿರುದ್ಧೋ ಕಾಮೋಽಸ್ಮಿ" ಎಂದು ಗೀತೆಯ ವಚನವಿಲ್ಲವೇ ? ಎಲ್ಲರೂ ಮೋಕ್ಷವನ್ನು ಮುಟ್ಟಲು ಪುರುಷಾರ್ಥಗಳ ಸೋಪಾನವನ್ನು ರಚಿಸಿಕೊಟ್ಟ ನಮ್ಮ ಹಿರಿಯರು ಧರ್ಮಾರ್ಥಕಾಮಗಳ ವಿವೇಕವನ್ನು ಬಲ್ಲವರಾಗಿದ್ದರು. ಅವರಿಗೆ ಅಭ್ಯುದಯವು ನಿಶ್ರೇಯಸದ ಸಾಧನವಾಗಿ ತೋರುತ್ತಿತ್ತು. ನಿಶ್ರೇಯಸಕ್ಕೆ ವಿರೋಧಕವಾಗಿ ಅಭ್ಯುದಯವು ಅವರನ್ನೆಂದೂ ಕಾಡಲಿಲ್ಲ. ಭೂಮಿತಾಯಿಯು ಅವರಿಗೆ ಸಾಧನಭೂಮಿಯಾಗಿ ಕಂಗೊಳಿಸುತಲಿತ್ತು. ಸ್ವರ್ಗಕ್ಕಿಂತ ಮಿಗಿಲಾಗಿ ಮೆರೆಯುತಲಿತ್ತು. ಸ್ವರ್ಗದ ದೇವತೆಗಳಿಗೆ ಭೂಲೋಕದ ಯಜ್ಞಗಳು ಅನ್ನ ಛತ್ರಗಳಾಗಿದ್ದವು. ನಮ್ಮ ಹಿರಿಯರಿಗೆ ದೇವತೆಗಳ ಬೆಂಬಲ ಬೇಕಾಗಿತ್ತು. ದೇವತೆಗಳಿಗೂ, ಇಂಥ ತಕ್ಕ ಹಿರಿಯರ ಅತಿಥಿಗಳಾಗುವದು ಪ್ರಿಯಕರವಾಗಿತ್ತು. ಹೀಗಾಗಿ ದೇವತೆಗಳೂ ಮಾನವರೂ ಕೈಯೊಳಗೆ ಕೈಹಾಕಿ ಎಲ್ಲ ಬಗೆದು ಕತ್ತಲವನ್ನೂ ಹಾರಹೊಡೆದು ಬೆಳಕಿನ ಬೆಳೆಯನ್ನುಂಡರು. ಈಗಿನವರಾದ ನಾವೋ ಹುಟ್ಟಾ ಪರಲೋಕಪ್ರಣಯಿಗಳು; ಜನ್ಮಕ್ಕೆ ಬೇಸತ್ತವರು; ಭೂಮಿತಾಯಿಯ ದ್ರೋಹಿಗಳು; ಕರ್ತೃತ್ವವಿಲ್ಲದೇ ಸ್ವರ್ಗಕ್ಕಾಗಿ ಜೊಲ್ಲುಸುರಿಸುವವರು· ಧರ್ಮಾಧರ್ಮದ ವಿವೇಕವಿಲ್ಲದೆ, ಮಾಡಿದ್ದೇ ಧರ್ಮ ಬಿಟ್ಟದ್ದೇ ಅಧರ್ಮ ಎಂದು ತಿಳಿಯುವ ಹುಂಬರು. "ಅಭಿನೋ ದೇವೀಃ ಅವಸಾ ಮಹಃ ಶರ್ಮಣಾ ನೃಪತ್ನೀಃ ಅಚ್ಛಿನ್ನಪತ್ರಾಃ ಸಚಂತಾಮ್" (೧।೨೨।೧೧) ಎಂದು ನಮ್ಮ ಹಿರಿಯರ ವಿಶ್ವಾಸ. ಗಂಡು ಪರಾಕ್ರಮಶಾಲಿಗಳಾದವರ ಹೆಂಡಂದಿರಾದ ದೇವಿಯರು ಸಹಾಯ ಸಹಿತರಾಗಿಯೂ ಸಂರಕ್ಷಣಸಮರ್ಥರಾಗಿಯೂ ತಮ್ಮ ಇಡೀ ಗರಿಗಳನ್ನು ಕೆದರಿ ನಿಂತಿರುವರು, ಎಂದು ಅವರ ಶ್ರದ್ಧೆ' ವಿಶ್ವಾಸ. ನಮಗೋ ಭೂತವೇತಾಳಗಳೆಲ್ಲ ನಮ್ಮ ಕಾಲಿಗೆ ಜೋತು ಬಿದ್ದು ಹಗಲು ಹನ್ನೆರಡು ತಾಸು ನರಕಕ್ಕೆ ಎಳೆಯುತ್ತಿರುವವೆಂದು ನಮ್ಮ ಭೀತಿ. ಈ ಕೆಲಸದಲ್ಲಿ ದೇವತೆಗಳೂ ಈ ಭೂತವೇತಾಳಗಳಿಗೆಯೇ ಪ್ರೋತ್ಸಾಹಿಸುತ್ತಿರುವರೆಂದು ನಮ್ಮ ಶಂಕೆ. "ಹಾ ಕಷ್ಟಂ ಕಲಿಕಾಲಃ" ಎಂಬದು ನಮ್ಮ ಸಪ್ತಾಕ್ಷರೀ ಮಂತ್ರಜಪ. ಅಂತೆಯೇ ನಮಗೆ ಶಕ್ತಿಮಾತೆಯರಲ್ಲಿಯೂ ವಿಶ್ವಾಸವಿಲ್ಲ. ಸರ್ವತಂತ್ರಸ್ವತಂತ್ರನಾದ ಭಗವಂತನ

ಲ್ಲಿಯೂ ಭಕ್ತಿಯಿಲ್ಲ. ಇದನ್ನು ಕಂಡು ಪ್ರಲಯಾಭಿಮುಖವಾದ ನಮ್ಮ ಜನಾಂಗ ವನ್ನು ಉತ್ಕರ್ಷಾಭಿಮುಖವನ್ನಾಗಿ ಮಾಡಲು "ಶಕ್ತ್ಯಾಂ ಭಗವತೀಚ ಶ್ರದ್ಧಾ" ಎಂಬ ಆದೇಶವಾಕ್ಯವನ್ನು ಗುರು ಅರವಿಂದರು ನಮ್ಮೆಲ್ಲರಿದಿರಿಟ್ಟಿದ್ದಾರೆ. "ಪೃಥಿವೀಂ ಮಾತರಂ" ಎಂದು ನಮ್ಮ ಹಿಂದಿನ ಹಿರಿಯರು ಹಾಡಿಕೊಂಡಂತೆ ಇಂದಿನ ಹಿರಿಯ ರಾದರೂ "ವಂದೇ ಮಾತರಂ" ಎಂದು ಜನ್ಮಭೂಮಿಯ ವಾತ್ಸಲ್ಯದ ಉದ್ಘೋಷಣೆ ಯನ್ನು ಮತ್ತೆ ಮಾಡುತಲಿದ್ದಾರೆ. "ಜಯ ಭುವನೇಶ್ವರಿ" ಎಂಬ ನಾದವು ಕರ್ನಾ ಟಕದಲ್ಲಿ ದಿಗಂತವಾಗಿ ವ್ಯಾಪಿಸಲು ಬಳ್ಳಿಬಳ್ಳಿಯಾ ಹಬ್ಬುತ್ತಲಿದೆ. ಇಂತಾಗಿ ಆ ವೈದಿಕ ಆರ್ಯರ ಸ್ಫೂರ್ತಿಯು ಮತ್ತೆ ನಮ್ಮನ್ನು ಹುರಿದುಂಬಿಸುತ್ತಲಿದೆ.

ಉಪನಿಷತ್ತುಗಳಲ್ಲಿಯೂ ಸೌಭಾಗ್ಯಲಕ್ಷ್ಮಿ, ಸರಸ್ವತಿರಹಸ್ಯ, ಬಹ್ವೃಚ, ತ್ರಿಪು ರಾತಾಪಿನಿ, ದೇವಿ, ತ್ರಿಪುರ, ಭಾವನಾ, ತಾರಸಾರ, ಮೊದಲಾದವುಗಳು ಶಕ್ತಿಮಾತೆ ಯರ ಉಪಾಸನೆಯ ವಿಧಿವಿಧಾನಗಳನ್ನು ಹೇಳುತ್ತವೆ. "ಮಹಾಲಕ್ಷ್ಮೀಶ್ಚ ವಿದ್ಮಹೇ" "ಸರ್ವಸಿದ್ಧಿಶ್ಚ ಧೀಮಹಿ" "ತನ್ನೋದೇವಿ ಪ್ರಚೋದಯಾತ್" ಎಂದು ಜಪಿಸಿ ಮಹಾ ಲಕ್ಷ್ಮಿಯನ್ನು ಒಲಿಸಿಕೊಳ್ಳಲು ಹೇಳಿದ್ದಾಗಿದೆ. "ದುರ್ಗಾತ್ ಸಂತ್ರಾಯತೆ ಯಸ್ಮಾತ್ ತಸ್ಮಾತ್ ದುರ್ಗೇತಿ ಕಥ್ಯತೆ" ಎಂದು ಹೇಳಿ ಸಂಕಟಕಾಲದಲ್ಲಿ ದುರ್ಗೆಯ ಸಹಾಯವು ಒಲಿಸಿಕೊಂಡವರಿಗೆ ದೊರೆಯುವದೆಂದು ಸಾರಿದ್ದಾರೆ. "ಯಾಪ್ರತ್ಯಗ್‌ದೃಷ್ಟಿಭಿರ್ದೇವೈಃ ಯಜ್ಯಮಾನಾನು ಭೂಯತೆ ವ್ಯಾಪಿನೀ ಜ್ಞಪ್ತಿರೂಪೈಕಾ ಸಾಮಾಂಪಾತು ಸರಸ್ವತೀ" ಎಂದು ಬಣ್ಣಿಸಿ ತನ್ನೊಳಗೆ ಬೆಳಗುತಿರುವ ಜ್ಞಾನದ ಅಖಂಡ ನಂದಾದೀಪವನ್ನು ಕಂಡು ಕೊಳ್ಳುವ ಹಾದಿಯನ್ನು ತೋರಿಸಿದ್ದಾಗಿದೆ. ಭಗವಂತನೇ ಈ ಶಕ್ತಿಗಳನ್ನು ಎಲ್ಲರ ಉನ್ನ ತಿಗೆ ಸಾಧಕವಾಗಲೆಂದೂ, ಅವನತಿಗೆ ಬಾಧಕವಾಗಲೆಂದೂ, ಪ್ರಚೋದಿಸುತ್ತಿರಲು ನಾವು ಈ ಶಕ್ತಿಗಳ ಉಪಾಸನೆಯಿಂದ ಪ್ರತ್ಯಕ್ಷ ಅಭ್ಯುದಯವನ್ನೂ ಪರಿಣಾಮತಃ ನಿಶ್ರೇಯಸದ ಸಾಧನವನ್ನೂ ಏಕೆ ಒದಗಿಸಿಕೊಳ್ಳಬಾರದು? ಆದರೆ ನಮ್ಮ ಅವಿವೇಕ ತನದ ಮನ್ವಂತರದಲ್ಲಿ "ಯಸ್ಯಕಸ್ಯ ತರೋರ್ಮೂಲಂ ಏನಕೇನಾಪಿ ಮಿಶ್ರಿತಂ ಯಸ್ಮೈ ಕಸ್ಮೈ ಪ್ರದಾತವ್ಯಂ ಯದ್ವಾತದ್ವಾ ಭವಿಷ್ಯತಿ" ಎಲ್ಲಿಯದಾದರೂ ಬೇರುತಂದು ಯಾತ ರಲ್ಲಾದರೂ ಬೆರಿಸಿ ಯಾರಿಗಾದರೂ ಕೊಟ್ಟರೆ ಏನಾದರೂ ಆಗುವದು ಎಂದಂದು ಕೊಂಡು ಔಷದ ಪ್ರಯೋಗಮಾಡುವ ವೈದ್ಯನಂತೆ ನಮ್ಮೆಲ್ಲರ ಸ್ಥಿತಿಯಾಗಿದೆ. ನಮ್ಮ ಸಂಸಾರದ ಸುತ್ತಲೆಲ್ಲಾ ಸಂಶಯ ಸಂದೇಹಗಳ ಬೇಲಿ! ಕಾಲಲ್ಲಿ ಭಯಭೀತಿಯ ಮುಳ್ಳುಹಳ್ಳು! ತಲೆಯಮೇಲೆ ಈಶ್ವರೀಪ್ರಕೋಪದ ಗುಡುಗು ಮಿಂಚು! ಎದೆಯಲ್ಲಿ ಶಾಪಿತಳಾದ ಅಹಲ್ಯೆಯಂತೆ ವ್ಯಭಿಚಾರಿಬುದ್ಧಿಯು ಕಲ್ಲಾಗಿ ಬಿದ್ದುಕೊಂಡಿದೆ! ನಮಗೆ ಪೌರುಷವಿಲ್ಲದಲ್ಲಿ ಅಭ್ಯುದಯವಿಲ್ಲ, ಅಧ್ಯಯನವಿಲ್ಲದಲ್ಲಿ ಜ್ಞಾನವಿಲ್ಲ, ತಪಸ್ಸಿಲ್ಲದೆ ಸಿದ್ಧಿ ಯಿಲ್ಲ, ಭಕ್ತಿಯಿಲ್ಲದೆ ಭಗವಂತನ ಕೃಪೆಯಿಲ್ಲ. ಎಂಬೀಮಾತುಗಳು ತಿಳಿಯದೆ ಹೊಳೆ ಯದೆ ಹೋಗಿರುವದರಿಂದ ಹಾಲಿಲ್ಲ ಬಟ್ಟಲಿಲ್ಲ ಗುಟುಕ್ ಎಂದಾಡುವ ಹೆಣ್ಣುಮಕ್ಕಳ

ಲೀಲಾಬೇಟದಂತೆ ನಮ್ಮ ಭವಿತವ್ಯದ ಭವ್ಯಚಿತ್ರವಾದರೂ ಬಿಸುಲುಗುದುರೆಯನೇರಿ ಓಡುತ್ತಲಿದೆ. ಅದೇನಿಲ್ಲ. ನಾವು ಬುದ್ಧಿವಂತರಾಗುಲುಬೇಕು. ವಿವೇಕಿಗಳಾಗಲು ಬೇಕು. ಬೇಕಾದ ಸಿದ್ಧಿಗಳಿಗೆ ತಕ್ಕಸಾಧನಗಳನ್ನು ಹುಡುಕಿಕೊಳ್ಳಲು ಬೇಕು. ಪ್ರಯೋಗಗಳನ್ನು ಮಾಡಿನೋಡಿಕೊಳ್ಳಲುಬೇಕು. ಗಂಡುಗುಂದದೆ ದುಡಿಯಲುಬೇಕು. ಅನುಷ್ಠಾನವಿಲ್ಲದೇ ಅನುಭವವಿಲ್ಲ. ಎಂದರಿಯಲುಬೇಕು. ಹೆರರ ಪೊಳ್ಳುಬೆದರಿಕೆಗಳಿಗೆ ದಿಗ್ಭ್ರಾಂತರಾಗಿ ಪೂರ್ವಾಪರ ವಿಚಾರವಿಲ್ಲದೆ ಸಿಕ್ಕದ್ದನ್ನು ಮಾಡುವದನ್ನು ಬಿಟ್ಟುಕೊಡಲು ಬೇಕು. ನಾವು ಧನದಲ್ಲಿಯೂ, ಜ್ಞಾನದಲ್ಲಿಯೂ, ಬಲದಲ್ಲಿಯೂ ರಸಾತಳದಲ್ಲಿ ಹೊಟ್ಟೆಹೊಸೆಯುತ್ತಿರುವಾಗ ಆ ತತ್ವಗಳ ಅಧಿದೇವತೆಗಳ ಉಪಾಸನೆಯನ್ನೂ ಅವುಗಳನ್ನು ದೊರಕಿಸುವ ಪುರುಷಾರ್ಥಗಳನ್ನೂ ಅದಕ್ಕೆ ತಕ್ಕ ಅನುಷ್ಠಾನವನ್ನೂ ತಪವನ್ನೂ ಮಾಡಬೇಕೆಂದು ಮನಗಾಣಿಸಲು ಶಾಸ್ತ್ರವೊಂದು ಬೇರೆ ಬೇಕೇ ? ಹೆರವರ ಉದಾಹರಣೆಯೇಕೆ ? ಪ್ರತಿಕೂಲ ಪರಿಸ್ಥಿತಿಯಲ್ಲಿದ್ದವರಿಗೆ ಎಲ್ಲವೂ ವಿಪರೀತವಾಗಿಯೇ ತೋರುವದು; ಆಗುವದು. ಶಕ್ತಿಮಾತೆಯರ ಸಹಾಯವನ್ನು ಬೇಡಿ ದೊರಕಿಸಿ ಸರ್ವತೋಪರಿಯು ಪಾರತಂತ್ರ್ಯದ ಪಂಕದೊಳಗಿಂದ ಮೇಲೆದ್ದು ವೀರಜೀವನ ಕ್ರಮವನ್ನು ಮತ್ತೆ ಹೂಡಲುಬೇಕು.

ಇನ್ನು ಪುರಾಣಾಗಮಕಾಲಗಳಲ್ಲಿ ಶಕ್ತಿಮಾತೆಯರ ಮಹಾತ್ಮ್ಯವು ಹೇಗೆ ಬೆಳಿಯಿತೆಂಬದನ್ನು ನೋಡಿದರೆ ನಮ್ಮ ಮತಮತಾಂತರಗಳನ್ನು ಹುಟ್ಟಿಸಿದ ತೇಜಸ್ವಿಗಳ ವೀರ್ಯವತ್ತರವಾದ ಜೀವನದ ಕೆಚ್ಚಿನ ಮೂರ್ತಿಗಳಾವವು ಎಂಬುದು ಕಂಡುಬರುವದು. ನಾವು ಸಗುಣ ನಿರ್ಗುಣವೆಂದು ಉಪಾಸನೆಯಲ್ಲಿ ಎರಡು ಭೇಧಗಳನ್ನು ಕಲ್ಪಿಸುವದುಂಟು. ಸಗುಣೋಪಾಸನೆಯಲ್ಲಿ ದೇವನಿಗೆ ತಂದೆಯೆಂದಾಗಲಿ ತಾಯಿಯೆಂದಾಗಲಿ ಭಜಿಸಿದರೆ, ನಿರ್ಗುಣದಲ್ಲಿ ಓಂ ತತ್ಸತ್ ಎಂದು ಉಪಾಸನೆಯನ್ನು ಮಾಡುವೆವು. ವಿಷ್ಣುವಿಗೆ ಪರಮನೆಂದು ತಿಳಿಯುವ ಸಗುಣೋಪಾಸಕರಿಗೆ ವೈಷ್ಣವರೆಂದೂ ಶಿವನನ್ನು ಪರಮನೆಂದು ತಿಳಿಯುವವರಿಗೆ ಶೈವರೆಂದೂ, ಶಕ್ತಿಯೇ ಪರಮಳೆಂದು ತಿಳಿಯುವವರಿಗೆ ಶಾಕ್ತರೆಂದೂ, ಅನ್ನುವರು. ಶೈವ, ವೈಷ್ಣವ, ಉಪಾಸನೆಗಳಲ್ಲಿ ಶಕ್ತಿಯನ್ನು ಪಾರ್ವತಿಯೆಂದಾಗಲಿ, ಲಕ್ಷ್ಮಿಯೆಂದಾಗಲಿ, ಪೂಜಿಸುವದರಿಂದ ಶಕ್ತಿಗೆ ಪ್ರಧಾನಸ್ಥಾನವಿಲ್ಲೆಂಬದು ವಿದಿತವೇ ಇದೆ. ಆದರೆ ಶಾಕ್ತ್ಯರು ದೇವಿಯನ್ನೇ ಪರಮಳೆಂದು ತಿಳಿಯುವದರಿಂದ ಅವಳ ಅನುಗ್ರಹವಿಲ್ಲದೆ ಪರಬ್ರಹ್ಮವೂ ಇರಲರಿಯದೆಂದು ತಿಳಿಯುವರು. ಅಂದಮೇಲೆ ವಿಶ್ವದಲ್ಲಿ ತುಂಬಿದ ಚಿತ್ ಶಕ್ತಿಯ ನಿರ್ಗಣರೂಪಕ್ಕೆ ಆದಿಶಕ್ತಿಯೆಂದೂ ತಿಳಿಯುವದಾಗಿ ತೋರುತ್ತದೆ. ಈ ಶಕ್ತಿಯು ಪಿಂಡದಲ್ಲಿಯೂ ಬ್ರಹ್ಮಾಂಡದಲ್ಲಿಯೂ ತುಂಬಿಕೊಂಡಿದ್ದಾಳೆ. ಈ ಶಕ್ತಿಯನ್ನು ಕಂಡು ವಶೀಕರಿಸಿಕೊಳ್ಳುವದೇ ಮಂತ್ರಶಾಸ್ತ್ರಗಳ ಗುರಿಯಾಗಿದೆ. ಯಾವ ಶಕ್ತಿಯನ್ನು ಸಾಕ್ಷಾತ್ಕರಿಸಿಕೊಳ್ಳಲು ಯೋಗಶಾಸ್ತ್ರವು ತನ್ನನ್ನು ಅರ್ಪಿಸಿಕೊಂಡಿರುವದೋ, ಆ ಮನುಷ್ಯಮಾತ್ರದಲ್ಲೆಲ್ಲ ತುಂಬಕೊಂಡ ಶಕ್ತಿಗೆ ಕುಂಡಲಿನಿಯೆಂದು

ಹೆಸರು. ನಮ್ಮ ಬೆನ್ನು ಹುರಿಯು ಬೇರಾಗಿರುವ ಮೂಲಾಧಾರದಲ್ಲಿ ಇವಳು ಸರ್ಪಾಕಾರವಾಗಿ ಮಲಗಿಕೊಂಡಿರುವಳಂತೆ. ಇವಳನ್ನು ಯೋಗಿಯು ಪ್ರಾಣಾಯಾಮದಿಂದಾಗಲಿ ಮಂತ್ರದಿಂದಾಗಲಿ ಎಚ್ಚರಿಸಬಹುದು. ಹಾಗೆ ಎಚ್ಚತ್ತ ಕುಂಡಲಿನಿಯು ಮೂಲಾಧಾರದಿಂದ ಸ್ವಾಧಿಷ್ಠಾನಕ್ಕೂ ಅಲ್ಲಿಂದ ಮಣಿಪೂರ ಚಕ್ರಕ್ಕೂ ಆ ಮೇಲೆ ಅನಾಹತ ಚಕ್ರದಲ್ಲಿ ಬಂದು ನಾದವಾಗಿಯೂ ಗೋಚರಿಸುವಳು. ಮುಂದೆ ವಿಶುದ್ಧಿಯಲ್ಲಿ ಸಾತ್ವಿಕಳಾಗಿ ಕಡೆಗೆ ಆಜ್ಞಾ ಚಕ್ರದಲ್ಲಿ ಜ್ಯೋತಿರ್ಮಯಳಾಗಿ ಸಾಕ್ಷಾತ್ಕರಿಸುವಳು. ಇದರ ಮುಂದೆ ಮತ್ತೆ ಮೂರು ಚಕ್ರಗಳಿರುವವೆಂದು ನಿಜಗುಣ ಶಿವಯೋಗಿ, ಶಂಕರಾನಂದ, ಮೊದಲಾದ ಕರ್ನಾಟಕದೊಳಗಿನ ಯೋಗಿಗಳ ಮತವಿದೆ. ಮೊನ್ನೆ ಮುಂಬೈಯೊಳಗಿನ ಒಬ್ಬ ಆಂಗ್ಲವೈದ್ಯಕ ವಿಶಾರದರು ಆಂಗ್ಲ ಶಾರೀರಿಕದಲ್ಲಿ ಯಾವದಕ್ಕೆ 'ವ್ಹೇಗ ನರ್ವ್ಹ್' ಎಂದೆನ್ನುವರೋ ಅದೇ ಕುಂಡಲಿನಿಯೆಂದು ಪ್ರಕಟಪಡಿಸಿದ್ದುಂಟು. ಆದರೆ ಅದರ ಸತ್ಯಾಸತ್ಯತೆಯ ವಿವೇಚನೆಯು ಇಲ್ಲಿ ಪ್ರಸ್ತುತವಲ್ಲ. ನಮ್ಮಲ್ಲಿ ಅಂತರ್ಲೀನವಾಗಿರುವ ಶಕ್ತಿಯನ್ನು ಸಾಕ್ಷಾತ್ಕರಿಸಿಕೊಳ್ಳುವ ಶಾಸ್ತ್ರವೊಂದಿದೆ. ಅದರ ಅನುಷ್ಠಾನ ಮಾಡುವ ಜನರೂ ಇದ್ದಾರೆ. ಆದರೆ ನಾವು ನಮ್ಮ ಹೊಸವಿದ್ಯೆಯ ಉಬ್ಬಿನಲ್ಲಿ ಅರಸನನ್ನು ಕಂಡು ಪುರುಷನನ್ನು ಮರೆತ ಮರುಳು ಹೆಣ್ಣಿನಂತೆ ನಾವು ಆ ಶಾಸ್ತ್ರಕ್ಕಾಗಲಿ ಅನುಷ್ಠಾನಮಾಡುವವರನ್ನು ಕುರಿತಾಗಲಿ, ಗಮನಿಸುವದಿಲ್ಲ.

ಮೇಲ್ಕಾಣಿಸಿದ ಚಕ್ರಗಳಲ್ಲಿ ಗೋಚರವಾಗುವುದನ್ನು ಯಂತ್ರಗಳ ರೂಪಗಳಲ್ಲಿ ಬರೆದಿಡುವ ರೂಢಿಯುಂಟು. ಕೋಣಗಳುಳ್ಳ ಆಕ್ರತಿಗೆ ಯಂತ್ರವೆಂದೂ, ಕೋಣಗಳೂ, ಕಮಲದಳಗಳೂ ಉಳ್ಳ ಆಕ್ರತಿಗೆ ಚಕ್ರವೆಂದೂ ಆಗಮಗಳಲ್ಲಿ ಕರೆಯುವರು. ಈ ಯಂತ್ರಗಳಲ್ಲಿಯೂ ಚಕ್ರಗಳಲ್ಲಿಯೂ, ಕೆಲವು ಬೀಜಾಕ್ಷರಗಳನ್ನು ಬರೆಯುವರು. ಅವುಗಳ ಅರ್ಥವು ದೀಕ್ಷೆಹೊಂದಿದವರಿಗೇ ತಿಳಿಯುವದು. ಈ ಎಲ್ಲ ಯಂತ್ರಗಳ ಸಾರ್ವಭೌಮದಂತಿರುವ ' ಶ್ರೀ ' ಚಕ್ರವೆಂಬುವದೊಂದಿದೆ. ಇದರ ವಿಷಯವಾಗಿ 'ತ್ರಿಪುರಾತಾಪಿಣಿ ' ಉಪನಿಷತ್ತಿನಲ್ಲಿ ಸಮಗ್ರವಾಗಿ ಹೇಳಿದೆ. ಈ ಚಕ್ರದ ಪೂಜೆಯನ್ನೇ ವಿದ್ಯಾರಣ್ಯರು ಮಾಡಿದರೆಂದು, ಕೆಳದಿ ಬಸವಪ್ಪನಾಯಕರ 'ಶಿವತತ್ವರತ್ನಾಕರದಲ್ಲಿಯೂ, ವಿಜಯನಗರ ಸ್ಥಾಪನಾವಿಷಯಕವಾದ ಒಂದು ಬಖರಿನಲ್ಲಿಯೂ ಬಂದಿದೆ. ನಮ್ಮ ಈ ದಕ್ಷಿಣದೊಳಗಿನ ಶಕ್ತಿ ಪೀಠಾಲಯಗಳಲ್ಲಿ ಬಲಿಪೀಠದಂಥ ಒಂದು ಪೀಠವಿರುವದೆಂದೂ, ಅವುಗಳೊಳಗೆ ' ಶ್ರೀ ' ಚಕ್ರವಿರುವದೆಂದೂ ಹೇಳುತ್ತಾರೆ. ಈ ರೀತಿಯಾಗಿ, ಶಕ್ತಿಯನ್ನು ವಿಧವಿಧವಾಗಿ ಉಪಾಸಿಸುವ ರೀತಿಯು ಪುರಾಣಾಗಮಗಳಲ್ಲಿ ಹೇಳಿದ್ದಾಗಿದೆ. ಮಾರ್ಕಂಡೇಯ ಪುರಾಣದಲ್ಲಿಯೂ, ದೇವಿಮಹಾತ್ಮೆಯಲ್ಲಿಯೂ ದೇವೀಭಾಗವತದಲ್ಲಿಯೂ, ವಿಷ್ಣುಧರ್ಮೋತ್ತರ, ಉತ್ತರಕಾಮಿಕಾಗಮ, ಕಾರಣಾಗಮ ನಾರದಸಂಹಿತಾ, ದುಯದೀಪಿಕಾ, ಸುಪ್ರಭೇದಾಗಮ, ಅಂಶುಮದ್ಭೇದಾಗಮ, ಪೂರ್ವಕಾರಣಾಗಮ ಮೊದಲಾದ ಆಗಮಗಳಲ್ಲಿಯೂ, ಶಕ್ತಿಮಾತೆಯ ಅನಂತಾನಂತ

ರೂಪಗಳನ್ನು ವರ್ಣಿಸಿದ್ದಾರೆ. ಶ್ರೀ, ಭೂ, ಸರಸ್ವತಿ, ದುರ್ಗಾ, ಸಪ್ತಮಾತೃಕೆಯರು ಋದ್ಧಿ, ಸಿದ್ಧಿ, ಕೀರ್ತಿ, ಕ್ಷಮಾ ಮೊದಲಾದ ದೇವತೆಯರು, ಭುವನೇಶ್ವರೀ, ಚಾಮುಂಡಿ ಶಾರದಾ, ಮೊದಲಾದವರನ್ನು ಹೇಗೆ ರೇಖಿಸಬೇಕು, ರೂಪಿಸಬೇಕು, ಕೆತ್ತಬೇಕು, ಎಂಬದನ್ನು ಸಮಗ್ರವಾಗಿ ವರ್ಣಿಸಿದೆ. ಉದಾಹರಣಾರ್ಥವಾಗಿ ನಮಗೆ ಪ್ರಸ್ತುತವಾದ ನಾಲ್ಕುದೇವಿಯರ ವರ್ಣನಾ ಶ್ಲೋಕಗಳನ್ನು ಇಲ್ಲಿ ಕೊಡುತ್ತೇವೆ.

ಶುಕ್ಲವರ್ಣಾ ಮಹೀಕಾರ್ಯಾ, ದಿವ್ಯಾಭರಣ ಭೂಷಿತಾ ।
ಚತುರ್ಭುಜಾ ಸೌಮ್ಯವಪುಃ ಚಂದ್ರಾಂಶ ಸದೃಶಾಂಬರಾ ॥
ರತ್ನಪಾತ್ರಂ ಸಸ್ಯಪಾತ್ರಂ ಪಾತ್ರಮೌಷಧಿ ಸಂಯುತಂ ।
ಪದ್ಮಂಕರೇಚ ಕರ್ತವ್ಯಂ ಭೂದೇವ್ಯಾ ಯಾದವನಂದನ ॥
ದಿಗ್ಗಜಾನಾಂ ಚತುರ್ಣಾಂಚ ಕಾರ್ಯಾಪೃಷ್ಠಗತಾತಥಾ ॥

ಮೈಬಣ್ಣ ಬೆಳಕಿನಂತಹದು, ಮೈತುಂಬ ಮಿಗಿಲಾದ ವಸ್ತ್ರ ಒಡವೆ, ನೋಡಿದರೆ ತೃಪ್ತಿಯಾಗುವ ಮೈ, ಬೆಳದಿಂಗಳಂದದ ಉಟ್ಟ ಬಟ್ಟೆ, ಒಂದು ಕೈಯಲ್ಲಿ ರತ್ನದ ಕುಡಿಕೆ, ಇನ್ನೊಂದು ಕೈಯಲ್ಲಿ ಸಸಿಯ ಹರಿವಾಣ ,ಮತ್ತೊಂದು ಕಯ್ಯಲ್ಲಿ ಆರೋಗ್ಯದ ಅಮೃತಪಾತ್ರ, ನಾಲ್ಕನೆಯ ಕಯ್ಯಲ್ಲಿ ವೈಭವದ ಕೆಂದಾವರೆ, ಕುಳಿತದ್ದು ನಾಲ್ಕುದಿಕ್ಕಿನ ಆನೆಗಳ ಬೆನ್ನಮೇಲೆ, ಹೀಗೆ ಬರೆದ ಕೆತ್ತಿದ ಭೂದೇವಿಯ ಅಡಿಯಲ್ಲಿ ಮತ್ತೆ ಇಂದು "ವಂದೇ ಮಾತರಂ" ಎಂದು ತಾಯಿಯ ಎಲ್ಲ ಮಕ್ಕಳೂ ವರ್ಣ-ಜಾತಿ-ಕುಲ-ಗೋತ್ರ ಗಳ ಭೇದವಿಲ್ಲದೆ, ಬಂಧುಭಾವದ ಒಮ್ಮನಸ್ಸಿನಿಂದ ಎರಗಿದರೆ, ಭೂಶಕ್ತಿಯು ನಮಗೆ ಬೇಕಾದ ಬಾಯಾರಿ ಹಂಬಲಿಸುತ್ತಿರುವ ಮನಸಾರೆ ಹಾತೊರೆಯುತ್ತಿರುವ ಐಕ್ಯವನ್ನು ಸಿದ್ಧಿಸಿಕೊಡಳೇ ? ಮಹಾನವಮಿಯ ಮುಂದಿನ ಶೀಗೀಹುಣ್ಣಿವೆಯಾದರೂ ಭೂದೇವಿಯ ಪೂಜೆಯ ಪ್ರಕಾರವೇ ಆಗಿರುವದು. ದುರ್ಗೆಯನ್ನು ಸಸ್ಯಾಂಕುರಗಳಿಂದ ಪೂಜಿಸುವದರಿಂದ ಅವಳಲ್ಲಿ ಭೂದೇವಿಯ ತತ್ವವನ್ನು ಕಂಡೇ ಪೂಜಿಸುವಂತೆ ತೋರುತ್ತದೆ.

ಮಹಾಲಕ್ಷ್ಮಿಯು ರತ್ನಕೋಶದಲ್ಲಿ ಕೊಟ್ಟಿರುವ

ಉದ್ಯತ್ ಭಾಸ್ವತ್ ಸಮಾಭಾಂ ವಿಜಿತನವಜಪಾಂ ಇಂದುಖಂಡಾವನದ್ಧಾಂ।
ಜ್ಯೋತಿರ್ಮಾಲಾಂ ತ್ರಿನೇತ್ರಾಂ ವಿವಿಧಮಣಿಲಸತ್ಕುಂಡಲಾಂ ಪದ್ಮಸಂಸ್ಥಾಂ॥
ಹಾರಗ್ರೈವೇಯಕಾಂಚ ಮಣಿಗಣವಲಯೈಃ ಸಂಯುತಾಂ ಪುಂಖರಾಢ್ಯಾಂ
ಆದ್ಯಾಂ ಪಾಶಾಂಕುಶಾಭ್ಯಾಂ ಅಭಯವರಕರಾಂ ಭಾವಯೇತ್ ಭೌವನೇಶೀಂ।

ಮೂಡುವ ಸೂರ್ಯನಂದದ ಮೈಹೊಳಪು, ಹೊಚ್ಚ ಹೊಸ ಜಪಾಕುಸುಮವನ್ನು ಗೆಲ್ಲುವ ಕೆಂಬಣ್ಣ, ಬಿದಿಗೆಯ ಚಂದ್ರನು ಮುಡಿಯಲ್ಲಿ, ನಕ್ಷತ್ರದ ಮಾಲೆಗಳು ಕೊರಳಲ್ಲಿ, ಮೂರು ಕಣ್ಣುಗಳು, ಹರಳು ಹರಳಿನ ಹೊಳಪುಳ್ಳ ಕುಂಡಲುಗಳು ಕಿವಿ

ಯಲ್ಲಿ, ಕುಳಿತಪ್ಪು ಕೆಂದಾವರೆಯಲ್ಲಿ, ಕೊರಳಲ್ಲಿ ಹಾರ ಮೊದಲಾದವು, ನಡುವಿನಲ್ಲಿ ವಡ್ಯಾಣ, ಕಯ್ಯಲ್ಲಿ ಹರಳಿನ ಕಡಗ, ಉಟ್ಟದ್ದು ಒಳ್ಳೆ ವಸ್ತ್ರ, ಮುಂದೆ ಪ್ರೇರಿಸುವಂತೆಯೂ ತಪ್ಪಿದಲ್ಲಿ ಶಾಶಿಸುವಂತೆಯೂ ಒಂದು ಕಯ್ಯಲ್ಲಿ ಚುಚ್ಚುಗೋಲು, ಇನ್ನೊಂದು ಕೈಯ್ಯಲ್ಲಿ ತಪ್ಪು ಹಾದಿಯಿಂದ ನಿಗ್ರಹಿಸುವಂತೆಯೂ ಒಳ್ಳೆ ಹಾದಿಗೆ ಪ್ರವರ್ತಿಸುವಂತೆಯೂ ತನ್ನ ಅಂಕೆಯಲ್ಲಿಟ್ಟುಕೊಳ್ಳಲು ಒಂದು ಪಾಶ, ಮತ್ತೊಂದು ಕೈ "ಕಂದಾ! ಹೆದರಬೇಡ" ಎನ್ನುವಂತೆಯೂ, ಮಗದೊಂದು "ಬೇಡಿದ್ದನ್ನು ಕೊಡುವೆ" ಎಂದು ಹರಸುವಂತೆ, ಹೀಗೆ ಆದ್ಯಳಾದ ಭುವನೇಶ್ವರಿಯನ್ನು ಧ್ಯಾನಿಸಬೇಕೆಂದು ಹೇಳಿದೆ ಇಂಥವಳನ್ನು ಧ್ಯಾನಿಸಿಯೋ ನಾಡಿನ ಬಡತನವನ್ನೂ ಕಳೆದರು. ರಾಜ್ಯ ಸಂಸ್ಥಾಪನೆಗೆ ಬೇಕುವ ಧನವನ್ನೂ ಒದಗಿಸಿಕೊಟ್ಟರು ವಿದ್ಯಾರಣ್ಯರು. ಮೂರ್ತಿಪೂಜೆಯೆಂಬ ಹೆಸರಿಗಾಗಲಿ, ಮೂಢಭಕ್ತಿಯೆಂಬ ಕೂಗಿಗಾಗಲಿ ನಾವು ಬೆದರಬೇಕೆ ? ನಾವು ಭುವನೇಶ್ವರಿಯನ್ನು ಅಭ್ಯರ್ಥಿಸಿ ಎಲ್ಲ ಬಡತನವನ್ನು ಕಳೆದುಕೊಳ್ಳುವ ಹೊತ್ತು ಬಂದಿಲ್ಲವೇ ? ಸಾಧನಗಳ ಔಚಿತ್ಯ ಅನೌಚಿತ್ಯಗಳ ಬಗ್ಗೆ ವಾದಹೂಡಿಕೊಂಡು ಸಿದ್ಧಿಸಂಪಾದನೆಯಿಂದ ನಾವು ಪರಾಙ್ಮುಖರಾಗುತಲಿದ್ದೇವೆ.

ದುರ್ಜನರ ತಾಮಸಾಹಂಕಾರವು ಕೋಣನಂತೆ ಕೊಬ್ಬಿ, ಕ್ರೌಂಚ ಮಿಥುನದ ಸಂಸಾರವನ್ನು ಬೇಡನು ಕೆಡಿಸಿದಂತೆ, ಇವರೂ ಕೆಡಿಸುತ್ತಿರುವ ಕಾಲದಲ್ಲಿ ರಾಜಸ ಶಕ್ತಿಯು ಸಿಂಹನನ್ನೇರಿ, ನಿಯೋಜಿತ ಸಂಕಲ್ಪವನ್ನು ಕೊನೆಗಾಣಿಸಲು, ಸತ್ವಸಂಪನ್ನಳಾದ ದುರ್ಗೆಯು ಚಾಮುಂಡಿಯಾಗಿ ಮೈಸೂರೊಡೆಯರ ಮೂಲಪುರುಷರಾದ ಯದುಮಹಾರಾಯರಿಗೆ,

ಚಾಮುಂಡಾ ಕಥಿತಾಚೈವ, ಸರ್ವಸತ್ವವಶಂಕರೀ ।

ಎಂಬುದನ್ನ ಸಾರ್ಥಕಗೊಳಿಸುವುತೆ, ಸರ್ವತೋಪರಿಯಾಗಿ ಸಾಹಾಯಕಳಾಗಲಿಲ್ಲವೇ ? ಮತಮತಾಂತರಗಳ ಜಂಜಾಲದಿಂದ ಜನರೆಲ್ಲರೂ ವಿವೇಕಹೀನರಾಗಿ ತಾವು ಹಾಯ್ದುದ್ದೇ ಹಾದಿಯೆಂದೂ ತಿಳಿದುಕೊಂಡಿರುವ ಕಾಲದಲ್ಲಿ, ಅಜ್ಞಾನ ಮಲವನ್ನು ಅಪಹರಿಸಲಿಕ್ಕೆ ಕಾಶ್ಮೀರದ ಶಾರದಾಮೂರ್ತಿಯನ್ನೂ, ಶ್ರಿಂಗೇರಿಯಲ್ಲಿ ಸ್ಥಾಪಿಸಿ, ಸರಸ್ವತಿಯ ಅಪಾರಾವತಾರವಾದ, ಉಭಯ ಭಾರತೀದೇವಿಯ, ಜ್ಞಾನ ಜ್ಯೋತಿಯು ನಿರಂತರವಾಗಿ ನಿಲ್ಲಲು, ಆಧಾರವನ್ನು ಕಲ್ಪಿಸಿಕೊಡಲಿಲ್ಲವೇ ಶಂಕರಾಚಾರ್ಯರು. ಈ ವಿಧವಾಗಿ ಋಷಿಗಳು, ಜ್ಞಾನಿಗಳು, ದರ್ಶನಕಾರರು ಧರ್ಮಸಂಸ್ಥಾಪಕರು, ರಾಜರ್ಷಿಗಳು, ಶತಕಾನುಶತಕದಿಂದ, ಶಕ್ತಿಮಾತೆಯ ಪ್ರಸನ್ನತೆಯನ್ನು ಸಂಪಾದಿಸಿ ಜಗತ್ತಿನ ಹಿತವನ್ನು, ಸಾಧಿಸಿದ್ದಿರಲಾಗಿ, ಸಂಘಟನೆಯ ಬಲವೂ ಇಲ್ಲದ ಈ ಕಲಿಕಾಲವಲ್ಲಿ ಎಲ್ಲ ಬಗೆಯ ಬಡತನವು ನಮ್ಮಲ್ಲಿ ಸೇರಿರಲಾಗಿ ಇಲ್ಲದ ಸಂಶಯಗಳ ಬಲೆಗಳನ್ನೊಡ್ಡಿಕೊಂಡು ಅದರಲ್ಲಿ ತೊಳಲಾಡುವದು ಲೇಸೋ? ಏನು, ವಿಧಿವಿಧಾನಗಳ ತತ್ವವನ್ನರಿತು ಯೋಗ್ಯರ ಸಹವಾಸ ಪಡೆದು, ಅನುಷ್ಠಾನದ ಅಂತ್ಯದಲ್ಲಿ ಬರುವ, ಅನುಭವದ ಒರೆ

ಗಲ್ಲಿನಿಂದ ಒಳಿತು ಕೆಡಕುಗಳನ್ನು ಕಂಡುಕೊಳ್ಳುವದು ಲೇಸೋ ? ಅಣ್ಣಗಳಿರಾ ಪಶು ಜೀವನವು ತೀರಿ, ವೀರ ಜೀವನಕ್ಕೆ ಆರಂಭವಾಗಲಿ ! ಕತ್ತಲೆಕರಗಿ ಬೆಳಕು ಹರಿಯಲಿ.

ಸೃಷ್ಟಿಸ್ಥಿತಿಲಯಾದಿಕಾರಣಳಾದ ' ದೇವಿ 'ಯ ಮಾಹಾತ್ಮ್ಯವನ್ನು ಕುರಿತು ಮಾರ್ಕಂಡೇಯ ಪುರಾಣದಲ್ಲಿ ಬಣ್ಣಿಸಿದೆ. ಅದರ ಮೇಲಿಂದ ಪೌರಾಣಿಕ ಕಾಲದಲ್ಲಿ ಶಕ್ತಿಯ ಬಗ್ಗೆ ಎಷ್ಟು ಆದರಣೀಯವಾದ ಭವ್ಯಕಲ್ಪನೆಯಿತ್ತೆಂಬುದು ತಿಳಿದು ಬರುವದು. ಮಾರ್ಕಂಡೇಯ ಪುರಾಣವೆನ್ನುವದೇನೆಂದರೆ, ಗುಪ್ತರೂಪಿಯಾದ ದೇವಿಯು ಪ್ರಕೃತಿ ಜನ್ಯವಾದ ರಾಜಸಿಕ ಸಾತ್ವಿಕ ತಾಮಸಿಕ ಗುಣಗಳ ಪ್ರಕಾರ ಲಕ್ಷ್ಮಿ ಮಹಾಕಾಲಿ ಸರ ಸ್ವತಿಯೆಂಬ ಹೆಸರುಗಳಿಂದ ಪ್ರಕಟಳಾಗುವಳು. ಆಕೆಗೆ ಬೇರೆ ಬೇರೆ ಹೆಸರುಗಳೂ ಉಂಟು. ಸೃಷ್ಟಿಕಾಲದಲ್ಲಿ ಬ್ರಹ್ಮನನ್ನು ನಿಯಂತ್ರಿಸುವ ದೇವಿಗೆ ಮಹಾಕಾಲಿಯೆಂದು ಹೆಸರು. ಮಹಾಪ್ರಳಯ ಕಾಲದಲ್ಲಿ ಅವಳ ಹೆಸರು ಮಹಾಮಾರಿ. ವೈಭವವನ್ನು ಕೊಡುವಾಗ ಲಕ್ಷ್ಮಿಯೆಂದೂ ನಾಶಗೊಳಿಸುವಾಗ ಜ್ಯೇಷ್ಠಾದೇವಿಯೆಂದೂ ಹೆಸರುಂಟು. ಕಲ್ಪಿತ ವಯೋಮಾನಾನುಸಾರವಾಗಿ ದೇವಿಗೆ ಬೇರೆ ಬೇರೆ ಹೆಸರುಗಳುಂಟು. ಅವ ಳನ್ನು ಒಂದು ವರ್ಷದ ಹಸುಗೂಸೆಂದು ಕಲ್ಪಿಸಿದರೆ ಅವಳ ಹೆಸರು 'ಸಂಧ್ಯಾ.' ಎರಡು ವರ್ಷದವಳಿದ್ದಾಗ 'ಸರಸ್ವತಿ.' ಏಳು ವರುಷದವಳಿದ್ದಾಗ 'ಚಂಡಿಕಾ.' ಎಂಟು ವರ್ಷ ದವಳಿದ್ದಾಗ 'ಶಾಂಭವಿ.' ಒಂಬತ್ತು ವರ್ಷದವಳಿದ್ದಾಗ 'ದುರ್ಗಾ.' ಅಥವಾ 'ಬಾಲಾ.' ಹತ್ತುವರ್ಷದವಳಿದ್ದಾಗ 'ಗೌರಿ.' ಹದಿಮೂರಿದ್ದಾಗ 'ಮಹಾಲಕ್ಷ್ಮಿ.' 'ಲಲಿತೆ' ಯೆಂಬ ಹೆಸರು ಹದಿನಾರರಲ್ಲಿ. ಸೃಷ್ಟಿಕಾಲದಲ್ಲಿ ಕೃಷ್ಣವರ್ಣೆಯಾದ ಈ ದೇವಿಗೆ ಮಹಾಮಾ ಯಾ, ಮಹಾಕಾಲೀ, ಮಹಾಮಾರಿ, ಕ್ಷುಧಾ, ತೃಷಾ, ನಿದ್ರಾ, ಏಕವೀರಾ, ಕಾಳರಾತ್ರೀ, ದುರತ್ಯಯಾ ಎಂಬೀ ಅನೇಕ ಹೆಸರುಗಳುಂಟಾಗುವವು. ಮಹಾಲಕ್ಷ್ಮಿಯಾದೇಶಾನು ಸಾರವಾಗಿ ಇವಳು ತನ್ನನ್ನು ಇಬ್ಭಾಗವಾಗಿಸಿ ತನ್ನ ಪುರುಷಭಾಗಕ್ಕೆ ನೀಲಕಂಠ, ರಕ್ತ ಬಾಹು, ಶ್ವೇತಾಂಗ, ಚಂದ್ರಶೇಖರ, ರುದ್ರ, ಶಂಕರ, ಸ್ಥಾಣು, ತ್ರಿಲೋಚನ ಎಂಬೀ ರೂಪಗಳನ್ನೂ ಶ್ವೇತವರ್ಣದ ಸ್ತ್ರೀಭಾಗಕ್ಕೆ ವಿದ್ಯಾ, ಬಾಷಾ, ಸ್ವರ, ಅಕ್ಷರ, ಕಾಮ ಧೇನುಗಳ ರೂಪಗಳನ್ನೂ ಕೊಟ್ಟಳು. ಬೆಳದಿಂಗಳಂತೆ ಬೆಳಗುವ, ಅಕ್ಷಮಾಲೆ, ಅಂಕುಶ, ವೀಣೆ, ಪುಸ್ತಕಗಳೆಂಬ ಆಯುಧಗಳಿಂದ ಯುಕ್ತವಾದ ಒಂದು ಶಕ್ತಿಯನ್ನು ಮಹಾಲಕ್ಷ್ಮಿಯು ನಿರ್ಮಿಸಿದಳು. ಅದಕ್ಕೆ ಮಹಾವಿದ್ಯೆ, ಮಹಾವಾಣಿ, ಭಾರತಿ, ವಾಕ್, ಸರಸ್ವತಿ, ಆರ್ಯಾ, ಬ್ರಾಹ್ಮೀ, ಕಾಮಧೇನು, ವೇದಗರ್ಭಾ, ಧೀ, ಈಶ್ವರೀ ಎಂದು ಹೆಸರುಗಳು. ಈ ಶಕ್ತಿಯಾದರೂ ತನ್ನನ್ನು ದ್ವಿಧಾ ಕಲ್ಪಿಸಿದಳು. ಪುರುಷ ಭಾಗವೇ ಶ್ಯಾಮವರ್ಣದ ವಿಷ್ಣು, ಕೃಷ್ಣ, ಹೃಷೀಕೇಶ, ವಾಸುದೇವ, ಜನಾರ್ದನ; ಸ್ತ್ರೀಭಾಗವೇ ಗೌರವರ್ಣದ ಉಮಾ, ಗೌರೀ, ಸತೀ, ಚಂಡೀ, ಸುಂದರೀ, ಸುಭಗಾ, ಶಿವಾ ಮಹಾಲಕ್ಷ್ಮಿಯ ರಾಜಸಭಾಗಕ್ಕೆ ಲಕ್ಷ್ಮಿಯೆಂದು ಹೆಸರು. ಅವಳ ಕೈಗಳಲ್ಲಿ ಮಾತುಳುಂಗ ( ಮಾದಾಳ ) ಗದಾ, ಪಾತ್ರ, ಖೇಟಕ ಮತ್ತು ಲಿಂಗಚಿಹ್ನವಿರುವದು.

ಬಣ್ಣವು ತಪ್ತಸುವರ್ಣದಂತಹದು. ಅವಳು ಸ್ತ್ರೀಪುರುಷಭೇದದಿಂದ ತನ್ನನ್ನು ದ್ವಿಧಾ ಕೃತಿಯಾಗಿ ಮಾಡಿಕೊಂಡಿರುವಳು. ಒಂದಕ್ಕೆ ಹಿರಣ್ಯಗರ್ಭ, ಬ್ರಹ್ಮ, ವಿಧಿ, ಮೊದಲಾದ ಹೆಸರುಗಳೂ ಎರಡನೆಯುದಕ್ಕೆ ಶ್ರೀ ಪದ್ಮಾ, ಕಮಲಾ, ಮೊದಲಾದ ಹೆಸರುಗಳೂ ಇವೆ. ವಿಶ್ವಮಾತೆಯಾದ ಮಹಾಲಕ್ಷ್ಮಿಯು ಆಜ್ಞಾನುಸಾರವಾಗಿ, ಬ್ರಹ್ಮನು ಸರಸ್ವತಿಯನ್ನು ಮದುವೆಯಾಗಿ ಬ್ರಹ್ಮಾಂಡವ ಪಡೆದನು. ರುದ್ರನು ಗೌರಿಯನ್ನು ಮದುವೆಯಾಗಿ, ಆ ಬ್ರಹ್ಮಾಂಡಕ್ಕೆ ಕಾವುಕೊಟ್ಟು ಒಡೆದನು. ಲಕ್ಷ್ಮೀಸಹಿತನಾದ ವಿಷ್ಣುವು ಅದರ ಪರಿಪಾಲನ ಭಾರವನ್ನು ವಹಿಸಿದನು. ಹೀಗೆ, ದೇವೀಮಹಾತ್ಮ್ಯವು ದೇವಿಯ ಮಹಾತ್ಮ್ಯವನ್ನು ಹೇಳುತ್ತದೆ. ಅಂತೂ ದೇವಾಧಿದೇವತೆಗಳೆಲ್ಲ ಒಬ್ಬ ಆದಿಶಕ್ತಿಯಿಂದ ಹುಟ್ಟಿದವುಗಳು. ಶೈವ, ವೈಷ್ಣವ, ಶಾಕ್ತಮತಭೇದಾನುಸಾರವಾಗಿ, ಆ ಆದಿಮಾಯೆಗೆ ಹೆಸರು ಬೇರೆ ಬೇರೆ.

## ಮಹಾನವಮಿ.

ಈ ಹಬ್ಬವು ಭಾರತೀಯಮಹೋತ್ಸವಗಳಲ್ಲೊಂದು. ದೀವಳಿಗೆ, ವಸಂತೋತ್ಸವ, ( ಹೋಳಿಯ ಹುಣ್ಣಿಮೆ ) ಈ ಹಬ್ಬಗಳು ದೇಶಕಾಲಪರತ್ವದಿಂದ ಬೇರೆ ರೂಪಗಳನ್ನು ಹೊಂದಿರುವಂತೆ, ನವರಾತ್ರಿಯ ( ಮಹಾನವಮಿ ) ಮಹೋತ್ಸವವಾದರೂ ಪ್ರಾಂತಭೇದದಿಂದ ಭಿನ್ನಭಿನ್ನರೀತಿಯಿಂದ ಜರುಗಿಸುವ ರೂಢಿಯಾಗಿದೆ. ಈ ಮೂರೂ ಮಹೋತ್ಸವಗಳೇನೊ ಭಾರತಕ್ಕೆ ಸಾಮಾನ್ಯವಾದವುಗಳೇ ಹೌದು. ಬ್ರಾಹ್ಮಣಗಳ ಕಾಲದಲ್ಲಿ ಈ ಆಶ್ವಿನಮಾಸದಲ್ಲಿ " ಆಶ್ವಯುಜ " ಎಂಬೊಂದು ಉತ್ಸವವನ್ನು ಮಾಡಿಕೊಳ್ಳುತ್ತಿದ್ದರೆಂದು ತಿಳಿದುಬರುತ್ತವೆ. ಅಶ್ವಿನಿನಕ್ಷತ್ರದಲ್ಲಿ ಓಷಧಿಗಳ ಪತಿಯಾದ ಚಂದ್ರನು ಇರುವ ಈ ಆಶ್ವಿನ ಮಾಸದ ಸಂದುಕಟ್ಟಿನ ಹೊತ್ತನ್ನು ದೈನಂದಿನಜೀವನಕ್ಕಾಗಿ ಉದ್ಯೋಗದಲ್ಲಿ ಕೃಷಿಪ್ರಧಾನರಾಗಿದ್ದ ಆರ್ಯರು ತಮ್ಮ ಅಶ್ವಗಳನ್ನು ಮೆರೆಯಿಸುತಿದ್ದರಂತೆ, ಯಾಕಂದರೆ ಅವು ಆ ಕಾಲಕ್ಕೆ ಅವರಿಗೆ ಹೊಲದ ದುಡಿತದಲ್ಲಿ ಸಹಕಾರಿಗಳಾಗಿರುತ್ತವೆ. ಮುಂದೆ ಕ್ಷತ್ರಿಯರಿಗೆ ಈ ಅಶ್ವಗಳು ಯುದ್ಧಕಾಲದಲ್ಲಿ ಅತ್ಯುಪಯುಕ್ತವಾಗಿ ಕಂಡುಬರಲು ಅವರು ಅನೃಣರಾಗಲು, ಹಿಂದಿನ ಪದ್ಧತಿಯನ್ನೇ ಸ್ಮರಿಸಿ. ಅಶ್ವಗಳನ್ನು ಮೆರೆಯಿಸುವದನ್ನು ಸಾಗಿಸಿದರು. "ಬನ್ನಿ"ಯನ್ನು ಭಂಗಾರವನ್ನಾಗಿ, ತಿಳಿಯುವ ರೂಢಿಗೆ, ರಾಮಾಯಣಕಾಲದ ಒಂದು ಕತೆಯ ಆಧಾರವಿದೆ. ಬುನಾದಿಯಲ್ಲಿ ಪ್ರತಿಷ್ಠಾನನೆಂಬ ಪಟ್ಟಣದಲ್ಲಿ ದೇವದತ್ತನೆಂಬ ಬ್ರಾಹ್ಮಣನ ಹೊಟ್ಟೆಯಲ್ಲಿ ಕೌತ್ಸನೆಂಬ ಮಗನು ಹುಟ್ಟಿದನು. ಅವನು ಉಪನಯನಾನಂತರ ವಿದ್ಯಾರ್ಜನೆಗಾಗಿ, ಭಿರುಕಚ್ಛದಲ್ಲಿ ಒಬ್ಬ ಋಷಿಯಡೆಗೆ ಹೋದನು. ಕೆಲವು ವರ್ಷಗಳ ನಂತರ ಅಖಿಲವಿದ್ಯಾಸಂಪನ್ನನಾದ ಅವನು ಗುರುವಿಗೆ, ಗುರುದಕ್ಷಿಣೆ ಏನು ಬೇಕೆಂದು ಕೇಳಿದನು. ಅದಕ್ಕೆ ಗುರುವು ಅಂದದ್ದು- "ದಕ್ಷಿಣೆಗಾಗಿ ನಾನು ವಿದ್ಯೆಕಲಿಸಿದವನಲ್ಲ. ನಿನಗಾದ ಆನಂದವೇ ನನ್ನ ದಕ್ಷಿಣೆ" ಎಂದು ಹೇಳಿದನು. ಇಷ್ಟು ಹೇಳಿದರೂ ದಕ್ಷಿಣೆ

ಯನ್ನು ಕೊಳ್ಳಲೇಬೇಕೆಂದು ಆಗ್ರಹಪಡಲು "ಹಾಗಾದರೆ ೧೪ ಕೋಟಿ, ಹೊನ್ನುಗಳನ್ನು ಒಬ್ಬನಿಂದಲೇ ತಂದು ಕೊಡು" ಎಂದನು. ರಘುರಾಜನು ಮಹಾದಾನಿಯೆಂದು ಇವನು ಕೇಳಿದ್ದರಿಂದ ಕೌತ್ಸನು ಅವನೆಡೆಗೆ ಹೋದನು. ವಿಶ್ವಜಿತ್ ಯಜ್ಞದಲ್ಲಿ ಬ್ರಾಹ್ಮಣರಿಗೆಲ್ಲ ದುಡ್ಡು ಕೊಟ್ಟು, ಬಡವನಾಗಿದ್ದನು. ಆದರೂ ಕೌತ್ಸನ ಇಚ್ಛೆಯನ್ನು ತಿಳಿದುಕೊಂಡು ಮೂರು ದಿವಸಗಳಲ್ಲಿ ೧೪ ಕೋಟಿ ಹೊನ್ನುಗಳನ್ನು ಕೊಡುವೆನೆಂದು ವಚನವನಿತ್ತು, ಇಂದ್ರನು ತನಗೆ ಸಲ್ಲಿಸತಕ್ಕ ಹಣವನ್ನೆಲ್ಲ ೩ ದಿವಸಗಳಲ್ಲಿ ಸಲ್ಲಿಸಬೇಕೆಂದೂ ಇಲ್ಲದಿದ್ದರೆ ಯುದ್ಧಕ್ಕೆ ಸನ್ನದ್ಧನಾಗಬೇಕೆಂದೂ ಹೇಳಿ ಕಳುಹಿದನಂತೆ. ಆಗ ಇಂದ್ರನು ಕಾಂಚನ, ಮತ್ತು ಬನ್ನಿ ಈ ವೃಕ್ಷಗಳ ಮೇಲೆ ಹೊನ್ನಿನ ಮಳೆಗರೆದನಂತೆ, ಆ ರಾಶಿಗಳನ್ನೆಲ್ಲ ಒಯ್ದು ಗುರುವಿನ ಎದುರಿಗೆ ಇಟ್ಟಮೇಲೆ ತಾನು ಬೇಡಿದ ೧೪ಕೋಟಿ ಹೊನ್ನು ತಕ್ಕೊಂಡು ಉಳಿದವುಗಳನ್ನು ಬಿಟ್ಟನಂತೆ. ಕೌತ್ಸನು ಆ ರಾಶಿಗಳನ್ನು ಊರಹೊರಗಿನ ಬನ್ನಿ ಕಾಂಚನ ವೃಕ್ಷಗಳ ಕೆಳಗಿಟ್ಟು ಊರ ಜನರಿಗೆಲ್ಲ ಒಯ್ಯಲು ಹೇಳಲಾಗಿ ಬನ್ನಿ ಕಾಂಚನಗಳ ಮೂಲಕ ತಾವು ಶ್ರೀಮಂತರಾದರೆಂಬ ಕೃತಜ್ಞತೆಯಿಂದಲೂ ಸಂತೋಷದಿಂದಲೂ ಹೊರಲಾರದಷ್ಟು ಹೊನ್ನುಗಳನ್ನು ಮನೆ ಮನೆಗೆ ಒಯ್ದು ಬನ್ನಿ ಕಾಂಚನಗಳ ಪತ್ರಿಯನ್ನು ಪರಸ್ಪರರಿಗೆ ಕೊಟ್ಟು ಉತ್ಸವಮಾಡಿದರಂತೆ, ಅಂದು ವಿಜಯಾದಶಮಿ. ಅಂತೇ ಇಂದಿಗೂ ವಿಜಯಾದಶಮೀದಿನ, ಬನ್ನಿಯನ್ನು ಬಂಗಾರವೆಂದು ಹಂಚುವರೂಢಿಯು ನಡೆದುಬಂದಿದೆ. ಅದೇ ಪ್ರಕಾರ ವಿಜಯಾದಶಮೀದಿನ ಆಗಬೇಕಾದ ಸೀಮೋಲ್ಲಂಘನ ಶಮೀಪೂಜೆಗಳಿಗೂ ಪಾಂಡವರ ಪ್ರಸಿದ್ಧವೃತ್ತಾಂತದ ಆಧಾರವಿದೆ. ನವರಾತ್ರಿಯು (ವಿಜಯಾದಶಮೀಸಹಿತ) ಸರ್ವ ಕ್ಷತ್ರಿಯರ ಒಂದೇ ಒಂದು ದೊಡ್ಡಹಬ್ಬ, ಎಂದು "ಐನ ಅಕಬರಿ"ಯಲ್ಲಿ ಹೇಳಿದೆ. ಉತ್ತರಹಿಂದುಸ್ತಾನದಲ್ಲಿ ವಿಶೇಷತಃ ಪ್ರಚಲಿತವಿದ್ದ ಹಬ್ಬಗಳ ಪಟ್ಟಿಯಲ್ಲಿ ಆಶ್ವಿನಶುದ್ಧ ಅಷ್ಟಮಿ, ನವಮಿ, ದಶಮಿಗಳನ್ನು ಅಲ್ಬೇರುನಿಯು ಹೇಳಿದ್ದಾನೆ. ಆಶ್ವಿನಮಾಸವು, ವರ್ಷಾರಂಭದ ಮಾಸವೆಂದು ಭರತಖಂಡದ ಕೆಲವು ಭಾಗಗಳಲ್ಲಿ ತಿಳಿಯುವ ರೂಢಿಯು ಇದ್ದಿತು ಎಂದೂ ಹೊಸ ಋತುವಿಗೆ ಈ ಮಾಸದಲ್ಲಿ ಆರಂಭವಾಗುತ್ತಿರುವದರಿಂದಲೂ ಒಕ್ಕಲಿಗರಿಗೆ ತಮ್ಮ ದುಡಿತದ ಫಲವು ದೊರೆಯುವ ಕಾಲವು ಇದೇಯಾಗಿರುವದರಿಂದಲೂ ಕ್ಷತ್ರಿಯರಿಗೆ ದಿಗ್ವಿಜಯದಲ್ಲಿ ತಮ್ಮ ಬಲಪರೀಕ್ಷೆಯನ್ನು ಮಾಡಿಕೊಳ್ಳುವ ಹೊತ್ತು ಅದು ಆಗುತ್ತಿದ್ದರಿಂದಲೂ, ಕೈಗಾರಿಕೆಯವರಿಗೆ, ವರ್ಷಾಕಾಲದ ಬಿಡುವಿನ ನಂತರ ತಮ್ಮ ಹೋರಿಗೆ ಮತ್ತೆ ಆರಂಭವಾಗುವ ಕಾಲವಾಗಿತ್ತಾದ್ದರಿಂದಲೂ ಭರತಖಂಡದಲ್ಲೆಲ್ಲ ನವರಾತ್ರಿಯು ಹಿಂದೂಜನಾಂಗಕ್ಕೆ ಪ್ರಮುಖಉತ್ಸವವಾಗಿ ಪರಿಣಮಿಸಿತು.

ಇನ್ನು ದೀವಳಿಗೆ, ವಸಂತೋತ್ಸವಗಳಿಗಿಂತ, ಈ ಮಹಾನವಮಿಯು ಹೆಚ್ಚು ಮಹತ್ವವಾದುದೇಕೆಂದರೆ, ಇದು ರಾಜರ ಹಬ್ಬ. ರಾಷ್ಟ್ರದ ಹಬ್ಬ. ಯಾಕಂದರೆ ರಾಜನೇ

ರಾಷ್ಟ್ರದ ಅಧಿಪತಿಯು. 'ನಾಡೆಂಬದೇಹಕ್ಕೆ ರೂಢಿಪತಿಯೇ ಪ್ರಾಣ' (ಸರ್ವಜ್ಞ) ಎಂಬ ವಚನವಾದರೂ, ಮೇಲಿನ ಮಾತನ್ನೇ ಸೂಚಿಸುತ್ತದೆ. ದಿವಳಿಗೆಯು ಕೌಟುಂಬಿಕರ ಹಬ್ಬ, ಇನ್ನೊಂದು ವಿಧದಲ್ಲಿ ವೈಶ್ಯರಹಬ್ಬ. ವಸಂತೋತ್ಸವವು ಶೂದ್ರಾದಿ ಸಾಮಾನ್ಯ ಜನರ ರಸಿಕತೆಯನ್ನು ಉದ್ದೀಪಿಸಿ ತೃಪ್ತಗೊಳಿಸುವ ಹಬ್ಬ. ನವರಾತ್ರಿಯು ಹಾಗಲ್ಲ. ಎಲ್ಲ ಜನರ ಪಾಲನಪೋಷಣಭಾರವನ್ನುಹೊತ್ತ ಕ್ಷತ್ರಿಯರಾಜರುಗಳ ಹಬ್ಬವು ಇದು. ಅಂತೇ ಸರ್ವಸಮಾಜಗಳ ಹಬ್ಬವು ಇದು. ಅಂದು ರಾಜರು ಹೊತ್ತ ಭಾರವನ್ನು ಇಂದು ಪ್ರಜಾನಾಯಕರೂ ಪ್ರಜಾಸಂಘಗಳೂ ಹೊರಬೇಕಾಗಿದೆ. ಅಂತೆಯೇ ಈ ಹಬ್ಬವು ರಾಷ್ಟ್ರೀಯವಾಗಲು ಅನುವಿದ್ದಷ್ಟು ಉಳಿದ ಹಬ್ಬಗಳಿಗೆ ಅನುವಿಲ್ಲ. ಪ್ರಜೆಗಳ ಸರ್ವ ವಿಧದ, ಹಿತಗಳ ಸಾರಾಸಾರವಿಚಾರವನ್ನು ಮಾಡಿಕೊಳ್ಳಲು, ಈ ದಶರಾತ್ರಿಯಲ್ಲಿ ಪ್ರತ್ಯೇಕದಿವಸಗಳಿವೆ, ಈ ಹತ್ತುದಿನಗಳಲ್ಲಿ ಸಾಮಾಜಿಕಪುನರ್ಘಟನೆಯನ್ನು ಮಾಡಿ ಕೊಳ್ಳಲೂ ಇಂಬಿದೆ. ಶರೀರ ಬಲಸಂವರ್ಧನದ, ಆರೋಗ್ಯದ, ವಿಚಾರವನ್ನು ಮಾಡಿ ಕೊಳ್ಳಲೂ, ಸಾಹಿತ್ಯದ ವಿದ್ಯಾಪ್ರಚಾರದ ವಿಚಾರವನ್ನು ಮಾಡಿಕೊಳ್ಳಲೂ, ಆರ್ಥಿಕ ಔದ್ಯೋಗಿಕಗಳ ಹಿತಾಹಿತವಿಚಾರಗಳನ್ನು ಮಾಡಿಕೊಳ್ಳಲೂ, ಈ ಹತ್ತುದಿವಸಗಳಲ್ಲಿ ವಿಶಿಷ್ಟದಿವಸಗಳಿವೆ. ದೀವಳಿಗೆ ವಸಂತೋತ್ಸವಗಳಲ್ಲಿ ಸಾಧಿಸಬೇಕಾದ ಮಾತುಗಳು ಈ ಉತ್ಸವದಲ್ಲಿಯೂ ಸಾಧಿಸುವವು. ಹೀಗೆ, ಜನತೆಯ ಹಿತಸಂಬಂಧಗಳನ್ನು ಸಾಂಗೋ ಪಾಂಗವಾಗಿ, ವಿಚಾರಿಸಲು ಅನುವಿದ್ದ ಹಬ್ಬವೆಂದರೆ, ಈ ದಶರಾತ್ರಿಯೊಂದೇ ಯೊಂದು. ಈ ಕಾಲವು ಅಹ್ಲಾದಕರವಾದ ಶರದೃತುವಿನ ಆರಂಭ; ಉಪಾಸನೆಯು ಚರಾ ಚರದ ಮಾತೆಯಾದ ಆದಿಶಕ್ತಿಯ ಪ್ರಧಾನರೂಪಗಳದು; ವಿಚಾರವು ಮಾನವಸಂಸಾರದ ವಿವಿಧಾಂಗಗಳದು; ಕಾರ್ಯಕ್ಕೆ ಅವಕಾಶವು ಬ್ರಾಹ್ಮಣಾದಿಯಾಗಿ ಅತಿಶೂದ್ರರ ವರೆಗೂ, ಪರಂಪರೆಯು ಸಹಸ್ರಾವಧಿ ವರ್ಷಗಳದು. ಜರಗಿಸುವ ರೀತಿಯು ಮತಭೇದಾ ನುಸಾರವಾಗಿ ಒಂದಿಷ್ಟು ಸ್ವಾತಂತ್ರ್ಯಕ್ಕೆ ಎಡೆಯಿದ್ದುದು; ಇಷ್ಟು ಲಕ್ಷಣಗಳಿಂದ ಯುಕ್ತ ವಾದ ಹಬ್ಬವು ನಾಡಹಬ್ಬವಲ್ಲದಿದ್ದರೆ, ಮತ್ತಾವುದಕ್ಕೆ ಈ ಹೆಸರು ಒಪ್ಪೀತು? ಪ್ರಜೆಗಳ ಇಚ್ಛಿತಾರ್ಥಗಳನ್ನೀಯುವ ಕಾಮಧೇನುವಿನಂತೆ ಇರುವ ಈ ಹಬ್ಬವು ರಾಷ್ಟ್ರೀಯ ಜಾಗೃತಿಗೆ ಸಾಧನವಾಗದಿದ್ದರೆ, ಮತ್ತೆ ಬೇರೆ ಯಾವದು ? ಸಹಸೋಕ್ಷಿತಸಂದೇಹಗ ಳಿಗೂ ಆಗ್ರಹಗಳಿಗೂ ಇಂಬುಗೊಟ್ಟು ಈ ಹಬ್ಬದಲ್ಲಿ ದೋಷಗಳನ್ನು ಕಾಣುವವರು ಸ್ವಲ್ಪ ಧೀರತೆಯಿಂದ ವಿಚಾರಮಾಡಬೇಕು. ಇಲ್ಲದ ಸಿದ್ಧಾಂತಗಳನ್ನು ಕಟ್ಟಿ, ಅಲ್ಲದ ಹೂಲಿಯನ್ನು ಎಬ್ಬಿಸಬಾರದು.

## ಮಾನವಮಿಯು ಕರ್ನಾಟಕದ ರಾಷ್ಟ್ರೀಯ ಹಬ್ಬವು ಹೇಗೆ ?

ಮೇಲಿನ ವಿವೇಚನೆಯಿಂದ ನವರಾತ್ರಿಯು ಇಡೀ ಭರತಖಂಡದ್ದೆಂದು ಸಿದ್ಧ ವಾಯಿತು, ಅಂತೆಯೇ ಅದು ಕರ್ನಾಟಕದ ಒಂದು ವಿಶಿಷ್ಟಮಹೋತ್ಸವವೆನ್ನು

ವದು, ತಪ್ಪು, ಎಂದು ಕೆಲವರು ಆಕ್ಷೇಪಿಸಬಹುದು. ಈ ಆಕ್ಷೇಪಕರ ಆಕ್ಷೇಪಣೆಯಲ್ಲಿ ಒಂದು ದೋಷವಿದೆ. 'ಕರ್ನಾಟಕದ ವಿಶಿಷ್ಟ' ಎಂದೆಂದ ಕೂಡಲೇ ಅದು ಸಮಗ್ರ ಭಾರತಕ್ಕೂ ಪ್ರತ್ಯೇಕವಾಗಿ ಕರ್ನಾಟಕೇತರಪ್ರಾಂತಗಳಿಗೂ, (ಭಾರತದೊಳಗಿನ) ಯಾವ ಮಾತಿನಲ್ಲಿಯೂ ಹೋಲುತ್ತಿರಬಾರದು. ಎಂದು ಈ ಆಕ್ಷೇಪಕರ ತಿಳವಳಿಕೆ. **ಭಾರತಮಾತಾಯಿ, ಆದಿಶಕ್ತಿ.** ಭರತಖಂಡದೊಳಗಿನ ಅನೇಕಪ್ರಾಂತಗಳು ಅವಳ ವಿವಿಧರೂಪಗಳು ಅಂತೇಯೇ ಈ ಪ್ರಾಂತಗಳಲ್ಲಿ ಒಂದು ಬಾಂಧವ್ಯದ ಸಾದೃಶ್ಯವುಂಟು. "ಕತಾ ಚಂಡೀ ವಿನಾಯಕಾ" ಎಂಬ ವಚನಾನುಸಾರವಾಗಿ ಮಹಾರಾಷ್ಟ್ರವು (ವಿನಾಯಕ) ಗಣಪತಿಯ ಹಬ್ಬವನ್ನು ಜರುಗಿಸುತ್ತಲಿದ್ದರೆ. ಕರ್ನಾಟಕವು (ಚಂಡಿ) ಶಕ್ತಿಯ ಉತ್ಸವವನ್ನು ಜರುಗಿಸುತ್ತಲಿದೆ. ಕಲಿಯುಗದಲ್ಲಿ, ಶೂದ್ರಾದಿ ವರ್ಣಗಳಿಂದ ಮೇಲಿನ ಎಲ್ಲ ವರ್ಗದವರ ಹಿತವನ್ನು ಸಾಧಿಸುವ ಮಾತಿನಲ್ಲಿ ಈ ಎರಡು ದೇಶಗಳಲ್ಲಿ ಒಂದೇ ವಚನವು ಆಧಾರವೂ ಒಂದು ವಿಧದ ಸಾದೃಶವೂ ಇದೆ. ಬಂಗಾಲದೊಳಗಿನ ತಾಂತ್ರಿಕವಾದ ಸಾಧನ, ರಜಪೂತಸ್ಥಾನದೊಳಗಿನಕ್ಷಾತ್ರಸ್ವರೂಪ, ಸಂಯುಕ್ತಪ್ರಾಂತದೊಳಗಿನ ಧಾರ್ಮಿಕಪದ್ಧತಿ, ಕರ್ನಾಟಕದೊಳಗಿನ, ಧರ್ಮಸಮ್ಮಿಶ್ರಸಾಮಾಜಿಕಸ್ವರೂಪ, ಇವೆಲ್ಲ ಒಂದೇ ಶಕ್ತಿಯ ಉಪಾಸನೆ ಎಂಬ ಮಾತಿನಲ್ಲಿ ಹೋಲುತ್ತಿದ್ದರೂ, ಉಪಾಸನಾವಿಧಿಯಲ್ಲಿಯ ಭೇದದಿಂದ ವಿಶಿಷ್ಟತೆಯನ್ನು ಹೊಂದಿದೆ. ಹೆಸರು ಮೊದಲುಗೊಂಡು, ಈ ಹಬ್ಬವನ್ನು ಕನ್ನಡಿಗರು ವಿಶೇಷಪ್ರಕಾರದಿಂದ ರೂಪಿಸಿರುವರು. ನವರಾತ್ರಿ, ಪೂಜೋತ್ಸವ, ಎಂದು ಬೇರೆ ಬೇರೆ ಜನರು ಕರೆದುಕೊಂಡರೆ, ಕರ್ನಾಟಕದಲ್ಲಿ ೧೧ನೆಯ ಶತಮಾನದ ಪೂರ್ವದಿಂದಲೂ, ಇದಕ್ಕೆ ಮಾನಾಮಿ (ಮಹಾನವಮಿ, ಮಾನವಮಿ, ಮನವ್ಮಿ) ಎಂದು ಹೆಸರು. ಮಹಾರಾಷ್ಟ್ರದಲ್ಲಿ ಗಣಪತಿವಿಷಯಕವಾದ ವಿಪುಲಸಾಹಿತ್ಯವಿದ್ದಂತೆ, ನಮ್ಮಲ್ಲಿ ಶಕ್ತಿವಿಷಯಕವಾದದ್ದು. ಶಕ್ತಿಮತಾನುಸಾರವಾಗಿ ನೀನೇ ಸರ್ವಸ್ವವೆಂದು ಆರಾಧಿಸುವವರು ಬಂಗಾಲದಲ್ಲಿದ್ದರೆ, ನಮ್ಮಲ್ಲಿ ಶೈವವೈಷ್ಣವಮತಾನುಸಾರವಾಗಿ ಶಕ್ತಿಯು ಪುರುಷನಲ್ಲಿವಿಲೀನಳು, ಹೀಗೆ ಆರಾಧಿಸುವವರು ಉಂಟು. ನಾವು ಶಕ್ತಿಯನ್ನು ಸ್ವತಂತ್ರಳೆಂದೂ ತಿಳಿಯುವದಿಲ್ಲ. ಅಸ್ವತಂತ್ರಳೆಂದೂ ತಿಳಿಯುವದಿಲ್ಲ. ನಾವು ಶಕ್ತಿವಿಶಿಷ್ಟಪುರುಷನನ್ನು ಧೇನಿಸುವವರು. "ಮೂಲಬ್ರಹ್ಮದ ಸಮಗ್ರ ಸ್ವರೂಪವು ಇದು" ಎಂದು ನಮ್ಮ ನಂಬಿಗೆ. ಶಿವನನ್ನು ಶಕ್ತಿಪೀಠದಲ್ಲಿ ಆರಾಧಿಸುವೆವು. ವಿಷ್ಣುವಿಗೆ ಲಕ್ಷ್ಮಿಯ ಮುಖಾಂತರವಾಗಿ ಎಲ್ಲವನ್ನು ಅರ್ಪಣಮಾಡುವೆವು. ಜಗತ್ತು ಮಿಥ್ಯೆ ಎಂದು ತಿಳಿದರೂ "ತಾಯಿ ಇದೆಲ್ಲ ನಿನ್ನ ಆಟ, ನಿನ್ನ ಕೃಪೆಯಿದು" ಎಂದು ಶರಣು ಹೊಗಲು ನಾವು ಮರೆಯುವದಿಲ್ಲ. ಇಲ್ಲಿ ನಮ್ಮ ವೈಶಿಷ್ಟ್ಯವಿದೆ. ನಮ್ಮಲ್ಲಿಯ ಧರ್ಮಸ್ಥಾಪಕರೂ ರಾಜರೂ ಈ ಶಕ್ತಿಯನ್ನು ಕುರಿತು ತಪಸ್ಸುಮಾಡಿರುವರು. ನಮ್ಮಲ್ಲಿಯ ಶಿಲ್ಪಿಗಳೂ ತಮ್ಮ ಕೌಶಲ್ಯದ ಭಾಗವನ್ನು ಅವಳ ಅಡಿಯಲ್ಲಿ ನಿವೇದಿಸಿದರು. ಒಂದು ಬೇಲೂರಿನ ಗುಡಿಯನ್ನು

ನೋಡಿದರೆ ಸಾಕು. ತಾಯಿಯ ಮೂರ್ತಿಗಳವೆಷ್ಟೊ, ಆ ಸೊಗಸು, ಆ ಬೆಡಗು, ಆ ಭಂಗಿ ಆ ಮುದ್ರೆ ಇವುಗಳ ದರ್ಶನಹೊಂದಲು ಶಿಲ್ಪಿಗಳು ಸಪುಲಕವಾಗಿ, ಗದ್ಗದಾಂತಃ ಕರಣದಿಂದ ಧ್ಯಾನಿಸಿರಲೇಬೇಕು. ನಾಡಂತು ನಾಡೆಲ್ಲ ತುಂಬಿದ ಶಕ್ತಿಯ ಗುಡಿ ಗೋಪುರಗಳು ತಾಯಿಯ ಸಾನ್ನಿಧ್ಯವನ್ನು ತಲೆಯೆತ್ತಿ ಸಾರುತ್ತಿವೆ. ನಮ್ಮ ರಾಜಕೀಯ ಪರಂಪರೆಯಲ್ಲಿಯೂ, ಅನನ್ಯಸಾಧಾರಣವಾದ ವೈಶಿಷ್ಟ್ಯವಿದೆ. ಯಾವ ಪ್ರಭುತ್ವಕ್ಕೂ ಶಕ್ತಿಯ ಬೆಂಬಲಬೇಕು. ಶಕ್ತಿಯು ಯಾವನ ಆಧೀನದಲ್ಲಿರುವಳೋ ಅವನೇ ಪ್ರಭುವು ಅನಾದಿ ಪ್ರಭುವು ಸರ್ವತಂತ್ರಸ್ವತಂತ್ರನು ಅವನ ಶಕ್ತಿಯ ಕೈಯೊಳಗಿನ ಆಯುಧಗಳು ವಿಭೂತಿವಿಶೇಷರಾದ ಪಾರ್ಥಿವರು ಯುಧಿಷ್ಠಿರಸಿಂಹಾಸನದಲ್ಲಿ ಕುಳಿತು ಮಹಾನವ ಮಿಯನ್ನು ಜರುಗಿಸುವುದು ಕನ್ನಡಿಗರ ತಪೋವಿಶೇಷದಿಂದಲೂ ಪುಣ್ಯಬಲದಿಂದಲೂ ಈ ನಾಡಿಗೇ ಮೀಸಲಾಗಿ ಕೊಟ್ಟಿದ್ದಾಗಿದೆ. ಇಂತು, ದೇಶಾಚಾರ, ಕುಲಾಚಾರ, ಧರ್ಮ, ಶಿಲ್ಪ, ಸಾಹಿತ್ಯ, ಉಪಾಸನಾದಿಗಳಿಂದ ಯಾವ ಹಬ್ಬವು ಎತ್ತಿ ಹಿಡಿಯಲ್ಪಟ್ಟಿರುವದೋ ಅದು ವಿಶೇಷವಾಗಿ ನಮ್ಮದಲ್ಲವೇ? ದೇವನು ಸರ್ವತ್ರವ್ಯಾಪ್ತನಿದ್ದರೂ ಸಾಕ್ಷಾತ್ಸ್ಫುರಿಸಿಕೊಂಡವರಿಗೇ ಅವನು ಇದ್ದಂತೆ, ನವರಾತ್ರಿಯ ಮಹೋತ್ಸವವು ಭರತ ಖಂಡಕ್ಕೆಲ್ಲ ಸಾಮಾನ್ಯವಾಗಿದ್ದು ನಮ್ಮ ಸಾಧನಬಲದಿಂದ ನಮ್ಮದಾಗಿದೆ.

## ಪ್ರತ್ಯಕ್ಷ ಪ್ರಮಾಣ.

ಯಾರ ಉಪಾಸನೆಯು ಹೆಚ್ಚೋ ಅವರ ಗುಡಿಗಳು ಹೆಚ್ಚು, ಎಂಬುದು ಸ್ವತಃ ಸಿದ್ಧವಾದ ಮಾತಾಗಿದೆ. ಕರ್ನಾಟಕಸ್ಥ ಅನೇಕಕುಟುಂಬಗಳ ಕುಲದೇವತೆಯಾದರೂ ಶಕ್ತಿಯೇ, ಧರ್ಮಪೀಠ, ರಾಜಪೀಠಗಳ ಬೆಂಬಲಕ್ಕೆ ಶಕ್ತಿ, ಹೀಗಾಗಿ ನಮ್ಮ ನಾಡು ಶಕ್ತಿಯಿಂದ ಅಂಕಿತವಾಗಿದೆ. **ನಮ್ಮ ನಾಡು ದೇವಿಯರನಾಡು**, ಎಂಬುವಕ್ಕೆ ಇದು ಪ್ರತ್ಯಕ್ಷಪ್ರಮಾಣ, ಇದರ ದಿಗ್ದರ್ಶನಕ್ಕಾಗಿ, ದೇವಿಯರ ಹೆಸರುಗಳನ್ನೂ ಅವರಿರುವ ಸ್ಥಾನಗಳನ್ನೂ ಕೊಟ್ಟಿದ್ದಾಗಿದೆ.

ಬದಾಮಿ– ಬನಶಂಕರಿ, ಸವದತ್ತಿ–ಎಲ್ಲಮ್ಮ, ಕೊಲ್ಹಾಪೂರ–ಮಹಾಲಕ್ಷ್ಮಿ, ವಿಜಯನಗರ–ಭುವನೇಶ್ವರಿ, ಮೈಸೂರ–ಚಾಮುಂಡಿ, ಕೊಲ್ಲೂರ–ಮೂಕಾಂಬಾ, ಮಳಖೇಡಪ್ರಾಂತದ ಚಂದಲಾಪರಮೇಶ್ವರಿ, ಗೋಮಾಂತಕ–ಶಾಂತಾದುರ್ಗಾ ಶೃಂಗೇರಿ ಶಾರದಾ, ಕುಕನೂರ–ಮಹಾಮಾಯಾ, ಕುಮಠಾ–ಶಾಂತೇರ ಕಾಮಾಕ್ಷಿ, ತುಳಜಾ ಪುರ–ಭವಾನಿ, ಶ್ರೀಶೈಲ–ಭ್ರಮರಾಂಬಾ, ಶಿವಗಂಗಾ–ಹೊನ್ನಾಂಬಾ, ಧರ್ಮಸ್ಥಳ–ಜೋಗುಳಾಂಬಾ, ಕಂಚಿ–ಕಾಮಾಕ್ಷಿ, ಮಧುರಾ–ಮೀನಾಕ್ಷಿ, ಧರ್ಮಸ್ಥಳ–ಕಾಳರಾತ್ರಿ. ಸಿರಸಿ–ಮಹಾಮಾರಿ, ಇದಲ್ಲದೆ ಅಸಂಖ್ಯಾತ ಗ್ರಾಮದೇವತೆಗಳು ಪ್ರಸಿದ್ಧವಿರುವವಲ್ಲದೆ ಗ್ರಾಮದೇವತೆಯು ಇಲ್ಲದ ಊರುಗಳೇ ಇಲ್ಲ.

## ಸಾಹಿತ್ಯದ ಸಾಕ್ಷಿ.

ಹಿಂದಕ್ಕೆ ನಮ್ಮವರು ಆದಿಮಾತೆಗೆ ಎಷ್ಟೊಂದು ಶ್ರದ್ಧಾಭಕ್ತಿಗಳಿಂದ ನಡೆದು ಕೊಳ್ಳುತ್ತಿದ್ದರೊ ಸಂಪೂರ್ಣವಾಗಿ ತಿಳಿಯದು. ಆದರೂ ಮನುಷ್ಯನ ಮನಸಿನಲ್ಲಿ

ದ್ದುದು ಮಾತಿನಲ್ಲಿ ಬರುವದು; ಮಾತಿನಲ್ಲಿ ಮಾಡಿದುದು ವಾಙ್ಮಯರೂಪದಿಂದ ಸಾಹಿತ್ಯವಾಗಿ ಪರಿಣಮಿಸುವುದು. ಸಾಹಿತ್ಯವು ಹೆಚ್ಚು ಸ್ಥಿರಸ್ವರೂಪವುಳ್ಳದಾದುದರಿಂದ ನಮ್ಮ ಸಾಹಿತ್ಯದೊಳಗೆ ಶಕ್ತಿಗೆ ಆವ ಸ್ಥಾನವುಂಟೆಂಬುದನ್ನು ಇಂದಿಗೂ ತಿಳಕೊಳ್ಳಲಿಕ್ಕೆ ಬರುವಂತಿದೆ.

ಅತಿಪ್ರಾಚೀನಕಾಲದಿಂದ ಇಂದಿನ ವರೆಗೂ ಕರ್ನಾಟಕದೊಳಗಿನ ಕವಿಗಳ ಕಾವ್ಯಾರಂಭಗಳನ್ನು ನಿರೀಕ್ಷಿಸಿದರೆ ಶಕ್ತಿಮಾತೆಗೆ ಎಷ್ಟೊಂದು ಪ್ರಾಶಸ್ತ್ಯವುಂಟೆಂಬುವರ ಮನವರಿಕೆಯಾಗುವದು. ಕವಿಯು ಜೈನನಿರಲಿ, ವೀರಶೈವನಿರಲಿ ಇಲ್ಲವೆ ಬ್ರಾಹ್ಮಣನಿರಲಿ ಅಥವಾ ಬೇರೆ ಆವ ಜಾತಿಯವನಿರಲಿ ಅವನ ಕಾವ್ಯದಲ್ಲಿ, ಹಾಡಿನಲ್ಲಿ ಅಥವಾ ಪದಗಳಲ್ಲಿ ತೀರ ಕಡಿಮೆಯೆಂದರೂ ೨–೩ ನುಡಿಗಳಾದರೂ ದೇವಿಯ ಒಂದಿಲ್ಲೊಂದು ಸ್ವರೂಪದ ಸ್ತುತಿಪರಪದಗಳು ಇಲ್ಲದೆ ಇಲ್ಲ. ಪಂಪನು ಜೈನ; ಅವನ ವಿಕ್ರಮಾರ್ಜುನವಿಜಯದಲ್ಲಿ ಸರಸ್ವತಿ ಹಾಗೂ ತ್ರಿಶೂಲಧಾರಿಶಕ್ತಿಮಾತೆಯಸ್ತುತಿ ಯಿದೆ. ಹರಿಹರನು ವೀರಶೈವ, ಅವನು ಬರೆದುದು ಗಿರಿಜಾಕಲ್ಯಾಣ. ಲಕ್ಷ್ಮೀಶ ಬ್ರಾಹ್ಮಣ, ಅವನ ಜೈಮಿನಿಗ್ರಂಥದಲ್ಲಿ ದೇವಿಯರ ವರ್ಣನೆಗಳುಂಟು. ಮಾದರಿಗಾಗಿ ಮೇಲೆ ಮೂರೇ ಕವಿಗಳನ್ನು ಹೇಳಿದೆ. ಪುರಂದರಾದಿ ದಾಸರು ಮಾಡಿದ ದೇವೀಸ್ತವನಗಳು ಹೇರಳವಾಗಿವೆ. ಮಹಲಿಂಗರಂಗನ ಶಿಷ್ಯ ಶಂಕರಾನಂದರು, ನಿಜಗುಣ ಶಿವಯೋಗಿ ನೊದಲಾದವರ ಗ್ರಂಥಗಳಲ್ಲಿ ದೇವೀಸ್ತೋತ್ರಗಳು ಬಹಳಸರಸವಾಗಿವೆ. ಅಲ್ಲದೆ ದೇವಿಯನ್ನು ಹೊಗಳುವ ಎಷ್ಟೋ ಹಾಡುಗಳೂ ಸಾಂಗತ್ಯಗಳೂ ಅಚ್ಚಾಗದೆ ಇದ್ದರೂ ನಮ್ಮ ಹೆಣ್ಣುಮಕ್ಕಳ ಬಾಯಿಂದ ಕೇಳಲಿಕ್ಕೆ ಸಿಗುತ್ತವೆ. ಶ್ರೀಮಾನ್ ಆರ್. ನರಸಿಂಹಾಚಾರ್ಯರ ಕವಿಚರಿತ್ರೆಗಳಲ್ಲಿ ಉಲ್ಲೇಖವಿರುವ ಈ ಸಂಬಂಧದ ಗ್ರಂಥಗಳ ಪಟ್ಟಿಯನ್ನು ಕೆಳಗೆ ಕೊಟ್ಟಿದೆ. ಈ ಗ್ರಂಥಗಳಲ್ಲಿ ಕೆಲವು ವೀರಶೈವರಿಂದಲೂ ಬರೆಯಲ್ಪಟ್ಟಿರುವವೆಂಬುದನ್ನು ಮಾನವಮಿ ಉತ್ಸವದಲ್ಲಿ ಲಿಂಗವಂತರು ಭಾಗತಕ್ಕೊಳ್ಳಲು ಅವರ ಧರ್ಮದಿಂದ ಆತಂಕವುಂಟೆಂದು, ಆಕ್ಷೇಪಿಸುವವರು ಚಿತ್ತಗೊಟ್ಟು ಓದಿ ತಮ್ಮ ನಿರಾಧಾರವಾದ ಸಂಶಯವನ್ನು ಜನರ ತಲೆಯಲ್ಲಿ ತುಂಬಿ ಬುದ್ಧಿಭೇದಕ್ಕೆ ಇನ್ನುಮೇಲಾದರೂ ಇಂಬುಗೊಡಲಿಕ್ಕಿಲ್ಲೆಂದು ನಂಬುಗೆ

೧ ದೇವೀಸ್ತೋತ್ರ (ನಾನಾವೃತ್ತಗಳಲ್ಲಿ)–ಇಮ್ಮಡಿ ಮುರಿಗೆಯ್ಯಸ್ವಾಮಿ (ಕ್ರಿ. ಶ. ಸುಮಾರು ೧೫೫೦)

೨. ನವರಾತ್ರೀವರ್ಣನೆ ,, ೧೭೦೦

೩. ದೇವೀಮಾಹಾತ್ಮ್ಯ (ಷಟ್ಪದಿ) ,, ೧೭೦೦

೪. ಅಂಬಿಕಾವಿಜಯ ಬೊಬ್ಬೂರ ರಂಗ ,, ೧೭೦೦

೫. ದುರ್ಗಾಮಾಹಾತ್ಮ್ಯ ,, ೧೮೦೦

೭. ದುರ್ಗಾವಿಜಯ ೧೮೦೦

೮. ದೇವೀಮಹಾತ್ಮ್ಯೆ —ಚಿದಾನಂದಸ್ವಾಮಿ ೧೮೦೦

೮. ಮಾನವಮಿ ಚೌಪದಿ ಸು. ೧೮೦೦

೯. ದೇವೀಭಾಗವತ ತಾತ್ಪರ್ಯ ಟೀಕೆ

೧೦. ದೇವೀ ಮಾಹಾತ್ಮ್ಯ —ಕೃಷ್ಣರಾಜ

೧೧. ದೇವೀಸಾಯುಜ್ಯ ಸೀಸಮಾಲಿಕೆ ಸು. ೧೮೧೬

೧೨. ದೇವೀಮಹಾತ್ಮ್ಯ ಸಪ್ತಶತಿ

೧೩. ಅಂಬಾಸ್ತೋತ್ರ —ಮಹಾಂತ ದೇಶಿಕ ಸು. ೧೯೦೦

೨ನೆಯಭಾಗ ಕವಿಚರಿತ್ರೆಯ ತಿದ್ದಿದ ಎರಡನೆಯ ಆವೃತ್ತಿಯೂ, ಮೂರನೆಯ ಭಾಗ ಕವಿಚರಿತ್ರೆಯ ಪ್ರಥಮಾವೃತ್ತಿಯೂ ಹೊರಬಿದ್ದರೆ ಅವರಲ್ಲಿ ಇನ್ನೂ ಎಷ್ಟೋ ದೇವಿಸ್ತೋತ್ರಪುರಾಣಗಳ ಹೆಸರುಗಳು ಗೊತ್ತಾಗತಕ್ಕವುಗಳಿವೆ.

ಈ ಮಾನದಿಂದ ನೋಡಿದರೆ ಗಣಪ್ಪನನ್ನು ಕುರಿತು ಕನ್ನಡ ವಾಙ್ಮಯದಲ್ಲಿ ವಿಶೇಷಗ್ರಂಥನಿಷ್ಪತ್ತಿಯಾಗಿಲ್ಲ. ಬಹುತರ ಎಲ್ಲ ಕಾವ್ಯಗಳಲ್ಲಿ ಶಕ್ತಿಸರಸ್ವತಿಯ ರೊಂದಿಗೆ ಗಣೇಶನ ಸ್ತುತಿಯೂ ಇದ್ದುದು ನಿಜ ಆದರೂ ದೇವಿಯನ್ನು ಕುರಿತು ಇರುವಷ್ಟು ಬಿಡಿಬಿಡಿಯಾದ ಅನೇಕಾನೇಕ ಪದ್ಯಗಳು ವಿನಾಯಕನ ಬಗ್ಗೆಯಿಲ್ಲ; ವಿನಾ ಯಕನ ಸ್ತುತಿಪರ ಒಂದೇ ಒಂದು ಪದ್ಯವಿದ್ದರೆ ದೇವಿಯ ರೂಪಗಳನ್ನು ಕುರಿತು ೨–೩ ಪದ್ಯಗಳಾದರೂ ದೊರೆತೇ ದೊರೆಯುತ್ತವೆ. ಅಲ್ಲದೆ ಆದಿಮಾತೆಯನ್ನು ಕುರಿತು ಇರುವಷ್ಟು ಸ್ವತಂತ್ರಗ್ರಂಥಗಳೂ ವಿನಾಯಕನ ಬಗ್ಗೆ ಕನ್ನಡದಲ್ಲಿ ಉಂಟಾಗಿಲ್ಲ. ಇದಕ್ಕೆ ಆವ ಕಾರಣವಿರಬಹುದು ? ಕನ್ನಡನಾಡಿನಲ್ಲಿ ಶಕ್ತಿದೇವಿಗಿರುವ ವೈಶಿಷ್ಟ್ಯವೇ ಅಲ್ಲದೆ ಬೇರಿನ್ನಾವ ಕಾರಣವು ? ಆದರೆ ಮರಾಠಿವಾಙ್ಮಯದಲ್ಲಿ ಗಣೇಶನನ್ನು ಕುರಿತು ಅನೇಕ ಗ್ರಂಥಗಳು ಏಕೆ ಹುಟ್ಟಿವೆ. ಆ ನಾಡಿನಲ್ಲಿಯೇ ಗಣೇಶೋತ್ಸವಕ್ಕೆ ಪ್ರಾಶಸ್ತ್ಯ ವೇಕೆ ಉಂಟಾಗಿದೆ! ಎಂಬುದನ್ನು ಕುರಿತು ಮತ್ತೊಂದೆಡೆಯಲ್ಲಿ ವಿವೇಚಿಸಿದೆ.

ಕ್ರಿಸ್ತಶಕದ ಏಳನೇ ಶತಮಾನದಲ್ಲಿ ಆಗಿಹೋದ ವರಾಹಮಿಹಿರನು ತನ್ನ ಗ್ರಂಥ ದಲ್ಲಿ "ಭಗವತಿ"ಯ ಮೂರ್ತಿಯನ್ನು ಹೇಗೆ ವಿರಚಿಸಬೇಕೆಂಬ ಬಗ್ಗೆ ವಿಸ್ತೃತವಾದ ವಿವರಣೆಯನ್ನು ಕೊಟ್ಟಿರುವನು. "ಭಗವತಿ" ಎಂಬ ಶಬ್ದವು ಮಹಾಕಾಲಿ, ಮಹಾ ಸರಸ್ವತಿ, ಮಹಾಲಕ್ಷ್ಮೀ ಸ್ವರೂಪಿಣಿಯಾದ ಶಕ್ತಿಗೆ ಅನ್ವಯಿಸುತ್ತದೆಂಬುದು ಪಂಪನ ಉಲ್ಲೇಖಗಳಿಂದ ಸ್ಪಷ್ಟವಾಗುತ್ತದೆ. ಹತ್ತನೇ ಶತಮಾನದ ಈ ಪಂಪನು ಭಾರತ ಯುದ್ಧದೊಳಗಿನ ಭೀಷ್ಮಾಚಾರ್ಯರ ದಿನಗಳ ಸೇನಾಪತಿಪಟ್ಟಕ್ಕೆ "ಭಗವತಿ ಯೇರು ವೆಳ್ಪತೆರದಿಂ" ಎಂಬ ಉಪಮೆಯನ್ನು ಕೊಟ್ಟಿದ್ದಾನೆ. ೧೧ನೆಯ ಶತಮಾನದಲ್ಲಿ ಇಲ್ಲಿಗೆ ಬಂದು ಹೋದ ಅಲ್ಬೆರೂನೀ ಎಂಬ ಪ್ರವಾಸಿಕನು ತನ್ನ ವೃತ್ತಾಂತದಲ್ಲಿ ದುರ್ಗಾಷ್ಟಮಿ

ಮಹಾನವಮಿಯ ಉತ್ಸವಗಳನ್ನು ಇಲ್ಲಿಯವರು ಮಾಡುವರೆಂದು ಹೇಳಿರುವನು. ೧೫ನೆ ಹಾಗು ೧೬ನೆಯ ಶತಮಾನಗಳಲ್ಲಿ ವಿಜಯನಗರದ ಸಾಮ್ರಾಜ್ಯವು ಅತ್ಯಂತಘನತೆಯ ಲ್ಲಿದ್ದಾಗ ಇಲ್ಲಿಗೆ ಬಂದಿದ್ದ ಪೇಸ್, ಅಬ್ದುಲ್‌ರಝಾಕ್, ನುನೀಝ್ ಮೊದಲಾದ ಪ್ರವಾಸಿಕರು ಕನ್ನಡನಾಡಿನ ನಾಲ್ಕು ಹಬ್ಬಗಳಲ್ಲಿ (೧ ಯುಗಾದಿ, ೨ ಮಾನವಮಿ, ೩ ದೀವಳಿಗೆ, ೪ ಹೋಳೀ ಹುಣ್ಣಿವೆ ) ಮಾನವಮಿಯೇ ಅತ್ಯಂತ ಶ್ರೇಷ್ಠವೂ ಗಂಭೀ ರವೂ ಆದದ್ದೆಂದು ಬಣ್ಣಿಸಿರುತ್ತಾರೆ. ಹಾಗೆಯೇ ೧೫೩೫ ರ ಸುಮಾರಕ್ಕೆ ಬಂದಿದ್ದ ಫಿಗರೆಡೋ ಎಂಬ ಪೋರ್ತುಗೀಜಪ್ರವಾಸಿಯು ಕೂಡ ವಿಜಯನಗರದೊಳಗಿನ ಈ ಉತ್ಸವವು ಹೇಗೆ ಸಂಭ್ರಮದಿಂದ ಸಾಂಗವಾಗುತ್ತಿತ್ತೆಂಬದನ್ನು ಬಲುಸುಂದರವಾಗಿ ಬಣ್ಣಿಸಿದ್ದಾನೆ. ಸೀವೆಲ್ಲನ ವಿಸ್ಮೃತರಾಜ್ಯವೆಂಬ ಗ್ರಂಥದಲ್ಲಿ ಈ ಉತ್ಸವವು ಕನಿಷ್ಟ ೨೦ ಪುಟಗಳಲ್ಲಿ ವರ್ಣಿತವಾಗಿದೆ. ವಿಜಯನಗರದ ಅರಸರ ಪರಂಪರೆಯನ್ನೇ ಮೈಸೂ ರಿನ ಮಹಾರಾಜರು ಇನ್ನೂವರೆಗೆ ಅವ್ಯಾಹತವಾಗಿ ನಡೆಸಿರುವರೆಂಬುವದಂತೂ ಈಗ ಎಲ್ಲರಿಗೂ ಅರಿತ ವಿಷಯವೇ ಆಗಿದೆ.

ಮೈಸೂರಿನ ಮಹಾಸಿಂಹಾಸನವು ಮೂಲತಃ ಯುಧಿಷ್ಠಿರಸಿಂಹಾಸನವೆಂದು ವಂಶ ರತ್ನಾಕರದಲ್ಲಿ ಹೇಳಲ್ಪಟ್ಟಿದೆ. ಯುಧಿಷ್ಠಿರನ ವಂಶಜರ ತರುವಾಯ ಅದು ಕದಂಬರ ಕೈಸೇ ರಿತು. ಅಲ್ಲಿಂದ ಮಾಳವದ ವಿಕ್ರಮ, ಬಳಿಕ ಅವಂತಿಯ ಭೋಜ, ಅಲ್ಲಿಂದ ಶಾಲಿವಾಹನ ಶಕದ ಆಭಿರ ಕುಲದ ಅರಸರು, ಈ ಸಿಂಹಾಸನದ ರಕ್ಷಕರಾಗಿದ್ದರು, ಅಲ್ಲಿಂದ ಓರುಗಲ್ಲಿ ನವರೂ, ತರುವಾಯದಲ್ಲಿ ಹೊಯಿಸಳಬಲ್ಲಾಳರೂ ಇದನ್ನು ಕೆಲಕಾಲ ಕಾಯ್ದುಬಳಿಕ ಆನೆಗುಂದಿಯ ಕಂಪಲರಾಯನ ಕಡೆಗೆ ಈ ಸಿಂಹಾಸನವು ಬಂದಿತು. ಅದೇ ಮುಂದೆ ವಿಜಯನಗರದ ಸಿಂಹಾಸನವಾಯಿತು. ವಿಜಯನಗರದ ಅಳಿಗಾಲದ ನಂತರ ಕ್ರಿ. ಶ. ೧೬೦೦ರ ಸುಮಾರಕ್ಕೆ ಆದೇ ರಾಜಮನೆತನಕ್ಕೆ ಸೇರಿದವರಾಗಿ ಶ್ರೀರಂಗಪಟ್ಟಣದಲ್ಲಿದ್ದ ತಿರುಮಲರಾಯನ ಮಗ ರಂಗರಾಯನ ಕಡೆಗೆ ಈ ಸಿಂಹಾಸನವು ಬಂದಿತು. ಈತನು ಮೈಸೂರಿನ ರಾಜಒಡೆಯರ ಪರಾಕ್ರಮವನ್ನೂ ಸತ್ಯನಿಷ್ಠೆಯನ್ನೂ ಮನಗಂಡವನಾದು ದರಿಂದ ಈ ಸಿಂಹಾಸನದ ಪಾವಿತ್ರ್ಯವೂ ಪರಂಪರೆಯೂ ಅವರಿಂದಲೇ ರಕ್ಷಿತವಾಗ ತಕ್ಕವೆಂಬುದನ್ನರಿತು ತನ್ನ ಅವಸಾನಕಾಲಕ್ಕೆ ಇದನ್ನು ರಾಜಒಡೆಯರಿಗೊಪ್ಪಿಸಿದನು. ಹೀಗೆ ಈ ಸಿಂಹಾಸನವು ಮೈಸೂರಿನ ಒಡೆಯರ ಕರಗತವಾಗಿ ಇಂದಿಗೂ ಮೈಸೂರ ಅರಸುಮನೆತನದಲ್ಲಿಯೇ ನೆಲೆಗೊಂಡಿದೆ.

## ರಾಜಕೀಯ ಪರಂಪರೆ.

ಯುಧಿಷ್ಠಿರನ ಸತ್ಯಸಂಧತೆಯು ಲೋಕಪ್ರಸಿದ್ಧವೇ ಇದೆ. ಮಹಾನವಮಿಯ ಉತ್ಸವವು ಯುಧಿಷ್ಠಿರನ ಸಿಂಹಾಸನದ ಮೂಲಕ ಬಂದಿತೆಂಬುದಕ್ಕೆ ನ್ಯೂನಿಝನ ಪ್ರಮಾಣ ವಾಕ್ಯವು ಈ ರೀತಿಯಾಗಿದೆ.

ಮಹಾನವಮಿಯ ಉತ್ಸವವೆಲ್ಲ ಮಣಿಖಚಿತವಾದ ಕನಕಸಿಂಹಾಸನದಲ್ಲಿ ಕುಳಿತ ಅರಸನಿದಿರು ಜರುಗುತಲಿದ್ದಿತು. ವರ್ಷದಲ್ಲಿ ಈ ಪ್ರಸಂಗವಲ್ಲೊಮ್ಮೇ ಅರಸನು ಈ ಸಿಂಹಾಸನವನ್ನೇರುವನು. ದಿನದ ಬಳಕೆಗೆ, ಈಗಿನ ಅರಸನು ಇದನ್ನು ಉಪಯೋಗಿಸುವದೇ ಇಲ್ಲ. ಯಾಕಂದರೆ **ಅದನ್ನೇರುವನು ಸತ್ಯಸಂಧನಿರಲೇಬೇಕಂತೆ,** 'This is done in the presence of the King who remains seated on the seat of gold and precious stones. He never sits on this except only this once in the year. And the king that now reigns does not sit on it, for they say, *who ever sits on it must be a very truthful man and* one who speaks the whole truth. Sewell— 'Forgotten Empire.'

ಯುಧಿಷ್ಠಿರಮಹಾರಾಯನ, ಪರಂಪರೆಯಿಂದ ಪ್ರಾಪ್ತವಾದ ಈ ಸಿಂಹಾಸನಕ್ಕೆ ಮಹಾನವಮಿಯ ಪೂಜೆಯು, ಕರ್ನಾಟಕದ ಪರಂಪರೆಯಿಂದಲೇ ಸಿದ್ಧವಾಗಿರುವದೆಂದು ಹೇಳಬಹುದು. ಎಂಥ ಅನುವುಆಪತ್ತುಗಳು ಬಂದರೂ, ಈ ಮಹಾನವಮಿಯ ಪೂಜೆಯು ತಪ್ಪಕೂಡದೆಂದು ಬಹುವಿಧವಾದ ದಕ್ಷತೆಯು, ವಹಿಸಲ್ಪಟ್ಟಿರುತ್ತದೆ. ರಾಜಒಡೆಯರವರ ಕಾಲಕ್ಕೆ ಯುವರಾಜ ನರಸರಾಜರೆಂಬವರು ತೀರಿಹೋದುದರಿಂದ ರಾಜಮನೆತನಕ್ಕೆ ಅಶೌಚ ಬಂದಿದ್ದರೂ ಶಾಸ್ತ್ರಜ್ಞರ ಪರಿಷತ್ತನ್ನು ನೆರೆಯಿಸಿ ರಾಷ್ಟ್ರದ ಪ್ರತಿನಿಧಿಯಾದ ರಾಜನಿಗೆ ರಾಷ್ಟ್ರೀಯಮಹೋತ್ಸವಗಳ ಕಾಲಕ್ಕೆ ಆಶೌಚಾದಿವೈಯಕ್ತಿಕಪ್ರತಿರೋಧಗಳು ತಟ್ಟಲಾರವೆಂಬ ನಿರ್ಣಯವನ್ನು ಪಡೆದು; ಆ ಸಲದ ಮಾನವಮಿಯ ಉತ್ಸವವನ್ನು ಯಥಾಸಾಂಗವಾಗಿ ನೆರವೇರಿಸಿದ ಸಂಗತಿಯು, ಇತಿಹಾಸದಲ್ಲಿ ವರ್ಣಿತವಾಗಿದೆ. ಇದೊಂದೇ ಸಂಗತಿಯಿಂದ ನೋಡಿದರೂ "ಮಹಾನವಮಿ"ಯ ಉತ್ಸವವು ಕನ್ನಡನಾಡಿಗೆಲ್ಲ ಸನಾತನಪರಂಪರಾಸಂಪ್ರಾಪ್ತ, ರಾಷ್ಟ್ರೀಯಮಹೋತ್ಸವವಾಗಿರುವುದೆಂದು ನಿಃಸಂದೇಹವಾಗಿ ಹೇಳಬಹುದು.

—ದ. ರಾ. ಬೇಂದ್ರೆ.

---

# ಮಹಾರಾಷ್ಟ್ರದ ಗಣೇಶೋತ್ಸವದ ಪೂರ್ವಪರಂಪರೆ.

'ಋಗ್ವೇದೀ' ಇವರ 'ಆರ್ಯಾಂಚ್ಯಾ ಸಣಾಂಚಾ ಇತಿಹಾಸ—ಪ್ರಾಚೀನ ವ ಅರ್ವಾಚೀನ' ಪುಟ ೨೬೩—೨೬೬

'ಗಣೇಶಚತುರ್ಥಿಯನ್ನು ಹಬ್ಬವನ್ನಾಗಿ ಆಚರಿಸುವ ರೂಢಿಯು ವಿಂಧ್ಯಾದ್ರಿಯ ದಕ್ಷಿಣದಲ್ಲಿ ಮಾತ್ರವಿದೆ. ... ... ಈ ಗಣೇಶಚತುರ್ಥಿಯ ಹಬ್ಬವು ಹಿಂದುಸ್ಥಾನದಲ್ಲಿ ಎಲ್ಲ ಕಡೆಗೂ ರೂಢಿಯಲ್ಲಿಲ್ಲ. ... ... ಗುಜರಾಥದಲ್ಲಿ ಗಣೇಶಚತುರ್ಥಿಯ ಹಬ್ಬವಿಲ್ಲ. ... ... ಮಹಾರಾಷ್ಟ್ರದಲ್ಲಿ ಊರೂರಿಗೆ ಗಣೇಶನ ಗುಡಿಗಳಿವೆ. ಮೇಲಾಗಿ ಚಿಂಚವಡ, ಮೋರಗಾಂವ; ಸಾರೋಳೆ ಮತ್ತು ರಂಜನಗಾಂವ ಮೊದಲಾದ ಊರಿನ ದೇವಾಲಯಗಳೂ, ಸುತ್ತುಮುತ್ತಲೂ ವಿಶೇಷಪ್ರಸಿದ್ಧವಾಗಿರುವವು.... ... ಚಿಂಚವಡದ ದೇವಸ್ಥಾನವು ಮೋರೋಬಾ ಎಂಬ ಹೆಸರಿನ ಭಕ್ತನ ಮೂಲಕ ಹೆಚ್ಚಿಗೆ ಪ್ರಸಿದ್ಧಿಯನ್ನು ಪಡೆದಿದೆ. ... ... ಮರಾಠಿಯಲ್ಲಿ ಗಣೇಶಪ್ರತಾಪ, ಗಣೇಶಲೀಲಾಮೃತ, ಗಣೇಶಭಾಗವತ, ಗಣೇಶಪುರಾಣ, ಗಣೇಶವಿಜಯ ಮುಂತಾದ, ಹಳೆಯ ಗ್ರಂಥಗಳು ಹೆಸರಾದುವಾಗಿದ್ದು ಶ್ಲೋಕಸಂಖ್ಯೆಯು ಒಂದುವರೆ ಲಕ್ಷವನ್ನು ಮಿಕ್ಕಬಹುದು. ... ... ಗಾಣಪತ್ಯ ಪಂಥದ ಜನರು ಮಹಾರಾಷ್ಟ್ರದಲ್ಲಿ ಇದ್ದಾರೆ. ಇನ್ನೂ ಇರುವರು. ಚಿಂಚವಡ ಊರಲ್ಲಿ ಎರಡುವರೆನೂರು ವರ್ಷಗಳ ಪೂರ್ವದಲ್ಲಿ ಶ್ರೀ ಮೋರಯಾದೇವ ಧರಣೀಧರ, ಗೋಸಾವೀನಂದನ, ನಿರಂಜನ, ಚಿಂತಾಮಣಿದೇವ ಮೊದಲಾದ ಭಕ್ತರು ಪರಮಗಾಣಪತ್ಯರು ಆಗಿಹೋದರು. ... ... ಪ್ರಸಿದ್ಧ ಅಷ್ಟವಿನಾಯಕರ ಎಂಟು ಪವಿತ್ರಸ್ಥಾನಗಳು, ಮಹಾರಾಷ್ಟ್ರದಲ್ಲಿಯೇ ಇವೆ. ಈ ಮುಂತಾದ ಮಾತುಗಳಿಂದ ಈ ಪ್ರಾಂತದ ಮಟ್ಟಿಗಂತೂ, ಒಂದಾನೊಂದು ಕಾಲಕ್ಕೆ ಗಾಣಪತ್ಯ ಪಂಥದವರು ಇಲ್ಲಿಯ ಜನರ ಧರ್ಮವಿಚಾರದಲ್ಲಿ, ಅಗ್ರಸ್ಥಾನವನ್ನು ಪಡೆದಿರಲಿಕ್ಕೆ ಸಾಕೆಂದು ಕಂಡುಬರುವುದು.'

ಉತ್ಸವಗಳು ರಾಷ್ಟ್ರೀಯವಾಗಲಿಕ್ಕೆ ಯಾವ ಘಟಕಗಳು, ಅವಶ್ಯವಾಗಿವೆಯೆಂಬುದು, ಮಹಾರಾಷ್ಟ್ರದಲ್ಲಿ ಗಣೇಶೋತ್ಸವವು 'ರಾಷ್ಟ್ರೀಯವಾದುದರ ಕಾರಣಗಳ ಮೀಮಾಂಸೆಯನ್ನು ಮಾಡಲಾಗಿ ತಿಳಿಸು ಬರುವದು. ಶ್ರೀ. ಋಗ್ವೇದಿಯವರ ಪುಸ್ತಕದೊಳಗಿನ ಅವತರಣಿಕೆಯ ಮೇಲಿಂದ ಇದು ಒಡೆದು ಕಾಣುವದು. ಗಣೇಶಪೂಜೆಯು ಆರ್ಯಾವರ್ತದಲ್ಲಿ, ಎಲ್ಲ ಕಡೆಗೂ ಉಂಟು. ಆದರೆ ಮಹಾರಾಷ್ಟ್ರದಲ್ಲಿ, ಅದಕ್ಕೆ ದೊರೆತ ಮನ್ನಣೆಯು, ಬೇರೆಕಡೆಯಲ್ಲಿಲ್ಲ. ಮಹಾರಾಷ್ಟ್ರದ ಇತಿಹಾಸದಲ್ಲಿ, ಇಷ್ಟು ಸ್ವಲ್ಪ ಅವಧಿಯಲ್ಲಿ, ಗಾಣಪತ್ಯ ಪಂಥವು ಬೇರೂರಿ ಅನೇಕ ಉಪಾಸಕರ ಅನುಷ್ಠಾನ

ಯಜ್ಞವನ್ನು ಸ್ವೀಕರಿಸಿ, ಮರಾಟಿಗರ ಜಾತಿಯ ಜೀವಾಳದಲ್ಲಿ ಸೇರಿಕೊಂಡುಬಿಟ್ಟಿತು. ಯಾವುದೊಂದು ಉತ್ಸವವು ರಾಷ್ಟ್ರೀಯವಾಗಲಿಕ್ಕೆ, ಆಯಾ ಜನಾಂಗದ ಜಾತೀಯ ಅನುಷ್ಠಾನ, ಸಾಹಿತ್ಯದಲ್ಲಿ ಪ್ರಾಶಸ್ತ್ಯ, ರಾಜಕೀಯ ಆಂದೋಲನಗಳಲ್ಲಿ ಅದಕ್ಕೆ ಸಿಕ್ಕುವ ಮಹತ್ತ್ವ, ಮತ್ತು ಮುಂದಾಳು ಅದಕ್ಕೆ ಕೊಡುವ ವಿಶಿಷ್ಟರೂಪ—ಎಂಬೀ ನಾಲ್ಕು ಮಾತುಗಳು, ಬೇಕಾಗಿರುತ್ತವೆ. ಇವು ನಾಲ್ಕೂ ಮಹಾರಾಷ್ಟ್ರದಲ್ಲಿ ಗಣೇಶೋತ್ಸವವು ನಾಡಹಬ್ಬವಾಗಿರುವುದರಲ್ಲಿ ಅನ್ವಯಿಸುವವು. ಅಖಿಲಭಾರತದ, ವಿಶೇಷತಃ ಕರ್ನಾಟಕದ ಐತಿಹಾಸಿಕ ಪರಂಪರೆಯನ್ನು ಹಿಂಬಾಲಿಸಿ, ಶಿವಾಜಿಯು ಭವಾನಿಯ ಉಪಾಸನೆಯನ್ನು ಮಾಡಿ, ಆಕೆಯ ಅನುಗ್ರಹದಿಂದ ಸ್ವರಾಜ್ಯಸಂಸ್ಥಾಪನೆಯನ್ನು ಮಾಡಿದ್ದರೂ, ಮಹಾರಾಷ್ಟ್ರೀಯರು, ಜಾಜ್ವಲ್ಯವಾಗಿ ಮಾಡಿದ (ಮತ್ತ ನರ ಸಾಹಿತ್ಯಚರಿತ್ರೆಯಲ್ಲಿ ಮಾಡಿದ) ಗಣಪತಿಸೇವಾರೂಪವಾದ, ತಪಶ್ಚರ್ಯೆಯು ಫಲಿಸಿ, ಪೇಶವೆಯರಲ್ಲಿ ಹಲವರ ಮತ್ತು ಅವರ ಸರದಾರರಲ್ಲಿ, ಅನೇಕರ ಉಪಾಸ್ಯದೇವತೆಯೂ, ಕುಲದೇವತೆಯೂ ಗಣಪತಿಯೇ ಆದುದರಿಂದ, ಮಹಾರಾಷ್ಟ್ರದ ರಾಜಕೀಯ ಕ್ಷೇತ್ರದಲ್ಲಿ ಪ್ರಮುಖಾಂಗವನ್ನು ಪಡೆಯಿತು. ಮತ್ತು ಅಂಥ ಸಾಲಾವಳಿ ಒದಗಿದಾಗ ಮಹಾರಾಷ್ಟ್ರದ ನಾಡಿಯನ್ನು ಕಂಡು ಹಿಡಿದ, ಮಹಾರಾಷ್ಟ್ರದ ಸಂಸ್ಕೃತಿಯನ್ನು ಪರಿಶೀಲಿಸಿ ಅದರ ಮೂಲಮಂತ್ರವನ್ನು ತಿಳಿದುಕೊಂಡ, ಮಹಾರಾಷ್ಟ್ರದ ನಿಜವಾದ ಮುಖಂಡರಾದ **ಲೋಕಮಾನ್ಯತಿಲಕರು** ಗಣೇಶಪೂಜೆಗೆ ರಾಷ್ಟ್ರೀಯಸ್ವರೂಪವನ್ನು ಕೊಟ್ಟು, ಅದು ಮಹಾರಾಷ್ಟ್ರೀಯರ ಹೃದಯಕ್ಕೆ ಪ್ರತೀತವಾಗುವಂತೆ ಮಾಡಿದರು. ಬೇರೆ ಕಡೆಗೆ ಬಂದ ಬರೆವಣಿಗೆಯಮೇಲಿಂದ ಕರ್ನಾಟಕಸಾಹಿತ್ಯಚರಿತ್ರೆಯಲ್ಲಿ ಗಣಪತಿಗೆ ಪ್ರಾಶಸ್ತ್ಯವಿರದೆ ಶಕ್ತಿಗೆ ಸರ್ವಥೈವ ಇರುವದರಿಂದ, ಮಾನವಮಿಯು ನಮ್ಮ ನಾಡಹಬ್ಬವಾಗಲಿಕ್ಕೆ ಎಷ್ಟು ಒಪ್ಪುತ್ತಿದೆಯೆಂಬುದು ವ್ಯಕ್ತವಾಗುವುದು.

---

## ಬಂಗಾಲದ ಪೂಜೋತ್ಸವವೂ ಶಾಕ್ತಪಂಥವೂ.

ಕೆಳಗೆ ಬರೆದಿರುವ ಶಾಕ್ತಪೂಜೋತ್ಸವದ ವರ್ಣನೆಯಿಂದ ಯಾರಿಗೂ ಅದು ನಮ್ಮ ಮಾನವಮಿಯ ಉತ್ಸವಕ್ಕಿಂತ ತೀರ ಭಿನ್ನವಾದುದೆಂದು ಮನಗಾಣಿಕೆಯಾಗದಿರದು. ಈ ವರ್ಣನೆಯು ಜನಸಾಮಾನ್ಯದ ತಾಮಸವಾದ ಸ್ಥೂಲರೂಢಿಯದು. 'ಕುಲಾರ್ಣವತಂತ್ರ'ದಲ್ಲಿಯೂ, ಉಡ್ರಾಫ್ ಇವರ "ಶಕ್ತಿ ಎನ್ಡ ಶಾಕ್ತಿಝಮ್" ಎಂಬ ಪುಸ್ತಕದಲ್ಲಿಯೂ 'ಸೋಲ ಆಫ್ ಇಂಡಿಯಾದ'ಲ್ಲಿಯೂ ಬಿಪೀನ್‌ಚಂದ್ರಪಾಲರ

ಈ ಶಕ್ತಿಯುತ್ಸವದ ಹುರುಳು ತಿರುಳನ್ನು, ಬೇರೆ ವಿಧವಾಗಿ ವಿವೇಚಿಸಿದ್ದಾಗಿದೆ. ಕುಲಾರ್ಣವತಂತ್ರವು, ನಮಗೆ ಹೇಯವೆನಿಸುವ ಪಂಚಮಕಾರಗಳಿಗೂ, ಒಂದು ಸಾತ್ವಿಕವಾದ ಸಂಕೇತಾರ್ಥವನ್ನು ಕಲ್ಪಿಸುತ್ತದೆ. ಉಡ್ರಾಫರವರು ಯುಕ್ತವಾಗಿ ಆಚರಿಸಿದರೆ, ಪಂಚಮಕಾರಗಳಲ್ಲಿ ಹೇಯವಾದುದೇನಿದೆ ? ಎಂದು ಪ್ರತಿಪಾದಿಸುವರು. ಬಿಪಿನ್ ಚಂದ್ರಪಾಲರು ಮಾನವಗೆ ಹಿತಕಾರಿಯಾದ ಶಕ್ತಿಯು, ಜಗದ್ಧಾತ್ರಿರೂಪದಲ್ಲಿ, ಅವನನ್ನು ಪಶುಪಕ್ಷ್ಯಾದಿಗಳಿಂದ ಸಂರಕ್ಷಿಸುವದೆಂದೂ, ಕಾಲೀರೂಪದಲ್ಲಿ ಕ್ರೂರತಾಮಸಿಕ ಶತ್ರುಗಳಿಂದ ಸಂರಕ್ಷಿಸುವದೆಂದೂ, ದುರ್ಗಾರೂಪದಲ್ಲಿ ಅವನನ್ನು ಪರಮಾಭ್ಯುದಯಕ್ಕೆ ಮುಟ್ಟಿಸುವದೆಂದೂ ಹೇಳುವರು. ಇವರೆಲ್ಲರ ಭಾಷ್ಯವೇನೇ ಇರಲಿ; ನಮ್ಮಲ್ಲಿಯ ನವರಾತ್ರಿಯ ಅನುಷ್ಠಾನವೂ ಆಚಾರವೂ ಬಂಗಾಲದವರಿಂದ ಭಿನ್ನವಾಗಿವೆ. ಎಂಬದರಲ್ಲಿ ಸಂದೇಹವಿಲ್ಲ. ನಾವು ಶಕ್ತಿಯನ್ನು ಯಾವ ಸಾತ್ವಿಕರೂಪಗಳಲ್ಲಿ ಕಾಣುವೆವೆಂಬುದನ್ನು ನಿಜಗುಣಶಿವಯೋಗಿಗಳ, ಪರಮಾರ್ಥಗೀತೆಯು ಹೇಳುವದು. "ಸೇವಕರಿಷ್ಟವನೀನಾ ಶಕ್ತೀ । ಭಾವಿಸೆ ನಿನ್ನೊಳು ಸಂವಿಚ್ಛಕ್ತಿ । ವಾಣಿಯೆನಿಸಿ ವಾಕ್ಸಿದ್ಧಿಯನಿತ್ತೂ । ಮಾಣದೆ ಲಕ್ಷ್ಮಿಯೆನಿಸಿ ಶುಭಮಿತ್ತು ॥ ಗಿರಿಜೆಯೆನಿಸಿ ಸೌಭಾಗ್ಯವನಿತ್ತು। ವರ ಅಂಬಿಕೆಯೆನಿಸುತ್ತೊಲಿದಿತ್ತು ॥ ಯೋಗವನಿತ್ತು ಮನೋನ್ಮನಿಯೆನಿಸಿ। ಭೋಗವನಿತ್ತಾ ಕುಂಡಲಿಯೆನಿಸಿ ॥ ಮತ್ತೆಯು ಬಹುನಾಮಂಗಳವೆರಸಿ । ತತ್ತದಖಿಳರೂಪಿಂದವತರಿಸಿ ॥ ತಾನೇ ಭುವನೇಶ್ವರಿಯಾಗಿಹಳು । ನಾನಾ ಭಕ್ತಸುಖಪ್ರದೆಯಹಳು ॥ ಈ ನವಶಕ್ತಿಗಳ ಹೆಸರುಗಳನ್ನು ನಾಥಯೋಗಿಯು ಹೇಳಿದ ೧೦ ಹೆಸರುಗಳನ್ನು ಹೋಲಿಸಿ ನೋಡಿದರೆ, ನಮ್ಮಲ್ಲಿಯ ಆಚಾರಕ್ಕೂ ಅವರಲ್ಲಿಯ ಆಚಾರಕ್ಕೂ ವ್ಯತ್ಯಾಸತೋರದೇ ಇರದು.

ಬಂಗಾಲದಲ್ಲಿ ದುರ್ಗೆಯ ಪೂಜನೋತ್ಸವವು ನವರಾತ್ರಿಯಲ್ಲಿ ಒಳ್ಳೇ ಸಡಗರದಿಂದ ನಡೆಯುವದು. ಆಗಿದಕ್ಕೆ ಪ್ರಚಂಡಸ್ವರೂಪವೂ ಸಿಕ್ಕುವದುಂಟು. ಪ್ರತಿಪದೆಯಿಂದ ಪೌರ್ಣಿಮೆಯ ವರೆಗೆ, ಈ ಉತ್ಸವದಲ್ಲಿ, ಆಬಾಲವೃದ್ಧರು ತೊಡಗುವರು. ಇದಕ್ಕೆ ಬಂಗಾಲದ ರಾಷ್ಟ್ರೀಯಮಹೋತ್ಸವವೆಂದು ಹೇಳಬಹುದು. ದುರ್ಗೆಯನ್ನು ಪೂಜಿಸುವದು ಅಲ್ಲಿಯವರ ಕುಲಾಚಾರವಿದೆ. ಮನೆಯಲ್ಲಿ ದೇವಿಯ ಪ್ರತಿಮೆಯನ್ನು ಕೂಡಿಸಿಯೂ ಘಟಸ್ಥಾಪನೆಯನ್ನು ಮಾಡಿಯೂ ಒಳ್ಳೇ ವಿಜೃಂಭಣೆಯಿಂದ ಆಕೆಯ ಪೂಜೆಯ ಪಾಲಿಸುವರು. ಎಲ್ಲರ ಮನೆಯಲ್ಲಿ, ನೃತ್ಯಗಾಯನಪೂಜಾಕೀರ್ತನೆಗಳು, ನಡೆವುದುಂಟು. ದೇವಿಯ ಗುಡಿಯಲ್ಲಿಯಂತೂ ವಾದ್ಯ, ನೃತ್ಯ, ಲಲಿತ, ಗಾಯನ, ದೀಪೋತ್ಸವ ಮೊದಲಾದವುಗಳ ಯೋಗದಿಂದ ಸರ್ವಮಂದಿರದ ವಾತಾವರಣವು ಉಲ್ಹಾಸದಿಂದ ತುಂಬಿಹೋಗಿರುವುದು. ದೇವಿಯ ಭಕ್ತರು ಗುಂಪುಗಟ್ಟಿಕೊಂಡು ಉತ್ಸವವನ್ನು ನೋಡಲು ರಾತ್ರಿಯಲ್ಲೆಲ್ಲ, ಓಣಿಓಣಿಗಳಲ್ಲಿ ಅಡ್ಡಾಡುವರು. ರಾತ್ರಿಯಲ್ಲಿ

ಮಹಾಪೂಜೆಯ ಮಹೋತ್ಸವಸಮಾರಂಭವು ನಡೆಯುವುದುಂಟು. "ಕಾಲೀಮಾತೆಗೆ ಜಯವಿರಲಿ" ಎಂಬ ಜಯಘೋಷದಿಂದ ಆಕಾಶವು ತುಂಬಿ ಹೋಗುವದು. ದೊಡ್ಡವರು-ಸಣ್ಣವರು, ಗಂಡಸರು-ಹೆಂಗಸರು, ಬ್ರಾಹ್ಮಣರು-ಹೊಲೆಯರು, ಸೇವ್ಯರು-ಸೇವಕರು ತಮ್ಮ ತಮ್ಮ ಉಚ್ಚನೀಚಭಾವನೆಯನ್ನು ಮರೆತು ಎಲ್ಲರೂ ಕಾಲೀಮಾತೆಯ ಮಕ್ಕಳೆಂಬ ಒಂದೇ ಭಾವನೆಯಿಂದ ದೇವಿಗೆ ತಲೆಬಾಗಿ ನಮಸ್ಕರಿಸುವರು.

ಪೌರ್ಣಿಮೆಯ ದಿನ ಶ್ಯಾಮಾಪೂಜೆಯ ಮಹೋತ್ಸವವು. ಈ ದೇವಿಯ ರೂಪವು ನೋಡಲು ಬಲು ಭಯಪ್ರದವು. ಇವಳು ರಕ್ತಪ್ರಿಯಳೆಂಬ ಭಾವನೆಯಿಂದ ಇವಳಿಗೆ ಅಂದು ಪಶುಗಳ ಬಲಿಯನ್ನು ಸಮರ್ಪಿಸುವರು. ಮದ್ಯಮಾಂಸಗಳ ಸೂರೆ ಮಾಡುವರು. ಮರುದಿನ ದೇವಿಯ ವಿಸರ್ಜನೆಮಾಡುವರು.

ಶ್ಯಾಮಾಪೂಜೆಯಾದ ೧೦ ದಿನಗಳ ನಂತರ ದುರ್ಗೆಯ ಪ್ರೀತ್ಯರ್ಥವಾಗಿ ಜಗದ್ಧಾತ್ರಿಯ ಪೂಜೆಯನ್ನು ನೆರವೇರಿಸುವರು. ಜಗದ ಪೋಷಕಶಕ್ತಿಯಾದವಳಿಗೆ ಜಗದ್ಧಾತ್ರಿಯೆಂಬ ಹೆಸರು. ಈ ಸಿಂಹಾರೂಢಪ್ರತಿಮೆಗಾಗ ಕೆಂಪುಬಟ್ಟೆಗಳನ್ನುಡಿಸಿ ದೇವಿಯ ಹೆಸರಿನಿಂದ ಅನೇಕಉತ್ಸವಗಳನ್ನು ಮಾಡುವದುಂಟು. ಜಗದ್ಧಾತ್ರಿಯ ಪೂಜೆಯ ಫಲಪ್ರಾಪ್ತಿಯು ಚತುರ್ವಿಧಪುರುಷಾರ್ಥಕರವಾಗಿದೆಯೆಂದು ಭಾವಿಕರ ಮತವು.

ಹುಣ್ಣಿಮೆಯ ದಿನವೇ ಲಕ್ಷ್ಮೀಪೂಜೆಯ ಉತ್ಸವವೂ ನಡೆವುದುಂಟು. ಸಕಲ ಧಾನ್ಯದ ಕಣಜಗಳಿಗೆ ಕೆಂಪುಬಣ್ಣವ ಹಚ್ಚಿ, ಅವುಗಳ ಪೂಜೆಯನ್ನೂ ಪಾಲಿಸುವರು. ಈ ದಿನ ರಾತ್ರಿಯಲ್ಲಿ ಎಚ್ಚರಿರುವರಿಗಷ್ಟೇ ಲಕ್ಷ್ಮಿಯು ಒಲಿವಳೆಂಬ ಬಗೆಯಿಂದ ಇಡೀ ರಾತ್ರಿಯು ದೇವಿಯ ಮುಂದೆ ಹೆಡ್ಡ ಇಸ್ಪೇಟುಗಳನ್ನಾಡುವದರಲ್ಲಿ ಹೋಗುವದು. ಈ ರೂಢಿಯು ಬಂಗಾಲದಲ್ಲಿದೆ.

ಒಟ್ಟಿನಲ್ಲಿ ನವರಾತ್ರಿಯ ಉತ್ಸವದಲ್ಲಿ ಶಕ್ತಿಯ ಬೇರೆ ಬೇರೆ ಸ್ವರೂಪಗಳನ್ನು ಅಂದರೆ, **ಜಗಜ್ಜನನಿಯೆಂದು** ಉಪಾಂಗಲಲಿತೆಯ, **ಪಾಲನಪೋಷಕಳೆಂದು** ಜಗದ್ಧಾತ್ರಿಯ, **ಸಂಪದ್ದಾಯಿನಿಯೆಂದು** ಲಕ್ಷ್ಮಿಯ, **ವಿದ್ಯಾದಾಯಿನಿಯೆಂದು** ಸರಸ್ವತಿಯ, **ಸಂಹಾರಕರ್ತಳೆಂದು** ಕಾಲಿಯ ಈ ಪ್ರಕಾರವಾಗಿ ಬೇರೆಬೇರೆ ವಿಧದಿಂದ ಕಾಲಿಯನ್ನು ಪೂಜಿಸುವದುಂಟು. ಇಂತು ಈ ದೇವಿಯು ಸರ್ವಶಕ್ತಿಸಮರ್ಥಳೆಂದು ಭಾವಿಸಿ ಪೂಜಿಸುವ ಉಪಾಸಕರೇ ಶಾಕ್ತರು. ಇದರ ಪಂಥವೆ ಶಾಕ್ತಪಂಥ.

ಈ ಪಂಥವು ಎರಡು ಪ್ರಕಾರದ್ದು. ಒಂದು, ಶಕ್ತಿಯ ಪೂಜೆಯನ್ನು ಸಾತ್ವಿಕ ವೃತ್ತಿಯಿಂದ ಪಾಲಿಸುವದು; ಹಾಗೂ ಶಕ್ತಿಯ ಸ್ವರೂಪಗಳನ್ನಾದರೂ ಶಾಂತ ಮತ್ತು ಪ್ರೇಮವೆಂದು ಬಗೆವುದು. ಎರಡನೆಯ ಮತವು ತಾಮಸಿಕವಾಗಿದ್ದು ಆರ್ಯಧರ್ಮಕ್ಕೆ ಅಸಮ್ಮತವಾಗಿದೆ. ಅದರಲ್ಲಿ ತಂತ್ರಮಾರ್ಗ, ಆಗಮ, ಮಂತ್ರಶಾಸ್ತ್ರ, ಉಪಾಸನಾ

ಇತ್ಯಾದಿವಿಧಿಗಳು ಅಡಕವಾಗಿವೆ, ನಾಥಯೋಗಿ ಎಂಬ ಸಾಂಪ್ರದಾಯಿಕನಿಂದ ಈ ಪಂಥವು ಸ್ಥಾಪಿಸಿದುದು. ಅವನು ಈ ವಿಷಯವಾಗಿ ಶಿವಪಾರ್ವತಿಯರ ಸಂವಾದ ರೂಪವಾಗಿ ಅನೇಕಗ್ರಂಥಗಳನ್ನು ಬರೆದಿರುವನು. ಈ ದೇವಿಯ ಹೆಸರುಗಳು:—೧. ಶ್ಯಾಮಾ (ಕಾಳೀ) ೨. .ತಾರಾ. ೩. ತ್ರಿಪುರಾ. ೪. ಬಗಲಾಮುಖೀ. ೫. ಛಿನ್ನಮಸ್ತಕಾ. ೬. ಮಾತಂಗೀ. ೭, ಧೂಮವತೀ. ೮. ಭೈರವೀ. ೯. ಮಹಾವಿದ್ಯಾ. ೧೦. ಭುವನೇಶ್ವರೀ. ಇವಲ್ಲದೆ ಇವಳ ಗುಣವೈಶಿಷ್ಟ್ಯದಿಂದಲೂ, ಹಾಗೂ ಬೇರೆಬೇರೆ ಪ್ರಸಂಗಗಳಲ್ಲಿ ಬೇರೆಬೇರೆ ಅವತಾರಗಳನ್ನು ಇವಳು ಧರಿಸಿದ್ದರಿಂದಲೂ ತ್ರಿಪುರಸುಂದರೀ, ಲಲಿತಾ, ಶಾಂತಾ, ದುರ್ಗಾ, ಮಹಿಷಾಸುರಮರ್ದಿನೀ, ಚಂಡೀ, ಚಾಮುಂಡಿ; ಇತ್ಯಾದಿ ಎಷ್ಟೋ ಹೆಸರುಗಳು ಪ್ರಖ್ಯಾತವಾಗಿವೆ. ಅವುಗಳಿಗೆ ಪೂಜೆ, ಮಂತ್ರ, ಸಹಸ್ರನಾಮ, ಬೀಜ, ಕವಚ, ಹೋಮ, ಬಲಿ–ಇತ್ಯಾದಿ ವಿಧಿಗಳು ಇರುವದುಂಟು. ಹಿಂದೂ ಧರ್ಮವು ನಿಂದ್ಯವೆಂದು ಬಹಿಷ್ಕರಿಸಿದ ಮದ್ಯಮಾಂಸಗಳ ವ್ಯತಿರಿಕ್ತ ಈ ವಿಧಿಗಳು ಪೂರ್ಣವಾಗವು.

ತಾಂತ್ರಿಕ ಮತಕ್ಕನುಸಾರವಾಗಿ ಯಾರೋ ಬರೆದ ದೇವೀಮಾಹಾತ್ಮ್ಯವೆಂಬ ಗ್ರಂಥದ ಪ್ರಮಾಣಗಳನ್ನನುಸರಿಸಿ ಆ ಗ್ರಂಥದ ಪಠಣಶ್ರವಣಾದಿಗಳು ಜರಗುವದುಂಟು. ದೇವೀಮಾಹಾತ್ಮ್ಯದಲ್ಲಿ ಶಕ್ತಿಯ ರುಧಿರಾಧ್ಯಾಯವು ಕ್ರೂರಪ್ರವೃತ್ತಿಯ ಪರಮಾವಧಿಗೆ ಮುಟ್ಟದೆ. ಶಾಕ್ತರು ತಾವು ಕಲ್ಪಿಸಿಕೊಂಡ ದೇವತೆಗಳಲ್ಲಿ ಅನೇಕಭೈರವರಿರುವರೆಂದು ಬಗೆದಂತೆ, ಅನೇಕಭೈರವಿಯರನ್ನೂ ಕಲ್ಪಿಸಿಕೊಂಡಿರುವದುಂಟು. ಶಾಕ್ತರು ಸ್ತ್ರೀಯೇ ಶಕ್ತಿಯೆಂದೂ, ಪುರುಷನೇ ಭೈರವನೆಂದೂ, ಬಗೆವರು; ಹಾಗೂ ಪ್ರತ್ಯಕ್ಷವಾಗಿ ಸ್ತ್ರೀಪೂಜೆಯನ್ನೂ ಅಶ್ಲೀಲವಿಧಿಗಳಿಂದ ಜರಗಿಸುವರು.

ದೇವಿಯ ಕೃಪೆಗಾಗಿ ಎಷ್ಟೋ ಯಂತ್ರಮಂತ್ರಗಳ ರಚನೆ ಆ ಗ್ರಂಥದಲ್ಲಿ ತೋರಿಸಿವೆ. ಅವುಗಳಲ್ಲಿ ಶ್ರೀಚಕ್ರ ವೆಂಬದೊಂದಿದೆ. ಇದನ್ನು ಶಾಲಿಗ್ರಾಮಶಿಲೆಯ ಮೇಲಾಗಲಿ, ಭೂರ್ಜಪತ್ರದ (ಭೂಜಪತ್ರಿಯ) ಮೇಲಾಗಲಿ, ಇಲ್ಲವೆ ಸ್ಫಟಿಕಗಳ ಮೇಲಾಗಲಿ ಬರೆವುದುಂಟು. ಇಂಥ ಯಂತ್ರತಂತ್ರಗಳನ್ನು ಮೈಮೇಲೆ ಇಟ್ಟುಕೊಳ್ಳುವದರಿಂದ ಆದಿವ್ಯಾಧಿಗಳೆಲ್ಲ ನಷ್ಟವಾಗಿ ಯಾವತ್ತೂ, ಮನೋಭೀಷ್ಟಗಳು, ಪೂರ್ತಿಯಾಗುವವೆಂದು ನಂಬುವವರ ಸಂಖ್ಯೆಯೇನು ಕಡಿಮೆಯಿಲ್ಲ. ಈ ಮತವನ್ನವಲಂಬಿಸದವರಿಗೆ ಪಶುವೆಂಬ ಸಂಜ್ಞೆ. ಹೊಸದಾಗಿ ಈ ಪಂಥವನ್ನು ಸ್ವೀಕರಿಸಿದವರ ಪಟ್ಟಾಭಿಷೇಕವನ್ನು ಮಾಡುವರು. ಶಾಕ್ತರು ದೇವಿಯ ಉಪಾಸನೆಯಿಂದ ತಮ್ಮಲ್ಲಿ, ಅದ್ಭುತಶಕ್ತಿ ಬರುವದೆಂದು, ಜಾರಣ, ಮಾರಣ, ಉಚ್ಚಾಟಣ, ಶತ್ರುನಾಶಮೋಹನ, ವಶೀಕರಣ, ಸೈನ್ಯಸ್ತಂಭನ, ಮೇಧಸ್ತಂಭನ, ಬುದ್ಧಿಸ್ತಂಭನ, ಸರ್ಪನಿವಾರಣ, ರೋಗನಿವಾರಣ, ಇತ್ಯಾದಿ ಅದ್ಭುತಕ್ರಿಯೆಗಳನ್ನು ಮಾಡಿತೋರಿಸುವ ಸಾಮರ್ಥ್ಯ ಹುಟ್ಟುವದೆಂದೂ

ಹೇಳುವ ನುಡಿಗಳಲ್ಲಿ ಭಾವಿಕರು ಭೋಳೆಜನರು—ವಿಶ್ವಾಸವಿಟ್ಟು ತಮ್ಮ ಜನ್ಮದ ದುರುಪಯೋಗವನ್ನು ಮಾಡಿಕೊಂಡು, ಮಣ್ಣುಗೂಡಿಸಿಕೊಂಬರು. ವಾರಾಂಗನೆ, ರಜಸ್ವಲೆ, ಹೊಲೆಸೂಳೆ ಇತ್ಯಾದಿ ನೀಚಹೆಂಗಸರ ಎಂಜಲದಿಂದೆ, ತೀರ್ಥಯಾತ್ರೆಗಳನ್ನು ಮಾಡಿ, ಬಂದಷ್ಟು ಪುಣ್ಯಲಭಿಸುವದೆಂಬ ಮತವು, ಈ ಶಾಕ್ತರದು. ಇಂಥ ಪಂಥದವರು ಈಗೀಗ ಸರಕಾರದ ಕಾಯದೆ ಕಾನೂನಗಳ ಅಂಜಿಕೆಯಿಂದ ಹೊರಗೆ ತಮ್ಮ ಮತಭಾವನೆಗಳನ್ನು ಪ್ರಕಟಮಾಡಿಕೊಡುವಷ್ಟು, ಧೈರ್ಯವಿಲ್ಲದವರಾಗಿದ್ದರೂ, ಬಂಗಾಲ, ನೇಪಾಳ, ಕಾಶ್ಮೀರ, ದ್ರವಿಡ, ಮಲಬಾರ, ಮಹಾರಾಷ್ಟ್ರ, ಕರ್ನಾಟಕ- ಪ್ರಾಂತಗಳಲ್ಲಿ ಇನ್ನೂ ಹಲಕೆಲವರು ಗುಪ್ತರೀತಿಯಿಂದೆ ತಮ್ಮ ಪಂಥವನ್ನು ಪಾಲಿಸುವದುಂಟು. ಎಷ್ಟೋ ಠಕ್ಕರು ಇಂಥ ಮಂತ್ರಯಂತ್ರಗಳ ಸಾಧನದಿಂದ ಮೂಢಭಾವಿಕರನ್ನು ವಂಚಿಸಿ ಉಪಜೀವಿಸುವರು. ಬಂಗಾಲದ ಓಝಾ ಬ್ರಾಹ್ಮಣರು, ಶಾಕ್ತರಿರುವರು. 'ಕಲೌ ಚಂಡೀವಿನಾಯಕೌ ; ಚತುರ್ವರ್ಗಾಯ ಚಂಡಿಕಾ' ಹೀಗೆ ಅನ್ನುವದುಂಟು.

---

## ಪ್ರಮುಖ

## ಆಧಾರಗ್ರಂಥಗಳ ಪಟ್ಟಿ.


ಸಂಸ್ಕೃತ:—೧. ಋಗ್ವೇದ, ೨. ಉಪನಿಷತ್ತುಗಳು, ೩. ಶಿವತತ್ತ್ವರತ್ನಾಕರ ಕೆಳದಿ ಬಸವಪ್ಪನಾಯಿಕರು.

ಕನ್ನಡ:— ೪. ಕವಿಚರಿತ್ರೆ ಭಾಗ ೧-೨; ೫. ವಚನಶಾಸ್ತ್ರಸಾರ—ಶ್ರೀ. ಹಳಕಟ್ಟಿ ೬. ಭರತೇಶವೈಭವ—ರತ್ನಾಕರ; ೭. ಕಂಠೀರವನರಸರಾಜಕಾವ್ಯ—ಗೋವಿಂದ ವೈದ್ಯ ೮. ದೇವೀಮಾಹಾತ್ಮ್ಯ—ಚಿದಾನಂದ; ೯. ಮೈಸೂರು ವಂಶರತ್ನಾಕರ ೧೦. ವಿವೇಕಚಿಂತಾಮಣಿ—ನಿಜಗುಣಶಿವಯೋಗಿ.

ಮರಾಠಿ:—೧೧. 'आर्यधर्म' ೧೨. मध्ययुगीनभारत—वैद्य. ೧೩. आर्यांच्या सणांचा प्राचीन व अर्वाचीन इतिहास—ऋग्वेदी.

ಇಂಗ್ಲೀಷ:—೧೪. The Forgotten Empire; ೧೫. Vicissitudes of Aryan Civilization. (Kunte); ೧೬. Soul of India (B. C. Pal) ೧೭. Elements of Hindu Iconography vol i, Part ii, T. Gopinatha Rao.

# ಸೀಮೋಲ್ಲಂಘನ.

( " ನೆಚ್ಚದಿರೀ ಭಾಗ್ಯ " ಎಂಬ ಪುರಂದರದಾಸರ ಪದದಂತೆ. )

ಬನ್ನಿರಿ ಬನ್ನಿರಿ ಸೀಮೆಯ ದಾಟೋಣ ನಾವೆಲ್ಲರೊಂದಾಗುತೆ ।
ಕನ್ನಡನಾಡಿನ ಗುಡಿಯನು ಹಿಡಿಕೊಂಡು ಸಾಗುವಾ ಮೆರೆಯಿಸುತೆ ॥ ಪಲ್ಲ ॥
ನಿನ್ನಿನಂತಹ ಮಹಾನವಮಿಯು ಇಂದಲ್ಲ ಹೊಸನೆತ್ತರುಕ್ಕಿಹುದು ।
ಮುನ್ನಿನ ಹಬ್ಬವು ಮತ್ತೆ ಕನ್ನಡವಲ್ಲಿ ವಿಭವದೊಳೊಪ್ಪುವುದು ॥ ೧ ॥
ಇಂದಿನ ಹಬ್ಬವು ಮುಂದೆ ಮುಂದರಿವುದು ಕೀರ್ತಿಯು ಹಬ್ಬುವುದು ।
ಹಿಂದಿಗಿಂತಲು ಹೆಚ್ಚು ನಮ್ಮೆದೆ ಶೌರ್ಯದ ಕಾಹಿನಿಂದುಬ್ಬುವುದು ॥ ೨ ॥
ಬೊಗಳುವ ಮಂದಿಯು ಗಂಟಲಾಯೆನದಂತೆ ಬೀಗವು ಬೀಳುವುದು ।
ಹೊಗಳಿಕೆ ಮಿಗಿಲಾಗಿ ಕಾಡಿಳೆ ಗುಹೆಬೆಟ್ಟ ಮುಗಿಲೆಲ್ಲ ತುಂಬುವುದು ॥ ೩ ॥
ನಿನ್ನೆ ಪೂಜಿಸಿದ ಕಠಾರಿಭಲ್ಲೆಯಕತ್ತಿ ಕೊಡಲಿಗಳನು ಕೊಳ್ಳಿರಿ ।
ಇನ್ನು "ಜಯ ಕರ್ಣಾಟ"ವೆಂದು ಗರ್ಜಿಸಿ ಸೆಡ್ಡು ಹೊಡೆಯುತೆ ಕಾಲಿಡಿರಿ ॥ ೪ ॥
ಭೋರ್ಗರೆವ ಕಡಲಂತೆ ತೆರೆಹಿಂದೆ ತೆರೆಯಾಗಿ ಗುಂಪಾಗಿ ಮುಂಬರಿವಾ ।
ಸ್ವರ್ಗದೇಶಗಳನ್ನು ಗಡಗಡ ನಡುಗಿಸಿ ಬೆಪ್ಪಾಗಿ ನಿಲ್ಲಿಸುವಾ ॥ ೫ ॥
ವಿಜಯನಗರರಾಜರನುಗಾಲ ಮಾಡಿದ ಹಬ್ಬವ ಸಾಗಿಸುವಾ ।
ವಿಜಯಧ್ವಜವನೊಯ್ದು ವಿಜಯನಗರಸೀಮೆಯಲ್ಲಿ ನಾವ್ನಿಲ್ಲಿಸುವಾ ॥ ೬ ॥
ಬನಶಂಕರಿಯ ನಾವು ಪೂಜಿಸಿ ಕನ್ನಡಹಬ್ಬವ ಪೂರೈಸುವಾ ।
ಜನಪಪುಲಿಕೇಶಿಯ ಗುಡುಗಿನ ಗಡಿಯಲ್ಲಿ ಕೇತುವನೂರಿಸುವಾ ॥ ೭ ॥
ಎಲ್ಲಮ್ಮನಡಿಗೆರಗಿ ವರಗೊಂಡು ಮುಂದಕೆ ಕೇಕೆಯೊಂದಿಗೆ ಸಾಗುವಾ ।
ಮಲ್ಲರಟ್ಟರ ನಾಡ ಕಟ್ಟಕಡೆಯೊಳೀ ಪತಾಕೆಯ ನೆಟ್ಟಿಡುವಾ ॥ ೮ ॥
ಚಾಮುಂಡಿ ನೆಲೆಗೊಳ್ಳಲೆಮ್ಮಂತರಂಗದಿ ನಾವೀಗ ಮೈಮರೆವಾ ।
ಆ ಮೈಸೂರಾಚೆಯೊಳೆಮ್ಮ ಪತಾಕೆಯ ಫಡಫಡ ಮೊಳಗಿಸುವಾ ॥ ೯ ॥
ನಾಕುನಿಟ್ಟಿನ ನಾಡ ಗಡಿಯಲ್ಲಿ ನಾಕು ಪತಾಕೆಗಳನು ನೆಡುವಾ ।
ಈ ಕನ್ನಡದ ಜಯಭೇರಿಯು ಲೋಕದೊಳೆಲ್ಲೆಲ್ಲು ತುಂಬಿಸುವಾ ॥ ೧೦ ॥
ಕನ್ನಡತಾಯಿಯ ಗುಡಿಯು ಗೋಪುರದೀಪ ಜಗವನ್ನೆ ಬೆಳಗುವುದು ।
ಕನ್ನಡಚಿಕ್ಕೆಗಳಂಬರದಿಂದಲಿ ಹರ್ಷಾಶ್ರು ಸೂಸುವುದು ॥ ೧೧ ॥
ಇದುವೆ ನಮ್ಮಯ ಕಟ್ಟು ಇದುವೆ ನಮ್ಮಯ ಮೆಟ್ಟು ಕನ್ನಡತನದ ಗುಟ್ಟು ।
ಗದರಿಸಿ "ಜಯ ರಾಷ್ಟ್ರದೇವಿ"ಯೆಂದೆನ್ನುವಾ ಮುಂದೆ ನಾವಡಿಯನಿಟ್ಟು ॥ ೧೨ ॥

—ಮಲ್ಲಾರಿ.

ಓಂ

# ಮಾನೋಮಿಯ ಹಾಡುಗಳು

ಸೂಚನೆ:—ಮೊದಲು ಯಾವ ಕಲೆಗೂ ದೊರೆಗಳ ನೆರವಿರುತ್ತಿದ್ದಿತು. ಈ ಹಬ್ಬದಲ್ಲಿ ನಾಡ ಕಬ್ಬಿಗರನ್ನು ಕರೆಯಿಸಿ ಓದಿಸಿ ಮೆಚ್ಚುಗೆಗಳಿಂದ ಹುರಿಗೊಳಿಸುವ ನಡವಳಿಕೆಯಿತ್ತು. ಇದೀಗಣ ಕಾಲದಲ್ಲಿ ಇಂತಹ ಮಾತಿನಲ್ಲೆಲ್ಲ ಜನತೆಯೇ ಜನಪತಿಯಾಗಬೇಕಾಗಿದೆ. ಕಬ್ಬಿಗರಾಗಲಿ ಹಾಡುಗರಾಗಲಿ ಶಿಲ್ಪಿಗರಾಗಲಿ ಚಿತ್ರಿಗರಾಗಲಿ ಜನತಾಶ್ರಯದಿಂದಲೇ ಕಲಾಭಿವೃದ್ಧಿಯನ್ನು ಮಾಡಿಕೊಳ್ಳಬೇಕು. ಇದನ್ನರಿತು ಧಾರವಾಡದ ಉತ್ಸವ ಮಂಡಲದವರು ಮುಂಚಿನ ವಾಡಿಕೆಯನ್ನು ಈ ನವರಾತ್ರ್ಯುತ್ಸವಕ್ಕೆ ಜೋಡಿಸಿದ್ದಾರೆ. ಈವರುಷ ಒಂದು ದಿನದ ಉತ್ಸವದಲ್ಲಿ ಆಧುನಿಕ ಕವಿಗಳ ಕಾವ್ಯದಿಗ್ದರ್ಶನವನ್ನೇರ್ಪಡಿಸಿದ್ದರು. ಎಷ್ಟೋ ಕವಿಗಳು ತಮ್ಮ ಕವಿತೆಯ ಪ್ರತಿಭೆಯನ್ನು ತೋರಿಸಿದರು. ಧಾರವಾಡದಲ್ಲಿ ಓಣಿಯೋಣಿಗೂ ಕವಿಗಳ ಹಿಂಡೇ ಇರುವದೋ ಎಂಬ ಭಾವನೆಯುಂಟಾದುದು ಕನ್ನಡದ ಭಾಗ್ಯವೇ ಸರಿ. ಅಲ್ಲಿ ಓದಿದ ಕವಿತೆಗಳಲ್ಲಿಯ ಕೆಲವನ್ನಿಲ್ಲಿ ಕೊಡುವೆವು.

---

## ಬನದಮ್ಮ !

(ಚಿಕ್ಕಮಕ್ಕಳ ಗುಂಪಿನಿಂದ)

ವಾ. ದೀ. ಚ.

ಧರೆಯುನೆಲ್ಲವನೊಂದೆ ಕಿರಿನೋಟದಲಿ ಮರೆಸಿ, ಮರೆಯಿಸುವ ದುಂದುಗಾರ್ತಿ ।
ಅರಿವಿನಾಗರವಾಗಿ, ತಿಳಿವಿನಾತೊರೆಯಾಗಿ, ನಸುನಗುವ ಹೊನಹುಗಾರ್ತಿ ॥
ಇರದುದನು ಇದ್ದಂತೆ ಇದ್ದುದನು ಇರದಂತೆ ನೆರೆಗೆಯ್ವ ಮಾಟಗಾರ್ತಿ ।
ಚರಣವಿಡು ಬಗೆಗುಡಿಗೆ ಮೀಸಲಿದೆ ಮಾಸುತಿದೆ ಬನದಮ್ಮ ! ಬೆಡಗುಗಾರ್ತಿ ॥ ೧ ॥

× × × ×

ನಳನಳಿಪ ಬಾಳೆಗಳ ನಿಡುಸುಳಿಯು ನಡುವಿನೊಳು, ಅಡಗಿರುವೆ ಸೊಬಗುಗಾರ್ತಿ ।
ಒಳುಬೆಳೆದ ಎಳೆಗಾಯ ನೀರಿನೊಳು ಸವಿಯಾಗಿ ಸೂಸುತಿಹೆ ಸೊಗಸುಗಾರ್ತಿ ॥

ಕಳೆಯುಳ್ಳ ಕಬ್ಬಿನೊಳು ರಸವಾಗಿ ನೆರೆತುಂಬಿ ಮೈಮಣಿಪೆ ವನಪುಗಾರ್ತಿ ।
ತಳುಬೇಡ ಬಾಬೇಗ ಮೀಸಲಿದೆ ಬಗೆದೋಟ, ಬನದಮ್ಮ! ತೋಟಗಾರ್ತಿ ॥ ೧ ॥

ಎಳೆಬಳ್ಳಿ ಸುಳಿಬಳ್ಳಿ ನಿಡುಬಳ್ಳಿಯಲಿ ನೀನು, ಮಿದುತನದಿ ಬಳುಕೆ ಬಲ್ಲೆ ।
ತಿಳಿನೀರಿನಲಿ ಬೆಳೆದ ತಾವರೆಯು ಕಂಪಾಗಿ, ಸೂಸುತಿಹೆ ನೀನು ನಲ್ಲೆ ॥
ಗಿಳಿ ನವಿಲು ಕೋಗಿಲೆಯು ಕುಕಿಲಿನಲಿ ಮೈದೋರಿ, ವೈಮರಿಪ ಕಿರಿಯು ಸೊಲ್ಲೆ ।
ನಳನಳಿಸು ಬಾಬೇಗ ಮೀಸಲಿದೆ ಬಗೆಯರಳು ಬನದಮ್ಮ! ಅರಳು ಸಲ್ಲೆ ॥ ೨ ॥

× × × ×

ಕುರುಹುಗಳ ಕಾಣುತಲಿ ನಿನ್ನಿರವ ಬಗೆಯುತಲಿ, ನೆರೆನೋಡೆ ಸುತ್ತಲಲ್ಲಿ ।
ಹಿರಿಗುಡಿಯು ಬನದಲ್ಲಿ ಮಡುಗಿಹುದು ನಡೆದೆ ನಾ, ನಿನ್ನನ್ನು ನೋಡಲಿಲ್ಲಿ ॥
ಕಾಳುಕತ್ತಲೆಮುಸುಕಿ ತಾಳುಗೆಡಿಸಿತು ಮನವ, "ಹಾಳುಗುಡಿ" ಎಂದು ಬಗೆದು ।
ತಾಳಿ ಧೈರ್ಯವ ನಡೆಯೆ ನಸುಬೆಳಕಿನಲಿ ನೋಡಿ, ಹಿಗ್ಗಿತಗ್ಗಿತು ಮನವಿದು ॥ ೪ ॥
ವಿಶ್ವವನು ನಿಮಿಷದಲಿ ಕಣ್ಕಿಡಿಯ ಮೆರುಗಿನಲಿ, ಬೆಳಗಿಸುವೆ ಅಳಿವಿಲ್ಲದೆ ।
ನಶ್ವರದ ಸೊಡರ ಕಿರಿಗದಿರಿನಲಿ ನೀನಿಂದು, ತೋರುತಿಹೆ ತಲ್ಲಣಿಸಿದೆ ॥

× × × ×

ನೆರೆನೋಡಲೆನಿಸಿತೌ ನಿನ್ನಿರವು ಬನದಲ್ಲಿ, ಇಲ್ಲಿ ಬರಿಗಲ್ಲ ರೂಪು ।
ಬರಿಯು ಕಲ್ಲಾದರುವೆ ಬಿರಿಸಿತೌ ಎದೆಯನ್ನು, ಮೆರುಗಿನಲಿ ವೀರರೂಪು ॥ ೫ ॥
ಕಲ್ಲ ಮೂರ್ತಿಯ ಕಂಡು ಹುಟ್ಟು ಷಂಢನು ಕೂಡ, ಗಂಡುತನ ತಾಳುವಂತೆ ।
ಇಲ್ಲಿ ನೆಲಿಸಿದೆ ಹುಲ್ಲುಕನ್ನಡಿಗನೆದೆಯಲ್ಲಿ, ಕಲಿತನವ ಕೆಚ್ಚುವಂತೆ ॥

× × × ×

ಇನಿತೆಲ್ಲ ನೋಡುತಿರೆ, "ಕಾಳುಕತ್ತಲೆಯಲ್ಲಿ, ಕಿರಿಸೊಡರ ಬೆಳಕಿನಲ್ಲಿ ।
ನಿನರೂಪು ಚೆಲ್ಲಿ ನೀ ನೆಲಿಸಿರುವೆ ಬನದಲ್ಲಿ," ಬಗೆದೆ ನಾ ಮನಸಿನಲ್ಲಿ ॥ ೬ ॥
ಅರಿದೆನೌ ಕಲಿತನದಿ ನೀ ಗೆಯ್ದ ಮಾಟವನು, ಇರುವೆ ನೀನೆಲ್ಲೆಡೆಯೊಳು ।
ಪಿರಿದಳಲ ನಿನ್ನಿರುವ ತೋರಿ ನನ್ನೆದೆಗರಗಿ, ಬರಲಿರುವೆಯೌ ಬನದೊಳು ॥

× × × ×

" ಹಿಂದೆನ್ನ ಕಂದರಿಂ ಕಲಿತನದಿ ನನಜಸವು, ಜಗಕೆಲ್ಲ ಮಿಗೆತೋರಿತು ।
ಇಂದೆನ್ನ ಕೈಗತ್ತಿ ಕಣಕಣಎ ಜಣಗುಡದು, " ಎಂದು ಮುಳಿಸಿನಲಿ ಬೆರೆತು ॥ ೭ ॥

ನಡೆವ ಕುಣಪನ ತೆರದಲಿರುವ ಕನ್ನಡಿಗನಿಗೆ, ಕಲ್ಲಿನಿಂ ಜೀವವನ್ನು ।
ಇಡಿಸಿ ಕಡುಗಲಿಯೆನಿಸಲೆಂದು ಮಿಡುಕಿನಲಿ ನೀ, ಪಡದಿರುವೆಯೋ ಬನವನು ॥

ಅರಿತೆ ಬಿಡು ಬನದಮ್ಮ ನಿನಗೇಕೆ ವನವಾಸ, ಬಿಟ್ಟು ಬಾ ಬನವನಿನ್ನು ।
ನುರಿತು ಬಿಡು ಕಿರಿತನವ ಇರುವಿರಲಿ ಬಗೆಬನದಿ, ಕೊಟ್ಟೆ ಬಾ ಮನವನಿನ್ನು ॥ ೮ ॥

× × × ×

ಉಸುರೆ ಸುಳಿಗಾಳಿಯುದು ನಲುವೆ ಪೊಸವನಲು, ಸಾ-ಹಸವೆ ಸರವಲ್ಲಿ ದೇವಿ ।
ಹುಸಿಪುಗದೆ ಹಣ್ಣಿಸಿದ ಅರಳುಗಳ ಮುಡಿಸುವೆನು, ನಿನ್ನಡಿಗೆ ನಾಡದೇವಿ ॥
ಕಣ್ಣು ಸೊಂಪಿಗೆ ಇಂಪು ಕಿವಿಯಿಂದೆ ಕಂಪು ತಾ, ನಾಸಿಕದಿ ಬನಬೆಡಗನು ।
ಹಣ್ಣ ರಸ ರಸನೆಯಲಿ ತಂಪು ತಾ ತೊವಲಿನಲಿ, ತಿಳಿಸುವದು ಬಗೆಬನವನು ॥ ೯ ॥

ಎದೆಗರುಳ ಎಣ್ಣೆಯಿಂದುರಿಸಿ ಹಮ್ಮನು ಹೊಂದಿ, ಅರಿವಿನಾ ಬೆಳಕಿನಲ್ಲಿ ।
ಹದುಳನನು ಮುದ್ದಿಡುವ ಮಾಟಗಾರ್ತಿಯೆ ! ಬಂದು, ಕೂಡು ಮನೆಮಾಡು ಇಲ್ಲಿ ॥

× × × ×

ಇಡು ನಿನ್ನ ಕಿಡಿನೋಟ ಕಂಗಳಲಿ ಕರಗಿಸುವೆ, ದುರುಳರನು ಇಳೆಯೊಳಿನ್ನು ।
ಕೊಡು ನಿನ್ನ ಕಿರಿಗತ್ತಿ ಕೈಯ ಎಲ್ಲಿ ಬಂಡಿಸುವೆ ನಿನಗಡ್ಡ ಬರುವರನ್ನು ॥ ೧೦ ॥
ಕನ್ನಡಿಗರನು ಕರೆದು ಕೂಡಿಸುವೆ ನಾಡನ್ನು, ಗುಡಿಯೆತ್ತಿ ಓಡಿಸುವೆನು ।
ನನ್ನಿಂದೆ ಗುಡುಗಿಸಲು ನಿನ್ನ ವಾಹನದಂತೆ, ಪರನಾಡ ನರಿಗಳನ್ನು ॥

ನಡೆ ಇನ್ನು ಬಾಬೇಗ ಬಗೆಗುಡಿಗೆ ಬನದಮ್ಮ ತಡವೇಕೆ ತಾಳದಿಹೆನು ।
ಬಿಡು ಬೀಡ ಬಗೆಯಲ್ಲಿ ಬಗೆಗೊಳಿಸು ಗುಡಿಯಲ್ಲಿ, ನೆಲಿಸದಲೆ ನಾ ಮಾಣೆನು ॥ ೧೧ ॥

— ರಾಮು.

---

## ಕರ್ಣಾಟಕ ಬಾಲಗೀತೆ !

(ಚಿಕ್ಕಮಕ್ಕಳ ಗುಂಪಿನೀದ)

॥ ಚಾಮರ ವೃತ್ತ ॥

ಒಂದುಗೂಡಿ ಮಿತ್ರರೆಲ್ಲ ಬನ್ನಿ ಬನ್ನಿರೀದಿನ ।
ಬಿಂದುಬಿಂದುವಾಗಿ ಮಾಧುಕರ್ಯದಿಂದ ಬಂಡನು ॥

ತಂದು ತಂದು ದೇವಿಯೆಂಬ ಹುಟ್ಟನೊಂದ ಕಟ್ಟುವಾ ।
ಜೇನುತುಪ್ಪವೀಂಟಿ ಹಾಡಿ ಹಾಡಿ ಹಾರಿಯಾಡುವಾ ॥೧॥

ಭೀಮ ನೀನು ಹುಲ್ಲಕಿತ್ತಿ ಹಾಕಿ ಸ್ವಚ್ಛಮಾಡೆಲೊ ।
ಸ್ವಾಮಿ ನೀನು ಗೊಬ್ಬರನ್ನು ತಂದು ಈಗ ಹಾಕೆಲೊ ॥
ರಾಮ ನೀನು ನೀರ ನೀಡು ದೊಡ್ಡದಾಗಿಸೋಣೆಲೊ ।
ದೇವಿಯೆಂಬ ವೃಕ್ಷದಲ್ಲಿಯಾವ ಹಣ್ಣನುಣ್ಣುವಾ ॥೨॥

ನೀನು ಮಲ್ಲಿಯನ್ನು ತಂದು ಹಚ್ಚು ಅಲ್ಲಿ ಶ್ರೀಧರಾ ।
ನೀನು ಚಂಪೆಯನ್ನು ತಂದು ಹಚ್ಚು ಇಲ್ಲಿ ಶಂಕರಾ ॥
ನೀ ಗುಲಾಬಿಯನ್ನು ತಂದು ಹಚ್ಚು ಇತ್ತ ರಾಘವಾ ।
ಹೀಗೆ ದೇವಿಯೆಂಬ ತೋಟವನ್ನು ಚೆಂದಮಾಡುವಾ ॥೩॥

ಒಬ್ಬ ಹೂವನೊಬ್ಬ ನೀರನೊಬ್ಬ ಗಂಧದೀಪವಾ ।
ಒಬ್ಬ ಕುಂಕುಮಾಕ್ಷತಾದಿಯನ್ನು ಒಬ್ಬ ಕಾಯನು ॥
ತಂದು ಪೂಜಿಸೋಣ ಚಿತ್ತ ಕಾಯವಾಕ್ಕಿನಿಂದಲಿ ।
ಇಂದು ದೇವಿ ಸುಪ್ರಸನ್ನನೇತ್ರದಿಂದ ನೋಡಲಿ ॥೪॥

ನಾವು ಏನ ಮಾಡಲಾಪೆವಯ್ಯ? ಬುದ್ಧಿಬಾಹ್ಯರು ।
ಯಾವುದಕ್ಕು ಶಕ್ತಿಯಿಲ್ಲ ತೀರ ಚಿಕ್ಕಬಾಲರು ॥
ಎಂಬ ಚಿತ್ತಕ್ಲೈಬ್ಯವನ್ನು ತಳ್ಳಿ ಎದ್ದು ನಿಲ್ಲುವಾ ।
ನಂಬಿ ದೇವನನ್ನು ದೇವಿಯಂಘ್ರಿಸೇವೆಮಾಡುವಾ ॥೫॥

ಏಳೆ ಮುಂದೆ ಹೋಗುವಂಥ ಸ್ಫೂರ್ತಿತಾನೆ ಬಪ್ಪುದು ।
ಕಾಲನಿಕ್ಕಲೋಡುವಂಥ ಸ್ಫೂರ್ತಿತಾನೆ ಅಪ್ಪುದು ॥
ಓಡಹತ್ತೆ ವಾಯುವೇಗವನ್ನು ನಾವು ತಾಳ್ವೆವು ।
ದಮ್ಮುಹತ್ತದಂತೆ ಘಾಜಿಗಟ್ಟೆಯಲ್ಲಿ ನಿಲ್ವೆವು ॥೬॥

ಯಾವ ಹೊಟ್ಟೆಯಿಂದಲೆಷ್ಟೊ ವಿಶ್ವದೀಪವಾದವೊ ! ।
ಯಾವ ಹೊಟ್ಟೆಯಿಂದಲೆಷ್ಟೊ ಕೂರುಗತ್ತಿಯಾದವೊ ! ॥
ಯಾವ ಹೊಟ್ಟೆಯಿಂದಲೆಷ್ಟೊ ಸ್ಫೂರ್ತಿಕಾವ್ಯವಾದವೊ ! ॥
ನಾವು ಅಂಥ ಹೊಟ್ಟೆಯಿಂದಲೀಗ ಬಂದುದಿಲ್ಲವೊ ? ॥೭॥

ಗಂಡುಮಕ್ಕಳನ್ನು ತಾಯಿಯೇಕೆಯಿಚ್ಛೆಗೈದಳು ? ।
ಕಂಡ ದೇವಿಯರ್ಗೆ ಬೇಡಿ ಇಷ್ಟನೇಕೆ ಹೆತ್ತಳು ? ॥

ಗಂಡು ಹುಟ್ಟಿತೆಂದು ಮೋರೆಯುಷ್ಟದೇಕೆ ಹಿಗ್ಗಿತು ? ।
ಗಂಡುಮಕ್ಕಳಾದ ನಾವದನ್ನು ಕಂಡಃ ಮಾಡುವಾ ॥ ೮ ॥

ಮಾಧವಾರ್ಯನೆಮ್ಮ ಅಣ್ಣನಯ್ಯ ನಾವು ದಡ್ಡರೇ ? ।
ಆ ಚಲುಕ್ಯಶ್ರೇಷ್ಠನೆಮ್ಮ ಅಣ್ಣ ನಾವು ಕ್ಲೀಬರೇ ? ॥
ವಿಶ್ವದಮ್ಮನೆಮ್ಮ ವಂಶದೇವಿ ನಾವು ದೀನರೇ ?! ।
ಆಡದಿರ್ರಿ ಇಂಥ ಮಾತ ! ಮಾಡಿ ಸಾವ ಗೆಲ್ಲುವಾ ॥ ೯ ॥

ಮಂದಿಯಿಂದ ಜೀವಿಸುತ್ತ ಕಷ್ಟದಲ್ಲಿ ತಾಯಿಯು ।
ಬಂದ ಕಣ್ಣ ನೀರನೆಮ್ಮ ಮೋರೆನೋಡಿ ತಾಳ್ವಳು ॥
"ನನ್ನ ದೈವವಿಂತು ಹೆಚ್ಚು ಕಾಲವಿನ್ನು ನಿಲ್ಲದು ।
"ಸಣ್ಣ ಗಂಡುಮಕ್ಕಳುಂಟು" ಎಂದು ನಂಬಿ ಕಾಯ್ವಳು ॥ ೧೦ ॥

ಎಂಥ ವಿಜಯನಗರವೇನದಾಯಿತೆಂದು ಬಲ್ಲಿರಾ ?! ।
ಇಂಥದನ್ನು ಹೇಗೆ ಕಟ್ಟಬೇಕು ಇಂದು ಕಂಡಿರಾ ?! ॥
ಎಂಥ ಕಾರ್ಯವೆಮ್ಮದುಂಟು ಮುಂದೆ ಎಂದು ಬಲ್ಲಿರಾ ?! ।
ಇಂಥ ಕಾರ್ಯಕಿಂದು ಹೇಗೆ ಹೋಹುದೆಂದು ಕಂಡಿರಾ ?! ॥ ೧೧ ॥

ಮುಂದಣೆಮ್ಮ ಧ್ಯೇಯವನ್ನು ಗೊತ್ತು ಮಾಡಿಕೊಳ್ಳುವಾ ।
ಇಂದು ಪೋಪ ದಾರಿಯನ್ನು ನಾವು ಕಂಡುಕೊಳ್ಳುವಾ ॥
ತಾಯಿಗೀಗ ಏಳ್ಗೆಗೈವೆವೆಂದು ಮಾತನೀಯುವಾ ।
ತಾಯ ಪಾದಕಿಕ್ಕಿ ಮೈಯ ಹರಕೆಯನ್ನು ಬೇಡುವಾ ॥ ೧೨ ॥

* * * *

ದ್ವಿಪದಿ॥ " ಶರಣು ಭುವನೇಶ್ವರಿಯೆ ! ನಲ್ನೋಟ ಚೆಲ್ಲು ।
" ವರವಿತ್ತು ಕಳುಹಿಸಾ ! ವಿಜಯವನು ತರಲು ॥ ೧೩ ॥

" ಹೊರಟೆನಾ ನಾನೀಗ ಬಿಗಿದು ನಡುವನ್ನು ।
" ತೋರಿಸೆನು ನಿನಗಿನ್ನು ಸಪ್ಪೆಮೋರೆಯನು ! ॥ ೧೪ ॥

" ಇನ್ನೊಮ್ಮೆ ನಮಿಸಿಪರೆ ನಮಿಸುವೆನು ಬಂದು !
" ಧ್ವಜವಿಡಿದು ಜಯತು ಜಯ ಕರ್ಣಾಟವೆಂದು !" ॥ ೧೫ ॥

—ಮಲ್ಲಾರಿ

# ಸಂಪಗೆಯೆ !

ಸಂಪಗೆಯೆ ! ನನ್ನೆದೆಯ
ಸಂಪ್ರೀತಿಯಲರೊಡನೆ,
ಮದುವೆಯಾಗುವೆನೆಂದು
ವಧುವಾಗಿ ನೀ ಬಂದು,
ಮಿದುಹಳದಿಯನು ಧರಿಸಿ
ಮದುಮಗಳ ಮುದದಲ್ಲಿ,
ತುದಿಗೈಯ ವೇದಿಕೆಯ
ಬದಿಯಲ್ಲಿ ಕುಳಿತಿರಲು,
ಅದುವೆ ನಿನ್ನಧರದಲಿ
ತನಿವ ಕೆಂಪನ್ನ ಕಳೆಯು ॥ ೧ ॥

'ಮದುಮಗನು ಬರಲಿಲ್ಲ
ಅದೆನಿತೋ ನಾನಿಲಲಿ,
ಎಂದನ್ನ ನಯನಗಳ
ಮಂದಿರವ ನೋಡುತಲಿ,
ಕನಲಿಯಿರೆ ಸಂಪಗೆಯೆ !
ಮನದಿ ನೀನೆನ್ನ ಮನಕೆ,
ಕೆನ್ನೆಗಳ ಮೇಲೆಲ್ಲ
ಬನ್ನದಲಿ ಬಳೆಯಿತೇ,
ಅದುವೆ ನಿನ್ನಧರದಲಿ
ತನಿವ ಕೆಂಪನ್ನ ಕಳೆಯು ॥ ೨ ॥

ಬೇಡ ಅಳುಕಲುಬೇಡ
ಬಾಡಿ ಬಳುಕಲುಬೇಡ
ಪಡೆದವರ ಮಡಲಿಂದ
ಬಿಡಿಸಿ ತಂದಿಹೆನೆಂದು,
ಮುಡಿದಿಯಾದವಳಿಂಗೆ
ಒಡನಾಡಿಗಳು ಇಲ್ಲ,
ನುಡಿವನೊಬ್ಬನೆ ಒಡೆಯ
ನುಡಿಸುವೆಯ ನೀನೊಡತಿ
ತಿಳಿಯುದಲೆ 'ಇದ ತರಳೆ
ಕೆರಳಿರುವಿ ನೀ ಮಗುಳೆ,
ಅದುವೆ ನಿನ್ನಧರದಲಿ
ತನಿವ ಕೆಂಪನ್ನ ಕಳೆಯು ॥ ೩ ॥

ನೇಹದನಿಯನು ಬರುವ,
ಸ್ನೇಹದ್ವಾರವ ತೆರೆನ,
ಅಂಗೈಯ ಪದ್ಮದಲಿ
ಶ್ರಂಗಾರಪೀಠದಲಿ,
ಮೇಲೆ ನೋಡದೆ ಕುಳಿರು
ಮೂಲೆಮಾಡುತ ಕುಳಿರು
ಮುಚ್ಚಿ ಮುಕುಲಿತವಾದ
ನಾಚುತಿಹ ನೈದಿಲೆಯೆ !
ಮೆಚ್ಚಿಸುವ ಸಂಪಗೆಯೆ!
ಹೆಚ್ಚಳವದೇಕಿದೆಯೆ ?
ಅದುವೆ ನಿನ್ನಧರದಲಿ
ತನಿವ ಕೆಂಪನ್ನ ಕಳೆಯು ॥
ಅದುವೆ ನಿನ್ನಧರದಲಿ
ತನಿವ ಕೆಂಪನ್ನ ಕಳೆಯು ॥ ೪ ॥

—ರಂಗ

# ದಿಗ್ವಿಜಯಕ್ಕಾಗಿ ನಾಡಿಗರ ನೆರವಿ.

( ಚಿಕ್ಕಮಕ್ಕಳ ಗುಂಪಿನಿಂದ )

ಬನ್ನಿರಿ ಬನ್ನಿರಿ ಕನ್ನಡಿಗರೆ ಬಿಸು ಬನ್ನಿಯ ವೃಕ್ಷದ ಬಳಿಸಾರಿ
ಗಡ ! ಅಗ್ನಿಗರ್ಭಶಮಿಯನು ಸೇರಿ
ಕನ್ನಡನಾಡಿನ ಚೆನ್ನೆಯನೊಲಿಸುತೆ ಹಗೆಗಳನುಡುಗಲು ಗಡಮೀರಿ ॥ ಪಲ್ಲ ॥

ಹಿಂದಣ ಹಿರಿಯರ ಬೆಂಬಲದಿಂದಲಿ ನಮ್ಮಯ ಗುರಿ ಕೊನೆಗಾಣಿಸಲು
ಕರು । ನಾಡಿನ ಕೈಯನು ತೋರಿಸಲು
ಸಿರಿ । ನಾಡಿನ ಕೀರ್ತಿಯ ಬೆಳಗಿಸಲು
ಬೀರವನುಕ್ಕಿಸಿ ಚೆನ್ನಿಗರೆಲ್ಲರು ಬನ್ನಿರಿ ಹರಿಬವ ಸಾಗಿಸಲು ॥ ೧ ॥

ಹುಡುಗನು ಹುಡುಗೆಯು ಮುದುಕನು ಮುದಿಕೆಯು ದುರ್ಬಲರಿವರೆಂದೆನಬೇಡಿ
ಗಡ । ಬೆದರಿಕೆಯುಳ್ಳವ ಹೊರದೂಡಿ
ಕಡು । ಗಲಿತನಕೆದೆಯನು ಮನೆಮಾಡಿ
ಹರೆಯದ ಹೆಂಗಸು ಗಂಡಸು ಏಳಿರಿ ನಾಡಿಗೆ ಕುಂದನು ತರಬೇಡಿ ॥ ೨ ॥

ಕನ್ನಡತಾಯಿಯ ಅನ್ನವನುಂಡಿರಿ ಚೆನ್ನೆಯ ನೆತ್ತರ ನಿಮ್ಮಲ್ಲಿ
ಹೊರ । ಹೊಮ್ಮುತ್ತಿದೆ ಸೆರೆಸೆರೆಗಳಲಿ
ಚಿ-। ಮ್ಮುತ್ತಿದೆ ಸ್ಫೂರ್ತಿಯ ರೂಪಿನಲಿ
ಉಕ್ಕಲಿ ಉತ್ಸವ ಸೊಕ್ಕಿದ ವೈರಿಯು ಕುಕ್ಕುವೆ ಕುಕ್ಕುವೆನೆನ್ನುತಲಿ ॥ ೩ ॥

ಕೊಳ್ಳಿರಿ ಕೊಂಬನು ಊದಿರಿ ಕಾಳೆಯ ನಾಡಿಗರೊಂದೆಡೆ ಬರುವಂತೆ
ಪರ । ನಾಡಿಗರೆದೆ ಅರೆ ಬಿರಿವಂತೆ
ಭಯ । ಬೀಜವದರಲಿ ನಡುವಂತೆ
ತಾಳತಮ್ಮಟೆಯ ಶಂಖಜಾಂಗಟೆಯು ಬಾರಿಸಿ ಹುರುಪನು ಕೊಡದಂತೆ ॥ ೪ ॥

ಸಮರವ ಸಾರಿಪ ಗೆಲುವನು ಸೂಚಿಪ ಧಳಂಧಳಂ ಭೇರೀರವವು
ಢಂ । ಢಾಂ ಢಾಂ ಡೊಳ್ಳಿನರವವು
ಹುಯ್ । ಹುಯ್ ಹುಯ್ ಕೇಕೆಯ ಸರವು
ಸಿಡಿಲಿನ ಗಡಣವು ಬಿಡದೆರಗುವವೊಲು ಕೇಳಲಿ ಮದ್ದಿನ ಬಿಡಿಸರವು ॥ ೫ ॥

ಸುರಗಿ ಕಠಾರಿಯ ಬಡಿಗೋಲ್ಬರ್ಚಿಯ ಕೊಳ್ಳಿರಿ ಗದೆಯನು ಮುದದಿಂದ
ಹಿರಿ ! ಹಿರಿಯಿರಿ ಕತ್ತಿಯನೊರೆಯಿಂದ
ನೆರೆ । ಮಸೆಯಿರಿ ಕೊಡಲಿಯ ಭರದಿಂದ
ಕುಡುಗೋಲ್ ಮೊನೆಕೋಲ್ ಬಿಲ್ಲುಬಾಣಗಳ ಚೂರಿಯ ಹಾರಿಯ ತ್ವರೆಯಿಂದ ॥ ೬ ॥

ಮುಡಿಗೆಯ ಮುಡಿಯಿರಿ ಹಲಿಗೆಯ ಹಿಡಿಯಿರಿ ಮೈಜೋಡದು ಮೈಮೇಲಿರಲಿ
ಹಿರಿ । ಹಗೆಗಳ ಹೊಡೆತವ ಹಾರಿಸಲಿ
ಹೊಸ । ಹುರುಪನು ಹುಟ್ಟಿಸೆ ಸಮರದಲಿ
ಕಡುಗವ ನಡುಗಿಸಿ ಗುಡುಗನು ಹಾಕಿರಿ ಸಿಡಿಲುಮಿಂಚುಗಳನೇಳಿಸಲಿ ॥ ೭ ॥

ಕೆಚ್ಚೆದೆಯಿಂದಲಿ ಬಿಚ್ಚುಗತ್ತಿಯನು ನೆಚ್ಚಿದೇವಿಯನು ತಿರುವುತಲಿ
" ಜಯ । ಶಕ್ತಿ " ಎಂದು ಬೊಬ್ಬಿರಿಯುತಲಿ
ಹಿರಿ । ತವಕದಿಂದಮುಂಬರಿಯುತಲಿ
"ಕಡಿಯುವೆ ಕೊಚ್ಚುವೆ ಮುಚ್ಚುವೆ"ನೆನ್ನುವ ರೊಚ್ಚಿನ ದನಿ ಕೇಳುತ್ತಿರಲಿ ॥ ೮ ॥

"ಹೋ ಹೋ" ಎನ್ನುವ ಹೂಂಕಾರವು ತಾ ತ್ರಿಜಗವನ್ನು ಕಡುನಡುಗಿಸಲಿ
ನಮ । ಹಗೆಗಿದು ಸಾವನು ಸೂಚಿಸಲಿ
'ಬಿಡಿ ! ಕಾಯಿರಿ ಶರಣೆ'ಂದೆನ್ನಿಸಲಿ
ಸಾಗರದೋಲ್ ಭೋರ್ಗರೆದು ವೈರಿಗಿದು ಮಾರಿಯ ದಾಡೆಂದಾಗಿರಲಿ ॥ ೯ ॥

ಗುಡಿಯನು ಹಿಡಿಯಿರಿ ಗಗನದಿ ಹಾರಿಸಿ ಕನ್ನಡನಾಡಿನ ನಾಡಗುಡಿ
ಪುಲಿ । ಕೇಶಿಗೆ ಗೆಲುವನು ಕೊಟ್ಟ ಗುಡಿ
ಸಿರಿ । ವಿಕ್ರಮ ಮೆರೆಸಿದ ಗಂಡುಗುಡಿ
ಹಗೆಗಳ ರುಂಡವ ಖಂಡಿಸಿ ಮೆರೆಯುವ ಸೋಲರಿಯದ ಕರಿನಾಡ ಗುಡಿ ॥ ೧೦ ॥

ನುಗ್ಗಿರಿ ಮುಂದಕೆ ಗುಡಿಯನು ಕೊಳ್ಳುತೆ ನಾಡದೇವಿಯಿಂದೊಡಗೂಡಿ
"ಜಯ । ಭುವನೇಶ್ವರಿ" ಎನ್ನುತೆ ಪಾಡಿ
ನಿಜ । ಕರ್ತವ್ಯದಿ ವಿಶ್ವಾಸವಿಡಿ
ಸೋಲನು ಗೆಲುವನು ಯೋಚಿಸಿ ಬೆದರದೆ ದೇವಿಯ ಹೊಗಳುತ ಬಗೆಗೂಡಿ ॥ ೧೧ ॥

ಗೆದ್ದರೆ ಗೆಲ್ಲಲಿ ಬಿದ್ದರೆ ಬೀಳಲಿ ರಣದಲಿ ಕಣದಲಿ ಇಳಿದಿಹೆವು
ಕೊಳು । ಗುಳದಲಿ ಕಾದಲು ಹೊರಟಿಹೆವು
ಹಡೆ । ದವಳಿಗೆ ಇಲ್ಲವೆ ನಮ್ಮರಿವು
ಹುಚ್ಚನು ನುಡಿಯದೆ ನೆಚ್ಚಿರಿ ದೇವಿಯ ಹಗೆಗಳನೋಡಿಸಿ ತಿರಗುವೆವು ॥ ೧೨ ॥

"ಜಯ ಭುವನೇಶ್ವರಿ ಜಯ ಭುವನೇಶ್ವರಿ ಜಯ ಭುವನೇಶ್ವರಿ" ನೀವೆನ್ನಿ ।
ಗುಡುಗಿನ ದನಿಯಲಿ ಕನ್ನಡತನದಲಿ ದಿಗ್ವಿಜಯಕೆ ಹೊರಡುವ ಬನ್ನಿ ॥ ೧೩ ॥

—ರಾಮ.

---

## ದಾಸಕೂಟದ ಮಾರ್ಗ.

ದಾಸಕೂಟದ ಮೂಲತತ್ವಗಳ ಪ್ರವರ್ತಕರಾದ
ಶ್ರೀಮನ್ಮಧ್ವಾಚಾರ್ಯರು.



ವಿಜಯಾದಶಮಿಯೇ ಇವರ ಹುಟ್ಟಿದ ದಿನ.

( ಈ ಪಡಿಯಚ್ಚು ಜಯಕರ್ನಾಟಕದ ಚಾವಡಿಯದು. )

ಇಂದು ಎಲ್ಲಿ ನೋಡಿದಲ್ಲಿ ಅನೈಕ್ಯದ ಅಸಂತೋಷದ ಬೆಂಗಾಳಿಯು ಬೀಸುತ್ತಿದೆ. ಸಾಮಾಜಿಕ ರಾಜಕೀಯ ಸಾಂಸ್ಕೃತಿಕ ಕಲಹಗಳು ಅವ್ಯಾಹತವಾಗಿ ಸಾಗಿವೆ. ನಮ್ಮ

ಭೂಮಿ ಧರ್ಮಭೂಮಿಯೆಂದು ಹೆಸರುಗೊಂಡಿದೆ. ಇಂದು ನಮ್ಮ ನಾಡಿನಲ್ಲಿ ನಡೆದ ಕದನಗಳ ಬುಡಕ್ಕೆ ಬೇರೆಯೊಂದು ಕದನವಿರುವದು. ಅದು ಧರ್ಮಧರ್ಮಗಳಲ್ಲಿನ ಅಥವಾ ಮತಮತಗಳಲ್ಲಿನ ಕದನ. ಒಬ್ಬ ಮತದವರನ್ನು ಕಂಡರೆ ಮತ್ತೊಬ್ಬರಿಗೆ ಆಗದು. ಇಂತಹ ವೈಷಮ್ಯದ ಪರಿಸರದಲ್ಲಿ ನಾನು ಒಂದು ವಿಶಿಷ್ಟಮತದಲ್ಲಿನ ಒಂದು ವಿಶಿಷ್ಟ ಸಾಂಪ್ರದಾಯದ ಮಂಡನವನ್ನು ಮಾಡಲೆಳಸುವದು ಒಂದು ಸಾಹಸವೇ ಸೈ. ಯಾವ ಮತದವರನ್ನೂ ನೋಯಿಸಬಾರದು, ಎಲ್ಲರಿಗೂ (ಎಲ್ಲರೂ) ಒಪ್ಪುವಂತಹದಿರಬೇಕು ಇಂತಹ ಸರ್ವಮತೀಯರಿಗೂ ಮಾನ್ಯವಾದ ಸಾರ್ವಭೌಮಸಂದೇಶವನ್ನು ದಾಸಕೂಟವೇನಾದರೂ ಹೇಳುತ್ತಿದೆಯೆ? ಎಂಬುದನ್ನು ಈಗ ವಿವರಿಸಲಪೇಕ್ಷಿಸುವೆನು.

ದಾಸಕೂಟದ ಪ್ರಧಾನ ಸಂದೇಶವೆಂದರೆ **ದಾಸನಾಗು** ಎಂದು ಹೇಳುವುದು. ಎಂದರೆ Slave ಆಗು—ಯಾರೊಬ್ಬರ ಜೀತದಾಳಾಗು ಎಂದಲ್ಲ. ನನ್ನೆಲ್ಲ ಶಕ್ತಿಗಳನ್ನೂ ಮೆಟ್ಟಿ ಮೀರಿ ಮೆರೆವ ಪರಮಾತ್ಮಶಕ್ತಿಯ ಅಂಕಿತನಾಗೆಂದು ಅದು ಹೇಳುವದು. ಸ್ವತಃ ಸ್ವತಂತ್ರನೆನಿಸಿಕೊಳ್ಳದೆ, ಪರಾಧೀನನಾಗಿ (ಪರಕ್ಕೆ ಅಧೀನನಾಗಿ) —ಪರಮೇಶ್ವರನಿಗೆ ಅಧೀನನಾಗಿ, ಅಹಂಕರ್ತೃತ್ವಭಾವವನ್ನು ಪೂರಾ ಮರೆದು, ಸ್ವಾಮಿಯ ಯಂತ್ರವಾಗಿ ಜೀವಿಸೆಂದು ಅವರ ಸಂದೇಶ. ಇದನ್ನೇ ನಮ್ಮ ಮತದಲ್ಲಿ ಬಿಂಬ-ಪ್ರತಿಬಿಂಬಭಾವವೆಂದು ಕರೆಯುವರು. ಪರಮಾತ್ಮನೇ ಬಿಂಬ, ಜೀವಾತ್ಮನೇ ಪ್ರತಿಬಿಂಬ ಹೀಗೆ ಅರಿತು— ಇದನ್ನು ಸಾಕ್ಷಾತ್ಕರಿಸಿಕೊಂಡು— ನಮ್ಮೆಲ್ಲ ವಿವಿಧ ಚಟುವಟಿಕೆಗಳನ್ನು ಈ ಅಂತಃಪ್ರೇರಣೆಗೆ ಹೂಡಿ— ಈ ರಹಸ್ಯವನ್ನು ನಮ್ಮ ಜೀವಜೀವಾಳದಲ್ಲಿ ಹರಿಸಿ ಹಾಗೆ ವಿಶ್ವಸಂಸಾರವನ್ನು ಸಾಗಿಸಬೇಕೆಂದೇ ದಾಸಕೂಟದ ಮಾರ್ಗವು ಹೇಳುತ್ತಿದೆ.

ಇಲ್ಲಿ ಒಮ್ಮಿಗೆಲೆ ಒಂದು ತರದ ವಿಶಿಷ್ಟಶಬ್ದಪ್ರಯೋಗ ಪದ್ಧತಿಯಿಂದ ಯಾರೂ ಬೆದರಿಬೀಳುವ ಕಾರಣವಿಲ್ಲ. 'ಬಿಂಬ-ಪ್ರತಿಬಿಂಬಭಾವ' 'ದಾಸ್ಯಭಕ್ತಿ' 'ಸೇವ್ಯ-ಸೇವಕಭಾವ' ಎಂಬೀ ಪದರಚನೆಯು ಅನ್ಯಮತೀಯರಿಗೆ ದಾಸಕೂಟದ ಮೂಲಮಂತ್ರವು ಗ್ರಾಹ್ಯವಾಗುವ ಮಾರ್ಗದಲ್ಲಿ ಅಡ್ಡಿಯಾಗುವ ಕಾರಣವಿಲ್ಲ. ಯಾವ ಮತದ ಕೊನೆಯ ಗುರಿಯು ಏನೇ ಇರಲಿ— ಅದ್ವೈತವು 'ಜೀವೋ ಬ್ರಹ್ಮೈವ' ಎಂದು ಹೇಳಲಿ, ದ್ವೈತವು ಅದನ್ನು ಒಪ್ಪದಿರಲಿ— ಜೀವಾತ್ಮನು ಸ್ವಯಂ ಕರ್ತೃತ್ವಭಾವವನ್ನು ತ್ಯಜಿಸಿ, ಜಗತ್ತಿನಲ್ಲಿ ವ್ಯಂಗ್ಯವಾಗಿ ವ್ಯಕ್ತವಾಗುತ್ತಿರುವ, ಅಣುರೇಣುತೃಣಕಾಷ್ಠಗಳಲ್ಲಿ— ಚೇತನಾಚೇತನ ಸರ್ವಪದಾರ್ಥಗಳಲ್ಲಿ ಓತಪ್ರೋತವಾಗಿರುವ ಈಶವಿಭೂತಿಯ ಓಜಸ್ಸು-ತೇಜಸ್ಸುಗಳಲ್ಲಿ ಪಾಲು ತೆಗೆದುಕೊಳ್ಳಲೇಬೇಕೆಂಬುದು ಸರ್ವಮತೀಯರಿಗೂ ಗ್ರಾಹ್ಯವಾದ ಮಾನ್ಯವಾದ ಸಿದ್ಧಾಂತವಾಗಿದೆ. ಎಂದರೆ, **ದಾಸನಾಗೆಂದು** ಹೇಳುವದು Realize the Universal Spirit ಎಂದು ಹೇಳಿದಂತೆಯೇ ಇದೆ. ಪರ

ಮಾತ್ಮಶಕ್ತಿಯ ಅಂಕಿತನಾಗು- ಅಂಕಿತವನ್ನು ಧರಿಸಿ ಯೋಗ್ಯರೆದುರಿಗೆ ತೃಣವಂತೆ ಮಣಿಯುತ್ತ, ಅಪಾತ್ರರೆದುರಿಗೆ ಗಿರಿಯಂತೆ ಸೆಟೆಯುತ್ತ ಚರಿಸು ಎಂದು ಹೇಳಿದಂತೆಯೇ ಇದೆ. ಒಟ್ಟಿನಲ್ಲಿ ಏನು ? **ದಾಸನಾಗೆಂದು ಹೇಳುವದು ಉಪಾಸನೆಯನ್ನು ಕೈಕೊಳ್ಳೆಂದೇ ಪರ್ಯಾಯದಿಂದ ಹೇಳಿದಂತಿದೆ.** ಮತ್ತು **ಉಪಾಸನೆಯು ಸರ್ವ ಆಸ್ತಿಕದರ್ಶನಗಳು ಒಪ್ಪುಕೊಂಡಂತಹದು** ಆಗಿದೆ. ಅಂತಿಮಲಕ್ಷ್ಯವು ಏನೇ ಇರಲಿ; ಉಪಾಸನೆಯು ಆತ್ಮೋದ್ಧರದ ಹಾದಿಯಲ್ಲಿ ಅನಿವಾರ್ಯವೆಂದು ಎಲ್ಲರೂ ಹೇಳುವರು.

ದಾಸಕೂಟದ ಮಾರ್ಗವು ಯಾವ ಮಾರ್ಗಕ್ಕೂ ವಿರೋಧಿಯಾಗಿಲ್ಲ. ಸಕಲರಿಗೂ ಸಾಮಾನ್ಯರಿಗೂ ಸುಲಭವಾಗಿ ಸಾಧ್ಯವಾಗಬೇಕೆಂಬುದೇ ಅವರ ಧ್ಯೇಯ. ಆದುದರಿಂದ ಎಲ್ಲ ದಾಸಾರ್ಯರೂ ಒಂದು ಸಂದೇಶವನ್ನೇ ಮೊಳಗಿಸುತ್ತಿದ್ದಾರೆ. ಅದೆಂದರೆ **ದೇವರ ನಾಮಸ್ಮರಣೆ.**

**ಸ್ಮರಣೆಯೊಂದೇ ಸಾಲದೇ?**

ಎಂದು ಅವರು ಕೇಳುವರು. ಇದೇ **ಭಕ್ತಿಮಾರ್ಗವೆಂದು** ಗುರುತಿಸಲ್ಪಡುತ್ತಿದೆ. ಇಲ್ಲಿ ಇನ್ನೊಂದು ಮಾತನ್ನು ಹೇಳುವದು ಅಗತ್ಯ. ಮಧ್ವಮತದಲ್ಲಿ ವ್ಯಾಸಕೂಟ-ದಾಸಕೂಟಗಳೆಂದು ಎರಡು ಹಾದಿಗಳುಂಟು. ಇವುಗಳಲ್ಲಿ ಎಂತಹದೋ ಒಡಕು ಉಂಟೆಂದು ಕೆಲವರು ಭಾವಿಸುವರು. ಈ ಗ್ರಹಿಕೆಯಲ್ಲಿ ಹುರುಳಿಲ್ಲ. ಮಧ್ವಸಿಧ್ಧಾಂತದ ಜೀವನಪ್ರಾಯವಾದ ಭಕ್ತಿಯೆಂಬ ಜೀವರಸದಿಂದ ಪೋಷಿಸಲ್ಪಡುವ ಒಂದು ವೃಕ್ಷಕ್ಕೆ ಎರಡು ಕವಲುಗಳಂತಿರುವ ವ್ಯಾಸಕೂಟ-ದಾಸಕೂಟಗಳು ಪರಸ್ಪರಪ್ರತಿಕೂಲವಾಗಿ ಉಜ್ಜುಗಿಸುತ್ತಿವೆಯೆಂದು ಹೇಳುವುದು ಅಸಮಂಜಸವೇ ಸೈ. ದಾಸರ **ಮಾರ್ಗವು ವ್ಯಾಸಪ್ರಣೀತ ಸೂತ್ರಗಳನ್ನು ಆಧಾರವಾಗಿಟ್ಟುಕೊಂಡುದೇ ಆಗಿದೆ.**

**ಧ್ಯಾನಂ ಚ ಸರ್ವದಾ ಕುರ್ಯಾತ್ ಧ್ಯಾನೋಪಾಸನಮಾಸನೇ॥**

ಎಂಬುದನ್ನು ವ್ಯಾಸಸೂತ್ರಗಳೂ ಒಪ್ಪಿಕೊಳ್ಳುವವು.

**ಹರೇರ್ನಾಮೈವ ನಾಮೈವ ನಾಮೈವ ಮಮ ಜೀವನಂ ॥**

ಎಂದು ನಾರದೀಯಪುರಾಣದಲ್ಲಿ ಶ್ರೀನಾರದರು ಸುಸ್ವರದಿಂದ ಹಾಡಿರುವರು. ಅಲ್ಲದೆ ವ್ಯಾಸಕೂಟದಲ್ಲಿಯೂ ದಾಸಕೂಟದ ಸಾಂಪ್ರದಾಯಕ್ಕೆ ಆಧಾರಗಳಿವೆ. ಆದುದರಿಂದ ಸರ್ವಕಾಲಗಳಲ್ಲಿ ಸರ್ವರಿಗೂ ಸಾಧ್ಯವಾದ ಸಾಧನವು **ನಾಮಸ್ಮರಣೆಯೇ**- ವಿಶೇಷತಃ ಈ ಸಂಕರಪ್ರಚುರವಾದ ಕಲಿಯುಗದಲ್ಲಿ ಅಸದೃಶವಾದ ಸಾಧನವಿದೊಂದೇ ಎಂದು ಎಲ್ಲ ದಾಸಾರ್ಯರು ಸ್ವಾನುಭವದಿಂದ ಹೇಳುವರು. ಶ್ರೀಗೋಸ್ವಾಮಿ ತುಲಸೀ

ದಾಸರವರು ' ಹತ್ತಿಯೊಳಗಿಂದ ತಂತುಗಳನ್ನು ತೆಗೆಯುವಂತೆ ಪರಮಾತ್ಮನ ದಿವ್ಯ ನಾಮವನ್ನು ಜಪಿಸುತ್ತ ಅದರೊಳಗಿಂದ ಆತನ ಗುಣಗಳನ್ನು ಹೊರಕ್ಕೆ ಎಳೆಯುತ್ತ ತನ್ನಲ್ಲಿ ಪ್ರವಿಷ್ಟವಾಗಿಸುವದೆಂದು ಮಧುರವಾಗಿ ಹೇಳುವರು. **ನಾಮಸ್ಮರಣೆ ಯೆಂದರೆ ಪರಮಾತ್ಮನ ಗುಣಗಳ ಅಭಿವ್ಯಕ್ತಿಯನ್ನು ತನ್ನಲ್ಲಿ ಮಾಡಿ ಕೊಳ್ಳುವದು** –God–consciousness **ಉಂಟುಮಾಡಿಕೊಳ್ಳುವದು** ಎಂದೇ ಅದರ ಅಭಿಪ್ರೇತಾರ್ಥ. ಹರಿನಾಮವನ್ನು ನಿತ್ಯವಾಗಿ ಸ್ಮರಿಸುವವರು 'ಮದ್ದಾನೆಯಂತೆ ಚರಿಸುವರೆಂ'ದು ದಾಸರು ಹೇಳುವರು.

> ಅನನ್ಯಾಶ್ಚಿಂತಯಂತೋ ಮಾಂ ಯೇ ಭಕ್ತಾಃ ಪರ್ಯುಪಾಸತೇ ।
> ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥

ಎಂದು ಭಗವಂತನಾದರೂ ಗೀತೆಯಲ್ಲಿ ಹಾಡಿದ್ದಾನೆ. ಶ್ರೀರಾಮದಾಸರ ಉದಾಹರಣೆಯೂ ಇದನ್ನೇ ಸಾರುತ್ತಿದೆ. ಶ್ರೀರಾಮಜಪದಿಂದ ಎಂತಹ ಪದವಿಯನ್ನು ಮುಟ್ಟಿ ಎಂತಹ ಕಾರ್ಯವನ್ನು ಮಾಡಿದರೆಂಬುದು ಸರ್ವಶ್ರುತವಿದೆ. ಅಲ್ಲದೆ ತಾವು ಮಾಡಿದ ಜಪದ ಫಲವನ್ನು ಆ ಪರಿಯಾಗಿ ಮಾಡುವ ಸರ್ವಸಾಧಕರಿಗೂ ಲಭಿಸುವದೆಂದು ಬರೆದುಕೊಟ್ಟಿರುವರು. ಸಮರ್ಥರ ಸೂಳುನುಡಿ ಸುಳ್ಳಾಗದು. ಅವರು ಹೇಳಿದಂತೆ ಹದಿಮೂರುಕೋಟಿ ಜಪವನ್ನು ಮಾಡಿ ನೋಡಬೇಕು.– ಅವರು ಧಾರೆಯೆರೆದು ಕೊಡಲು ಸಿದ್ಧವಾದ ತಪಸ್ಸಿನ ಫಲವು ಪ್ರಾಪ್ತವಾಗುವದೋ ಇಲ್ಲವೋ ನೋಡಬೇಕು. ಸುಮ್ಮನೆ ಹರಟುವ ಭಟ್ಟಂಗಿಗಳ–ವಾಚ್ಪಟರ ಪ್ರಸ್ಥವೇ ಹೆಚ್ಚಾಗಿದೆ. ಭಗವಂತನ ವಾಗ್ದಾನವನ್ನು– Charter ವನ್ನು ನೆಚ್ಚಿ ನಡೆದು ನೋಡಬೇಕು. ಎಂದರೆ ತಿಳಿಯುವದು.

ಮಾತುಬುರುಕರಾದ ರಣಹೇಡಿಗಳ ಈ ಯುಗದಲ್ಲಿ ತಾವೇ ಪರಬ್ರಹ್ಮಪದಾರೂಢರೆಂದು ಬಗೆದು ತಮ್ಮದೊಂದು ರಥವನ್ನು ಹೂಡಿ ತಮ್ಮದೊಂದು ಕುದುರೆಯನ್ನು ಮುಂದೆ ದೂಡುವ ಮಂದಿಗಳು ಹೆಚ್ಚು. ತಮ್ಮ ಪಕ್ಷವೇ ಪಕ್ಷ–ತಮ್ಮ ಪ್ರಸ್ಥವೇ ಪ್ರಸ್ಥ– ತಾವೆಲ್ಲಿಯಾದರೂ ತಪ್ಪುತ್ತಿರಬಹುದು ಎಂಬ ಒಳಗೆ ಶೋಧಿಸಿ ತಮಗಿಂತ ಅಧಿಕತರವಾದ ಶಕ್ತಿಯೊಂದು ಸೂತ್ರಗಳನ್ನು ಹಿಡಿದಿರಬಹುದೆಂಬ ವಿಚಾರಕ್ಕೆ ಆಸ್ಪದವೇ ಸಿಕ್ಕುತ್ತಿಲ್ಲ. ಇಂದಿನ ರಾಜಕೀಯ-ಸಾಮಾಜಿಕ-ನೀತಿಯ ಅಂತಃ ಕಲಹಗಳಲ್ಲಿ ತರುಣರು ದಾಸರಾಗುವದನ್ನು ಕಲಿಯಬೇಕಾಗಿದೆ. **ದಾಸಕೂಟದ ಮಾರ್ಗವು ಆತ್ಮಾರ್ಪಣದ ಮಾರ್ಗವು.** It is the way of consecration. ಶ್ರೀಅರವಿಂದರು ಭಾರತದ ತರುಣರಿಗೆ ದೇವರ ಸಲುವಾಗಿ ಮಾತೃಭೂಮಿಯ ದಾಸರಾಗಿರೋ ಎಂದು ಹೇಳಿದುದೂ ಇದನ್ನೇ ಸಮರ್ಥಿಸುತ್ತಿದೆ. ಆ ಮಾರ್ಗ ಈ ಮಾರ್ಗ ಬೇಡ– ಆ ಮುಖಂಡ ಈ ಮುಖಂಡ ಬೇಡ–ಹೃದಯದ ಕುರು

ಕ್ಷೇತ್ರದಲ್ಲಿ ನಾಯಕನಾಗಿ ನಿಂತ ಸ್ವಾಮಿಯು ಆವೇಶವನ್ನು ಆಲಿಸಿರೋ, ಮತ್ತಾ ಧ್ವನಿಯ ಅನುರೋಧನವನ್ನು ಹಿಡಿದು ನಾಡಿಗಾಗಿ ಆತ್ಮಾರ್ಪಣವನ್ನು ಮಾಡಿರೋ ಎಂದು ಹೇಳುವದೇ ದಾಸಕೂಟದ ಮಾರ್ಗವು.

ಅಂತೂ ಸರ್ವರಿಗೂ ಸುಲಭವಾದ ಸಾಮಾನ್ಯರಿಗೂ ಸಾಧ್ಯವಾದ ಈಶನಾಮ ಸ್ಮರಣವು ದಾಸಕೂಟದ ಮೊದಲನೆಯ ವೈಶಿಷ್ಟ್ಯವೆಂದು ಹೇಳಬಹುದು. ಇನ್ನು ಎರಡನೆಯದು **ಗುರುವನ್ನು ಪ್ರಾಪ್ತಮಾಡಿಕೊಳ್ಳುವದು**– ಗುರುವನ್ನು ಪ್ರಾಪ್ತಮಾಡಿಕೊಂಡು **ಗುರುವಿನಲ್ಲಿ ಸ್ವಾತಂತ್ರ್ಯಾರ್ಪಣವನ್ನು ಮಾಡುವದು.**

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ॥**

ಎಂದು ಶ್ರೀಕೃಷ್ಣನು ಹೇಳಿದುದ್ದೂ ಗುರುವಿನ ಪ್ರಾಶಸ್ತ್ಯವನ್ನೇ ಹೇಳುತ್ತಿದೆ.

**ಗುರುದ್ವಾರಾ ಸಾಧ್ಯಾ ಸಿದ್ಧವಾಗುವದು ... ಚ್ಯುತವಾಗದ ವಿದ್ಯಾ ಪ್ರಾಪ್ತವಾಗುವದು.**

ಎಂದು ದಾಸರು ಹೇಳುವರು. ಆದರೆ ಅಂಥ ಯೋಗ್ಯತೆಯುಳ್ಳ ಶ್ರೀಗುರುವು ದೊರೆಯುವದು ಸುಲಭವಲ್ಲ. ನಮ್ಮ ಶಾಲೆಕಾಲೇಜುಗಳಲ್ಲಿ ಲಭಿಸುವ ಗುರುಬ್ರುವನು ಆತನಲ್ಲ. ಇಂದು ಅಗ್ಗವಾಗಿ ದೊರೆಯುವ ಗುರುಗಳೆಲ್ಲ 'ಶಿಷ್ಯವಿತ್ತಾಪಹಾರಕ'ರಾದರೆ ಕೃತತ್ರೇತಾದಿಯುಗಗಳಲ್ಲಿ '**ಶಿಷ್ಯಹೃತ್ತಾಪಹಾರಕ**'ರಾದ ಗುರುಗಳಿರುತ್ತಿದ್ದರೆಂದು ಒಂದೆಡೆಗೆ ಅಂದಿದೆ. ಮತ್ತಂಥ ಗುರುವನ್ನು

**'ಸಾಕ್ಷಾತ್ ಪರಂ ಮನ್ಯೇ'**

ಎಂದು ಹೇಳಿದೆ. ಇಂಥ ಲಕ್ಷಣನನ್ನು ಮನಸ್ಸಿನಲ್ಲಿ ಮಾಡಿಕೊಂಡು ನಾವು ಗುರುವನ್ನು ಹುಡುಕುತ್ತಿರಬೇಕು. 'ನಾನು ನನ್ನ ಗುರುವನ್ನು ಹುಡುಕುತ್ತಲೇ ಇರುವೆನು' ಎಂದು ಶ್ರೀ ಮೋಹನದಾಸ ಗಾಂಧಿಯವರು ಅನ್ನುವರು. ಗುರುವಿಗೆ ಸಾತಂತ್ರ್ಯಸಮರ್ಪಣವನ್ನು ಮಾಡುವ ಮೊದಲು ಆತನು ತನಗೆ ತಕ್ಕವನೇ ಎಂದು ಪರೀಕ್ಷಿಸುವ ಅಧಿಕಾರವನ್ನು ಧರ್ಮಶಾಸ್ತ್ರವು ಸಕಲರಿಗೂ ಕೊಡುತ್ತಿದೆ. ಈತನು ತನಗೆ ತಕ್ಕ ಗುರು-ತನ್ನವನು ಎಂಬುದು ಆಯಾ ಜೀವಕ್ಕೆ ಕ್ಲುಪ್ತಕಾಲಕ್ಕೆ ಪ್ರತೀತವಾಗಿಯೇ ಆಗುವದು. ಅದೊಂದು ಸ್ಪರ್ಶಮಣಿಲೋಹಸಮಾಗಮದಂತೆ. ಸದಾ ಶೋಧಿಸುವ ಜೀವಕ್ಕೆ ತನ್ನ ಗುರುವಾರೆಂಬುದು ಒಂದು ದಿನ ಹೊಳೆಯಲೇ ಬೇಕು. ಆದುದರಿಂದ ಆತುರತೆಯಿಂದ ಕಾತರನಾಗಿ ಎಂಥವನನ್ನಾದರೂ ಗಂಟು ಹಾಕಿಕೊಳ್ಳುವ ತ್ವರೆಯನ್ನು ಮಾಡಬಾರದು. ಆದರೆ ಧೀರನಾಗಿ, ಅವಿಶ್ರಾಂತನಾಗಿ ನಿಸ್ಪೃಹತೆಯಿಂದ ಶ್ರೀಗುರುನಾಥನ ಶೋಧನವನ್ನು ಮಾಡುವದನ್ನೂ ಬಿಡಬಾರದು.

Eternal vigilance is the price of liberty.

ಅಂಥ ಗುರುಪೂರ್ತಿಯು ಪ್ರಾಪ್ತವಾದ ಮೇಲೆ ಅಲ್ಲಿ ಆನೇಲೆ ಸಂಪೂರ್ಣಸ್ವಾತಂತ್ರ್ಯವನ್ನು ಸಮರ್ಪಿಸಲೇ ಬೇಕು. ಅಲ್ಲಿ ಎಳ್ಳಷ್ಟೂ ಹಿಂದಕ್ಕೆ ಇಟ್ಟುಕೊಳ್ಳ ತಕ್ಕುದಲ್ಲ.

ಗುರುಪ್ರಾಪ್ತಿಯಾಗುವದು ಸುಲಭವಲ್ಲವಾದುದರಿಂದ ದಾಸಕೂಟವು ಮೂರನೆಯ ಸಾಧನವನ್ನೊಂದು ಹೇಳುವದು. ಅದೆಂದರೆ ಪಂಚಭೂತಗಳನ್ನು ಗುರುವನ್ನಾಗಿ ಮಾಡಿಕೊಳ್ಳುವದು. ಏನು ಮಾಡಲಿ, ಏನು ಬಿಡಲಿ, ಎತ್ತ ಹುಡುಕಲಿ, ಎತ್ತ ಸಾಗಲಿ, ನನ್ನ ತೊಡಕು ಹೇಗೆ ತಿಳಿದೀತು, ನನ್ನ ಹಾದಿ ಹೇಗೆ ಹೊಳೆದೀತು ಎಂದು ಚಡಪಡಿಸುತ್ತಿರುವ ಜೀವವು 'ಗುರುದ್ವಾರಾ ಸಾಧ್ಯಾ ಸಿದ್ಧವಾಗುವ' ವರೆಗೂ ಸ್ವಪ್ರಯತ್ನದಿಂದ, ಸಾಹಸದಿಂದ, ಸ್ವಾವಲಂಬನಪೂರ್ವಕವಾಗಿ, ಸ್ವಾರ್ಥತ್ಯಾಗಪೂರ್ವಕವಾಗಿ, ಬಾಳುವೆಯ ನೊಗವನ್ನು ಹೊತ್ತುಕೊಂಡು ಹೋಗಬೇಕಾದುದು ಅನಿವಾರ್ಯವಾಗಿದೆ. ಬಂದ ತೊಡಕಿನೊಳಗಿಂದ ಹಾದೀತೆಗೆದು ಸಾಗುವದು—ಶ್ರದ್ಧೆಯನ್ನು ಬಿಡದೆ ಆತ್ಮಬಲದ ಮೇಲೆ ಜಾಪುಜಿಗಿತದಿಂದ ನಡೆಯಬೇಕೆಂದು ದಾಸರು ಹೇಳುವರು.

> ಧರಣಿಯಂತೆ ಸಹಿಸೋ ।
> ವಾಯುವಿನಂತೆ ಸಂಚರಿಸೋ ।
> ಉದಕದಂತೆ ಹರಿಯೋ ।

ಎಂದು ಅವರು ಧಾರಾಳವಾಗಿ ಹೇಳುವರು.

ಅಂತೂ, ಹರಿನಾಮಸಂಕೀರ್ತನವೆಂಬ ಬಹುಸುಲಭವಾದ ಸಾಧನವನ್ನು ಆಶ್ರಯಿಸಿ, ಗುರುಪ್ರಾಪ್ತಿಯ ಲಕ್ಷ್ಯವನ್ನು ಇಟ್ಟುಕೊಂಡು, ಅನನ್ಯಶರಣಭಾವದಿಂದ ಪರಮೇಶ್ವರನಿಗೆ ಅಂಕಿತನಾಗಿ, ಆ ಪ್ರತೀತಿಯಾಗುವವರೆಗೂ ಆತನನ್ನುಳಿದು ಉಳಿದ ಕಡೆಗೆ ಅಶರಣಭಾವದಿಂದ ಸ್ವಪ್ರಯತ್ನದಿಂದ ಪುರುಷಾರ್ಥವನ್ನು ಸಾಧಿಸುತ್ತ, ಸಮಾಜಸೇವೆ ದೇಶಸೇವೆಗಳನ್ನು ಮೋಕ್ಷಗಾಮಿಗಳಾಗುವಂತೆ ಮಾಡಿಕೊಳ್ಳಬೇಕೆಂಬುದೇ ದಾಸಕೂಟದ ಸಂದೇಶವಾಗಿದೆ.

# ಮಾನವಮಿಯ ಪ್ರದರ್ಶನವು.

ಮಹಾನವಮಿಯ ದಿನ ಮಧ್ಯಾಹ್ನ ೩ ಗಂಟೆಗೆ ಶಾಂತೇಶವಾಚನಾಲಯದಲ್ಲಿ ಪ್ರದರ್ಶನವು ತೆರೆಯಲ್ಪಟ್ಟಿತು. ಅದರಲ್ಲಿ ಇಷ್ಟು ಬಗೆಯ ಒಡವೆಗಳಿದ್ದವು. (೧) ಶ್ರೀಗಂಧದಿಂದ ಮಾಡಿದ ದರ್ಶನೀಯ ವಸ್ತುಗಳು. (೨) ಗೋಕಾಕದ ಬಣ್ಣದ ಒಡವೆಗಳು. (೩) ಹಳೆಯ ಹೊತ್ತಿಗೆಗಳು. (೪) ಕೈಬರಹದ ಹೊತ್ತಿಗೆಗಳು. (೫) ಹಳೆಯ ನಾಣ್ಯಗಳು. (೬) ಬೇರೆ ಬೇರೆ ದೇಶದ ನಾಣ್ಯಗಳು. (೭) ಪ್ರಾಚೀನ ಚಿತ್ರಗಳು. (೮) ಆಧುನಿಕರಾದ ಕನ್ನಡಿಗರ ಚಿತ್ರಗಳು. (೯) ಕೀರ್ತಿಮುಖ.

ಶ್ರೀಗಂಧದ ಒಡವೆಗಳಲ್ಲಿ ಕುಸುರುಕುಸುರಿನ ಮಂಟಪವೊಂದು ಒಳಗೆ ಶ್ರೀ ಮಧ್ವಾಚಾರ್ಯರ ಮೂರ್ತಿಯಿದ್ದುದನ್ನು ಶ್ರೀ. ಕಾಮಲಾಪೂರ ಅವರು ಪ್ರದರ್ಶನಕ್ಕಾಗಿ ಕೊಟ್ಟಿದ್ದರು. ಶ್ರೀ ಕಬ್ಬೂರ ಅವರು ಶ್ರೀಗಂಧದ ಚಿಕ್ಕಮಂಟಪದಲ್ಲಿ ಕೂಡಿಸಿದ ಮನೋಹರವಾದ ಶ್ರೀಕೃಷ್ಣಮೂರ್ತಿಯನ್ನು (ಹಸ್ತಿದಂತದಲ್ಲಿ ಮಾಡಿದ್ದನ್ನು) ಕೊಟ್ಟಿದ್ದರು. ಕೀರ್ತಿಮುಖವನ್ನೂ ಒಂದು ಹಳೆಯ ಹೊತ್ತಿಗೆಯನ್ನೂ ಪ್ರಾಚೀನ ಕಟ್ಟಡಗಳ ಚಿತ್ರಗಳನ್ನೂ ಇತಿಹಾಸಮಂಡಲದವರು ಕೊಟ್ಟಿದ್ದರು. ಉಳಿದೆಲ್ಲ ಒಡವೆಗಳನ್ನು ಗೆಳೆಯರ ಗುಂಪಿನವರು ಪ್ರದರ್ಶನಕ್ಕಾಗಿ ಇಟ್ಟಿದ್ದರು.

ಮೇಲಿನ ಒಡವೆಗಳಲ್ಲಿ ನೋಡುವಂತಹದೇನಿತ್ತೆಂಬುದನ್ನು ಸಾರಾಂಶವಾಗಿ ಇಲ್ಲಿ ಬರದಿದೆ.

ಶ್ರೀಮಧ್ವಾಚಾರ್ಯರ ಮಂಟಪದಲ್ಲಿ ಕೈಗಾರಿಕೆಯ ಕೆಲಸವು ಬೆರಗುಗೊಳಿಸುವಂತಹದಿತ್ತು. ಶ್ರೀಕೃಷ್ಣಮೂರ್ತಿಯು ಪ್ರೇಕ್ಷಣೀಯವಾಗಿತ್ತು. ತಾಡವಾಲೆಯ ಹೊತ್ತಿಗೆಗಳು ಅನೇಕಾನೇಕವಾಗಿದ್ದು ವಿಶೇಷವಾಗಿ ವೈದ್ಯಕಜ್ಯೋತಿಷಗಳ ವಿಷಯವಾಗಿದ್ದುವು. ಕೈಬರಹದ ಹೊತ್ತಿಗೆಗಳಲ್ಲಿ ಗೆಳೆಯರ ಗುಂಪಿನವರ 'ಗೆಳೆಯ' ಎಂಬ ಎರಡು ಹೊತ್ತಿಗೆಗಳು (ಸಚಿತ್ರವಾದುವುಗಳು), ಚಿಕ್ಕಮಕ್ಕಳ ಗುಂಪಿನವರ 'ಕರ್ನಾಟಕದೇವಿ'ಯ ಎರಡು ಹೊತ್ತಿಗೆಗಳು, ಕರ್ನಾಟಕ ಕಾಲೇಜಿನ ವಿದ್ಯಾರ್ಥಿಗಳ 'ಸಂಘಸಾಹಿತ್ಯ'ವೆಂಬುದು—ಇಷ್ಟು ಇದ್ದುವು, ಇಷ್ಟಾದ ಮೇಲೆ ಪ್ರದರ್ಶನದ ಜೀವಾಳವಾಗಿರುವ ಚಿತ್ರಮಾಲಿಕೆಯನ್ನು ವಿವರವಾಗಿ ಬಣ್ಣಿಸುವೆವು.

ಆಧುನಿಕರಾದ ಕನ್ನಡಿಗರ ಚಿತ್ರಗಳಲ್ಲಿ ಮೈಸೂರಿನ ವಿಖ್ಯಾತ ಚಿತ್ರಕಾರರಾದ ಶ್ರೀ. ಕೇ. ವೆಂಕಟಪ್ಪನವರ ೧. ಬುದ್ಧನ ರಾಜ್ಯಪರಿತ್ಯಾಗ, ೨. ಅರ್ಧನಾರೀಶ್ವರ ಮೂರ್ತಿ, ೩. ಮೃಗತೃಷ್ಣಾ, ೪. ವೀಣೆ ಶೇಷಣ್ಣನವರ ಪ್ರತಿಮೆಯ ಚಿತ್ರಗಳು, ಇಷ್ಟಿದ್ದವು. ಅವರ ಸೂಕ್ಷ್ಮಕೌಶಲದ ಒಂದು ಶತಾಂಶವೂ ಛಾಯಾಚಿತ್ರಗಳಲ್ಲಿ ಇರದ್ದರೂ, ಅವು ಅಷ್ಟು ಸುಂದರವಾಗಿದ್ದವು. ಶ್ರೀ. ಕುಂಬಾರ ಅವರು (ಕೊಲ್ಲಾಪುರದ

ಮಹಾರಾಜರಿಂದ ರಂಗವರ್ಮಾ ಎಂಬ ಬಿರುದನ್ನು ಪಡೆದುಕೊಂಡವರು )—ವಿಜಾಪೂರದ ಅತ್ತಿಕಡೆಯ ಕೊಟ್ಯಾಳ ಎಂಬ ಊರಿನವರು ಬರೆದ ಚಿತ್ರಗಳು; ಅವುಗಳಲ್ಲಿ ೧. ಅಲ್ಲಮಮಾಯಾ ೨. ತ್ರಿಪುರಸಂಹಾರ ೩. ಶಂಕರನ ಕಾಲಕೂಟವಿಷಪಾನ—ಇವುಗಳು ಮನೋಜ್ಞವಾಗಿದ್ದುವು. ಆಮೇಲೆ ಗೆಳೆಯರ ಗುಂಪಿನವರಾದ ಹಲಸಂಗಿಯ ಕೇ. ರೇವಣಸಿದ್ಧಪ್ಪನವರ (ವಯಸ್ಸು ೧೮ ಮಾತ್ರ) ೧. ರಾಧಾಕೃಷ್ಣ, ೨. ಅಷ್ಟಭುಜಾ ದುರ್ಗಾ ೩. ಒಬ್ಬ ಸ್ತ್ರೀ—ಈ ಚಿತ್ರಗಳು ( ಅಜಂತೆಯ ಪದ್ಧತಿಯಲ್ಲಿ ತೆಗೆದವು ) ನೋಡುವವರ ಕಣ್ಣುಗಳನ್ನು ಸೆಳೆಯುತ್ತಿದ್ದವು. ಮತ್ತೆ ಗೆಳೆಯರ ಗುಂಪಿನವರಾದ ರಾಮಚಂದ್ರ ಬೆಳಗಾಂವಕರ ಅವರು ಬರೆದ 'ಕನ್ನಡಿತಿ' ( ಕರ್ನಾಟಕ ದೇವಿ ) ಎಂಬ ದೊಡ್ಡ ಚಿತ್ರವು ( ಕರ್ನಾಟಕದ ನಕ್ಷೆಯ ರೇಷೆಗಳಲ್ಲಿ ಹೊಂದುವಂತೆ ಬರೆದುದು ) ಚಿತ್ತಾಕರ್ಷಕವಾಗಿತ್ತು. ಅಲ್ಲದೆ ಗೆಳೆಯರ ಗುಂಪಿನವರಾದ ಕೊಪ್ಪಳದ ಶಿವರಾಮಶಾಸ್ತ್ರಿಗಳ (ವಯಸ್ಸು ೧೮ ಮಾತ್ರ) ಕಾಗದದಲ್ಲಿ ಕತ್ತರಿಸುವ ಕೈಗಾರಿಕೆಯು ಪ್ರೇಕ್ಷಣೀಯವಾಗಿತ್ತು. ಶಿವಾಜಿ, ಗಾಂಧಿ, ಪ್ರತಾಪಸಿಂಹ ಮೊದಲಾದ ಅವರ ಚಿತ್ರಗಳಲ್ಲಿ ಪ್ರತಾಪಸಿಂಹನದು ಅತಿ ದರ್ಶನೀಯವಾಗಿತ್ತು. ಇಷ್ಟಲ್ಲದೆ ವಿಜಾಪೂರದ ಶ್ರೀ. ಮಿಣಜಗಿಯವರು ಬರೆದ 'ನಟರಾಜ' 'ಹರಳಯ್ಯ ಮಧುವಯ್ಯ' ಎಂಬ ಚಿತ್ರಗಳು ಮನಂಗೊಳಿಸುತ್ತಿದ್ದವು.

ಇನ್ನು ಪ್ರಾಚೀನ ಭಾರತೀಯ ಚಿತ್ರಕಲೆಯ ಮಾದರಿಗಳು. ಅವು ಎರಡು ಬಗೆಯವಾಗಿದ್ದವು. (೧) ದಕ್ಷಿಣೀ ಪದ್ಧತಿ, (೨) ರಜಪೂತ ಪದ್ಧತಿ, ದಕ್ಷಿಣೀಪದ್ಧತಿಯ ಚಿತ್ರಗಳು ಇನ್ನೂ, ತಂಜಾವರ ಮದ್ರಾಸಗಳ ಕಡೆಗೆ ಸಿಕ್ಕುತ್ತವೆ. ದುಂಡನ್ನ ಮುಖ, ಡಾಳಾಗಿ ತೋರುವಂತೆ ರಚನೆ, ಎದ್ದು ತೋರುವ ವರ್ಣಸನ್ನಾಹ, ಒಂದು ಬಗೆಯ ಉಲ್ಲಾಸವಿಲಾಸ, ಇವುಗಳು ಆ ಪದ್ಧತಿಯ ವಿಶಿಷ್ಟಗುಣಗಳು ...... ವಿಶೇಷವಾಗಿ ರಜಪೂತ ಪದ್ಧತಿಯ ಚಿತ್ರಗಳು ಸೂಕ್ಷ್ಮವಾಗಿ ನೋಡತಕ್ಕುವಾಗಿದ್ದವು. ಅಜಂತೆಯ ಪದ್ಧತಿ, ಮೊಗಲ ಪದ್ಧತಿ, ರಜಪೂತ ಪದ್ಧತಿಯೆಂದು ನಮ್ಮ ಚಿತ್ರಪರಂಪರೆಗಳುಂಟಷ್ಟೇ. ಅಜಂತೆಯ ರೀತಿಯಲ್ಲಿ ಕೆಲವೊಂದು ಗೆರೆಗಳಲ್ಲಿಯೇ ಅದ್ಭುತವಾದ ಭಾವಲೋಕವನ್ನೇ ವ್ಯಕ್ತಪಡಿಸುವ ಸೊಬಗನ್ನೂ, ಮೊಗಲ ರೀತಿಯಲ್ಲಿ ಆಗಿನ ವೇಷಭೂಷಣಗಳನ್ನು ಸ್ಫುಟವಾಗಿ ನಯವಾಗಿ ತೆಗೆಯುವ ಕೌಶಲವನ್ನೂ ನೋಡುವುದಾದರೆ, ರಜಪೂತ ರೀತಿಯಲ್ಲಿ ಆಕೃತಿಸೌಷ್ಠವವನ್ನು ನೋಡಬೇಕು. ರಜಪೂತಪದ್ಧತಿಯಲ್ಲಿ ಸ್ತ್ರೀಯರನ್ನು ಚಿತ್ರಿಸುವುದಾದರೆ ಅದೊಂದು ವಿಶಿಷ್ಟಥಾಟಿಯ ಆ ಬಡುನಡು, ಬಳುಕುವ ಬಟ್ಟಮೊಲೆ, ನೀಳಾದ ಮೂಗು, ಕೊರೆದಂತಿರುವ ಉದ್ದನ್ನ ಹುಬ್ಬು, ಕೋಮಲ ತನುಲತೆ—ಇವು ಇರಲೇಬೇಕು. ಇವುಗಳಿಂದ ಒಮ್ಮಿಗೆಲೆ ಆ ಪದ್ಧತಿಯು ಗುರುತಾಗುವುದು. ನಮ್ಮ ಚಿತ್ರಗಳ ಗುಂಪಿನಲ್ಲಿ (೧) ರಾಧಾಕೃಷ್ಣರ ಚಿತ್ರಗಳು, (೨) ರಾಜಸ್ತ್ರೀಯರ ಭಾವಚಿತ್ರಗಳು (Portraits), (೩) ರಾಜಸ್ತ್ರೀಯರ ಅಂಗರಂಜನವೀಣಾವಾದನಾದಿ

ವಿವಿಧವಾದ ಅಂತಃಪುರದೊಳಗಿನ ಕಾರ್ಯಕಲಾಪಗಳು, ಎಂದು ಮೂರು ವಿಭಾಗ
ಗಳನ್ನು ಮಾಡಬಹುದು. ಅರಸುಮನೆತನದ ಹೆಣ್ಣುಮಕ್ಕಳು ಹೇಗೆ ಉಡಿಗೆ ತೊಡಿಗೆ
ಗಳನ್ನು ಮಾಡುತ್ತಿದ್ದರು, ಎಂತಹ ಆಟಪಾಟಗಳಲ್ಲಿ ಹೊತ್ತುಕಳೆಯುತ್ತಿದ್ದರು, ಅವರ
ಅಂಗರಂಜನ (Toilet), ಕಾಲಿಗೆ ಅಲತಿಗೆಯ ರಸವನ್ನು ತೊಡೆದುಕೊಳ್ಳುವ ಬಗೆ
ಇವೆಲ್ಲ ಮನೋಹರವಾಗಿ ಚಿತ್ರಿತವಾಗಿದ್ದವು. ನರ್ತಕಿಯರ ಅಂಗಭಂಗಿಗಳನ್ನು ಅಲ್ಲಿ
ನೋಡಬಹುದಾಗಿತ್ತು. ಒಂದು ಭಾವಚಿತ್ರದಲ್ಲಿ ಒಬ್ಬ ಹೆಂಗಸು ಗಂಡಸರಂತೆ ವೇಷ
ವನ್ನು ತೊಟ್ಟುಕೊಂಡು, ಧನುಸ್ಸನ್ನು ಹಿಡಿದುಕೊಂಡು, ಮುಂಡಾಸವನ್ನು ಸುತ್ತಿ
ಕೊಂಡು ನಿಂತುದು ಕಂಡುಬರುತ್ತಿತ್ತು. ಮತ್ತೊಂದು ಕಡೆ ಗುಡಿಗುಡಿಯ ಸೇದುತ್ತ
ಒಬ್ಬ ಹೆಣ್ಣುಮಗಳು ಕುಳಿತಿರುವಳು. ಒಂದು ಚಿತ್ರದಲ್ಲಿ ಎಷ್ಟೋ ಬಣ್ಣವು ಹಾರಿ
ಹೋದುದರಿಂದ ಆಗಿನ ಚಿತ್ರಕಾರರು ಚಿತ್ರಗಳನ್ನು ಹೇಗೆ ಬರೆಯುತ್ತಿದ್ದರೆಂಬುದು
ನಿರೀಕ್ಷಕರಿಗೆ ವ್ಯಕ್ತವಾಗುತ್ತಿತ್ತು. ಮೊದಲನೆಯದು ಒಂದು ಬಣ್ಣದ ತರ, ಅದರ
ಮೇಲೆ ( Rough-work ) ಎಂದರೆ ಇಡಿಯ ಚಿತ್ರದ ಕಲ್ಪನೆ ಬರುವಂತೆ ರೇಷೆ
ಗಳನ್ನು ಹಾಕಿಕೊಳ್ಳುವುದು ( ಆ ರೇಷೆಗಳನ್ನು ನೋಡಿದರೆ ಈಗಿನಂತೆ ರಬ್ಬರು
ಹಚ್ಚದೆ ಹೇಗೆ ಪ್ರಭುತ್ವದಿಂದ ತಪ್ಪದಂತೆ ಒಂದೇ ಸಾರೆಗೆ ಚೊಕ್ಕಾಗಿ ತೆಗೆಯುತ್ತಿದ್ದ
ರೆಂಬುದು ವ್ಯಕ್ತವಾಗುತ್ತಿದೆ ), ಆ ಮೇಲೆ ಬೇರೆ ಬೇರೆ ಬಣ್ಣಗಳಿಂದ ಇಡಿಯ ಆಕೃತಿ
ಯನ್ನು ಪೂರ್ಣವಾಗಿ ಸಜ್ಜುಗೊಳಿಸುವುದು, ಅದರ ಮೇಲೆ ಕೂದಲುಗಳನ್ನು
ಒಂದೊಂದು ಎಳೆಯೂ ಕಾಣುವಂತೆ ಅತಿಸೂಕ್ಷ್ಮವಾಗಿ ತೀಡುವುದು, ತರುವಾಯ
ಮುತ್ತು ರತ್ನಗಳ ಆಭರಣಗಳನ್ನು ಅತಿ ಚಿಕ್ಕ ಚಿಕ್ಕೆಗಳನ್ನಿಟ್ಟು ತೋರಿಸುವುದು (ಹಗು
ರಾಗಿ ಬೊಟ್ಟು ಎಳೆದರೆ ಕೈಗೆ ಹತ್ತುತ್ತಿದ್ದುವು ), ಕೊನೆಗೆ ಬಂಗಾರದ ವಸ್ತ್ರ ಒಡವೆ
ಗಳನ್ನೂ ಜರಿಯ ಅಂಚುಗಳನ್ನೂ ಬಂಗಾರದ ಬಣ್ಣದಿಂದ ಬಳೆಯುವುದು—ಈ ರೀತಿ
ಅವರ ಪದ್ಧತಿಯಾಗಿತ್ತು. ನೂರಿನ್ನೂರು ವರ್ಷಗಳು ಸಂದುಹೋದರೂ, ಬಣ್ಣಗಳು
ಹೇಗೆ ಅಚ್ಚಳಿಯದೆ ಇವೆಯೆಂಬುದು ಕಂಡುಬರುತ್ತಿತ್ತು. ಹೆಚ್ಚೇನು? ವರ್ಣನೆಯನ್ನು
ಓದುವುದಕ್ಕಿಂತಲೂ ಕಣ್ಣಾರೆ ಅವುಗಳನ್ನು ಕಾಣುವುದರಲ್ಲಿಯೇ ಕಣ್ಣುಗಳಿಗೆ ಹಬ್ಬ
ವಿತ್ತೆಂದು ಹೇಳಿದರೆ ಅತ್ಯುಕ್ತಿಯಾಗದು. ಇವುಗಳಲ್ಲದೆ ( ಅದೇ ಪದ್ಧತಿಯಲ್ಲಿ ) ಗೋ-
ಸ್ವಾಮಿ ತುಲಸೀದಾಸರು, ಲೈಲಾ—ಮಜ್ನುನ್ ಎಂಬೀ ಚಿತ್ರಗಳೂ ಇದ್ದುವು. ಒಟ್ಟಿಗೆ
ಪ್ರದರ್ಶನದಿಂದ ನಮ್ಮ ಹಳೆಯ ಚಿತ್ರಕಲೆ ಹೇಗಿತ್ತು, ಕರ್ನಾಟಕಚಿತ್ರಕಲೆಯು ಕೇ.
ವೆಂಕಟಪ್ಪನವರಲ್ಲಿ ಹೇಗೆ ಅತ್ಯುನ್ನತಿಯನ್ನು ಪಡೆದಿದೆ, ಕರ್ನಾಟಕದ ಬೇರೆ ಬೇರೆ ಚಿತ್ರ
ಕಾರರು ಎಂತಹ ಕೆಲಸವನ್ನು ಮಾಡುತ್ತಿರುವರು, ಈಗಿನ ಹೊಸಬರಾದ ತರುಣರು
ಹಿಂದಿನವರ ಹಿರಿಯರ ಹೆಜ್ಜೆಗಳಲ್ಲಿ ಹೆಜ್ಜೆಗಳನ್ನು ಹಾಕುತ್ತ ಹೇಗೆ ಮುಂದಕ್ಕೆ ಸಾಗು
ತ್ತಿರುವರು, ಮಾನವಮಿಯ ಮಹೋತ್ಸವದ (ಕರ್ನಾಟಕದ ಮಟ್ಟಿಗೆ) ವೈಶಿಷ್ಟ್ಯವೇನು,
ಬಂಗಾಲದ ಶಕ್ತಿಪೂಜೆಯು ಯಾವ ಬಗೆಯದು, ಒಟ್ಟಿನಮೇಲೆ ಕರ್ನಾಟಕಭಾವನೆ

ಯೆಂದರೇನು, ಕನ್ನಡನಾಡಿನ ಎಳೆಯರು ಜಾತೀಯ--ರಾಷ್ಟ್ರೀಯ ಅಭಿಮಾನದಿಂದ (ಸಾಹಿತ್ಯ-ಚಿತ್ರ-ಪುರಾಣವಸ್ತುಸಂಶೋಧನಗಳಲ್ಲಿ) ಯಾವ ಕಾರ್ಯವನ್ನು ಮಾಡುತ್ತಿರುವರೆಂಬುದರ ದಿಗ್ದರ್ಶನವು ಸ್ವಲ್ಪದರಲ್ಲಿಯಾದರೂ ಸುತರಾಂ ವ್ಯಕ್ತವಾಗುವಂತಿತ್ತು.

---

## ಆಕ್ಷೇಪಗಳಿಗೆ ಉತ್ತರ.

### ಆಕ್ಷೇಪಗಳು.

೧. ಈ ನಾಡಹಬ್ಬವು (ಮಾನವಮಿಯು) ಮರಾಠರ ದ್ವೇಷದಿಂದ ಆರಂಭವಾಗಿದೆ.

೨. ಸಾಕಾರಮೂರ್ತಿಪೂಜೆಗೆ ಉತ್ತೇಜನ ದೊರೆವುದು; ಜಾತಿವಿಶಿಷ್ಟ ಧರ್ಮಕ್ಕೆ ಪ್ರೋತ್ಸಾಹದೊರೆವುದು.

೩. ಶಾಕ್ತರ ಅಮಾನುಷಪೂಜಾಪ್ರಕಾರಗಳು ಆರಂಭವಾಗಬಹುದು.

೪. ಇದು ಎಲ್ಲ ಜಾತಿಯವರನ್ನು ಒಳಗೊಳ್ಳಲು ಅಸಮರ್ಥವಿದೆ.

೫. ಕೇವಲ ಕನ್ನಡಿಗರ ಉತ್ಸವವೇ ಎಂದೆನ್ನಲಾಗುವದಿಲ್ಲ.

### ಉತ್ತರ.

ಈ ಮೊದಲಿನ ಬರಹಗಳಲ್ಲಿ ಎಲ್ಲ ಬಗೆಯ ಆಕ್ಷೇಪಗಳಿಗೂ ಸವಿಸ್ತೃತವಾದ ಉತ್ತರವು ಬಂದು ಹೋಗಿದೆ. ಪ್ರತ್ಯೇಕವಾಗಿ ಉತ್ತರಕೊಡುವ ವಿಶೇಷ ಅಗತ್ಯವೇನೂ ಇರಲಿಲ್ಲವಾದರೂ ಸಂಗ್ರಹರೂಪವಾಗಿ ಒತ್ತಟ್ಟಿಗೆ ಅವೆಲ್ಲವುಗಳಿಗೆ ಉತ್ತರವನ್ನು ಕೊಟ್ಟರೆ ಒಳಿತೆಂದು ಬಂದ ಸೂಚನೆಯ ಮೇರೆಗೆ ಇಲ್ಲಿ ಸಂಕ್ಷೇಪವಾಗಿ ಉತ್ತರಗಳನ್ನು ಬರೆಯುತ್ತೇವೆ. **ಕುಚೋದ್ಯದ ಕುತರ್ಕಗಳಿಗೆ** ಇಲ್ಲಿ ಉತ್ತರವಿಲ್ಲ. ಆದರೂ ವಿಚಾರಸ್ವಾತಂತ್ರ್ಯದ ಯುಗದಲ್ಲಿ, ಈ ಸಾರ್ವತ್ರಿಕಶಿಕ್ಷಣದ ಮನ್ವಂತರದಲ್ಲಿ ಸಂಶಯಗಳಿಗೆ ಉತ್ತರಕೊಡುವವರ ಸಂಖ್ಯೆಯು ಕಡಿಮೆ ಇದ್ದರೂ ಪ್ರತ್ಯುತ್ತರದ ಮೇಲೆ ಸಂಶಯಗಳನ್ನು ತೆಗೆವವರ ಸಂಖ್ಯೆಯೇನೂ ಕಡಿಮೆಯಿಲ್ಲ. ಮೇಲಾಗಿ ಸಂಶಯವೆಂಬುದೊಂದು ಬುದ್ಧಿಯ ಗುಣ. ಸಂಶಯದಲ್ಲಿ ಎರಡು ಬಗೆ. ಅಡಿಗಡಿಗೆ ಹಲ್ಲಿ ನುಡಿದಂತೆ ತಲೆದೋರುವ ಸಂಶಯಗಳು ಸಂಶಯಿಯ ಕಾರ್ಯನಾಶವನ್ನು ಮಾಡುವವಲ್ಲವೆ ಪಂಚಾ

ವುತಃ ಆತನ ನಾಶಕ್ಕೂ ಕಾರಣವಾಗುವವು. 'ಸಂಶಯಾತ್ಮಾ ವಿನಶ್ಯತಿ' ಎಂಬ ಗೀತಾ ವಚನವು ಈ ಜಾತಿಯ ಸಂಶಯಗಳನ್ನನುಲಕ್ಷಿಸಿಯೇ ಇದೆ. ವ್ಯಕ್ತಿಯಾಗಲಿ ಇಂತಹ ಸಂಶಯಗಳಿಗೆ ಇಂಬುಗೊಡಲಾಗದು. ಇನ್ನು ಎರಡನೆಯ ಜಾತಿಯ ಸಂಶಯಗಳು ಹೆಜ್ಜೆಹೆಜ್ಜೆಗೆ ಬೀಳುತ್ತಿದ್ದರೂ ದಟ್ಟಡಿಯಿಕ್ಕುವುವನ್ನು ಬಿಡದ ಬಾಲಕನಂತೆ ವಿಚಾರ ಸಾಮರ್ಥ್ಯದ ಆರೋಗ್ಯವನ್ನೇ ಸೂಚಿಸುತ್ತವೆ. ಪರಪ್ರತ್ಯಯನೆ ಬುದ್ಧಿಯು ಇದರಿಂದ ಕಡಿಮೆಯಾಗುತ್ತದೆ. ಈ ಜಾತಿಯವೆಂದು ಕಂಡ ಕೆಲ ಸಂಶಯಗಳಿಗೆ ಇಲ್ಲಿ ಸ್ವಲ್ಪದ ರೊಳಗೆ ಉತ್ತರವನ್ನು ಕೊಟ್ಟಿದೆ.

ಇನ್ನೊಂದು ಮಾತು ಲೋಕೋಮೋಟಿವ್ಹ ಎಂಜಿನಿನ ಶೋಧಕನಾದ ಸ್ಟೀಫನ್ ಸನ್‌ನು ತನ್ನ ಯಂತ್ರದ ತತ್ವವನ್ನು ಒಂದು ಸಭೆಯಲ್ಲಿ ಶಾಸ್ತ್ರಜ್ಞರಿಗೆ ತಿಳಿಸಿ ಹೇಳುತ್ತಿರುವಾಗ ಆ ಪಂಡಿತರೆಲ್ಲರೂ 'ಚೀ! ಚೀ! ನೀನು ಹೇಳುವಂತೆ ಈ ಯಂತ್ರವು ಸ್ವಯಂಪ್ರೇರಣೆಯಿಂದ ನಡೆವುದು ಅಶಕ್ಯ' ಎಂದು ಉಸುರಿದರಂತೆ. ಆಗ ಸ್ಟೀಫನ್‌ಸನ್‌ನು ಚಟ್ಟನೆ ಆ ಯಂತ್ರವನು ನಡೆಯ ಹಚ್ಚಿ 'ನಿಮ್ಮೆಲ್ಲರ ಸಂಶಯಗಳಿಗೆ ಇದೆ ಉತ್ತರ ಎಂದು ಬೆರಳುಮಾಡಿ ತೋರಿಸಿದನಂತೆ ಹಾಗೆಯೇ ಈ ಉತ್ಸವದ ವಿಚಾರದಲ್ಲಿ ನಾವು ಅನ್ನಬಹುದು. ಬೇರೆ ಕಡೆಗೆ ಕೊಟ್ಟ ಪತ್ರಿಕೆಗಳ ಅಭಿಪ್ರಾಯಗಳಿಂದಲೂ ಇದೆ ಮೊದಲನೇ ಸಲವಿದ್ದು ಈ ನೂತನಬುದ್ಧಿಯಿಂದ ಅನೇಕಸ್ಥಳಗಳಲ್ಲಾದ ಉತ್ಸವಗಳ ವೃತ್ತಾಂತಗಳಿಂದಲೂ ಸಕಲಸಂಶಯಗಳ ಮುಕುಟಮಣಿಯಾದ 'ಮಾನವಮಿಯು ನಾಡಹಬ್ಬವಾಗಬಹುದೆ?' ಎಂಬ ಸಂದೇಹಕ್ಕೆ ಕೃತಿರೂಪದಲ್ಲಿ ವೀರ್ಯವತ್ತರವಾದ ಉತ್ತರವು ದೊರತಿದೆ ಎಂದು ಕಂಡುಬರಬಹುದು. ಇನ್ನುಳಿದ ಸಣ್ಣಪುಟ್ಟ ಕೆಲ ಸಂಶಯಗಳಿಗೆ ಇದು ಉತ್ತರ.

೧. ಆವ ನಾಡಹಬ್ಬವೂ ದ್ವೇಷಮೂಲಕವಿರುವದಿಲ್ಲ. ದ್ವೇಷದಿಂದ ಆವ ವೀರ್ಯವತ್ತರಕಾರ್ಯವೂ ಉಂಟಾಗಲಾರದು. ವಿಧೇಯತೆಯಿಂದ ಜೀತಾಳುತನವನ್ನು ವಿಂಗಡಿಸುವುದು ಹೇಗೆ ಕಠಿಣವೊ ಹಾಗೆ ಸ್ವತಂತ್ರವೃತ್ತಿಯನ್ನು ದ್ವೇಷದಿಂದ ಬೇರ್ಪಡಿಸುವುದು ಬಿಗಿ. ಪ್ರತಿಕೂಲಪರಿಸ್ಥಿತಿಯವರ ಸ್ವತಂತ್ರವೃತ್ತಿಗೆ ದ್ವೇಷವೆಂಬ ಹೆಸರು ಬರುವುದು ಜಗತ್ತಿನ ವಿಚಿತ್ರರೀತಿಯೇ ಆಗಿದೆ. ಇದು ದ್ವೇಷವಲ್ಲ, ಸ್ವತಂತ್ರವೃತ್ತಿ ಎಂಬುದನ್ನು ಕನ್ನಡಿಗರು ಕಾರ್ಯದಿಂದಲೆ ತೋರಿಸುವರೆಂದು ನಮಗೆ ವಿಶ್ವಾಸವಿದೆ.

ಅದು ಕೀಳು ಎಂಬುದೇನು ನಿತ್ಯಸಿದ್ಧಾಂತವಲ್ಲ.

೨. ಮೂರ್ತಿಪೂಜೆ ಎಂದೊಡನೆ ಕಡಿಮೆ ಮಾಡುವ ಕುತಂತ್ರದ ಜಾತಿವಿಶಿಷ್ಟಧರ್ಮ ಎಂದರೆ ಒಬ್ಬರಿಗೆ ಹೆಚ್ಚು ಒಬ್ಬರಿಗೆ ಕಂತ್ರಾಟವು ಎಂದು ಗ್ರಹೀತ ಸಿದ್ಧಾಂತವಾಗಲು ಕಾರಣವಿಲ್ಲ. ಹೀಗಿದ್ದರೂ ಈಗಿನ ಮಹಾನವಮಿಯಲ್ಲಿ ತತ್ವಪೂಜೆಗೂ ಗುಣಕರ್ಮವಿಶಿಷ್ಟಧರ್ಮಕ್ಕೂ

ಉತ್ಸಾಹವೂ ಪ್ರೋತ್ಸಹವೂ ಉಂಟಾಗುವುದೆಂದು ನಾವು ತಿಳಿದಿದ್ದೇವೆ. ಈ ಉತ್ಸವಗಳಲ್ಲಿ ವಿಚಾರಮಾಡುವ ಗುತ್ತಿಗೆಯನ್ನೇನೂ ಜಾತಿಬ್ರಾಹ್ಮಣರಿಗೆ ಕೊಟ್ಟಿಲ್ಲ. ಜನರಲ್ಲಿ ಸಾಹಸಪರಾಕ್ರಮಗಳನ್ನೂ ಬುದ್ಧಿಯನ್ನೂ ಶಕ್ತಿಯನ್ನೂ ಉದ್ದೀಪಿಸುವ ಕಾರ್ಯವನ್ನು ಜಾತಿಕ್ಷತ್ರಿಯರೇ ಹೊತ್ತುಕೊಂಡಿಲ್ಲ. ಮಹಾನವಮಿಯ ಸಾರ್ವಜನಿಕ ಸ್ವರೂಪವು ಈ ಬಗೆಯದೆ ಉಳಿವುದೆಂದು ನಾವು ಸಾರಿ ಹೇಳಬಹುದು.

ಮಹಾಲಕ್ಷ್ಮಿ, ಮಹಾಕಾಳಿ, ಮಹಾಸರಸ್ವತಿ ಇವು ಶೈವಶಕ್ತಿಗಳೊ, ವೈಷ್ಣವಶಕ್ತಿಗಳೊ ಅಥವಾ ಸ್ವತಂತ್ರಶಕ್ತಿಗಳೊ ಎಂಬ ವಾದವು ಬಂದಿಲ್ಲ. ಬರುವಂತೆ ಸಹ ಕಾಣುವದಿಲ್ಲ. ಇವರ ಹಸ್ತಮುದ್ರೆ, ಆಯುಧ, ಆಸನ ಇವುಗಳ ಬಗ್ಗೆ ಆರೂ ವಾದವನ್ನು ಹೂಡಿಲ್ಲ. ಈಗ ಪ್ರಸ್ತುತದಲ್ಲಿ ಧನಬಲ, ಶರೀರಬಲ. ಬುದ್ಧಿಬಲ ಇವು ಹೇಗೆ ನಮ್ಮಲ್ಲಿ ಮತ್ತೆ ನೆಲೆಗೊಂಡು ಬಳೆಯಬಹುದು ಎಂಬ ವಿಚಾರವು ಮುಖ್ಯವಾಗಿದೆ. ಇವುಗಳ ಉಪಾಸನೆಯು ಇಂತೆ ಆಗಬೇಕು, ಅಂತೆ ಆಗಬೇಕು ಎಂದು ಆರಹಟವೂ ಇಲ್ಲ. ಆದರೆ ಕರ್ನಾಟಕದೊಳಗಿನ ಮುಕ್ಕಾಲು ಮುರುಪಾಲು ಜನಕ್ಕೆ ಈ ತತ್ವಗಳು ಉಪಾಸನೆಯನ್ನು ಮೇಲ್ಕಾಣಿಸಿದ ಹೆಸರುಗಳಿಂದ ಆರಾಧಿಸುವುದು ಪ್ರಿಯಕರವಾಗಿರುವಾಗ ಅದಕ್ಕೆ ವಿರೋಧಿಸುವುದರಲ್ಲಿ ಔಚಿತ್ಯವಾದರೂ ಏನು ? ವಿವೇಕವಾದರೂ ಏನು ?

೩. ಮೂಲದಲ್ಲಿಲ್ಲದ್ದು ಫಲದಲ್ಲಿ ಎಲ್ಲಿಂದ ಬರಬೇಕು ? ನಮ್ಮಲ್ಲಿ ಪ್ರಾಚೀನ ಕ್ಷಾತ್ರಯುಗದಲ್ಲಿ ಕೂಡ ಬಂಗಾಳಿಗಳ ಕಾಲೀಪೂಜೆಯ ಕರಾಳಸ್ವರೂಪವು ಇರಲಿಲ್ಲ. ಅಲ್ಲದೆ ಯಜ್ಞಯಾಗಾದಿ ಕರ್ಮಕಾಂಡಗಳನ್ನು ನಿಯಂತ್ರಿಸಿದ ಶೃಂಗೇರಿಯ ಪೀಠದ ಭೂಮಿ, ಅಹಿಂಸೆಯನ್ನೇ ತಮ್ಮ ಧರ್ಮದ ಪರಮಲಕ್ಷಣವಾಗಿಟ್ಟುಕೊಂಡ ಜೈನರ ವೈಭವಭೂಮಿ, ವೈದಿಕಯಜ್ಞಗಳಲ್ಲಿಯೂ ಪಿಷ್ಟಪಶುವನ್ನೇ ಬಲಿಗೊಡಬೇಕೆಂದು ಆದೇಶವಿತ್ತ ಮಧ್ವಾಚಾರ್ಯರ ಜನ್ಮಭೂಮಿ, ದೀಕ್ಷಾಮಾತ್ರದಿಂದ ಹೊಲೆಮಾದಿಗರನ್ನೂ ರಕ್ತಮಾಂಸಾದಿಗಳಿಂದ ನಿರ್ಲಿಪ್ತರನ್ನಾಗಿ ಮಾಡಿ ಅಹಿಂಸಾವ್ರತಬದ್ಧರನ್ನಾಗಿ ಮಾಡಿದ ಬಸವೇಶನ ಅವತಾರಭೂಮಿ ಎಂದೆನಿಸಿಕೊಂಡ ನಮ್ಮ ಭೂಮಿ ಶಾಕ್ತರೌದ್ರಸಾಧನಗಳಿಗೆ ಎಡೆಯಾದೀತೆಂಬುದು ನಿರಾಧಾರವಾದ ಭೀತಿ. ಇದಾಯ್ತು ಪೂರ್ವಪರಂಪರೆ. ಮೇಲಾಗಿ ಈಗ ನಾವೆಲ್ಲರೂ ರಕ್ತಕ್ಕೆ ಹೆದರುವ ಹೇಡಿಗಳು. ಜೀವಿಸುತ್ತಿರುವುದು ಆಂಗ್ಲರ ಶಾಂತಿಸಾಮ್ರಾಜ್ಯದಲ್ಲಿ. ಪಠಿಸುತ್ತಿರುವುದು ಮಹಾತ್ಮರ ನಿರ್ವೈರಸೂಕ್ತ. ಕೈಯಿಂದ ಮಾಡುತ್ತಿರುವುದು ಶತಕಾನುಶತಕದಿಂದ ಅಸಂಖ್ಯಾತಗ್ರಾಮದೇವತೆಗಳಿಗೆ ರೂಢಿಯಿಂದ ಸಲ್ಲುತ್ತಿರುವ ಪ್ರಾಣಹಿಂಸೆಯನ್ನು ನಿಲ್ಲಿಸುವ ಕಾರ್ಯ. ಕಾಲವೋ ಭೂತದಯೆಯ ಮನ್ವಂತರ, ಹೀಗೆ ದೇಶಕಾಲಪರಿಸ್ಥಿತಿಯಿರಲಾಗಿ ಸರ್ವವಿಧದ ಉತ್ಸಾಹವನ್ನು ಉಂಟುಮಾಡಿಕೊಳ್ಳಲು ಉಪಯೋಗಿಸಿಕೊಳ್ಳಬೇಕಾದ ಉತ್ಸವವು ಕ್ರೂರ

ಕೃತ್ಯಗಳ ರಂಗಸ್ಥಳವಾದೀತೆಂದು ಭೀತಿಯ ಭೂತವನ್ನು ಎಬ್ಬಿಸುವುದೂ ಎಬ್ಬಿಸಿಕೊಳ್ಳುವುದೂ ಶುದ್ಧ ಅವಿವೇಕವಾಗಿದೆ.

೪. ವಿಶ್ವದೊಳಗಿನ ಎಲ್ಲ ಜನರಿಗೂ, ಸರ್ವಥೈವಸಮ್ಮತವಾಗುವ ಹಬ್ಬವು ಬರಬೇಕಾದರೆ ಇನ್ನೂ ಹಲಕೆಲವು ಶತಕಗಳು ಬೇಕು. ಅದೇ ಪ್ರಕಾರ ಹಿಂದುಸ್ಥಾನದಲ್ಲಿ ಹಿಂದುಸ್ಥಾನದ ಹೊರಗಿನಿಂದ ಬಂದ ಜನಾಂಗಗಳ ಧರ್ಮದವರಿಗೆ ಸಮಗ್ರವಾಗಿ ಒಪ್ಪಿಗೆಯಾಗಬಹುದಾದ ಹಬ್ಬವನ್ನು ಕಂಡುಹಿಡಿಯಬೇಕಾದರೆ ಒಂದೆರಡು ಶತಮಾನಗಳು ಬೇಕು ಭಾರತಮಾತೆ ಅಥವಾ ಹನುಮಂತನು ಕ್ರಿಸ್ತೀ, ಪಾರಶಿ, ಇಸ್ಲಾಮಿ ಧರ್ಮದವರನ್ನು ಮೊದಲು ಮಾಡಿಕೊಂಡು ಬೌದ್ಧ, ಆರ್ಯ, ಬ್ರಹ್ಮೋಮತಪಂಥದವರೆಗೆ ಎಲ್ಲರಿಗೂ ಒಪ್ಪಿಗೆಯಾದೀತೆಂದು ಕೆಲವರು ವಾದಿಸುವದುಂಟು. ಆದರೆ ಶಕ್ತಿಗಿಂತ ಈ ಎರಡು ದೈವತಗಳಲ್ಲಿ ಯಾವ ಗುಣಗಳು ಹೆಚ್ಚಿರುವವೋ ಅಥವಾ ಶಕ್ತಿಯಲ್ಲಿ ಅಂಥ ಯಾವ ದೋಷಗಳಿರುವವೋ ಶಕ್ತಿಯ ಉತ್ಸವಕ್ಕೆ ವಿರುದ್ಧವಾಗಿ ತರಬಹುದಾದ ಪ್ರಾಯಶಃ ಎಲ್ಲ ಆಕ್ಷೇಪಗಳನ್ನೂ ಈ ಎರಡು ದೈವತಗಳಿಗೆ ವಿರುದ್ಧವಾಗಿ ತರಬಹುದಿಷ್ಟೇ ಅಲ್ಲ, ಅವು ಬರಲೂ ಸಾಕು. ಆದಕಾರಣ ಸದ್ಯಕ್ಕೆ ನಾವು ಶಕ್ತಿ ಉತ್ಸವದಲ್ಲಿ ಯಾವದಾದರೂ ಜಾತಿ, ಮತ, ಪಂಥ, ಧರ್ಮ, ಜನಾಂಗ ಮೊದಲಾದವುಗಳಿಗೆ ವಿಪರೀತವಾಗಿ ನೋಯಿಸುವ ದೋಷವೇನಾದರೂ ಇದರಲ್ಲಿದೆಯೋ ಎಂದು ನೋಡಿದರಾಯಿತು. ಮತ್ತು ಈ ಸಂಚಿಕೆಯಲ್ಲಿಯ ವಿವಿಧವಿವೇಚನೆಯಿಂದ ಅಂಥ ಶಾಶ್ವತವಾದ ದೋಷವೇನೂ ಅದರಲ್ಲಿ ಇಲ್ಲವೆಂಬುದು ಸಾರಾಸಾರ ವಿಚಾರವನ್ನು ಮಾಡುವವರಿಗೆ ಕಂಡುಬರಬಹುದು. ಮೇಲಾಗಿ ಹೊಸದಾಗಿ ಹಬ್ಬವನ್ನು ಹುಟ್ಟಿಸಿಕೊಳ್ಳುವದು ಬಲು ಬಿಗಿ. ಆದರೆ ಇದ್ದ ಹಬ್ಬದ ರೂಪಥ ಪಲ್ಲಟವನ್ನೇ ಮಾಡಿಕೊಳ್ಳುವದು ಅಷ್ಟು ದುಸ್ತರವಲ್ಲ. ಆಶ್ವಿನಮಾಸದೊಳಗಿನ ಈ ಶಕ್ತಿಯ ಉತ್ಸವವು ಸಹಸ್ರಾವಧಿವರ್ಷಗಳಿಂದ ಈ ಭರತಖಂಡದಲ್ಲಿ ನಡೆದು ಬಂದದ್ದು. ಕರ್ನಾಟಕದಲ್ಲಿ ಬಹುತರ ಎಲ್ಲ ಜನರೂ ಎಲ್ಲ ಮತದವರೂ ಆಚಾರತಃ ಇದನ್ನು ಎತ್ತಿ ಹಿಡಿಯುವವರೇ. ಶಕ್ತಿವಿಶಿಷ್ಟಶಿವಾದ್ವೈತದ ಕುರುಹಾದ ಲಿಂಗಪೂಜೆಯು ವೀರಶೈವರಿಗೆ ಪ್ರತಿನಿತ್ಯವೂ ವಿಹಿತವು. ಅಂಥ ಶಕ್ತಿಯ ಉತ್ಸವವು ಅವರಿಗೆ ಅಹಿತವಾದೀತೇ? ಅಥವಾ ಅದನ್ನು ಖಂಡಿಸಿದವರಾದರೂ ಯಾರು, ಎಲ್ಲಿ? ನವರಾತ್ರಿಯನ್ನು ಭರತೇಶ್ವರನೇ ಪ್ರವರ್ತಿಸಿದನೆಂದು ಜೈನರು ತಿಳಿಯುವರು. ಅಂದಮೇಲೆ ಅವರಿಗೆ ಇದು ಅಮಾನ್ಯವಿರಬಹುದೇ ? ಆಗುವುದೆಂಬುದು ಅಜ್ಞಾನಜನ್ಯಸಂಶಯ. ಬ್ರಾಹ್ಮಣಕ್ಷತ್ರಿಯವೈಶ್ಯಶೂದ್ರಪಂಚಮ ಮೊದಲಾದ ಪಂಚವರ್ಣದ ಹಿಂದೂಜನರಿಗೆ ಇದು ಸಮ್ಮತವಿಲ್ಲವೆಂದು ಹೇಳುವ ಧೈರ್ಯವನ್ನು ಯಾರಾದರೂ ಮಾಡಿಯಾರೆಂದು ನಮಗೆನಿಸುವುದಿಲ್ಲ. ಯಾಕೆಂದರೆ ಈ ಮಹೋತ್ಸವದ ಸಾರಭೂತಕಲ್ಪನೆಯನ್ನು ಶ್ರುತಿಆಗಮಸ್ಮೃತಿ ಪುರಾಣೇತಿಹಾಸ ಮೊದಲಾದವುಗಳೇ ಎತ್ತಿಹಿಡಿಯುವವು. ಆರ್ಯರೂ, ಬ್ರಾಹ್ಮರೂ

ಇದಕ್ಕೆ ವಿರೋಧಿಗಳಾಗುವ ಕಾರಣವಿಲ್ಲ. ಅದೇ ಪ್ರಕಾರ ಅನ್ಯಮತೀಯರಿಗೆ ಈ ಉತ್ಸವದಿಂದ ಭಯಪಡಲೂ ಕಾರಣವಿಲ್ಲ. ಇದ್ದ ಪಕ್ಷಕ್ಕೆ ಆ ವಿರೋಧವು ನಮ್ಮ ಸಮಗ್ರಧರ್ಮಾಚರಣೆಯ ಬಗ್ಗೆಯೇ ಇದೆ. ನಾವು ಯಾರ ಬಂಧುಭಾವದ ನೂತನ ವೃತ್ತಿಯಿಂದ ಈ ಉತ್ಸವವನ್ನು ಜರುಗಿಸಿಕೊಳ್ಳುವೆವೋ ಅಂಥ ನೂತನವೃತ್ತಿಯಿಂದಲೇ ಅವರೂ ಈ ಉತ್ಸವವನ್ನು ನೋಡಲಿಕ್ಕೆ ಒಪ್ಪಲು ಬೇಕು. ಕರ್ನಾಟಕದ ಮಟ್ಟಿಗೆ ಈ ಮೊದಲ ವರ್ಷದಲ್ಲಿಯೂ ಈ ನೂತನವೃತ್ತಿಯೂ ಒಂದು ಬಗೆಯ ಹೊಂದಿಕೆಯೂ, ಅನ್ಯೋನ್ಯಸಹಾನುಭೂತಿಯೂ ಬೇರೆ ಬೇರೆ ಕಡೆಗೆ ಆದ ಈ ಮಹೋತ್ಸವದ ವೃತ್ತಾಂತದಿಂದ ಕಂಡುಬರಬಹುದು.

೫. ಪ್ರಾಂತಿಕನಾಡಹಬ್ಬಗಳು ಸಮಗ್ರವಾಗಿ ಅನನ್ಯಸಾಧಾರಣವಾಗಿರಬೇಕೆಂದು ಕೆಲವರ ಮತ. ಎಂದರೆ ಮಹಾನವಮಿಯ ಉತ್ಸವವನ್ನು, ಬೇರೆ ಪ್ರಾಂತದವರು ಮಾಡುತ್ತಿದ್ದರೆ ನಾವು ಅದನ್ನು ಮಾಡಬಾರದು ಎಂದು ಅವರ ಅಭಿಪ್ರಾಯ. ಎಲ್ಲ ಕರ್ನಾಟಕಕ್ಕೆ ಸಾಮಾನ್ಯವಾದದ್ದೂ, ಕರ್ನಾಟಕೇತರಪ್ರಾಂತಗಳಿಂದ ಭಿನ್ನವಾದದ್ದೂ ಆದ ಉತ್ಸವವನ್ನು ಹುಡುಕಿ ತೆಗೆಯುವದು ದುಃಸಾಧ್ಯವಷ್ಟೇ ಅನವಶ್ಯಕವಾಗಿದೆಯೆಂದು ನಮ್ಮ ಮತ. ಪ್ರತಿಯೊಂದು ಜನಾಂಗದಲ್ಲಿಯೂ ಕೆಲವೊಂದು ಉತ್ಸವಗಳಿರುವವು. ಇವುಗಳ ಮೂಲ ತತ್ತ್ವಗಳು ಸರಿಸಮಾನವಾಗಿರುವವು. ಭೇದವು ಅಥವಾ ವೈಶಿಷ್ಟ್ಯವು ದೇಶಕಾಲಪಾತ್ರಾದಿ ಅಧಿಷ್ಠಾನಗಳ ಭಿನ್ನತ್ವದಿಂದ ಉಂಟಾಗುವದು. ಮಹಾನವಮಿಯ ಉತ್ಸವವು ಪೂಜೋತ್ಸವದ ಅಂಗವಾಗಿ ಬಂಗಾಲದಲ್ಲಿ ಪರಿಣಮಿಸಿದೆ. ರಜಪೂತಸ್ಥಾನದಲ್ಲಿ ಬೇಟೆಗೂ ಬಲಿಗೂ ಪ್ರಾಧಾನ್ಯವು ಹೆಚ್ಚು. ಮಹಾರಾಷ್ಟ್ರದ ರಾಜಕೀಯ ಪರಂಪರೆಯಲ್ಲಿಯೂ ಸಾಹಿತ್ಯಪರಂಪರೆಯಲ್ಲಿಯೂ ಧಾರ್ಮಿಕಪರಂಪರೆಯಲ್ಲಿಯೂ ಗಣೇಶನಿಗಿದ್ದ ಮಹತ್ತ್ವವು ಶಕ್ತಿಗಿಲ್ಲ. ಎಂದರೆ ಮಹಾನವಮಿಯ ಮಹೋತ್ಸವಕ್ಕೆ ಅಷ್ಟು ಪ್ರಾಧಾನ್ಯವಿಲ್ಲ. ಅಂತೂ ಏನು-ಪರಂಪರಾಭೇದದಿಂದ ಉದ್ದೇಶಸಾಫಲ್ಯದ ಪ್ರಕಾರ ಕೆಲವೊಂದು ಹಬ್ಬಗಳು ಕೆಲವೊಂದು ದೇಶಗಳಲ್ಲಿ ಒಂದು ವಿಧದಲ್ಲಿ ಅನನ್ಯಸಾಧಾರಣರೂಪವನ್ನು ಹೊಂದಿರುತ್ತವೆ. ಯಾವ ಇತಿಹಾಸವನ್ನೂ ಯಾವ ವಿಭೂತಿಗಳನ್ನೂ ಯಾವ ಸ್ಫೂರ್ತಿತರಂಗಗಳನ್ನೂ ಸ್ಮರಿಸಿ ಉತ್ಸವದ ಕಾರ್ಯದಲ್ಲಿ ಉತ್ಸಾಹಭರಿತರಾಗುವೆವೋ ಅದರಲ್ಲಿ ವೈಶಿಷ್ಟ್ಯವಿದೆ. ನವರಾತ್ರಿಯು ಅಖಿಲಭಾರತದ್ದಿದ್ದರೂ '**ಮಾನಾಮಿ**'ಯು ಕರ್ನಾಟಕದಿದ್ದೆ.

---

# ಮಹಾತ್ಮರ ಜನ್ಮದಿವಸದ ನಿಮಿತ್ತವಾಗಿ ಮನನೀಯ ವಿಚಾರ.

I will sinkor swim with the masses. — ಮೋಹನದಾಸ

'ಜನರ ಕೂಡ ಈಸುವೆ; ಜನರ ಕೂಡ ಮುಳುಗುವೆ' ಹೀಗೆ ಮಹಾತ್ಮರು ನುಡಿಯುವರು, ಹಾಗೆಯೆ ಅವರು ನಡೆಯುವರು. ಲೋಕನಾಯಕರ ಲಕ್ಷಣವೇ ಇದು. ಜನ ಹಿತವೆಂದರೆ ಕೆಲವೊಂದು ಪಕ್ಷದ ಕೆಲವೊಬ್ಬ ಜನರ ಹಿತವಷ್ಟೇ ಅಲ್ಲ. ಬ್ರಾಹ್ಮಣನ ವಿದ್ಯೆ, ಕ್ಷತ್ರಿಯನ ಪಾಲಕ ಶಕ್ತಿ, ವೈಶ್ಯನ ಧನ ಧಾನ್ಯ, ಇವೆಲ್ಲ ಜನರ ಹಿತಕ್ಕಾಗಿವೆ. ಈ ಜನರೆಂದರೆ ಅಗಣಿತರಾದ ಬಡವರು. ತನ್ನ ಹೊಟ್ಟೆಬಟ್ಟೆಗೆ ದೊರೆತರೆ ಸಾಕು, ಬ್ರಾಹ್ಮಣ ಕ್ಷತ್ರಿಯ ವೈಶ್ಯರ ಸಲುವಾಗಿ ಹಗಲಿರುಳು ದುಡಿಯುವವರು ಈ ಜನರು. ಸದ್ಬುದ್ಧಿಯನ್ನು ಪ್ರೇರಿಸಿಯೂ, ಸಕಾಲಕ್ಕೆ ರಕ್ಷಿಸಿಯೂ, ಧನಧಾನ್ಯಗಳನ್ನು ಕೊಟ್ಟೂ, ಈ ಬಡವರ ವರ್ಗವನ್ನು ಕಾಪಾಡುವದೇ ಸಮಾಜರಕ್ಷಣದ ಮಹತ್ವದ ಭಾಗ. ಸಮಾಜವು ಕಾಲೂರಿ ನಿಂತುದು ಈ ಬಡವರ ಮೇಲೆ. ಬಾಯಿಂದ 'ಪರಹಿತ ಪರಹಿತ' ವೆಂದುಕೊಳ್ಳುತ್ತ ಕೈಯಿಂದ ಸ್ವಾರ್ಥವನ್ನೇ ಸಾಧಿಸಿಕೊಳ್ಳಲು ಹವಣಿಕೆಮಾಡುತ್ತಿರುವ ನಮ್ಮೀ ಸಮಾಜದಲ್ಲಿ "ಈಸಿದರೆ ಬಡವರೊಡನೆ ಮುಳುಗಿದರೂ ಅವರೊಡನೆ" ಎಂಬ ಜ್ಞಾನ ಕ್ರಿಯಾಸಂಪನ್ನರು ಬೇಕಾಗಿದ್ದರು ಈ ಕಾಲಕ್ಕೆ. ಯಾವ ಧರ್ಮದಲ್ಲಿ ಗ್ಲಾನಿಯಾಗಿರುವದೋ ಅಲ್ಲಿ ಸಂಸ್ಥಾಪನೆಯು ಅಗತ್ಯ. ಪ್ರಜಾಪ್ರಮುಖನೆಂಬ ಬಿರುದು ತೊಟ್ಟ ಈ ಕಾಲದಲ್ಲಿ 'ಜನರೆಂದರೆ ಧನ' ಎಂಬ ಮನದಪ್ಪಿಂದುಕೊಳ್ಳುವ ಜನರ ಸಂಖ್ಯೆ ಹೆಚ್ಚು. ಅಂತೆಯೆ ಬಡವರೊಡನೆ ತಾದಾತ್ಮ್ಯವನ್ನು ಹೊಂದಿದ ವಿಭೂತಿಯ ಅಗತ್ಯವು ಈಗ ಇದ್ದಿತು. ಬಡವರ ಬಗ್ಗೆ ಸಾಮಾನ್ಯವಾಗಿ ಕಂಡುಬರುವ ವಿಷಮ ಮನಃಸ್ಥಿತಿಯಲ್ಲಿ ಸಾಮ್ಯವುಂಟಾಗಹತ್ತಿದರೆ, ಈ ವಿಭೂತಿಯ ಜನ್ಮದ ಸಾರ್ಥಕವಾಯಿತು.



॥ ಓಂ ಸ್ವಸ್ತಿ ॥

ಓಂನಲ್

# ಗುಂಪಿನ ಚಟುವಟಿಕೆಗಳು.

೧. **ಹುಬ್ಬಳ್ಳಿಯಲ್ಲಿ** ಗಣೇಶಚತುರ್ಥಿಯ ದಿನ ತೆರೆದ ಐತಿಹಾಸಿಕಪ್ರದರ್ಶನಕ್ಕೆ ಗುಂಪಿನವರ ಬಳಿ ಇದ್ದ ಹಳೇಯ ಚಿತ್ರಗಳಲ್ಲಿ ಕೆಲವನ್ನೂ ಹಳೆಯ ನಾಣ್ಯಗಳನ್ನೂ ಕಳಿಸಿತ್ತು.

೨. **ಬೆಂಗಳೂರಿನಲ್ಲಿ** ನಿಂತುಕೊಂಡ ಗೆ॥ ಕೃ. ಶ್ರೀ. ಬೆಟಗೇರಿಯವರು ಅಲ್ಲಿಯ ವಿಶ್ವಕರ್ನಾಟಕದಲ್ಲಿ ಬರೆದ **ಕನ್ನಡ ಭಾಗವತದ** ಮೇಲಣ ಲೇಖನದಿಂದ ಅದರ ಕರ್ತೃವಿನ ವಿಷಯವಾಗಿದ್ದ ತಪ್ಪುತಿಳುವಳಿಕೆಯು ದೂರವಾಗುವಂತಿದೆ.

೩. **ಕೊಪ್ಪಳದ** ಗಂಪಿನವರು ಗಣೇಶಚವತಿಮಾನವಮಿಗಳ ಉತ್ಸವವನ್ನು ಮಾಡಿದರು. ಗಣೇಶೋತ್ಸವಕ್ಕೆ ಗೆ॥ ಬೇಂದ್ರೆಯವರು ಹೋಗಿ ಬಂದರು. ಧಾರವಾಡದ ಮಾನವಮಿಯ ಉತ್ಸವಕ್ಕೆ ಕೊಪ್ಪಳದವರು ಚಿತ್ರಗಳನ್ನು ಕಳಿಸಿದ್ದರು.

೪. **ಹಲಸಂಗಿಯ** ಗೆ॥ ಚೆನ್ನಮಲ್ಲಪ್ಪ ಗಲಗಲಿಯವರು ಶಿವಾನುಭವದಲ್ಲಿ ಗೆಳೆಯರ ಹೂಲಿಯ ಪ್ರವಾಸವನ್ನು ಕುರಿತು ಬರೆದ ಹೂಲಿಯ ಪಂಚವಣಿಗೆಯ ಮಠ ಎಂಬ ಲೇಖನದಿಂದ ಎಷ್ಟೋ ಮಹತ್ತ್ವದ ಐತಿಹಾಸಿಕವಿಷಯಗಳು ತಿಳಿದು ಬರುವವು.

ಗೆ॥ ಚೆನ್ನಮಲ್ಲಪ್ಪನವರು ಬೆಳಗಾಂವಿ ಜಿಲ್ಹೆಯಲ್ಲಿನ **ಅರ್ಜುನವಾಡಕ್ಕೆ** ಪ್ರವಾಸವನ್ನು ಬಳೆಸಿ ಅಲ್ಲಿಯ ಶಿಲಾಶಾಸನಗಳನ್ನು ಓದಿ **ಬಸವೇಶ್ವರನ ವಂಶಜರು ಐದಾರು ತಲೆಗಳ ವರೆಗೂ ಇದ್ದರು** ಎಂದು ಸಿದ್ಧಪಡಿಸಿದರು.

ಗೆ॥ ರೇವಣಸಿದ್ದಪ್ಪ ಕಾಪಸೆಯವರು ೩ ಚಿತ್ರಗಳನ್ನು ಬರೆದು ಧಾರವಾಡದ ಮಾನವಮಿಯ ಪ್ರದರ್ಶನಕ್ಕೆ ಕಳಿಸಿದರು.

೫. **ಕಾರ್ಕಳದಲ್ಲಿ** ನೆಲೆಸಿ ಗೆ॥ ಮುಳಿಯ ಗೋವರ್ಧನರಾಯರು ಅಲ್ಲಿ ಸಂಪಾದಿಸುತ್ತಿರುವ ಶಕ್ತಿ ಎಂಬ ಮಾಸಪತ್ರಿಕೆಗೆ ಒಂದುವರ್ಷ ತುಂಬಿ, ಎರಡನೇಯ ವರ್ಷವು ಪ್ರಾರಂಭವಾಯಿತೆಂದು, ಹೇಳಲು ಅತ್ಯಾನಂದವಾಗುತ್ತಿದೆ.

೬. **ವಿಜಾಪುರದಲ್ಲಿ** ನಡೆದ ಮಾನವಮಿಯ ಉತ್ಸವದಲ್ಲಿ ಗೆ॥ ಕೊಣ್ಣೂರ ಹಣಮಂತರಾಯರು **ಆಧುನಿಕ ಕರ್ನಾಟಕಕವಿಗಳು** ಎಂಬ ವಿಷಯವನ್ನು ಕುರಿತು ಉಪನ್ಯಾಸವನ್ನು ಮಾಡಿದರು.

೭. **ಧಾರವಾಡದಲ್ಲಿ** ನಡೆದ ಮಾನವಮಿಯ ಉತ್ಸವದಲ್ಲಿ ಇಲ್ಲಿಯ ಗೆಳೆಯರು ಯಥಾಮತಿಯಥಾಶಕ್ತಿಭಾಗವನ್ನು ತೆಗೆದುಕೊಂಡರು. ಮಹಾನವಮಿಯ ದಿನ ಪ್ರದರ್ಶನವೊಂದನ್ನು ಏರ್ಪಡಿಸಿದರು. ೩—೪ ದಿನಗಳ ವರೆಗೆ ಅದು ತೆರೆಯಲ್ಪ

ಬ್ಬಿತ್ತು. ಉತ್ಸವದ ಪ್ರಾರಂಭದ ದಿನ ಗೆ॥ ಬೇಂದ್ರೆಯವರು ಪ್ರಾಸ್ತಾವಿಕ ಭಾಷಣವನ್ನು ಮಾಡಿ ಮಾನವಮಿಯ ಉತ್ಸವವು ರಾಷ್ಟ್ರೀಯ ಉತ್ಸವವು ಆಗಲು ಹೇಗೆ ಒಪ್ಪುತ್ತಿದೆ ಯೆಂಬುದನ್ನು ಕರ್ನಾಟಕದ ಐತಿಹಾಸಿಕಪರಂರೆಯಿಂದ ತೋರಿಸಿದರು. ಕೊನೆಯ ದಿನ ಗೆ॥ ಬೇಂದ್ರೆಯವರು ಉಪಸಂಹಾರಾತ್ಮಕ ಭಾಷಣವನ್ನು ಮಾಡಿದರು.

ವಿಜಾಪುರದವರ ಔತಣದ ಮೇರೆಗೆ ಗೆ॥ ಬೇಂದ್ರೆಯವರು ಹೋಗಿ **ಕನ್ನಡ ನಾಡು ದೇವಿಯರ ನಾಡು** ಎಂಬ ವಿಷಯವನ್ನೆತ್ತಿ ಮಾತನಾಡಿದರು. ಬೆಳಗಾಂವಿಯ ಉತ್ಸವಮಂಡಲದವರು ಗೆ॥ ಪೋತದಾರ ರಂಗರಾಯರನ್ನು ಕೇಳಿಕೊಂಡಮೇರೆಗೆ, ಗೆಳೆಯರಾದ ಸಾಲಿ ರಾಮಚಂದ್ರರಾಯರೂ, ಜೋಶಿ ಶಂಕರರಾಯರೂ, ದತ್ತಾತ್ರೇಯ ಬೇಂದ್ರೆಯವರೂ ಅಲ್ಲಿಗೆ ಹೋಗಿ ಕ್ರಮವಾಗಿ **ಕನ್ನಡನುಡಿಯ ಇಂಪು, ಭಾಷೆಯಲ್ಲಿ ಮತ್ತು ದೇಶಾಚಾರಗಳಲ್ಲಿ ಮಹಾರಾಷ್ಟ್ರಸಂಸ್ಕೃತಿಯ ಮೇಲಾದ ಕನ್ನಡಸಂಸ್ಕೃತಿಯ ಪರಿಣಾಮ, ಮತ್ತು ಕನ್ನಡಸಂಸ್ಕೃತಿ** ಎಂಬ ವಿಷಯಗಳಮೇಲೆ ಉಪನ್ಯಾಸಗಳನ್ನು ಕೊಟ್ಟರು.

ಬೆಂಗಳೂರಿನ **ಶ್ರೀ. ತ್ಯಾಗರಾಜ ಪರಮೇಶ್ವರಯ್ಯರ ಕೈಲಾಸಂ** ಅವರು ಧಾರವಾಡಕ್ಕೆ ಬಂದಿರುವರು. ಅವರೊಮ್ಮೆ ಗಂಪಿನ ಕೂಟದ ಮನೆಗೆ ಬಂದು ಗೆಳೆಯರಿಗೆ ಬೆಟ್ಟಿಕೊಟ್ಟು ಋಣಾನುಬಂಧವನ್ನು ಬೆಳಿಸಿ ಹೋದರು. ಆ ಪ್ರಸಂಗವು ಗೆಳೆಯರಿಗೆ ಚಿರಸಂಸ್ಮರಣೀಯವಾಗಿರುವುದು.

ಧಾರವಾಡದಲ್ಲಿ ನೆರೆದ **ಮುಂಬಯಿ ಇಲಾಖೆಯ ಶಿಕ್ಷಣಪರಿಷತ್ತಿನ** ಪ್ರದರ್ಶನಕ್ಕೆ ಕೆಲ ಹಳೆಯ ಚಿತ್ರಗಳನ್ನು ಗೆಳೆಯರು ಕೊಟ್ಟಿದ್ದರು.

ಲ. ಗೆ॥ ಕೃ. ಶ್ರೀ. ಬೆಟಗೇರಿ (ಆನಂದಕಂದ) ಅವರ **'ಮುದ್ದನ ಮಾತು'** ಮತ್ತು ಗೆ॥ ರಾಮಚಂದ್ರ ಅವರ **'ಭಾವದೇವಿ!'** ಎಂಬ ಎರಡು ಕವಿತೆಯ ಹೊತ್ತಿಗೆಗಳು ಈಸಲ ಗೆಳೆಯರ ಗುಂಪಿನಿಂದ ಪ್ರಕಟವಾಗಿವೆ.

---

## ಕರ್ನಾಟಕದಲ್ಲಿ ಜರುಗಿದ ರಾಷ್ಟ್ರೀಯಮಹೋತ್ಸವವು.

### ( ಮಾನವಮಿಯ ಮಹೋತ್ಸವವು )

"ಮಾನವಮಿ"ಯ ಮಹೋತ್ಸವವು ಈ ವರ್ಷ ಕರ್ನಾಟಕದಲ್ಲಿ ಮತ್ತೆ ರಾಷ್ಟ್ರೀಯ ಉತ್ಸವವನ್ನಾಗಿ ಮಾಡಲುಪಕ್ರಮಿಸಿದ್ದು ಕರ್ನಾಟಕದ

ಭಾಗ್ಯೋದಯವೇ ಸರಿ. ಕರ್ನಾಟಕ-ರಾಷ್ಟ್ರಪುರುಷನು ಎಚ್ಚತ್ತ ಶುಭಚಿಹ್ನವೇ ಇದು. ರಾಷ್ಟ್ರಪುರುಷನನ್ನು ಜಾಗೃತಗೊಳಿಸಿ, ಅವನನ್ನು ಸಂಸ್ಕೃತಿಯಿಂದ ಹುರಿಗೊಳಿಸಿ ಭಾರತಮಾತೆಯ ಸೇವೆಗೆ ಅಣಿಮಾಡಲು ಯತ್ನಿಸುವ ಪ್ರಯತ್ನಗಳಲ್ಲಿ ಈ ನಾಡಹಬ್ಬವು ಎಲ್ಲಕ್ಕೂ ಹೆಚ್ಚಿನದು. ಈ ಉತ್ಸವವನ್ನು (ನವರಾತ್ರಿಯನ್ನು) **ಕನ್ನಡ ನಾಡಿನ ನಾಡಹಬ್ಬವನ್ನು ಮಾಡಬೇಕೆಂಬ** ವಿಚಾರವು ಈಗ ಮೂರು ವರ್ಷಗಳ ಮೊದಲು ನಮ್ಮ ಗುಂಪಿನಲ್ಲಿ ತಲೆದೋರಿತು. ಕೂಡಲೇ ಗುಂಪಿನವರು ಉತ್ಸವಕ್ಕೆ ಮೊದಲುಮಾಡಿದರು. ಮೊದಲನೇ ವರ್ಷ ಕನ್ನಡನಾಡಿನ ಹಿರಿಯರೂ ಉಭಯಕವಿತಾವಿಶಾರದರೂ ಆದ ಕಾವ್ಯಾನಂದರಿಗೆ ಆಮಂತ್ರಣವು ಕಳಿಸಲ್ಪಟ್ಟಿತು. ಆಗ ಅವರು "ಅಲ್ಪಾರಂಭಃ ಕ್ಷೇಮಕರಃ" ಎಂಬ ಮಂತ್ರೋಪದೇಶವನ್ನು ಮಾಡಿ ಉತ್ಸವವು ಪ್ರತಿವರ್ಷ ಬಿದಿಗೆಯ ಚಂದ್ರಮನಂತೆ, ವೃದ್ಧಿಂಗತವಾಗಲೆಂದು ಆಶೀರ್ವದಿಸಿದರು. ಮೊದಲು ಮೂರು ವರ್ಷಗಳ ವರೆಗೆ ಕಡೆಯ ಮೂರು ದಿನಗಳ ಉತ್ಸವವನ್ನಷ್ಟೇ ಮಾಡಲುಪಕ್ರಮವಾಯಿತು. ಶ್ರೀ—ಭೂ—ಶಕ್ತಿ—ಸರಸ್ವತಿಗಳ ಉಪಾಸನೆಗೆ ಮೊದಲಾಯಿತು. ಅನೇಕ ನಿಬಂಧಗಳನ್ನು ಬರೆದು ಓದಲಾಯಿತು. ಈ ಬರಹಗಳು ಕರ್ಮವೀರ ಕರ್ನಾಟಕ ವೃತ್ತಗಳಲ್ಲಿ ಪ್ರಕಟವಾಗುತ್ತಿದ್ದವು. ಕೊನೆಯ ದಿನ ಅಂದರೆ ದಸರೆಯ ದಿವಸ (ಕರ್ನಾಟಕರಾಷ್ಟ್ರಧ್ವಜವನ್ನು)ಕನ್ನಡನಾಡಗುಡಿಯನ್ನು ಹಿಡಿದುಕೊಂಡು ಬನ್ನಿ ಮುಡಿಯುವದನ್ನು ತೀರಿಸಿಕೊಂಡು ಊರಿನಲ್ಲಿಯ ಹಿರಿಯರಿಗೆ ಬನ್ನಿಯನ್ನಿತ್ತು ಆಶೀರ್ವಾದ ಪಡೆಯುತ್ತಿದ್ದರು. ಹೀಗೆ ಮೂರುವರ್ಷ ನಡೆಯುತ್ತ ಬಂದ ಉತ್ಸವವನ್ನು ಈ ವರ್ಷ ಕರ್ನಾಟಕದ ಸೊತ್ತನ್ನಾಗಿ ಮಾಡಬೇಕೆಂಬ ಬುದ್ಧಿಯಿಂದ ಗುಂಪಿನ ಮುಖವಾದ ಸ್ವಧರ್ಮದ ಮೂಲಕ — **ಕರ್ನಾಟಕದಲ್ಲಿ ರಾಷ್ಟ್ರೀಯ ಉತ್ಸವವಾಗಲು ನವರಾತ್ರಿಯೇ** ಯೋಗ್ಯವಾಗಿದೆ ಎಂಬ ವಿಚಾರವನ್ನು ಸಕಾರಣವಾಗಿ ಜನರ ಎದುರಿಗೆ ಇಡಲ್ಪಟ್ಟಿತು. ಕೂಡಲೇ ಕರ್ನಾಟಕವೈಭವಕಾರರು ನಮ್ಮ ವಿಚಾರವೃಕ್ಷಕ್ಕೆ ನೀರೆರೆದರು. ಮುಂದಾಳಿನ ಸಂಪಾದಕರು ಅದಕ್ಕೆ ಚಿಗುತೊಡೆಯುವಂತೆ ಮಾಡಿದರು. **ಕರ್ನಾಟಕಧುರೀಣ, ಕಾನಡಾವೃತ್ತ, ಕೊಡಗು, ಕರ್ಮವೀರ, ಕರ್ನಾಟಕವೃತ್ತ, ವಿಶ್ವಕರ್ಣಾಟಕ, ಲೋಕಮತ ಕನ್ನಡಿಗ** ಮೊದಲಾದ ವೃತ್ತಪತ್ರಗಳೂ, **ಜಯಕರ್ನಾಟಕ, ಸುಭೋಧ, ಶಕ್ತಿ,** ಮೊದಲಾದ ಮಾಸಪತ್ರಿಕೆಗಳೂ ನಮ್ಮ ಮತವನ್ನೇ ಎತ್ತಿಹಿಡಿದವು. ಬಹಳ ಮಾತೇನು! ' ಹೀಗೆ ವೃತ್ತಪತ್ರಗಳಲ್ಲಿ ವಿಚಾರವಾಗಿ, ಕೊನೆಗೆ ಉತ್ಸವವನ್ನು ಮಾಡಲು ಎಲ್ಲ ವೃತ್ತಪತ್ರಿಕೆಗಳು ಉಪದೇಶಿಸಹತ್ತಿದವು. ಅನೇಕಕಡೆಗೆ ಸಭೆಗಳಾಗಿ; ಉತ್ಸವ ಕಮೀಟಿಗಳು ಏರ್ಪಟ್ಟವು. ಈ ವಿವಿಧಸಮರ್ಥನ ಕಡೆಗೆ ಕಿವಿಗೊಟ್ಟರೆ ಕನ್ನಡಿಗರು ಕೇವಲ ಅಂಧಾನುಕರಣಿಗಳಲ್ಲವೆಂದು ತಾನೇ ವ್ಯಕ್ತವಾಗುವದು. ವೃತ್ತಪತ್ರಿಕೆಗಳಲ್ಲಿಯ ಅಭಿಪ್ರಾಯಗಳಲ್ಲಿ ಕೆಲವನ್ನು ಇಲ್ಲಿ ಕೊಡುತ್ತೇವೆ.

ಕರ್ನಾಟಕದಲ್ಲಿ ನವರಾತ್ರಿಯು ಹಬ್ಬವು ರಾಷ್ಟ್ರೀಯ ಉತ್ಸವವಾಗಿ ಆಚರಿಸಲ್ಪಡುತ್ತಿತ್ತೆಂಬ ಮಾತು ನಿರ್ವಿವಾದವಾದದ್ದು. ಹಂಪೆಯ ಹಾಳು ಪಟ್ಟಣದಲ್ಲಿ ಮಹಾನವಮಿಯ ದಿಬ್ಬವು ಇನ್ನೂ ಕಾಣಿಸುತ್ತದೆ. ನಾವು ಮರೆತುಬಿಟ್ಟಂಥ ಆ ರಾಷ್ಟ್ರೀಯ ಉತ್ಸವವನ್ನು ಪುನಃ ಪ್ರಾರಂಭಿಸಬೇಕೆಂಬುದು ಯೋಗ್ಯವಾದದ್ದೆಂಬುದೇ ನಮ್ಮ ಮತ. ಈ ಹಬ್ಬವು ಹಳ್ಳಿಪಳ್ಳಿಗಳಲ್ಲಿ ಸಹ ಆಚರಿಸಲ್ಪಡುತ್ತದೆ. ಮತ್ತು ಸಾರ್ವಜನರಲ್ಲಿ ಈ ಹಬ್ಬವು ಒಳ್ಳೇ ಲೋಕಪ್ರಿಯವಾಗುತ್ತದೆ.

—ಕರ್ನಾಟಕವೈಭವ.

## ಕರ್ನಾಟಕದ ರಾಷ್ಟ್ರೀಯ ಉತ್ಸವ.

‘ಸ್ವಧರ್ಮ’ ಮಾಸಪತ್ರಿಕೆಯು ಕರ್ನಾಟಕದಲ್ಲಿ ನವರಾತ್ರಿಯನ್ನು ರಾಷ್ಟ್ರೀಯ ಉತ್ಸವವನ್ನಾಗಿ ನೆರವೇರಿಸಬೇಕೆಂದು ಸೂಚಿಸಿತು. ಇದನ್ನು ವಿಚಾರಿಸುವ ಕುರಿತು ವಿಜಾಪುರದಲ್ಲಿ ಶ್ರೀ. ಶ್ರೀನಿವಾಸರಾವ ಕೌಜಲಗಿಯವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಚರ್ಚೆ ನಡೆದು ವಿಜಯಾದಶಮಿಯನ್ನು ರಾಷ್ಟ್ರೀಯ ಉತ್ಸವವಾಗಿ ಆಚರಿಸಬೇಕೆಂದು ನಿರ್ಣಯಿಸಿ ಅದರಂತೆ ಆಚರಣೆಮಾಡಲು ಕಾರ್ಯಕ್ರಮವನ್ನು ತಯಾರಿಸತಕ್ಕವರಿದ್ದಾರೆ. ಸ್ವಧರ್ಮದ ಸೂಚನೆಯೂ ವಿಜಾಪೂರಸ್ಥರ ನಿರ್ಣಯವೂ ಯಥಾಯೋಗ್ಯವೆಂದು ನಾವು ಅದಕ್ಕೆ ತುಂಬಾ ಪುಷ್ಟಿಕೊಡುತ್ತೇವೆ. ನವರಾತ್ರಿಯು ಶಕ್ತಿಸಂಬಂಧವಾದ ಹಬ್ಬವು. ಭುವನೇಶ್ವರಿಯು ಕರ್ನಾಟಕದ ಕುಲದೇವತೆ. ಪಾಂಡವರು ವಿಜಯಾದಶಮಿಯ ಉತ್ಸವವನ್ನು ವಿರಾಟನಗರದಲ್ಲಿ ಅಂದರೆ ಕರ್ನಾಟಕದಲ್ಲೇ ನೆರವೇರಿಸಿದರು. ವಿಜಯನಗರದ ಅರಸರು ನವರಾತ್ರಿಯ ಹಬ್ಬಕ್ಕೆ ವಿಶೇಷ ಪ್ರಾಧಾನ್ಯಕೊಟ್ಟಿದ್ದರೆಂಬುದಕ್ಕೆ ವಿಜಯನಗರದಲ್ಲಿರುವ ದಸರಾಹಬ್ಬವೇ ಸಾಕ್ಷಿ. ಪರಮಪೂಜ್ಯ ಮೈಸೂರು ಮಹಾರಾಜರ ವಂಶಕ್ಕೂ ನವರಾತ್ರಿಯು ಪ್ರಧಾನ ಉತ್ಸವವಾಗಿದೆ. ಮಾತ್ರವಲ್ಲ, ಕರ್ನಾಟಕದ ಎಲ್ಲ ಭಾಗದಲ್ಲೂ ಸಾರ್ವತ್ರಿಕವಾಗಿ ದೇವಾಲಯಗಳಲ್ಲೂ ಮನೆಗಳಲ್ಲೂ ನವರಾತ್ರಿಯ ಉತ್ಸವವು ವಿಜೃಂಭಣೆಯಿಂದ ನೆರವೇರಿಸಲ್ಪಡುತ್ತಿರುವುದು. ಇದರ ಮೇಲಿಂದ ನವರಾತ್ರಿಯು ಕರ್ನಾಟಕದ ಸಂಸ್ಕೃತಿಗೆ ಅನುಗುಣವಾದುದೆಂದು ಸ್ಪಷ್ಟವಾಗುತ್ತದೆ. ಅದರಿಂದ ಈ ಉತ್ಸವವನ್ನು ರಾಷ್ಟ್ರೀಯವಾಗಿ ಮಾಡುವುದು ಸಮಂಜಸವು. ಕನ್ನಡಬಾಂಧವರು ಈ ಸೂಚನೆಯನ್ನು ಲಕ್ಷಿಸಿ ನವರಾತ್ರಿಯನ್ನು ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಜಾಗೃತಿಯುಂಟಾಗುವಂತೆ ರಾಷ್ಟ್ರೀಯ ಉತ್ಸವವನ್ನಾಗಿ ನೆರವೇರಿಸಬೇಕೆಂದು ನಮ್ಮ ಆಗ್ರಹದ ವಿಜ್ಞಾಪನೆಯಿದೆ.

—ಕಾನಡಾ ಧುರೀಣ.

ಹೀಗೆ ರಾಷ್ಟ್ರೀಯ ಉತ್ಸವದ ಕಲ್ಪನೆಯು ಭರದಿಂದ ಬೆಳೆಯುತ್ತಿರಲು ಇದರಲ್ಲಿ ಮಹಾರಾಷ್ಟ್ರದ ದ್ವೇಷದ ನಾತವು ಕರ್ನಾಟಕಭೂಷಣ ಕೌಜಲಗಿಯವರಿಗೆ ಹೇಗೆ ಬಡಿ

ಯಿರ್ಕೋ ದೇವರೇ ಬಲ್ಲ. ಕೂಡಲೇ ಭೂಷಣರು ಕೆರಳಿ, ಉತ್ಸವದ ಮೇಲೆಯೂ, ಕನ್ನಡಿಗರ ಮೇಲೆಯೂ ಹರಿಹಾಯ್ದರು. ಈ ಉತ್ಸವದಮೇಲೆ ಆಕ್ಷೇಪಗಳ ಮಳೆಗರೆದರು. ಇದನ್ನು ಆಧಾರವಾಗಿಟ್ಟುಕೊಂಡು ಕರ್ನಾಟಕ ಬೆಳವಣಿಗೆಯ ಉತ್ಕರ್ಷಗಳನ್ನು ಕಂಡು ಆಗದ ಕೆಲವು ಕುಲಗೆಟ್ಟ ಕನ್ನಡನರಿಗಳು ಕೂಗೆಬ್ಬಿಸಿದವು. ಅಲ್ಲದ ಸಲ್ಲದ, ತಿಳಿವಿಲ್ಲದ ಬಗೆಗಳು ಬೈಲಿಗೆ ಬರಹತ್ತಿದವು. ಕನ್ನಡಿಗರ ಚಳವಳಿಗಳಿಗೆ ದ್ವೇಷದ ಬಣ್ಣ ಬಳಿಯುವ ಕೇಸರಿಯ ಸುದ್ದಿಗಾರನು ಭೂಷಣರ ಭಾಷಣವನ್ನೇ ಎತ್ತಿಹಿಡಿದು ಕೇಸರಿಗೆ ಸುದ್ದಿ ಬರೆದನು. ಆದರೆ ಇದರಿಂದ ಕನ್ನಡಿಗರ ಅಭಿಮಾನದ ಜ್ಯೋತಿಯು, ಬೆಳಗಹತ್ತಿತು. ಇಡೀ ಕರ್ನಾಟಕದಲ್ಲಿ ಕರ್ನಾಟಕಾಭಿಮಾನವು—ಕರ್ನಾಟಕಸಂಸ್ಕೃತಿಯ ಅಭಿಮಾನವು ಉಕ್ಕೇರಿತು. ವೃತ್ತಪತ್ರಗಳಲ್ಲಿ ವಿಲಕ್ಷಣವಾದ ಹುಯಿಲೆದ್ದಿತು. ಭೂಷಣರಿಗೆ ಉತ್ತರಗಳಿನ್ನೀಯಹತ್ತಿದರು. ಇದು ಕನ್ನಡನಾಡಿನ ಜಾಗೃತಿಯಲಕ್ಷಣವಲ್ಲವೇ? ನೆಲಕ್ಕಿಳಿದ ಪುಟಚಂಡಿಗೆ, ಮತ್ತೆ ಪೆಟ್ಟು ಬಿದ್ದರೆ, ಅದು ಹೇಗೆ ಭರದಿಂದ ಮೇಲಕ್ಕೆ ಪುಟಿಯುವದೋ, ಚಿಗುರೊಡೆಯುತ್ತಿದ್ದ ದಳವನ್ನು ಚಿವುಟಿದರೆ, ಟಿಸಿಲೊಡೆದು ಅದು ಹೇಗೆ ಭರದಿಂದ ಬೆಳೆಯುವದೋ ಹಾಗೆ ಭೂಷಣರ ಭಾಷಣದಿಂದ ಕನ್ನಡಿಗರ ಸ್ವಾಭಿಮಾನವು ಉಕ್ಕೇರಿತು. ಪುಟಕ್ಕಿಕ್ಕಿದ ಹೊನ್ನು ಮತ್ತಿಷ್ಟು ಹೊಳೆಯುವಂತೆ, ರಾಷ್ಟ್ರೀಯ ಉತ್ಸವಕ್ಕೆ ಮತ್ತಿಷ್ಟು ಕಳೆಯೇರಿತು. ರಾಹುಗ್ರಸ್ತಚಂದ್ರಮನು ಮುಕ್ತನಾಗುತ್ತಲೆ ಪ್ರಕಾಶಮಾನನಾಗುವಂತೆ, ಕನ್ನಡಿಗರು ತೇಜೋವಂತರಾಗಿ ನವರಾತ್ರಿಯನ್ನು ರಾಷ್ಟ್ರೀಯ ಉತ್ಸವನನ್ನಾಗಿ ಮಾಡುವ ಪಣವನ್ನೇ ತೊಟ್ಟರು. ಕೌಜಲಗಿಯವರ ಹೃದಯವನ್ನು ಬಲ್ಲ ನಮಗಂತು ಅವರಲ್ಲಿ ಎಳ್ಳಷ್ಟೂ ದೋಷ ಕಾಣಿಸುವದಿಲ್ಲ. ಅವರಿಂದಲೆ ಉತ್ಸವಕ್ಕೆ ಇಷ್ಟು ಕಳೆಯೇರಿತು. ಇದಕ್ಕಾಗಿ ನಾವು ಅವರನ್ನು ಅಭಿನಂದಿಸುತ್ತೇವೆ. ಇದಲ್ಲದೇ ತಾವೇ ಮುಂದಾಗಿಬಂದು ಉತ್ಸವದಲ್ಲಿ ಭಾಗತೆಗೆದುಕೊಂಡದ್ದನ್ನು ನೋಡಿದರೆ, ಅವರ ಹೃದಯವು ಎಂಥದಿರುವದೆಂಬುದು ಎಲ್ಲರಿಗೂ ತಿಳಿಯುವದು.

ಕಳೆದುಹೋದ ಮನುಷ್ಯನು ಸಿಕ್ಕಕೂಡಲೇ ಅವರ ಬಳಗದವರು ಛೆ! ಇವನೇ ನಮ್ಮ ಹುಡುಗನೆಂದು ಚಟ್ಟನೆ ಗುರುತುಹಿಡಿದು ಆದರಿಸುವಂತೆ, ನವರಾತ್ರಿಯುತ್ಸವವು ನಮ್ಮ ರಾಷ್ಟ್ರೀಯ ಹಬ್ಬವೆಂದು ನೆನಪುಮಾಡಿದಕೂಡಲೇ ಎಲ್ಲೆಡೆಯಲ್ಲಿಯೂ ಹೌದು, ಹೌದು, ಇದೇ ನಮ್ಮ ಹಬ್ಬ, ಎಂದು ಎಲ್ಲರೂ ಕೈಕೊಂಡದ್ದರಲ್ಲಿ ಆಶ್ಚರ್ಯವೇನು? ಕರ್ನಾಟಕದಲ್ಲಿ ಈ ಮಹೋತ್ಸವವು ಒಳ್ಳೇ ಉತ್ಸಾಹದಿಂದ ನೆರವೇರಿಸಲ್ಪಟ್ಟಿತು. ಈ ಉತ್ಸವದ ರೀತಿಯನ್ನು ನೋಡಿದ ಕೂಡಲೆ ಎಂಥವನಾದರೂ ಇದು ರಾಷ್ಟ್ರೀಯ ಉತ್ಸವನೆಂದು ಚಟ್ಟನೆ ಒಡನುಡಿಯುಷ್ಟು ಒಡೆದು ಕಾಣುತ್ತಿತ್ತು. ಮೈಸೂರಿನ ರಾಜಮನ್ನಣೆಯ ಉತ್ಸವವಂತೂ ವರ್ಣಿಸುವದೇ ಅಸಾಧ್ಯ. ಉತ್ತರಕರ್ನಾಟಕದಲ್ಲಿ ಧಾರವಾಡದ ಮಹೋತ್ಸವವು ಸರ್ವಾಂಗಸುಂದರವಾಗಿ, ಇದು ರಾಷ್ಟ್ರೀಯವಾಗಬಹುದೇ ಎಂದು ವಿಚಾರಿಸುವವರ ಬಾಯಿಯನ್ನು ಕಟ್ಟಿಬಿಟ್ಟಿತು.

ಯುಧಿಷ್ಠಿರಸಿಂಹಾಸನರಕ್ಷಕರೂ

ಮಹಾನವಮಿಮಹೋತ್ಸವದ ಅಧಿಕೃತನಿರ್ವರ್ತಕರೂ ಆದ



ಶ್ರೀಮನ್ಮಹಿಶೂರ ಶ್ರೀಕೃಷ್ಣರಾಜ ಒಡೆಯರು.

## ವಿವಿಧಸ್ಥಲಗಳಲ್ಲಿ ಜರುಗಿದ ಮಹೋತ್ಸವ.

### ಧಾರವಾಡದ ಮಾನವಮಿ.

ಈ ಉತ್ಸವದಲ್ಲಿ ಬ್ರಾಹ್ಮಣರು, ಲಿಂಗವಂತರು, ಸಮಗಾರರು, ಕ್ರಿಶ್ಚನ್ನರು, ಮುಸಲ್ಮಾನರು, ಬಹಳವೇನು ಎಲ್ಲ ಜಾತಿಯವರು ಜಾತಿ ಮತ ಪಂಥಗಳನ್ನು ಮರೆತು ಈ ಭೂಶಕ್ತಿಯ ಆರಾಧನೆಯನ್ನು ಮಾಡಿದರು ವ್ಯಾಖ್ಯಾತರು ತಮ್ಮ ವ್ಯಾಖ್ಯಾನಗಳಿಂದಲೂ, ಕವಿಗಳು ತಮ್ಮ ಕವಿತಾಪ್ರತಿಭೆಯಿಂದಲೂ, ತತ್ವಜ್ಞಾನಿಗಳು ತಮ್ಮ ತತ್ವಪ್ರತಿಪಾದನೆಯಿಂದಲೂ, ಲಾವಣಿಕಾರರು ತಮ್ಮ ಲಾವಣಿಗಳಿಂದಲೂ, ಚಿಕ್ಕಮಕ್ಕಳು ತಮ್ಮ ಇಂಪಾದ ಮೇಳಗಳಿಂದಲೂ, ಗಾಯಕರು ತಮ್ಮ ಗಾಯನದಿಂದಲೂ, ಸಾಹಿತಿಗಳು ತಮ್ಮ ಸಾಹಿತ್ಯದಿಂದಲೂ, ಲಲಿತಕಲಾವಿಶಾರದರು ತಮ್ಮ ಲಲಿತಕಲೆಗಳ ಪ್ರದರ್ಶನದಿಂದಲೂ, ಬಾಹುಶಾಲಿಗಳು ತಮ್ಮ ಮಲ್ಲತನದಿಂದಲೂ ಶಕ್ತಿಮಾತೆಯ ಪೂಜೆಯನ್ನು ಮಾಡಿದರು. ಹೀಗೆ ರಾಷ್ಟ್ರದ ಎಲ್ಲ ಶಕ್ತಿಗಳನ್ನು ಬೆಳೆಸುವ ಈ ಉತ್ಸವವು ರಾಷ್ಟ್ರೀಯವಾಗದಿದ್ದರೆ ಹಾಗೆ ಆಗಬೇಕಾದ ಉತ್ಸವವಾದರೂ ಯಾವದದು? ದಸರೆಯ ದಿನ ಉತ್ಸವಕ್ಕೆ ಒಳ್ಳೇ ಉಕ್ಕೇರಿತು. ಊರಲ್ಲಿ ಎಲ್ಲ ಜಾತಿಯ ಜನರು ಒತ್ತಟ್ಟಿಗೆ ಕಲೆತು ಬನ್ನಿ ಮುಡಿಯುವ ಸಮಾರಂಭವಾಯಿತು. ಈ ಸಮಾರಂಭವನ್ನು ಕಂಡು ಕನ್ನಡನಾಡಿನ ನಾಗ್ರಿಗಳೂ ವೃದ್ಧರೂ ಆದ ಮುದುವೀಡು ಕೃಷ್ಣರಾಯರು ಆನಂದಪರವಶರಾಗಿ, ಧಾರವಾಡದಲ್ಲಿ ೩೦ ವರ್ಷದ ಪೂರ್ವದಲ್ಲಿ ಇಂಥ ಉತ್ಸವವಾಗುತ್ತಿತ್ತೆಂದೂ, ಅಲ್ಲಿಂದ ಮಾಯವಾಗಿ ಈವರ್ಷ ಅದಕ್ಕೆ ಪ್ರಾರಂಭವಾದದ್ದನ್ನು ಕಂಡು ನಾನು ಧನ್ಯನಾದೆನೆಂದೂ, ಕನ್ನಡತರುಣರು ಕನ್ನಡನಾಡನ್ನುದ್ಧರಿಸಲು ವೀಳ್ಯವನ್ನೆತ್ತಬೇಕೆಂದೂ, ಉತ್ಸವವು ಪ್ರತಿವರ್ಷ ವೃದ್ಧಿಂಗತವಾಗಲೆಂದೂ ಹರಿಸಿದರು. ಇವರ ಇದೊಂದೇ ಮಾತು ಉತ್ಸವದ ಸ್ವರೂಪವನ್ನು ಸ್ಪಷ್ಟಮಾಡುವದು. ಉತ್ತರಕರ್ನಾಟಕದ ಅರ್ವಾಚೀನ ಇತಿಹಾಸದಲ್ಲಿ ಈವರ್ಷದ ಉತ್ಸವವು ಒಳ್ಳೇ ಮಹತ್ವದ್ದೆಂದು ಹೇಳಬಹುದು.

ಈ ಉತ್ಸವವು ರಾಷ್ಟ್ರೀಯವಾಗಲು ಶಕ್ಯವಿಲ್ಲವೆನ್ನುವವರು ಬೇರೆಬೇರೆ ಊರುಗಳಲ್ಲಿ ಜರುಗಿದ ಉತ್ಸವಗಳ ಕಡೆಗೆ ದೃಷ್ಟಿಯನ್ನು ಚಲ್ಲಬೇಕೆಂದು ಬೇಡಿಕೊಳ್ಳುತ್ತೇವೆ.

### ಮೈಸೂರಲ್ಲಿ ದಸರೆಯ ಮಹೋತ್ಸವವು.

ಪ್ರತಿವರ್ಷದಂತೆ ಈ ಸಾರೆಯಾದರೂ ನವರಾತ್ರಿಯ ಉತ್ಸವವು ಒಳ್ಳೇ ಸಂಭ್ರಮದಿಂದ ಜರುಗಿತು. ಹೊರಗಿನಿಂದ ಸುಮಾರು ೩ ಲಕ್ಷ ಜನರು ಬಂದಿದ್ದರು. ಉಳಿದ ವೇಳೆಯಲ್ಲಿ ಶಾಂತಿಮಯವಾಗಿರುವ ಮೈಸೂರು ಜನಸಂಮರ್ದದಿಂದ ತುಂಬಿ ಹೋಗಿತ್ತು. ಪ್ರತಿದಿನ ಸಾಯಂಕಾಲ ಏಳು ಘಂಟೆಗೆ ದರ್ಬಾರವು ನೆರೆಯುತ್ತಿದ್ದು ಅದನ್ನು ನೋಡಲಿಕ್ಕೆ ಅಸಂಖ್ಯಜನರು ಅರಮನೆಯ ಎದುರಿನ ಪಟಾಂಗಣದಲ್ಲಿ ತಂಡ

ತಂಡವಾಗಿ ನಿಂತುಕೊಳ್ಳುತ್ತಿದ್ದರು. ಸ್ತ್ರೀಯರಿಗಾಗಿ ಏರ್ಪಡಿಸಲ್ಪಟ್ಟ ಗ್ಯಾಲರಿಗಳಲ್ಲಿ ಒಂದು ಇರುವೆಗೆ ಸಹ ಕಾಲಿಡಲಿಕ್ಕೆ ಸ್ಥಳವಿರಲಿಲ್ಲ. ಸಿಂಹಾಸನವನ್ನು ಪೂಜಿಸಿ ಅದನ್ನು ಮಹಾರಾಜರು ಏರಿದ ಮೇಲೆ ದರಬಾರಕ್ಕೆ ಬಂದ ಎಲ್ಲ ಜನರು ಮಹಾರಾಜರಿಗೆ ನಮನ ಮಾಡಿ ಕಾಣಿಕೆಯನ್ನು ಅರ್ಪಿಸಿದ ಮೇಲೆ ಮಹಾರಾಜರು ಎಲ್ಲರಿಗೂ ಪ್ರಸಾದ ವನ್ನು ಕೊಟ್ಟ ಬಳಿಕ ದರ್ಬಾರದ ಕೆಲಸವು ತೀರಿದಂತಾಯಿತು. ಅದೇ ಕಾಲಕ್ಕೆ ಅರಮ ನೆಯ ಬೈಲಿನಲ್ಲಿ ದರ್ಬಾರದ ಜನರಿಗೆ ಕಾಣುವಂತೆ ಪ್ರಸಿದ್ಧ ಮಲ್ಲರ ಕುಸ್ತಿಗಳು ನಡೆ ಯುತ್ತಿದ್ದವು. ದಸರೆಯ ದಿವಸ ಸಾಯಂಕಾಲ ೪ ಘಂಟೆಗೆ ವೈಭವದೊಡನೆ ಶ್ರೀಮ ನ್ಮಹಾರಾಜರು ಪಟ್ಟದಾನೆಯ ಅಂಬಾರಿಯಲ್ಲಿ ಕುಳಿತು ಬೆಂಗಳೂರಿನ ಕಡೆಗೆ ಸುಮಾರು ೨-೩ ಮೈಲಿನ ಮೇಲೆ ಇರುವ "ಮಹಾನವಮಿಯ ದಿಬ್ಬಕ್ಕೆ" ಶಮೀಪೂಜೆಗಾಗಿ ಹೋಗುವ ಕಾಲದಲ್ಲಿ ನೆರೆದ ಜನಸಮೂಹವನ್ನು ವರ್ಣಿಸುವದು ಅಸಾಧ್ಯ. ಆದರೆ ಇಷ್ಟು ಜನಸಮುದಾಯವು ಸೇರಿದ್ದರೂ ಪೋಲಿಸರು ನಮ್ಮಲ್ಲಿಯ ಹಾಗೆ ಜನರ ಮೈಮೇಲೆ ಏರಿಹೋಗದೆ ಎಲ್ಲರಿಗೂ ಶಾಂತರೀತಿಯಿಂದ ಹೇಳಿ ವ್ಯವಸ್ಥೆಯನ್ನು ಇಡು ತ್ತಿದ್ದರು.

ಚಾಮುಂಡೇಶ್ವರಿಯು ಶ್ರೀಮನ್ಮಹಾರಾಜರವರ ಕುಲದೇವತೆಯೇನೋ ನಿಜ. ಆದರೆ ಆ ದೇವತೆಗೆ ನಡೆದುಕೊಳ್ಳುವವರ ಸಂಖ್ಯೆಯಾದರೂ ಬಹಳ. ದುರ್ಗಾಷ್ಟಮಿ ದಿವಸ ಮುಂಜಾನೆಯಿಂದ ಸಂಜೆಯವರೆಗೆ ಒಂದೇಸವನೆ ಜನರು ಬೆಟ್ಟವನ್ನು ಹತ್ತು ವರು, ಇಳಿಯುವರು. ಎಲ್ಲ ಜಾತಿಗಳ ಜನರು—ವೀರಶೈವರು, ವೈಶ್ಯರು, ಶೂದ್ರರು, ಬ್ರಾಹ್ಮಣರು ಮೊದಲಾದ ಎಲ್ಲ ಪಂಗಡದ ಜನರು ಆ ದೇವಿಯ ಭಕ್ತರು. ಆ ದಿನ ದೇವಿಯ ದರ್ಶನವಾಗುವದು ಸಹ ದುಃಸಾಧ್ಯ.

ಈ ಸಾರೆ ಇದೇ ಸಮಯದಲ್ಲಿ ಅಖಿಲಭಾರತ ಔದ್ಯೋಗಿಕ ಹಾಗು ಒಕ್ಕಲತ ನದ ಪ್ರದರ್ಶನವೊಂದು ಏರ್ಪಡಿಸಲ್ಪಟ್ಟಿತ್ತು. ಅದು ೨೬ ನೇ ತಾರೀಖಿನ ದಿವಸ ಸಂಜೆಯ ೫ ಘಂಟೆಗೆ ಯುವರಾಜರಿಂದ ಪ್ರಾರಂಭಿಸಲ್ಪಟ್ಟಿತು. ಈ ಪ್ರದರ್ಶನಕ್ಕೆ ಇಂಗ್ಲಂಡ ಅಮೇರಿಕಾ ಮುಂತಾದ ದೇಶಗಳ ಯಂತ್ರಸಾಮಗ್ರಿಗಳು ಸಹ ಬಂದಿದ್ದವು. ಖಾದಿಗಾದರೂ ಸ್ಥಳವು ದೊರೆತಿತ್ತು. ಆಂಧ್ರದಿಂದ ಒಂದು, ಮೈಸೂರ ಸಹಕಾರ ಸಂಘದವರದೊಂದು, ಬೆಂಗಳೂರ ಮತ್ತು ಕರ್ನಾಟಕದ ಇತರ ಭಾಗಗಳೆಲ್ಲ ಕೂಡಿ ಒಂದು ಹೀಗೆ ಮೂರು ಖಾದಿಯಂಗಡಿಗಳು ಬಂದಿದ್ದವು. ಈ ಅಂಗಡಿಗಳಲ್ಲೆಲ್ಲ ಕೂಡಿ ಸುಮಾರು ೨ ಸಾವಿರ ರೂಪಾಯಿಗಳ ಖಾದಿಯು ಮಾರಾಟವಾಯಿತು. ಒಟ್ಟಿನ ಮೇಲೆ ಈ ಮಹೋತ್ಸವವು ಒಳ್ಳೇ ವಿಜೃಂಭಣೆಯಿಂದ ಜರುಗಿದ್ದನ್ನು ನೋಡಿದರೆ ಈ ನವರಾತ್ರಿಯ ಉತ್ಸವವು ಕರ್ನಾಟಕದ ರಾಷ್ಟ್ರೀಯ ಉತ್ಸವವಾಗಲಿಕ್ಕೆ ಅತ್ಯಂತ ಯೋಗ್ಯವಾಗಿರುವದೆಂದು ಧಾರಾಳವಾಗಿ ಹೇಳಬಹುದು.

—ಕರ್ಮವೀರ

## ಬೆಳಗಾಂವಿಯ ಮಹಾನವಮಿ.

ಕರ್ನಾಟಕ ವಾಚನಾಲಯದವರು ಈ ಹಬ್ಬವನ್ನು ರಾಷ್ಟ್ರೀಯದೃಷ್ಟಿಯಿಂದ ನೆರವೇರಿಸಿದರು. ಧಾರವಾಡದಿಂದ ಶ್ರೀ. ರಾಜಪುರೋಹಿತ, ಶ್ರೀ. ಜೋಶಿ, ಶ್ರೀ. ಮುದವೇಡಕರರು, ಪ್ರೊ. ಅಯ್ಯಂಗಾರರು, ಶ್ರೀ. ಸಾಲಿ ರಾಮರಾಯರು, ಶ್ರೀ. ಬೇಂದ್ರೆಯವರೇ ಮುಂತಾದ ವ್ಯಾಖ್ಯಾತರು ಬಂದಿದ್ದರು. ನವಮಿಯ ದಿವಸ ಶ್ರೀ. ಅಯ್ಯರ ಬಿ. ಎ. ಎಲ್. ಟಿ. ಯವರ 'ಕರ್ನಾಟಕಸಂಗೀತ'ದ ಕಾರ್ಯಕ್ರಮವಾಯಿತು. ವಿಜಯದಶಮಿ ದಿನ ಮುಂಜಾನೆ ಶ್ರೀ. ಹಳಕಟ್ಟಿ ಗುರುಬಸಪ್ಪನವರ ಅಧ್ಯಕ್ಷತೆಯಲ್ಲಿ ಉತ್ಸವದ ಸಮಾರೋಪವು ಸಾಂಗವಾಯಿತು.

—ಕರ್ಮವೀರ.

## ಕರ್ನಾಟಕರಾಷ್ಟ್ರೀಯಮಹೋತ್ಸವ.

ವಿಜಯಪುರದವರು ನವರಾತ್ರಿಯನ್ನು ರಾಷ್ಟ್ರೀಯ ಉತ್ಸವವಾಗಿ ನೆರವೇರಿಸಿದರು. ಶಿಪರ್ಡಹಾಲಿನಲ್ಲಿ ೯ ದಿನಗಳ ವರೆಗೆ ವ್ಯಾಖ್ಯಾನ ಮೇಳಗಳು ಪ್ರಹಸನಗಳು ಜರುಗಿದವು. ಬೇಂದ್ರೆ, ವೆಂಕಟರಾವ ಆಲೂರ, ಮೊದಲಾದವರ ಉಪನ್ಯಾಸಗಳಾದವು. ದಸರೆಯ ದಿನ ಊರವರೆಲ್ಲರೂ ಬನ್ನೀಮುಡಿಯುವ ಸಮಾರಂಭವನ್ನು ನೆರವೇರಿಸಿದ ನಂತರ ಉತ್ಸವವು ಸಮಾಪ್ತಿಯಾಯಿತು.

—ನವಕರ್ನಾಟಕ.

## ಕೊಡಗಿನ ಪತ್ರ.

( ನಮ್ಮ ಸ್ವಂತ ಸುದ್ದಿಗಾರರಿಂದ )

ಕರ್ಣಾಟಕದ ರಾಷ್ಟ್ರೀಯ ಹಬ್ಬವೆಂದೆನಿಸಿಕೊಂಡಿರುವ ಮಹಾನವಮಿಯು ಮಡಿಕೇರಿಯಲ್ಲಿ ಬಹುವಿಜೃಂಭಣೆಯಿಂದ ಆಚರಿಸಲ್ಪಟ್ಟಿತು. ಈ ಉತ್ಸವವು ಮೊದಲು ಕೊಡಗುರಾಜರ ಕಾಲದಿಂದ (ಅವರ ಆಶ್ರಯದಲ್ಲಿ) ನಡೆದುಬಂದುದರಿಂದಲೂ, ಈಗಿನ ಜನರಲ್ಲಿ ರಾಷ್ಟ್ರೀಯತ್ವವನ್ನು ಹುರಿದುಂಬಿಸಲು ತಕ್ಕ ಮುಂದಾಳುಗಳು ಮುಂದುವರಿದು ಬರದೇಯಿದ್ದುದರಿಂದಲೂ ರಾಷ್ಟ್ರೀಯತ್ವವು ಹೆಚ್ಚಾಗಿ ಕಂಡುಬರಲಿಲ್ಲ. ಆದರೆ ನಾಡು ಮುಂದುವರಿಯುತ್ತಿದೆ ಎಂಬ ಇನ್ನೊಂದು ಕುರುಹು ತೋರಿ ಬಂತು. ಹಿಂದೂದೇಶದಲ್ಲೆಲ್ಲಾ ಹರಡಿಕೊಂಡಿರುವ ಹಿಂದೂಮುಸಲ್ಮಾನರ ಗಾಳಿಯು ಕೊಡಗಿಗೂ ಬೀಸಿದುದು ಬಹಳ ಶೋಚನೀಯಕರ! ಎಂದಿನಂತೆ ಪೇಟೆಯೊಳಗೆ ದಶಮಿಯದಿನ ಮೆರವಣಿಗೆಯು ಹೋಗುತ್ತಿತ್ತು. ಮಸೀದಿಯ ಎದುರಿಗೆ ಹೋಗಲು ಮಹಮ್ಮದೀಯರು ವಾದ್ಯ, ಭಜನೆಮಾಡಿಕೊಂಡು ಹೋಗಲು ಬಿಡದೆ ತಡೆದರು. ಮುಂದೆ ಕೈ ಕೈ ಹತ್ತುವ ಸಂದರ್ಭ; ಒಂದೆರಡು ಕಲ್ಲುಗಳೂ ಬಿದ್ದವು. ಅಷ್ಟರಲ್ಲಿ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರೂ ಇತರರೂ ಬಂದು ಬಹಳ ಪ್ರಯತ್ನಪಟ್ಟು ಎರಡು ಕಡೆಯವರನ್ನೂ ಸಮಾಧಾನಪಡಿಸಿ

ಎಂದಿನಂತೆ ಭಜನೆಯನ್ನು ಮಾಡುತ್ತಾ ಮೆರವಣಿಗೆಯನ್ನು ಮುಂಮುವರಿಯುವಂತೆ ಮಾಡಿದರು.

## ಮದ್ರಾಸಿನಲ್ಲಿ ಉತ್ಸವ

ಮದ್ರಾಸು ಸುಗುಣವಿಲಾಸಸಭೆ ಎಂಬ ಲಲಿತಕಲಾಪ್ರೇಮಿಗಳ ಸಂಘದವರು **ನವರಾತ್ರಿಯ ಉತ್ಸವವನ್ನು** ಹತ್ತು ದಿನಗಳ ಪರ್ಯಂತರ ನಡೆಸಿ, ಪ್ರತಿ ಸಂಜೆಗೆ ಯಾವುದಾದರೊಂದು ನಾಟಕವನ್ನಾಡುವುದು ವಾಡಿಕೆಯಾಗಿದೆ. ಅದರಂತೆ ಈ ವರ್ಷ ನಡೆದ ಉತ್ಸವದಲ್ಲಿ ಕಳೆದ ಸಪ್ಟಂಬರು ೩೦ನೇ ತಾರೀಖಿನ ಸಾಯಂಕಾಲ ಸಭೆಯು ಕನ್ನಡ ಶಾಖೆಯ ಅಧಿಕಾರಿಗಳಾದ ಶ್ರೀಮಾನ್ ಬಿ. ರಾಮರಾವ್ ಎಂ. ಏ., ಎಲ್. ಎಲ್. ಬಿ. ಯವರ ಮೇಲ್ವಿಚಾರಕೆಗೊಳಪಟ್ಟು, ಹೊಸಪೇಟೆಯ ರಾವ್‌ಬಹದ್ದೂರ್ ಸಿ. ಹನುಮಂತಗೌಡರವರಿಂದ ನೂತನವಾಗಿ ಬರೆಯಲ್ಪಟ್ಟು ಪ್ರಚುರವಾಗಿರುವ 'ಪುರಂದರದಾಸ ಚರಿತ್ರೆ' ಎಂಬ ಭಕ್ತಿರಸಪರಿಪೂರ್ಣವಾದ ಸಾಂಘಿಕನಾಟಕವನ್ನು ಆಡಿ ತೋರಿಸಿದರು. ನಾಟಕಕ್ಕೆ ದಯಮಾಡಿಸಿದ ಬಹಳ ಮಂದಿ ಕನ್ನಡ ಸ್ತ್ರೀ ಪುರುಷರೂ ಇತರರೂ ಸಹ ನಾಟಕವನ್ನು ನೋಡಿ ಅತ್ಯಾನಂದಪಟ್ಟರು. ಮುಖ್ಯವಾಗಿ ಹೈಕೋರ್ಟು ವಕೀಲರು ಶ್ರೀ। ಎಚ್. ರಾಮರಾಯರವರ 'ತಿಮ್ಮಪ್ಪನಾಯಕ'ನ ಭೂಮಿಕೆಯೂ, ಗವರ್ನ್‌ಮೆಂಟ್ ಆಯುರ್ವೇದಿಕ್ ಕಾಲೇಜು ವಿದ್ಯಾರ್ಥಿ ಶ್ರೀ. ಬಿ. ವೆಂಕಟಕೃಷ್ಣ ಬಲ್ಲಾಳರ 'ಲಕ್ಷ್ಮೀಬಾಯಿ'ಯ ವೇಷವೂ, ಮದ್ರಾಸ್ ಬೇಂಕಿಗೆ ಸೇರಿದ ಶ್ರೀ। ಎಂ. ಎನ್. ಶ್ರೀನಿವಾಸಯ್ಯಂಗಾರ್ಯರವರ 'ದಾಸಯ್ಯ' ಮತ್ತು 'ಭಜನೆಯ ಮುಖಂಡ'ನ ಪಾತ್ರಗಳೂ ಉತ್ತಮೋತ್ತಮವಾಗಿ ನಟಿಸಲ್ಪಟ್ಟು ಸಮಸ್ತಪ್ರೇಕ್ಷಕರ ಶ್ಲಾಘನೆಯನ್ನು ಹೊಂದಿದುವು.

—ಕಂಠೀರವ.

ಇವಲ್ಲದೆ, ಸಂಕೇಶ್ವರ, ಸವದತ್ತಿ, ಬೈಲಹೊಂಗಲ, ಹುಕ್ಕೇರಿ, ಕೊಪ್ಪಳ, ಬಾಗಲಕೋಟ, ಶಿರಸಿ, ಸಿದ್ದಾಪೂರ, ಕುಮಠಾ, ಹಾವೇರಿ, ಮಡಿಕೇರಿ, ಮೊದಲಾದ ಅನೇಕ ಸ್ಥಳಗಳಲ್ಲಿ ಜರುಗಿಸಲ್ಪಟ್ಟಿತು. ಈ ಉತ್ಸವದಪರಿಣಾಮವು ಹೇಗಾಗಬಹುವದೆಂಬುದಕ್ಕೆ ಇನ್ನೊಂದು ಊರಿನ ಸುದ್ದಿಯನ್ನು ಇಲ್ಲಿ ಕೊಡುತ್ತೇವೆ.

## ನವರಾತ್ರಿಯ ಮಹೋತ್ಸವ.

ಗದಗ ತಾಲೂಕಿನ ಮುಲಸಮುದ್ರದಿಂದ ಶ್ರೀ ಆದಪ್ಪಗವಡಾ, ದೇ. ಪೋಲೀಸಪಾಟೀಲ ಇವರು ತಿಳಿಸುವದರ ಸಾರಾಂಶವೇನಂದರೆ—

ಆಶ್ವಿಜ ಶುದ್ಧ ೧ ರಿಂದ ವಿಜಯಾದಶಮಿಯ ವರೆಗೆ ಇಲ್ಲಿಯ ಶ್ರೀ ದುರ್ಗಾದೇವಿಯ ಮಂದಿರದಲ್ಲಿ ನಿತ್ಯಪೂಜಾ, ಭಜನೆ, ಪುರಾಣ, ಗಾಯನಗಳು ನೆರವೇರಿದ ಬಳಿಕ ವಿಜಯದಶಮಿ ದಿವಸ ಬಡಬಗ್ಗರಿಗೆ ಅನ್ನಸಂತರ್ಪಣೆಯಾಯಿತು. ದಸರೆಯ

ದಿನ ಸಾರ್ವಜನಿಕ ಸಭೆಯು ಶ್ರೀ ಮಾರ್ತಾಂಡ ಗವಡರ ಅಧ್ಯಕ್ಷತೆಯಲ್ಲಿ ಕೂಡಿತ್ತು. ಈ ಸಭೆಗೆ ಹಿಂದು, ಮುಸಲ್ಮಾನ, ಜೈನ, ಕ್ರಿಶ್ಚಿಯನ್ನ ಧರ್ಮಗಳ ಜನರೆಲ್ಲರೂ ಕೂಡಿದ್ದರು. ಶ್ರೀ ಆದಪ್ಪಗವಡಾ ಪೋಲೀಸ ಪಾಟೀಲ ಇವರು "ಅಹಿಂಸೆ"ಯ ಬಗ್ಗೆ ಹೇಳಿದರು. ಶ್ರೀ ಇಮಾಮ ಸಾಹೇಬ ಇವರು ನೈತಿಕ ವಿಷಯವಾಗಿ ಹೇಳಿದರು. ಬೆಟಗೇರಿ ಕ್ರಿಶ್ಚನ್ನ ಮಿಶನ್‌ದ ಧರ್ಮೋಪದೇಶಕರು ವಿದ್ಯಾ ಪ್ರಸಾರದ ಬಗ್ಗೆ ಭಾಷಣ ಮಾಡಿದರು.

ಕೆಳಗೆ ಬರೆದ ಠರಾವುಗಳು ಸರ್ವಾನುಮತದಿಂದ ಪಾಸಾದವು.

೧ ಕನ್ನಡ ನಾಡಿನವರೆಲ್ಲರೂ ನವರಾತ್ರಿಯ ಉತ್ಸವವನ್ನು ರಾಷ್ಟ್ರೀಯ ಉತ್ಸವವನ್ನಾಗಿ ಮಾಡಬೇಕು. ೨ ಕರ್ನಾಟಕ ಏಕೀಕರಣದ ಬಗ್ಗೆ ಪ್ರಯತ್ನಿಸಬೇಕು.

ಬಾಲ ಬಾಲಿಕೆಯರು ಶಾರದೆಯ ಉತ್ಸವವನ್ನು ವಿಜೃಂಭಣೆಯಿಂದ ಮಾಡಿದರು.

ಮೊದಲನೇ ವರ್ಷವೇ ಏನೂ ಪ್ರಯತ್ನವಿಲ್ಲದೆ ಜರುಗಿದ ಈ ಉತ್ಸವವನ್ನು ನೋಡಿದರೆ, ಕರ್ನಾಟಕದಲ್ಲಿ ರಾಷ್ಟ್ರೀಯ ಉತ್ಸವವಾಗಿ ಇದು ಬೇರೂರಲು ಸಂದೇಹವೇನೂ ನಮಗೆ ಕಾಣಿಸುವದಿಲ್ಲ. ಆಗುವದೋ ಇಲ್ಲವೋ ಎಂದು ವಿಚಾರಿಸುತ್ತ ಕೂಡುವವರಿಗೆ ಇದು ಒಳ್ಳೇ ಉತ್ತರವಾಗಿದೆ. ವಯೋವೃದ್ಧರೂ, ತಪೋನಿಷ್ಠರೂ ಆದ ವಿಶ್ವಾಮಿತ್ರರ (ಕಾವ್ಯಾನಂದರ) ಆಶೀರ್ವಾದವು ಫಲಿಸುವ ಚಿನ್ಹಗಳನ್ನು ಕಂಡು ನಮಗಂತೂ ಆನಂದವಾಗುತ್ತದೆ. ಉತ್ಸವವಾದ ಮೇಲೆ ಪ್ರಸಿದ್ಧವಾದ ವೃತ್ತಪತ್ರಿಕೆಗಳ ಅಭಿಪ್ರಾಯಗಳಲ್ಲಿ, ಒಂದನ್ನು ಕೊಟ್ಟು ಈ ಬರಹವನ್ನು ಮುಗಿಸುತ್ತೇನೆ.

**ಮಾನವಮಿಯ ಉತ್ಸವವು**—ಲೋಕಮಾನ್ಯರು ಶ್ರೀ. ಗಜಾನನೋತ್ಸವವನ್ನೂ ಶ್ರೀ. ಶಿವಾಜೀ ಮಹಾರಾಜರ ಉತ್ಸವವನ್ನೂ ಪ್ರಾರಂಭಿಸಿದಾಗ ಅವರು ಮುಸಲ್ಮಾನರ ವಿರುದ್ಧ ಮತ್ತು ಅವರ ಬಗ್ಗೆ ದ್ವೇಷ ಹುಟ್ಟಿಸುವ ಬುದ್ಧಿಯಿಂದ ಅವುಗಳನ್ನು ಆರಂಭಿಸಿದರೆಂಬ ದೋಷಾರೋಪವು ಅವರ ಮೇಲೆ ಹೊರಿಸಲ್ಪಟ್ಟಿತು. ಈ ಉತ್ಸವಗಳು ಪ್ರಾರಂಭಿಸಲ್ಪಟ್ಟಾಗ ಅದರಲ್ಲಿ ಸೇರಿದವರು ಅನೇಕರು ಆ ತರದ ದ್ವೇಷದಿಂದ ಪ್ರೇರಿತರಾಗಿರಬಹುದು. ಆದರೆ ಇದು ಉತ್ಸವಗಳ ಉದ್ದೇಶವಿತ್ತೆಂದು ಅಥವಾ ಎಲ್ಲರ ಮನಸ್ಸಿನಲ್ಲಿಯೂ ಆ ತರದ ದ್ವೇಷವು ಹುಟ್ಟಿತೆಂದು ಹೇಳುವದು ಅಸಮಂಜಸವೂ ಅಯುಕ್ತವೂ ಆಗುವದು. ಅದೇ ರೀತಿಯಾಗಿ ಈಗ ಕರ್ನಾಟಕದಲ್ಲಿ ಪ್ರಾರಂಭಿಸಲ್ಪಟ್ಟ ಮಾನವಮಿಯ ಉತ್ಸವವು ಯಾವದೇ ರೀತಿಯಿಂದ ಮರಾಠಿಗರ ದ್ವೇಷದಿಂದ ಅಥವಾ ಅವರನ್ನು ಹಣಿಯುವದಕ್ಕಾಗಿ ಪ್ರಾರಂಭಿಸಲ್ಪಟ್ಟದೆಯೆಂದು ಹೇಳುವದು ಅಷ್ಟೇ ಅಸಮಂಜಸವಾಗುವದೆಂಬಲ್ಲಿ ಯಾವ ಸಂಶಯವೂ ಇಲ್ಲ. ಮರಾಠಿಗರ ದ್ವೇಷ ಮಾಡಿದರೆ ಕನ್ನಡಿಗರ ಏಳ್ಗೆಯಾಗುವದೆಂದು ತಿಳಿಯುವ ತಿಳಿಗೇಡಿಗಳು ಕೆಲವರಿರಬಹುದು. ಆದರೆ ನವಕರ್ನಾಟಕವು, ತರುಣ ಕರ್ನಾಟಕವು, ತಾನು ಬೆಳೆಯಬೇಕು, ಶ್ರೇಷ್ಠವಾಗಬೇಕು, ಪೂರ್ವ ವೈಭವವನ್ನು ಪಡೆಯಬೇಕು, ಭಾರತಮಾತೆಯ ಸೇವೆ

ಯಲ್ಲಿ ತನ್ನ ಸರ್ವಸ್ವವನ್ನು ಅರ್ಪಿಸಬೇಕೆಂದು ಹಲಬುತ್ತಿರುವ ಹೊಸ ಕರ್ನಾಟಕವು ಈ ತರದ ಯಾವದೇ ಭಾವನೆಗಳಿಂದ ಪ್ರೇರಿತವಾಗಿಲ್ಲವೆಂಬದನ್ನು ನಾವು ಧಾರಾಳವಾಗಿ ಹೇಳಬಹುದು. ಶುದ್ಧ ಸಾತ್ವಿಕ ಮಹತ್ವಾಕಾಂಕ್ಷೆಯಿಂದ ಸ್ಫೂರ್ತಿಗೊಂಡು ಬಹು ಎಚ್ಚರದಿಂದ ತರುಣ ಕರ್ನಾಟಕವು ಹೆಜ್ಜೆ ಹಾಕುತ್ತಿರುವದು. ಆ ಹೆಜ್ಜೆ ಹಾಕುವ ದರಲ್ಲಿ ಈ ಮಾನವಮಿಯ ಉತ್ಸವವು ಒಂದು. ಈ ಉತ್ಸವದ ದ್ವಾರಾ ಅದೇ ಪ್ರಕಾರ ವಿದ್ಯಾರಣ್ಯ, ಹುಕ್ಕಬುಕ್ಕ, ಹರಿಹರ ಮುಂತಾದ ಮಹನೀಯರ ಉತ್ಸವಗಳ ದ್ವಾರಾ ಜನರಲ್ಲಿ ಅಡಗಿದ್ದ ಶಕ್ತಿಯನ್ನು, ಪರಂಪರಾಗತ ಸಂಸ್ಕಾರಗಳನ್ನು ಎಚ್ಚರಿಸಿ ಜಾಗೃತ ಮಾಡಬೇಕು. ತದ್ವಾರಾ ಈ ರಾಷ್ಟ್ರದ ಜೀವನ ಪ್ರವಾಹವನ್ನು ಪ್ರಗತಿಪಥದಲ್ಲಿ ಅಮೋಘವಾಗಿ ಹರಿಯಹಚ್ಚಬೇಕು ಎಂದು ಹಂಬಲಿಸುತ್ತಿರುವ ಹೊಸ ಕನ್ನಡಿಗರಿಗೆ ಹೆರವರನ್ನು ಹಳಿಯುವ ಉದ್ಯೋಗದಲ್ಲಿ ತೊಡಗಲಿಕ್ಕೆ ಅವಕಾಶವಿಲ್ಲ. ಎರಡನೇ ಯವರು ನಮ್ಮನ್ನು ಹಳಿದರೆ ಅದು ಅವರ ಹುಚ್ಚುತನವು. ನಮ್ಮ ಉದ್ದೇಶಗಳ ವಿಪ ರ್ಯಾಸವನ್ನು ಯಾರಾದರೂ ಮಾಡಿದರೆ ಅದು ಅವರ ತಪ್ಪು. ಅವುಗಳ ಕಡೆಗೆ ವಿಶೇಷ ಲಕ್ಷಗೊಡದೇ ಮುಂದಿನ ಉಚ್ಚ ಧ್ಯೇಯವನ್ನು ಲಕ್ಷಿಸಿ ಕರ್ನಾಟಕವು ಮುಂದ ಸಾಗುವದು ನಿಶ್ಚಯ.

ಕರ್ಮವೀರದಲ್ಲಿ ಶ್ರೀ. ರಂಗನಾಥ ದಿವಾಕರ ಅವರು ಬರೆದುದು.

ಜಯಭುವನೇಶ್ವರಿ ! ಜಯಭುವನೇಶ್ವರಿ !!

ಈ ಸಂಚಿಕೆಗೆ ಜಯಕರ್ನಾಟಕ—ಪ್ರಬುದ್ಧ ಕರ್ನಾಟಕ—ಸರಸ್ವತಿ ಕಾರ್ಯಾಲಯಗಳಿಂದ ಚಿತ್ರಗಳ ಪಡಿಯಚ್ಚುಗಳನ್ನು ಒದಗಿಸಿಕೊಟ್ಟು ಚೆಲುವಿಕೆಯನ್ನು ಹೆಚ್ಚಿಸಿದುದಕ್ಕಾಗಿ ಆ ಪತ್ರಿಕೆಗಳ ಸಂಪಾದಕರ ಮತ್ತು ಬಾಲಶಿಲ್ಪಿ ಶ್ರೀ. ಮಾಧವರಾಯರ ಉಪಕಾರವನ್ನು ಸ್ಮರಿಸುತ್ತೇವೆ. ಸುಹೃದಯರಾದ ವಾಚಕರು ನಮ್ಮ ಈ ವಿಲಂಬವನ್ನು ತಾಳಿಕೊಳ್ಳುವರೆಂದು ನಂಬಿ ಬಿನ್ನವಿಸುವೆವು.

ಗೆಳೆಯರ ಗುಂಪಿನ

# ಸ್ವಧರ್ಮ

॥ ತನ್ನ ತಾನರಿದಡೆ ತನ್ನರಿವೇ ಗುರು ॥

ಸಂಪುಟ ೪. ಪ್ರಭವ ಕಾರ್ತಿಕ ೧೮೪೯. ಸಂಚಿಕೆ ೮.



## ಪಂಪನ ಸಂಚಿಕೆ

ಸಂಪಾದಕರು — ಕೃಷ್ಣ ಶ್ರೀನಿವಾಸ ಬೆಟಗೇರಿ

ಹನುಮಂತ ಬಳವಂತ ಕೊಣ್ಣೂರ. ಬಿ.ಎ.

# ವಿಷಯ ಪರಿಚಯ

೧ ಪಂಪನ ನೆನೆದು:— ಪಂಪೋತ್ಸವದ ನಿಮಿತ್ತವಾಗಿ ಬರೆದ ಕವಿತೆ.

೨. ಸವಿ:— ಮೇಲಿನ ಕವಿತೆಯದು.

೩. ರವೀಂದ್ರಗುರುದೇವನ ಶ್ರೀವಚನಗಳು:— ಕವಿಪ್ರವರರಾದ ಶ್ರೀರವೀಂದ್ರನಾಥ ಠಾಕೂರರು ಪರದೇಶದ ಪ್ರವಾಸವನ್ನು ಮುಗಿಸಿ ಸದ್ಯಕ್ಕೆ ಶಾಂತಿನಿಕೇತನದಲ್ಲಿರುವರಷ್ಟೇ. ಅವರು ಅಲ್ಲಿಯ ಪ್ರಾರ್ಥನಾಮಂದಿರದಲ್ಲಿ ವಾರವಾರಕ್ಕೆ ಪ್ರವಚನಗಳನ್ನು ಕೊಡುವದುಂಟು. ವಿಶ್ವಭಾರತಿಯಲ್ಲಿದ್ದ ಗೆಳೆಯ ನರಗಲ್ಲ ಪ್ರಹ್ಲಾದ ಅವರು ಅವುಗಳಲ್ಲಿ ಎರಡನ್ನು ಕನ್ನಡಿಸಿ ಕಳಿಸಿರುವರು.

೪. ವಿಧವೆ:— ಹಿಂದೂಸಮಾಜದೊಳಗಿನ ವಿಧವೆಯರ ಗೋಳನ್ನು ನೋಡಿ ಕಸಿವಿಸಿಬಟ್ಟು ಬರೆದ ಒಂದು ಪ್ರಹಸನದ ಮೊದಲನೆಯ ಪ್ರವೇಶ. ಶ್ರೀ. ಪ್ರತಿಭಾಂಕುರರು ನಮ್ಮ ಕಡೆಗೆ ಕಳುಹಿರುವರು.

೫. ಗುರು ಅರವಿಂದರದೊಂದು ಮಹತ್ವದ ಓಲೆ.

೬. ಗಡಿಯಾರ:— ಶ್ರೀ. ಕಾವ್ಯಾನಂದರು ರಚಿಸಿದ ಒಂದು ವಿನೋದಪರ ಕವಿತೆ.

೭. ಗೆಳೆಯರ ಗುಂಪುಗಳು ಬೇಕು:— 'ಇಂದಿನ ಸಂದುಕಟ್ಟಿನಲ್ಲಿ ನಮ್ಮ ನಾಡಿನಲ್ಲಿ ಅಲ್ಲಲ್ಲಿ ಗೆಳೆಯರ ಗುಂಪುಗಳು ಉದಯಿಸಬೇಕಾಗಿವೆ. ಒಂದು ಗುಂಪಿನಿಂದ ಕೆಲಸವಾಗದು. ತಮ್ಮ ತಮ್ಮ ಧ್ಯೇಯಗಳಿಗೆ ರೂಪುಗೊಡುವ ಅನೇಕ ಗುಂಪುಗಳು ಬೇಕು' ಇಂತು ಮುಂತಾಗಿ ವಿವೇಚಿಸಿ, ಗುಂಪಿನ ಕಲ್ಪನೆಯ ತಾತ್ವಿಕ ಅಸ್ತಿವಾರವನ್ನು ಹೇಳಿದೆ.

೮. ಮೂಢವಿಚಾರ:— ಮರ್ಕಟವಿಚಾರದ ಲೇಖನಮಾಲಿಕೆಯು ಹಿಂದೆ ಸಂಚಿಕೆಯಿಂದ ಸಾಗಿ ಬಂದಿದೆ.

೯. ಬ್ರಹ್ಮಚರ್ಯ: ಹಿನೆಯ ಸಂಚಿಕೆಯಿಂದ ಮುಂದೆ ಸಾಗಿದೆ.

ಓಂ ನಲ್

॥ ಜಯಂ ಭದ್ರಂ ಶುಭಂ ಮಂಗಲಮ್ ॥

# ಸ್ವಧರ್ಮ


| ವರ್ಷ ೪ | ಶಕೆ ೧೮೪೯ ಪ್ರಭವ ಸಂ॥ ಕಾರ್ತಿಕ | ಅಂ.—೮ |
|---|---|---|


## ಪಂಪನ ನೆನೆದು

ಕ್ಷಾತ್ರಬಲವು ಮಸಗಿತಿಲ್ಲಿ ಬ್ರಾಹ್ಮತೇಜವೆಸಗಿತು ।
ಪಾತ್ರವರಿತು ಹಗೆಯು ಮರೆತು ಕೂಡಿ ಮೂಡಿ ಬೆಳಗಿತು ॥
ಚಾಪ-ಶಾಪ-ಸವ್ಯಸಾಚಿ! ಜಾಡ್ಯವನ್ನು ಅಳಿಸಿದೆ ।
ಭಾಪು ಕಲಿಯೆ! ಪೂತು ಕವಿಯೆ! ಸತ್ತ್ವವನ್ನು ಉಳಿಸಿದೆ ॥ ೧ ॥

ಪ್ರೇಯವೊಂದು ಪೀಠವಾಯ್ತು ಶ್ರೇಯವೆಂಬ ಅರಸಿಗೆ ।
ಶ್ರೇಯವೊಂದು ಛತ್ರದಂತೆ ಪ್ರೇಯವೆಂಬ ಸರಸಿಗೆ ॥
ಪ್ರೇಯವೇನು ಹಗೆಯು ಹಾದಿ? ಹಗೆಯುದೆಲ್ಲಿ ಶ್ರೇಯಕೆ? ।
ಹೇಯವಿನಿಸು ಇಲ್ಲ! ಸಕಲ ಭಾಗ್ಯಭೋಗ್ಯ ಪ್ರೇಯವೇ! ॥ ೨ ॥

ನಿಂತ ಎಡೆಗೆ ನಿಲ್ಲಳೆಂಬ ಚಂಚಲತ್ವದೋಷವು ।
ಅಂತು ಇಂತು ಅಲ್ಲದಂಥ ವಿದ್ಯೆಯೊಡನೆ ರೋಷವು ॥
ಎಂದು ಮಾಯವಾಯ್ತೊ ಏನೊ! ಯಾರು ಏನನಂದರು ।
ಒಂದುಗೂಡಿ ನಿಧಿಯು ರಾಣಿ ರಸವ ವಾಣಿ ನಿಂದರು ॥ ೩ ॥

ಬರೆವ ಕೆಯ್ಯು ಗಂಡುಗೆಡದೆ ಬೀರಕಡಗ ತೊಟ್ಟಿತು ।
ಹರಿವ ಕಾಲು ಇಲ್ಲಿ ನಿಂತೆ ಅಲ್ಲಿ ಮುಗಿಲ ಮೆಟ್ಟಿತು ॥
ಮೆರೆವ ವಿದ್ಯೆಗಿಲ್ಲಿ ಶ್ರೀಯು ಧಾರೆಯುನ್ನು ಎರೆಯಿತು ।
ಮರೆತು ವೈರವೆಲ್ಲ ಬೆರೆತು ಪಂಪನಲ್ಲಿ ಮೆರೆದಿತು ॥ ೪ ॥

ಚೆನ್ನು ನಡೆಯು; ಚೆನ್ನು ನುಡಿಯು; ಅಂತೆ ಚೆನ್ನು ಕೀರ್ತಿಯು ।
ಚೆನ್ನು ಹಾವ; ಚೆನ್ನು ಭಾವ; ಅಂತೆ ಚೆನ್ನು ಮೂರ್ತಿಯು ॥

ಚೆನ್ನು ಜಾಣು; ಚೆನ್ನು ಬೀರ; ಚೆನ್ನು ನಿನ್ನ ಭಕ್ತಿಯು ।
"ಚೆನ್ನರಿಂದ ಎಲ್ಲ ಚೆನ್ನು" ನನ್ನಿ ! ಚೆನ್ನು ಉಕ್ತಿಯು ॥ ೫ ॥

× × ×

ಒಬ್ಬ ಇಬ್ಬರೇನು ತ್ಯಾಗಿಭೋಗಿಯಾಗಿ ಹೋದರು? ।
ಒಬ್ಬಗಿಂತ ಒಬ್ಬ ಮೇಲು ವೀರಕವಿಗಳಾದರು! ॥
ಶ್ರೀ–ಸರಸ್ವತೀಯು ದುರ್ಗೆ ವರದ ಹಸ್ತವಿಟ್ಟರೆ ।
ಈ ಸಕಾಲದಲ್ಲಿ ಪಂಪನಂಥ ಜನರು ಹುಟ್ಟರೆ ? ॥ ೬ ॥

ಮುಗಿಲ ಬಸುರಿನಲ್ಲಿ ಈಗು ನಿಮ್ಮ ನುಡಿಯು ಅಡಗಿದೆ ।
ಭುಗಿಲು ಎಂದು ದಿಗಿಲು ಬಡಿಸಿ ಇಲ್ಲಿ ಏಳತೊಡಗಿದೆ ॥
ನುಡಿಯ ಗುಡಿಯ ಗರ್ಭದಲ್ಲಿ ತೇಜವೊಂದು ಹೊತ್ತಿತು ।
ಬಿಡದೆ ಹರೆಯುದದೆಯೊಳಿಂದು ತೇಜವನ್ನೆ ಬಿತ್ತಿತು ॥ ೭ ॥

"ಕಿವಿ ನಿಮಿರ್ಚಿ, ಕಾಲ ಕೆದರಿ, ಪ್ರಾಣ ಹೇಽಕರಿಪುದು ।
ಬವರವೆಲ್ಲಿ? ಏಕೆ ತಡವು? ರಥಿಯದಾರು ಅರಿಪುದು? ॥
ಬೀರಬೊಬ್ಬೆ, ವಿಜಯಯಾತ್ರೆ ಮತ್ತೆ ಮತ್ತೆ ಗುಡುಗಲಿ ॥
ವೀರಕೇತು ಮಿಳಿರಲಿಂದು ಪಾಪಿಹೃದಯ ನಡುಗಲಿ" ॥ ೮ ॥

ಎಂಬ ಸೊಲ್ಲು ಅಲ್ಲು–ಇಲ್ಲು ಮೊಳೆತು ಮೊಳಗಿ ಬರ್ಪುದು ।
ಕಾಂಬ ಕಣ್ಣುಗಳಿಗೆ ವೀರರೂಪು ಎಸೆದು ತೋರ್ಪುದು ॥
ಹರಕೆ ಹೊತ್ತ ದೃಶ್ಯವೊಂದು ಅರಳಿಸಿತ್ತು ಕಂಗಳಂ ।
ಇರಲಿ ಜಯಂ! ಭದ್ರಮಿರಲಿ! ಇರಲಿ ಶುಭಂ ! ಮಂಗಳಂ! ॥ ೯ ॥

× × ×

ಒದಗಲಿ ಭುವಿಯೊಳ್ಕವಿಯೊ– ।
ಳ್ಸದಮಲಕವಿಯೊಳ್ಸುಕೀರ್ತಿದುಂದುಭಿನಿನದಂ ॥
ಕದನದೊಳಂ ಸದನದೊಳಂ ।
ವದನದೊಳಂ ನಿನ್ನ ಕೀರ್ತಿ ಮೆರೆಯಲಿ ಸತತಂ ॥ ೧೦ ॥

—ಅಂಬಿಕಾತನಯದತ್ತ.

**ಕವಿ:—** ಪಂಪನ ವಾರ್ಷಿಕ ವಾಙ್ಮಯೋತ್ಸವ ನಿಮಿತ್ತವಾಗಿ ಬರೆದ, ಈ ಪದ್ಯಗಳ ಮೊದಲ ಐದು ನುಡಿಗಳಲ್ಲಿಯ ಮಾತುಗಳ ಔಚಿತ್ಯವು ತಿಳಿಯಬೇಕಾದರೆ, ಅವನ ಚರಿತೆಯ ಕೆಲವು ಅಂಶಗಳನ್ನು ತಿಳಿದುಕೊಳ್ಳುವದು ಅಗತ್ಯ. ಆದಿಪುರಾಣ ಮತ್ತು ವಿಕ್ರಮಾರ್ಜುನವಿಜಯ ಇವೆರಡು ಪಂಪನ ಕಾವ್ಯಗಳು. ಇವೆರಡರ ಮೊದಲ ಮತ್ತು ಕೊನೆಯ ಪದ್ಯಗಳಲ್ಲಿ ತನ್ನನ್ನೆ ಕುರಿತು ಕೆಲವು ಮಾತುಗಳನ್ನು ಪಂಪನೆ ಹೇಳಿಕೊಂಡಿದ್ದಾನೆ. ಪಂಪನ ತರುವಾಯ ಬಂದ ಬೇರೆ ಕವಿಗಳ ಹೇಳಿಕೆಯ ಮೇರೆಗೂ ಪಂಪನು ಹೇಳಿಕೊಂಡಿದ್ದು ಸತ್ಯವೆಂದೇ ಮನಗಾಣಿಕೆಯಾಗುವದು.

(೧) ಕ್ಷಾತ್ರಬಲಕ್ಕೂ ಬ್ರಾಹ್ಮತೇಜಕ್ಕೂ ಒಂದು ಬಗೆಯ ವಿರೋಧವಿದೆಯೆಂಬದನ್ನು ಎಲ್ಲರೂ ಬಲ್ಲರು. ಈ ವಿರೋಧವು ಪಂಪನಲ್ಲಿ ಕಂಡುಬರುವದಿಲ್ಲ. "ನಿಜಾಧಿನಾಥನಾಹವದೊಳರಾತಿ ನಾಯಕರ ಪಟ್ಟವೆ ಸಾರಿಸೆ ಸಂದ ಪೆಂಪು" ಎಂದೂ "ಏಂ ಕಲಿಯೋ! ಸತ್ಕವಿಯೋ!" (ಪ. ವಿ. ೧೪. ೫೦) ಎಂದೂ ತಾನೇ ಹೇಳಿರುವನು. ಇದೆ ಈ ಮಾತಿಗೆ ಸಾಕ್ಷಿ. (೧) ಪ್ರೇಯದ ಹಾದಿ ಪಶ್ಚಿಮದ ಕಡೆಗಾದರೆ, ಶ್ರೇಯದ ಹಾದಿ ಪೂರ್ವದಕಡೆಗೆ, ಎಂದು ತಿಳಿಯುವದುಂಟು. ಆದರೆ, ಈ ದಂಡನಾಯಕನಾದ ಕವಿಯು ತನ್ನ ಕಾವ್ಯದಿಂದ "ಲೌಕಿಕವನ್ನು ಬೆಳಗಿ"ಯು, ತನ್ನ ಕರ್ಮ ನಿರ್ಜರೆಯನ್ನು ಪಡೆಯಲು ಜಿನಾಗಮಾನ್ವಿತವಾದ ಆದಿಪುರಾಣದಲ್ಲಿ ಆದಿದೇವನ ಚರಿತವನ್ನು ತನ್ಮಯನಾಗಿ ಭಾವಿಸಿ ಹಾಡಿ, ಧರ್ಮಸಾಧನೆಯನ್ನೂ ಸಾಧಿಸಿಕೊಂಡಿರುವನು. ಅವನದೊಂದು ರಾಜರ್ಷಿಸದೃಶವಾದ ಜೀವನ. (೩) ಚಲುಕ್ಯರ ಅರಿಕೇಸರಿಯು, "ಪಿರಿದಪ್ಪ ಗೌರವದ ಮಹಿಮೆಯಿಂದ ಪಂಚರತ್ನಂಗಳನ್ನೂ ಲೆಕ್ಕಮಿಲ್ಲೆನಿಸಿ ಜೀವಧನಂಗಳನ್ನೂ ಧರ್ಮಪುರವೆಂಬ ಅಗ್ರಹಾರವನ್ನೂ" ಪಂಪನಿಗೆ ಕೊಟ್ಟನಂತೆ. ಅಂದಮೇಲೆ, "ಪ್ರಭೂತಸಹಜೇರ್ಷಯೋರಪಿಸರಸ್ವತೀಶ್ರೀಸ್ತ್ರಿಯೋಶ್ಚಿರಂ ಪ್ರಥಮ ಸಂಗಮೋ ಹರಿಗ ಭೂಪತೌ ದೃಶ್ಯತೇ" ಎಂದು ತನ್ನ ಆಶ್ರಯದಾತನಾದ ಅರಿಕೇಸರಿಯನ್ನು ಕುರಿತು ಆಡಿದ ಮಾತು ಇವನಿಗೂ ಸಮನ್ವಯಿಸುವವೆಂಬದರಲ್ಲಿ ಸಂದೇಹವಿಲ್ಲ. ಜ್ಞಾನ-ಧನ-ಸಂಪತ್ತಿಗಳೆರಡೂ ಇವನಿಗೆ ಒಲಿದಿದ್ದವು. (೪) ಲೇಖನಶಕ್ತಿಯುಳ್ಳವರು ತಮ್ಮಿಂದ ಪ್ರತಿಪಾದಿತವಾದ ಯೋಗ್ಯತತ್ವಗಳ ಪರಿಪಾಲನೆಗಾಗಿಯೂ ಪ್ರತಿಷ್ಠಾಪನೆಗಾಗಿಯೂ ಖಡ್ಗವನ್ನೆತ್ತಿ ಹೋರಾಡಲಾರರೆಂದು ನಮ್ಮ ತಿಳುವಳಿಕೆ. ವೀರ ನೆಪೋಲಿಯನ್ನನಿಗೆ ಜ್ಞಾನ ಕಡಮೆ; ಜಾಣ ನಾನಾಫಡನವೀಸನು ರಣಹೇಡಿ. ಹೀಗಾಗಿ ಲೆಕ್ಕಣಿಕೆಗೂ ಖಡ್ಗಕ್ಕೂ ಜಾತಿವೈರವೆಂದು ನಾವು ತಿಳಿಯುವೆವು. ಅದೇಪ್ರಕಾರ ವ್ಯವಹಾರದಲ್ಲಿ ಬೆರೆತವನು ಸುರಿತವನು ಶ್ರೇಯಸ್ಸಿನ ಮೆಟ್ಟಲನ್ನು ಮೆಟ್ಟಲರಿಯನು ಎಂದು ನಮ್ಮ ರೂಢ ಅಭಿಪ್ರಾಯ. ಅವೆರಡರಲ್ಲಿಯೂ ಭೂಮ್ಯಾಕಾಶಗಳಷ್ಟು ಅಂತರವಿರುವದರಿಂದ ಅವೆರಡೂ ಬಾಯ್ದೂಗಿಸಲರಿಯವೆಂದು ನಮ್ಮ ಭೀತಿ. ಎಲ್ಲಿಯಾದರೂ ಬಾಯಿ ಗಿಡಿಸಿದ್ದು ಕಂಡಬಂದರೆ ಕ್ಷಿತಿಜದ ಹತ್ತರಿನ ನೆಲಮುಗಿಲುಗಳ ಬಾಯ್ದೂಗಿದಂತೆ ಅದು ಒಂದು ನಮ್ಮ ದೃಷ್ಟಿದೋಷ;

ಭ್ರಮ. ಸರಸ್ವತಿಯು ನೆರವಿನಲ್ಲಿದ್ದವರಿಗೆ ಲಕ್ಷ್ಮಿ ಎರವಾಗುವಳೆಂದು-ನಮ್ಮದೊಂದು ಸನಾತನ ಸಿದ್ಧಾಂತ. ಆದರೆ, ಎಲ್ಲ ವಿರೋಧಗಳ ಪ್ರೀತಿಸಂಗಮವು ಪಂಪನ ಚರಿತೆಯಲ್ಲಿ ಕಂಡು ಬರುವದು. (೫) ಪಂಪನು 'ಅಪಗತಪಾಪನು;' 'ಹಿತಮಿತವಚನನು;' ಅಂತೆಯೇ ಅವನ ಕಾವ್ಯದುಂದುಭಿಯಲ್ಲಿ ಅವನ ಯಶೋದುಂದುಭಿಯು ನಿನದಿಸುತ್ತಲಿದೆ. ಪಂಪನು ನೀಟುಗಾರ. ತನ್ನ ವೇಷಭೂಷಣಗಳನ್ನೂ ತನ್ನ ಕುರುಳುಗಳನ್ನೂ ತನ್ನ ರಸಿಕತೆಯನ್ನೂ ತನ್ನ ಮೊಗದ ಚೆಲುವಿಕೆಯನ್ನೂ ಹೇಳಿಕೊಳ್ಳುವನು. ಅವನ ಕೃತಿಗಳಂತೆ ಅವನ ಆಕೃತಿಯೂ, ಕೀರ್ತಿಯಂತೆ ಮೂರ್ತಿಯೂ ಹೃದಯಂಗಮವಾಗಿತ್ತು. ಅಂತೂ ಪಂಪನು ಜ್ಞಾನದಿಂದಲೂ ವೀರ್ಯವತ್ತರವಾದ ಕರ್ಮದಿಂದಲೂ ಭಕ್ತಿಯಿಂದಲೂ ಚೆನ್ನನಾಗಿದ್ದನು. ಯಾವನು ತಾನೇ ಚೆನ್ನನೋ ಅವನದೆಲ್ಲವೂ ಚೆನ್ನು ಎಂಬದೇನು ಸೋಜಿಗವೇ!

(೬–೭) ಇಂತು ಸರ್ವಾಂಗದಲ್ಲಿ ಸಮಗ್ರಪರಿಪೂರ್ಣರಾದ ಪಂಪನಂಥ ಕವಿಗಳು ಅನೇಕರಾಗಿ ಹೋದರು. ವಿಜಯದಂಡನಾಥ, ನೃಪತುಂಗ, ನಾಗವರ್ಮ, ಬಸವ, ಚಿಕ್ಕದೇವರಾಯ, ಚಾವುಂಡರಾಯ ಇವರೇ ಮೊದಲಾದವರ ತಲೆಯಮೇಲೆ, 'ಆದಿಶಕ್ತಿ'ಯು ತನ್ನ ಮೂರು ರೂಪುಗಳಿಂದ ವರದ ಹಸ್ತಗಳನ್ನಿಟ್ಟಿದ್ದಳು. ಅವಳಿಂದು ಮತ್ತೆ ಒಲಿದರೆ–ನಾವು ಒಲಿಸಿಕೊಂಡರೆ, ಅಂಥ ಕಾಲ ಬರುವದರಲ್ಲಿ ಸಂದೇಹವಿಲ್ಲ. ಈ ವೀರಕವಿಗಳ ನುಡಿಯನ್ನೂ ಅವರ ಕಾವ್ಯಗಳಲ್ಲಿಯೂ ನಮ್ಮ ರಕ್ತದಲ್ಲಿಯೂ ಕರ್ನಾಟಕದ ವಾತಾವರಣದಲ್ಲಿಯೂ ಸಂಚರಿಸುತ್ತಲಿದೆ. (೮) ಈಗ ಉದಯೋನ್ಮುಖವಾಗಿ ತಲೆಯೆತ್ತುತ್ತಿರುವ ತರುಣರ ಪ್ರಾಣಗಳನ್ನು ಧರ್ಮಕ್ಷೇತ್ರಕುರುಕ್ಷೇತ್ರಾಭಿಮುಖವಾಗಿ ಪ್ರಚೋದಿಸುತ್ತಲಿದೆ. (೯) ಇಂಥ ಕಾಲವು ಎಂದು ಬರುವದೋ ಎಂದೆಣಿಸುತ್ತ ನಿರೀಕ್ಷಿಸುತ್ತಿರಲು ಈಗಿನ ಜಾಗೃತಿಯ ಕಾಲದಲ್ಲಿ ಆ ವೀರಯುಗದ ಮುನ್ನೆರಳು ಕಂಡು, 'ಸ್ವಸ್ತಿ' 'ಸ್ವಾಗತ' ವೆಂದು ಆ ಕಣಸನ್ನು ಅಭಿನಂದಿಸಿದ್ದಾಗಿದೆ.

(೧೦) ಪದದೊಳ್ ನೀನೆ ಬೆಡಂಗನೈ ; ಬಗೆಗಳೊಳ್ ನೀಂ ಸೀರನೈ ; ವಾಕ್ಯ ಸಂ–।
ಪದದೊಳ್ ನೀನೆ ವಿಳಾಸಿಯೈ ; ರಸಗಳೊಳ್ ನೀಂ ಚೆಲ್ವನೈ ; ಪಣ್ತ ಕ–॥
ಬ್ಬದಿನೋವೋ ಪೆರತೇನೊ ನೀನೆ ರಸಿಕರ್ಗಾರಾಧ್ಯನೈ ; ದುಂದುಭೀ–।
ಜದಿಗಂತಸ್ಥಿತಕೀರ್ತಿ ಪಂಪ ! ಕವಿಗಳ್ ನಿನ್ನಂತೆಯೇಂ ಚೆನ್ನರೇ ! ॥೧॥

ಎಂದು ಅವನ ಮಾತನ್ನೆ ಪಲ್ಲಟಸಿ ನಾವು ಅವನ ಬಗ್ಗೆ ಹೇಳಬಹುದು.

ವೃತ್ತವು ತೀರ ಹೊಸದೂ ಅಲ್ಲ; ಹಳೇಯದೂ ಅಲ್ಲ. ಇದರ ನಡಿಗೆಯ ಬೆಡಗು–ಛಂದವು–ಚಾಮರ ಪಂಚಚಾಮರಗಳಂತೆ. ಅವು ಗಣವೃತ್ತ; ಇದು ಮಾತ್ರಾವೃತ್ತ; ಇಷ್ಟೇ. ಪಂಪನು ಭಾರತದಲ್ಲಿ ಈಗ ರೂಢಿಯಲ್ಲಿಲ್ಲದ ಒಂದು ರಗಳೆಯನ್ನು ಯೋಜಿಸಿರುವನು. ಅದರ ಮೊದಲ ಅರ್ಧಭಾಗವೇ ಈ ಚೌಪದಿಯೊಳಗಿನ ಒಂದೊಂದೆ ಸಾಲು. ತರಂಗತರಂಗವಾಗಿ ಬರುವ ಇದರೊಳಗಿನ ಭಾವ–ವಿಚಾರ ಪದ್ಧತಿಗೆ ಈ ವೃತ್ತವು ಎಷ್ಟು ಅನುಕೂಲವೆಂಬುದು ಗಮಕಿಗಳಿಗೆ ಹೊಳೆಯದಿರದು.

---

# ರವೀಂದ್ರಗುರುದೇವನ ಶ್ರೀವಚನಗಳು

## (೧) ಪ್ರಾರ್ಥನೆ

( ಮಾರ್ಗಶೀರ್ಷ ಶು. ೭, ಶಕೆ, '೪೯, ಬುಧವಾರ )

"ಓಂ ಪಿತಾ ನೋಽಸಿ । ಪಿತಾನೋ ಬೋಧಿ ।
ನಮಸ್ತೇಽಸ್ತು । ಮಾಮಾ ಹಿಂಸೀಃ ।
ವಿಶ್ವಾನಿ ದೇವ ಸವಿತರ್ದುರಿತಾನಿ ಪರಾಸುವ । ಯದ್ಭದ್ರಂ ತಂ ನ ಆಸುವ ।
ನಮಃ ಸಂಭವಾಯ ಚ ಮಯೋಭವಾಯ ಚ ।
ನಮಃ ಶಂಕರಾಯ ಚ ಮಹಸ್ಕರಾಯ ಚ ।
ನಮಃ ಶಿವಾಯ ಚ ಶಿವತರಾಯ ಚ ।
ಓಂ ಶಾಂತಿಃ ಶಾಂತಿಃ ಶಾಂತಿ । ಹರಿಃ ಓಂ ॥ " *

ದೇವನೆ ! ನಮ್ಮ ತಾಯಿ ತಂದೆ ನೀನು; ಇದನ್ನೆ ನಮಗೆ ತಿಳಿಸು; ಇಗೋ ನಿನಗೆ ನಮಿಸುವೆವು; ಈ ನೋವು ನೀಗಲಿ, ಕೇಡುಗಳನ್ನೆಲ್ಲ ಕಡೆದೊಗೆ; ಪಾಡಾಪುದನ್ನು ನೀಡು; ನಿನ್ನ ನಲಿವಿಗೆ ನಮನವು; ನಿನ್ನ ಒಳ್ಪಿಗೆ ನಮನವು; ನಿನ್ನ ಪೇರ್ಮೆಗೆ ನಮನವು; ಶಿವನೆ ! ಶಿವತರನೆ ! ನಿನಗೆ ನಮ್ಮೀ ನಮನವಿರಲಿ. ಶಾಂತಿಯನ್ನು ಸುರಿಸಯ್ಯ ಶ್ರೀಹರಿಯೆ ! "

ಕೆಲವು ದಿನಗಳ ಹಿಂದೆ ನನ್ನೊಬ್ಬ ಗೆಳೆಯ ನನಗೊಂದು ಪತ್ರ ಬರೆದಿದ್ದ. 'ಪ್ರಾರ್ಥನೆ ಏಕೆ ಬೇಕು? ' ಎಂಬುದೇ ಆ ಪತ್ರದೊಳಗಿನ ಪ್ರಶ್ನೆಯಾಗಿತ್ತು. ಅಂದು ಅವನಿಗೆ ಹೇಳಿದುದನ್ನೇ ಇಂದೂ ಹೇಳುವೆ. 'ಪ್ರಾರ್ಥನೆಯಿಂದ ಸಂಸಾರದಲ್ಲಿ ಒಳಿತು ಉಂಟಾಗುವದೆ? ' ಎಂಬ ಮೂಲಮಾತನ್ನೆ ಅವನು ಕೇಳಿದ್ದ.

ಪ್ರಾರ್ಥನೆಯು ಇಚ್ಛೆಯ ಸಾಧನವು. ಈ ವಿಶ್ವಮಂಡಲದಲ್ಲಿ 'ಬೇಕು ಬೇಕೆಂಬುದು' ಪ್ರಾಣದ ಧರ್ಮವೇ ಆಗಿರುವದು. ಪ್ರಾರ್ಥನಾ ಮಂತ್ರದೊಳಗಿಂದ ಇಚ್ಛೆಯು ಭೇದಿಸಿ ಬರುವದು. ಪ್ರಾರ್ಥನೆಯ ಬಲದಿಂದ ಪ್ರಾಣವು ದೀನಾವಸ್ಥೆಯನ್ನು ತೊರೆದು ಕ್ರಮಕ್ರಮವಾಗಿ ಮಹತ್ತರವೂ ಬಲವತ್ತರವೂ ಆಗುವದು; 'ಇನ್ನೂ ಸಿಗುವದು, 'ಇನ್ನೂ ಸಿಗುವದು' ಎಂಬ ಕೂಗು ಅದರ ಶಕ್ತಿಯನ್ನು ಹೆಚ್ಚಿಸುವದು. ಹೀಗಾಗಿ ಕಡೆಗೆ ಸಮಸ್ತ ಸಂಪತ್ತೂ ಸಿಕ್ಕುವದು. ಅಂತೆಯೇ ಪ್ರಾರ್ಥನೆಯು ಆಕಾಂಕ್ಷೆಯ ಸಾಧನವು.

---

* ಶಾಂತಿನಿಕೇತನದಲ್ಲಿ ಬಾಲಕರು ದಿನಾಲು ಪ್ರಾತಃಸಂಧ್ಯೋಪಾಸನಾಸಮಯದಲ್ಲಿ ಪಠಿಸುವ ಮಂತ್ರವಿದು. ಗುರುದೇವನ ಪ್ರವಚನಗಳೂ ಇದರಿಂದಲೇ ಮೊದಲಾಗುವವು.

ಅನ್ನದ ಬಯಕೆ, ಬಟ್ಟೆಯ ಬಯಕೆ, ಹಣದ ಬಯಕೆ ಎಂಬಿವೇ ಹಲವೊಂದು ಬಯಕೆಗಳು ಬಾಳುವೆಯಲ್ಲಿ ಬರುವದುಂಟು; ಸ್ಥೂಲಪದಾರ್ಥಗಳೇನಾದರೂ ಆಶಿಸುವದಕ್ಕಿಂತ ಮೊದಲೇ ಸಿಕ್ಕುತ್ತವೆಯೇ ? ಹಾಗೆಯೆ ಪ್ರಾಣವು ಬಯಸುವ ಸೂಕ್ಷ್ಮ ಪದಾರ್ಥಗಳ ಬಗ್ಗೆಯೂ. ಅಂತೂ ಪ್ರಾಣದ ಬಯಕೆ ಆವಾಗಲೂ ಸಾಗಿಯೇ ಇರುವದು. ತಾಯಿಯ ಮೊಲೆವಾಲನ್ನು ಬಯಸಲು ಕೂಸಿಗಾರಾದರೂ ಕಲಿಸಿದರೇ !

ಮಾನವನ ಆಕಾಂಕ್ಷೆಗಳಿಗೂ ಒಂದು ಮಾರ್ಗವುಂಟು. ಇವನದು ಪಶುಪಕ್ಷಿಗಳ ಮಾರ್ಗವಲ್ಲ. ಗಿಡದೊಳಗಿರುವ ಹಕ್ಕಿಗೆ ಹಣ್ಣು ತಾನಾಗಿ ದೊರೆವುದು; ಅದನ್ನದು ಕಚ್ಚಿ ತಿನ್ನುವದು. ಮಾನವನ ಹಾದಿಯೋ ಬೇರೆ; ಸಾಧನೆಯಿಲ್ಲದೆ ಇವನಿಗೆ ಸಿದ್ಧಿಯಿಲ್ಲ. ಪಶುಗಳದು ದುರ್ಬಲ ಇಚ್ಛೆ; ಇವನದು ಸಬಲ ಇಚ್ಛೆ. ಇವನು ತನ್ನ ಶಕ್ತಿಯನ್ನು ವಿಶ್ವದ ಶಕ್ತಿಯೊಡನೆ ಒಂದು ಮಾಡಿದರೇನೇ ಇವನಿಗೇನಾದರೂ ಸಿಗುವದು.

ಪಶುಗಳಿಗೆ ತಿಳಿಯುವದೇ ತೀರಕಡಿಮೆ, ತಿಳಿಯುವದಾದರೂ ಅದಕ್ಕೆ ತಿಳಿಯದೇ ತಿಳಿಯುವದು. ಇದೇನು ತಿಳಿವೇ ? ಈ ತಿಳಿವಿನಲ್ಲಿ ಜೀವವಿಲ್ಲ. ಆದರೆ ಮಾನವನ ತಿಳಿವು ಸಜೀವವಾಗಿರುವದು. ಅವನು ತಿಳಿದು ತಿಳಕೊಳ್ಳುವನು.

ಮಾನವನಿಗೆ ಜ್ಞಾನವಾಗಬೇಕಾದರೆ ಅವನು ಸಂಧಾನ ಮಾಡಬೇಕು. ಅನುಸಂಧಾನ ಮಾಡಬೇಕು; ಸಿದ್ಧಿಯಾಗಬೇಕಾದರೆ, ಸಂಕಲ್ಪ ಮಾಡಬೇಕು, ಸಾಧನೆ ಮಾಡಬೇಕು. ಇದಕ್ಕೆಲ್ಲ ಪ್ರಾರ್ಥನೆಯು ಹಾದಿಯು. ಪ್ರಾರ್ಥನೆಯು ಸಜೀವ ಮನಸ್ಸಿನ ಧರ್ಮವು. ಜೋಗಸೆಯೊಡ್ಡಿ ಬೇಡಿ ತರುವ ತಿರುಕನ ಹಾದಿಯಿದಲ್ಲ; ತನ್ನ ಕರ್ಮಶಕ್ತಿಯನ್ನು ಉದ್ಧೃತಮಾಡಿ ಗಳಿಸಿ ತರುವ ಬಂಟನ ಹಾದಿಯಿದು.

ಪ್ರಾಣದ ಅಂತಃಪ್ರಾಂತದಲ್ಲಿ ಒಂದು ಗಭೀರ ಗಂಭೀರ ಪ್ರಾರ್ಥನೆ ನಡೆದಿರುವದು; ಆತ್ಮವು ಪರಿಪೂರ್ಣತೆಗಾಗಿ ಆಲ್ಪರಿಯುತ್ತಿರುವದು. ಯಾವದು ಇದೆಯೋ ಅದು ದೊರೆಯಲೇ ಬೇಕು; ಇದುವೆ ದೇವನ ದಯೆಯು. ವ್ಯಕ್ತಿಯು ತನ್ನ ಶಕ್ತಿಯನ್ನು ವಿಶ್ವಶಕ್ತಿಯೊಡನೆ ಸಂಯೋಜಿಸುವದೇ ಪ್ರಾರ್ಥನೆಯ ರಹಸ್ಯವು.

ಈ ಸಂಸಾರದಲ್ಲಿ ತಾಪಗಳುಂಟು, ಪಾಪಗಳುಂಟು. ಇವೆಲ್ಲಾ ಬಾಧೆಗಳೊಳಗಿಂದ ಬೇರೆಯಾಗಿ ತನ್ನ ಬಳಿಗೆ ಬರಬೇಕೆಂದೇ ದೇವನು ಇವುಗಳನ್ನುಂಟುಮಾಡಿರುವನು; ಇವನ್ನೆಲ್ಲಾ ಮೀರಿ ಅವನಲ್ಲಿ ಸೇರಬೇಕೆಂಬುದೇ ಆತನ ಬಯಕೆ.

ಈಶ್ವರನ ಮಂಗಲ ಇಚ್ಛೆಯೊಂದುಂಟು. ನಮ್ಮ ಇಚ್ಛೆಯನ್ನು ಪ್ರಾರ್ಥನೆಯಿಂದ ಮಂಗಲಮಾಡಿ ಆತನ ಆ ಮಂಗಲ ಇಚ್ಛೆಯಲ್ಲಿ ಕೂಡಿಸುವದೇ ಇಚ್ಛಾಯೋಗವು; ಆ ಮೇಲೆ ನಮ್ಮ ಪ್ರೇಮವನ್ನು ಪ್ರಾರ್ಥನೆಯಿಂದ ಪವಿತ್ರಮಾಡಿ ಆತನ ಪ್ರೇಮದಲ್ಲಿ ಕೂಡಿಸುವದೇ ಪ್ರೇಮಯೋಗವು. ಪ್ರೇಮದಲ್ಲಿಯೇ ಪ್ರೇಮದ ಉಗಮಸಂಗಮಗಳು;

ಪ್ರಾರ್ಥನೆಯು ಸತ್ಯಪ್ರಾರ್ಥನೆಯಾಗಲಿ. ದಿನದಿನವೂ ಪ್ರಾರ್ಥನೆಯೊಡನೆ ಸಾಧನೆಯೂ ಸಾಗಲಿ. ಇದೆಲ್ಲಾ ಏತಕ್ಕೆನ್ನುವಿರಾ ? ಪರಿಪೂರ್ಣತೆಗಾಗಿ. ಜಡವಿಶ್ವದ ಹೃದಯಭೇದಮಾಡಿ ಸ್ವಶಕ್ತಿಯನ್ನು ಉದ್ಘಾಟಿಸುವದೇ ಪ್ರಾರ್ಥನೆಯು. ಬಾಧೆಗಳನ್ನು ಮೀರಿ ನಿರ್ಮಲವಾಗಿ ನಿಸ್ಸೀಮ ಆನಂದಮಯವಾಗುವದೇ ಪ್ರಾರ್ಥನೆಯು. ಇದಕ್ಕಾಗಿ ವಿಶ್ವದ ಚರಿತ್ರೆಯಲ್ಲಿ ಎಷ್ಟು ತ್ಯಾಗಗಳಾಗಿವೆಯೆಂಬುದನ್ನು ನಾನು ಹೇಳಲೇ!

ಅನ್ನ ಕ್ಷೇತ್ರವಾದ ಮೇಲೆ . ಅಂತಃಕ್ಷೇತ್ರವುಂಟು. ಅಲ್ಲಿಯೂ ನಮ್ಮದೊಂದು ಅಪೇಕ್ಷೆಯುಂಟು. ಆ ಅಪೇಕ್ಷೆ ಅಮೃತದ ಅಪೇಕ್ಷೆಯಾಗಲಿ.

"ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂ ಗಮಯ
ಆವಿರಾವೀರ್ಮ ಏಧಿ ||

ರುದ್ರ ಯತ್ತೇ ದಕ್ಷಿಣಂ ಮುಖಂ ತೇನ ಮಾಂ ಪಾಹಿ ನಿತ್ಯಂ ||

ಓಂ ಶಾಂತಿಃ ಶಾಂತಿಃ ಶಾಂತಿಃ

ಹರಿಃ ಓಂ " *

[ ಕನಸಿನಿಂದ ನನಸಿಗೂ ಕತ್ತಲೆಯಿಂದ ಬೆಳಕಿಗೂ ನೋವಿನಿಂದ ನಲ್ಮೆಗೂ ಕರೆಕೊಂಡು ಹೋಗಯ್ಯ. ಬಾಳುವೆಯು ತೋರಿ ಬರಲಯ್ಯ. ನಿತ್ಯವೂ ನೀನೆ ನನ್ನ ಕಾವ ದೇವಾ ! ಶಾಂತಿಯು ಸುರಿಯಲಿ ಹರಿಯೆ. ಶಾಂತಿಯು ಸುರಿಯಲಿ. ]

---

## ೨. ಜೀವದೇವ ಸಹಯೋಗ

( ಕಾರ್ತಿಕ ಬ. ೧೪ ಶಕೆ ೪೩, ಬುಧವಾರ )

ವಿಶ್ವದ ದೈನಂದಿನ ಜೀವನದಲ್ಲಿ ಒಂದು ಕಲ್ಯಾಣಸೂತ್ರವುಂಟು. ನಮ್ಮ ಆಶ್ರಮದಲ್ಲಿ ದಿನಾಲು ಸೂರ್ಯೋದಯವಾಗುತ್ತಿರುವದು. ಇದೆಷ್ಟು ದಿನ ಇಲ್ಲಿ ಆಗುವದೊ ಅಲ್ಲಿಯವರೆಗೂ ಆಯುಷ್ಯವುಂಟು. ಶರದ್-ಗ್ರೀಷ್ಮಾದಿಗಳಲ್ಲಿ, ಚಳಿಗಾಲ-ಮಳೆಗಾಲಗಳಲ್ಲಿ ಸಕಲಕಾಲಗಳಲ್ಲಿಯೂ ಈ ಸೂರ್ಯೋದಯ ನಕ್ಷತ್ರೋದಯಾದಿಗಳು ಇಲ್ಲಿ ನಡೆದಿರುವವು. ಇವೆಲ್ಲಾ ನಮ್ಮ ಆಶ್ರಮಜೀವನದೊಡನೆ ಬೆರೆತು ಕರಗಿಕೊಂಡು ಒಂದಾಗಿ ಸಾಗಿವೆ.

---

* ಗುರುದೇವನು ಪ್ರವಚನಗಳನ್ನು ಮುಗಿಸುವ ಮುಂಚೆ ಪಠಿಸುವ ಮಂತ್ರ.

ಇವು ಬೇರೆ ಕಡೆಗೂ ಆಗುವವು. ಇಲ್ಲಿ ಇವುಗಳ ಅಸ್ತಿತ್ವದ ವೈಲಕ್ಷಣ್ಯವಾಗಲಿ ವೈಶಿಷ್ಟ್ಯವಾಗಲಿ ಏನು! ನಮ್ಮ ಹೃದಯದಲ್ಲಿ ಇವುಗಳ ಸಂಚಯದ ಅನುಭೂತಿ ಯಾಗುವದು. ನಾನು ಪರದೇಶದಲ್ಲಿದ್ದಾಗ ಅಲ್ಲಿಂದಲೇ ನನ್ನ ಚಿತ್ತ ಇಲ್ಲಿಗೆ ಹಾರಿ ಬರುವದು. ಈ ಆಶ್ರಮ ದೇವತೆಗೆ ದೇವನು ಹಾಕಿದ ಸೌಂದರ್ಯ ಮಾಲೆಯನ್ನು ನಾನು ಅಲ್ಲಿಂದಲೇ ನೋಡುತ್ತಿರುವೆ. ಅಲ್ಲಿ ಇಂಥ ಸೂರ್ಯೋದಯ ಚಂದ್ರೋದಯ ಗಳಿರದಿದ್ದರೂ ಇಲ್ಲಿಯವುಗಳೇ ನನಗಲ್ಲಿ ನಲಿವು ನೀಡುವವು. ಇವುಗಳಲ್ಲಿ ಒಂದು ಸೌಂದರ್ಯಸೂತ್ರವುಂಟು. ಇವು ನಮ್ಮ ಆಶ್ರಮವನ್ನೂ ಆಶ್ರಮವಾಸಿಗಳನ್ನೂ ಪೂರ್ಣಗೊಳಿಸುತ್ತಿವೆಯೆಂದು ನನಗೆ ನೆರೆನಂಬಿಗೆ.

ಇಲ್ಲಿಯ ಸೂರ್ಯ ಎಷ್ಟೊಂದು ಸೋಜಿಗವಾಗಿದ್ದಾನಲ್ಲ! ಇಲ್ಲಿಯ ಗಿಡಬಳ್ಳಿ ಗಳೊಡನೆಯೂ ಗುಡಿಸಲುಗಳೊಡನೆಯೂ ನೇಸರನ ಬೆಳಕು ಕೂಡಿ ಶಾಂತಿಯು ಒಡ ಮೂಡುತ್ತಿರುವದೆಂದು ನನಗನಿಸುವದು. ಇದು ಎಲ್ಲಾ ಬರೀ ಬಾಹ್ಯಸೃಷ್ಟಿಶಕ್ತಿಯ ಬೆಳಕಲ್ಲ. ಅಂತರ್ಗತ ಶಕ್ತಿಯ ಕುರುಹು ಇದು. ಈ ರಾತ್ರಿ, ಈ ಹಗಲು, ಈ ಚಿಕ್ಕೆ, ಈ ನೇಸರು ಇವೆಲ್ಲಾ ನಮ್ಮ ಕರ್ಮಗಳೊಡನೆ ಕೂಡಿ ಬೆಳಗುತ್ತವೆ.

ಪ್ರಜಾಪತಿಯು ಈ ಸೃಷ್ಟಿಯೊಡನೆ ಯಜ್ಞಸೃಷ್ಟಿಯನ್ನೂ ಉಂಟುಮಾಡಿರುವನು. ದೇವನೂ ಜೀವನೂ ಇಬ್ಬರೂ ಕಾರ್ಯನಡಿಸಿದ್ದಾರೆ. ಗೀತೆಯಲ್ಲಿ 'ಪರಸ್ಪರಂ ಭಾವ ಯಂತಃ' ಎಂದು ಹೇಳಿದೆ. ನಮ್ಮ ಸ್ವಾರ್ಥದ ಸಲುವಾಗಿ ನಾವು ಯಜ್ಞಮಾಡ ಬಾರದು. ದೇವತೆಗಳ ಸಹಯೋಗಿಗಳು ನಾವು. ದೇವತಾಕಾರ್ಯವೆಂದರೆ ಆನಂದ ಸೃಷ್ಟಿಕಾರ್ಯ. 'ನನ್ನೊಡನೆ ನೀನು ಕೆಲಸಮಾಡು' ಎಂದು ದೇವನು ನಮ್ಮನ್ನು ಕರೆ ಯುತ್ತಿದ್ದಾನೆ.

ಯಾವಾಗಲೂ ಸುಖದುಃಖಗಳನ್ನು ಏಕಾಂತವಾಗಿ ಅತಿಕ್ರಮಣಮಾಡಬೇಕು. ಅಂತೆಯೇ ಗೀತೆ ಹೇಳುವದು 'ಕರ್ಮಮಾಡು; ಕರ್ಮದ ಬಂಧಬೇಡ'ವೆಂದು. ಬಂಧ ನದ ಕ್ಷಯವಾಗಲಿ. ಕಾಮಕ್ರೋಧಾದಿಗಳೊಳಗಿಂದ ಪಾರಾಗುವದೆಂದರೆ ಆತನೊಡನೆ ಆತನ ಕರೆಯ ಪ್ರಕಾರ ಕಾರ್ಯಮಾಡುವದು. ಹೀಗೆ ಮಾಡಿ ದೇವತೆಗಳೊಡನೆ ನಾವು ಸಮ್ಮಿಲಿತರಾಗಬೇಕು. ಇದುವೆ ಜೀವದೇವ ಸಹಯೋಗ. ದೇವನ ಕರೆಯೇ ನಮ್ಮನ್ನು ಅವನಲ್ಲಿ ಕರೆದುಕೊಂಡು ಹೋಗುವದು. ಮಲೇರಿಯಕ್ಕೆ ಆಹಾರವಿಹಾರಾದಿಗಳು ಕಾರಣವಿದ್ದಂತೆ ಮನುಷ್ಯನ ದುಃಖಕ್ಕೆ ಯಜ್ಞವನ್ನೆಂದರೆ ಆತ್ಮದಾನವನ್ನು ಮಾಡದಿರು ವದೇ ಕಾರಣವು. ದೇವನೊಡನೆ ಮಿಲಿತರಾಗಬೇಕು. ಈ ಸಹಯೋಗಿತೆಯೇ ಗೀತೆಯ ಮೂಲ ಉಪದೇಶವು. ಸಮಾಜದೊಳಗಿನ ಹಳ್ಳಿಪಳ್ಳಿಗಳ ಕೆಲಸದ ರಹಸ್ಯವೂ ಇದ ರಲ್ಲಿದೆ.

ವಿಧಾತನ ಸಂಕಲ್ಪವನ್ನೆ ನಾವು ಸಾಂಗಗೊಳಿಸಬೇಕು. "ನನ್ನ ನಿನ್ನ ಕಾರ್ಯ ವಿರೋಧವಾದರೆ ಸಂಕಷ್ಟವೆಂದು ದೇವನ ಹೇಳಿಕೆ. 'ನನ್ನನ್ನು ನೀನು ಏನನ್ನಾದರೂ

ಕೇಳುವದಾದರೆ ನನಗೂ ನೀನು ಏನಾದರೂ ಕೊಡು,' ಎಂದು ದೇವನು ಕೇಳುವ. ನಮ್ಮ ಬುದ್ಧಿಯ ನಮ್ಮ ಶಕ್ತಿಯ ದಾನಮಾಡಬೇಕು ಅವನ ಅಡಿಯಲ್ಲಿ.

ಇತಿಹಾಸದ ಆಪತ್ಕಾಲದಲ್ಲಿ ಮಾನವನು ಇಂಥ ದಾನವನ್ನೆಷ್ಟೋ ಮಾಡಿದ್ದಾನೆ. ಅದೇ ಇಂದೂ ಆಗಲಿ. ಯಜ್ಞಮಾರ್ಗವೇ ಸಾಧನದ ಹಾದಿಯು; ನಮ್ಮ ಪ್ರತಿದಿನದ ಜೀವನವೂ ಜ್ಯೋತಿರ್ಮಯವಾಗಲಿ. ಇದುವೆ ನಮ್ಮ ಆಶ್ರಮದಲ್ಲುಂಟಾಗಲಿ. ಜೀವನದ ಈ ಆನಂದಕ್ಕೇನೂ ಯಾವ ಶಾಸ್ತ್ರಾದಿಗಳ ಆದೇಶವಾಗಲಿ, ಯಾವ ವೇದಾದಿಗಳ ಅಪ್ಪಣೆಯಾಗಲಿ ಬೇಕಿಲ್ಲ. ಆನಂದವು ಜೀವನದ ಧರ್ಮ.

ದೇವನೂ ತನ್ನನ್ನು ತ್ಯಾಗಮಾಡಿಕೊಂಡೇ ಆನಂದದೊಳಗಿಂದ ಸೃಷ್ಟಿಯನ್ನು ಉಂಟುಮಾಡಿದ. ನಾವೂ ಅವನ ಸಹಯೋಗಿಗಳಾಗಿ ಜೀವನವನ್ನು ಪೂರ್ಣಗೊಳಿಸೋಣ.

"ಅಸತೋ ಮಾಸದ್ಗಮಯ... ... ... ... ......ಆವಿರಾವೀರ್ಮ ಏಧಿ ॥

ಶ್ರೀಹರಿಃ ಓಂ"

---

# "ವಿಧವೆ"

(ಒಂದು ಸಾಮಾಜಿಕ ನಾಟಕ)

---

## ೧ನೇ ಪ್ರವೇಶ.

ಪಾತ್ರಗಳು :—ಕಲ್ಲ, ಮಲ್ಲ (ಇಬ್ಬರು ನಾವಲಿಗ ಸಂವಾದ)

ಮಲ್ಲ:—ಏನಲೆ ಕಲ್ಲಾ; ಆರತಾಸ ಹೊತ್ತು ಮಾರಾಕ ಬಂತು, ಈಗೆತ್ತ ಹೊಂಟೆ; ಯಾರ ಮನಿಗೆ?

ಕಲ್ಲ :—ಏನ ಮಾಡಲಿ ಬಾರಪಾ; ಆ ಹಾಳಮನೀ ಬಾಳಬಂಟನ ಸೊಸಿ ಬೋಳಿ ಆಗತಾಳಂತ; ಆಕಿನ್ನ ಚಂದಮಾಡಾಕ ಹೋಗಬೇಕಾಗೇತಿ. ಮುಂಜೇಲಿಂದ ಹಿಡದ ಮೂರ ನಾಕ ಸರತಿ ಎಡತಾಕಿದರೂ, ಒಂದಿಲ್ಲೊಂದು ಸುಳ್ಳುಹೇಳಿ ಕಳಿಸಿದ್ದಿನಿ. ಕಡೀಕ ಬಂಟನೇ ಬಂದ ಕುಂತಮ್ಯಾಗ ಮಾಡೂದೇನೈತಿ; ಬರತೇನಂತ ಹೇಳಿ ಕಳಿಸೇನ. ಅಂದಮೇಲ ಹೋಗಾಕ ಬೇಕಲ್ಲ!

ಮಲ್ಲ :—ನೋಡಲೇ ಕಲ್ಲಾ; ಹಾರೂರು ಒಳೇ ಶಾಣ್ಯಾರ ಶಾಣಾರ ಅಂತಾರು ಇದೇ ಏನ ಶ್ಯಾಣ್ಯಾತನ ? ಇದೊಂದ ಕೆಲಸ ಮಾತರ ಬಾಳ ಕೆಟ್ಟ ಮಾಡತಾರ ಹೌದಲ್ಲೊ ?

ಕಲ್ಲ :—ಅವರ ಮಾಡೂದೊತ್ತಟಗಿರಲಿ! ನಮಗೆಷ್ಟ ಪಾಪ. ಇವ ಯಾಕಾರೇ ಹುಟ್ಟಿದ್ವೇವಲೇ ಇಂತಾ ಕೆಟ್ಟಕೆಲಸಾ ಮಾಡಾಕ. ಈಗ ಹೋಗಬೇಕಾರ ಜೀವದಸುತ್ತ ಬಂದೈತಿ ನೀಯೇನಾರು ಹೋಕ್ಕೀ ಏನ!

ಮಲ್ಲ :—ಛೀ ಹೋಗೋ ನಿನ್ನ ಮುಂಜಾಳ ಹೋಗಲಿ! ನಾನು ಹೆಂಗ್ಸರ ದಗ ದಕ್ಕ ಎಂದೂ ಹೋಗಿಲ್ಲ ಮಾರಾಯಾ!

ಕಲ್ಲ :—ಬಿಡಪಾ ನನಗಂತೂ ಬಿಟ್ಟದ್ದಲ್ಲ; ಊರ ಬಂಟ. ಮೇಲಾಗಿ ಮೂರತಾ ಗೀರತಾ ಹೇಳತಾನ. ಆಯಾ ಅಳತೀ ಕೊಡತಾನ. ಅಂದ ಮ್ಯಾಗ ಹ್ಯಾಂಗ ಬಿಡತಿ? ಮದಲೀ ಹೆಣಗಳ್ಳಿನವ ನಾ, ಮರಾಮರಾ ಮರಗತೇನ; ಎಂತೆಂತಾ ಚಲುವ ಹೆಂಣಮೇ ಕ್ಕಳೋ ನಿನ, ನೋಡಿದರ ಚಂಗಳಿಕವ್ವನ ನೋಡಿದಂಗೇ. ಇಂತವರನ ಅವರಪ್ಪರ ಹಾರೂರು ಹಿಂದ ಮುಂದ ನೋಡದ ಕೆಡಿಸಿ ಕ್ಯಾರಮಾಡಿ ಬಿಡತಾರ. ಬುದ್ದೀ ಎಲ್ಲ ಟ್ಟಾರೋ ಏನೋ?

ಮಲ್ಲ :—ಅವರ ಶಾಸ್ತ್ರದಾಗ ಬರದ್ಹಾಂಗ ಮಾಡತಾರಪಾ. ಅವರಿಗೆ ಹೇಳವ ರಾರು. ಅವರ ಹೆಂಗ್ಸೂರು ಅವರ ಮಾತು. ಇದರಾಗ ಯಾರದೇನ ಹೋಕ್ಕತಿ. ಮತ್ತ್ವಟು ಮಾಡಿಕೋವಲ್ಲರು, ತಮ್ಮ ಹೆಂಗ್ಸೂರಿಗೆ ಸುಮಾರಾದರ ತಮಗ ಸುಮಾ ರಾದಾಂಗಾಲ್ಲಾ!

ಕಲ್ಲ :—ಚೀ ನಿನ! ಅವಕೆಲ್ಲೀ ಸುಮಾರಾ ಎಳೆ ಎಳೆ ಕಂದವ್ವಗೋಳನ ಮದಲ ಲಗ್ನಾ ಮಾಡಾಣಾ! ಅದ ಏನಾರ ಆಗಿ ಲಟಕ್ನೇ ಗಂಡ ಸತ್ತ್ಯಂದರ ಆ ಕಂದವ್ವ ನಮ್ಮ ಪಾಲಿಗೆ ಬಂತೇ. ನಮ್ಮ ಜಾತ್ಯಾಗ ಹೀಂಗ ಆದರ ಗೊತ್ತಿಗೆ ಮುಟ್ವಾಣ! ನಮ್ಮ ವರು ಶಾಣ್ಯಾರ, ಉಡಕಿ ಅಂತ ಮಾಡಿಕೊಂತಾರು ಕಾಗದ ಪತ್ರ ಅಂತ ಮಾಡಿ ಇಟ ಕೊಂತಾರು, ಅದೂ ಇಲ್ಲದಿದ್ರೆ ನೀನೂ ಒಂದ ಗಂಡ ಮಗಾ ಆಗಿ ಇರ ನಮ್ಮವ್ವಾ ಅಂತಹೇಳಿ ಮನ್ಯಾಗ ಇಟಗೊಂತಾರೇ ಹೊರತ ಕೂದಲ ಕೊಂಕಗೊಡೂದಿಲ್ಲ. ಇವ ರೇನೋ! ಕಟಕರ ಮನಿಗೆ ಆಕಳಾ ಕೊಲ್ಲಾಕ ಒೈದಾಂಗ ವ್ಯೆತಾರ. ಆಕಳಾ ಒಂದು ಸರತೀ ಸತ್ತಾರೇ ಸಾಯತತಿ. ಈ ಬಡ ಪರಾಣಿಗೋಳು ದರತಿಂಗಳಾ ತಲೀ ಹೊಡಸಿ ಗೋಬೇಕು? ಇದೇನೂ ಅವ ಸಾವೂತನಕಾ ಬಿಟ್ಟದ್ದಲ್ಲಪಾ ಮತ್ತ!

ಮಲ್ಲ :—ಕಲ್ಲಾ ಅವರ ಅಪ್ಪಾ ಅಂಣಗೋಳಿಗೆ ಕಷ್ಟ ಆಗಾಕಿಲ್ಲೇನಲೇ;

ಕಲ್ಲ :—ಅವರಿಗೆ ಕಷ್ಟ ಆಗೂದಿಲ್ಲಂತೇ ನಮ್ಮನ್ನ ಕಷ್ಟಕ್ಕರೂತಾರ!

ಮಲ್ಲ :—ಎಲೇ ಕಲ್ಲಾ ಹಂತಾ ಗಂಡ ಸತ್ತ ಹೆಣ್ಣ ಮಕ್ಕಳು ಹಾಂಗೇ ಇದ್ರ ಏನ ಆಕ್ಕೈತಂತಪಾ;

ಕಲ್ಲ :—ಏನಾಗೋದು, ಗಂಡಸತ್ತ ಹೆಂಗ್ಸೂರ ದರಒಂದ ಕೂದಲದ ನೀರ ಹನಿ ನೆಲದ ಮೇಲ ಬಿದ್ದಷ್ಟ ವರಸ ಆಕೀ ಗಂಡಾ ನರಕದಾಗ ಹೊಳ್ಯಾಡತಾನಂತ ಕದಕ ಕೂದಲಾ ತಗಸತಾರ.

ಮಲ್ಲ :—ಇದು ಹಾಂಗ ಇರಾಕಿಲ್ಲ! ಗಂಡ ಸತ್ತಾಕಿನ್ನ ಹೀಂಗ ಅನರೂಪಾ ಮಾಡಿ ಕೆಡಿಸಿಬಿಟ್ರೆ ಯಾರೂ ನೋಡಾಕಿಲ್ಲಂತ ಹೀಂಗ ಮಾಡತಿದ್ದಾರು. ಅನಾರುಂಡನ್ನ ಯಾರ ನೋಡಬೇಕು.

ಕಲ್ಲ :—ಅದ್ಯಾಕೋ ನಮ್ಮಪ್ಪಾ ಹಂತಾ ಅನಾರುಂಡಗೋಳಿಗೆ ತೆಕ್ಕಿಹಾವ್ರೂ ಹಂತಾ ಅನಾರುಂಡಗೋಳೇನ ಕಡಿಮಿ ಲೋಕದಾಗ. ನೋಡೂ ಹೀಂಗ ರೂಪಾ ಕೆಡಿಸಿದರ ಏನಾಗೂದು. ಒಳಗಿನ ಗುಣಾ ಏನಾರ ಬ್ಯಾರೆ ಆಕ್ಕೈತೇನ; ಕೆಟ್ಟಕೆಲಸಾ ಮಾಡವರು ಹ್ಯಾಂಗ ಇದ್ರೂ ಮಾಡೇಮಾಡತಾರು. ಚಲೋ ಇದ್ದವರು ಕೂದಲಾ ತಗಸದಿದ್ದರೂ ಇದ್ದಾಂಗ ಇದ್ದೇ ಇರತಾರು.

ಮಲ್ಲ :—ಈಗಂಕಾ ಹಾರೂರೊಳಗಿನ ಒಬ್ಬೊಬ್ಬ ಬೋಳೇರು ಹಾದರಕ ಬಸರಾಗಿ ಹಾದಿಗೊಂದ ಕೂಸ ಬೀದಿಗೊಂದ ಕೂಸ ಬಿಸಾಡಾಕ ಹತ್ಯಾರ. ಆದಕಂತೇ ಕೋತಂಬ್ರೀನಾತ ಹೋತು. ಹಿಂತಾಪರಿಂದ ಕೂಸಗೋಳನ ಕೊಂದ ಪಾಪಾಕಟಿಗೊಳ್ಳೂಕಿಂತಾ ಉಡಕೀ ಮಾಡಿಕೊಂಡು ಉಂಡತಿಂದ ಇರಬಾರದೇ.

ಕಲ್ಲ :—ಅವರು ಶೇಷ್ಟ ಜಾತ್ಯಾವರಪಾ. ತಮ್ಮ ಕುಲದಾಗ ಚೊಕ್ಕ ಮದವೀ ಮಾಡಿಕೊಂಡ ಬೀಜಾನೇ ಉಳೀಬೇಕಂತ ಉಡಕೀ ಪಡಕೀ ತೆಗದ ಹಾಕೀದಾರ ಅದ-ಅದ-ಬೇಸೇ ಸೈ.

ಮಲ್ಲ :—ಅದೆಂಗೋ; ಹೆಂಡರ ಸತ್ತವರು ಮಾತ್ರ ಪರತ ಲಗ್ನಾ ಮಾಡಿಕೋಬೇಕು; ಗಂಡ ಸತ್ತವರು ಹಾಂಗೇ ಇರಬೇಕಲ್ಲೇ. ಇದೆಲ್ಲೀ ನ್ಯಾಯಾ; ಅವರ ಉಡಕೀನೂ ಬೇಡಾ ಇವರ ಹೊಡಕಿನೂ ಬೇಡ. ಇರಲಿ ಇಬ್ಬರೂ ಹಾಂಗೇ.

ಕಲ್ಲ :—ನಿನ್ನ ಮರ್ಜೀನೋ? ಅವರ ಮರ್ಜೀನೋ? ಅವರು ಶಾಸ್ತ್ರಾ ನೋಡಿ ಮಾಡವರಪಾ. ನಿನ್ನಂಗ ಕಗ್ಗ ಮಾತಿನವರಲ್ಲ.

ಮಲ್ಲ :—ಶಾಸ್ತ್ರಾ ಬರಕೊಂಡವರು ಅವರೇ ಅಲ್ಲಾ; ಅದೇನ ಮುಗಲಿಂದ ಬಿದ್ದೈತೀ; ಇವರು ಹೆಂಗ ಹೆಂಗ ಸುದಾರಣಾ ಮಾಡಾಕ ಹೋಕ್ಕಾರ ಹಂಗಂಗ ಹೆಚ್ಚ ಕೆಟಗೊಂತ ಹೋಕ್ಕೈತೇ ಹೊರತು ಚಲೋ ಆಗೂದಿಲ್ಲ. ಅಲ್ಲಪಾ? ಗಂಡನ ಮೋರೀ ನೋಡಿದಟ್ಟೇತೆಪ್ಪ? ಆ ಹುಡಗೀ ಗಂಡಸತ್ತರ ಪಾಪ ಹಿಂದಮುಂದ ನೋಡದ ಹಿಡದ ತಲೀ ಬೋಳಿಸಿ ಸಾವೂತನಕಾ ಒಂದನ್ನೇ ಒದ್ದಾಡಿಸಬೇಕೂ? ಮತ್ತ ಜೋಡೀ ನೋಡಿ ಕೂಡಿಸಬಾರದೇನ? ಇವರು ಕೂಡಿಸದ ಬಿಟ್ಟೈಚಣಕ ಕೂಡವರು ಕೂಡೇ ಕೂಡತಾರಲ್ಲಾ ? ಹಾದರಕ ಬಸರಾಗಿ ಕೂಸಗೋಳ ಕೊಲಿ ಮಾಡೇ ಮಾಡತಾರಲ್ಲಾ ? ಇದರಕಿಂತಾ ಉಡಕೀನ್ಯಾಮಾ ಮಾಡಿ ಇಟಕೊಂಡ ಇದ್ದರಲ್ಲಾ? ಇದರಿಂದ ಹಾದರದ ಕೆಲಸ ಬಂದಾಗತೈತಿ ಕೂಸಗೋಳ ಕೊಲಿ ಬಿಡತೈತಿ ಹೆಣ್ಣಿಗೊಂದು ಗಂಡಾಗತೈತಿ ಗಂಡಿಗೊಂದು ಹೆಣ್ಣಾಗತೈತಿ ಆ ಹೆಂಣಿನ ರೂಪ ಕೆಡಿಸೂದು ಬಿಡತೈತಿ ಲೋಕದಾಗ ಹಾರೂರ ಜಾತಿ ಹೆಚ್ಚಾಗತೈತಿ ನೋಡು ಎಷ್ಟ ಲಾಬಾ!

ಕಲ್ಲ :—ಎಲೇ ನೀ ಹೇಳೂದಿದು ಪುಣೇದ ಕಡೆ ನಡೆದೈತಲ್ಲಾ; ಅದರ ಇದ ರಾಗ ಒಂದು ... ... ಆ ಗಂಡಸತ್ತ ಹೆಂಣು ಗಂಡನ ಕೂಡಿಸ್ಸುರು ಮಾತ್ರ ಅದನ್ನ ಮತ್ತ ಮಾಡಿ ಕೊಡಬಾರದ.

ಮಲ್ಲ :—ಮದಲಿನ ಗಂಡಗ ಹಡಿದಿದ್ರ ಬಿಡಲೆಪ್ಪಾ! ಹಡೀದ ಪಡೀದ ಹಾಂಗೇ ಇದ್ರ ಉಡಕೀ ಫಡಕೀ ಮಾಡಿಕೊಡಾಕ ಏನ ಹರಕತಿ.

ಕಲ್ಲ :—ಏನೂ ಹರಕತೀ ಇಲ್ಲಾ. ನಮ್ಮಂದ್ಯಾಗ ನೋಡ! ಹಂದೀ ಹಾಂಗ ಹಿಂದ ಒಂದ ಮುಂದ ವಂದ ಮಕ್ಕಳನ ಎಳಕೊಂತೇ ಇಂದೊಂದು ಉಡಕಿ ನಾಳೊಂದು ಬಿಡಕಿ ನಾಡದೊಂದು ಪಡಿಕಿ ಮಾಡಿಕೊಂಡು ಜಾತೀಯೆಲ್ಲಾ ಕೆಡಿಸಿ ಭೂಮಿಗೆ ಬಾರ ಆಗೂಹಂಗ ಮಕ್ಕಳನ ಹಡೂತಾರ. ಹೀಂಗ ಮಾಡಿ ಉಡಕೀ ಕಿಮ್ಮತ್ತ ಕಳದೂದಾರ. ಮಾಡಿದ ಮಾರಾಯಾ ಒಂದ ಇಚಾರ ಇಟ್ಟ ಮಾಡಿದರ, ಮಾಡಿಕೊಳ್ಳುವ ಮಾರಾಯರು ಇಚಾರ ಬಿಟ್ಟೇ ನಡೂತಾರು, ಎಲ್ಲಾ ಜಾತ್ಯಾಗೂ ಒಂದೊಂದು ಕೊಂಕು ಇದ್ದದ್ದೇ. ಅದನ್ನ ತಗೊಂಡು ಮಾಡೂದೇನ ಬಿಡ! ಈಗ ಬಂದದ್ದನೋಡ!

ಮಲ್ಲ :—ಈಗ ನೋಡೂದೇನು? ನಮ್ಮ ಉದ್ದೇಗಾ ಬಾಳಬಿಗೀ ಸೈ!

ಕಲ್ಲ :—ಕೇಳತೀ ಏನ, ಹರೇದ ಹೆಂಣಮಕ್ಕಳ ಮದಲೇ ಮೇಲಾಗಿ ಬಿಸಲಗಾಳಿ ಬಡೀದವರು ಚಲವಿಕಿ ಅಂಕಾ ನೋಡೂದೇನೈತಿ ರತಿದೇವೀ! ಏನತುಟ! ಏನ ಗಲ್ಲ! ಏನಕಂಣ; ಏನಮೂಗ! ಏನ ವೈನಾಟ! ನೋಡಪಾ! ಇದರಿಗೆ ಬಂದ ಕುಂತಗಳಿಗ್ಗೆ ದಿಂಗ ಬಡದಂಗ ಆಗಿ ಗಪ್ಪನೇ ಕಂಣೀ ಮುಚ್ಚಿಬಿಡತಾವ ಪಾಪ! ಮರಾ ಮರಾ ಮರೆಗಿಕೊಂತ ಬಂದ ಇದರಿಗೆ ಕುಂಡರತಾವ ಅದರಾಗ ನಾಚಿಕೆ ಬೇರೆ! ಇಂತಾದರಾಗ ಯಾವನಾರ ಕಚ್ಚಿಹರಕ ಸೂಳೇಮಗಾ ಇದ್ದರ ಏನ ಮಾಡಬೇಕ! ಹೇಳೆನಂದರ ಒಂದಗೋರ! ಬಿಟ್ಟೇನಂದ್ರ ಒಂದಗೋರ! ಹೀಂಗಾಗಿ ಒಳಗಿಂದೊಳಗೇ ಸುಟ್ಟ ಸುಟ್ಟ ಸುಂಣ ಆಗತಾವು ನಮ್ಮವ್ವಗೋಳು ಹಃ ಹಃ ಹಃ (ಅಳುವನು.)

ಮಲ್ಲ :—ಎಲೇ ಕಲ್ಲಾ ನಾವೇ ನಾಕ ಮಂದಿ ಕೂಡಿ ಸರಕಾರಕ ತಿಳಿಸಿದರ ಹೆಂಗ ಆದೀತಾ. ಈ ಮಾತಾ?

ಕಲ್ಲ :—ಸರಕಾರ ಏನ ಮಾಡತೈತಪಾ? ಅವರ ದರ್ಮದಾಗ ನಾವ ಕೈ ಹಾಕೂದಿಲ್ಲಾ ಅಂತ ಸೊಪ್ಪ ಹೇಳಿ ಬಿಡತಾರ ಮುಂದ.

ಮಲ್ಲ :—ಅದ್ಯಾಕೋ ನಿನ! ಹಿಂದಕ ಇದೇ ಹಾರೂರು ಗಂಡಸತ್ತ ಹೆಂಗ್ಸೂರನ ತಮ್ಮ ಜ್ಯಾತ್ಯಾಗ ಗಂಡನ ಹೆಣದ ಕೂಡ ಕಟ್ಟಿ ಸುಡತಿದ್ದರಂತ ಅದನ್ನು ನಮ್ಮ ಈ ಅಂಗ್ರೇಜೀ ಸರಕಾರದವರೇ ಬಿಡಿಸಿ ಬಿಟ್ರಂತ ಕೇಳಿಲ್ಲೇನ!

ಕಲ್ಲ :—ಆದ ಹಿಂದಿನ ಮಾತಾತ; ಈಗ ಹಾಂಗಿಲ್ಲಾ. ಏನಾರ ಆಗಲಿ ಅವರ ಜಾತ್ಯಾವರೇ ಈ ಹೋರೆ ಬಿಡಸಾಕ ಸರಕಾರನ ಕೇಳಿಕೋಬೇಕು.

ಮಲ್ಲ :—ಈ ಹಾರೂರೊಳಗ ಆಬ್ಬಾಗತಿ ಆಲಾಗತಿ ಇದ್ದವರೇ ಅಂಪ್ರ ಈ ಕೆಲಸಾ ಮಾಡಿಸಿ ಕೊಂತಿದ್ವಾರ್ಯಾಕ?

ಕಲ್ಲ :—ಅದ್ಯಾಕೋ ನಮ್ಮಪ್ಪಾ ನಾ–ನಾ–ಅನ್ನೋಹಂತಾ ಶಿರಿಮಂತರು ದೊಡ್ಡ ದೊಡ್ಡ ಕಾಮದಾರ್ರು ಹಾ ಅಂದರ ಹುಲೀ ಹಾದೀ ಬಿಡಬೇಕ. ಇಂತಾ ಗಟ್ಟ್ಯಾಳ್ಳವರ ಮನ್ಯಾಗ ಸೈತ ಹಿಂತಾ ಬಡಪರಾಣಿಗೋಳು ನಮ್ಮ ಕೈಯಾಗ ತಲೀ ಕೊಡಾಕಬೇಕ. ನಿರವಾನೇ ಇಲ್ಲ.

ಮಲ್ಲ :—ಒಬ್ಬ ಗಟ್ಟ್ಯಾಳ ಅದಿಕಾರಸ್ತಾ ನಮ್ಮಂತಾ ಒಬ್ಬಗ ನಾಕ ವರಸ ಶೀಕ್ಸಾ ಹೆಟ್ಟಲೀ! ಅಂದರ ತಿಳೀತೈತಿ! ಬಂಣಾ.

ಕಲ್ಲ :—ಎಲವನ! ಮತ್ತೂ ಸರಕಾರಕೇ ಬಂದೆಲ್ಲಾ! ಮೇಲಾಗಿ ನಮಗ ಶೀಕ್ಸ ಆಗಾಕಕಾರಣಾ? ಅವರ ಕರದರ ನಾವ ಹೋಕ್ಕೇವಪಾ ಯಾರ ಮನ್ಯಾಗ ಕೆಲಸಾ ಮಾಡಸತಾರ ಆ ಮನೀ ಹಿರ್ಯಾನ್ನ ಹೆಟ್ಟಲಿ. ಬೇಕಾರ!

ಮಲ್ಲ:—ಎಲೇ ಕಲ್ಲಾ ಮನ್ನೆ ಮನ್ನೆ ದಾರವಾಡದಾಗ ಎಂಕಟರಂಗಪ್ಪನಾರ ಅಂತ ಒಬ್ಬ ದೊಡ್ಡ ಮನಿಶ್ಯಾರು ಇದ್ದರ. ಅವರು ಈ ಕೆಲಸಾ ಮುರದ ಹಾಕಬೇಕಂತ ಬಾಳ ಕಟಪಟ ಮಾಡಿದರು ಮತ್ತ ಒಂದ ಪುಸ್ತಕಾನೂ ಬರದಾರಂತ ಅದರಾಗ "ಗಂಡಸತ್ತ ಹೆಂಗಸಿನ ಕೂದಲಾ ತಗಸೂದು ಅನಾಚಾರಾ" ಅಂತ ತಮ್ಮ ಶಾಸ್ತುರದಾನ ಆದಾರಾ ಕೊಟ್ಟೊದಾರಂತ. ಇಷ್ಟು ಮಾಡಿದರೂ ಈ ಶೇಷ್ಟ ಹಾರೂರು ತಮ್ಮ ಶಾಸ್ತ್ರೀ ಬಿಡವಲ್ಲರು ಎಷ್ಟು ಹೇಳಬೇಕಪಾ ! ಅವರ ಗರ ಮಂದಿಗೇ ಸರಿಬಾರದ ಈ ಹೋರೆ ಉಳಿದ ಮಂದಿಗೆ ಚಂದಕಂಡಿತೇ;

ಕಲ್ಲ:— ಹಿಂತಾ ಒಬ್ಬಿಬ್ಬರಿಂದ ಏನಾಗೀತು? ಇವಕ ಬೇಕ ಚಳವಳಿ ಎಬ್ಬಸಾವರು-ಚಳವಳಿ-ಊರೂರಿಗೆ!

ಮಲ್ಲ:— ಹೌದ್ಹಾದ, ಈಗ ನೋಡಪಾ ಎಲ್ಲೆಲ್ಲಿ ನೋಡಿದರೂ ಚಳವಳೀ ಸುಗ್ಗೀನಸುಗ್ಗಿ, ಜಾತಿ ಕೆಟ್ಟರವನ ಕುಲದಾಗ ತಗೊಂಣೂ ಚಳವಳಿ ಮಾಡುವರು ಹುಟ್ಟೇದಾರು ಆಕಳ ಮೊದಲ ಮಾಡಿ ಮೂಕ ಪರಾಣಿಗೋಳನ ಕೊಲ್ಲಬಾರದಂತ ಚಳವಳಿ ಮಾಡುವರು ಬೆಳದೂದಾರು. ಚಣದರವೀನ ಹಾಕಬೇಕ ಉಳಿದ ಅರವೀ ಮುಟ್ಟಬಾರದಂತ ಚಳವಳೀ ಮಾಡವರ ಊರೂರಿಗೆ ತುಂಬೀದಾರು ಶಿಂದೀ ಶರೇವು ಕುಡೀಬಾರದು ಅಂತ ಹೇಳೂ ಚಳವಳಿ ಜನರನಕಾ ರಗಡ! ಆದರ, ಈ ಹಾರೂರ ಮಂದೀವಳಗಿನ ಗಂಡಸತ್ತ ಹೆಂಗ್ಸೂರ ತಲೀ ಬೋಳಿಸಬಾರದಂತ ಚಳವಳೀ ಮಾಡಿದವರನ ಮಾತ್ರ ಒಬ್ಬರನೂ ಕಾಣಲಿಲ್ಲ ಮಾರಾಯಾ! ಅವರೇನೋ ಎಂಕಟ ರಂಗಪ್ಪನಾರು ಇದ್ರೂ ಸೈ! ಆ ಬೋಳ್ಯಾರ ದುರದೈವಕ್ಕೆ ಅವರೂ ಸತ್ತುಹೋದರು ಮಾಡೂದೇನೈತಿ? ಇಂತಾ ಮಾರಾಯರು ಊರೂರಿಗೆ ಮನಿಮನಿಗೆ ಆಗಬೇಕನೋಡ! ಅಂದರ ಏನಾರರೇ ಮೇಲದಾದ ಹತ್ತೈತಿ—

ಕಲ್ಲ:— ಹಾಂಗ ಅಲ್ಲೋ ಮೇಲಿನ ಚಳವಾಳಿಗೋಳು ಒಬ್ಬರಿಗೇ ಸಮ್ಮಂದಿಸಿ ದವಲ್ಲಾ ಅದಕಂತ ನಡೀತಾವ. ಈ ಚಳವಾಳಿ ಪಗತ ಹಾರೂರ ಕುಲದ ಪೂರತೇ ನಡೀ ಬೇಕಾಗತೈತಿ, ಕದಕ ಅವರ ಮಂದಿನೇ ಚಳವಳೀ ಎಬ್ಬಿಸಿ ಗುರುಸೋಮಿಯುವರವಟಾ ದಾದ ಹಚ್ಚಬೇಕ, ಅಂದರ ದೇವರು ಅವರ ಮನಸಿನ್ಯಾಗ ಹೋಗಬಾರದೇಕ ?

ಮಲ್ಲ:— ಹೌದ ನೋಡ ಅವರ ಗುರಸೋಮಿಯುವರು ಮನಸಿನಮೇಲ ತಕ್ಕೊಂಡ್ರ ಹಾ ಅನ್ನೂರಾಗೇ ನಿಂತ ಬಿಡತೈತಿ. ಉಳಿದವರು ಏನು ಮಾಡಿದರೂ ಮಾತಲ್ಲಾ, ನೂರಾರು ವರಸದಿಂದ ನಡಕೊಂತ ಬಂದ ಕೆಲಸ ಒಮ್ಮಿಲಿಗೇ ಹ್ಯಾಂಗ ನಿಂದರಬೇಕು?

ಕಲ್ಲ:— ಹಾರೂರ ಜ್ಯಾತ್ಯಾಗ ಮೂರು ಮಂದಿ ಗುರುಸೋಮಿಯುವರು ಅದಾರು ಸಂಕರಾಚಾರಿ, ರಾಮಾನಾಚಾರಿ, ಮದ್ವಾಚಾರಿ, ಈ ಮೂರು ಮಂದೀ ಶಿಶ್ಯಾರೇ ಈ ನಾಡ ತುಂಬೆಲ್ಲಾ ಇರಾವರ. ಇವರು ತಮ್ಮ ಶಿಶ್ಯಾರಿಗೆ ಅಪಣೆ ಮಾಡಿದಂಗ ಅವರು ನಡಕೊಂ ತಾರು.

ಮಲ್ಲ:— ಹಚ್ಚಿಂದೇನೂ ಇಲ್ಲಲೇ! ಕೂದಲಾ ತಗಸೂದ ಒಂದ ಬಿಟ್ಟ ಉಳಿದದ್ದ ಬೇಕಾದ್ದ ಮಾಡಲಿ! ಒಪ್ಪತ್ತ ಉಣಸಲಿ! ವಸ್ತ್ರಾವಡವೀ ಬಿಡಸಲಿ! ಹರಕ ಶೀರಿಕುಬಸಾ ತೊಸಡಲಿ! ಮೈಮುರಿ ದುಡಿಸಲಿ! ಮುದ್ರಿ ಹಚ್ಚಿ ಮೈಸುಡಸಲಿ। ಹಣಿಗೆ ಬೂದೀ ಇಡ್ಲಿ ಬಡಸಲಿ! ಕಡಿಗೆ ಆಕಳ ಶಗಣೀ ಉಚ್ಚೀ ಕುಡಸಲಿ! ಇದವಂದ ಕೆಲಸಾ ಮಾತ್ರ ಬಾಳ ತೆಲಿಕೋರಾಗೇತಿ ನೋಡ ಜನದಾಗ!

ಕಲ್ಲ:— ನಮ್ಮ ಹುಡುಗ ಒಂದ ಕಾಗದದಾಗ ಬರದದ್ದು ಓದತಿದ್ದಾ! ಅದ್ಯಾವ ಡೋ ಇಜಿಪತ್ತ ದೇಶಂತಪಾ. ಆ ದೇಶದಾಗ ಬೆಕ್ಕ ಸತ್ತ ಮನೀಯುವರು ಹುಬ್ಬ ಬೋ ಳಿಸಿಕೋಬೇಕಂತ! ನಾಯಿ ಸತ್ತ ಮನಿಯುವರು ಮೈಯಲ್ಲಾ ಬೋಳಿಸಿಕೋ ಬೇಕಂತ! ಇದ ಹೆಂಗ ನಡತಿ?

ಮಲ್ಲ:—ಹಾ ಅದೂ ಇದೂ ಒಂದೇ ನೋಡ. ಇಬ್ಬರೂ ಮಳ್ಳ ಸೂಳೇಮಕ್ಕಳ ಸರಿ! ಆಗಲಿಬಿಡ ನಮದೇನ ಹೊಕ್ಕೈತಿ

ಕಲ್ಲ:—ಹಾಂಗ ಅಲ್ಲೋ ನಮಗ ಸಮ್ಮಂದಿಸೇತಂತ ನಾವು ಮಾತಾಡಬೇಕಾ ಗೇತಿ ಇಲ್ಲದಿದ್ರ ನಮಗೇನ; ಬಿಟ್ಟ ಬಿಡತಿದ್ವಿ.. ಅಗಾ ನೋಡ! ಮತ್ತ ಬಂದ ಬಾಳಬಂಟಾ ಹೋಗಪಾ ಮಲ್ಲಾ! ನಾನು ಬಂಟನ ಹಿಂಬಾಲಿ ಹೊಕ್ಕೇನು ನಡೀ ಮಾರಾಯಾ?

(ಹಸಿಬೀ ಹೆಗಲಿಗೆ ಹಾಕಿಕೊಂಡು ನಡೆದನು)

---

# ಗೆಳೆಯರ ಗುಂಪುಗಳು ಬೇಕು

## ೧. ಪೂರ್ವ ಪೀಠಿಕೆ.

ಗೆಳೆಯರ ಗುಂಪಿನ ಬಗ್ಗೆಯೂ ಗುಂಪಿನ ಸ್ವಧರ್ಮದ ಬಿರುದಿನ ಬಗ್ಗೆಯೂ ಮೂರನೆಯ ವರ್ಷದ ಮೊದಲನೆಯ ಸಂಚಿಕೆಯಲ್ಲಿ ಹೀಗೆ ಬರೆದುದಾಗಿತ್ತು.

"ಗೆಳೆ, ಗೆಡೆ ಎಂಬ ಶಬ್ದಗಳು ಒಂದೇ ಹೊಟ್ಟೆಯಲ್ಲಿ ಹುಟ್ಟಿದಂಥವುಗಳು; ಗರ್ಭದಲ್ಲಿ ಒಂದೇ. ಗೆಡೆಯೆಂದರೆ ಜೋಡಿ. ಒಂದೇ ಓರಿಗೆಯವರು ಜೋಡಿಯಾಗಿರುವದು ಸಹಜ. ಆದರೆ ಈ ಮಾತು ದೇಹಕ್ಕಾಗಿರುವ ವಯಸ್ಸಿಗಿಂತ ಮನಸ್ಸಿಗಾಗಿರುವ ವಯಸ್ಸನ್ನು ಹೆಚ್ಚಾಗಿ ಅವಲಂಬಿಸಿರುತ್ತದೆ; ಅಂದರೆ ಓರಿಗೆಯನ್ನು ದೇಹದ ನಿಲುವಿಕೆಯಿಂದಾಗಲಿ ವಯಸ್ಸಿನ ಗಣತಿಯಿಂದಾಗಲಿ ಅಳೆದು ನೋಡುವದಕ್ಕಿಂತ ಗೆಳೆತನದ ಸಂಬಂಧದಲ್ಲಿ ಸ್ನೇಹದ ನೆಲೆಯಿಂದಲೇ ಅದನ್ನು ಗೊತ್ತುಪಡಿಸುವದೊಳಿತು. ಆರಾರ ಗೆಳೆತನವು ಎಷ್ಟೆಷ್ಟು ಆಳವಾಗಿರುವದೋ ಅಷ್ಟಷ್ಟರಿಂದ ಅವರ ಓರಿಗೆಯು ತಿಳಿದು ಬರುವದು. ಆಳವನ್ನು ಹೇಗೆ ಹೊರಗಳೆಯದೆ ಒಳಗಿಳಿದು ನೋಡುವೆವೋ ಹಾಗೆಯೇ ಗೆಳೆತನದಲ್ಲಾದರೂ ಅವರವರ ಸ್ನೇಹ ಪ್ರೀತಿಗಳಲ್ಲಿ ಗುಣ್ಪಿದ್ದಷ್ಟು. ಅವರವರಲ್ಲಿ ಗೆಳೆತನ; ಇದೇ ಗೆಳೆತನದ ಗುಣ್ಪು; ಇದೇ ಗೆಳೆಯರ ಗುಂಪು. ಅಂತೆಯೇ ಇದಕ್ಕೆ ಬೇರೆ ಸಂಘ ಸಂಸ್ಥೆಗಳಂತೆ ಗಟ್ಟಿಯಾಗಿ ಕಟ್ಟುವ ಹೊರಗಿನ ಘಟನಾವಳಿಗಳಿಲ್ಲ ಅಧ್ಯಕ್ಷೋಪಾಧ್ಯಕ್ಷರಿಲ್ಲ, ಇವರೊಳಗೆ ಬರಬೇಕಾದವರಿಗೆ ಹಣ ಬೇಕಾಗಿಲ್ಲ. ಗೆಳೆತನದ ಗುಣಬೇಕು. ಇದನ್ನು ಬಿಡಬೇಕಾದವರು ಯಾವದಾದರೂ ಗೊತ್ತುಮಾಡಿದ ನಿಯಮಾನುಸಾರವಾಗಿ ಬಿಡಬೇಕಾಗಿಲ್ಲ; ಗೆಳೆತನದಲ್ಲಿ ಸಡಿಲು ಹುಟ್ಟಿದರೆ ತಾವೇ ಅಗಲಿ ಹೋಗುವರು. ಹೀಗಾಗಿ ಈ ಗುಂಪಿನಲ್ಲಿ ಯಾರೂ ಯಾರನ್ನೂ ಎಳೆದು ಕಟ್ಟಿಲ್ಲ. ಗೆಳೆತನದ ಎಳೆಯೇ ಅವರನ್ನು ಎಳೆಯುವದು; ಕಟ್ಟುವದು. ಗೆಳೆಯರೂ ಕೂಡ ಹಿಗ್ಗಿನಷ್ಟೇ ಅದನ್ನು ಜಗ್ಗುವರಲ್ಲದೆ ಹರಿಯುವಷ್ಟು ಅದನ್ನು ಜಗ್ಗುವದಿಲ್ಲ. ಗೆಳೆಯರು ಗುಂಪಾಗಿ ಎನಿಸಿಕೊಂಡರೂ ನಾಲ್ಕಾರು ವರ್ಷಗಳಾಗಿವೆ. ಈ ನಾಲ್ಕಾರು ವರ್ಷದ ಹಿಗ್ಗಾಟ ಜಗ್ಗಾಟದಲ್ಲಿ ತಾಳಿಬಾಳಿದ ಗೆಳೆತನದ ಎಳೆಯಲ್ಲಿ ಜಿಗುಟರಲಿಕ್ಕಿಲ್ಲವೇ ? ಸ್ವಧರ್ಮದ ಮನೋರಥವನ್ನು ಹತ್ತು ಹೆಜ್ಜೆಯಾದರೂ ಮುಂದೆಳೆಯಲಿಕ್ಕಿಲ್ಲವೇ ? ಅಂಥ ಶಕ್ತಿಯಿದೆಂಬ ಅನುಭವದ ನಂಬಿಗೆಯಿಂದ ಈ ಕೆಲಸವನ್ನು ಕೈಗೊಂಡದ್ದಾಗಿದೆ. ರೂಢಿಗನುಸರಿಸಿ ಸಂಪಾದಕ ಪ್ರಕಾಶಕನೆಂಬ ಹೆಸರಿನಿಂದ ಯಾವನೊಬ್ಬನು ಗುಂಪಿನಿಂದ ಮುಂದಾಗಿದ್ದರೂ ಆ ಓರ್ವನಲ್ಲಿ ಸರ್ವರೂ ಬಂದಿರುವರು ಎಂದೆಯೇ ನಮ್ಮ ಓದುಗರು ತಿಳಿಯಬೇಕು. ಯೋಗ್ಯಕಾಲಕ್ಕೆ ಅವರವರ ಕೆಲಸದಿಂದಲೇ ಬೇರೆ ಬೇರೆ ಗೆಳೆಯರ ಗುರುತಾಗಬಹುದು. ಅದರಂತೆಯೇ ಗೆಳೆಯರ ಗುಂಪಿನ ಮರಕ್ಕೆ ಹಿರಿಬೇರುಗಳಂತಿರುವ

ತತ್ವಗಳನ್ನಾದರೂ ಕಾಲಕಾಲಕ್ಕೆ ಇದರಲ್ಲಿ ಹೇಳುವೆವು. ಅವನ್ನು ಹೇಳುವದು ಗುಂಪಿನ ಗೌರವಕ್ಕಾಗಿಯಲ್ಲ. ಆದರೆ ಪರಮಾಣುವಿನಿಂದ ಪರಮಾತ್ಮನ ವರೆಗೆ ಒಂದೇ ರಾಜ್ಯ ವಿರುವದರಿಂದ ಗುಂಪಿನ ತತ್ವಗಳು ಸಮಾಜಕ್ಕೂ ಹಿತಕಾರಿಗಳಾಗದೆ ಹೋಗಲಿಕ್ಕಿಲ್ಲ ಎಂಬ ನಂಬಿಗೆಯಿಂದಲೂ, ಕೊಟ್ಟಿದು ಅದು ಮುಂದೆ ಕಟ್ಟಿದಾ ಬುತ್ತಿ ಎಂಬರಿವಿನಿಂ ದಲೂ ಅಹುದು. ಮತ್ತು ಸಮಾಜ ಎಂಬುದಾದರೂ ಏನು ? ಮರೆವಿನ ಮುಸುಕಿನ ಲ್ಲಿದ್ದ ಗುರುತರಿಯದ ಗೆಳೆಯರ ಗುಂಪು. ಮತ್ತು ಪರಮಾತ್ಮನಾದರೂ ಯಾರು ! ಸರ್ವರ ಸುಹೃದಯ–ಎಲ್ಲರ ಗೆಳೆಯ ”

ಒಬ್ಬೊಂಟಿಗನಾಗಿರುವದು ಹುಟ್ಟಾ ಮನುಷ್ಯನಿಗೆ ಸೇರುವದಿಲ್ಲೆಂಬುದು ನಿಜ. ಪಶುಪಕ್ಷಿಗಳು ಹಿಂಡು ಹಿಂಡಾಗಿದ್ದರೂ ಬಳಗದ ಬಳಕೆಯನ್ನು ಹೆಚ್ಚಿಸಲು ಸಹಾನು ಭೂತಿಯಿಂದ ಸೇರಿ ಗುಂಪಾಗುವದು ಮನುಷ್ಯನ ಜಾತಿ ಸ್ವಭಾವ. ಎಲ್ಲ ಕಡೆಯಿಂದ ಸಹಾನುಭೂತಿಯ ಸಂಬಂಧಗಳನ್ನು ಬೆಳೆಯಿಸುವದು ಅವನ ಲಕ್ಷಣವಾಗಿದೆ. ಸಹೋ ದರ ಬಂಧುತ್ವ ಮೊದಲು ಮಾಡಿಕೊಂಡು ವಿಶ್ವಬಂಧುತ್ವದವರೆಗೂ ತನ್ನ ಸಂಬಂಧ ವನ್ನು ಹಿಗ್ಗಿಸುವದೇ ಅವನ ಹಿಗ್ಗು. ಅಂದರೆ ತಾವೆಲ್ಲರೂ ಒಂದೇ ತಾಯಿಯ ಮಕ್ಕಳು ಎಂಬ ಮಾತನ್ನು ಲಕ್ಷಣೆಯಿಂದ ಹಿಗ್ಗಿಸಿ ಭೂಮಿತಾಯಿಯನ್ನಷ್ಟೇ ಅಲ್ಲ ಆದಿಮಾಯೆ ಯನ್ನು ವಿಶ್ವಕುಟುಂಬದೊಳಗಿನ ವಿಶ್ವಜನನಿಯನ್ನಾಗಿಮಾಡಿ ವಿಶ್ವಬಂಧುತ್ವಕ್ಕೆ ಮಾರ್ಗ ವನ್ನು ಕಲ್ಪಿಸಿಕೊಡುವನು. ಒಂದಿಲ್ಲೊಂದು ಸಂಬಂಧ ಬೆಳೆಯಿಸಿ ಭೂತಜಾತದ ಸಂಬಂ ಧಿಕನಾಗುವನು. ಕುಟುಂಬ, ಬಳಗ, ಜಾತಿ, ದೈವ, ಕುಲ, ಮೊದಲಾದವುಗಳು ಇಂಥ ಸಂಬಂಧದಿಂದಾದ ಗುಂಪುಗಳೇ.

ಆದರೆ, ಗೆಳೆಯರ ಗುಂಪು ಬೇರೊಂದು ಬಗೆಯಿಂದ ಸಂಬಂಧವನ್ನು ಬೆಳೆಯಿಸ ಲೆಳಸುವದು. ಆ ಬಗೆ ಹೀಗೆ. ನಮ್ಮ ನಾಡಿನ ಜನರಲ್ಲಿ ಈಗುಂಟಾಗಿರುವ ವೈಷಮ್ಯ ವನ್ನು ಕಂಡು ಕಳವಳಗೊಳ್ಳುವ ಯಾವ ಮನುಷ್ಯನಿಗೂ ಈಗಿನ ಸ್ಥಿತಿ ಬದಲಾಗಿ, ಇದ್ದದ್ದರಲ್ಲಿ ಇದಕ್ಕೂ ಒಳ್ಳೆಯ ಸ್ಥಿತಿಯು ಉಂಟಾಗಬೇಕೆಂದನಿಸುವದು. ಇನ್ನು 'ಕಲಿ ಕಾಲದ ಲಕ್ಷಣವೇ ಇದು; ಯಾರೇನು ಮಾಡುವಂತಿದೆ ! ದಿನೇ ದಿನೇ ಸ್ಥಿತಿಯು ಕೆಡುತ್ತ ಹೋಗುವದಲ್ಲದೆ ಒಳ್ಳೆಯದಾಗಲಾರದು' ಎಂದು ಏನೋ ಸಮಾಧಾನ ಹಚ್ಚಿ ಕೊಂಡವರ ಮಾತು ಬೇರೆ; ಕೆಟ್ಟಿರುವದೂ ಕೆಡುತ್ತಾ ಹೋಗುವದೂ ಈ ಸಂಸಾರದ ಲಕ್ಷಣವೇ ಆಗಿದೆ; ಅದನ್ನು ಒಳ್ಳೆಯದನ್ನಾಗಿ ಮಾಡಲೆಣಿಸುವದು ವ್ಯಥಾಯಾಸ ವೆಂದು ಅಲಕ್ಷ್ಯದಿಂದಿರುವ ಮಾಯಾಭ್ರಾಂತರ ಮಾತು ಬೇರೆ, ಅವರಿಗೆ ಯಾರೇನು ಹೇಳು ವಂತೂ ಇಲ್ಲ. ಅವರು ಯಾರ ಮಾತು ಕೇಳುವಂತೂ ಇಲ್ಲ. ಆದರೆ, ಈಗಿನ ಕೆಟ್ಟ ಸ್ಥಿಯನ್ನು ಸುಧಾರಿಸಬೇಕೆಂದೂ ಸುಧಾರಿಸಲು ಬರಹುದೆಂದು ಯಥಾರ್ಥವಾಗಿ ನಂಬುವ ಜನರು ಅಲ್ಲಲ್ಲಿದ್ದಾರೆ. ಒಳ್ಳೆಯ ಗುಣಗಳ ಲೋಪವಾಗುತ್ತಲೆ ಕೆಟ್ಟ ಸ್ಥಿತಿಯು ಉದಯವಾಗುತ್ತದೆ ಎಂಬ ಮನಗಾಣಿಕೆಯಿಂದ ಅವರು ನಮ್ಮ ಈಗಿನ ದುಸ್ಥಿತಿಗೆ

ಯಾವಾವ ಗುಣಗಳ ಲೋಪವು ಕಾರಣವಾಗಿರಬಹುದೆಂಬದನ್ನು ಆಲೋಚಿಸುತ್ತಾರೆ. ಹೀಗೆ ಯೋಚಿಸುವವರೆಲ್ಲರಿಗೂ ಒಂದೇ ನಿರ್ಣಯವು ದೊರೆಯುವದೆಂದಲ್ಲ. ಅವರಿಗಾದ ಪರಿಸ್ಥಿತಿಯು ದರ್ಶನದ ಮೂಲದಿಂದಲೂ ಅವರ ಸ್ವಭಾವದನುರೋಧದಿಂದಲೂ ಅವರ ವಿಚಾರ ಗೌರವದ ಪ್ರಕಾರದಿಂದಲೂ ಬೇರೆ ಬೇರೆಯಾಗುವದು. ಆದರೆ ಆ ಭೇದದ ವಿಷಯವನ್ನೆತ್ತುವದು ಪ್ರಸ್ತುತವಲ್ಲ. ಕಳವಳದಿಂದ ಪ್ರಾಮಾಣಿಕವಾಗಿ ವಿಚಾರ ಮಾಡಿದವರೆಲ್ಲರೂ ಸಾಕಷ್ಟು ಸ್ಪಷ್ಟವಾದ ನಿರ್ಣಯವೊಂದನ್ನು ಹೊಂದಿರುತ್ತಾರೆ ಇಷ್ಟೇ ಹೇಳಬೇಕಾದದ್ದು. ಇನ್ನು ಈ ನಿರ್ಣಯಾನುಸಾರವಾಗಿ ತಮ್ಮ ತಮ್ಮ ಶಕ್ತಿಬುದ್ಧಿಗಳ ಮಟ್ಟಿಗೆ ಸಮಾಜವನ್ನು ಮಾರ್ಪಡಿಸಲು ಪ್ರಯತ್ನ ಮಾಡುವ ಜನರು ಅಲ್ಲಲ್ಲಿ ಇರದೆ ಇಲ್ಲ. ಇಂಥವರು ಯಾವಾಗಲೂ ಒಬ್ಬಂಟಿಗರಾಗಿಯೇ ಇರುವದಿಲ್ಲ. ಏನಿಲ್ಲೆಂದರೂ ಒಬ್ಬರನ್ನಾದರೂ ತಮ್ಮ ಈ ಪ್ರಯತ್ನದಲ್ಲಿ ಸಹೋದ್ಯೋಗಿಗಳನ್ನಾಗಿ ದೊರಕಿಸಿಕೊಳ್ಳುವರು. ಹೀಗೆ ಸ್ನೇಹದಿಂದ ಕೂಡಿದವರಾಗಿ ಹಿತ ಬುದ್ಧಿಯಿಂದ ಸಹೋದ್ಯೋಗಿಗಳಾದ ಇಬ್ಬರು ಕೂಡ ಗುಂಪೆಂಬ ಸಂಜ್ಞೆಯನ್ನು ಪಡೆಯುವರು.

ಗೆಳೆಯರ ಗುಂಪು ಇಂಥೆಲ್ಲ ಗುಂಪುಗಳೊಡನೆ ಬಾಂಧವ್ಯವನ್ನು ಬೆಳೆಯಿಸಲೆಳಸುವದು. ಆ ಗುಂಪು ಕರ್ನಾಟಕದ ಯಾವ ಭಾಗದಲ್ಲಿಯೇ ಇರಲಿ; ಯಾವ ಜಾತಿ ಪಂಥದವರದೇ ಇರಲಿ; ಅವರ ಗುರುತಾಗಬೇಕು ಗೆಳೆತನವಾಗಬೇಕೆಂಬುದೇ ಗುಂಪಿನ ಬಯಕೆ. ಯಾಕಂದರೆ ಗೆಳೆಯರ ಗುಂಪು, ಅಖಂಡ ಕರ್ನಾಟಕದ್ದಿದ್ದು ಅಖಂಡ ಕರ್ನಾಟಕಕ್ಕಾಗಿಯಿದೆ. ಅದಕ್ಕೆ ಯಾವ ಜಾತಿ ಪಂಥದ ಪಕ್ಷಪಾತವಿಲ್ಲ. ಗೆಳೆಯರ ಜಾತಿ ಕನ್ನಡಿಗರದು; ಗುಂಪಿನ ಪಂಥ ಹೊಂದಿಕೆಗೂಡಿಯಿರಬೇಕೆಂಬುದು. ಯಾವ ಗುಂಪು ಯಾವ ಕೆಲಸವನ್ನೇ ಮಾಡುತ್ತಿರಲಿ ಅವರೊಡನೆ ಗೆಳೆಯರ ಗುಂಪಿನವರು ಸಹಕಾರದ ಸಹಾನುಭೂತಿಯಿಂದ ಕೂಡಿಕೊಳ್ಳಲಿಚ್ಛಿಸುವರು. ಸಮಾಜದ ಕಾರ್ಯವೇ ಇರಲಿ; ಕುಟುಂಬದ ಕಾರ್ಯವೇ ಇರಲಿ; ರಾಷ್ಟ್ರದ ಕಾರ್ಯವೇ ಇರಲಿ; ಧಾರ್ಮಿಕವಿರಲಿ, ರಾಜಕೀಯವಿರಲಿ, ವಾಙ್ಮಯಿಕವಿರಲಿ ಅದನ್ನು ತಿಳಿದುಕೊಳ್ಳಬೇಕೆಂಬುದು ಗೆಳೆಯರ ಗುಂಪಿನವರ ಹಂಬಲ. ಆ ಗುಂಪು ಜ್ಞಾನಶಕ್ತಿಯುವರದೇ ಇರಲಿ; ಕ್ರಿಯಾ ಶಕ್ತಿಯವರದೇ ಇರಲಿ, ಧನಶಕ್ತಿಯುವರದೇ ಇರಲಿ, ದೇಹ ಶಕ್ತಿಯವರದೇ ಇರಲಿ, ಇವರೆಲ್ಲರ. ಕೂಟಗಳು ಸಮಾಜದ ಸಂಪೂರ್ಣ ಆರೋಗ್ಯಕ್ಕೂ ಶಾಂತಿ ಪುಷ್ಟಿ–ತುಷ್ಟಿಗಳಿಗೂ ಅಗತ್ಯವೆಂದು ಗೆಳೆಯರ ಗುಂಪು ಇವೆಲ್ಲವುಗಳನ್ನು ಸಹಾನುಭೂತಿಯಿಂದ ಹತ್ತು ಗಡೆಯುಳ್ಳವುಗಳನ್ನಾಗಿ ಮಾಡಿಕೊಳ್ಳಲು ಹವಣಿಸುವದು; ಯಾಕಂದರೆ, ನಮ್ಮ ಕನ್ನಡ ನಾಡು ಇಂಥ ಗುಂಪುಗಳ ಬಳಗವಾಗುವದರಿಂದಲೇ ಸರ್ವಸಮರ್ಥವಾದೀತು. ನಮ್ಮ ಜನರೂ ಸ್ವಧರ್ಮನಿರತರಾದಾರು. ಇದೇ ಪುರುಷಾರ್ಥಕ್ಕೆ ಹಾದಿ; ಪರಮಾರ್ಥಕ್ಕೆ ಹಾದಿ.

“ ಸಮಾಜದ ಜೀವನವು ವಿಶ್ವತೋಮುಖವಾಗಿದೆ; ಅಂದರೆ ಹತ್ತೂ ಕಡೆಯಿಂದ ನೋಡಿದರೆ ಮಾತ್ರ ಇದರ ಇಡೀ ಸ್ವರೂಪವು ತಿಳಿಯುವದು. ತನ್ನನ್ನು ತಾನರಿಯುವದು ವ್ಯಕ್ತಿಜೀವನದಲ್ಲಿ ಅವಶ್ಯವಿದ್ದಷ್ಟೇ ಕುಟುಂಬ ಜೀವನದಲ್ಲಿಯೂ ಅಷ್ಟೇ ಅವಶ್ಯ, ಕುಟುಂಬದಷ್ಟೇ ಸಮಾಜದಲ್ಲಿಯೂ, ಸಮಾಜದಷ್ಟೇ ರಾಷ್ಟ್ರದಲ್ಲಿಯೂ, ರಾಷ್ಟ್ರದಷ್ಟೇ ವಿಶ್ವದಲ್ಲಿಯೂ ಅವಶ್ಯ. ತನ್ನನ್ನು ತಾನರಿಯುವದೆಂದರೆ ಬರೀ ಆತ್ಮವಿಚಾರವಲ್ಲ, ದೇಹದ ವರೆಗಿನ ವಿಚಾರವೂ ಅಹುದು. ಬರೀ ವೇದಾಂತ ವಿಚಾರವಲ್ಲ, ವ್ಯವಹಾರದ ವರೆಗಿನ ವಿಚಾರವೂ ಅಹುದು. ಬರೀ ಜ್ಞಾನಕಾಂಡವಲ್ಲ, ಕ್ರಿಯಾ ಕಾಂಡದ ವರೆಗಿನ ವಿಚಾರವೂ ಅಹುದು. ಬರೀ ವ್ಯಕ್ತಿ ವಿಚಾರವಲ್ಲ, ವಿಶ್ವದ ವರೆಗಿನ ವಿಚಾರವೂ ಅಹುದು. ಈ ಬಗೆಯ ವಿಚಾರಪ್ರವೃತ್ತಿಯನ್ನುಂಟುಮಾಡುವದೇ ‘ಸ್ವಧರ್ಮ’ದ ಹಾದಿ. ”

೨. ಗುಂಪಿನ ಅಗತ್ಯ:—

ಈ ವರ್ಷ ಒಂದುವರೆ ವರ್ಷದಲ್ಲಿ ನಾಗರಹಾಳ, ರಬಕವಿ, ಮಲಸಮುದ್ರ, ನವಲಗುಂದ, ಬೆಳಗಾವಿ, ಕೂಕನೂರು ಮೊದಲಾದ ಊರೊಳಗಿನ ಮಿತ್ರಸಂಘದವರು “ ಗೆಳೆಯರ ಗುಂಪಿನ ನಿಯಮಾವಳಿಗಳೇನು ? ಗುಂಪಿಗೆ ತಾವೂ ಸೇರಬಹುದೋ ಹೇಗೆ ? ಸೇರಬಹುದಾದರೆ ಕ್ರಮವಾವುದು ? ” ಇವೇ ಮೊದಲಾದ ಮಾತುಗಳನ್ನು ಗುಂಪಿನ ಗೆಳೆಯರನ್ನು ಕಂಡೂ ಪತ್ರಮುಖಾಂತರವಾಗಿಯೂ ಕೇಳಿಕೊಂಡಿದ್ದರು. ಇನ್ನೂ ಕೆಲವರು ವ್ಯಕ್ತಿಶಃ ಗುಂಪಿನಲ್ಲಿ ಸೇರಲು ತಮ್ಮ ಇಚ್ಛೆಯನ್ನು ವ್ಯಕ್ತಗೊಳಿಸಿದ್ದರು. ಆದರೆ ನಮಗೆ ಬೇಕಾದುದು ಒಂದು ಗುಂಪಿನ ಸಾಮ್ರಾಜ್ಯವಲ್ಲ; ಹೇಗೆ ಪೂರ್ವದ ಸಾಮ್ರಾಜ್ಯದಲ್ಲಿ ಅಸಂಖ್ಯಾತ ಗ್ರಾಮಸಂಸ್ಥೆಗಳಿದ್ದುವೊ ಅದೆ ಪ್ರಕಾರ ಇಂದಿನ ಕರ್ನಾಟಕ ಸಾಮ್ರಾಜ್ಯದಲ್ಲಿ ಅಸಂಖ್ಯಾತ ಗೆಳೆಯರ ಗುಂಪುಗಳು ಬೇಕು. ಅರಸರು ಬರಲಿ, ಅರಸರು ಹೋಗಲಿ, ಈ ಗ್ರಾಮ ಸಂಸ್ಥೆಗಳ ಮೂಲಕ ಜನಜೀವನವು ಹರಿಗಡಿಯದೆ ಸಾಗುತ್ತಲಿತ್ತು. ಹಾಗೆಯೆ ಇಂದಾದರೂ ಮುಂದಾಳು ಬರಲಿ, ಮುಂದಾಳು ಹೋಗಲಿ, ಇರಲಿ ಅಥವಾ ಬಿಡಲಿ, ಈ ಗೆಳೆಯರ ಗುಂಪುಗಳ ಮೂಲಕ ರಾಷ್ಟ್ರಾರಾಧನವು ಸಾಗುತ್ತಲಿರಬೇಕು. ಆದರೆ ಹಳೆಯ ಗ್ರಾಮವ್ಯವಸ್ಥೆಯಲ್ಲಿದ್ದ ಒಂದು ದೋಷವು ಈ ಗೆಳೆಯ ಗುಂಪುಗಳಲ್ಲಿ ಬರಬಾರದು. ಆ ದೋಷದಿಂದಲೇ ನಮ್ಮ ಭಾರತ ಭೂಮಿಯು ಪರಪಾದಾಕ್ರಾಂತವಾಯಿತು. ಈ ಗೆಳೆಯರ ಗುಂಪುಗಳು ತಾವಾಯಿತು ತಮ್ಮದಾಯಿತು ಎಂದು ಉಳಿದರೆ ನಮ್ಮ ನಾಡಿನ ಹಾಡಾದರೂ ಹಾಗೆಯೆ ಆಗತಕ್ಕದ್ದೇ. ಪ್ರತಿಯೊಂದು ಗುಂಪುಗಳಿಗೂ ತಮ್ಮ ಗುಂಪುಗಳ ಬಳಗದ—ವಿಶ್ವಕುಟುಂಬದ ಅರಿವು ಇರಲೇ ಬೇಕು.

ನಮ್ಮ ಕನ್ನಡನಾಡಿನಲ್ಲಿ ಮೈತುಂಬ ಕಣ್ಣುಳ್ಳವನೂ, ವಿವೇಕಿಯೂ, ಯೋಜಕನೂ, ದೂರದರ್ಶಿಯೂ ಆದ ಕರ್ಮಯೋಗಿಯಿನ್ನೂ ಉದಯಿಸಿಲ್ಲ; ಅಸಹಾಯಶೂರನೂ,

ಏಕಾಂಗವೀರನೂ ಆದ ರಣಧುರಂಧರನು ತಲೆದೋರಿಲ್ಲ. ನಮ್ಮ ಜನಾಂಗದ ಭವಿಷ್ಯವು ಹೀಗೆ ಹೀಗೆ, ನಮ್ಮ ಜನರ ಮನದ ರಚನೆ ಇಂತಿಂತು, ನಾವು ಹಿಡಿಯಬೇಕಾದ ಹಾದಿ ಈ ಈ ಬಗೆಯದು ಎಂದು ಡಂಗುರಸಾರುವ ಜಾಣಬಂಟನು ಇನ್ನೂ ಗುಡುಗು ಹಾಕುತ್ತಿಲ್ಲ. ಮನೆಮಾರನ್ನು ಮರೆಯಿಸಿ, ದೇವನಿಗಾಗಿ ತನ್ನ ಜೀವನವೆಂಬ ನೆಚ್ಚಿನಿಂದಲೂ ಹುಚ್ಚಿನಿಂದಲೂ ಇಡೀ ಸಮಾಜವನ್ನೆ ಕರಗಿಸಿ ಬೇರೆ ಎರಕದಲ್ಲಿ ಹೊಯ್ಯಬಲ್ಲ ವೀರಭಕ್ತನು ಇನ್ನೂ ಮೈದೋರಿಲ್ಲ. ನೂರೆಂಟು ಕಗ್ಗಂಟುಗಳುಳ್ಳ ನಮ್ಮಾ ಕಾಲವು ಸುಸೂತ್ರವಾಗಿ ಸಾಗುವಂತೆ ಮಾಡಬೇಕಾದರೆ, ವಿಕ್ರಮನ ಶಕ್ತಿಯೂ, ಮಾಧವನ ಯುಕ್ತಿಯೂ, ಬಸವನ ಭಕ್ತಿಯೂ ಎಲ್ಲವೂ ಬೇಕು. ಇವೆಲ್ಲವೂ ಒಂದೇ ವಿಭೂತಿಯಲ್ಲಿ ಗೆಳೆಗೊಂಡು ಬಂದರೂ ಬೇಕು. ಆದರೆ ಅಲ್ಲಿಯವರೆಗೆ ನಾವು ಮಾಡತಕ್ಕುದೇನು? ಜಯ ಹೇ ಜಯ ಹೇ ಕರ್ನಾಟಕ ಭಾಗ್ಯವಿಧಾತಾ ! ಎಂದು ಹಾಡುತ್ತ ನಿಲ್ಲುವದಿಷ್ಟೆಯೆ ? ಪ್ರತಿದಿನವೂ ಈ ಪ್ರಾರ್ಥನೆಯೇ ನಮ್ಮ ಅಂತರ್ಯಾಮಿಗೆ ಹೋಗಿ ತಲುಪಲುಬೇಕೆಂಬುದೇನೋ ನಿಜ. ಶ್ರೀರಾಮನ ಅವತಾರದ ಕಾಲಕ್ಕೇ ಅವನ ಅವತಾರ ಕಾರ್ಯದಲ್ಲಿ ಸಹಾಯಕರಾದ ಬೇರೆ ಜನರು ಹೇಗೆ ಹುಟ್ಟಸಿದ್ಧರಾಗಿದ್ದರೋ ಹಾಗೆಯೆ ಈ ಭಾಗ್ಯವಿಧಾತನು ಬರುವ ಮುಂಚಿತವಾಗಿ ಅವನಿಗೆ ತಕ್ಕವರಾದ ಸಹಾಯಕರಾಗುವಂತೆಯಾದರೂ ನಾವು ಸಿದ್ಧರಿರೋಣ. ಇದೂ ಅವಶ್ಯ. ಗೆಳೆಯರ ಗುಂಪುಗಳು ಅಂಥ ಪ್ರಯತ್ನದ ಒಂದು ಪ್ರಸ್ತಾವನೆ.

ಸರ್ವಾಂಗದಲ್ಲಿಯೂ ಕರ್ನಾಟಕವು ಪರಿಣತಿಯನ್ನೂ ಪರಿಪೂರ್ಣತೆಯನ್ನೂ ಹೊಂದಬೇಕೆಂದು ಅಹರ್ನಿಶವೂ ಬಯಸುತ್ತಿರುವ ಯಥಾಮತಿ ಯಥಾಶಕ್ತಿ ಸತತವಾಗಿ ಪ್ರಯತ್ನಿಸುತ್ತಿರುವ ಶ್ರೀ ಆಲೂರ ವೆಂಕಟರಾಯರು ತಮ್ಮ 'ಜಯಕರ್ನಾಟಕದ' ಪೀಠದಿಂದ 'ಗೆಳೆಯರ ಗುಂಪಿ'ನ ವಿಚಾರದಲ್ಲಿ ಈ ರೀತಿಯಾಗಿ ಬೆಂಬಲವನ್ನು ಕೊಟ್ಟಿರುವರು: —

ಇಡೀ ಕರ್ನಾಟಕದಲ್ಲಿ ಅಲ್ಲಲ್ಲಿ ಇಂಥ ಗುಂಪುಗಳು ಆಗುತ್ತಿರುವುದೂ, ಬೇರೆಯವರಿಗೂ ಅದರ ಅಗತ್ಯವು ತೋರುತ್ತಿರುವುದೂ, ಹಿರಿಯರಿಗೂ ಅದು ಒಪ್ಪಿಗೆಯಾಗಿರುವುದೂ, ಈ ಕಾಲಕ್ಕೂ ಅದು ಅವಶ್ಯವಾಗಿರುವುದೂ ಇವೆಲ್ಲವುಗಳನ್ನೂ ಲೆಕ್ಕಿಸಿದರೆ 'ಗೆಳೆಯರ ಗುಂಪುಗಳ' ಈ ಕಲ್ಪನೆಯು ವಿಚಾರಣೀಯವು ಆಚರಣೀಯವೂ ಆಗಿರುವುದೆಂಬ ಮಾತಿನಲ್ಲಿ ಸಂದೇಹ ತೋರಲಾರದೆಂಬ ಭರವಸೆಯಿಂದ ಗುಂಪುಗಳ ರಚನೆಯ ಬಗ್ಗೆ ಕೆಲವೊಂದು ವಿಚಾರಗಳನ್ನು ಇಲ್ಲಿ ಕೊಡಲಾಗಿದೆ.

೧. ಗುಂಪುಗಳ ಸಾಮಾನ್ಯ ತಳಹದಿ.

(ಅ) ವ್ಯಕ್ತಿವ್ಯಕ್ತಿಯ ಮಹತ್ತ್ವದಲ್ಲಿ ನೆಚ್ಚಿಕೆ; (ಆ) ಜಾತಿಜನಾಂಗಗಳ ವೈಶಿಷ್ಟ್ಯದ ವಿಷಯದಲ್ಲಿ ನಂಬಿಗೆ; (ಇ) ಎಲ್ಲ ಧರ್ಮಗಳ ಏಕಸೂತ್ರತೆಯ ಬಗ್ಗೆ ವಿಶ್ವಾಸ.

(ಈ) ಮಾನವಕುಟುಂಬದ ಭವ್ಯಭವಿತವ್ಯತೆಯಲ್ಲಿ ಶ್ರದ್ಧೆ; (ಉ) ನಿವೃತ್ತಿ ಪ್ರವೃತ್ತಿ ಮಾರ್ಗ.

(ಅ) ಭಗವಂತನ ಅಂಶವೇ ಎಲ್ಲರಲ್ಲಿಯೂ ಇರುವುದು. ಎಲ್ಲರ ಅಂತರ್ಯಾಮದಲ್ಲಿದ್ದುಕೊಂಡು ಅವನೇ ಈ ಲೀಲೆಯನ್ನು ಆಡುತ್ತಿರುವನು. ಭಿನ್ನಭಿನ್ನ ವಿಭೂತಿಯನ್ನು ಪ್ರಕಟಿಸುವದಕ್ಕಾಗಿ ಇಷ್ಟು ಅಸಂಖ್ಯಾತ ದೇಹಗಳನ್ನು ಧಾರಣಮಾಡಿರುವನು. ಅವನ ವಿಭೂತಿಗಳು ಅನಂತವಾಗಿವೆ ಎಂದು ಅವನೇ ಹೇಳಿರುವನು. "ಪಿಂಡೇ ಪಿಂಡೇ ಮತಿರ್ಭಿನ್ನಾ ತುಂಡೇ ತುಂಡೇ ಸರಸ್ವತೀ" ಪ್ರತಿಯೊಬ್ಬ ವ್ಯಕ್ತಿಯೂ ಅದ್ವಿತೀಯನಾಗಿರುವನು. ಎಲ್ಲರೂ ತಮ್ಮ ಅಂತರ್ಯಾಮಿಯನ್ನು ಅರಿತುಕೊಂಡು ಅವನ ವಿರಾಟಲೀಲೆಯಲ್ಲಿ ತಾವೇನು ಮಾಡಬೇಕಾಗಿದೆಯೆಂಬುದನ್ನು ತಿಳಿದುಕೊಂಡು ಶಾಂತಿಯಿಂದಲೂ ಆನಂದದಿಂದಲೂ ನೆರವಾಗಬೇಕಾದರೆ ತಮ್ಮ ಅದ್ವಿತೀಯತ್ವದ ಜ್ಞಾನವಾಗಲುಬೇಕು. ಇಷ್ಟೇ ಅಲ್ಲ. ಎರಡನೆಯವರ ಸೇವೆಯ ಪರ್ಯಾಯವನ್ನೂ ಒಪ್ಪಿಕೊಳ್ಳುವದಲ್ಲದೆ ಪ್ರತಿವ್ಯಕ್ತಿಗೂ ಅವರವರ ಸ್ವಭಾವದಂತೆಯೂ ಸ್ವಧರ್ಮದಂತೆಯೂ ಬೆಳೆಯಲೂ ಇಂಬುಮಾಡಿಗೊಡಲೂ ಬೇಕು. ನೆರವಾಗಲೂ ಬೇಕು. ಇದು ಮೊದಲನೆಯದು.

(ಆ) ಹೇಗೆ ವ್ಯಕ್ತಿಗೊ ಹಾಗೆ ಜಾತಿಗೆ ನಾಡಿಗೆ (Race, Nation) ಒಂದು ವೈಶಿಷ್ಟ್ಯವಿದೆ. ಹೇಗೆ ವ್ಯಕ್ತಿಪುರುಷನು ಶ್ರದ್ಧಾಮಯನೊ ಹಾಗೆ ಜಾತಿಪುರುಷನೂ ಶ್ರದ್ಧಾಮಯನು. ಜಾತಿಪುರುಷನ ಶ್ರದ್ಧಾಸಂಪತ್ತಿಗೇ 'ಸಂಸ್ಕೃತಿ–ಸಂಸ್ಕೃತಿ' ಎಂದು ಹೆಸರು. ಯಾವ ಜಾತಿಯೂ ತನ್ನ 'ಸಂಸ್ಕೃತಿ'ಯನ್ನು ಕಳೆದುಕೊಳ್ಳಲು ಒಪ್ಪಿಕೊಳ್ಳದು, ಹಾಗೆ ಒಪ್ಪಿಕೊಂಡದ್ದಾದರೆ ಅದೂ ಒಂದು ರಾಷ್ಟ್ರೀಯ ಆತ್ಮಹತ್ಯೆ. ಪರಕೀಯರು ಅದನ್ನು ನಿರ್ಮೂಲಮಾಡಲೆಣಿಸಿದರೆ ಅದೂ ಒಂದು ರಾಷ್ಟ್ರೀಯ ಜೀವಹತ್ಯೆ. ಬಯಕೆಯುಳಿದು ಸತ್ತವರು ಇದ್ದವರಿಗೆ ಬಡಕೊಳ್ಳುವರು ಎಂದೆನ್ನುವಂತೆ ಈ ಹತ ಸಂಸ್ಕೃತಿಗಳು ಇದ್ದ ಸಂಸ್ಕೃತಿಗಳಲ್ಲಿ ಸಂಮಿಶ್ರವಾಗಿ ತಮ್ಮ ಬಯಕೆಯ ಭೋಗವು ತೀರುವವರೆಗೆ ಅವು ಮುಂದೆ ಸಾಗದಂತೆ ಮಾಡುವವು. ಆದಕಾರಣ ಜಾತಿಜೀವನವು ಸುಸಂಪನ್ನವಾಗಲು ವ್ಯಕ್ತಿಗಳ ಸ್ವವಿಹಿತ ವೃತ್ತಿಗಳಿಗೆ ಹೇಗೆ ನಾವು ಇಂಬುಕೊಡುವೆವೊ ಹಾಗೆಯೆ ಮಾನವಜೀವನವು ಅತುಲ ವೈಭವಶಾಲಿಯಾಗಬೇಕಾದರೆ ಜಾತಿಸಂಸ್ಕೃತಿಗಳಿಗೆ ಯುಕ್ತಸ್ಥಾನವನ್ನು ಕೊಡಲೇಬೇಕು. ವ್ಯಕ್ತಿಗಳು ಜಾತಿಗೆ ಸಂಪೂರಕಗಳಾಗಿಯೂ ಜಾತಿಗಳು ಮಾನವಜೀವನಕ್ಕೆ ಸಂಪೂರಕಗಳಾಗಿಯೂ ಇರುವುದರಲ್ಲಿಯೇ ಪಾರ್ಥಿವ ಜೀವಿತದ ಪರಮಾವಧಿಯ ಆನಂದವಿದೆ.

(ಇ) ಎಲ್ಲ ಸಂಸ್ಕೃತಿಗಳ ಕೆಚ್ಚು ಧರ್ಮದಲ್ಲಿದೆ. ಎಲ್ಲ ಧರ್ಮಗಳೂ ತಾವು ಮಾನವನ ಕಲ್ಯಾಣಕ್ಕಾಗಿ ಬಂದಿರುವುದಾಗಿ ಬಿರುದುತೊಟ್ಟಿವೆ. "ಧಾರಣಾತ್ ಧರ್ಮ

ಮಿಥ್ಯಾಹುಃ " ಸಮಾಜದ ಸುಸ್ಥಿತಿಯೇ ಧರ್ಮದ ರೂಪ. ಸಮಾಜದ ಅವನತಿಯೇ ಅಧರ್ಮದ ಪ್ರಸಾರ- ಧರ್ಮವೇನೋ ಪರಲೋಕದ ಸಾಧನವಿರಬಹುದು. ಇಹ ಲೋಕದ ಮಟ್ಟಿಗೆ ಅದೇ ನಮ್ಮ ಸಿದಿ. ಪರಲೋಕದ ಹೂಲಿಯನ್ನೆಬ್ಬಿಸಿ ಇಹಲೋಕದಲ್ಲಿ ಅವ್ಯವಸ್ಥೆಯನ್ನು ಹಬ್ಬಿಸುವುದು ನಾಮಧಾರಕ ಧರ್ಮ! ಅದೊಂದು ಪರಮ ಧೂರ್ತವಾದ ಅಧರ್ಮ! ಧರ್ಮ ಧರ್ಮ ಎಂದು ನೀತಿಯ ನೆತ್ತಿಯ ಮೆಟ್ಟಿ ಪರಹಿತಕ್ಕೆ ಪರಾಙ್ಮುಖವಾಗಿ, ಸ್ವಹಿತದ ಎಚ್ಚರವಿಲ್ಲದೆ ಮದೋನ್ಮತ್ತವಾಗಿ ಕುಣಿಯುವುದು ಧರ್ಮವಲ್ಲ! ಯಾವ ಧರ್ಮವೂ ಹೀಗೆ ಹೇಳದು. ಪ್ರತಿಯೊಂದು ಧರ್ಮವೂ ಮಾನವನ ಹಿತದೊಂದು ಸಂದೇಶವನ್ನು ಹೊತ್ತು ಹೆತ್ತು ಜೀವಿಸುತ್ತಲಿವೆ. ಭಿನ್ನಭಿನ್ನ ಜಾತಿಯ ಸಂಸ್ಕೃತಿಗಳು ಆಯಾ ಜಾತಿಗಳ ಧರ್ಮಗಳನ್ನು ಸಫಲೀಕರಿಸುವ ವಿಧಿವಿಧಾನಗಳೂ ತಂತ್ರಗಳೂ ಆಗಿವೆ. ಈ ಬುದ್ಧಿಯೂ ತಿಳುವಳಿಕೆಯೂ ಇಲ್ಲದಿದ್ದರೆ ಮತಮತಗಳೂ ಒಗೆತನದಿಂದ ಇರುವುದೇ ಕಷ್ಟ. ಒಗೆತನವಿಲ್ಲದುದು ಎಂಥ ವಿಶ್ವ ಕುಟುಂಬ. ಮಾನವ ಕುಟುಂಬವು ಇಲ್ಲಿಯ ತನ್ನ ಪರಮ ಸಿದ್ಧಿಯನ್ನು ಕಾಣಬೇಕಾದರೆ ಪ್ರತಿಧರ್ಮದೊಳಗಿನ ಧಾರಣಾಶಕ್ತಿಗೆ ಮಹತ್ತ್ವವನ್ನು ಕೊಟ್ಟು ಅದನ್ನು ಆದರಿಸಲುಬೇಕು.

(ಈ) ಈ ಜಗತ್ತಿಗೂ ಮಾನವಜನ್ಮಕ್ಕೂ ಇರುವ ಯೋಗ್ಯ ಮಹತ್ತ್ವವನ್ನು ಕಾಲಕಾಲಕ್ಕೆ ಜ್ಞಾನಿಗಳು ತಿಳಿಸಿಹೇಳಿರುವರು. ಕರ್ಮಯೋಗಿಗಳು ಮಾಡಿತೋರಿಸಿರುವರು. ಭಕ್ತರು ಇದ್ದು ತೋರಿಸಿರುವರು. ಆದಾಗ್ಗೆಯೂ ತಪ್ಪು ತಿಳಿದುಕೊಂಡು ತಪ್ಪು ಮಾಡಿ ತಪ್ಪು ಇರುವವರಿಗೆ ಕೊರತೆ ಇಲ್ಲ. ಕೆಲವರು ಈ ಜಗತ್ತನ್ನು ಒಕ್ಕಲಿದ್ದವರು ಬಾಡಿಗೆಯ ಮನೆಯ ಕಂಡಂತೆ ಕಾಣುವರು; ಕೆಲವರಿಗೆ ಇದೊಂದು ಧರ್ಮಸಾಲೆ ಮತ್ತೆ ಕೆಲವರಿಗೆ ಈ ಜನ್ಮ ಮೂರು ದಿನದ ಸಂತೆ; ಬೇರೆ ಕೆಲವರಿಗೆ ಇದೆಲ್ಲ ಸ್ವಾರಸ್ಯವಿಲ್ಲದ ಜಂಜಡ. ಕೆಲವರಿಗಂತೂ ಈಗಿನ ಕಾಲ ಲಕ್ಷಾವಧಿವರ್ಷದ ಕಲಿಕಾಲ, ಜಗತ್ತೊಂದು ಮಾಯೆಯ ಮೊಟ್ಟೆ, ಮಾನವಜನ್ಮವೊಂದು ಅನರ್ಥಕಾರಿಯಾದ ಸಂದರ್ಭವಿಶೇಷ. ಇಂಥವರಿಗೆ ಏನು ಹೇಳಬೇಕಾಗಿಯೂ ಇಲ್ಲ; ಅವರು ಕೇಳುವುದೂ ಇಲ್ಲ; ಅವರಿಗೆ ಹೊಸ ಮಾತು ತಿಳಿಯುವುದೂ ಇಲ್ಲ; ಅವರು ತಿಳಿದುಕೊಳ್ಳಬೇಕೆಂದು ಪ್ರಯತ್ನಿಸುವುದೂ ಇಲ್ಲ. ಆದರೆ ಈ ಕಲಿಯುಗದ ಗೊಬ್ಬರದೊಳಗಿಂದ ಕೃತಯುಗದ ಪಯಿರು ಬರುವುದೆಂಬ ನಂಬಿಗೆಯುಳ್ಳವರೆ ಮಾನವಕುಟುಂಬದ ಭವ್ಯಭವಿತವ್ಯದ ವಿಷಯದಲ್ಲಿ ವಿಶ್ವಾಸವನ್ನಿಡುವರು. ಆ ಕೃತಯುಗವು ಅವಾಂತರಯುಗವೆಂದೇ ಬರಲಿ ಹೇಗೇ ಬರಲಿ ಕೃತಯುಗ ಸದೃಶಕಾಲವು ಈ ಕಲಿಯೊಳಗಿಂದ ಉದಯಿಸುವದೆಂಬ ಶ್ರದ್ಧೆಯಿಂದ ತ್ರಿಕರಣಪೂರ್ವಕವಾಗಿಯೂ ಸರ್ವಾತ್ಮನಾ ಸೇವೆಯನ್ನರ್ಪಿಸುವವರು ಈಗ ಬೇಕಾದ ಜನರು. ಭವ್ಯಭವಿತವ್ಯದಲ್ಲಿ ಶ್ರದ್ಧೆಯಿಲ್ಲದೆ ಅನುಷ್ಠಾನವಾಗದು; ಅನುಷ್ಠಾನವಿಲ್ಲದೆ ಭವ್ಯಭವಿತವ್ಯದ ಸಫಲತೆ ಕಂಡುಬರದು.

(ಉ) ಆದರೆ ಈ ಕಾರ್ಯದ ಹಾದಿ ಪೌರುಷೋನ್ಮತ್ತಪ್ರವೃತ್ತಿಯದೂ ಅಲ್ಲ; ದೈವಾವಲಂಬದ ನಿವೃತ್ತಿಯದೂ ಅಲ್ಲ. 'ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ । ನಿರಾಶೀರ್ನಿರ್ಮಮೋಭೂತ್ವಾ ಯುಧ್ಯಸ್ವ ವಿಗತಜ್ವರಃ' ಈ ಮಾರ್ಗವಿದು. 'ದೇವನಲ್ಲಿ ನಿವೃತ್ತಿ ದೇವನಿಂದ ಪ್ರವೃತ್ತಿ' ಎಂಬ ಮಾರ್ಗವಿದು. ಲೀಲಾವತಾರಿಯಾದ ನಾರಾಯಣನು ದುಷ್ಟನಿಗ್ರಹ ಶಿಷ್ಟ ಪರಿಪಾಲನಪೂರ್ವಕವಾಗಿ ಧರ್ಮಸಂಸ್ಥಾಪನೆಯನ್ನು ಮಾಡಿ ಜಗತ್ತಿಗೆ ಸ್ಥಿತಿದಾಯಕನಾಗುವಂತೆ ಅವನಂಶದವರಾದ ನರರೂ ಈ ಬಗೆಯ ಕಾರ್ಯದಲ್ಲಿ ಉಜ್ಜುಗಿಸಲುಬೇಕು. ಕರ್ಮಸಂಗಿಗಳಿಗೆ ಉಪಾಸನಾಬಲದಿಂದ ದೇವರ ಜೊತೆಕೊಟ್ಟು ಕರ್ಮಯೋಗಿಗಳನ್ನು ಮಾಡುವ ಮಾರ್ಗವಿದು. ಶ್ರೀಕೃಷ್ಣನ ಗೀತಾಮಾರ್ಗ! ದಾಸರಮಾರ್ಗ, ಶರಣರ ಮಾರ್ಗ, ಧರ್ಮಸಂಸ್ಥಾಪಕರ ಮಾರ್ಗ, ರಾಜರ್ಷಿಗಳ ಮಾರ್ಗ, ಮಾನವನ ಪ್ರಗತಿಯ ಮಾರ್ಗ, ಈಶಸಂಕಲ್ಪಿತ ಮಾರ್ಗ, ಎಲ್ಲರ ಒಲವಿನ ಮಾರ್ಗ! ಏನಾಗುವದೋ ಬಿಡುವದೋ ಎಂಬ ಅಂಜಿಕೆಗಾಗಲಿ, ನನ್ನಂತೇ ಆಗಬೇಕೆಂಬ ಅಹಂಕಾರಕ್ಕಾಗಲೀ ಇಲ್ಲಿ ಎಡೆಯಿಲ್ಲ. ಪ್ರತಿಯೊಬ್ಬನು ತನ್ನ ವಿಹಿತವೃತ್ತಿಯನ್ನು ತಿಳಿದುಕೊಂಡು ಭಗವದಾರಾಧನಾಪೂರ್ವಕವಾಗಿ ಮಾನವಜನ್ಮದ ಸಾರ್ಥಕತೆಯನ್ನೂ ಸಫಲತೆಯನ್ನೂ ಆಗಿಸಬೇಕೆಂದು ಹೇಳುವ ಮಾರ್ಗವೇ ಈ ಎಲ್ಲ ಉದ್ದೇಶಗಳನ್ನು ಪೂರಯಿಸುವ ಮಾರ್ಗ.

(ಮುಂದೆ ಸಾಗುವದು.)

—ದ. ರಾ. ಬೇಂದ್ರೆ

---

## *ಗಡಿಯಾಳವು

ಗಡಿಯಾಳ ಮಡದಿಯಂದದಿ ।
ನಡೆಯುವದಿಡಿದಿವಸರಾತ್ರಿ ನಡುಮನೆಯಲ್ಲೇ ॥
ಒಡೆಯನು ಕಣ್ಮರೆಯಾಗದೆ ।
ನಡೆಯೆಂದರೆ, ನಡೆವುದವನ ಕಯ್ವಶವಾಗಿ[೧] ॥ ೧ ॥
ಅರ್ಧಾಂಗಿಯಂತೆಯೊಪ್ಪುತ ॥
ಅರ್ಧಾಂಗಿಯೊಳಿರ್ದು[೨] ವಾಚ್ಯನಾಮವ[೩] ಧರಿಸಿ ॥

---

* ಎಲ್ಲ ಬಗೆಯ ಗಡಿಯಾರಗಳನ್ನುದ್ದೇಶಿಸಿ ಹೇಳಿದ ವಿಚಾರಗಳನ್ನು ಅತಿ ಉದ್ವಿಗ್ನ ಸ್ಥಿತಿಯೊಳಗೆ ಹೊತ್ತುಹೋಗುವದಕ್ಕೆ ಗಡಿಯಾರವನ್ನು ಒಳ್ಳೇ ಹೆಂಡತಿಗೆ ಹೋಲಿಸಿ ಬರೆದ ಕಂದಗಳು.

೧ ಸ್ವವಶವಾಗಿ. ೨ ಜಾಕೇಟ್. ೩ ಅವಾಚ್ಯ ನಾಮವಲ್ಲ ಸುವಾಚ್ಯ ಹೆಸರೆಂಬ ಅಭಿಪ್ರಾಯವು.

ವರ್ಧಿಪ[೪] ಕಾಲಕ್ಕನುಗುಣ ।
ಸಾರ್ಥವು[೫] ಪತಿಯಿಂದ ಮೆರೆವುದಿಂಗಿತವರಿತು ॥ ೨ ॥
ಯಜಮಾನನಂದಗೊಳಿಸುತ ।
ದ್ವಿಜರಿಗೆ[೬] ಪಂಚಮರಿಗಾದರೊಂದೇ ನುಡಿದು ॥
ವಿಜಯಾಪಜಯದಿ ಸರಿಯಿರೆ ।
ಸುಜನನಿಸುತೆಯಂತೆ[೭] ವಾಚ್ಛ ಮೆರೆಯುವದಲ್ತೆ ॥ ೩ ॥
ಹುಟ್ಟಿದ[೮] ಮನೆಯನ್ನೆನಿಸದೆ ।
ಇಟ್ಟಂತಿರುತಿರ್ಪ[೯] ಗಂಡಕೆಡಿಸಿರೆ ಕೆಟ್ಟು ॥
ಬಿಟ್ಟೋಡದೆ, ಸರಿಮಾಡಿಸೆ ।
ಸಿಟ್ಟಿಲ್ಲದೆ ಮೊದಲಿನಂತೆ ನಡೆವಳಿಗರತಿ[೧೦] ॥ ೪ ॥
ದಿನಕೆಂಟುದಿನಕೆ[೧೧] ಮೆಲ್ಲನೆ ।
ಮನದೊಲ್ಲಭ ಮೈಸ್ಪರ್ಶದಡವೆ[೧೨] ಸಂತಸದಿಂದ ॥
ಇನಿದಾಗಿ ನುಡಿದು ದಿನದಿನ ।
ಸನಿಯಕ್ಕಿರುತಿರುವ ವಸ್ತು ಬೇಸರಿಸುವದೆ? ॥ ೫ ॥
ದಿನದಿನವಾಯಿಲಿಂಗೆನ್ನುತ[೧೩] ।
ಮನವಮ್ಮರುಗಿಸುದೆ ಪತಿಯ ಸಂಸಾರದಲಿ ।
ಜನರಾದರಕ್ಕೆ ಪಾತ್ರವು ।
ಘನಗುಣಿ[೧೪] ಗಡಿಯಾರ ಸತ್ಕುಲತ್ರಕೆ ಸರಿಯು ॥ ೬ ॥

—ಶಾಮ್ಯಾನಂದ

---

೪ ಬೆಳೆಯುವ ಕಾಲಾನುಸಾರ. ೫ ಗಂಡನಿಂದೊಡಗೂಡಿ ೬ ಬ್ರಾಹ್ಮಣರಿಂದ ಹೊಲಿಯರ ವರೆಗೆ. ೭ ಒಳ್ಳೆಯ ತಾಯಿಯ ಮಗಳಂತೆ. ೮ ಸ್ವತ್ವರ್ಲಗಂಡನೆಂಬ ತೌರಮನೆಯನ್ನು. ೯ "ಗಂಡಕಲಿಸಿದ ಹಾದರ ತಾಯಿ ಕಲಿಸಿದ ಕಳವು." ೧೦ ಗರಗರ ತಿರುಗವ. ಗಡಿಯಾಳ. ೧೧ ದಿನಕ್ಕೊಮ್ಮೆ ಇಲ್ಲವೆ ೮ ದಿನಕ್ಕೆ. ೧೨ ದೇಹಸ್ಪರ್ಶಮಾಡಲು. ೧೩ ಎಣ್ಣೆ ಉಪ್ಪು ಜೀರಿಗೆ ಮೊದಲಾದ್ದೆಂದು ಕೂಡಿ ಹೆರೆಯುವದು.

तिलतैलतंडुलेधंनकुटुंबभर चिंतयासततम् । बुद्धिर्बुद्धिमतामपि रेबाबानास्ति तैलं नचलवणमपोत्यादिवाचांप्रचारः । (ಇಂಥ ನುಡಿಯಿಂದ ಮನುಷ್ಯನು ಸಣ್ಣಾಗುವನು)

೧೪ ಒಳ್ಳೆ ಹೆಂಡತಿಗೆ (अचेतनेचेतनाध्यारोपः......)—क्षेमेंद्र.

# ಗುರು ಅರವಿಂದರದೊಂದು ಮಹತ್ತ್ವದ ಓಲೆಯು

( ಅನುವಾದಕ—ಪ್ರಸಾದ. )

( ಇದನ್ನು ತಮ್ಮ ಚಿಕ್ಕ ತಮ್ಮನಾದ ಶ್ರೀವಾರೀಂದ್ರಕುಮಾರ ಘೋಷರಿಗೆ ತಾ. ೭ನೇ ಎಪ್ರೀಲ ೧೯೨೦ನೇ ಇಸ್ವಿಯಲ್ಲಿ ಬರೆದಿದ್ದರು. )

ತಮ್ಮಾ!

ನಿನ್ನ ಮೂರು ಓಲೆಗಳು ಕೈಸೇರಿದವು. ಒಂದಕ್ಕೂ ಮಾರೋಲೆಯನ್ನೀಯಲಿಲ್ಲ. ಈಗ ಅದಕ್ಕೆ ಉತ್ತರ ಬರೆಯಲು ಕುಳಿತಿದ್ದೇನೆ. ಇದೊಂದು ದೈವೀ ಚಮತ್ಕಾರವೆಂದೂ ಅನ್ನಬಹುದು. ಇಲ್ಲವೆ ನನ್ನ ಮರುಳುತನವೆಂದೂ ಅನ್ನಬಹುದು. ಮೊಟ್ಟಮೊದಲು ಓಲೆ ಬರೆಯಲಿಕ್ಕೆ ನನಗೆ ಹೆದರಿಕೆ. ಯಾಕಂದರೆ ಈಗ ಏಳೆಂಟು ವರ್ಷಗಳಿಂದ ಬಂಗಾಲಿಯಲ್ಲಿ ಪತ್ರಗಳನ್ನೇ ಬರೆದಿಲ್ಲ. ಬಂಗಾಲಿಯಲ್ಲಿ ಪತ್ರ ಬರೆಯುವದೆಂದರೆ ಅದೊಂದು ನನಗೆ ಕಪಿಲಾಷಷ್ಠಿಯ ಯೋಗವೇ ಸರಿ. ಒಂದು ವೇಳೆ ಅದು ಸಾಧ್ಯವಾಗಿ ಅಂಚೇ ಪೆಟ್ಟಿಗೆಯಲ್ಲೊಮ್ಮೆ ಬಿದ್ದಿತೆಂದರೆ ನನ್ನ ಪ್ರಸ್ತುತದ ಕಪಿಲಾಷಷ್ಠಿಯ ಯೋಗವು ಪೂರ್ಣವಾಯಿತೆಂದೆನ್ನಲಿಕ್ಕೇನೂ ಅಡ್ಡಿಯಿಲ್ಲ.

ನನ್ನ ಹೃದಯದಲ್ಲಿ ನಿವಾಸಿಯಾದ ಜಗದ್ಗುರುವೇ ಈ ಪೂರ್ಣಯೋಗದ ಹಾದಿಯನ್ನು ತೋರಿಸಿರುವನು. ಈ ಯೋಗಕ್ಕೆ ಹತ್ತು ಅಂಗಗಳು. ಕಳೆದ ಹತ್ತು ವರ್ಷಗಳಲ್ಲಿ ಅವುಗಳ ಅನುಭವವನ್ನುಂಡು ನನ್ನ ವಿಕಾಸ ( development ) ವನ್ನು ಮಾಡಿಕೊಂಡಿರುವೆನು. ಆದರೂ ಅದಿನ್ನೂ ಪೂರ್ಣವಾಗಿಲ್ಲ. ಅದು ಪೂರ್ಣವಾದ ಹೊರತು ನಾನು ಬಂಗಾಲಕ್ಕೆ ಬರಲಾರೆ. ಅಲ್ಲಿರಲಾರೆ. ಅದೇ ನನ್ನ ಯೋಗಸಿದ್ಧಿಯ ನಿರ್ದಿಷ್ಟ ಸ್ಥಳವಾಗಿರುವದು. ಕೇವಲ ಒಂದು ಅಂಗವನ್ನುಳಿದು ಉಳಿದೆಲ್ಲ ನನ್ನ ಕರ್ಮಗಳ ಕೇಂದ್ರವು ಬಂಗಾಲವೇ ಇರುವದು. ಆ ಒಂದು ಅಂಗವೆಂದರೆ ಕರ್ಮ. ಆ ಕರ್ಮದ ಪರಿಧಿಯು ಇದೇ ಭರತಖಂಡವೇ ಏಕೆ, ಈಡೀ ಸಂಸಾರವನ್ನೇ ವ್ಯಾಪಿಸಬಹುದೆಂಬ ಆಶೆ.

ಯೋಗಮಾರ್ಗವು ಏನಿರುವದೆಂಬುದನ್ನು ಮುಂದೆ ಹೇಳುವೆನು. ನೀನಿಲ್ಲಿಗೆ ಬರುವದಾದರೆ ಪ್ರತ್ಯಕ್ಷವಾಗಿಯೇ ಹೇಳುವೆನು. ಇಂಥ ಮಾತುಗಳನ್ನು ಬರೆದು ತಿಳಿಸುವದಕ್ಕಿಂತಲೂ ಬಾಯಿಂದ ತಿಳಿಸುವದೇ ಉತ್ತಮವು. ಅದರ ವಿಷಯಕ್ಕೆ ಇಲ್ಲಿ ಇಷ್ಟೇ ಹೇಳುವೆನು. ಪೂರ್ಣಜ್ಞಾನ, ಪೂರ್ಣಕರ್ಮ ಮತ್ತು ಪೂರ್ಣಭಕ್ತಿ—ಇವುಗಳ ಸಮುಚಿತ ಸಂಗತಿ ಮತ್ತು ಐಕ್ಯವನ್ನು ಮಾನಸಿಕ ಭೂಮಿಯಿಂದ ಮೇಲಕ್ಕೆಬ್ಬಿಸಿ ಹೃದಯಕ್ಕೆ ಅತೀತವಾದ ವಿಜ್ಞಾನ ಭೂಮಿಯಲ್ಲಿ ಒಯ್ದು ಬಿಡುವದು ಮತ್ತು

ಷ್ಠೆಯೇ ಅದರ ಪೂರ್ಣ ಸಿದ್ಧಿಯನ್ನು ಮಾಡುವದು. ಇದು ಯೋಗದ ಮೂಲತತ್ತ್ವ
ಾಗುವದು. ಹಳೇ ಯೋಗಪದ್ಧತಿಯಲ್ಲಿದ್ದ ದೋಷವೆಂದರೆ, ಅದರಲ್ಲಿ ಚಿತ್ತವು
ದ್ಧಿಗೆ ಯಾವ ಪ್ರಕಾರದಲ್ಲಿ ಗೋಚರವಾಗುತ್ತದೋ ಅದೇ ರೀತಿಯಲ್ಲಿ ಆತ್ಮಕ್ಕೂ
ುವದು. ಆತ್ಮದ ಅನುಭೂತಿಯು ಚಿತ್ತದಲ್ಲಿ ಆಗಿಹೋಗುವದರಿಂದ ಮಾನವನು
ನ್ನೇ ಆನಂದವಾಗಿ ಮನ್ನಿಸುತ್ತಾನೆ. ಆದರೆ ಅನಂತ ಮತ್ತು ಅಖಂಡವಾದ ತತ್ತ್ವ
.ಆಕಲನ ಮಾಡುವದರಲ್ಲಿ ಅವನು ಅಸಮರ್ಥನಾಗುತ್ತಾನೆ. ಅವುಗಳ ಆಕಲನ
ಡುವದಕ್ಕೆ ಸಮಾಧಿ ಮೋಕ್ಷ ಮತ್ತು ನಿರ್ವಾಣ ಮುಂತಾದ ಮಾನಸಿಕ ಉಪಾಯ
ಹೊರ್ತು ಬೇರೆ ಉಪಾಯಗಳಿಲ್ಲ. ಈ ಲಾಭದಲ್ಲಿದ್ದ ವೈಶಿಷ್ಟ್ಯವಾದರೂ ಏನು?
ನವಜೀವನದ ವ್ಯಷ್ಟಿಯಲ್ಲಿಯೆಂತೋ ಅಂತೇ ಸಮಷ್ಟಿಯಲ್ಲಿಯೂ, ಪರಮಾತ್ಮನ
ನ ಮತ್ತು ಬ್ರಹ್ಮದ ಪ್ರತ್ಯಕ್ಷ ದರ್ಶನವು ಆಗಲೇ ಬೇಕು. ಅದೆಲ್ಲಿದೆ?

ಪ್ರಾಚೀನ ಯೋಗಪದ್ಧತಿಯು ಆಧ್ಯಾತ್ಮಿಕ ಮತ್ತು ವ್ಯಾವಹಾರಿಕ ಜೀವನಗಳ
ಷ್ಟನ್ನೂ, ಹುರಿಕಟ್ಟನ್ನೂ ಮಾಡಲಾರದು. ಸಂಸಾರವು ಮಾಯೆಯೆಂದೂ, ಅನಿತ್ಯ
ಯೆಂದೂ ಅದನ್ನು ಹಾರಿಸಿ ಬಿಡುತ್ತದೆ. ಇದರ ಪರಿಣಾಮವೆಂದರೆ ಜೀವನಶಕ್ತಿ
ು ಹ್ರಾಸವಾಯಿತು. ಅಂತೇ ನಮ್ಮ ಭಾರತವರ್ಷದ ಸ್ಥಿತಿಯು ದೆಸೆಗೆಟ್ಟಿರು
. ಗೀತೆಯಲ್ಲಿ ಹೇಳಿದಂತೆ उत्सीदेयुरिमे लोकाः न कुर्यां कर्म चेदहम्. ಭರತ
ಷದ इमे लोकाः (ಈ ಜನರು) ನಿಜವಾಗಿಯೂ ಉತ್ಸನ್ನವಾಗಿರುವರು. (ಕಂಗೆಟ್ಟ
ಂಗೆಟ್ಟಿರುವರು.) ಕೆಲ ಸನ್ಯಾಸಿಗಳು, ವಿರಕ್ತರು, ಮತ್ತು ಸಾಧುಗಳು, ಸಿದ್ಧರು
ಾಗೂ ಮುಕ್ತರು ಆಗಿ ಹೊದರೇನೋ ನಿಜ. ಕೆಲ ಭಕ್ತರು ಪ್ರೇಮಭಾವ ಮತ್ತು ಆನಂ
ಳ ಅಧೀನರಾಗಿ ಕುಣಿಯಹತ್ತಿದರೇನೋ ನಿಜ. ಆದರೆ ಉಳಿದೆಲ್ಲರು ಪ್ರಾಣಹೀನ
ದ್ಧಿಹೀನರಾಗಿ ಅಂಧಃಕಾರದಲ್ಲಿ ಮುಳುಗಿ ಬಿಟ್ಟರು. ಇಂಥ ಆಧ್ಯಾತ್ಮಿಕ ಶಕ್ತಿ
ಪ್ರಯೋಜನವಾದರೂ ಏನು? ಅಧ್ಯಾತ್ಮಜ್ಞಾನದ ಒಂದಂಶದ ಅನುಭೂತಿಯು
ಲ್ಲೇ ಸಂತುಷ್ಟರಾಗಿರದೆ, ವಿಜ್ಞಾನಭೂಮಿಯ ಮೇರೆಯನ್ನು ಮೀರಿ ಹೋಗಿರಲು
ಣಿಸಬೇಕು. ಅದರ ಹೊರ್ತು ಸಂಸಾರದ ರಹಸ್ಯವು ತಿಳಿಯಲಾರದು. ಸಂಸಾರದ
ಟುಗಳು ಒಡೆಯಲಾರವು. ಅದರ ಹೊರ್ತು ಆತ್ಮ ಮತ್ತು ಜಗತ್ತು, ಅಧ್ಯಾತ್ಮ
ತ್ತು ಜೀವನ ಈ ದ್ವಂದ್ವಗಳು ಅಡಗಲಾರವು. ಇಂಥ ಸ್ಥಿತಿಗೊಮ್ಮೆ ನಾವು ಏರಿ
, ಸಂಸಾರವು ಮಾಯೆಯಲ್ಲವೆಂಬುವುದು ಗೋಚರವಾಗುವದು. ಸಂಸಾರ
ದು ಭಗವಂತನ ಸನಾತನ ಲೀಲೆಯು. ಆತ್ಮದ ವಿಕಾಸವೆಂಬ ಜ್ಞಾನವು ಆಗ
ನುಭವಕ್ಕೆ ಬರುವದು. ಭಗವಂತನ ಪೂರ್ಣ ಜ್ಞಾನವೂ, ಅವನ ಪ್ರಾಪ್ತಿಯೂ
ಗ ತಾನೇ ಸಾಧ್ಯವು. ಗೀತೆಯಲ್ಲಿ ಹೇಳಿದ " समग्रं मां ज्ञात्वा " ಎಂಬ ವಾಕ್ಯದ
ವು ಆಗ ಹೊಳೆಯುವದು, ತಿಳಿಯುವದು.

# ಗುರು ಅರವಿಂದರದೊಂದು ಮಹತ್ತ್ವದ ಓಲೆಯು

( ಅನುವಾದಕ—ಪ್ರಸಾದ. )

( ಇದನ್ನು ತಮ್ಮ ಚಿಕ್ಕ ತಮ್ಮನಾದ ಶ್ರೀವಾರೀಂದ್ರಕುಮಾರ ಘೋಷರಿಗೆ ತಾ. ೭ನೇ ಎಪ್ರೀಲ ೧೯೨೦ನೇ ಇಸ್ವಿಯಲ್ಲಿ ಬರೆದಿದ್ದರು. )

ತಮ್ಮಾ!

ನಿನ್ನ ಮೂರು ಓಲೆಗಳು ಕೈಸೇರಿದವು. ಒಂದಕ್ಕೂ ಮಾರೋಲೆಯನ್ನೀಯಲಿಲ್ಲ. ಈಗ ಅದಕ್ಕೆ ಉತ್ತರ ಬರೆಯಲು ಕುಳಿತಿದ್ದೇನೆ. ಇದೊಂದು ದೈವೀ ಚಮತ್ಕಾರವೆಂದೂ ಅನ್ನಬಹುದು. ಇಲ್ಲವೆ ನನ್ನ ಮರುಳುತನವೆಂದೂ ಅನ್ನಬಹುದು. ಮೊಟ್ಟಮೊದಲು ಓಲೆ ಬರೆಯಲಿಕ್ಕೆ ನನಗೆ ಹೆದರಿಕೆ. ಯಾಕಂದರೆ ಈಗ ಏಳೆಂಟು ವರ್ಷಗಳಿಂದ ಬಂಗಾಲಿಯಲ್ಲಿ ಪತ್ರಗಳನ್ನೇ ಬರೆದಿಲ್ಲ. ಬಂಗಾಲಿಯಲ್ಲಿ ಪತ್ರ ಬರೆಯುವದೆಂದರೆ ಅದೊಂದು ನನಗೆ ಕಪಿಲಾಷಷ್ಠಿಯ ಯೋಗವೇ ಸರಿ. ಒಂದು ವೇಳೆ ಅದು ಸಾಧ್ಯವಾಗಿ ಅಂಚೇ ಪೆಟ್ಟಿಗೆಯಲ್ಲೊಮ್ಮೆ ಬಿದ್ದಿತೆಂದರೆ ನನ್ನ ಪ್ರಸ್ತುತದ ಕಪಿಲಾಷಷ್ಠಿಯ ಯೋಗವು ಪೂರ್ಣವಾಯಿತೆಂದೆನ್ನಲಿಕ್ಕೇನೂ ಅಡ್ಡಿಯಿಲ್ಲ.

ನನ್ನ ಹೃದಯದಲ್ಲಿ ನಿವಾಸಿಯಾದ ಜಗದ್ಗುರುವೇ ಈ ಪೂರ್ಣಯೋಗದ ಹಾದಿಯನ್ನು ತೋರಿಸಿರುವನು. ಈ ಯೋಗಕ್ಕೆ ಹತ್ತು ಅಂಗಗಳು. ಕಳೆದ ಹತ್ತು ವರ್ಷಗಳಲ್ಲಿ ಅವುಗಳ ಅನುಭವವನ್ನುಂಡು ನನ್ನ ವಿಕಾಸ ( development ) ವನ್ನು ಮಾಡಿಕೊಂಡಿರುವೆನು. ಆದರೂ ಅದಿನ್ನೂ ಪೂರ್ಣವಾಗಿಲ್ಲ. ಅದು ಪೂರ್ಣವಾದ ಹೊರತು ನಾನು ಬಂಗಾಲಕ್ಕೆ ಬರಲಾರೆ. ಅಲ್ಲಿರಲಾರೆ. ಅದೇ ನನ್ನ ಯೋಗಸಿದ್ಧಿಯ ನಿರ್ದಿಷ್ಟ ಸ್ಥಳವಾಗಿರುವದು. ಕೇವಲ ಒಂದು ಅಂಗವನ್ನುಳಿದು ಉಳಿದೆಲ್ಲ ನನ್ನ ಕರ್ಮಗಳ ಕೇಂದ್ರವು ಬಂಗಾಲವೇ ಇರುವದು. ಆ ಒಂದು ಅಂಗವೆಂದರೆ ಕರ್ಮ. ಆ ಕರ್ಮದ ಪರಿಧಿಯು ಇದೇ ಭರತಖಂಡವೇ ಏಕೆ, ಈಡೀ ಸಂಸಾರವನ್ನೇ ವ್ಯಾಪಿಸಬಹುದೆಂಬ ಆಶೆ.

ಯೋಗಮಾರ್ಗವು ಏನಿರುವದೆಂಬುದನ್ನು ಮುಂದೆ ಹೇಳುವೆನು. ನೀನಿಲ್ಲಿಗೆ ಬರುವದಾದರೆ ಪ್ರತ್ಯಕ್ಷವಾಗಿಯೇ ಹೇಳುವೆನು. ಇಂಥ ಮಾತುಗಳನ್ನು ಬರೆದು ತಿಳಿಸುವದಕ್ಕಿಂತಲೂ ಬಾಯಿಂದ ತಿಳಿಸುವದೇ ಉತ್ತಮವು. ಅದರ ವಿಷಯಕ್ಕೆ ಇಲ್ಲಿ ಇಷ್ಟೇ ಹೇಳುವೆನು. ಪೂರ್ಣಜ್ಞಾನ, ಪೂರ್ಣಕರ್ಮ ಮತ್ತು ಪೂರ್ಣಭಕ್ತಿ—ಇವುಗಳ ಸಮುಚಿತ ಸಂಗತಿ ಮತ್ತು ಐಕ್ಯವನ್ನು ಮಾನಸಿಕ ಭೂಮಿಯಿಂದ ಮೇಲಕ್ಕೆಬ್ಬಿಸಿ ಹೃದಯಕ್ಕೆ ಅತೀತವಾದ ವಿಜ್ಞಾನ ಭೂಮಿಯಲ್ಲಿ ಒಯ್ದು ಬಿಡುವದು ಮತ್ತು

ಅಲ್ಲಿಯೇ ಅದರ ಪೂರ್ಣ ಸಿದ್ಧಿಯನ್ನು ಮಾಡುವದು. ಇದು ಯೋಗದ ಮೂಲತತ್ವವಾಗಿರುವದು. ಹಳೇ ಯೋಗಪದ್ಧತಿಯಲ್ಲಿದ್ದ ದೋಷವೆಂದರೆ, ಅದರಲ್ಲಿ ಚಿತ್ತವು ಬುದ್ಧಿಗೆ ಯಾವ ಪ್ರಕಾರದಲ್ಲಿ ಗೋಚರವಾಗುತ್ತದೋ ಅದೇ ರೀತಿಯಲ್ಲಿ ಆತ್ಮಕ್ಕೂ ಆಗುವದು. ಆತ್ಮದ ಅನುಭೂತಿಯು ಚಿತ್ತದಲ್ಲಿ ಆಗಿಹೋಗುವದರಿಂದ ಮಾನವನು ಅದನ್ನೇ ಆನಂದವಾಗಿ ಮನ್ನಿಸುತ್ತಾನೆ. ಆದರೆ ಅನಂತ ಮತ್ತು ಅಖಂಡವಾದ ತತ್ವಗಳ ಆಕಲನ ಮಾಡುವದರಲ್ಲಿ ಅವನು ಅಸಮರ್ಥನಾಗುತ್ತಾನೆ. ಅವುಗಳ ಆಕಲನ ಮಾಡುವದಕ್ಕೆ ಸಮಾಧಿ ಮೋಕ್ಷ ಮತ್ತು ನಿರ್ವಾಣ ಮುಂತಾದ ಮಾನಸಿಕ ಉಪಾಯಗಳ ಹೊರ್ತು ಬೇರೆ ಉಪಾಯಗಳಿಲ್ಲ. ಈ ಲಾಭದಲ್ಲಿದ್ದ ವೈಶಿಷ್ಟ್ಯವಾದರೂ ಏನು? ಮಾನವಜೀವನದ ವ್ಯಷ್ಟಿಯಲ್ಲಿಯೆಂತೋ ಅಂತೇ ಸಮಷ್ಟಿಯಲ್ಲಿಯೂ, ಪರಮಾತ್ಮನ ಆತ್ಮನ ಮತ್ತು ಬ್ರಹ್ಮದ ಪ್ರತ್ಯಕ್ಷ ದರ್ಶನವು ಆಗಲೇ ಬೇಕು. ಅದೆಲ್ಲಿದೆ?

ಪ್ರಾಚೀನ ಯೋಗಪದ್ಧತಿಯು ಆಧ್ಯಾತ್ಮಿಕ ಮತ್ತು ವ್ಯಾವಹಾರಿಕ ಜೀವನಗಳ ಒಕ್ಕಟ್ಟನ್ನೂ, ಹುರಿಕಟ್ಟನ್ನೂ ಮಾಡಲಾರದು. ಸಂಸಾರವು ಮಾಯೆಯೆಂದೂ, ಅನಿತ್ಯ ಲೀಲೆಯೆಂದೂ ಅದನ್ನು ಹಾರಿಸಿ ಬಿಡುತ್ತದೆ. ಇದರ ಪರಿಣಾಮವೆಂದರೆ ಜೀವನಶಕ್ತಿಯು ಹ್ರಾಸವಾಯಿತು. ಅಂತೇ ನಮ್ಮ ಭಾರತವರ್ಷದ ಸ್ಥಿತಿಯು ದೆಸೆಗೆಟ್ಟಿರುವದು. ಗೀತೆಯಲ್ಲಿ ಹೇಳಿದಂತೆ उत्सीदेयुरिमे लोकाः न कुर्यां कर्म चेदहम्. ಭರತ ಖಂಡದ इमे लोकाः (ಈ ಜನರು) ನಿಜವಾಗಿಯೂ ಉತ್ಸನ್ನವಾಗಿರುವರು. (ಕಂಗೆಟ್ಟು ಮಂಗೆಟ್ಟಿರುವರು.) ಕೆಲ ಸನ್ಯಾಸಿಗಳು, ವಿರಕ್ತರು, ಮತ್ತು ಸಾಧುಗಳು, ಸಿದ್ಧರು ಹಾಗೂ ಮುಕ್ತರು ಆಗಿ ಹೋದರೇನೋ ನಿಜ. ಕೆಲ ಭಕ್ತರು ಪ್ರೇಮಭಾವ ಮತ್ತು ಆನಂದಗಳ ಅಧೀನರಾಗಿ ಕುಣಿಯಹತ್ತಿದರೇನೋ ನಿಜ. ಆದರೆ ಉಳಿದೆಲ್ಲರು ಪ್ರಾಣಹೀನ ಬುದ್ಧಿಹೀನರಾಗಿ ಅಂಧಃಕಾರದಲ್ಲಿ ಮುಳುಗಿ ಬಿಟ್ಟರು. ಇಂಥ ಆಧ್ಯಾತ್ಮಿಕ ಶಕ್ತಿಯ ಪ್ರಯೋಜನವಾದರೂ ಏನು! ಅಧ್ಯಾತ್ಮಜ್ಞಾನದ ಒಂದಂಶದ ಅನುಭೂತಿಯ ಮೇಲೇ ಸಂತುಷ್ಟರಾಗಿರದೆ, ವಿಜ್ಞಾನಭೂಮಿಯ ಮೇರೆಯನ್ನು ಮೀರಿ ಹೋಗಿರಲು ಹವಣಿಸಬೇಕು. ಅದರ ಹೊರ್ತು ಸಂಸಾರದ ರಹಸ್ಯವು ತಿಳಿಯಲಾರದು. ಸಂಸಾರದ ಒಗಟುಗಳು ಒಡೆಯಲಾರವು. ಅದರ ಹೊರ್ತು ಆತ್ಮ ಮತ್ತು ಜಗತ್ತು, ಅಧ್ಯಾತ್ಮ ಮತ್ತು ಜೀವನ ಈ ದ್ವಂದ್ವಗಳು ಅಡಗಲಾರವು. ಇಂಥ ಸ್ಥಿತಿಗೊಮ್ಮೆ ನಾವು ಏರಿದರೆ, ಸಂಸಾರವು ಮಾಯೆಯಲ್ಲವೆಂಬುವುದು ಗೋಚರವಾಗುವದು. ಸಂಸಾರವೊಂದು ಭಗವಂತನ ಸನಾತನ ಲೀಲೆಯು. ಆತ್ಮದ ವಿಕಾಸವೆಂಬ ಜ್ಞಾನವು ಆಗ ಪ್ರತ್ಯಯಕ್ಕೆ ಬರುವದು. ಭಗವಂತನ ಪೂರ್ಣ ಜ್ಞಾನವೂ, ಅವನ ಪ್ರಾಪ್ತಿಯೂ ಆಗ ತಾನೇ ಸಾಧ್ಯವು. ಗೀತೆಯಲ್ಲಿ ಹೇಳಿದ "समग्रं मां ज्ञातुम्" ಎಂಬ ವಾಕ್ಯದ ಅರ್ಥವು ಆಗ ಹೊಳೆಯುವದು, ತಿಳಿಯುವದು.

೪–೪೨೯

ಅನ್ನಮಯದೇಹ, ಪ್ರಾಣ, ಮನಸು ಮತ್ತು ಬುದ್ಧಿ, ವಿಜ್ಞಾನ, ಆನಂದ ಇವುಗಳು ಆತ್ಮದ ಪಂಚಕೋಶಗಳು ಅಥವಾ ಭೂಮಿಕೆಗಳು. ಈ ಪಂಚಕೋಶಗಳನ್ನು ದಾಟಿ ಎಷ್ಟೆಷ್ಟು ಮೇಲಕ್ಕೇರುವವೋ ಅಷ್ಟಷ್ಟು ವಿಕಾಸದ ಚರಮ ಸಿದ್ಧಾವಸ್ಥೆಯನ್ನು ಸಮೀಪಿಸುವೆವು. ವಿಜ್ಞಾನಭೂಮಿಕೆಯನ್ನು ಆರೂಢನಾದಂಥವನಿಗೆ ಆನಂದ ಭೂಮಿಕೆಯು ಸಹಜದಲ್ಲಿಯೇ ಪ್ರಾಪ್ತವಾಗುವದು. ಅಖಂಡ ಮತ್ತು ಅನಂತವಾದ ಆನಂದದ ಅವಸ್ಥೆಯಲ್ಲಿ ಸ್ಥಿರವಾಗುವೆವು. ಕೇವಲ ತ್ರಿಕಾಲಾತ್ಮಕ ಪರಬ್ರಹ್ಮದಲ್ಲಿಯೇ ಅಲ್ಲದೆ, ಪರದೇಹದಲ್ಲಿಯೂ ಸಂಸಾರದಲ್ಲಿಯೂ ಜೀವನಾಂತ ಸ್ಥಿರತೆಯನ್ನು ಹೊಂದುವೆವು. ಪೂರ್ಣ ಅಧಿಕಾರ, ಪೂರ್ಣ ಚೈತನ್ಯ ಮತ್ತು ಪೂರ್ಣಾನಂದ ಇವುಗಳು ಜೀವನದಲ್ಲಿ ವಿಕಾಸ ಹೊಂದುವವಲ್ಲದೆ, ಮೂರ್ತಿಮತ್ತಾಗಿ ಸ್ವರೂಪವನ್ನು ಕೂಡ ಧಾರಣ ಮಾಡುವವು. ಇದೇ ನನ್ನ ಯೋಗಮಾರ್ಗದ ತಿರುಳು, ಒಳಕೀಲ. ಈ ಅವಸ್ಥೆಯ ಪ್ರಾಪ್ತಿಯು ಸುಲಭವಿಲ್ಲ. ಈಗ ಹದಿನೈದು ವರ್ಷಗಳಿಂದ ಅದನ್ನು ದೊರಕಿಸಲು ಹಗಲಿರುಳೂ ಹೆಣಗುತ್ತಿರುವೆನು. ಈಗ್ಗೆ ವಿಜ್ಞಾನ ಭೂಮಿಯೊಳಗಿನ ಮೂರು ಮೆಟ್ಟಲುಗಳಲ್ಲಿ ಎಲ್ಲಕ್ಕೂ ಕೆಳಗಿದ್ದ ಮೆಟ್ಟಲಿನ ಮೇಲೆ ನಿಂತುಕೊಂಡು, ಅದಕ್ಕೂ ಕೆಳಗಿದ್ದ ಅವಸ್ಥೆಗಳ ಎಲ್ಲ ವೃತ್ತಿವ್ಯಾಪಾರಗಳನ್ನು ಆ ಉಚ್ಚ ಭೂಮಿಕೆಗೆ ಒಯ್ಯುವ ಉದ್ಯೋಗದಲ್ಲಿ ತೊಡಗಿರುವೆನು. ಇದರಲ್ಲಿ ನನಗೆ ಸಿದ್ಧಿಯು ದೊರಕಿದ ಮೇಲೆ ಪರಮಾತ್ಮನ ಕೃಪೆಯಿಂದ ನನ್ನಿಂದ ಬೇರೆಯವರಿಗೂ ಕೂಡ ಅಲ್ಪ ಪ್ರಯತ್ನದಿಂದ ಆ ವಿಜ್ಞಾನ ಭೂಮಿಯ ಸಿದ್ಧಿಯು ಆಗುವದು. ಇದರಲ್ಲಿ ತಿಲಮಾತ್ರವಾದರೂ ಸಂಶಯವಿಲ್ಲ. ಆಗಷ್ಟೇ ನನ್ನ ನಿಜವಾದ ಕಾರ್ಯದ ಪ್ರಾರಂಭವಾಗುವದು. ಕರ್ಮ ಸಿದ್ಧಿಯ ಪ್ರಾಪ್ತಿಗೋಸ್ಕರ ಅಷ್ಟೊಂದು ಅವಸರವನ್ನು ನಾನು ಮಾಡುತ್ತಿರುವದಿಲ್ಲ. ಪರಮಾತ್ಮನು ಯಾವಾಗ ಇಚ್ಛಿಸುವನೋ ಆಗ್ಗೆ ಅದು ತಾನೇ ಕೈಗೂಡುವದು. ಉನ್ಮತ್ತ ಮನುಷ್ಯನಂತೆ ತನ್ನ ಶಕ್ತಿಗಳ ಮಿಥ್ಯಾ ಅಹಂಭಾವವನ್ನು ಧಾರಣ ಮಾಡಿಕೊಂಡು ಕರ್ಮಕ್ಷೇತ್ರದಲ್ಲಿ ಜಿಗಿಯುವದರ ಕಡೆಗೆ ನನ್ನ ಪ್ರವೃತ್ತಿಯಾಗುವದಿಲ್ಲ. ಕರ್ಮಸಿದ್ಧಿಯಾಗದಿದ್ದರೆ ನನ್ನ ಧೈರ್ಯವೇನೂ ಕುಂದುವದಿಲ್ಲ. ಯಾಕಂದರೆ ಕರ್ಮವು ನನ್ನದಲ್ಲ. ಪರಮಾತ್ಮನದು. ಅನ್ಯರು ನನ್ನನ್ನು ಕರ್ಮಕ್ಷೇತ್ರಕ್ಕೆ ಕರೆದರೂ ನಾನು ಬರಲಾರೆ. ಯಾವಾಗ್ಗೆ ಪರಮಾತ್ಮನ ಪ್ರೇರಣೆಯಾಗುವದೋ ಆಗ್ಗೆ ನನ್ನ ಕೈಕಾಲುಗಳು ಹೇಳದೆ ಕೇಳದೆ ಆ ಕ್ಷೇತ್ರದ ಕಡೆಗೆ ಹರಿಯಲಾರಂಭಿಸುವವು.

ಒಡಕು ಮತ್ತು ಮತಭೇದಗಳಿಂದ ತುಂಬಿದ ಸಮಾಜವು ಯಾವ ಕೆಲಸದ್ದು? ಆತ್ಮಪ್ರತಿಷ್ಠೆ ಮತ್ತು ಆತ್ಮನ ಏಕಭಾವಗಳ ಮೂರ್ತಿಯಾದ ಸಮಾಜವು ಬೇಕಾಗಿದೆ. 'ಇಂಥ ಸಮಾಜದ ಅಥವಾ ಸಂಘಗಳ ಅವಶ್ಯಕತೆಯಾದರೂ ಏನೆಂದು ನೀನು ಕೇಳಬಹುದು ಮುಕ್ತಪುರುಷನ ಹತ್ತರ ಭೇದಾಭೇದಗಳಿರುವದಿಲ್ಲ. ಎಲ್ಲವೂ ಏಕತ್ವವೇ ಇರುತ್ತದೆ. ಈ ಏಕತ್ವವು ಹೇಗೆ ಒಬ್ಬ ವ್ಯಕ್ತಿಯಲ್ಲಿರುವದೋ ಅದೇ

ರೀತಿಯಾಗಿ ಬೃಹತ್ಪ್ರಮಾಣದಲ್ಲಿ ಸಮಾಜದಲ್ಲಿಯಾದರೂ ಇರುವದು. ಈ ಮಾತೇನೋ ನಿಜವಿದೆ. ಆದರೆ ಇದರಲ್ಲಿ ಸತ್ಯವು ಪೂರ್ಣವಿರದೆ ಅಂಶಮಾತ್ರವಾಗಿರುವದು. ನಮ್ಮ ವ್ಯವಹಾರಗಳೆಲ್ಲ ಕೇವಲ ನಿರಾಕಾರವಾದ ಆತ್ಮದ ಕೂಡ ಆಗುವದಿಲ್ಲ. ಮೂರ್ತಿಯಿಂದ ಬೇರೆ ಮಾಡಲ್ಪಟ್ಟ ಜೀವನದ ಗತಿಯು ಅಷ್ಟೊಂದು ಕಾರ್ಯಕಾರಿ (effective) ಯಾಗುವದಿಲ್ಲ. ಮೂಲವಾದ ನಿರಾಕಾರತತ್ವವು ಮೂರ್ತಸ್ವರೂಪಕ್ಕೆ ಬಂದಿತೆಂದರೆ ಅದಕ್ಕೊಂದು ನಾಮರೂಪವನ್ನು ಗೃಹಣ ಮಾಡಬೇಕಾಗುತ್ತದೆ. ಅದು ಮಾಯೆಯ ಮಾಟವಲ್ಲ. ಸಂಸಾರದ ಯಾವದಾದರೊಂದು ಕಾರ್ಯವನ್ನು ಬಿಟ್ಟು ಬಿಡುವದರಿಂದ ಅಷ್ಟೊಂದು ಕೆಲಸವಾಗುವದಿಲ್ಲ. ರಾಜನೀತಿ, ವ್ಯಾಪಾರ, ಕಾವ್ಯ, ಸಮಾಜವ್ಯವಸ್ಥೆ ಶಿಲ್ಪಕಲೆ, ಮತ್ತು ಸಾಹಿತ್ಯ ಮುಂತಾದವುಗಳ ಅವಶ್ಯಕತೆಯು ಬಹಳೇ ಇರುತ್ತದೆ. ಹೊಸ ಪ್ರಾಣದ ಸಂಚಾರವು ಇವೆಲ್ಲವುಗಳಲ್ಲಾಗಬೇಕಾಗುತ್ತದೆ. ಅವುಗಳಿಗೆ ಬೇರೊಂದು ಆಕಾರವನ್ನು ತಳೆಯಬೇಕಾಗುತ್ತದ.

ಸದ್ಯದ ನಮ್ಮ ರಾಜನೀತಿಯು ಹಿಂದುಸ್ತಾನದ ಹುಟ್ಟು ರಾಜನೀತಿಯಲ್ಲ. ವಿಲಾಯತಿಯಿಂದ ಬಂದದ್ದಾಗಿರುತ್ತದೆ. ಆದರೂ ಅದರ ಅವಶ್ಯಕತೆಯು ನಮಗಿರುವದು. ಪರದೇಶಿಯೆಂದಂದು ಅದನ್ನು ಸ್ವೀಕಾರ ಮಾಡದಿದ್ದರೆ ನಮ್ಮ ದೇಶದ ಉನ್ನತಿಯಾಗಲಾರದು. ಅದರ ಹೊರತು ಅನುಭವವು ಪೂರ್ಣವಾಗಲಾರದು. ಅದು ಪೂರ್ಣವಿಕಾಸವನ್ನು ಹೊಂದಲಾರದು. ಅದಕ್ಕಾಗಿಯೇ ಅದರ ಅವಶ್ಯಕತೆಯಿರುವದು. ಈ ಭಾರತೀಯ ಆತ್ಮಜಾಗೃತಿಯನ್ನು ಮಾಡಿ ಆ ರಾಜನೀತಿಯ ಅನುಸಂಧಾನದಿಂದ ನಮಗಿಂದು ರಾಷ್ಟ್ರದಲ್ಲಿ ಕೆಲಸ ಮಾಡಬೇಕಾಗಿದೆ.

. ಸದ್ಯಕ್ಕೆ ಜನರು ರಾಜನೀತಿಗೆ ಆಧ್ಯಾತ್ಮಿಕ ಸ್ವರೂಪವನ್ನು ಕೊಡಲೆಣಿಸುತ್ತಾರೆ. ಅವರ ಪ್ರಯತ್ನಗಳಿಗೆ ಯಾವದಾದರೊಂದು ಸ್ಥಾಯಿಯಾದ ಫಲವು ಬರುವದಾದರೆ ಅದೊಂದು ಪ್ರಕಾರದ ಭಾರತೀಯ ಬೋಲ್ಶೇವಿಝಮ್ (Bolshevism) ನೇ ಆಗುವದು. ಈ ತರದ ಪ್ರಯತ್ನಗಳಿಂದ ಹಾನಿಯೇನೂ ಇಲ್ಲ. ಯಾರ ಮನಸ್ಸು ಯಾವ ರೀತಿಯಾಗಿ ಪ್ರೇರಿತವಾಗುವದೋ ಅದೇ ರೀತಿಯಾಗಿ ಅವನಿಗೆ ಕೆಲಸ ಮಾಡಬೇಕಾಗುತ್ತದೆ. ಆದರೆ ಇದೇನು ಅಚ್ಚು ಕಚ್ಚಿನ ವಸ್ತುವಲ್ಲ. ಇದೊಂದು ಆತ್ಮದ ಅಶುದ್ಧ ಶಕ್ತಿಯು. ಹಸೀ ಮಣ್ಣಿನ ಕೊಡದಲ್ಲಿ ನೀರು ತುಂಬಿದರೆ ಅದು ನಿಲ್ಲಬಹುದೇ? ಕೊಡವು ಒಡೆದು ನೀರು ವ್ಯರ್ಥವಾಗಿ ಹೋಗುವದು.

ಇಷ್ಟು ಮೀರಿ ನಾವು ಆಧ್ಯಾತ್ಮಿಕ ಪ್ರೇರಣೆಯನ್ನು ಹೊಂದಲು ಪ್ರಯತ್ನಪಟ್ಟದ್ದೇ ಆದರೆ, ನಮ್ಮಲ್ಲಿಯ ಮಂಗಮನಸ್ಸೇ ಪ್ರಾಣಪ್ರತಿಷ್ಠೆಯನ್ನು ಹೊಂದಿ, ನಿಜವಾಗಿ ಉದ್ಧಾರವಾಗಬೇಕಾದ ಶಿವಶಕ್ತಿಯು ಒತ್ತಟ್ಟಿಗೆ ಉಳಿದುಬಿಡುವದು. ಈ ಪ್ರಾಣಪ್ರತಿಷ್ಠೆಯನ್ನು ಹೊಂದಿದ ಮಂಗವು ಪರಮಾವಧಿಯನ್ನು ಮುಟ್ಟಿದರೆ ಭಕ್ತ

ಶ್ರೇಷ್ಠನಾದ ಹನುಮಂತನಂತೆ ಅತುಲಪರಾಕ್ರಮಿಯಾಗಿ ರಾಮಕಾರ್ಯವನ್ನು ಮಾಡಬಹುದು. ಆದರೆ ನಮ್ಮ ಅಂತರ್ಯಾಮದಲ್ಲಿ ಸ್ಥಾಪಿಸಬೇಕಾದ ಮೂರ್ತಿಯು ರಾಮದೂತನದಲ್ಲ, ರಾಮನದು.

ಎಲ್ಲರೊಡನೆ ಕೂಡಿ ಒಂದಾಗಿರಬೇಕು. ಆದರೆ ಅವರನ್ನು ನಮ್ಮ ಮಾರ್ಗದ ಮೇಲೆ ಎಳೆಯುವದಕ್ಕಿಂತಲೂ ಮುಂಚೆ ನಮ್ಮ ಆದರ್ಶ ಮತ್ತು ಅದರ ರೂಪವನ್ನು ಸ್ಥಿರಗೊಳಿಸಬೇಕು. ಇಲ್ಲವಾದರೆ ಹಾದೀ ತಪ್ಪಿ ದಿಕ್ಕುಗಾಣದೆ ಹೋಗಿ, ಏನೂ ಕೆಲಸವಾಗಲಿಕ್ಕಿಲ್ಲ. ವೈಯಕ್ತಿಕ ರೀತಿಯಿಂದ ಎಷ್ಟು ಕೆಲಸವಾಗಬಹುದೋ ಅದಕ್ಕಿಂತಲೂ ಸಹಸ್ರಪಟ್ಟು ಕೆಲಸವು ಸಂಘಶಕ್ತಿಯಿಂದ ಆಗುವದು. ಆದರೆ ಆ ಹೊತ್ತು ಇನ್ನೂ ಬಂದಿಲ್ಲ. ಗಡಿಬಿಡಿಯಿಂದ ಏನೂ ಕೆಲಸವಾಗಲಾರದು. ನಿಜವಾದ ಅಂಥ ಸಂಘಗಳಾಗಬೇಕಾದರೆ ಮೆಟ್ಟಲುಮೆಟ್ಟಲಿನಿಂದ ಹೋಗಬೇಕು. ಏಕಜೀವರಲ್ಲದವರ ಮೊಟ್ಟೆಯನ್ನು ಕಟ್ಟುವದು ಸಂಘದ ಗುರಿಯಲ್ಲ. ಯಾರಿಗೆ ತಮ್ಮ ಗುರಿಯು ಯಥಾರ್ಥ ಕಲ್ಪನೆಯಾಗಿದೆಯೋ ಅಂಥವರನ್ನು ಒಂದು ಸೂತ್ರದಲ್ಲಿ ಪೋಣಿಸಿ, ಅವರವರ ವೃತ್ತಿಯಂತೆ ಅವರವರ ಸ್ಥಾನದಲ್ಲಿ ಅವರವರ ಸೇವೆಯನ್ನು ಸ್ವೀಕರಿಸಬೇಕು. ಕಾಲಾಂತರದಲ್ಲಿ ಆಗುವ ಪರಿವರ್ತನಾನುರೂಪವಾಗಿ ತನ್ನ ಶಕ್ತಿಗೆ ತಕ್ಕಂತೆ ಹೊತ್ತುಹೊತ್ತಿಗೆ ಇದರಲ್ಲಿ ಬದಲನ್ನು ಮಾಡಬೇಕು. ಕಾರ್ಯಸಾಧನೆಯಲ್ಲಿ ಹೆಡಮುರಿಗೆಯಂಥ ಕಟ್ಟುಗಳು ಉಪಯುಕ್ತವಲ್ಲ. ಕಾರ್ಯದಲ್ಲಿ ದೃಢತೆ ಇರಬೇಕು. ಇದೇ ಗುರಿ. ಈ ರೀತಿಯಾಗಿ ಕಾರ್ಯವನ್ನು ಮಾಡುಮಾಡುತ್ತ, ಸಂಘವೊಂದು ದೇವಜಾತಿಯ ರೂಪಾಂತರವನ್ನು ಹೊಂದುವದು. ಇದು ನನ್ನ ಈಗಿನ ಭಾವನೆ. ಇನ್ನೂ ಈ ವಿಚಾರದ ವಿಕಾಸವಾಗತಕ್ಕದ್ದಿದೆ. ಪರಮಾತ್ಮನು ಮಾಡಿದಂದು ಆದೀತು.

ನಾವೆಲ್ಲರೂ ಮನುಷ್ಯರಿದ್ದೇವೆ. ದೇವರಾರೂ ಇಲ್ಲ. ಹೀಗಿದ್ದೂ ಎಲ್ಲರ ಹೃದಯದಲ್ಲಿ ದೇವನು ವಾಸವಾಗಿದ್ದಾನೆ. ಅವನನ್ನು ತಮ್ಮ ಜೀವನದಲ್ಲಿ ಪ್ರಕಟಿಸುವದು ನಮ್ಮ ಒಂದೇ ಒಂದು ಧ್ಯೇಯವಾಗಲು ಬೇಕು. ಇದು ಎಲ್ಲರಿಗೂ ಸಾಧ್ಯ. ಕೆಲವರಿಗೆ ತಡ, ಕೆಲವರಿಗೆ ಬೇಗ, ಇಷ್ಟೇ. ಪರಮಾತ್ಮನ ಸ್ಪರ್ಶ ಹೊಂದಿದ ಮೇಲೆ ಚಿಕ್ಕವರು ದೊಡ್ಡವರು ಎಂಬ ಭೇದವೇ ಉಳಿಯುವದಿಲ್ಲ. ಈ ಕೆಲಸದಲ್ಲಿ ವಿಘ್ನಗಳು ಬರಬಹುದು, ತಡವೂ ಆಗಬಹುದು. ಎಲ್ಲರ ವಿಕಾಸವು ಸರಿಯಾಗಿ ಸಾಗಲಿಕ್ಕೂ ಇಲ್ಲ. ಇದೆಲ್ಲ ನಿಜ, ಆದರೆ ಅಂತರ್ಯಾಮಿಯಾದ ಹರಿಯ ಕೃಪೆಯಿಂದ ಈ ಸಂಕಟಗಳೆಲ್ಲ ಗಾಳಿಯಾಗಿ ಬಯಲುಗೂಡಿ ಹೋಗುವವು. ನಾನು ಈಗ ಮಾಡುವ ಸಾಧನವು ನನ್ನ ಬಲವನ್ನವಲಂಬಿಸಿಲ್ಲ- ಪರಮಾತ್ಮನ ಇಚ್ಛೆಯನ್ನವಲಂಬಿಸಿ.

ನಾನು ಬಹಳ ದಿನಗಳಿಂದ ಯಾವ ಒಂದೆರಡು ಮಾತುಗಳ ಬಗ್ಗೆ ವಿಚಾರ ಮಾಡುತ್ತಲಿದ್ದೆನೋ ಅವುಗಳನ್ನು ಕುರಿತು ಒಂದೆರಡು ಸಾಲುಗಳನ್ನು ಬರೆಯುವೆನು ನನ್ನ ಮಟ್ಟಿಗಂತೂ ಈ ಮಾತು ಮನಸ್ಸಿನಲ್ಲಿ ಶಿಲಾಶಾಸನವಾಗಿ ಉಳಿದಿದೆ. ಏನೆಂದರೆ

ಭಾರತವರ್ಷದ ದುರ್ಬಲತೆಯು ದೈನ್ಯದ ಕಾರಣವು ಅದರ ಪಾರತಂತ್ರ್ಯವಲ್ಲ. ಬಡತನವಲ್ಲ. ಆಧ್ಯಾತ್ಮಿಕ ಅಥವಾ ಧಾರ್ಮಿಕ ಜ್ಞಾನದ ಅಭಾವವಲ್ಲ. ಆದರೆ ಭಾರತೀಯರಲ್ಲಿ ವಿಚಾರಶಕ್ತಿಯು ಕೊರತೆ ಉಂಟಾಗಿದೆ. ಜ್ಞಾನವನ್ನು ಪದಚ್ಯುತವನ್ನಾಗಿ ಮಾಡಿ ಅಜ್ಞಾನವು ಪಟ್ಟವೇರಿದೆ. ವಿಚಾರ ಮಾಡುವ ಶಕ್ತಿಯಿಲ್ಲವೆನ್ನು, ಮನಸ್ಸಿಲ್ಲವೆನ್ನು, ಇದು ನಮ್ಮ ದುರ್ಬಲತೆಯು ಕಾರಣ. ಅವಿಚಾರಗ್ರಸ್ತವಾದ ಕಾಲದಲ್ಲಿ ನಾವು ಅವನತಿಯನ್ನು ಹೊಂದಿದೆವು. ಇಂದು ವಿಚಾರವಿಜಯದ ಕಾಲವು ಬಂದಿದೆ. ಯಾರು ಎಷ್ಟು ವಿಚಾರ, ಎಷ್ಟು ವಿಮರ್ಶೆ, ಎಷ್ಟು ವಿವೇಕವನ್ನು ಮಾಡುವರೋ, ಅಷ್ಟರಮಟ್ಟಿಗೆ ಅವರಿಗೆ ಶಕ್ತಿ ಬರುವದು. ಅಗೋ ಆ ಯುರೋಪದ ಕಡೆಗೆ ನೋಡು. ಎಂಥ ಅಪರಂಪಾರವಾದ ವಿಚಾರಸಾಗರವು ಅನಿರ್ಬಂಧವಾಗಿ ಉಸುರಾಡಿಸುತ್ತದೆ! ಸುಸಂಬದ್ಧಳೂ, ಪ್ರಚಂಡಳೂ, ವೇಗವತಿಯೂ ಆದ ಶಕ್ತಿಯು ಅಲ್ಲಿ ಜಯಪರಂಪರೆಯನ್ನು ಸಂಪಾದಿಸುತ್ತಿರುವಳು. ಆ ಬಲದಿಂದಲೇ ಯುರೋಪವಿಂದು ಸಮಗ್ರ ಜಗತ್ತನ್ನು ತನ್ನ ಅಂಕೆಯಲ್ಲಿಟ್ಟಿರುವದು. ನಮ್ಮ ಪೂರ್ವಕಾಲದ ತಪಸ್ವಿಗಳಾದ ಋಷಿಗಳ ತಪಶ್ಚರ್ಯಪ್ರಭಾವಕ್ಕೆ ದೇವತೆಗಳು ಗದಗದ ನಡುಗಿ ಅವರ ಸಮ್ಮುಖದಲ್ಲಿ ಕೈಜೋಡಿಸಿಕೊಂಡು ನಿಲ್ಲುತ್ತಿದ್ದರಂತೆ. ಯುರೋಪದ ಶಾಸ್ತ್ರೀಯ ಜಯವನ್ನು ಕಂಡು ಅದು ಅವರ ವಿನಾಶದ ಸೂಚಕವೆಂದು ಕೆಲವರು ಅನ್ನುವದುಂಟು. ನನಗೆ ಹಾಗೆ ತೋರುವದಿಲ್ಲ. ಸೃಷ್ಟಿಯ ಪ್ರಥಮಾವಸ್ಥೆಯಲ್ಲಿ ಎಲ್ಲ ಕಡೆಯಲ್ಲಿಯೂ ಇಂಥ ಗೊಂದಲವು ಎದ್ದೇ ಏಳುವದು. ಅವರೊಂದು ಸೃಷ್ಟಿಯನ್ನು ನಿರ್ಮಿಸುತ್ತಿರುವರು ಅಂತೇ ಆ ಗೊಂದಲ. ಇನ್ನು ಇಗೋ ಈ ಭಾರತದ ಕಡೆಗೆ ನೋಡು. ಕೆಲವೊಬ್ಬರಲ್ಲಿಯೇ ವಿಚಾರದ ವಿಕಾಸವು ಕಂಡು ಬರುವದು. ಕೆಲವರು ವಿಚಾರ ಮಾಡುವದಿಲ್ಲ. ಕೆಲವರಿಗೆ ಶಕ್ತಿಯಿಲ್ಲ. ಕೆಲವರಲ್ಲಿ ತೀರ ಕಡಿಮೆ. ಕೆಲವರೋ ಕ್ಷಣಿಕ ಉತ್ಸಾಹದಿಂದ ಕೆಲಸ ಮಾಡುವರು. ಇಂಥವರೇ ಬಹಳ ಜನರು. ನಮ್ಮ ಜನರಿಗೆ ಮಿದುಳಿಗೆ ತ್ರಾಸವಾಗದೆ ಮೇಗರೆಯ ಜ್ಞಾನವು ಎಷ್ಟು ಸಿಗುವದೋ ಅಷ್ಟೇ ಸಾಕು ಎನ್ನಿಸುತ್ತಿರುವದು. ಆಳವಾಗಿ ವಿಚಾರಮಾಡುವ ಶಕ್ತಿಯು ಯುರೋಪದಲ್ಲಿ ಕಂಡು ಬರುತ್ತದೆ. ಯುರೋಪದಲ್ಲಿಯ ಒಬ್ಬ ಸಾಧಾರಣ ಕೂಲಿಕಾರನೂ ವಿಚಾರ ಮಾಡುವನು. ಎಲ್ಲ ಮಾತುಗಳೂ ತಮ್ಮ ವಿಚಾರದ ಕೈಪಾಡಿನಲ್ಲಿ ಬರಬೇಕೆಂದು ಅವರ ಉತ್ಕಟ ಇಚ್ಛೆ. ಅವರ ವಿಚಾರಶಕ್ತಿಯು ಆಧ್ಯಾತ್ಮಿಕ ಕ್ಷೇತ್ರದಲ್ಲಿ ಕುಂಠಿತಗತಿಯಾಗುತ್ತದೆ. ಅವಾಗೆ ಅಲ್ಲೆಲ್ಲ ಯೌಗಿಕ ಭ್ರಮೆಗಳು, ಅನಿಯಂತ್ರಿತಶಕ್ತಿಗಳ ಜಂಗುಳಿಯು ಕಂಡುಬರುವದು. ಈ ತಮ್ಮ ಕೊರತೆಯನ್ನು ಹೋಗಲಾಡಿಸಲೂ ಕೂಡ ಅವರು ಮಾಡುವ ಕಷ್ಟಗಳು ಅಷ್ಟಿಷ್ಟೇ !

ನಮ್ಮಲ್ಲಿಯೂ ಆಧ್ಯಾತ್ಮ ಜ್ಞಾನವಿದೆ. ಆದರೆ ಅದು ನಮ್ಮ ಪೂರ್ವಜರ ಪುಣ್ಯದ ಫಲ. ಯಾರಲ್ಲಿ ಈ ನಿಜವಾದ ಅಧ್ಯಾತ್ಮಜ್ಞಾನದ ಶಕ್ತಿಯು ಜಾಗ್ರತವಾಗಿದೆಯೋ

ಅವರು ಉಫ್ ಎಂದರೆ ಸಾಕು. ಯುರೋಪದ ಸಮಸ್ತ ಶಕ್ತಿಯು ಹುಲ್ಲುಕಡ್ಡಿಯಂತೆ ಹಾರಿಹೋಗಬಹುದು. ನಮಗೆ ಈ ಶಕ್ತಿದೇವಿಯ ಉಪಾಸನೆಯು ಅವಶ್ಯವಾಗಿದೆ. ಆದರೆ ನಾವು ಅವಳ ಉಪಾಸನೆಯನ್ನು ಮಾಡುತ್ತಿಲ್ಲ. ನಮಗೋ ಅದರ ಅಗತ್ಯ ಇದೆ. ಆದರೆ ಅದನ್ನು ಪಡೆಯುವದೆಂತು? ನಮ್ಮ ಪುರಾತನರು ವಿಶಾಲ ವಿಚಾರ ಸಾಗರದಲ್ಲಿ ಈಸಿ ಈಸಿ, ಮುಳುಗಿ ಮುಳುಗಿ, ಮಿಂದು ಮಿಂದು, ಅಪಾರ ಜ್ಞಾನವನ್ನು ಸಂಪಾದಿಸಿ ಅಪೂರ್ವವಾದ ಸಂಸ್ಕೃತಿಯೊಂದನ್ನು ಸ್ಥಾಪಿಸಿರುವರು. ಆ ಸಂಸ್ಕೃತಿಯ ಮಾರ್ಗದ ಮೇಲೆ ನಡೆನಡೆಯುತ್ತಿರಲು ನಮ್ಮ ವಿಚಾರಶಕ್ತಿಯು ಕ್ಷೀಣವಾಯಿತು. ನಮ್ಮ ಬಲವು ಕುಂದಿತು. ಧರ್ಮಕ್ಕೆ ಡಂಭಾಚಾರದ ರೂಪವು ಬಂದಿತು. ಎಲ್ಲಿಯ ವರೆಗೆ ಈ ಸ್ಥಿತಿಯು ನಿಲ್ಲುವದೋ, ಅಲ್ಲಿಯವರೆಗೆ ಹಿಂದುಸ್ಥಾನಕ್ಕೆ ಕಡೆ ಬಾಳುವ ಭಾಗ್ಯೋದಯವು ಬರದು.

ಬಂಗಾಲದಲ್ಲಿ ಈ ದುರ್ಬಲತೆಯು ಪರಾಕಾಷ್ಠೆಯನ್ನು ಹೊಂದಿರುವದು. ಬಂಗಾಲೀ ಜನರ ಬುದ್ಧಿಯು ಬಲು ಚುರುಕು. ಅವರಲ್ಲಿ ಯೋಗ್ಯತೆಯೂ ಉಂಟು. ವಿವೇಕವೂ ಉಂಟು. ಇವೆಲ್ಲ ಗುಣಗಳಲ್ಲಿ ಅವರು ಹಿಂದುಸ್ಥಾನದ ಉಳಿದೆಲ್ಲ ಜನರನ್ನು ಮೀರಿರುವರು. ಇಷ್ಟರಿಂದಲೇ ಎಲ್ಲ ಕಾರ್ಯವಾಗಲಾರದು. ಅವುಗಳೊಡನೆ ವಿಚಾರದ ಗಾಂಭೀರ್ಯವೂ, ಅಚ್ಚಳಿಯದ ಕೆಚ್ಚೆದೆಯ ಧೈರ್ಯವೂ, ವಿರೋಚಿತ ಸಾಹಸವೂ, ದೀರ್ಘ ಪರಿಶ್ರಮ ಮಾಡುವ ಸಾಮರ್ಥ್ಯವೂ ಕೂಡಿದರೆ, ಸಮಸ್ತ ಭಾರತವರ್ಷವೇ ಏಕೆ, ಸಮಸ್ತ ಸಂಸಾರದ ನೇತೃತ್ವವನ್ನು ವಹಿಸುವ ಸನ್ಮಾನವು ಅವರಿಗೆ ಬರುವದು. ಅವರಿಗೆ ಇದರಿಂದ ಮಾಡಬೇಕಾದುದೇನು ? ಭೋಗ ವಿಲಾಸಾದಿಗಳೇ ಅವರ ಪರಮಜೀವನಗಳಾಗಿರುವವು. ಮಿದುಳಿಗೆ ತ್ರಾಸವಾಗದೆ ಮೇಗರೆಯ ಜ್ಞಾನ ವಿದಿಷ್ಟೇ ಅವರಿಗೆ ಬೇಕಾಗಿದೆ. ಪರಿಶ್ರಮ ಬೇಕಿಲ್ಲ. ಅದರ ಫಲ ಮಾತ್ರ ಬೇಕಾಗಿರುವದು. ಸಾಧನದ ಹೊರತು ಸಿದ್ಧಿ ಬೇಕಾಗಿದೆ. ಭಾವಬಲವೇ ಅವರ ಜೀವನಾಧಾರವು. ಇಂಥ ಜ್ಞಾನಶೂನ್ಯವಾದ ಬಲದ ಫಲವೇನು? ಅದೊಂದು ಬಲವಾಗಿರದೆ ರೋಗದ ಲಕ್ಷಣವಾಗಿರುವದು. ದೇಶದ ಅವನತಿಯು ದಿನೇ ದಿನೇ ಹೆಚ್ಚುತ್ತಿರುವದು. ಜೀವನ ಶಕ್ತಿಯ ಹ್ರಾಸವಾಗುತ್ತಿರುವದು.

ಜನರು ಕೂಳು ಕೂಳೆಂದು ಗೋಳಾಡುತ್ತಿರುವರು. ಮೈಮುಚ್ಚಿಕೊಳ್ಳಲಿಕ್ಕೆ ಅರಿವೆ ಚಿಂದಿಯೂ ಸಿಗದಾಗಿದೆ. ನಾಲ್ಕೂ ಕಡೆಗಳಲ್ಲಿ ಹೊಲಿಯೆದ್ದಿರುವದು. ಧನ ಸಂಪತ್ತು, ವ್ಯವಸಾಯ, ಉದ್ಯೋಗ, ಕಲಾ-ಕೌಶಲ್ಯಗಳೆಲ್ಲವೂ ಪರಕೀಯರ ಕೈಪಿಡಿಯಾಗಹತ್ತಿವೆ. ಶಕ್ತಿಯ ಉಪಾಸನೆಯನ್ನಾದರೂ ನಾವು ಬಿಟ್ಟುಕೊಟ್ಟಿರುವೆವು. ಅವಳೂ ನಮ್ಮನ್ನು ಕೈ ಬಿಟ್ಟಿರುವಳು. ನಾವು ಪ್ರೇಮದ ಉಪಾಸನೆಯನ್ನು ಮಾಡುತ್ತಿರುವೆವು. ಆದರೆ ಎಲ್ಲಿ ಜ್ಞಾನಶಕ್ತಿಗಳ ಅಭಾವವಿರುವದೋ ಅಲ್ಲಿ ಪ್ರೇಮದ ಉಪಾಸನೆಯಾದರೂ ಆಗುವದು ಹೇಗೆ? ಅದೇಕೆ, ಅಲ್ಲಿ ಪ್ರೇಮವು ಇರುವದಾದರೂ ಹೇಗೆ?

ಎಲ್ಲೆಡೆಯಲ್ಲಿಯೂ ಸಂಕೀರ್ಣತೆಯೂ ಕ್ಷುದ್ರತೆಯೂ ತುಂಬಿಕೊಂಡಿರುವವು. ಮನಸ್ಸು, ಪ್ರಾಣ, ಅಂತಃಕರಣಗಳಲ್ಲಿ ಪ್ರೇಮಕ್ಕೆ ಎಡೆಯಿಲ್ಲ. ಜಗಳಾಟ, ಹೊಡೆದಾಟ, ಮನಸ್ಸಿನ ಅಶುದ್ಧತೆ, ಈರ್ಷೆ, ದ್ವೇಷ, ಮತ್ಸರ, ನಿಂದೆ ಮತ್ತು ಪಕ್ಷಭೇದ ಇವೇ ಮುಂತಾದವುಗಳು ಎಲ್ಲೆಡೆಯಲ್ಲಿಯೂ ತಲೆಯೆತ್ತಿ ತಿರುಗುತ್ತಿರುವವು. ಅದಕ್ಕಾಗಿಯೇ ಯಾವ ಚಳವಳಿಯೂ ಚಿರಕಾಲ ಉಳಿಯುವದಿಲ್ಲ.

ಭಾವನೋದ್ದೀಪನದ ಅವಶ್ಯಕತೆಯು ಇರುವದು ; ಅದರ ಹೊರ್ತು ರಾಷ್ಟ್ರದಲ್ಲಿ ಜಾಗೃತಿಯು ಹುಟ್ಟಲಾರದೆಂದು ನೀವು ಅನ್ನಬಹುದು. ರಾಜಕಾರಣಗಳ ಕ್ಷೇತ್ರದಲ್ಲಿ ನನಗೂ ಅನುಭವವುಂಟು. ದೇಶೀ ಚಳವಳಿಯ ವೇಳೆಗೆ ಈ ರೀತಿಯಲ್ಲಿ ಮಾಡಿದ ಅಲ್ಪಸ್ವಲ್ಪ ನಮ್ಮ ಕೆಲಸಗಳು ಕೂಡ ಮಣ್ಣುಗೂಡಿ ಹೋಗಿರುವವು. ಅದಕ್ಕಾಗಿ ಅನ್ನುವೆ, ಭಾವೋದ್ವೇಗ (emotional excitement) ದ ಅಗತ್ಯವೇನೂ ಇಲ್ಲ. ಯೋಗಸ್ಥಾಪನೆಯ ಅವಶ್ಯಕತೆ ಸದ್ಯಕ್ಕೆ ಬಹಳವಾಗಿರುವದು. ವೃತ್ತಿಗಳನ್ನು ಪೂರ್ಣವಾಗಿಯೂ, ದೃಢವಾಗಿಯೂ, ಅವಿಚಲಿತವಾಗಿಯೂ ಮಾಡುವ ಶಕ್ತಿಯು ಯೋಗದಲ್ಲುಂಟು. ಶಕ್ತಿಸಾಗರದಲ್ಲಿ ಜ್ಞಾನಸೂರ್ಯನ ಕಿರಣಗಳ ಬೆಳಕು ಸುತ್ತಲ್ಲಿಯೂ ಹಬ್ಬಲುಬೇಕು. ಆ ಪ್ರಕಾಶಮಯ ಕಿರಣಗಳಲ್ಲಿ ಅನಂತಪ್ರೇಮ, ಆನಂದ ಮತ್ತು ಐಕ್ಯಗಳ ಸ್ಥಿರತೆಯು ಇರುವವು. ಲಕ್ಷ ಶಿಷ್ಯರು ನನಗೆ ಬೇಕಿಲ್ಲ. ಅಹಂಭಾವ ಶೂನ್ಯರಾದ, ಮತ್ತು ಪೂರ್ಣಮನುಷ್ಯತ್ವಯುಕ್ತರಾದ ಬರೀ ಒಂದು ನೂರು ಶಿಷ್ಯರು ದೇವರ ಕೃಪೆಯಿಂದ ಸಿಕ್ಕರೆ ಸಾಕು. ಗುರುಸ್ಥಾನದಲ್ಲಿ ನನಗಷ್ಟೊಂದು ಶ್ರದ್ಧೆಯಿಲ್ಲ. ಗುರುವಾಗುವ ಇಚ್ಛೆಯೂ ನನಗಿಲ್ಲ. ನನ್ನ ಸ್ಪರ್ಶದಿಂದಾಗಲಿ ಅಥವಾ ಬೇರೆಯವರ ಸ್ಪರ್ಶದಿಂದಾಗಲಿ ಇಂಥ ಭಾಗವತಜೀವನದ ಲಾಭವಾದರೆ ಸಾಕು. ಭಾರತವರ್ಷದ ಉನ್ನತಿಯಾಗಬೇಕಾದರೆ ಅದು ಯೋಗ್ಯ ಗುಣಯುಕ್ತ ಮನುಷ್ಯರಿಂದಲೇ ಆಗುವದು.

ಈ ಪತ್ರವನ್ನೋದಿ ಬಂಗಾಲದ ಭವಿಷ್ಯದ ವಿಷಯಕ್ಕೆ ನಿರಾಶನಾಗಿರುವೆನೆಂದು ತಿಳಿದುಕೊಳ್ಳಬೇಡ. ದೇಶದ ಸಿದ್ಧತೆಯಾಗಿಲ್ಲೆಂದೂ ನಾನನ್ನುವದಿಲ್ಲ.

ಸದ್ಯಕ್ಕೆ ನಾನಲ್ಲಿ ಬರಲಾರೆ. ನನ್ನ ಸಿದ್ಧತೆಯೇ ಆಗಿಲ್ಲವಾದ್ದರಿಂದ ನಾನು ಬರಲೆಣಿಸುವದಿಲ್ಲ. ಈ ಉದ್ದವಾದ ಓಲೆಯ ತಾತ್ಪರ್ಯವೇನಂದರೆ ನಾನೂ ನನ್ನ ಜೋಳಿಗೆಯನ್ನು ಸಿದ್ಧಪಡಿಸುತ್ತಿರುವೆನು. ( St. Peter ) ಸೆಂಟ ಪೀಟರನ ಚಾದರದಂತೆ ಈ ನನ್ನ ಜೋಳಿಗೆಯಾದರೂ ಇರುವದೆಂದು ನನ್ನ ವಿಶ್ವಾಸ. ಅನಂತದ ರಹಸ್ಯದ ಬೇಟೆಗಳೆಲ್ಲವೂ ಈ ನನ್ನ ಜೋಳಿಗೆಯಲ್ಲಿ ಆಟವಾಡುತ್ತಲಿವೆ. ಆದರೆ ಜೋಳಿಗೆಯನ್ನು ಮಾತ್ರ ತೆರೆಯುವವನಲ್ಲ. ಹೊತ್ತಿಲ್ಲದ ಹೊತ್ತಿನಲ್ಲಿ ಜೋಳಿಗೆಯನ್ನು ತೆರೆಯುವದರಿಂದ ಬೇಟೆಯು ಓಡಿ ಹೋಗುವದುಂಟು. ದೇಶದಲ್ಲಿಯೂ ಬರಲಾರೆ. ದೇಶವೇನೋ ಸಿದ್ಧವಿರಬಹುದು; ಆದರೆ ನಾನು ಸಿದ್ಧನಿಲ್ಲ.

ನಿನ್ನ
ದೊಡ್ಡಣ್ಣ.

ಕೆಲವರು ಹೆಣ್ಣೆಂದ ಕೂಡಲೆ ಹಲ್ಲುಮಸೆಯುವ ಭ್ರಾಂತಿಯಿರುವದು. ( ಆದರೆ ತಾವು ಮಾತ್ರ ಹೆಂಡಿರುಮಕ್ಕಳಿಲ್ಲದೆಯಿಲ್ಲ. ) ಹೆಣ್ಣೆಂಬುದು ಇಂಥವರ ಪಾಲಿಗೆ ವಿಷ. ಹೆಣ್ಣೆಂಬುದು ಮಾಯೆಯಂತೆ. ಅದು ತನ್ನ ಹಿಂದೆ ಗಂಡುಸನ್ನು ನಾಯಿಯಂತೆ ಬೆಂಬತ್ತಹಚ್ಚುವದಂತೆ. ಇಂಥಾ ಮಾಯಾಶಕ್ತಿಯುಳ್ಳ ಮಾಯೆಯೇ ತಮ್ಮನ್ನು ಈ ಮಾಯಾಜಾಲದಲ್ಲಿ ಸಿಕ್ಕಿಸುವಳಂತೆ ! ಇಂಥಾ ನೀಚಜಾತಿಯಂತೆ! “ ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ, ಪೆಣ್ಣಲ್ಲವೆ ಪೊರೆದವಳು । ” ಎಂಬುದೀ ಗಾವಿಲರಿಗೆ ನೆನಪೇ ಆಗದು. “ ನ ಮಾತುಃ ಪರದೈವತಂ ” ಎಂಬುದರ ಗುಟ್ಟು ಈ ಗೂಗೆಗಳಿಗೆ ಎಲ್ಲಿ ಗೊತ್ತಾಗಬೇಕು ? ಗೂಗೆಗೆ ಹೇಗೆ ಹಗಲು ನಿರರ್ಥಕವೋ ಹಾಗೆಯೇ ಈ ಗಾವಿಲರಿಗೆ ಮಾನವ ಕೋಟಿಯಲ್ಲಿ ಅರ್ಧಭಾಗವೇ ನಿರರ್ಥಕ ! ಮೋಹಿಸಿ ಬೆನ್ನುಹತ್ತುವದು ತಮ್ಮ ತಪ್ಪೋ ಆ ಹೆಣ್ಣಿನ ತಪ್ಪೋ ? ನಾಯಿಯೊಂದು ಆನೆಯನ್ನು ಬೈಯ್ಯುತ್ತಿದ್ದಿತಂತೆ- “ ಇದೆಂಥಾ ನೀಚಪ್ರಾಣಿ ! ಇದನ್ನು ನೋಡಿದ ಕೂಡಲೆ ನನಗೆ ಬೊಗಳುವಂತಾಗುತ್ತದೆ. ನಾನು ಬೊಗಳುತ್ತ ಬೆನ್ನುಹತ್ತಿದರೆ ಲೋಕವೆಲ್ಲಾ ನಕ್ಕು ನನ್ನನ್ನು ಧಿಕ್ಕರಿಸುತ್ತಾರೆ. ಆನೆಯಂಥಾ ಮಾಯೆಯಿನ್ನಾವುದು ? ಇಂಥಾ ನೀಚಮಾಯೆಯನ್ನು ದೇವರು ಯಾಕೆ ಹುಟ್ಟಿಸಿದನೋ! ” ಇದೇನು? ಆನೆಯ ಭವ್ಯತೆಯ ತಪ್ಪೋ? ಶ್ವಾನನ ಸ್ವೇಚ್ಛಾಚಾರದ ತಪ್ಪೋ ? ಹೆಣ್ಣನ್ನು ಹಳಿದು ಮಾನವನು ತನ್ನ ದೌರ್ಬಲ್ಯವನ್ನು ಮಾತ್ರ ಹೊರಗೆಡಹುತ್ತಾನೆ. ತಾಯಿಯನ್ನು ನೋಡಿ ಹೀಗಾದದ್ದು ಎಲ್ಲಿಯಾದರೂ ಉಂಟೆ ? ಅಕ್ಕತಂಗಿಯರನ್ನು ನೋಡಿ ಹೀಗಾದದ್ದು ಎಲ್ಲಿಯಾದರೂ ಉಂಟೆ ? ಅನ್ಯಭಾವದಲ್ಲಿಯೇ ಇದು ಸಂಭವ. . ಮಾತೃಭಾವವೂ ಭಗಿನೀಭಾವವೂ ಲೋಪವಾದಾಗಲೇ ಇಂಥ ಮೂಢತನದ ಉದಯವಾಗಿದೆ. ಕೈಲಾಗದ ನಾಯಿ ಮೈಯೆಲ್ಲ ಹರಕೊಂಡಂತೆ “ ಹೆಣ್ಣು ಹೆಣ್ಣೆಂದೇತಕೆ ಬೀಳುಗಳೆವರೊ ಕಣ್ಣುಕಾಣದ ಗಾವಿಲರು ? ” ಇಂಥ ಕೈಲಾಗದವರು ಅಬಲರೋ, ಧೀರವಾಗಿ ಸಾಗುವ ಆತ್ಮಯಜ್ಞಪಟುಗಳಾದ ಬಾಲೆಯರು ಅಬಲೆಯರೊ, ನಿರ್ಣಯಿಸುವದು ಕಠಿನವಾಗಿದೆ ! ಗುರು ಅಲ್ಲಮಪ್ರಭುಗಳಾದರೋ ತಮ್ಮ ದಿವ ಜ್ಞಾನದ ಬೆಳಕನ್ನು ಹೀಗೆ ಹೊರಸೂಸಿದ್ದಾರೆ—“ಹೆಣ್ಣು ಮಾಯೆಯೆಂಬವರು ಕೆಲವರು; ಮಣ್ಣು ಮಾಯೆಯೆಂಬವರು ಕೆಲವರು; ಹೊನ್ನು ಮಾಯೆಯೆಂಬವರು ಕೆಲವರು; ಹೆಣ್ಣು ಮಾಯೆಯಲ್ಲ; ಮಣ್ಣು ಮಾಯೆಯಲ್ಲ; ಹೊನ್ನು ಮಾಯೆಯಲ್ಲ. ಮನದ ಮುಂದಿನ ಆಶೆ ಮಾಯೆ ಕಾಣೆಂದ ಗುಹ್ಯೇಶ್ವರಾ! ” ಹೀಗೆಂದು ಸೂಕ್ಷ್ಮಾತಿಸೂಕ್ಷ್ಮವನ್ನು ಬಿಚ್ಚಿ ಬೈಲಿಗೆಳೆದ ಶಿವಶರಣರು ಈ ಸ್ತ್ರೀದ್ವೇಷಿಗಳನ್ನೇನೆಂದರು ವಿಚಾರಿಸಬಾರದೆ?

ಇಂಥ ಮೂಢವಿಚಾರವು ತಮ್ಮ ನೀಚತನವನ್ನೇ ನಿಚ್ಚಳಗೊಳಿಸುವದು.

ದೇಶದಲ್ಲೀಗ ಕೊಲೆ-ಸುಲಿಗೆಗಳಾಗುವುದಕ್ಕೆ ಹೆಂಗಸರೇ ಕಾರಣರೆಂದು ಇಂಥ ಮೂಢರ ವಿಚಾರ. ಒಂದೇ ಕೈಯಿಂದ ಚಪ್ಪಾಳೆಯಾಗಬಹುದೆಂತೆಂಬುದನ್ನು ಇವರ ಭ್ರಾಂತಿಯು ಆಲೋಚಿಸಗೊಡದು. ವ್ಯಭಿಚಾರ ಬೆಳೆಯಲಿಕ್ಕೆ ಗಂಡಸರೇ ಕಾರಣ

ರಲ್ಲದೆ ಹೆಂಗಸರಲ್ಲ. ಇವರ ಕಪಟತಂತ್ರವೇ ಆ ಮುಗ್ಧಬಾಲೆಯರನ್ನು ದಾರಿತಪ್ಪಿಸು ವದು. ಇಂಥ ಇಂದ್ರಿಯಲಾಲಸಾಧೀನರಾದ ನರಪಶುಗಳು ತಮ್ಮ ದೌರ್ಬಲ್ಯವನ್ನು ಮುಚ್ಚಿಕೊಳ್ಳುವದಕ್ಕೆ ಹೆಣ್ಣು ಮಾಯೆಯೆಂದು ಹಾರಿಹೋಗುವರು! ಇದೊಂದು ಹಿರಿ ಹುಚ್ಚು; ಮೂಢವಿಚಾರ. ಶ್ರೀ ವಿವೇಕಾನಂದರು ಅಮೇರಿಕೆಯ ಸಹಸ್ರದ್ವೀಪೋದ್ಯಾ ನದಲ್ಲಿ ಅಂತರಂಗಶಿಷ್ಯಿಣಿಯರಲ್ಲಿಯೇ ಎರಡು ತಿಂಗಳು ಕಾಲ ಕಳೆದಾಗ ತಂದೆಮಕ್ಕ ಳಂತೆ ಪರಸ್ಪರರು ಅನ್ಯೋನ್ಯವಾಗಿ ಚಕ್ಕಂದದಿಂದ ಇದ್ದದ್ದು ಅದೊಂದು ಸ್ವರ್ಗೀಯ ಅನುಭವವೆಂದು ಅಲ್ಲಿಯ ಆ ಸ್ತ್ರೀಯರೇ ಬರೆದು ಆತ್ಮಾನಂದವನ್ನು ವ್ಯಕ್ತಗೊಳಿಸಿದ್ದಾರೆ. ವಿವೇಕಾನಂದರ ಮುಂದೆ ಮಾಯಾಸಂಬಂಧವು ಅಂಜಿ ಗುದ್ದುಸೇರಿತೆಂದು ಕಾಣು ತ್ತದೆ! ವಿವೇಕಾನಂದರು ಮೇಲಿಂದಮೇಲೆ ಹೇಳುತ್ತಿದ್ದ ಮಾತೊಂದುಂಟು. ಅದೇನೆಂ ದರೆ—"ಒಳಗಿದ್ದದ್ದೇ ಹೊರಗೆ ಕಾಣುವದು. ಒಳಗಿಲ್ಲದ್ದು ಹೊರಗೆ ಇಲ್ಲವೇ ಇಲ್ಲ; ಅದನ್ನು ಕಾಣಲೇ ಆರೆವು." ನಮ್ಮ ಮಾಯಾಭ್ರಾಂತರಲ್ಲಿ ನೀಚವಾದ "ಮನದಾಶೆ" ಮನೆಮಾಡಿಕೊಂಡು ಕಣ್ಣಿಗೆ ಮಬ್ಬುಗೊಳಿಸಿ ಬಿಟ್ಟದ್ದರಿಂದಲೇ ಹೀಗೆ ಹಾರಾಟ ನಡೆ ದಿದೆ. ಹೀಗೆ ಮಾಯಾವಿಗಳ ಮೂಢವಿಚಾರವು ಹಬ್ಬಿಕೊಂಡಿರುವಂತೆಯೇ ವೇದಾಂತ ಮೂಢರ ಭ್ರಮೆಯೂ ಹಳ್ಳಿಪಳ್ಳಿಯಲ್ಲಿ ಕೂಡ ಚೆಲ್ಲಾಟವನ್ನೆಬ್ಬಿಸಿದೆ.

ಊರೂರಿಗೆ ವೇದಾಂತಿಗಳು. ಪಂಚೀಕರಣ, ಕೈವಲ್ಯ ಮುಂತಾದ ಗ್ರಂಥಗಳೇ ಇವರ ಇಡಿಗಂಟು. ಇನ್ನು ಕೆಲವರು ಪಂಚದಶಿಯನ್ನೂ ಜ್ಞಾನಸಿಂಧುವನ್ನೂ ಸಾಕಿ ರುವದುಂಟು. ಓದಿ ಓದಿ ವಾದಿಗಳಾಗುವರಲ್ಲದೆ ಬೋಧಿಗಳೂ ಆಗುವರು. ತಾವು ಕಲಿತ ದುರ್ಮಂತ್ರವೇ ಇವರ ಬೋಧೆ! ಇವರಿಂದ ಬೋಧೆಹೊಂದಿದವರೂ ವಾದಿಗಳೂ ಬೋಧಿಗಳೂ ಆಗಿ "ಪಡೆ"ಯುವುದರ ಗೊಡವೆಗೆ ಹೋಗದೆ ತಮ್ಮಂಥ ಶಿಖಾಮಣಿ ಗಳನ್ನು "ಪಡೆ"ಯುವದರಲ್ಲಿಯೇ ಕಾಲ ಕಳೆದು ಕಾಲಪಾಶವನ್ನು ಕೊನೆಗೊಮ್ಮೆ ಕುತ್ತಿಗೆಗೆ ಸಿಕ್ಕಿಸಿಕೊಳ್ಳುವರು. ಇಂಥ ದುರುಳವೇದಾಂತಿಗಳ ದುರ್ವರ್ತನಕ್ಕೆ ಅಸ ಹ್ಯಪಟ್ಟವನೊಬ್ಬ ಗ್ರಾಮ್ಯಕವಿಯು—

"ಕತ್ತೀ ಕೆಲಸಾ ತಾ ಮಾಡಿ ।<br>
ಹತ್ತೂ ಮಂದಿಯೊಳಗೆ ಕೂಡಿ ।<br>
ತತ್ತ್ವದ ವಾದಾ ಮಾಡಿ ಮಾಡಿ ।<br>
ಸತ್ತೇ ಹೋಯಿತೊಂದು ಖೋಡಿ ।<br>
ಚಿತ್ತಗೊಟ್ಟು ಕೇಳ್ರೆಪ್ಪಾ ದಯಮಾಡಿ" ॥ಪಲ್ಲ॥

ಎಂದು ಲಾವಣಿಯನ್ನು ಹಾಡಿರುವನು. ಈ ಮರಪಂಡಿತರೂ ಇಂಥ ವೇದಾಂತ ರಾಜ್ಯಾಧಿರಾಜರನ್ನು ಬಹಳ ಸಲ ಮನ್ನಿಸಿದ್ದಾರೆ! ಇಂಥವರದೊಂದು ಗಂಪಿನಲ್ಲಿ ಮರ ಪಂಡಿತರು ತಮ್ಮ ಮರ್ಕಟವಿಚಾರವನ್ನು ಬಿಚ್ಚುವುದಕ್ಕಾಗಿ ಅತಿಥಿಗಳಾಗಿ ಹೋಗಿ

ದ್ದರು. ಅವರೆಲ್ಲಾ ಮುದುಮುದುಕರು; ಅವರ ಹೊಸಸಂತತಿಯೂ ಇದ್ದಿತೆಂದು ಹೇಳದೆ ಬಿಡಲಿಕ್ಕಾದೀತೆ ? ಮಠಪಂಡಿತರ ಮರ್ಕಟವಿಚಾರಕ್ಕೆ ಆರಂಭವಾಯಿತು! —

"ನಿಮಗೆ ಯಾವ್ಯಾವದು ಬೇಕೋ ಅದರಲ್ಲೆಲ್ಲಾ ಬ್ರಹ್ಮನಿದ್ದಾನೆ. ಬೇಡವಾದದ್ದ ರಲ್ಲಿ ಮಾಯೆಯಿದ್ದಾಳೆ. ಇಂಥಾ ಬಲವಾದ ಆಧಾರವು ಹಿಂದೆ ಯಾರಿಗೂ ಸಿಕ್ಕಂತೆ ಕಾಣುವದಿಲ್ಲ. ಗಾಂಜಿ, ಗಡದಾ, ಸೆರೆ ಮುಂತಾದವುಗಳಲ್ಲೆಲ್ಲಾ ಬ್ರಹ್ಮನಿದ್ದಾನೆ. ಮೇಲಾಗಿ ನೀವೂ ಬ್ರಹ್ಮರು! ಬ್ರಹ್ಮರೋ, ಬ್ರಹ್ಮರಾಕ್ಷಸರೋ ತೀರ್ಮಾನಿಸುವುದು ಅಸಾಧ್ಯ! ಬ್ರಹ್ಮಬ್ರಹ್ಮವೆಂದು ಬಾಯಿಬಡಿಯುವ ಪಿಶಾಚವೃತ್ತಿಯುಳ್ಳವರು ರಾಕ್ಷಸ ರಲ್ಲದೆಯೇನು ? ಎಂಥಾ ರಾಕ್ಷಸರು! ಬ್ರಹ್ಮರಾಕ್ಷಸರು! ಇದಕ್ಕೂ ನೀವು ಹಿಗ್ಗಿನಿಂದ ಒಪ್ಪಲಿಕ್ಕೆ ಅಡ್ಡಿಯಿಲ್ಲ. ಯಾಕಂದರೆ ಶ್ರೀಮಚ್ಛಂಕರಾಚಾರ್ಯರು ತಮ್ಮ ವಿವೇಕಚೂಡಾ ಮಣಿಯಲ್ಲಿ—"ಉನ್ಮತ್ತವದ್ವಾಪಿ ಚ ಬಾಲವದ್ವಾ ಪಿಶಾಚವದ್ವಾಪಿ ಚರತ್ಯವನ್ಯಾಮ್" ಎಂದು ಬ್ರಾಹ್ಮೀ ಸ್ಥಿತಿಯನ್ನು ಹೀಗೆಯೇ ಬಣ್ಣಿಸಿದ್ದಾರೆ. "ಪಿಶಾಚರಂತೆ, ಹುಚ್ಚ ರಂತೆ, ಚಿಕ್ಕಮಕ್ಕಳಂತೆ ಅವರಿರುವರ"ಂತೆ. ಶಂಕರಾಚಾರ್ಯರ ಅಭಿಪ್ರಾಯಕ್ಕಿಂತ ನಿಮ್ಮದು ಇನ್ನೂ ಮೇಲಿನ ಮೆಟ್ಟಲು! ಯಾಕಂದರೆ ಅಂಥ ಸಿದ್ಧರು ಹುಚ್ಚರ ಹಾಗೆ, ಪಿಶಾಚರ ಹಾಗೆ ಇರುತ್ತಾರೆ. ಇನ್ನೂ ಅವರು ಅಪೂರ್ಣರು. ಯಾಕೆಂದರೆ ಇನ್ನೂ ಹಾಗೆ ಹೀಗೆ ಇದ್ದಾರೆ! ಅವುಗಳಂತೆ ಕಾಣಿಸುವರಿಷ್ಟೇ. ಪ್ರತ್ಯಕ್ಷ ಅವುಗಳೇ ಅವರಾ ಗಿರುವದಿಲ್ಲ. ನೀವಾದರೋ ತುಂಬಾ ಹುಚ್ಚರು! ಪಿಶಾಚರು! ಹೀಗೆಂದಬಳಿಕ ನೀವು ಎಲ್ಲರಿಗಿಂತ ಮೇಲಿನವರು ! ನೀವು ಪೂರ್ಣಸಿದ್ಧರು! ಎಲ್ಲಕ್ಕೂ ಸಿದ್ಧರು!

"ಈ ವ್ಯವಸಾಯದಲ್ಲಿ ನಿಮಗೆ ಫಲ ಸಿಕ್ಕದೆಯೂ ಹೋಗಿಲ್ಲ. ಮುಕ್ತಿಗಾಗಿ ವೇದಾಂತ. ಅಂದಬಳಿಕ ಇದನ್ನಾಶ್ರಯಿಸಿ ನೀವು ಮುಕ್ತರಾಗಿಯೂ ಬಹುಕಾಲವಾಯಿತು. ಮುಕ್ತಿಯೆಂದರೆ ಬಿಡುಗಡೆ. ನಾಚಿಕೆ, ಪರಿವೆ, ಅರಿವು, ಉದಾರತೆ, ಕರುಣೆ, ಕನಿಕರ ಇವೆಲ್ಲವುಗಳಿಂದಲೂ ನೀವು ಬಿಡುಗಡೆ ಹೊಂದಿ (ಮುಕ್ತರಾಗಿ) ಬಹಳದಿನವಾಯಿತು! ಇನ್ನು ಶರೀರದಿಂದಿಷ್ಟು ಮುಕ್ತರಾಗುವದುಳಿದಿದೆ. ನಿಮ್ಮಂಥ ಜೀವನ್ಮುಕ್ತರಿಗೆ "ವಿದೇಹ"ಮುಕ್ತಿಯೇನೋ ಕೈಯಲ್ಲೇ ಇದೆ. ಸ್ವಯಂಬ್ರಹ್ಮರಿಗೆ ಯಾವದು ಅಸಾಧ್ಯ!

"ಹುಚ್ಚಪ್ಪಗಳಿರಾ! ನೀವು ಓದುವ ಗ್ರಂಥಗಳನ್ನು, ಬರೆದವರ ಹೃದಯದಲ್ಲಿ ಸೇರಿ, ಬರೆದವರ ಕಣ್ಣಿನಿಂದ ನೋಡಿ ಓದಿದರೆ ಹಿತವಾದೀತು! ಬರೀ ಬಾಯ್ವೇದಾಂತ ದಿಂದೇನು ಪ್ರಯೋಜನ ? ನಿಮ್ಮ ಗ್ರಂಥಗಳನ್ನು ಬರೆದವರನ್ನೇ ನೀವು ಗುರುತಿಸಿರಿ. ಅವರು ಯಾಕೆ ಬರೆದರು, ಏನೇನು ಮಾಡಿದರು? ಹೇಗೆ ನಡೆದರು, ಹೇಗೆ ನುಡಿದರು? ಅಂದರೆ ನಿಮಗೆ ವೇದಾಂತವೆಂದರೇನೆಂಬುದು ಗೊತ್ತಾದೀತು. ಅದನ್ನು ಪಡಕೊಳ್ಳುವ ಹಾದಿಯೂ ಹತ್ತೀತು. ಜಗದಲ್ಲಿ ಇಷ್ಟೊಂದು ಧರ್ಮಕರ್ಮಗಳ ತಳಕುಮಳಕು ಯಾತರ ಸಲುವಾಗಿಯಪ್ಪಾ? ಆ ಎಲ್ಲ ಧರ್ಮವೃಕ್ಷಗಳ ತಾಯ್ಬೇರುಗಳು ನಿಮ್ಮ

ವೇದಾಂತದ ಭೂಗರ್ಭಮಯವಾದ ಜಲಪ್ರವಾಹಕ್ಕೇ ಹತ್ತಿವೆ. ಆ ವೇದಾಂತದ ನೀರನ್ನು ಹೀರಿಯೇ ಅವೆಲ್ಲಾ ಫಲಿಸುತ್ತಲಿವೆ. ಆ ನೀರಿಗೆ ದೂರವಾದಂತೆಲ್ಲಾ ಒಣಗಿ ಉರುವಲಗಳಾಗುತ್ತವೆ. ಇಂಥಾ ವೇದಾಂತವು ನಿಮ್ಮ ಕೈಗೆ ಸಿಕ್ಕಿ ಪೇಚಾಡು ತ್ತಿದೆಯಲ್ಲವೆ? ಧರ್ಮವೆಂಬುದು ವೇದಾಂತದ ತಲೆಬಾಗಿಲು. ಹಾದಿಯನ್ನು ಕಳ ಕೊಂಡು ಒಳಕ್ಕೆ ಹೋಗುವ ಬಗೆಯಾದರೂ ಹೇಗೆ? ನಿಮ್ಮ ನಿಮ್ಮ ಧರ್ಮವೇ ನಿಮಗೆ ಅಲ್ಲಿಗೊಯ್ದು ಮುಟ್ಟಿಸುವುದಕ್ಕಾಗಿ ನಿಮ್ಮ ಕೊರಳಿಗೆ ಬಿದ್ದು ಚೆಲ್ಲವರಿಯುತ್ತಿದ್ದರೂ ನೀವು ಲೆಕ್ಕಿಸದೆ ಹಾರಾಡುತ್ತಿರುವಿರಿ. ಇದೆಂಥಾ ನಿಮ್ಮ ಸುಜ್ಞಾನವೋ, ಆ ನಿಮ್ಮ ಬ್ರಹ್ಮಕ್ಕೇ ಗೊತ್ತು! "ನಂಬೋ ನಂಬೆಲೊ ಮನವೆ। ಹಂಬಲಿಸದಿರು ಬರಿದೆ। ನಂಬು ಗೆಯೆ ಕಾರಣವು। ಸಾಂಬನೊಲಿವುದಕೆ"॥ ಎಂದು ನೀವು ದಿನವೂ ಓದುತ್ತಿರುವ ಕೈವಲ್ಯದಲ್ಲಿಯೇ ಹೇಳಿದೆ. ನಿಮ್ಮ ಭ್ರಮೆಯು ನಿಮ್ಮ ಕಿವಿಯ ತೂತುಗಳನ್ನು ಗಟ್ಟಿ ಯಾಗಿ ಕೀಲಿಸಿ ಬಿಟ್ಟಿರುವಾಗ ನೀವಾದರೂ ಏನುಮಾಡೀರಿ! ಉಪಾಯವಿಲ್ಲ!" ಇತ್ಯಾದಿ.

ಇಂಥ ವೇದಾಂತಮೂಢರು ತಮ್ಮ ಮಟ್ಟಿಗೆ ತಾವು ಹೇಗಾದರೂ ಇದ್ದು ಕೊಂಡಿರುವರೆನಬೇಕೆ? ಅದೂ ಇಲ್ಲ. ಬಸವನ ಮೂಗಿನಲ್ಲಿ ಬೆರಳಿಟ್ಟಂತೆ ಸಿಕ್ಕವರ ನ್ನೆಲ್ಲಾ ತಾವು ಬಿದ್ದು ಪೇಚಾಡುತ್ತಿರುವ ಒಲೆಗೇ ಎಳೆಯಬೇಕೆನ್ನುತ್ತಿರುತ್ತಾರೆ.

ಇಂಥ ದುರುಳವೇದಾಂತದ ಬ್ರಹ್ಮರಾಕ್ಷಸರ ಕಾಟಕ್ಕೆ ಬೇಸತ್ತ ಬಂಧುವಿಗಾಗಿ ಮರಪಂಡಿತರೊಮ್ಮೆ (ತಾ॥ ೧೨-೧-೨೬) ತಮ್ಮ ಮರ್ಕಟ ಪುರಾಣವನ್ನು ಬಿಚ್ಚಿ ದ್ದರು. ಅಂದಿನ ಪುರಾಣವು ತಾಯಿ ಮಕ್ಕಳ ಚಕ್ಕಂದದ ಚೆಲ್ಲಾಟದಂತಿದ್ದಿತು. ಅದ ನ್ನಿಲ್ಲಿ ಹೇಳದೆ ಇರಲಿಕ್ಕಾದೀತೆ? ಅಂದಿನ ಅಧ್ಯಾಯವನ್ನೇ ಇಲ್ಲಿ ಬಿಚ್ಚಿ ಬಿಡುವಾ—

ಮಗು:— ಅವ್ವಾ ಇದೆಲ್ಲಾ ನೋಡೇ ಎಷ್ಟು ಮನೋಹರವಾಗಿದೆ! ಎಷ್ಟೆಷ್ಟು ಮೃಗಪಕ್ಷಿ ಜಾತಿಗಳು! ಎಷ್ಟೆಷ್ಟು ತರುಲತಾಜಾತಿಗಳು! ನಾನಾ ಬಗೆಯ ಚರಾಚರ ವಸ್ತುಗಳ ವಿವಿಧ ವಿಸ್ತಾರ ವೈಚಿತ್ರ್ಯವು ಕಣ್ಣಮುಂದೆ ಅಖಂಡವಾಗಿ ಕುಣಿಯುತ್ತಿದೆ! ಇದೆಂಥಾ ಪ್ರಣವಲೀಲೆಯೋ! ಕ್ಷಣಕ್ಷಣಕ್ಕೂ ಹೊಸದು! ಎಂದೆಂದೂ ಇದ್ದದ್ದು!

ತಾಯಿ:— ಅಪ್ಪಾ ಮಗೂ; ಇದೆಲ್ಲಾ ಸುಳ್ಳು ಸಂಸಾರ! ಇದೊಂದೂ ಸತ್ಯ ವಲ್ಲ! ಈ ಸುಳ್ಳಿನ ಸಾಗರದಲ್ಲಿ ಬಿದ್ದು ಗತಿಗಾಣದೆ ಹೋಗುತ್ತಿರುವ ಹುಲ್ಲುಮಾನ ವರನ್ನು ಏನೆಂಬೆನೊ! ಮಗೂ ನೀನಿದನ್ನು ನೆಚ್ಚಿ ನುಚ್ಚುನುರಿಯಾಗಬೇಡಪ್ಪಾ! ಇದೇ ನಿನಗೆ ಹರಕೆ!

ಮಗು:— ಅವ್ವಾ, ನಿನ್ನ ಮಾತಿನ ಅರ್ಥವೇನೇ ಇದು! 'ಇದೆಲ್ಲಾ ಸುಳ್ಳು' ಎನ್ನುತ್ತೀ! ಇದೆಲ್ಲಾ ಎಂದರೇನು?

ತಾಯಿ:— ಇದೆಲ್ಲಾ ಎಂದರೆ ಈ ಕಾಣುವದೆಲ್ಲಾ!

ದ್ದರು. ಅವರೆಲ್ಲಾ ಮುದುಮುದುಕರು; ಅವರ ಹೊಸಸಂತತಿಯೂ ಇದ್ದಿತೆಂದು ಹೇಳದೆ ಬಿಡಲಿಕ್ಕಾದೀತೆ ? ಮಠಪಂಡಿತರ ಮರ್ಕಟವಿಚಾರಕ್ಕೆ ಆರಂಭವಾಯಿತು! —

"ನಿಮಗೆ ಯಾವ್ಯಾವದು ಬೇಕೋ ಅದರಲ್ಲೆಲ್ಲಾ ಬ್ರಹ್ಮನಿದ್ದಾನೆ. ಬೇಡವಾದದ್ದ ರಲ್ಲಿ ಮಾಯೆಯಿದ್ದಾಳೆ. ಇಂಥಾ ಬಲವಾದ ಆಧಾರವು ಹಿಂದೆ ಯಾರಿಗೂ ಸಿಕ್ಕಂತೆ ಕಾಣುವದಿಲ್ಲ. ಗಾಂಜಿ, ಗಡದಾ, ಸೆರೆ ಮುಂತಾದವುಗಳಲ್ಲೆಲ್ಲಾ ಬ್ರಹ್ಮನಿದ್ದಾನೆ. ಮೇಲಾಗಿ ನೀವೂ ಬ್ರಹ್ಮರು! ಬ್ರಹ್ಮರೋ, ಬ್ರಹ್ಮರಾಕ್ಷಸರೋ ತೀರ್ಮಾನಿಸುವುದು ಅಸಾಧ್ಯ! ಬ್ರಹ್ಮಬ್ರಹ್ಮವೆಂದು ಬಾಯಿಬಡಿಯುವ ಪಿಶಾಚವೃತ್ತಿಯುಳ್ಳವರು ರಾಕ್ಷಸ ರಲ್ಲದೆಯೇನು ? ಎಂಥಾ ರಾಕ್ಷಸರು? ಬ್ರಹ್ಮರಾಕ್ಷಸರು! ಇದಕ್ಕೂ ನೀವು ಹಿಗ್ಗಿನಿಂದ ಒಪ್ಪಲಿಕ್ಕೆ ಅಡ್ಡಿಯಿಲ್ಲ. ಯಾಕಂದರೆ ಶ್ರೀಮಚ್ಛಂಕರಾಚಾರ್ಯರು ತಮ್ಮ ವಿವೇಕಚೂಡಾ ಮಣಿಯಲ್ಲಿ—"ಉನ್ಮತ್ತವದ್ವಾಪಿ ಚ ಬಾಲವದ್ವಾ ಪಿಶಾಚವದ್ವಾಪಿ ಚರತ್ಯವನ್ಯಾಮ್" ಎಂದು ಬ್ರಾಹ್ಮೀ ಸ್ಥಿತಿಯನ್ನು ಹೀಗೆಯೇ ಬಣ್ಣಿಸಿದ್ದಾರೆ. "ಪಿಶಾಚರಂತೆ, ಹುಚ್ಚ ರಂತೆ, ಚಿಕ್ಕಮಕ್ಕಳಂತೆ ಅವರಿರುವರ"ಂತೆ. ಶಂಕರಾಚಾರ್ಯರ ಅಭಿಪ್ರಾಯಕ್ಕಿಂತ ನಿಮ್ಮದು ಇನ್ನೂ ಮೇಲಿನ ಮೆಟ್ಟಲು! ಯಾಕಂದರೆ ಅಂಥ ಸಿದ್ಧರು ಹುಚ್ಚರ ಹಾಗೆ, ಪಿಶಾಚರ ಹಾಗೆ ಇರುತ್ತಾರೆ. ಇನ್ನೂ ಅವರು ಅಪೂರ್ಣರು. ಯಾಕೆಂದರೆ ಇನ್ನೂ ಹಾಗೆ ಹೀಗೆ ಇದ್ದಾರೆ! ಅವುಗಳಂತೆ ಕಾಣಿಸುವರಿಷ್ಟೇ. ಪ್ರತ್ಯಕ್ಷ ಅವುಗಳೇ ಅವರಾ ಗಿರುವದಿಲ್ಲ. ನೀವಾದರೋ ತುಂಬಾ ಹುಚ್ಚರು! ಪಿಶಾಚರು! ಹೀಗೆಂದಬಳಿಕ ನೀವು ಎಲ್ಲರಿಗಿಂತ ಮೇಲಿನವರು ! ನೀವು ಪೂರ್ಣಸಿದ್ಧರು! ಎಲ್ಲಕ್ಕೂ ಸಿದ್ಧರು!

"ಈ ವ್ಯವಸಾಯದಲ್ಲಿ ನಿಮಗೆ ಫಲ ಸಿಕ್ಕದೆಯೂ ಹೋಗಿಲ್ಲ. ಮುಕ್ತಿಗಾಗಿ ವೇದಾಂತ. ಅಂದಬಳಿಕ ಇದನ್ನಾಶ್ರಯಿಸಿ ನೀವು ಮುಕ್ತರಾಗಿಯೂ ಬಹುಕಾಲವಾಯಿತು. ಮುಕ್ತಿಯೆಂದರೆ ಬಿಡುಗಡೆ. ನಾಚಿಕೆ, ಪರಿವೆ, ಅರಿವು, ಉದಾರತೆ, ಕರುಣೆ, ಕನಿಕರ ಇವೆಲ್ಲವುಗಳಿಂದಲೂ ನೀವು ಬಿಡುಗಡೆ ಹೊಂದಿ (ಮುಕ್ತರಾಗಿ) ಬಹಳದಿನವಾಯಿತು! ಇನ್ನು ಶರೀರದಿಂದಿಷ್ಟು ಮುಕ್ತರಾಗುವದುಳಿದಿದೆ. ನಿಮ್ಮಂಥ ಜೀವನ್ಮುಕ್ತರಿಗೆ "ವಿದೇಹ"ಮುಕ್ತಿಯೇನೋ ಕೈಯಲ್ಲೇ ಇದೆ. ಸ್ವಯಂಬ್ರಹ್ಮರಿಗೆ ಯಾವದು ಅಸಾಧ್ಯ!

"ಹುಚ್ಚಪ್ಪಗಳಿರಾ! ನೀವು ಓದುವ ಗ್ರಂಥಗಳನ್ನು, ಬರೆದವರ ಹೃದಯದಲ್ಲಿ ಸೇರಿ, ಬರೆದವರ ಕಣ್ಣಿನಿಂದ ನೋಡಿ ಓದಿದರೆ ಹಿತವಾದೀತು! ಬರೀ ಬಾಯ್ವೇದಾಂತ ದಿಂದೇನು ಪ್ರಯೋಜನ ? ನಿಮ್ಮ ಗ್ರಂಥಗಳನ್ನು ಬರೆದವರನ್ನೇ ನೀವು ಗುರುತಿಸಿರಿ. ಅವರು ಯಾಕೆ ಬರೆದರು, ಏನೇನು ಮಾಡಿದರು? ಹೇಗೆ ನಡೆದರು, ಹೇಗೆ ನುಡಿದರು? ಅಂದರೆ ನಿಮಗೆ ವೇದಾಂತವೆಂದರೇನೆಂಬುದು ಗೊತ್ತಾದೀತು. ಅದನ್ನು ಪಡಕೊಳ್ಳುವ ಹಾದಿಯೂ ಹತ್ತೀತು. ಜಗದಲ್ಲಿ ಇಷ್ಟೊಂದು ಧರ್ಮಕರ್ಮಗಳ ತಳಕುಮಳಕು ಯಾತರ ಸಲುವಾಗಿಯಪ್ಪಾ? ಆ ಎಲ್ಲ ಧರ್ಮವೃಕ್ಷಗಳ ತಾಯ್ಬೇರುಗಳು ನಿಮ್ಮ

ವೇದಾಂತದ ಭೂಗರ್ಭಮಯವಾದ ಜಲಪ್ರವಾಹಕ್ಕೇ ಹತ್ತಿವೆ. ಆ ವೇದಾಂತದ ನೀರನ್ನು ಹೀರಿಯೇ ಅವೆಲ್ಲಾ ಫಲಿಸುತ್ತಲಿವೆ. ಆ ನೀರಿಗೆ ದೂರವಾದಂತೆಲ್ಲಾ ಒಣಗಿ ಉರುವಲಗಳಾಗುತ್ತವೆ. ಇಂಥಾ ವೇದಾಂತವು ನಿಮ್ಮ ಕೈಗೆ ಸಿಕ್ಕಿ ಪೇಚಾಡುತ್ತಿದೆಯಲ್ಲವೆ! ಧರ್ಮವೆಂಬುದು ವೇದಾಂತದ ತಲೆಬಾಗಿಲು. ಹಾದಿಯನ್ನು ಕಳಕೊಂಡು ಒಳಕ್ಕೆ ಹೋಗುವ ಬಗೆಯಾದರೂ ಹೇಗೆ? ನಿಮ್ಮ ನಿಮ್ಮ ಧರ್ಮವೇ ನಿಮಗೆ ಅಲ್ಲಿಗೊಯ್ದು ಮುಟ್ಟಿಸುವುದಕ್ಕಾಗಿ ನಿಮ್ಮ ಕೊರಳಿಗೆ ಬಿದ್ದು ಚೆಲ್ಲವರಿಯುತ್ತಿದ್ದರೂ ನೀವು ಲೆಕ್ಕಿಸದೆ ಹಾರಾಡುತ್ತಿರುವಿರಿ. ಇದೆಂಥಾ ನಿಮ್ಮ ಸುಜ್ಞಾನವೋ, ಆ ನಿಮ್ಮ ಬ್ರಹ್ಮಕ್ಕೇ ಗೊತ್ತು! "ನಂಬೋ ನಂಬೆಲೊ ಮನವೆ। ಹಂಬಲಿಸದಿರು ಬರಿದೆ। ನಂಬುಗೆಯೆ ಕಾರಣವು। ಸಾಂಬನೊಲಿವುದಕೆ"॥ ಎಂದು ನೀವು ದಿನವೂ ಓದುತ್ತಿರುವ ಕೈವಲ್ಯದಲ್ಲಿಯೇ ಹೇಳಿದೆ. ನಿಮ್ಮ ಭ್ರಮೆಯು ನಿಮ್ಮ ಕಿವಿಯ ತೂತುಗಳನ್ನು ಗಟ್ಟಿಯಾಗಿ ಕೀಲಿಸಿ ಬಿಟ್ಟಿರುವಾಗ ನೀವಾದರೂ ಏನುಮಾಡೀರಿ! ಉಪಾಯವಿಲ್ಲ!" ಇತ್ಯಾದಿ.

ಇಂಥ ವೇದಾಂತಮೂಢರು ತಮ್ಮ ಮಟ್ಟಿಗೆ ತಾವು ಹೇಗಾದರೂ ಇದ್ದುಕೊಂಡಿರುವರೆನಬೇಕೆ? ಅದೂ ಇಲ್ಲ. ಬಸವನ ಮೂಗಿನಲ್ಲಿ ಬೆರಳಿಟ್ಟಂತೆ ಸಿಕ್ಕವರನ್ನೆಲ್ಲಾ ತಾವು ಬಿದ್ದು ಪೇಚಾಡುತ್ತಿರುವ ಒಲೆಗೇ ಎಳೆಯಬೇಕೆನ್ನುತ್ತಿರುತ್ತಾರೆ.

ಇಂಥ ದುರುಳವೇದಾಂತದ ಬ್ರಹ್ಮರಾಕ್ಷಸರ ಕಾಟಕ್ಕೆ ಬೇಸತ್ತ ಬಂಧುವಿಗಾಗಿ ಮರಪಂಡಿತರೊಮ್ಮೆ (ತಾ॥ ೧೨-೧-೨೬) ತಮ್ಮ ಮರ್ಕಟ ಪುರಾಣವನ್ನು ಬಿಚ್ಚಿದ್ದರು. ಅಂದಿನ ಪುರಾಣವು ತಾಯಿ ಮಕ್ಕಳ ಚಕ್ಕಂದದ ಚೆಲ್ಲಾಟದಂತಿದ್ದಿತು. ಅದನ್ನಿಲ್ಲಿ ಹೇಳದೆ ಇರಲಿಕ್ಕಾದೀತೆ? ಅಂದಿನ ಅಧ್ಯಾಯವನ್ನೇ ಇಲ್ಲಿ ಬಿಚ್ಚಿ ಬಿಡುವಾ—

ಮಗು:— ಅವ್ವಾ ಇದೆಲ್ಲಾ ನೋಡೇ ಎಷ್ಟು ಮನೋಹರವಾಗಿದೆ! ಎಷ್ಟೆಷ್ಟು ಮೃಗಪಕ್ಷಿ ಜಾತಿಗಳು! ಎಷ್ಟೆಷ್ಟು ತರುಲತಾಜಾತಿಗಳು! ನಾನಾ ಬಗೆಯ ಚರಾಚರ ವಸ್ತುಗಳ ವಿವಿಧ ವಿಸ್ತಾರ ವೈಚಿತ್ರ್ಯವು ಕಣ್ಣಮುಂದೆ ಅಖಂಡವಾಗಿ ಕುಣಿಯುತ್ತಿದೆ! ಇದೆಂಥಾ ಪ್ರಣವಲೀಲೆಯೇ! ಕ್ಷಣಕ್ಷಣಕ್ಕೂ ಹೊಸದು! ಎಂದೆಂದೂ ಇದ್ದದ್ದು!

ತಾಯಿ:— ಅಪ್ಪಾ ಮಗೂ; ಇದೆಲ್ಲಾ ಸುಳ್ಳು ಸಂಸಾರ! ಇದೊಂದೂ ಸತ್ಯವಲ್ಲ! ಈ ಸುಳ್ಳಿನ ಸಾಗರದಲ್ಲಿ ಬಿದ್ದು ಗತಿಗಾಣದೆ ಹೋಗುತ್ತಿರುವ ಹುಲ್ಲುಮಾನವರನ್ನು ಏನೆಂಬೆನೊ! ಮಗೂ ನೀನಿದನ್ನು ನೆಚ್ಚಿ ನುಚ್ಚುನುರಿಯಾಗಬೇಡಪ್ಪಾ! ಇದೇ ನಿನಗೆ ಹರಕೆ!

ಮಗು:— ಅವ್ವಾ, ನಿನ್ನ ಮಾತಿನ ಅರ್ಥವೇನೇ ಇದು! 'ಇದೆಲ್ಲಾ ಸುಳ್ಳು' ಎನ್ನುತ್ತೀ! ಇದೆಲ್ಲಾ ಎಂದರೇನು?

ತಾಯಿ:— ಇದೆಲ್ಲಾ ಎಂದರೆ ಈ ಕಾಣುವದೆಲ್ಲಾ!

ಮಗು:— ಕಾಣುವುದಿಷ್ಟೆಯೋ? ಅಥವಾ, ಕೇಳಿಸುವುದು, ಸೋಂಕುವುದು ಇನ್ನೂ ಏನೇನೋ ಉಂಟಲ್ಲಾ ಅದೂ ಕೂಡ ನಿನ್ನ "ಇದೆಲ್ಲಾ"ದರಲ್ಲಿಯೇ ಬರುವದೇ ಹೇಗೆ?

ತಾಯಿ:— ಹೌದು, ಎಲ್ಲಾ, ಈ ಜಗವೆಲ್ಲಾ!

ಮಗು:— ಜಗವೆಂದರೆ ಎಷ್ಟು? ನಮ್ಮನ್ನು ಬಿಟ್ಟೋ, ಹಿಡಿದೋ? ಚರಾಚರ ಕೋಟಿಯನ್ನೆಲ್ಲಾ ಕೂಡಿದ್ದೇ ಜಗವಷ್ಟೆ? ಸಮಸ್ತವೆಲ್ಲಾ ಸುಳ್ಳಾಗಿರುವಾಗ ನನ್ನ ನಿನ್ನ ಗತಿಯೇನು? ನಾನೂ ಸುಳ್ಳು, ನೀನೂ ಸುಳ್ಳು! ನೀನೇ ಸುಳ್ಳಾದ ಬಳಿಕ ನಿನ್ನ ಮಾತೂ ಸುಳ್ಳು! ಸೂರ್ಯನೇ ಸುಳ್ಳಾದ ಬಳಿಕ ಬಿಸಿಲು ತಾನೇ ಸುಳ್ಳಾಗಿ ಹೋಗುವದು. ನಾನು ಸುಳ್ಳಾದರೆ ನೀನು ಹೇಳುವದೆಲ್ಲಾ ವ್ಯರ್ಥವೇ ವ್ಯರ್ಥ! ಯಾರೂ ಇಲ್ಲದಲ್ಲಿ ಯಾರಿಗೆಂತ ಯಾಕೆ ಒದರಿಕೊಳ್ಳುವೆಯಮ್ಮಾ? ಸತ್ಯವೆಂದರೆ ಇದ್ದದ್ದು. ಅಸತ್ಯವೆಂದರೆ ಇಲ್ಲದ್ದು. ನಾನು ಸುಳ್ಳೇ ಸುಳ್ಳಾದರೆ—ಏನೂ ಇಲ್ಲದಂತಾದದ್ದಾದರೆ—ಏನೂ ಇಲ್ಲ ದಲ್ಲಿ ಬರೀಬಯಲಲ್ಲಿ ನೀನು ಎಷ್ಟು ಕಷ್ಟಬಟ್ಟು ಹೇಳಿದರೂ ವ್ಯರ್ಥ. ಏನೂ ಇಲ್ಲದ್ದು ಇಲ್ಲವೇ ಇಲ್ಲ. ಇಲ್ಲದ್ದು ಇರುವುದೂ ಶಕ್ಯವಿಲ್ಲ. ಇಲ್ಲದ್ದು ಕೆಡಲೂ ಆರದು, ಚೆನ್ನಾ ಗಲೂ ಆರದು, ಇದ್ದದ್ದೇ ಕೆಟ್ಟೀತು, ಇದ್ದದ್ದೇ ಒಳಿತಾದೀತು. ಇದ್ದದ್ದೇ ಸ್ಥಿತ್ಯಂತರ ಗಳನ್ನು ಹೊಂದೀತು. ಆದ್ದರಿಂದ ಏನೂ ಇಲ್ಲದ್ದು ಜಗವು—ಕೆಟ್ಟೀತು, ಸುಟ್ಟೀತೆಂದು ಯಾರೂ ಚಿಂತಿಸುವ ಕಾರಣವಿಲ್ಲ. ಜಗವೇ ಸುಳ್ಳಾದರೆ ಅದು ಕೆಡುವುದೂ ಸುಳ್ಳು, ದಾರಿ ತಪ್ಪುವುದೂ ಸುಳ್ಳು. ನೀನು ಹೇಳುವುದೂ ಸುಳ್ಳು, ನಾನು ಕೇಳುವುದೂ ಸುಳ್ಳು. ಎಲ್ಲಾ ಸುಳ್ಳೇ ಸುಳ್ಳಲ್ಲವೇ?

ತಾಯಿ:— ಮಗೂ, ನಿನಗೀ ಕನಸಿನ ಜಗವು ದಿಟವಾಗಿ ತೋರುವುದು ನಿನ್ನ ತಪ್ಪಲ್ಲ; ಮಾಯಾಜಾಲ!

ಮಗು:— ಅಮ್ಮಾ ಹೀಗೆಂದರೇನು? ಕನಸು ಸುಳ್ಳೆಂಬುದನ್ನು ಎಲ್ಲರೂ ಕಂಡ ದ್ದುಂಟು. ನಿನ್ನಂತೆ ಜಗ ಸುಳ್ಳೆಂದು ಕಂಡವರು ಎಷ್ಟು ಜನರೋ? ಕನಸು ಸುಳ್ಳೆಂದು ಇನ್ನೊಬ್ಬರು ಅಗತ್ಯವಿಲ್ಲವಷ್ಟೇ? ನಿನ್ನ ಜಗವು ಸುಳ್ಳಾಗಲಿಕ್ಕೆ ಮಾತ್ರವೆ ಇನ್ನೊಬ್ಬರ ಹೇಳಿಕೆಯ ಅಗತ್ಯವೇಕೆ? ಕನಸಿನಂತೆ ಜಗವೂ ಸುಳ್ಳಾಗಿರುವುದನ್ನು ಮನಗಂಡರೆ ನಾನೂ ನಿನ್ನಂತೆಯೇ ಹೇಳೇನಂತೆ. ನೀನು ಹೇಳುವದೆಲ್ಲಾ ಯಾತರಮೇಲಿಂದ.

ತಾಯಿ:— ಸ್ವತಃದ ಅನುಭವದ ಮೇಲಿಂದ.

ಮಗು:— ಅನುಭವವೆಂಬುದು ನಿನಗೊಬ್ಬಳಿಗೆ ಮಾತ್ರವೆ ಇರಬೇಕೆಂಬ ನಿಯ ಮವೇನೂ ಇಲ್ಲ. ನಿನಗಿರುವಂತೆ ಅನುಭವವೆಂಬುದು ನನಗೂ ಇರಬೇಕಷ್ಟೆ? ನಿನ್ನ ಅನುಭವವು ನಿನಗೆ ಎಷ್ಟು ಸತ್ಯವೋ ನನ್ನ ಅನುಭವವು ನನಗೆ ಅಷ್ಟೇ ಸತ್ಯ.

## ವೀರ್ಯೋತ್ಪತ್ತಿ ಕರಣಾಂಗಗಳು

**ಲಿಂಗ:**—ಲಿಂಗವು ಪೊಳ್ಳಾದ ಮತ್ತು ಮೆತ್ತನ್ನ ಇಂದ್ರಿಯವಾಗಿದೆ. ಇದರಿಂದ ಎರಡು ಕಾರ್ಯಗಳು ನಡೆಯುತ್ತವೆ. (೧) ಮೂತ್ರವಿಸರ್ಜನ (೨) ಚರ್ಮಸ್ಪರ್ಶ. ಅದರ ಪರಿಣಾಮವು ಪುರುಷತ್ವವನ್ನು ಸೂಚಿಸುವದಿಲ್ಲ; ಅಥವಾ ಸೃಷ್ಟಿಕಾರ್ಯದ ಚೈತನ್ಯವನ್ನು ವ್ಯಕ್ತಗೊಳಿಸುವದಿಲ್ಲ. ದುರ್ನಡತೆಗಳಿಂದ ಈ ಕರಣವು ಶಿಥಿಲವಾಗು ದಿದ್ದರೆ ಸಂಕುಚಿಸಿದಾಗ ೪—೫ ಅಂಗುಲಗಳು; ವಿಕಾಸವಾದಾಗ ೬—೧೨ ಅಂಗುಲಗಳ ವರೆಗೂ ಇರುತ್ತದೆ. ಇದು ಕೆಲವು ಸೂಕ್ಷ್ಮ ನರಗಳುಳ್ಳದ್ದಾಗಿ ಕಾಮುಕನಾದಾಗ ಆ ನರಗಳಲ್ಲಿ ರಕ್ತವು ತುಂಬಿ ನೆಟ್ಟಗೂ, ವಿಸ್ತಾರವಾಗಿಯೂ ಆಗುವುದು. ಈ ರಕ್ತ ನಾಡಿಗಳು ಅತಿ ಸೂಕ್ಷ್ಮವಾದವುಗಳು. ಶಾರೀರಿಕ ಅಥವಾ ಮಾನಸಿಕ ಉತ್ತೇಜನದಿಂದ ಈ ನರಗಳು ಇಂದ್ರಿಯವನ್ನು ನೆಟ್ಟಗೆ ಮಾಡುವವು. ಆದ್ದರಿಂದ ಅಶುದ್ಧವಾದ ಆಲೋ ಚನೆಗಳನ್ನು ಮಾಡಕೂಡದು. ಅಂತಹ ಸಂದರ್ಭದಲ್ಲಿ ಮನಸ್ಸನ್ನು ಬಿಗಿದುಹಿಡಿದು ಬೇರೆ ಕಾರ್ಯದ ಕಡೆಗೆ ತಿರುಗಿಸಬೇಕು. ಹಾಗೆ ಮಾಡುವುದರಿಂದ ನರಗಳ ವಿಕಾಸದ ಶಕ್ತಿಯು ಕಡಿಮೆಯಾಗಿ ಇಂದ್ರಿಯವು ಮುದುರಿಕೊಳ್ಳುವುದು. ಬ್ರಹ್ಮಚರ್ಯವ್ರತಸ್ಥ ನಾಗಿರಬೇಕಾದರೆ, ಸಂಭಾವಿತರ ಸಂಘವೂ ದೈಹಿಕ ನೈರ್ಮಲ್ಯವೂ ಹೆಚ್ಚು ಅವಶ್ಯಕ.

**ಮುಂದೊವಲು:**— ಲಿಂಗದ ಮುಂಭಾಗದಲ್ಲಿ ತೆಳ್ಳನಾದ ಚರ್ಮವು ಸುತ್ತು ಗೊಂಡಿರುವುದು. ಇದಕ್ಕೆ ಮುಂದೊವಲೆಂದು ಕರೆಯುವರು.

ಮಹಮ್ಮದಿಯರಲ್ಲೂ ಯಹೋದ್ಯರಲ್ಲೂ ಈ ಮುಂದೊವಲನ್ನು ಕತ್ತರಿಸ ಬೇಕೆಂಬದಾಗಿ ಮತಸಂಬಂಧವಾದ ಶಾಸ್ತ್ರ ನಿಯಮವಿರುತ್ತದೆ.

ದೇಹವನ್ನು ಪವಿತ್ರವಾಗಿಟ್ಟುಕೊಂಡಿರತಕ್ಕ ಅನೇಕ ಉತ್ತಮ ವರ್ಗದವರು, ಮಲವಿಸರ್ಜನೆಯ ಕಾಲದಲ್ಲಿ ನೀರನ್ನುಪಯೋಗಿಸುವಂತೆ, ಮೂತ್ರವಿಸರ್ಜನೆಯ ಕಾಲ ದಲ್ಲೂ ಉಪಯೋಗಿಸುವರು. ಇನ್ನು ಕೆಲವರು ನೀರಿಗೆ ಬದಲಾಗಿ ಮೃತ್ತಿಕೆಯನ್ನು ಪಯೋಗಿಸುವರು. ಹೀಗೆ ಮೂತ್ರವಿಸರ್ಜನವಾದ ನಂತರ ತೊಳೆಯವೆ ಬಿಡುವದ ರಿಂದುಂಟಾಗುವ ದುರ್ಗಂಧವಲ್ಲದೆ ಮುಂದೊಗಲಿನ ಒಳಭಾಗದಲ್ಲಿ ಬೆಳ್ಳನ್ನ ಅತಿಶಯ ದುರ್ಗಂಧವಾದ ಇನ್ನೊಂದು ವಸ್ತುವಿರುವದು. ಮುಂದೊಗಲಿನ ಒಳಭಾಗದಲ್ಲಿ ಸಣ ಮಾಂಸಗ್ರಂಥಿಗಳಿರುವವು. ಅವು ಈ ತೆರದ ಬಿಳಿಯ ನಾತಬಡಿಯುವ ವಸ್ತು ವನ್ನು ಶೇಖರಿಸುವವು. ಕಾಲಕ್ಕೆ ಸರಿಯಾಗಿ ಕೆಟ್ಟವಾಸನೆಯನ್ನುಂಟುಮಾಡತಕ್ಕ ಈ ವಸ್ತುವನ್ನು ತೊಳೆಯದಿದ್ದರೆ ನವೆಯೂ ತುರಿಸೋಣವೂ ಅಸಮಾಧಾನವೂ ಉಂಟಾಗುವವು. ಕೆಲವು ಸಂದರ್ಭಗಳಲ್ಲಿ ಮುಂದೊಗಲು ಬಹು ಸಣ್ಣದಾಗಿದ್ದು, ಮಾಂಸಗ್ರಂಥಿಗಳುಳ್ಳ ಭಾಗವನ್ನು ತೆಗೆಯುವದಕ್ಕೂ ತೊಳೆಯುವದಕ್ಕೂ ಸಾಧ್ಯವಾ ಗುವದಿಲ್ಲ. ಇನ್ನು ಕೆಲವು ವೇಳೆ ಮುಂದೊಗಲು ಬಹು ಉದ್ದವಾಗಿಯೂ ಭದ್ರವಾ

ಗಿಯೂ ಹಿಡಿದುಕೊಂಡಿರುವದು. ಅಂತಹ ಸಂದರ್ಭಗಳಲ್ಲಿ ಅತಿಶಯವಾದ ಮುಂದೊ ಗಲನ್ನು ನಿಪುಣನಾದ ಶಸ್ತ್ರವೈದ್ಯನಿಂದ ಕತ್ತರಿಸಬೇಕು. ಹಾಗೆ ಮಾಡುವದರಿಂದ ಜನನೇಂದ್ರಿಯದ ಅನೇಕ ರೋಗಗಳೂ ಅನನುಕೂಲತೆಗಳೂ ಉಂಟಾಗುವವು. ಮುಂದೊಗಲನ್ನು ತೆಗೆದು ಮಾಂಸಗ್ರಂಥಿಗಳ ಮೇಲೆ ಇರುವ ಅಶುದ್ಧ ಪದಾರ್ಥವನ್ನು ಶುಭ್ರವಾಗುವಂತೆ ತೊಳೆಯುತ್ತಾ ಬಂದರೆ ನೂರಕ್ಕೆ ೭೫ ರಷ್ಟು ರೋಗದಿಂದ ನೆರಳುವ ಯೌವನಸ್ಥರ ವ್ಯಾಧಿಗಳು ತಟಸ್ಥವಾಗುವವು.

ಮೂತ್ರದ್ವಾರ:— ಲಿಂಗದುದ್ದಕ್ಕೂ ಇರುವ ಕೊಳವೆಗೆ ಮೂತ್ರದ್ವಾರನೆಂಬ ಹೆಸರು. ಲಿಂಗದಂತೆ ಇದಕ್ಕೂ ಎರಡು ಕಾರ್ಯಕ್ರಮಗಳಿರುವವು. (೧) ಮೂತ್ರ ಕೋಶವನ್ನು ಬರಿದಾಗಿ ಮಾಡುವದು. (೨) ವೀರ್ಯಕೋಶದಲ್ಲಿರುವದನ್ನು ತೆರವು ಮಾಡುವದು. ಮೂತ್ರದ್ವಾರಕ್ಕೆ ಎರಡು ಕಾರ್ಯಗಳನ್ನು ಮಾಡುವ ಶಕ್ತಿಯಿದ್ದರೂ ಒಂದು ಕಾರ್ಯವನ್ನು ಮಾಡುವಾಗ ಮತ್ತೊಂದು ಕಾರ್ಯವನ್ನು ಮಾಡಲು ಅಸಮರ್ಥವಾಗಿರುವುದೆಂದು ನೆನಪಿನಲ್ಲಿಡತಕ್ಕದ್ದು. ಮೂತ್ರದ್ವಾರವು ಜಿಗುಟಾದ ಪೊರೆಯಿಂದ ಆವರಿಸಲ್ಪಟ್ಟು ಮೂತ್ರಕೋಶದ ವರೆಗೂ ವ್ಯಾಪಿಸಿ ನೋಡುವದಕ್ಕೆ ಒಂದು ಗಂಟಲಿನಂತೆಯೂ ಮತ್ತೊಂದು ಬಾಯಿಯಂತೆಯೂ ಹೋಲುವದು. ಮೂತ್ರಾದ್ವಾರವು ಮೂರುವಿಧವಾಗಿ ವಿವರಿಸಲ್ಪಟ್ಟಿದೆ.

೧. ಸ್ಪಂಜಿಯುರೆತ್ರಾ:— ಇದು ಲಿಂಗದ ಮುಖದಿಂದ ಆರು ಅಂಗುಲುದ್ದಕ್ಕೂ ಒಳಗಡೆ ವ್ಯಾಪಿಸಿರುತ್ತದೆ. ವೀರ್ಯವನ್ನಾಗಲಿ ಅಥವಾ ಮೂತ್ರವನ್ನಾಗಲಿ ಈಚೆಗೆ ಹಾಕುವ ಕಾರ್ಯಕ್ಕೆ ಸಹಾಯವಾಗುವಂಥ ಮಾಂಸದ ನಾರುಗಳುಳ್ಳದ್ದಾಗಿದೆ.

೨. ಮೆಂಬ್ರನಸ್‌ಯುರೆತ್ರಾ:— ಸ್ಪಂಜಿಯುರೆತ್ರಾದಿಂದ "ಪ್ರಾಸ್ಟ್ರೇಟ್ ಗ್ಲ್ಯಾಂಡ್" ದ ವರೆಗೂ ಇರುವದು. ಇದೇ ಮಧ್ಯಭಾಗ. ಇದರ ಉದ್ದವು ಒಂದು ಅಂಗುಲವಾಗಬಹುದು. ಪರಕೀಯ ವಸ್ತುಗಳಾದಂಥ ರೋಗದ ಕ್ರಿಮಿಗಳನ್ನು ಸ್ಪಂಜಿಯುರೆತ್ರಾದಿಂದ ಬಾರದ ಹಾಗೆ ತಡೆಯುತ್ತದೆ.

೩. ಪ್ರಾಸಟೆಟಿಕ್ ಯುರೆತ್ರಾ:— ಇದು ಮೂತ್ರಸ್ಥಾನದ ಕೊನೆಯಭಾಗ. ವೀರ್ಯಕೋಶದವರೆಗೂ ವ್ಯಾಪಿಸಿರುತ್ತದೆ. ಸಾಧಾರಣವಾಗಿ ಒಂದು ಕಾಲು ಅಂಗುಲ ಉದ್ದ. ಇಲ್ಲೇ ಮೂತ್ರಮಾಡುವ ಇಚ್ಛೆಯೂ ರತಿಸುಖದ ಇಚ್ಛೆಯೂ ಹುಟ್ಟತಕ್ಕ ಸೂಕ್ಷ್ಮನರಗಳ ಕೇಂದ್ರಸ್ಥಾನವಿದೆ.

ಗ್ರಂಥಿಗಳು:— ಮೂತ್ರದ್ವಾರದ ಮುಖದ ಮೇಲೆ ಗ್ರಂಥಿಗಳುಳ್ಳ ಶಂಕಿನಾಕಾರವಾದ ಒಂದು ಭಾಗವಿದೆ. ಅದರ ತಳಭಾಗದಲ್ಲಿ 'ಕರೋನ್' ಗ್ರಂಥಿಗಳೆಂಬ ಸಾಲುಗಳಿವೆ. ಅವುಗಳು 'ಸೆಬಾಷಸ್' ಗ್ರಂಥಿಗಳಿಂದ ಆವರಿಸಲ್ಪಟ್ಟು ಒಂದು ತೆರನಾದ ರಜ್ಜು ಪದಾರ್ಥವನ್ನು ಆಗಾಗ್ಗೆ ಕೂಡಿಹಾಕುತ್ತಿರುತ್ತವೆ. ಈ ಭಾಗವನ್ನು

ಆಗಾಗ್ಗೆ ತೊಳೆಯುತ್ತಿರಬೇಕು. ಇಲ್ಲದಿದ್ದರೆ ತುರಿಸುವಿಕೆ, ಉರಿಯುವಿಕೆ ಮುಂತಾದವುಗಳುಂಟಾಗಿ ಅನೇಕ ತೊಂದರೆಗಳನ್ನು ಕೊಡುತ್ತವೆ. ಸ್ತ್ರೀಪುರುಷರ ಸಂಬಂಧವಾದ ಅನೇಕ ವ್ಯಾಧಿಗಳು ಈ ಭಾಗವನ್ನು ತೊಳೆಯದೆ ಇರೋದರಿಂದುಂಟಾಗುತ್ತವೆ. ಈ ಭಾಗದ ಚರ್ಮವು ಅತಿ ಸೂಕ್ಷ್ಮವಾಗಿರುವದು. ಏಕೆಂದರೆ ಬೆನ್ನಹುರಿಯ ಅತಿ ಸೂಕ್ಷ್ಮತಂತುಗಳು ಇದರಲ್ಲಡಗಿವೆ. ಈ ಭಾಗವನ್ನು ತೊಳೆಯುವದಕ್ಕೆ ವಿನಾ ಮಿಗಿಲಾದಾಗ ತೆರೆಯಕೂಡದು; ಅಥವಾ ಮುಟ್ಟಲೂ ಕೂಡದು. ಈ ಗ್ರಂಥಿಗಳ ಮೇಲ್ಭಾಗವಲ್ಲಿ ಉಂಟಾಗತಕ್ಕ ಬಿಳಿಯ ಪದಾರ್ಥವು, ಆ ಭಾಗವನ್ನು ಮೃದುವನ್ನಾಗಿ ಮಾಡುವದು. ಸ್ತ್ರೀಸಂಪರ್ಕ ಮಾಡಬೇಕೆಂಬ ಆಸೆಯುಂಟಾದಾಗ ಈ ಪದಾರ್ಥವು ಅತಿಶಯವಾಗಿ ಹೆಚ್ಚುವದು. ಸ್ತ್ರೀಯರಲ್ಲೂ ಇದೇ ತರದ ಹೇಯವಸ್ತುವು ಶೇಖರಿಸಲ್ಪಡುವದು. ಸಂಭೋಗಮಾಡತಕ್ಕ ಕಾಲದಲ್ಲಿ ಸ್ತ್ರೀಪುರುಷರ ಚರ್ಮವು ಸುಲಿದುಹೋಗದಂತೆ ಇದು ಕಾಪಾಡುತ್ತದೆ. ಆದ್ದರಿಂದ ಸ್ತ್ರೀಯಲ್ಲಿ ಇಂತಹ ವಸ್ತುವು ಕಾಣಿಸಿದ ಹೊರತು ಕಾಮವಾಸನೆಯನ್ನು ತೃಪ್ತಿಮಾಡಿಕೊಳ್ಳಲಿಕ್ಕೆ ಪ್ರಯತ್ನಿಸಬಾರದು.

**ಕೌಪರನ ಗ್ರಂಥಿಗಳು:—** 'ಮೆಂಬ್ರನಸ್ ಯುರಿತ್ರಾ'ದ ಕೊನೆಯ ಭಾಗದಲ್ಲಿ ಬಟಾಣಿಕಾಳಿನ ಆಕಾರದಷ್ಟು ಎರಡು ಗ್ರಂಥಿಗಳಿವೆ. ಇವು ಮೂತ್ರದ್ವಾರದ ಎರಡೂ ಪಕ್ಕಗಳಲ್ಲಿಯೂ ಇರುವವಲ್ಲದೆ, ಲಿಂಗದ ಆದಿಭಾಗದಲ್ಲಿ ಸ್ಥಾಪಿಸಲ್ಪಟ್ಟವೆ. ಇವಕ್ಕೆ ಕೌಪರನ ಗ್ರಂಥಿಗಳೆಂದು ಹೆಸರು. ಇಂದ್ರಿಯಭೋಗದ ಉದ್ವೇಗಕಾಲದಲ್ಲಿ ಈ ಗ್ರಂಥಿಗಳಿಂದ ಜಿಗುಟಾದ ಕ್ಷಾರವುಳ್ಳ ವಸ್ತುವು ಮೂತ್ರದ್ವಾರದಲ್ಲಿ ಎಸೆಯಲ್ಪಡುತ್ತದೆ. ಈ ರಸವಿಶೇಷವು ಮೂತ್ರದ್ವಾರವನ್ನು ನುಣುಪನ್ನಾಗಿ ಮಾಡುವದಲ್ಲದೆ ವೀರ್ಯದ ಗಾತ್ರವನ್ನು ಹೆಚ್ಚಿಸುತ್ತದೆ.

ಕೆಲವು ವೇಳೆ ಕೌಪರನ ಗ್ರಂಥಿಗಳಿಂದ ಬಂದಂಥಾ ದ್ರವವು ವೀರ್ಯದಿಂದ ಕೂಡಿರುವದಿಲ್ಲ. ಅನೇಕಯುವಕರು ಇದರ ನಿಜಾಂಶವೇನೆಂಬುದನ್ನು ಗೊತ್ತುಹಿಡಿಯದೆ ಬಹುಭಯದಿಂದ ಬೂಟಕ ವೈದ್ಯರ ಬಳಿಗೆ ಹೋಗುವರು. ಅಂಥ ವೈದ್ಯರು ತಿಳಿದೋ ತಿಳಿಯದೆಯೋ ಯುವಕರಿಗೆ ಮತ್ತಷ್ಟು ಭೀತಿಯನ್ನು ಹೆಚ್ಚಿಸುವಂತೆ ಇದರಿಂದ ನಷ್ಟವಾಗತಕ್ಕ ದ್ರವವು ವೀರ್ಯವೆಂದೂ ಹಾಗೆಯೇ ಸುಮ್ಮನಿರುವದರಿಂದ ವೀರ್ಯನಾಶವೂ ಬಂಜೆತನವೂ ಉಂಟಾಗುವವೆಂದೂ ತಿಳಿಸುತ್ತಾರೆ. ಪ್ರಕಟನಾಪತ್ರಿಕೆಯ ಮನರಂಜಿಸುವಂತಿರುವುದರಿಂದಲೂ ಔಷಧಗಳಿಂದ ಶಕ್ತಿ ಬರುವುದೆಂಬ ನಂಬಿಕೆಯಿಂದಲೂ ಯುವಕರನೇಕರು ಚೂರ್ಣಗಳಲ್ಲಿ ವಿಶ್ವಾಸವಿಟ್ಟು ಒಂದಾವರ್ತಿ ಪರೀಕ್ಷಿಸಿ ನೋಡಬೇಕೆಂದು ಪ್ರಯತ್ನಿಸುತ್ತಾರೆ. ನೂರರಲ್ಲಿ ಎಂಭತ್ತು ಪಾಲು ವೈದ್ಯರು ಅನ್ಯರ ಅಶಕ್ತತೆಗೂ ಅಜ್ಞಾನಕ್ಕೂ ಹಾತೊರೆಯುತ್ತಿದ್ದು ತಮ್ಮ ಹೊಟ್ಟೆಯನ್ನು ತುಂಬಿಕೊಳ್ಳುವರು. ವೀರ್ಯವು ದೇಹದಿಂದ ಎಂದಿಗೂ ನಷ್ಟವಾಗಿ ಈಚೆಗೆ ಬರುವದಿಲ್ಲ ಹಾಗೆ

ಬಂದರೆ ಆ ಇಂದ್ರಿಯವು ಅತಿಶಯವಾಗಿ ದುರ್ವ್ಯಾಪಾರಗಳಿಗೆ ಗುರಿಯಾಗಿರುವುದೆಂದು ವ್ಯಕ್ತವಾಗುತ್ತದೆ.

**ಪ್ರಾಸಟೆಟ್ ಗ್ರಂಥಿಗಳು:—** ಈ ಭಾಗವು ಮೂತ್ರಕೋಶದ ಮುಂಭಾಗದಲ್ಲಿರುವದಲ್ಲದೆ ಮೂತ್ರದ್ವಾರದಿಂದ ಸುತ್ತಲ್ಪಟ್ಟದೆ. ಅಂದರೆ ಮೂತ್ರದ್ವಾರವು 'ಪ್ರಾಸಟೆಟ್' ಗ್ರಂಥಿಯಿಂದ ಹಾಯ್ದು, ಮೂತ್ರಕೋಶಕ್ಕೆ ಹೋಗುತ್ತದೆ. ಆದ್ದರಿಂದಲೇ ಈ ಭಾಗದ ಮೂತ್ರದ್ವಾರವು 'ಪ್ರಾಸಟೇಟಿಕ್ ಯುರೆತ್ರಾ' ಎಂದು ಕರೆಯಲ್ಪಡುತ್ತದೆ. ಮೂತ್ರದ್ವಾರವೂ ಮೂತ್ರಕೋಶವೂ ಒಂದಕ್ಕೊಂದು ಉಂಗುರದೋಪಾದಿಯಲ್ಲಿ ಬಂಧಿಸಲ್ಪಟ್ಟದೆ. ಇದರ ಗಾತ್ರವು ಅನೇಕರಿಗೆ ಅನೇಕ ವಿಧವಾಗಿದೆ. ಸಾಧಾರಣವಾಗಿ ಒಂದು ಒಂದೂವರೆ ಅಂಗುಲ ಉದ್ದವಾಗಿಯೂ, ಅರ್ಧ ಔಂಸ ತೂಕವುಳ್ಳದ್ದಾಗಿಯೂ ಇರುತ್ತದೆ.

ಇದು ಸೃಷ್ಟಿಕಾರ್ಯಕ್ಕೆ ಅಧಿಕ ಸಹಾಯವಾಗುವದು. ಹೇಗೆಂದರೆ, ಉತ್ಪನ್ನಮಾಡತಕ್ಕ ಚೇತನಾಶಕ್ತಿಯು ಇದರಲ್ಲಿರುವುದು. ಮತ್ತು ಬೀಜತೆಗೆದ ಹೋರಿಗಳಲ್ಲಿ ಈ ಭಾಗವು ಕಮರಿ ಹೋಗಿರುವದು ವ್ಯಕ್ತವಾಗುವದು. ಆದ್ದರಿಂದ ವೃದ್ಧಾಪ್ಯದಲ್ಲಿ ಈ ಅಂಗವು ಬಹುಶಃ ಬಾಡಿಹೋಗುವದು. ಈ ಇಂದ್ರಿಯವನ್ನು ಅತಿಶಯವಾಗಿ ಉಪಯೋಗಿಸುವದರಿಂದ ಹೀಗಾಗುವ ಕಾರಣವುಂಟು. ಈ ಗ್ರಂಥಿಯು ವಿಸ್ತಾರವಾಗೋದರಿಂದ ಮೂತ್ರದ್ವಾರವು ಸಣ್ಣದಾಗಿ ಅನೇಕವೇಳೆ ಮೂತ್ರವಿಸರ್ಜನೆಗೆ ಬಹು ಪ್ರಯಾಸವಾಗುವದು. ಈ ಭಾಗವು ಊದಿಕೊಂಡಾಗ ಆಸನ ದ್ವಾರವನ್ನು ಮುಟ್ಟಿ ತಿಳಕೊಳ್ಳಬಹುದು. 'ಗನೋರಿಯಾ' ಎಂಬ ಮೋಹ ವ್ಯಾಧಿಯಿಂದ ಈ ಗ್ರಂಥಿಯು ಬಹುವಾಗಿ ಉಡುಗಿ ಹೋಗುತ್ತದೆ. ಬಹು ಬುದ್ಧಿವಂತಿಕೆಯಿಂದ ಮಾಡಿದ ವೈದ್ಯಚಿಕಿತ್ಸೆಯಿಂದಲೂ ಈ ರೋಗವು ನಾಶವಾಗುವುದಿಲ್ಲ.

ಕಾಮೋತ್ತೇಜನೆಯಾದಾಗ ಕೌಪರನ ಗ್ರಂಥಿಗಳಿಂದ ಹೊರಡುವಂತೆ ಈ ಗ್ರಂಥಿಗಳಿಂದಲೂ ಒಂದು ರಸವು ಉತ್ಪತ್ತಿಯಾಗಿ ಮೂತ್ರದ್ವಾರವನ್ನು ತೋಯಿಸಿ ವೀರ್ಯದೊಂದಿಗೆ ಮಿಶ್ರಣವಾಗುವದು.

**ವೀರ್ಯಕೋಶ:—** ಆಸನದಿಂದ ಮೂತ್ರಕೋಶದವರೆಗೂ ಮಧ್ಯಇರುವ ಎರಡು ಮೆತ್ತನ ಚೀಲಗಳೇ ವೀರ್ಯಕೋಶಗಳು. ಅಂಡಗಳಿಂದ ಉತ್ಪನ್ನವಾಗಿ ಶೇಖರಿಸಲ್ಪಡುವ ಈ ದ್ರವ್ಯಕ್ಕೆ ವೀರ್ಯವೆಂಬ ಹೆಸರು. ಸಂಭೋಗ ಕಾಲದಲ್ಲಿ ಈ ಚೀಲದಿಂದ ವೀರ್ಯವು ಇತರ ದ್ರವಗಳೊಡನೆ ಪ್ರವಹಿಸುವುವಲ್ಲದೆ ಪುರುಷ ಬೀಜವನ್ನು ಹೊರಗೆಡವುತ್ತದೆ. ವೀರ್ಯಕೋಶವು ಸುರುಳಿಯಾಗಿ ಸುತ್ತಿಕೊಂಡು ಅನೇಕ ವಿಭಾಗಗಳೊಡನೆ ಪ್ರಾಸಟೇಟ್ ಗ್ರಂಥಿಯ ಬಳಿ ಬಹು ಸಣ್ಣದಾದ ಮುಖದಿಂದಿರುವುದು.

## ಗೆಳೆಯರ ಗುಂಪಿನಲ್ಲಿ ದೊರೆಯುವ ಪುಸ್ತಕಗಳು.

| | | | |
|---|---|---|---|
| ಶ್ರೀ ಅರವಿಂದಘೋಷರಚರಿತ್ರೆ. | ೦-೧೨-೦ | ನಾಡಿನ ಹಾಡುಗಳು | ೦-೧-೬ |
| ಕಾವ್ಯಕಲ್ಪಲತಾ ಭಾಗ ೧ | ೧-೦-೦ | ಅಭಿನವ ಅಭಿಮನ್ಯು | ೦-೦-೩ |
| ,, ,, ೨ | ೦-೧೨-೦ | ಭಾವಗೀತೆ | ೧-೦-೦ |
| ,, ,, ೩ | ೦-೮-೦ | ಕಾಣದ ಕೈ (ಕಥೆ) | ೦-೧-೦ |
| ,, ,, ೪ | ೦-೮-೦ | ಅನಾಥ ಬಂಧು ,, | ೦-೧-೬ |
| ಕೃಷ್ಣಕುಮಾರಿ (ಚಿಕ್ಕ ಕಾವ್ಯ) | ೦-೩-೦ | ಮದುವೆಯಲ್ಲ [illegible] (ಕಥೆ) ಸ್ವಲ್ಪೇ ಉಳಿದಿವೆ | ೦-೧-೬ |
| ನೌಕಾಕ್ರೀಡನ ( ,, ) | ೦-‑-೦ | ಸಂಸಾರವೆಂಬರೆ ಸೂಜಿಗಲ್ಲು. (ಕಥೆ) ಸ್ವಲ್ಪೇ ಉಳಿದಿವೆ. | ೦-೧-೬ |
| ಪ್ರತಿಭೆ (ಕಾವ್ಯಾಚರ್ಚೆ) | ೦-೪-೦ | | |

## ಗೆಳೆಯರ ಗುಂಪಿನ ಹೊಸಪುಸ್ತಕಗಳು

೧. ಮುದ್ದನ ಮಾತುಗಳು:—(ಬೆಲೆ.೮ ಆಣೆ.) ಆನಂದಕಂದರಿಂದ ರಚಿತವಾದ ಕಾವ್ಯ. ಕವೀಂದ್ರ ರವೀಂದ್ರರ ಶಿಶುಕಾವ್ಯದ ಮಾದರಿಯದು.

೨. ಭಾವದೇವಿ!:—(ಬೆಲೆ ೨ ಆಣೆ) ರಾಮಚಂದ್ರನು ಬರೆದುದು ಚಿಕ್ಕದೊಂದು ನಾಟ್ಯಗೀತೆ.

೩. ವಿಸರ್ಜನ:—(ಬೆಲೆ. ೮ ಆಣೆ) ಆಧುನಿಕ ವಿಶ್ವದ ಕವೀಂದ್ರರಾದ ರವೀಂದ್ರನಾಥರು ಬಂಗಾಲಿಯಲ್ಲಿ ಬರೆದುದನ್ನೇ ಕನ್ನಡಿಸಿದ ನವೀನವ ನಾಟಕ. ಪ್ರಾಣಿದಯಾಧರ್ಮವನ್ನು ಪ್ರಸರಿಸುವಂತಹದು. ರವೀಂದ್ರರ ನಾಟಕದ ವೈಶಿಷ್ಟ್ಯವನ್ನು ಹೇಳುವ ವಿಚಾರಪ್ರಚೋದಕ ಪ್ರಸ್ತಾವನೆಯನ್ನು ಶ್ರೀ. ಬೇಂದ್ರೆಯವರು ಬರೆದಿದ್ದಾರೆ. (ಸು. ೫೮ ಪುಟಗಳ ಪುಸ್ತಕ).

## ಕಾರ್ಯದರ್ಶಿಗಳ ಪ್ರಾರ್ಥನೆ

ಗುಂಪಿನ ಮತ್ತು ಸ್ವಧರ್ಮದ ಎಲ್ಲ ಪತ್ರವ್ಯವಹಾರವನ್ನೂ ಹಣದ ವ್ಯವಹಾರವನ್ನೂ ಈ ಕೆಳಗಿನ ವಿಳಾಸಕ್ಕೆ ಮಾಡಬೇಕು.

**ಶಂ. ಬಾ. ಜೋಶಿ, ಸ್ವಧರ್ಮದ ಚಾವಡಿ, ಧಾರವಾಡ.**

**ಶಿಲಾಲಿಪಿಗಳನ್ನು ಕಲಿಯ ಬಯಸುವವರು** ಕೆಳಗಿನ ವಿಳಾಸಕ್ಕೆ ೧॥ ಆಣೆಯ ಪೋಷ್ಟ ಟಿಕೀಟುಗಳನ್ನು ಕಳಿಸಬೇಕು.

**ಗಲಗಲಿಯ ಚೆನ್ನಮಲ್ಲಪ್ಪ, ಗೆಳೆಯರ ಗುಂಪು,**

**ಹಲಸಂಗಿ ( ಜಿ. ವಿಜಾಪೂರ )**

Printed by M. K. Joshi at the K. P. Works, Dharwar
Published by B. V. Burli at his House No. 1647, in Desai Oni,
DHARWAR.

